# ಶ್ರೀವಿಷ್ಣುಪುರಾಣಮ್

## (ಪ್ರಥಮ, ದ್ವಿತೀಯ, ತೃತೀಯಾಂಶಗಳು)

### ಸಂಪುಟ - 1



ರಾಮಕೃಷ್ಣ ಮಠ, ಬೆಂಗಳೂರು

# ಶ್ರೀವಿಷ್ಣುಪುರಾಣಮ್

(ಪ್ರಥಮ, ದ್ವಿತೀಯ, ತೃತೀಯಾಂಶಗಳು)

**ಸಂಪುಟ – 1**

ಎನ್. ರಂಗನಾಥಶರ್ಮಾ
26-1-12

ಅನುವಾದಕರು

**ವಿದ್ವಾನ್ ಎನ್. ರಂಗನಾಥಶರ್ಮಾ**




**ರಾಮಕೃಷ್ಣ ಮಠ**

ಬೆಂಗಳೂರು

**Śrī Viṣṇu Purāṇam**—Volume-1
Prathama, Dvitīya and Tritīya Aṁśas in Kannada Script.
Translated by Vidwan N. Ranganatha Sharma.
Published by Swami Harshananda, President,
Ramakrishna Math, Bangalore - 560 019.
Phone : 2661 6161, 2661 6060
E-mail : bookstall@rkmathbangalore.org

Pp. xliv + 636 Price : Rs. 180/-

Third Edition: October 2011



ಮೊದಲನೆಯ ಮುದ್ರಣ : ಜುಲೈ 1986; 5000 ಪ್ರತಿಗಳು
ಎರಡನೆಯ ಮುದ್ರಣ : ಜೂನ್ 2004; 2000 ಪ್ರತಿಗಳು
ಮೂರನೆಯ ಮುದ್ರಣ : ಅಕ್ಟೋಬರ್ 2011; 2000 ಪ್ರತಿಗಳು

**ಬೆಲೆ : ರೂ. 180/-**

ಮುದ್ರಕರು :
ಬಿ. ಎನ್. ನಟರಾಜ್
ಶ್ರೀ ನಿತ್ಯಾನಂದ ಪ್ರಿಂಟರ್ಸ್
# 46, 4ನೇ ಅಡ್ಡರಸ್ತೆ, ಅಶೋಕನಗರ
ಬನಶಂಕರಿ 1ನೇ ಹಂತ, ಬೆಂಗಳೂರು 50.
✆ 2242 6027

# ಪ್ರಥಮ ಮುದ್ರಣದ ಪ್ರಕಾಶಕರ ನುಡಿ

ಅಮೂಲ್ಯವಾದ ಮಾನವಶರೀರವನ್ನು ದೇವರು ಕೃಪೆಯಿಂದ ಕರುಣಿಸಿದ್ದಾನೆ. ಅದನ್ನು ಸರಿಯಾದ ರೀತಿಯಲ್ಲಿ ಉಪಯೋಗಮಾಡಿ ಕೊಳ್ಳುವುದು ನಮ್ಮ ಕರ್ತವ್ಯ. ಪ್ರಾಣಿ, ಪಕ್ಷಿ ಮುಂತಾದವುಗಳಿಗೆ ಆಹಾರ ನಿದ್ರಾದಿಗಳು ಮಾತ್ರವೇ ಸಾಧ್ಯ. ಕೋಲನ್ನು ಹಿಡಿದ ಕೈಯನ್ನು ಕಂಡರೆ ಓಡಿಹೋಗಬೇಕು ಎನ್ನುವುದು, ಮತ್ತು ತಾನು ತಿನ್ನುವ ಹಸುರುಹುಲ್ಲನ್ನು ಯಾರಾದರೂ ಕೈಯಲ್ಲಿ ಹಿಡಿದಿದ್ದರೆ ಅವರ ಬಳಿಗೆ ಸಾಗಿ ಅದನ್ನು ತಿನ್ನ ಬೇಕು ಎನ್ನುವುದು ಮಾತ್ರ ಪ್ರಾಣಿಗಳಿಗೆ ತಿಳಿದಿದೆ. ಮಾನವನು ಹಾಗಲ್ಲ. ಅವನಿಗೆ ವಿವೇಚನಾ ಶಕ್ತಿ ಇದೆ. ದೇವರು ಕೊಟ್ಟಿರುವ ಬುದ್ಧಿಯಿಂದ ಮೋಕ್ಷಾನಂದವನ್ನು ಸಾಧಿಸಿಕೊಳ್ಳಬಲ್ಲ ಅರ್ಹತೆ ಅವನಿಗಿದೆ. ಪಾತಾಳ ಕ್ಕಾದರೂ ಇಳಿಯಬಹುದು ಅಥವಾ ಮೋಕ್ಷಸಾಧಕನಾಗಬಹುದು; ಎಲ್ಲವೂ ಅವನ ಬುದ್ಧಿಯ ಗಮನದ ಮೇಲೆ ಇದೆ. ದೇಹವು ಒಂದು ದೋಣಿಯಂತೆ. ಇದನ್ನು ಸಂಪಾದಿಸುವುದಕ್ಕೆ ಎಷ್ಟೋ ಖರ್ಚಾಗಿದೆ. ಮತ್ತೊಂದು ದೊರೆಯುವುದೆಂಬ ನಂಬಿಕೆ ಇಲ್ಲ. ದುಃಖವೆಂಬ ಮಹಾಸಾಗರವನ್ನು ದಾಟುವುದಕ್ಕೆ ಈ ದೋಣಿಯನ್ನು ಸಂಪಾದಿಸಿದೆವು. ಇದು ಕೊನೆಯವರೆಗೂ ಇರುವುದೆಂಬ ನಂಬಿಕೆ ಇಲ್ಲ. ಮಧ್ಯೆ ಛಿದ್ರವಾಗಿ ಮುಳುಗಿ ಹೋಗಬಹುದು. ಇದು ಛಿದ್ರವಾಗುವುದರೊಳಗಾಗಿ ದುಃಖ ಸಾಗರವನ್ನು ದಾಟಲು ಸರ್ವಪ್ರಯತ್ನವನ್ನೂ ಮಾಡಬೇಕು. **“ಭವಸುಖೇ ದೋಷೋಽನುಸಂಧೀಯತಾ”** ಸಂಸಾರದ ಸುಖದಲ್ಲಿ ದೋಷಗಳನ್ನು ಕಂಡುಕೊಂಡು ವೈರಾಗ್ಯವನ್ನು ಪಡೆಯಬೇಕು. ವಿಚಾರಮಾಡುವುದರಿಂದ ವೈರಾಗ್ಯ ಬರುತ್ತದೆ. ಕಾಮಕಾಂಚನ ಎರಡೂ ಅನಿತ್ಯವೇ, ಶಾಶ್ವತವಲ್ಲ. ದೇವರೊಬ್ಬನೇ ಸತ್ಯ. ಹಣದಿಂದ ಏನು ಪ್ರಯೋಜನ? ನಮಗೆ ಆಹಾರ, ಬಟ್ಟೆ ಮತ್ತು ವಾಸಮಾಡಲು ಮನೆ ಇವುಗಳು ಮಾತ್ರ ದೊರೆಯುತ್ತವೆ; ಹಣದಿಂದ ದೇವರನ್ನು ನೋಡಲಾಗುವುದಿಲ್ಲ; ಕೇವಲ ಹಣವೇ ಜೀವನದ ಉದ್ದೇಶವಲ್ಲ—ಇದೇ ವಿಚಾರ. ಹಾಗೆಯೇ ಶರೀರದ ಸೌಂದರ್ಯದಲ್ಲಿ ಏನಿದೆ? ಎಷ್ಟೇ ಸುಂದರ ಶರೀರವಾದರೂ ಮಾಂಸ,

ರಕ್ತ, ಚರ್ಮ, ಮೂಳೆ, ಕೊಬ್ಬು, ಇತ್ಯಾದಿಗಳಿಂದ ಕೂಡಿರುತ್ತದೆ. ಯಾವುದು ನಿತ್ಯ, ಸತ್ಯ, ಒಳಿತು, ಯಾವುದು ಅನಿತ್ಯ, ಅನೃತ, ಕೆಟ್ಟದು ಎಂದು ವಿಶ್ಲೇಷಿಸುವುದೇ ವಿವೇಕ. ವಿಚಾರದಿಂದ ಸಂಸಾರದ ನಿಸ್ಸಾರತೆ, ಭೀಷಣತೆ ನಮಗೆ ಮನದಟ್ಟಾಗುತ್ತದೆ. ವಿವೇಕ ಮತ್ತು ವೈರಾಗ್ಯ, ರಥದ ಎರಡು ಗಾಲಿಗಳಂತೆ ಮನುಷ್ಯನ ಆಧ್ಯಾತ್ಮಿಕ ಬದುಕಿಗೆ ಆವಶ್ಯಕ ವಾದವುಗಳು.

ಸಂಸಾರದುಃಖವು ಕಾರ್ಗತ್ತಲೆಯಿದ್ದಂತೆ. ದೀಪದ ಬೆಳಕಿನಿಂದ ಆ ಕತ್ತಲೆಯನ್ನು ಹೋಗಲಾಡಿಸಬೇಕು. ಅಂತಹ ದೀಪವನ್ನು ಪರಮಾತ್ಮನು ಮಾತ್ರ ನಮಗೆ ಒದಗಿಸಬಲ್ಲ. ಅವನಲ್ಲಿ ಶರಣಾಗಬೇಕು. ಅವನ ಲೀಲಾ ಕಥನವನ್ನು ಶ್ರವಣಮಾಡಬೇಕು. ಭಕ್ತಿಯಿಂದ ಭಜಿಸಬೇಕು. ಅರ್ಚಿಸ ಬೇಕು. **ಮಯ್ಯೇವ ಮನ ಆಧತ್ಸ್ವ** ಎಂದು ಶ್ರೀಕೃಷ್ಣಪರಮಾತ್ಮ ನಮಗೆ ಮಾರ್ಗವನ್ನು ತೋರಿಸಿದ್ದಾನೆ. ನಮ್ಮ ಮನಸ್ಸನ್ನು ಭಗವಂತನಿಗೆ ಅರ್ಪಣ ಮಾಡಿಕೊಂಡರೆ ಅವನು ನಮಗೆ ಜ್ಞಾನದೀಪವನ್ನು ಕರುಣಿಸುತ್ತಾನೆ:

**ತೇಷಾಮೇವಾನುಕಂಪಾರ್ಥಂ ಅಹಮಜ್ಞಾನಜಂ ತಮಃ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ॥**

"ಅವರಿಗೆ ಅನುಕಂಪೆಯನ್ನು ತೋರಿಸಬೇಕೆಂದು ನಾನು ಅವರ ಬುದ್ಧಿ ಯಲ್ಲಿ ನೆಲಸಿ, ಪ್ರಕಾಶಿಸುತ್ತಿರುವ ಜ್ಞಾನದೀಪದಿಂದ ಅಜ್ಞಾನಜನಿತವಾದ ತಮಸ್ಸನ್ನು ನಾಶಮಾಡುತ್ತೇನೆ." ದೀಪವನ್ನು ಹಚ್ಚಿದಾಗ ಅದು ಎರಡು ಕೆಲಸ ಮಾಡುವುದು. ಕತ್ತಲೆಯನ್ನು ನಿವಾರಿಸುವುದು ಮತ್ತು ಅದುವರೆಗೆ ಕಾಣದೆ ಇದ್ದಂತಹ ವಸ್ತುಗಳು ಕಾಣಬರುವಂತೆಯೂ ಮಾಡುವುದು. ಅಂದಮೇಲೆ ಜ್ಞಾನದೀಪವು ಅಜ್ಞಾನದ ಕತ್ತಲೆಯನ್ನು ದೂರಮಾಡಿ ಆನಂದಕ್ಕೆ ದಾರಿ ತೋರುವುದು. ಅಷ್ಟು ಮಾತ್ರವಲ್ಲ. ನಾವು ಪ್ರತಿಯೊಬ್ಬರೂ ಪರಬ್ರಹ್ಮಸ್ವರೂಪ ಎಂಬ ಹೊಸ ಅನುಭವವನ್ನು ನಮಗೆ ಒದಗಿಸುವುದು. ಇದನ್ನೇ ಬ್ರಹ್ಮಾನುಭವ ಎನ್ನುತ್ತೇವೆ.

ಆಧ್ಯಾತ್ಮಿಕ ಜೀವನದಲ್ಲಿ ಮುನ್ನಡೆಯುವವರಿಗೆ ಶ್ರೀಮದ್ ವಿಷ್ಣು ಪುರಾಣವು ಅಂತಹ ಜ್ಞಾನದೀಪವಾಗಿದೆ. ಈ ಪುರಾಣರತ್ನದಲ್ಲಿ ಸರ್ಗ, ವಿಸರ್ಗ, ವೃತ್ತಿ, ರಕ್ಷೆ, ಮನ್ವಂತರ, ವಂಶ, ವಂಶಾನುಚರಿತ, ಸಂಸ್ಥೆ,

ಹೇತು ಮತ್ತು ಅಪಾಶ್ರಯವೆಂದು ಹತ್ತು ಅಂಗಗಳಿವೆ. ಆದುದರಿಂದ ಇದನ್ನು ಮಹಾಪುರಾಣವೆಂದು ಕರೆಯಲಾಗಿದೆ. ವೇದವು ಜ್ಞಾನಭಂಡಾರ. ಅದರ ಅರ್ಥಗಳನ್ನು ಪ್ರಕಾಶಪಡಿಸುವುದೇ ಇತಿಹಾಸ, ಪುರಾಣಗಳ ಕೆಲಸ. **ವೇದೋಽಖಿಲಂ ಧರ್ಮಮೂಲಮ್** ಎಂದು ಮಹರ್ಷಿಗಳು ಹೇಳಿದ್ದಾರೆ. ಸ್ಮೃತಿ ಇತಿಹಾಸ ಪುರಾಣಗಳು ವೇದಗಳಿಗೆ ವ್ಯಾಖ್ಯಾನ ವಾಗಿರುತ್ತವೆ. ಪುರಾಣಗಳ ಮಧ್ಯೆ ವಿಷ್ಣುಪುರಾಣಕ್ಕೆ ಉನ್ನತ ಸ್ಥಾನವಿದೆ. ಸರ್ವಧರ್ಮಗಳ ವ್ಯವಸ್ಥೆಗೆ ಇದು ಪರಿಪೂರ್ಣವಾಗಿದೆ. ಶ್ರೀಪರಾಶರ ಮಹರ್ಷಿಪ್ರಣೀತ ಶ್ರೀವಿಷ್ಣುಪುರಾಣವು ಆರು ಸಾತ್ತ್ವಿಕ ಪುರಾಣಗಳಲ್ಲಿ ಮೊದಲನೆಯದಾಗಿದೆ. ಇದರಲ್ಲಿ ಭರತಖಂಡವನ್ನು ಆಳಿದ ರಾಜರ ವಂಶ, ಲೋಕಸೃಷ್ಟಿ, ಯುಗವಿಭಾಗಗಳು, ಭೌಗೋಲಿಕ ವಿಷಯಗಳು, ತೀರ್ಥಗಳ ಮಾಹಾತ್ಮ್ಯ, ದೇವಕ್ಷೇತ್ರಗಳ ಮಾಹಾತ್ಮ್ಯ ಮುಂತಾದ ವಿಷಯಗಳ ವಿವರಣೆ ವಿಪುಲವಾಗಿವೆ. ಅನೇಕ ನೀತಿಬೋಧಕ ಪ್ರಸಂಗ ಗಳೂ ಇವೆ. ಮುಖ್ಯವಾಗಿ ಸಾಧಕರ ಭಕ್ತಿಯನ್ನೂ ಜ್ಞಾನವನ್ನೂ ಅಭಿವೃದ್ಧಿ ಗೊಳಿಸುತ್ತದೆ.

ಈ ಗ್ರಂಥದಲ್ಲಿ ಆರು ಅಂಶಗಳೂ 126 ಅಧ್ಯಾಯಗಳೂ ಇವೆ. ಮೊದಲನೆಯ ಅಂಶದಲ್ಲಿ ಸೃಷ್ಟಿವರ್ಣನೆ, ಧ್ರುವಚರಿತ್ರೆ, ಪ್ರಹ್ಲಾದ ಚರಿತ್ರೆಗಳೂ, ಎರಡನೆಯ ಅಂಶದಲ್ಲಿ ಭೂಗೋಳದ ಸಾಂಗೋಪಾಂಗ ವರ್ಣನೆಯೂ, ಮೂರನೆಯ ಅಂಶದಲ್ಲಿ ಆಯಾ ಆಶ್ರಮಗಳ ಕರ್ತವ್ಯ ವಿಚಾರವೂ ವೇದಶಾಖೆಗಳ ವರ್ಣನೆಯೂ, ನಾಲ್ಕನೆಯ ಅಂಶದಲ್ಲಿ ಸೋಮವಂಶದ ಯಯಾತಿ, ಯದು, ಪುರು ಮೊದಲಾದವರ ಇತಿಹಾಸ ಕಥನವೂ, ಐದನೆಯ ಅಂಶದಲ್ಲಿ ವಿಸ್ತಾರವಾಗಿ ಶ್ರೀಕೃಷ್ಣನ ಚರಿತ್ರೆಯೂ, ಆರನೆಯ ಅಂಶದಲ್ಲಿ ಪ್ರಳಯಸ್ವರೂಪ ಮತ್ತು ಭಕ್ತಿಯ ಸ್ವರೂಪಗಳೂ ವಿವರಿಸಲ್ಪಟ್ಟಿವೆ. ಶ್ರೀಮದ್ವಿಷ್ಣುಪುರಾಣವು ಸಂಕ್ಷೇಪಭಾಗವತವೆಂದು ಪ್ರಸಿದ್ಧಿಯಾಗಿದೆ. ಇದು ಪ್ರಮಾಣದಲ್ಲಿ ಚಿಕ್ಕದಾದರೂ ಪ್ರಭಾವದಲ್ಲಿ ದೊಡ್ಡದು. ಸಾಹಿತ್ಯದೃಷ್ಟಿಯಿಂದ ಈ ಪುರಾಣವು ಅತ್ಯಂತ ಸುಂದರವೂ ಸರಸವೂ ರಮಣೀಯವೂ ಆಗಿದೆ. ಅಂಗಾಂಗಿಭಾವದಿಂದ ಜ್ಞಾನಭಕ್ತಿಗಳ ಸಮನ್ವಯ ಬಹಳ ಚೆನ್ನಾಗಿ ನಿರೂಪಿಸಲ್ಪಟ್ಟಿದೆ. ಸರಳವಾದ ಭಾಷೆ, ಉನ್ನತವಾದ ಭಾವ ಈ ಪುರಾಣದ ವೈಶಿಷ್ಟ್ಯ.

ಇಂತಹ ಅಮೋಘ ಗ್ರಂಥವನ್ನು ಸುಪ್ರಸಿದ್ಧ ವಿದ್ವಾಂಸರಾದ ಶ್ರೀಮಾನ್ ಎನ್. ರಂಗನಾಥಶರ್ಮಾ ಅವರು ಸುಂದರವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಶ್ರೀ ಡಿ. ವಿ. ಜಿ. ಯವರು ಶ್ರೀಮದ್ರಾಮಾಯಣದ ಮುನ್ನುಡಿಯಲ್ಲಿ ಬರೆದಿರುವಂತೆ ಶ್ರೀ ರಂಗನಾಥಶರ್ಮಾ ಅವರ ವಾಕ್ ಪ್ರವಾಹದಲ್ಲಿ ಸಹಜತೆ, ಲಾಲಿತ್ಯ, ವೈಶದ್ಯ, ಗಾಂಭೀರ್ಯ, ಓಜಸ್ಸು ಈ ಗುಣಗಳು ಪ್ರಕಾಶಮಾನವಾಗಿವೆ. "ಅವರ ಮುಖ್ಯದೃಷ್ಟಿ ಅರ್ಥಪುಷ್ಟಿ, ರಸಪುಷ್ಟಿಯ ಕಡೆ" ಎಂದು ಪ್ರಶಂಸಿಸಿದ್ದಾರೆ. ಶ್ರೀರಂಗನಾಥಶರ್ಮಾ ಅವರು ತಮ್ಮ ಭಗವದನುಗ್ರಹೀತವಾದ ಲೇಖನಿಯಿಂದ ಇಂಥ ಒಳ್ಳೆಯ ಕನ್ನಡ ವಚನಸಾಹಿತ್ಯವನ್ನು ನಮ್ಮ ವಾಚಕರಿಗೆ ಒದಗಿಸಿಕೊಟ್ಟಿರುವುದಕ್ಕಾಗಿ ಅವರನ್ನು ಅಭಿನಂದಿಸುತ್ತೇವೆ.

**ಸ್ವಾಮಿ ಚಿದಾನಂದ**
ಅಧ್ಯಕ್ಷರು
ಶ್ರೀರಾಮಕೃಷ್ಣಾಶ್ರಮ
ಬೆಂಗಳೂರು

# ಉಪೋದ್ಘಾತ

ನಮ್ಮ ಭಾರತೀಯಸಾಹಿತ್ಯದಲ್ಲಿ ಪುರಾಣಗಳು ಒಂದು ಮಹತ್ತ್ವದ ಸ್ಥಾನವನ್ನು ಪಡೆದುಕೊಂಡಿವೆ. ಇವುಗಳ ಗುರಿ ಧರ್ಮ, ದರ್ಶನ ಮತ್ತು ಲೋಕನೀತಿಗಳು. ಇವುಗಳ ಬೋಧೆಯನ್ನು ಪ್ರಧಾನವಾಗಿರಿಸಿಕೊಂಡು ದೈವಭಕ್ತಿ, ಕ್ಷೇತ್ರ ತೀರ್ಥಾದಿಗಳ ಮಹಿಮೆ, ಸೃಷ್ಟಿ, ಪ್ರಳಯಗಳ ವಿಚಾರ, ಪರಂಪರೆಯಿಂದ ಬಂದ ಮನುವಂಶೀಯರಾಜರ ಮತ್ತು ಋಷಿಗಳ ಚರಿತ್ರೆ—ಇವನ್ನು ನಿರೂಪಿಸುವುದು ಪುರಾಣಗಳ ಉದ್ದೇಶವಾಗಿದೆ. ಈ ಪುರಾಣಗಳೇ ಇಂದಿನ ಹಿಂದೂ ಧರ್ಮದ ನಾನಾ ಪ್ರಕಾರಗಳಿಗೆ ಆಧಾರ ವಾಗಿವೆ. 'ಪುರಾ ಭವಂ ಪುರಾಣಮ್' ಎಂಬ ವ್ಯುತ್ಪತ್ತಿಯಂತೆ ಪುರಾತನ ಸಾಹಿತ್ಯವೆಂದು ಶಬ್ದಾರ್ಥವಾಗುತ್ತದೆ. 'ಪುರಾಪಿ ನವಂ ಪುರಾಣಮ್' ಎಂದೂ ಹೇಳುವುದುಂಟು. ಇದರ ಪ್ರಕಾರ ಸನಾತನವೂ ನಿತ್ಯನೂತನವೂ ಆದ ಧರ್ಮವನ್ನೂ ದಾರ್ಶನಿಕ ತತ್ತ್ವವನ್ನೂ ನಿರೂಪಿಸುವ ಗ್ರಂಥ ಪುರಾಣವೆನಿಸುತ್ತದೆ. ಈ ಎರಡೂ ಅರ್ಥವೂ ಗ್ರಾಹ್ಯವಾದದ್ದೇ ಸರಿ. ವೇದದ ಗೂಢಾರ್ಥವನ್ನು ಆಖ್ಯಾನ ಉಪಾಖ್ಯಾನಗಳ ಮೂಲಕ ಸರಳ ಗೊಳಿಸಿ ಪ್ರಕಾರಾಂತರದಿಂದ ಪುರಾಣವು ವರ್ಣಿಸುತ್ತದೆ ಎಂದು ನಮ್ಮವರು ಹೇಳಿದ್ದಾರೆ—

**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ ವೇದೋ ಮಾಮಯಂ ಪ್ರಹರೇದಿತಿ ॥**

ಹದಿನೆಂಟು ಮಹಾಪುರಾಣಗಳು ಪ್ರಖ್ಯಾತವಾಗಿವೆ. ಇವನ್ನು ನೆನಪಿಡಲು ಈ ಶ್ಲೋಕ ಸಾಧನವಾಗಿದೆ—

**ಮ-ದ್ವಯಂ ಭ-ದ್ವಯಂ ಚೈವ ಬ್ರ-ತ್ರಯಂ ವ-ಚತುಷ್ಟಯಮ್ ।**
**ಅ-ನಾ-ಪ-ಲಿಂ-ಗ-ಕೂ-ಸ್ಕಾನಿ ಪುರಾಣಾನಿ ಪ್ರಚಕ್ಷತೇ ॥**

ಮತ್ಸ್ಯ, ಮಾರ್ಕಂಡೇಯ, ಭವಿಷ್ಯ, ಭಾಗವತ, ಬ್ರಹ್ಮ, ಬ್ರಹ್ಮವೈವರ್ತ, ಬ್ರಹ್ಮಾಂಡ, ವಾಮನ, ವರಾಹ, ವಾಯು, ವಿಷ್ಣು, ಅಗ್ನಿ, ನಾರದ, ಪದ್ಮ, ಲಿಂಗ, ಗರುಡ, ಕೂರ್ಮ, ಮತ್ತು ಸ್ಕಾಂದ ಎಂಬಿವೇ

ಅಷ್ಟಾದಶ ಮಹಾಪುರಾಣಗಳು. ಹೀಗೆಯೇ ಅಷ್ಟಾದಶ ಉಪಪುರಾಣಗಳೂ ಇವೆ. ಸನತ್ಕುಮಾರ, ನಾರಸಿಂಹ, ಕಾಪಿಲ, ಮಾನವ ಮುಂತಾದ ಈ ಉಪಪುರಾಣಗಳಲ್ಲಿ ಕೆಲವು ಮಾತ್ರ ಈಗ ದೊರೆಯುತ್ತವೆ. ಉಳಿದವು ಹೆಸರಿನಲ್ಲಿ ಮಾತ್ರ ಉಳಿದುಕೊಂಡಿವೆ.

ಈ ವಿಭಾಗದಲ್ಲಿಯೂ ಮತಭೇದವುಂಟು. ಉದಾಹರಣೆಗೆ ಶಿವಪುರಾಣವು ಕೆಲವರ ಮತದಂತೆ ಮಹಾಪುರಾಣದಲ್ಲಿ ಸೇರುತ್ತದೆ. ಕೆಲವರು ಇದನ್ನು ಉಪಪುರಾಣವೆಂದಿದ್ದಾರೆ. ಹೀಗೆಯೇ ನಾರದಪುರಾಣ, ಭಾಗವತಪುರಾಣಗಳ ವಿಷಯದಲ್ಲಿಯೂ ಮತಭೇದವಿದೆ. ಭಾಗವತವೆಂದರೆ ನಮ್ಮಲ್ಲಿ ಪ್ರಸಿದ್ಧವಾದ ವಿಷ್ಣುಭಾಗವತವೆ ಅಥವಾ ದೇವೀಭಾಗವತವೆ—ಎಂಬುದು ವಿವಾದದ ಸುಳಿಯಲ್ಲಿ ಸಿಕ್ಕಿದೆ. ವಿಷ್ಣುಭಾಗವತಕ್ಕೆ ವ್ಯಾಖ್ಯಾನವನ್ನು ಬರೆದಿರುವ ಶ್ರೀಧರಸ್ವಾಮಿಗಳು ಆರಂಭದಲ್ಲಿಯೇ "ಭಾಗವತಂ ನಾಮ ಅನ್ಯದಿತ್ಯಪಿ ನಾಶಂಕನೀಯಮ್" ಎಂದು ಬರೆದಿದ್ದಾರೆ. ಇದರಿಂದ ದೇವೀಭಾಗವತವೇ ಭಾಗವತವೆಂಬ ಒಂದು ವಾದ ಹಿಂದಿನ ಕಾಲದಲ್ಲಿಯೇ ಇತ್ತೆಂದು ತಿಳಿದುಬರುತ್ತದೆ.

ಈ ಪುರಾಣಗಳ ಮೂಲಸಾಮಗ್ರಿ, ಪ್ರಾಚೀನವೇ ಹೌದು. ಪುರಾಣವೆಂಬ ಶಬ್ದವು ಅಥರ್ವವೇದದಲ್ಲಿಯೂ (11-7-24) ಶತಪಥ ಬ್ರಾಹ್ಮಣದಲ್ಲಿಯೂ (13-4-3-13) ಕಂಡುಬರುತ್ತದೆ. "ಇತಿಹಾಸಂ, ಪುರಾಣಂ, ವಿದ್ಯಾ, ಉಪನಿಷದಃ" ಎಂದು ಬೃಹದಾರಣ್ಯಕ ಉಪನಿಷತ್ತಿನಲ್ಲಿಯೂ, "ಇತಿಹಾಸಪುರಾಣಂ ಪಂಚಮಂ ವೇದಾನಾಂ ವೇದಃ" ಎಂದು ಛಾಂದೋಗ್ಯೋಪನಿಷತ್ತಿನಲ್ಲಿಯೂ ಉಲ್ಲೇಖವಿದೆ. ಆಪಸ್ತಂಬಧರ್ಮಸೂತ್ರದಲ್ಲಿ "ಅಥ ಪುರಾಣೇ ಶ್ಲೋಕಾನುದಾಹರಂತಿ" ಎಂಬ ವಾಕ್ಯವಿದೆ. ಇವೆಲ್ಲವನ್ನು ಪರಿಶೀಲಿಸಿದಾಗ ಪುರಾಣವೆಂಬ ಸಾಹಿತ್ಯದ ಪ್ರಾಚೀನತೆ ಸ್ಪಷ್ಟಪಡುವುದಾದರೂ ಈಗ ದೊರಕಿರುವ ಬೃಹತ್ ಪ್ರಮಾಣದ ಪುರಾಣಗಳು ಅಷ್ಟು ಪ್ರಾಚೀನವಲ್ಲವೆಂದು ಆಧುನಿಕ ವಿದ್ವಾಂಸರ ನಿಶ್ಚಿತವಾದ ಅಭಿಪ್ರಾಯವಿದೆ. ಇವುಗಳಲ್ಲಿ ಕೆಲವು ಗುಪ್ತಕಾಲೀನ (ಕ್ರಿ.ಶ. 300-550) ಗಳೆಂದು ತಿಳಿಯಲಾಗಿದೆ. ಕ್ರಿ.ಶ. ಹತ್ತನೆಯ ಶತಮಾನದವರೆಗೆ ಇವು ಬೆಳೆಯುತ್ತ ಬಂದಿವೆಯೆಂದು ಪರಿಶೋಧಕರ ಅಭಿಪ್ರಾಯ.

ಈ ಪುರಾಣಗಳಲ್ಲಿ ಸ್ಕಾಂದ ಪುರಾಣವು ಬಹು ದೊಡ್ಡದು. ಇದರಲ್ಲಿ

81,100 ಶ್ಲೋಕಗಳಿವೆ. ಮಾರ್ಕಂಡೇಯ ಪುರಾಣವು ಬಹಳ ಚಿಕ್ಕದು. ಇದರಲ್ಲಿ 9000 ಶ್ಲೋಕಗಳಿವೆ. ಭವಿಷ್ಯಪುರಾಣದಲ್ಲಿ ಸಿಖ್ ಮತಸ್ಥಾಪಕನಾದ ಗುರು ನಾನಕ್, ಸಿದ್ಧಾಂತಕೌಮುದಿಯನ್ನು ಬರೆದ ಭಟ್ಟೋಜಿ ದೀಕ್ಷಿತ ಮುಂತಾದ ನವೀನರ ನಾಮೋಲ್ಲೇಖವುಂಟು. ಡಾ॥ ಹಾಜ್ರ ಅವರು ಪುರಾಣಗಳ ವಿಷಯದಲ್ಲಿ ತುಂಬ ಸಂಶೋಧನೆಯನ್ನು ನಡೆಸಿದ್ದಾರೆ. ಅವರ ಅಭಿಪ್ರಾಯದಂತೆ ಪುರಾಣಗಳಲ್ಲಿ ಪ್ರಾಚೀನತಮವಾದದ್ದು ವಿಷ್ಣುಪುರಾಣ—ಕ್ರಿ.ಶ. 400. ಅನಂತರ ವಾಯುಪುರಾಣ—ಕ್ರಿ.ಶ. 500 ಭಾಗವತ—ಕ್ರಿ.ಶ. 600-700 ಕೂರ್ಮಪುರಾಣದ ಕಾಲ ಕ್ರಿ.ಶ. 700. ಬಾಣನ ಹರ್ಷಚರಿತೆಯಲ್ಲಿ (ಕ್ರಿ.ಶ. 600) ವಾಯುಪುರಾಣದ ಉಲ್ಲೇಖವಿರುವುದು ಗಮನಾರ್ಹ. ಒಟ್ಟಿನಲ್ಲಿ ಡಾ॥ ಹಾಜ್ರ ಅವರ ಅಭಿಪ್ರಾಯದಂತೆ ಕ್ರಿ.ಶ. ಹದಿನಾಲ್ಕನೆಯ ಶತಮಾನದವರೆಗೂ ಸ್ಕಾಂದಾದಿ ಪುರಾಣಗಳಲ್ಲಿ ಹೊಸದಾಗಿ ಬರೆದು ಸೇರಿಸಿರುವ ಕೆಲವು ಆಖ್ಯಾನಗಳು, ಪ್ರಕರಣಗಳು, ಶ್ಲೋಕಗಳು ಇವೆಯೆಂದು ಹೇಳಬೇಕಾಗುವುದು.

**ಪುರಾಣಗಳಲ್ಲಿ ಪ್ರತಿಪಾದ್ಯವಾದ ವಿಷಯ:** ಪುರಾಣಕ್ಕೆ ಐದು ಮುಖ್ಯ ಲಕ್ಷಣಗಳನ್ನು ಅಮರಸಿಂಹನು ಹೇಳಿದ್ದಾನೆ.

**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ।**
**ವಂಶಾನುಚರಿತಂ ಚೇತಿ ಪುರಾಣಂ ಪಂಚಲಕ್ಷಣಮ್॥**

ಸರ್ಗ = ಜಗತ್ತಿನ ಪ್ರಥಮ ಸೃಷ್ಟಿ. ಪ್ರತಿಸರ್ಗ = ಅವಾಂತರ ಸೃಷ್ಟಿ. ವಂಶ = ದೇವತೆಗಳ ಮತ್ತು ಪಿತೃಗಳ ವಂಶಕ್ರಮ. ಮನ್ವಂತರ = ಸ್ವಾಯಂಭುವಾದಿ ಚತುರ್ದಶ ಮನುಗಳ ಇತಿಹಾಸ. ವಂಶಾನುಚರಿತ = ಸೂರ್ಯ ಮತ್ತು ಚಂದ್ರರ ವಂಶಾವಳಿ.

ಈ ರೀತಿಯಲ್ಲಿ ಪುರಾಣಲಕ್ಷಣವಿದ್ದರೂ ಸಾಮಾನ್ಯವಾಗಿ ಈ ಎಲ್ಲ ಲಕ್ಷಣಗಳು ಪುರಾಣಗಳಲ್ಲಿ ಕಂಡುಬರುವುದಿಲ್ಲ. ಇದಕ್ಕೆ ವಿನಾಯಿತಿ ಎಂದರೆ ವಿಷ್ಣುಪುರಾಣವೊಂದೇ. ವಿಷ್ಣುಪುರಾಣದಲ್ಲಿ ಈ ಎಲ್ಲ ಲಕ್ಷಣಗಳಿಗೂ ಸಮನ್ವಯವಿರುವುದರಿಂದ ಇದಕ್ಕೆ ಪ್ರಾಧಾನ್ಯವನ್ನು ಕೊಡುವುದು ಯುಕ್ತವೇ ಆಗಿದೆ. ಈ ವಿಷಯಗಳಿಗೆ ಹೊರತಾಗಿ ಧರ್ಮಶಾಸ್ತ್ರ, ವೇದಾಂತ, ಯೋಗ, ಸಾಂಖ್ಯ, ಜ್ಯೌತಿಷ, ವೈದ್ಯ, ವ್ಯಾಕರಣ,

ಧನುರ್ವೇದ, ಸಂಗೀತ, ಶಿಲ್ಪ, ಅಲಂಕಾರ—ಮುಂತಾದ ವಿಷಯಗಳೂ ಸಹ ಪುರಾಣಗಳಲ್ಲಿ ಕಂಡುಬರುತ್ತವೆ. ಮತೀಯ ದೃಷ್ಟಿಯೇ ಕೆಲವು ಪುರಾಣಗಳಲ್ಲಿ ಕಂಡುಬರುತ್ತದೆ. ಶೈವ-ವೈಷ್ಣವ ಮತಗಳ ಸ್ಪರ್ಧೆ ಇಲ್ಲಿ ಗೋಚರವಾಗುತ್ತದೆ. ಒಬ್ಬ ದೇವತೆಯನ್ನು ಹೊಗಳಿ ಇನ್ನೊಬ್ಬ ದೇವತೆಯನ್ನು ತೆಗಳುವ ಪ್ರಸಂಗಗಳು ಉಂಟು. ಸಂಕುಚಿತ ಭಾವನೆಗಳನ್ನು ಪ್ರದರ್ಶಿಸುವ ಮತೀಯ ಅಂಶಗಳು ಬೇರೆ ಬೇರೆ ಕಾಲದಲ್ಲಿ ಆಸಕ್ತರಿಂದ ಪ್ರಕ್ಷಿಪ್ತವಾಗಿವೆ. ಪುರಾಣಗಳನ್ನು ವ್ಯಾಸಂಗ ಮಾಡತಕ್ಕವರು ಇಂತಹ ವಿಚಾರಗಳಲ್ಲಿ ಎಚ್ಚರಿಕೆಯಿಂದಿರುವುದು ಆವಶ್ಯಕ.

**ಪುರಾಣಗಳ ಕರ್ತೃತ್ವ ಮತ್ತು ಕಾಲ:** ಅಷ್ಟಾದಶ ಪುರಾಣಗಳ ಶ್ಲೋಕಸಂಖ್ಯೆ ಸುಮಾರು ನಾಲ್ಕು ಲಕ್ಷವಾಗುತ್ತದೆ. ಇಷ್ಟೊಂದು ಬೃಹತ್ ಪ್ರಮಾಣದ ಗ್ರಂಥರಾಶಿಯನ್ನು ಬರೆದವರು ಯಾರು—ಎಂಬ ಪ್ರಶ್ನೆ ಹುಟ್ಟುವುದು ಸಹಜ. "ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ" ಎಂದು ಸಂಪ್ರದಾಯ ಹೇಳುತ್ತದೆ. ಪದ್ಮಪುರಾಣದಲ್ಲಿ—

**ನಿಸ್ತಾರಾಯ ತು ಲೋಕಾನಾಂ ಸ್ವಯಂ ನಾರಾಯಣಃ ಪ್ರಭುಃ।**
**ವ್ಯಾಸರೂಪೇಣ ಕೃತವಾನ್ ಪುರಾಣಾನಿ ಮಹೀತಲೇ॥**

ಎಂದು ಹೇಳಿದೆ. ಇದರ ಪ್ರಕಾರ ದ್ವೈಪಾಯನ ವೇದವ್ಯಾಸರು ಹದಿನೆಂಟು ಪುರಾಣಗಳನ್ನು ರಚಿಸಿದ್ದಾರೆ ಎಂದು ಹೇಳಬೇಕಾಗಿದೆ. ಆದರೆ ಪರಿಶೋಧಕರಾದ ಆಧುನಿಕವಿದ್ವಾಂಸರು ಈ ಮಾತನ್ನು ಒಪ್ಪುವುದಿಲ್ಲ. ಪ್ರಾಚ್ಯ ಮತ್ತು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯಗಳನ್ನು ತೂಗಿ ನೋಡಿದ ಶ್ರೀ ಬಂಕಿಂ ಚಂದ್ರ ಚಟ್ಟೋಪಾಧ್ಯಾಯರು 'ಶ್ರೀಕೃಷ್ಣಚರಿತ್ರೆ' ಎಂಬ ತಮ್ಮ ಗ್ರಂಥದಲ್ಲಿ* ಮನನೀಯವಾದ ಕೆಲವು ಅಂಶಗಳನ್ನು ತಿಳಿಸಿದ್ದಾರೆ. ಅದರ ಸಾರವನ್ನು ಹೀಗೆ ಸಂಗ್ರಹಿಸಬಹುದು—"ಹದಿನೆಂಟು ಪುರಾಣಗಳನ್ನು ಪರೀಕ್ಷಿಸಿದಾಗ ಅನೇಕ ಶ್ಲೋಕಗಳು ಎಲ್ಲವುಗಳಲ್ಲಿಯೂ ಒಂದೇ ಆಗಿವೆ. ಕೆಲವೆಡೆಗಳಲ್ಲಿ ಕೊಂಚ ಪಾಠಾಂತರವುಂಟು. ಬ್ರಹ್ಮಪುರಾಣದ ಉತ್ತರ ಭಾಗದಲ್ಲಿ ಶ್ರೀಕೃಷ್ಣಚರಿತ್ರೆ ವಿಸ್ತಾರವಾಗಿ ಬಂದಿದೆ. ವಿಷ್ಣುಪುರಾಣದ

---

* ಶ್ರೀಕೃಷ್ಣಚರಿತ್ರೆಯ ಕನ್ನಡ ಪರಿವರ್ತನೆ: ಶ್ರೀ ಆರ್. ವ್ಯಾಸರಾವ್, 14, 15 ಪರಿಚ್ಛೇದಗಳು.

ಐದನೆಯ ಅಂಶದಲ್ಲೂ ಇದೇ ಚರಿತ್ರೆ ಇದೆ. ಎರಡಕ್ಕೂ ಏನೂ ವ್ಯತ್ಯಾಸವಿಲ್ಲ. ಅಕ್ಷರಕ್ಷರವೂ ಒಂದೇ. ವಿಷ್ಣುಪುರಾಣದ ಐದನೆಯ ಅಂಶದಲ್ಲಿರುವ ಇಪ್ಪತ್ತೆಂಟು ಅಧ್ಯಾಯಗಳಲ್ಲಿರುವ ಎಲ್ಲ ಶ್ಲೋಕಗಳೂ ಬ್ರಹ್ಮಪುರಾಣದಲ್ಲಿ ಕಂಡುಬರುತ್ತವೆ. ಇವೆರಡು ಪುರಾಣಗಳ ಕರ್ತೃ ಒಬ್ಬನೇ ಆಗಿದ್ದರೆ, ಇಷ್ಟು ವಿಸ್ತಾರವಾದ ಪುನರುಕ್ತಿ ಬರಲು ಸಾಧ್ಯವಿಲ್ಲ. ಅಲ್ಲದೆ ಒಬ್ಬ ಗ್ರಂಥಕಾರನ ಭಾಷಾಶೈಲಿ ಅತ್ಯಂತ ಭಿನ್ನವಾಗಿರುವುದು ಸಾಧ್ಯವಿಲ್ಲ. ವಿಷ್ಣುಪುರಾಣ ಮತ್ತು ಭಾಗವತ ಪುರಾಣಗಳ ಶೈಲಿಯು ಅನ್ಯೋನ್ಯವಾಗಿ ಯಾವ ಸಂಬಂಧವೂ ಇಲ್ಲದಷ್ಟು ವಿಭಿನ್ನವಾಗಿದೆ. ಇವೆರಡು ಗ್ರಂಥಗಳನ್ನು ಓದಿದವರಿಗೆ ಕರ್ತೃ ಒಬ್ಬನೇ ಅಲ್ಲವೆಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಮತ್ತು ಒಬ್ಬನು ಒಂದೇ ವಿಷಯವನ್ನು ಕುರಿತು ಹಲವು ಗ್ರಂಥಗಳನ್ನು ಬರೆಯುವುದಿಲ್ಲ. ಒಂದೇ ವಿಷಯವನ್ನು ತಿರುತಿರುಗಿ ಬರೆದು ವರ್ಣಿಸುವುದಕ್ಕಾಗಲಿ, ವಿಸ್ತರಿಸುವುದಕ್ಕಾಗಲಿ, ಪ್ರಯತ್ನಿಸುವುದಿಲ್ಲ. ಅಷ್ಟಾದಶ ಪುರಾಣಗಳಲ್ಲಾದರೊ ಒಂದೇ ಕಥೆ, ಒಂದೇ ಶಾಸ್ತ್ರ ವಿಚಾರ—ಇವು ಮತ್ತೆ ಮತ್ತೆ ಪುನರುಕ್ತವಾಗಿರುವುದನ್ನು ಕಾಣಬಹುದು. ಇದಕ್ಕೆ ಶ್ರೀಕೃಷ್ಣ ಚರಿತ್ರೆಯೇ ಒಂದು ಉದಾಹರಣೆಯಾಗಿದೆ. ಇದು ಬ್ರಹ್ಮ ಪುರಾಣದ ಪೂರ್ವಭಾಗದಲ್ಲಿಯೂ ವಿಷ್ಣುಪುರಾಣದ ಐದನೆಯ ಅಂಶದಲ್ಲಿಯೂ ವಾಯುಪುರಾಣದಲ್ಲಿಯೂ ಶ್ರೀಮದ್ಭಾಗವತದ ಹತ್ತನೆಯ ಸ್ಕಂಧದಲ್ಲಿಯೂ ಬ್ರಹ್ಮವೈವರ್ತ ಪುರಾಣದ ಮೂರನೆಯ ಖಂಡದಲ್ಲಿಯೂ ಮತ್ತೆ ಪದ್ಮಪುರಾಣ, ವಾಮನಪುರಾಣ, ಮತ್ತು ಕೂರ್ಮಪುರಾಣಗಳಲ್ಲಿಯೂ ಬಂದಿದೆ. ಇದೇ ರೀತಿ ಹಲವಾರು ವಿಷಯಗಳು ವಿಸ್ತಾರವಾಗಿ ಪುನರುಕ್ತವಾಗಿರುವುದನ್ನು ಕಾಣಬಹುದು. ಅಲ್ಲದೆ ಇನ್ನೊಂದು ಗಮನಾರ್ಹವಾದ ವಿಚಾರವುಂಟು. ಈ ಹದಿನೆಂಟು ಪುರಾಣಗಳನ್ನು ಒಬ್ಬನೇ ಬರೆದಿದ್ದರೆ ಇವುಗಳೊಳಗೆ ಬಲವಾದ ಪರಸ್ಪರ ವಿರೋಧಾಂಶಗಳು ಇರುತ್ತಿರಲಿಲ್ಲ. ಅಷ್ಟಾದಶ ಪುರಾಣಗಳಲ್ಲಾದರೋ ಪರಸ್ಪರ ವಿರುದ್ಧವಾದ ಕೆಲವು ವಿಚಾರಗಳು ಬಂದಿವೆ. ಹರಿವಂಶದಲ್ಲಿಯೂ ಶ್ರೀಕೃಷ್ಣಚರಿತ್ರೆಯು ವಿಸ್ತಾರವಾಗಿದೆ."

ವಿಷ್ಣುಪುರಾಣದಲ್ಲಿ ಹೀಗಿರುವುದು: "ಪುರಾಣಾರ್ಥ ವಿಶಾರದರಾದ ವ್ಯಾಸರು ಆಖ್ಯಾನ, ಉಪಾಖ್ಯಾನ, ಗಾಥಾ, ಕಲ್ಪಶುದ್ಧಿ—ಇವುಗಳಿಂದ

ಸಹಿತವಾದ ಪುರಾಣಸಂಹಿತೆಯನ್ನು ರಚಿಸಿದರು. ಅದನ್ನು ತಮ್ಮ ಶಿಷ್ಯನಾದ ಸೂತ ರೋಮಹರ್ಷಣನಿಗೆ ಉಪದೇಶಿಸಿದರು. ರೋಮ ಹರ್ಷಣನು ತನ್ನ ಶಿಷ್ಯರಾದ ಸುಮತಿ, ಅಗ್ನಿವರ್ಚ, ಮಿತ್ರಾಯು, ಶಾಂಸ ಪಾಯನ, ಅಕೃತವ್ರಣ ಮತ್ತು ಸಾವರ್ಣಿ ಎಂಬ ಆರು ಮಂದಿಗೆ ಇದನ್ನು ಕಲಿಸಿದನು. ಅವರಲ್ಲಿ ಕಾಶ್ಯಪ ಗೋತ್ರದವನಾದ ಅಕೃತವ್ರಣ, ಸಾವರ್ಣಿ ಮತ್ತು ಶಾಂಸಪಾಯನ—ಈ ಮೂವರೂ ಸಂಹಿತಾ ಕರ್ತರಾದರು. ಈ ಮೂರು ಸಂಹಿತೆಗಳಿಗೆ ಮೂಲಭೂತವಾದದ್ದು ರೋಮಹರ್ಷಣನ ಸಂಹಿತೆ. ಒಟ್ಟು ಈ ನಾಲ್ಕು ಸಂಹಿತೆಗಳ ಆಧಾರದಿಂದ ಹದಿನೆಂಟು ಪುರಾಣಗಳು ರಚಿತವಾದವು. ಇವುಗಳಲ್ಲದೆ ಮುನಿಗಳು ಉಪಪುರಾಣ ಗಳನ್ನು ರಚಿಸಿದರು." (ಅಂಶ 3, ಅಧ್ಯಾಯ 6, ಶ್ಲೋಕ 15-26)

ಹೀಗೆ ರೋಮಹರ್ಷಣನ ಶಿಷ್ಯರಿಂದ ಮುಂದಕ್ಕೆ ಹದಿನೆಂಟು ಪುರಾಣಗಳು ರಚಿತವಾದವೆಂದು ಗೊತ್ತಾಗುತ್ತದೆ. ಇವುಗಳಲ್ಲಿ ವಿಷ್ಣು ಪುರಾಣವೂ ಒಂದು. ಇದನ್ನು ವ್ಯಾಸರ ತಂದೆ ಪರಾಶರರು ಮೈತ್ರೇಯನಿಗೆ ಹೇಳಿದರೆಂದು ವಿಷ್ಣುಪುರಾಣದಲ್ಲಿ ಸ್ಪಷ್ಟವಾಗಿದೆ! ಶ್ರೀಮದ್ಭಾಗವತದಲ್ಲಿ ತ್ರೈಯಾರುಣಿ, ಕಶ್ಯಪ, ಸಾವರ್ಣಿ, ಅಕೃತವ್ರಣ, ಶಿಂಶಪಾಯನ, ಹಾರೀತ ಈ ಆರು ಮಂದಿ ವ್ಯಾಸಶಿಷ್ಯನಾದ ರೋಮಹರ್ಷಣನಿಂದ ಮೂಲ ಸಂಹಿತೆಗಳನ್ನು ಅಧ್ಯಯನ ಮಾಡಿದರೆಂದು ಹೇಳಿದೆ (ಸ್ಕಂಧ 12, ಅಧ್ಯಾಯ 7, ಶ್ಲೋಕ 4-6). ಆದರೆ ವ್ಯಾಸಪುತ್ರರಾದ ಶುಕಮುನಿಗಳು ಪರೀಕ್ಷಿತ ರಾಜನಿಗೆ ಭಾಗವತವನ್ನು ಶ್ರವಣ ಮಾಡಿಸಿದರೆಂದು ಆ ಗ್ರಂಥ ದಲ್ಲಿಯೇ ಹೇಳಿದೆ. ಈ ಪುರಾಣಸಂಹಿತಾ ಕ್ರಮವು ವಾಯುಪುರಾಣ, ಅಗ್ನಿಪುರಾಣಗಳಲ್ಲಿಯೂ ಬಂದಿದೆ. ಶಿಷ್ಯರ ಹೆಸರುಗಳಲ್ಲಿ ಸ್ವಲ್ಪ ಬದಲಾವಣೆಯಿದ್ದರೂ ಅಭಿಪ್ರಾಯವೊಂದೇ. ಈ ವಿಚಾರಗಳಿಂದ ಮಥಿತವಾಗುವುದೇನೆಂದರೆ ವ್ಯಾಸರು ಒಂದು ಪುರಾಣಸಂಹಿತೆಯನ್ನು ಮಾತ್ರ ರಚಿಸಿರಬೇಕು. ಅನಂತರ ಶಿಷ್ಯ ಪ್ರಶಿಷ್ಯರ ಮೂಲಕ ಅದು ಬೆಳೆದು ಅಷ್ಟಾದಶ ಪುರಾಣಗಳ ರೂಪವನ್ನು ಪಡೆದಿರಬೇಕು. ವ್ಯಾಸರ ಮೂಲ ಸಂಹಿತೆಯಲ್ಲಿದ್ದ ಒಂದೊಂದು ವಿಷಯವನ್ನೂ ಈ ಶಿಷ್ಯ ಪ್ರಶಿಷ್ಯರು ಬಹುಮುಖವಾಗಿ ವಿಸ್ತರಿಸಿರಬೇಕು. ಈ ಮಾತನ್ನು ಒಪ್ಪಿಕೊಳ್ಳುವುದಾದರೆ ಅಷ್ಟಾದಶ ಪುರಾಣಗಳಿಗೂ ವ್ಯಾಸರು ಕರ್ತರೆಂಬ ಸಂಪ್ರದಾಯದ ಹೇಳಿಕೆ

ಒಂದು ರೀತಿಯಲ್ಲಿ ಸಂಗತವಾಗುತ್ತದೆ. ನಾನಾ ಪುರಾಣಗಳನ್ನಾಗಿ ವಿಸ್ತರಿಸಿದ ಶಿಷ್ಯ ಪ್ರಶಿಷ್ಯರು ಭಿನ್ನದೇಶದವರೂ ಭಿನ್ನಕಾಲದವರೂ ಆದ್ದರಿಂದ ಒಂದೇ ವಿಷಯವು ಪುನರುಕ್ತವಾಯಿತೆಂಬ ದೋಷವು ಪರಿಹೃತವಾಗುತ್ತದೆ. ಅಲ್ಲದೆ ವ್ಯಾಸರಿಗೆ ಪುರಾಣ ಸಾಮಗ್ರಿ ಹಿಂದಿನಿಂದ ಪರಂಪರೆಯಾಗಿ ಬಂದದ್ದು. ಅಥರ್ವವೇದ ಮತ್ತು ಶತಪಥಬ್ರಾಹ್ಮಣದಲ್ಲಿ ಪುರಾಣ ಶಬ್ದದ ಪ್ರಯೋಗವಿರುವುದನ್ನು ಹಿಂದೆಯೇ ತೋರಿಸಿಕೊಡ ಲಾಗಿದೆ. ಹೀಗೆ ಅತಿ ಪ್ರಾಚೀನವಾದ ಪುರಾಣ ಸಾಮಗ್ರಿಯನ್ನು ಹಿಡಿದು ವ್ಯಾಸರು ಒಂದು ಮೂಲ ಸಂಹಿತೆಯನ್ನು ಗ್ರಂಥರೂಪದಲ್ಲಿ ನಿರ್ಮಿಸಿದ್ದ ರೆಂಬುದು ಯುಕ್ತವಾಗಿದೆ. ಅನಂತರ ಅಷ್ಟಾದಶ ಮಹಾಪುರಾಣಗಳು ಉಪಪುರಾಣಗಳು ಕಾಲಕ್ರಮದಲ್ಲಿ ವ್ಯಾಸರಚಿತ ಮೂಲಸಂಹಿತೆಯ ಆಧಾರದಿಂದ ರಚಿತವಾದವು ಎಂದು ಹೇಳುವುದೇ ಸಂಗತವೆಂದು ನಮಗೆ ತೋರುತ್ತದೆ. ಇಷ್ಟು ಮಾತ್ರದಿಂದ ಈಗ ಉಪಲಬ್ಧವಾಗಿರುವ ಗ್ರಂಥರಾಶಿ ಯೆಲ್ಲವೂ ಪ್ರಾಚೀನ ಮುನಿ ಪ್ರಣೀತವೆಂದೇ ತಿಳಿಯಬಾರದು. ಮಧ್ಯ ಯುಗದಲ್ಲಿ ಶೈವ, ವೈಷ್ಣವ ಪಂಥಗಳು ಪರಸ್ಪರ ವೈಷಮ್ಯದಿಂದ ಸೆಣಸುತ್ತಿದ್ದಾಗ ಅಪ್ರಾಮಾಣಿಕರಾದ ಕೆಲವು ಜನರು ತಮಗೆ ತೋಚಿದಂತೆ ಶ್ಲೋಕಗಳನ್ನು ರಚಿಸಿ ಈ ಪುರಾಣಗಳಲ್ಲಿ ಅಲ್ಲಲ್ಲಿ ತೂರಿಸಿದ್ದಾರೆ. ಮುದ್ರಣ ಸೌಕರ್ಯವಿಲ್ಲದ ಆ ಕಾಲದಲ್ಲಿ ಹೀಗೆ ಪ್ರಕ್ಷೇಪಮಾಡುವುದೇನೂ ಕಷ್ಟ ವಾಗಿರಲಿಲ್ಲ. ಆದ್ದರಿಂದಲೇ ಈ ಪುರಾಣಗಳಲ್ಲಿ ಪರಸ್ಪರ ವಿರುದ್ಧವಾದ ಅಂಶಗಳು ಕಾಣುತ್ತವೆ—ಎಂಬ ಆಕ್ಷೇಪಕ್ಕೆ ಸಮಂಜಸವಾದ ಉತ್ತರ ದೊರೆಯುತ್ತದೆ.

ಮೇಲ್ಕಂಡಂತೆ ರಚಿತವಾದ ಪುರಾಣಗಳಿಗೆ ಸೂಕ್ತವಾದ ಉಪೋದ್ಘಾತ ಉಪಸಂಹಾರಗಳನ್ನು ಬರೆದು ಆಮೇಲೆ ಸೇರಿಸಿರಬೇಕು. ಇವನ್ನು ಆಯಾ ಪುರಾಣಕರ್ತರೇ ಬರೆದರೋ ಅಥವಾ ಅನ್ಯರು ಬರೆದರೋ ಎಂಬುದನ್ನು ನಿರ್ಧರಿಸಲಾಗುವುದಿಲ್ಲ. ವ್ಯಾಸರು ಬರೆದ ವಿಷ್ಣುಪುರಾಣವನ್ನು ವ್ಯಾಸರ ತಂದೆ ಪರಾಶರರು ಹೇಳಿದ್ದು ಹೇಗೆ—ಎಂಬ ಪ್ರಶ್ನೆಗೆ ಈಗ ಉಪಪತ್ತಿ ದೊರೆಯುತ್ತದೆ. ಇದೇ ರೀತಿ ಅನ್ಯಪುರಾಣ ಗಳಲ್ಲಿಯೂ ಉಪಪತ್ತಿಯನ್ನು ಊಹಿಸಿಕೊಳ್ಳಬೇಕು. ಈ ಪರಿಸ್ಥಿತಿ ಇತಿಹಾಸಗಳಾದ ರಾಮಾಯಣ ಮಹಾಭಾರತಗಳಿಗೂ ತಪ್ಪಿದ್ದಲ್ಲ.

ಮಹಾಭಾರತವನ್ನು ವ್ಯಾಸರೇ ರಚಿಸಿದರೆಂದು ಒಪ್ಪೋಣ. ವ್ಯಾಸರು ತಮ್ಮ ಶಿಷ್ಯ ರೋಮಹರ್ಷಣನಿಗೆ ಬೋಧಿಸಿದರೆಂದೂ, ರೋಮಹರ್ಷಣನು ತನ್ನ ಮಗನಾದ ಉಗ್ರಶ್ರವನಿಗೆ ಉಪದೇಶಿಸಿದನೆಂದೂ ಆತನು ಶೌನಕಾದಿಗಳಿಗೆ ಮಹಾಭಾರತವನ್ನು ಶ್ರವಣ ಮಾಡಿಸಿದನೆಂದೂ ಆ ಗ್ರಂಥದಲ್ಲಿಯೇ ಹೇಳಿದೆ. ವ್ಯಾಸರು ಉಗ್ರಶ್ರವನ ವಿಷಯವನ್ನು ಬರೆಯಲು ಕಾರಣವೇ ಇಲ್ಲ. ಆದ್ದರಿಂದ ಈ ಉಪೋದ್ಘಾತವು ಅನ್ಯ ರಚಿತವೆಂದು ಸ್ಪಷ್ಟ.

ಇನ್ನು ಆಧುನಿಕ ವಿದ್ವಾಂಸರು ಈ ಪುರಾಣಗಳಿಗೆ ಬೇರೆ ಬೇರೆ ಕಾಲವನ್ನು ಗೊತ್ತು ಮಾಡಿರುವುದು ಯುಕ್ತವಲ್ಲವೆಂದು ಹೇಳಬೇಕಾಗಿದೆ. ವಿಷ್ಣುಪುರಾಣದ ನಾಲ್ಕನೆಯ ಅಂಶದಲ್ಲಿ ಕಲಿಯುಗದ ರಾಜರ ವಂಶಾವಳಿಯನ್ನು ಹೇಳುವಾಗ ನವನಂದರ ವಿಚಾರವೂ, ಕೌಟಿಲ್ಯ, ಚಂದ್ರಗುಪ್ತ, ಬಿಂದುಸಾರ ಮುಂತಾದವರ ವಿಚಾರವೂ ಬಂದಿದೆ (ಅಧ್ಯಾಯ 24). ಹೀಗೆಯೇ ಅನ್ಯ ಪುರಾಣಗಳಲ್ಲಿ ಇತಿಹಾಸಗೋಚರವಾದ ವಸ್ತು ದೊರೆಯುತ್ತದೆ. ಇವುಗಳ ಆಧಾರದಿಂದ ಇತಿಹಾಸಕಾಲವನ್ನನುಸರಿಸಿ ಪುರಾಣಗಳ ಕಾಲನಿರ್ಣಯಕ್ಕೆ ಈ ವಿದ್ವಾಂಸರು ತೊಡಗುತ್ತಾರೆ. ಸಾಂಪ್ರದಾಯಿಕರು ಈ ಕಾಲನಿರ್ಣಯವನ್ನು ಒಪ್ಪುವುದಿಲ್ಲ. ಋಷಿಗಳು ತಮ್ಮ ದಿವ್ಯಜ್ಞಾನದಿಂದ ಕಲಿಯುಗದಲ್ಲಿ ನಡೆಯುವ ಭವಿಷ್ಯತ್ತನ್ನು ತಿಳಿದು ಹಾಗೆ ಬರೆದಿದ್ದಾರೆ ಎನ್ನುತ್ತಾರೆ. ಆಧುನಿಕರಿಗೆ ಈ ಮಾತು ವಿಶ್ವಸನೀಯವಲ್ಲ. ಭವಿಷ್ಯತ್ತಿನ ಸಂಗತಿ ಮತ್ತು ಇತಿಹಾಸಗೋಚರವಾದ ಅಂಶ ಇದೆಲ್ಲವೂ ಆಯಾ ಕಾಲಗಳಲ್ಲಿ ಪ್ರಕ್ಷಿಪ್ತವಾಗಿ ಸೇರಿಕೊಂಡಿದೆ—ಎಂದು ಹೇಳುವುದೇ ಯುಕ್ತವೆಂದು ತೋರುತ್ತದೆ. ಒಟ್ಟಿನಲ್ಲಿ ಮಥಿತವಾದ ನಿರ್ಣಯ ಇಷ್ಟು—

1. ಪುರಾಣದ ಮೂಲಸಾಮಗ್ರಿ ಅತ್ಯಂತ ಪ್ರಾಚೀನವಾದದ್ದು.
2. ವೇದವ್ಯಾಸರು ಆ ಪುರಾಣಸಾಮಗ್ರಿಯನ್ನು ಸ್ವಲ್ಪ ವಿಸ್ತರಿಸಿ ಒಂದು ಪುರಾಣಸಂಹಿತೆಯನ್ನು ರಚಿಸಿದ್ದರು.
3. ವ್ಯಾಸರಚಿತ ಮೂಲಸಂಹಿತೆಯ ಆಧಾರದಿಂದ ಅವರ ಶಿಷ್ಯ ಪ್ರಶಿಷ್ಯರು ವಿಷಯಭೇದವನ್ನನುಸರಿಸಿ ಹದಿನೆಂಟು ಪುರಾಣಗಳನ್ನು ರಚಿಸಿದರು.

4. ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಪ್ರಕ್ಷಿಪ್ತ ಭಾಗವಿರುವುದು ನಿಜ.

5. "ಮುನಿಗಳು ಉಪಪುರಾಣಗಳನ್ನು ರಚಿಸಿದರು" ಎಂದು ವಿಷ್ಣು ಪುರಾಣದಲ್ಲಿ ಹೇಳಿರುವುದರಿಂದ ಅವನ್ನು ರಚಿಸಿದವರು ಯಾರೋ ಮುನಿಗಳೆಂದು ಹೇಳಬಹುದು. ಆಧುನಿಕರು ಉಪಪುರಾಣಗಳನ್ನು ಬರೆದರೆನ್ನುವುದು ಯುಕ್ತವಲ್ಲ.

6. ಸಾಮಾನ್ಯವಾಗಿ ಎಲ್ಲ ಪುರಾಣಗಳಲ್ಲಿಯೂ ಅಷ್ಟಾದಶ ಪುರಾಣಗಳ ಮತ್ತು ಉಪ ಪುರಾಣಗಳ ಪ್ರಸ್ತಾವವಿದೆ. ಆದ್ದರಿಂದ ಈ ಪ್ರಸ್ತಾವದ ಭಾಗವೂ ಉಪೋದ್ಘಾತವೂ ಬೇರೆ ಯಾರಿಂದಲೋ ಬರೆದು ಸೇರಿಸಲ್ಪಟ್ಟಿವೆ.

7. ಈ ಪುರಾಣಗಳನ್ನು ವಿಸ್ತರಿಸಿದವರು ಪ್ರಾಚೀನ ಮುನಿಗಳೇ ಹೊರತು ನವೀನರಲ್ಲ.

8. ಆಧುನಿಕ ಸಂಶೋಧಕರು ಬೇರೆ ಬೇರೆ ಕಾಲವನ್ನು ಗೊತ್ತುಮಾಡಿ ಪುರಾಣಗಳು ಅರ್ವಾಚೀನವೆನ್ನುತ್ತಾರೆ. ಯಾವ ಪುರಾಣವೂ ಅರ್ವಾಚೀನವಲ್ಲ. ಇವುಗಳ ಕಾಲ ಮಹಾಭಾರತದ ಕಾಲಕ್ಕಿಂತ ಈಚಿನದೆಂದು ಮಾತ್ರ ಹೇಳಬಹುದು.

## ಶ್ರೀವಿಷ್ಣುಪುರಾಣ

ನಮಗೆ ಪ್ರಕೃತವಾದ ಶ್ರೀವಿಷ್ಣುಪುರಾಣವು ಅನೇಕ ದೃಷ್ಟಿಗಳಿಂದ ಮುಖ್ಯವಾದದ್ದು. ಹಿಂದೆ ಹೇಳಿದಂತೆ ಪುರಾಣದ ಪಂಚಲಕ್ಷಣಗಳು ಇದರಲ್ಲಿ ಸಮನ್ವಿತವಾಗಿವೆ. ಇದರಲ್ಲಿ ಅನ್ಯಪುರಾಣಗಳಲ್ಲಿ ಸಾಮಾನ್ಯವಾಗಿ ಬರುವಂತೆ ವ್ರತಗಳ ವಿಷಯವಿಲ್ಲ. ತೀರ್ಥಕ್ಷೇತ್ರಗಳ ಮಾಹಾತ್ಮ್ಯದ ವಿಸ್ತರಣೆಯಿಲ್ಲ. ವಿಧಿಸಿರುವ ಅನುಷ್ಠಾನಗಳು ವೇದಾನುಸಾರಿಯಾಗಿ ಧರ್ಮಸೂತ್ರಗಳಿಗೆ ಅನುಗುಣವಾಗಿವೆ. ಭಸ್ಮಧಾರಣೆ, ಮುದ್ರೆ, ನಾಮ ಗಳು ಮುಂತಾದ ಕೇವಲ ಮತೀಯ ಚಿಹ್ನೆಗಳ ವಿಷಯವಾಗಲಿ, ಮತೀಯ

ಆಚಾರ ವಿಶೇಷಗಳಾಗಲಿ ಇದರಲ್ಲಿ ಬಂದಿಲ್ಲ. ಯಾವುದೊಂದು ಧಾರ್ಮಿಕ ವಿಚಾರವು ಅತಿ ದೀರ್ಘವಾಗಿ ಉಕ್ತವಾಗಿಲ್ಲ. ಈ ಕಾರಣಗಳಿಂದ ಇದು ಪ್ರಾಮಾಣಿಕವಾಗಿದ್ದು ಹೆಚ್ಚಿನ ಪ್ರಕ್ಷೇಪಗಳಿಗೆ ಅವಕಾಶವನ್ನಿತ್ತಿಲ್ಲವೆನ್ನುವುದು ಗಮನಾರ್ಹವಾದ ಸಂಗತಿಯಾಗಿರುತ್ತದೆ. ಮೂರನೇ ಅಂಶದಲ್ಲಿ ಶ್ರಾದ್ಧ ವಿಷಯವು ವಿಸ್ತಾರವಾಗಿರುವುದು ನಿಜ. ಉಳಿದ ವಿಚಾರಗಳಿಗೆ ಹೋಲಿಸಿದಾಗ ಈ ಶ್ರಾದ್ಧಪ್ರಶಂಸಾದಿಗಳು ಮಿತಿಯನ್ನು ಮೀರಿ ಅನನು ರೂಪವಾಗಿರುವುದು ಅಚ್ಚರಿಯೆನಿಸುತ್ತದೆ. ಈ ಭಾಗದಲ್ಲಿ ಬಹ್ವಂಶಗಳು ಪ್ರಕ್ಷಿಪ್ತವಾಗಿರಲೂಬಹುದು.

ವಿಷ್ಣುಪುರಾಣದ ಭಾಷಾಶೈಲಿ ಲಲಿತವಾಗಿದೆ. ಅಲ್ಲಲ್ಲಿ ಬರುವ ಗದ್ಯ ವಾಕ್ಯಗಳು ರಮಣೀಯವಾಗಿವೆ. ಆರ್ಷಪ್ರಯೋಗಗಳು ಬಹಳ ಪರಿಮಿತ ವಾಗಿರುವುದು ಈ ಪುರಾಣದ ಮತ್ತೊಂದು ವೈಶಿಷ್ಟ್ಯ. ಪೌರಾಣಿಕವಾದ ಯಾವ ಆಖ್ಯಾನವನ್ನೂ ಅತಿಯಾಗಿ ಬೆಳೆಸಿಲ್ಲ. ಧ್ರುವಚರಿತ್ರೆ ಮತ್ತು ಪ್ರಹ್ಲಾದ ಚರಿತ್ರೆಗಳು ಉತ್ತಮ ಕಾವ್ಯದಂತೆ ರಮಣೀಯವಾಗಿವೆ. ಹಾಗೆಯೇ ಪಂಚಮ ಅಂಶದಲ್ಲಿ ಬರುವ ಶ್ರೀಕೃಷ್ಣನ ಚರಿತ್ರೆಯು ಒಂದು ಉತ್ತಮಕಾವ್ಯವೆನ್ನಲಡ್ಡಿಯಿಲ್ಲ.

ಪರಾಶರಮುನಿಗಳು ತಮ್ಮ ಶಿಷ್ಯರಾದ ಮೈತ್ರೇಯರಿಗೆ ಈ ಪುರಾಣ ವನ್ನು ಹೇಳಿದ್ದಾರೆ. ಇದರಲ್ಲಿ ಆರು ಅಂಶಗಳಿದ್ದು ಒಂದೊಂದು ಅಂಶವು ಹಲವಾರು ಅಧ್ಯಾಯಗಳಿಂದ ಕೂಡಿದೆ. ವಿಷ್ಣುಪುರಾಣದಲ್ಲಿರುವ ಒಟ್ಟು ಶ್ಲೋಕಗಳ ಸಂಖ್ಯೆ ಸುಮಾರು ಇಪ್ಪತ್ತಮೂರು ಸಾವಿರ ಆಗಬಹುದು. ಈ ಪುರಾಣಕ್ಕೆ ಶ್ರೀಧರ ಸ್ವಾಮಿಗಳು ಆತ್ಮಪ್ರಕಾಶ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಇವರು ಶ್ರೀಮದ್ಭಾಗವತಕ್ಕೂ ಭಗವದ್ಗೀತೆಗೂ ವ್ಯಾಖ್ಯಾನ ವನ್ನು ಬರೆದ ಸುಪ್ರಸಿದ್ಧ ವಿದ್ವಾಂಸರು. ಭಕ್ತಿಮಾರ್ಗದಲ್ಲಿ ಇವರಿಗೆ ಅಪಾರ ವಾದ ಆಸಕ್ತಿ ಇದೆ. ಶ್ರೀಧರ ಸ್ವಾಮಿಗಳ ಕಾಲ ನಿಶ್ಚಿತವಾಗಿ ತಿಳಿದುಬಂದಿಲ್ಲ. ಬಹುಶಃ ಕ್ರಿ.ಶ. ಹದಿನಾರನೆಯ ಶತಮಾನವಿರಬಹುದು. ಇವರು ಚಿತ್‌ಸುಖಯೋನಿ ಮುಂತಾದ ಕೆಲವು ಪ್ರಾಚೀನ ವ್ಯಾಖ್ಯಾನಕಾರರನ್ನು ಸ್ಮರಿಸಿದ್ದಾರೆ. ವಿಷ್ಣುಚಿತ್ತೀಯ ಎಂಬ ಇನ್ನೊಂದು ವ್ಯಾಖ್ಯಾನವೂ ದೊರಕು ತ್ತದೆ. ಇದರ ಕರ್ತೃವಿನ ಹೆಸರು ತಿಳಿಯದು. ವ್ಯಾಖ್ಯಾನದ ಆರಂಭದಲ್ಲಿ ಶ್ರೀವಿಷ್ಣುಚಿತ್ತಯತಿಗಳ ಸ್ತುತಿಯಿರುವುದರಿಂದ ಅವರ ಶಿಷ್ಯರಾದ

ಯಾರೋ ತಮ್ಮ ಗುರುಗಳ ಸ್ಮರಣೆಗಾಗಿ ವಿಷ್ಣುಚಿತ್ತೀಯ ಎಂದು ಹೆಸರಿಟ್ಟು ಈ ವ್ಯಾಖ್ಯಾನವನ್ನು ಬರೆದಿರುವುದಾಗಿ ತೋರುತ್ತದೆ. ಅಲ್ಲದೆ ರತ್ನಗರ್ಭ ಎಂಬವರು ವೈಷ್ಣವಾಕೂತಚಂದ್ರಿಕಾ ಎಂಬ ಟೀಕೆಯನ್ನು ರಚಿಸಿದ್ದಾರೆ. ಹೀಗೆ ಅನೇಕ ವ್ಯಾಖ್ಯಾನಗಳಿರುವುದೇ ವಿಷ್ಣುಪುರಾಣದ ಪ್ರಾಶಸ್ತ್ಯವನ್ನು ಎತ್ತಿ ತೋರಿಸುತ್ತದೆ.

ವಿಷ್ಣುಪುರಾಣದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳನ್ನು ಹೀಗೆ ಸಂಗ್ರಹಿಸಬಹುದು:

**ಪ್ರಥಮಾಂಶ —** ಇಪ್ಪತ್ತುನಾಲ್ಕು ತತ್ತ್ವಗಳ ವಿಚಾರಪೂರ್ವಕವಾಗಿ ಜಗತ್ತಿನ ಉತ್ಪತ್ತಿ; ಪ್ರಜಾಪತಿಗಳು, ದೇವತೆಗಳು, ಪಿತೃಗಣಗಳು ಇತ್ಯಾದಿ ಗಳ ಸೃಷ್ಟಿಕ್ರಮ. ಧ್ರುವ ಚರಿತ್ರೆ; ಪ್ರಹ್ಲಾದ ಚರಿತ್ರೆ; ಮರುದ್ ಗಣಗಳ ಉತ್ಪತ್ತಿ; ವಿಷ್ಣುವಿನ ಮಹಿಮೆ.

**ದ್ವಿತೀಯಾಂಶ —** ಭೂಗೋಳದ ವಿವರಣೆ; ನವಖಂಡಗಳ ವಿಭಾಗ; ಅಧೋಲೋಕ ಮತ್ತು ಊರ್ಧ್ವಲೋಕಗಳು; ಜ್ಯೋತಿಶ್ಚಕ್ರ ಮತ್ತು ನವಗ್ರಹಗಳ ವರ್ಣನೆ; ಜಡಭರತ, ಋಭು-ನಿದಾಘರ ಆಖ್ಯಾನ.

**ತೃತೀಯಾಂಶ —** ಮನುಪುತ್ರರ ವರ್ಣನೆ; ಚತುರ್ಯುಗಾನುಸಾರ ಭಿನ್ನ ಭಿನ್ನ ವ್ಯಾಸರು; ಚತುರ್ವೇದಗಳ ವಿಭಾಗ; ಚಾತುರ್ವರ್ಣ್ಯ ಧರ್ಮ; ಬ್ರಹ್ಮಚರ್ಯ ಮತ್ತು ಗಾರ್ಹಸ್ಥ್ಯದ ಆಚಾರಗಳು, ವಿಸ್ತೃತವಾದ ಶ್ರಾದ್ಧವಿಧಿ.

**ಚತುರ್ಥಾಂಶ —** ವೈವಸ್ವತ ಮನುವಿನ ವಂಶ; ಇಕ್ಷ್ವಾಕು ವಂಶ; ಶ್ರೀರಾ ಮನ ಸಂಕ್ಷಿಪ್ತ ಕಥೆ; ಸೋಮವಂಶ, ಯದುವಂಶ ವರ್ಣನೆ; ಕುರುವಂಶ; ಭವಿಷ್ಯತ್ತಿನಲ್ಲಿ ಆಳುವ ರಾಜರು; ಮಗಧ ವಂಶ; ಕಲಿಯುಗದ ರಾಜರು ಮತ್ತು ಕಲಿಧರ್ಮ.

**ಪಂಚಮಾಂಶ —** ವಿಸ್ತಾರವಾಗಿ ಶ್ರೀಕೃಷ್ಣಚರಿತ್ರೆ; ಯಾದವರ ಅಂತ್ಯ; ಪರೀಕ್ಷಿತರಾಜನ ಪಟ್ಟಾಭಿಷೇಕ; ಪಾಂಡವರ ಸ್ವರ್ಗಾರೋಹಣ.

**ಷಷ್ಠಾಂಶ —** ಕಲಿಧರ್ಮ ನಿರೂಪಣ; ಶೂದ್ರ ಮತ್ತು ಸ್ತ್ರೀಯರ ಮಹತ್ವ;

ಕಾಲ ವಿಚಾರ; ನೈಮಿತ್ತಿಕ ಪ್ರಳಯ; ಪ್ರಾಕೃತ ಪ್ರಳಯ; ಭಗವಂತನ ಪಾರಮಾರ್ಥಿಕಸ್ವರೂಪ; ಬ್ರಹ್ಮಯೋಗ; ಶಿಷ್ಯಪರಂಪರೆ; ಉಪಸಂಹಾರ.

ಈ ವಿಷ್ಣುಪುರಾಣವು ವೇದಸಂಮತವಾದದ್ದೆಂದು ಪರಾಶರರು ಹೇಳಿದ್ದಾರೆ. 'ಏತತ್ತೇ ಯನ್ಮಯಾಖ್ಯಾತಂ ಪುರಾಣಂ ವೇದಸಂಮತಮ್' (6-8-12). ಇದರಿಂದ ವೇದ ಪ್ರತಿಪಾದಿತವಾದ ವಿಷಯವೇ ಈ ಪುರಾಣ ದಲ್ಲಿ ಬಂದಿದೆ ಎಂದು ಗೊತ್ತಾಗುತ್ತದೆ. ಉದಾಹರಣೆಗೆ, 'ನಾಹೋ ನ ರಾತ್ರಿರ್ನನಭೋ ನ ಭೂಮಿಃ ನಾಸೀತ್ತಮೋ ಜ್ಯೋತಿರಭೂಚ್ಚ ನಾನ್ಯತ್' (1-2-23). ಈ ಶ್ಲೋಕವು ಋಗ್ವೇದದಲ್ಲಿರುವ 'ನಾಸದಾಸೀತ್ ನೋ ಸದಾಸೀತ್' ಎಂಬ ನಾಸದೀಯ ಸೂಕ್ತದ ಉಪಬೃಂಹಣವೇ ಆಗಿದೆ. 'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಇತ್ಯಾದಿ ಶ್ಲೋಕಗಳು (1-12-58 ರಿಂದ 65) ಪುರುಷಸೂಕ್ತದ ವಿವರಣೆಯಾಗಿರುತ್ತವೆ. ಇದೇ ರೀತಿಯಲ್ಲಿ ಉಪನಿಷತ್ತುಗಳ ಮತ್ತು ಭಗವದ್ಗೀತೆಯ ಅರ್ಥವನ್ನು ಅಲ್ಲಲ್ಲಿ ವಿವರಿಸಿರುವುದು ಕಂಡುಬರುತ್ತದೆ. ವಿಷ್ಣುಪುರಾಣ ಮತ್ತು ವೇದ, ಉಪನಿಷತ್, ಭಗವದ್ಗೀತೆಗಳಿಗೆ ಅರ್ಥಸಾಮ್ಯದೊಡನೆ ಶಬ್ದಸಾಮ್ಯವನ್ನು ಹಲವಾರು ಕಡೆಗಳಲ್ಲಿ ನಾವು ಕಾಣಬಹುದು. ಅಂತೂ ಈ ವಿಷ್ಣು ಪುರಾಣವು ಪ್ರಾಚೀನ ಕಾಲದಿಂದಲೂ ಅತ್ಯಂತ ವಿಖ್ಯಾತವೂ ಜನಪ್ರಿಯವೂ ಆಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಮಹಾಕವಿ ಕಾಳಿದಾಸನು ವಿಷ್ಣುಪುರಾಣವನ್ನು ಓದಿದ್ದನೆಂದೂ ಅದರಿಂದ ಪ್ರಭಾವಿತನಾಗಿದ್ದನೆಂದೂ ಹೇಳಬಹುದು. ಆತನ ರಘುವಂಶ ಮಹಾಕಾವ್ಯದಲ್ಲಿ ಬಂದಿರುವ ಇಕ್ಷ್ವಾಕು ವಂಶದ ರಾಜರ ವಂಶಾವಳಿಗೂ ವಿಷ್ಣುಪುರಾಣದಲ್ಲಿ ಬಂದಿರುವ ಇಕ್ಷ್ವಾಕು ವಂಶಾವಳಿಗೂ ಸಾಮ್ಯವಿದೆ. ರಘುವನ್ನು ವರ್ಣಿಸು ವಾಗ 'ರಾಜಾ ಪ್ರಕೃತಿರಂಜನಾತ್' (4-12) ಎಂದು ಹೇಳಿದ್ದಾನೆ. ಪ್ರಜಾರಂಜನೆಯಿಂದ ರಾಜಾ ಎಂಬ ವ್ಯುತ್ಪತ್ತಿಯನ್ನು ವಿಷ್ಣುಪುರಾಣ ದಲ್ಲಿಯೂ ಕಾಣಬಹುದು—'ರಾಜಾಭೂಜ್ಜನರಂಜನಾತ್' (1-13-93). ರಘುವಂಶದಲ್ಲಿ ನಂದಿನೀ ಧೇನುವನ್ನು ದಿಲೀಪನು ಸೇವಿಸುವ ವಿಧಾನ ವಸಿಷ್ಠರಿಂದ ಹೀಗೆ ಉಕ್ತವಾಗಿದೆ—

**ಪ್ರಸ್ಥಿತಾಯಾಂ ಪ್ರತಿಷ್ಠೇಥಾಃ ಸ್ಥಿತಾಯಾಂ ಸ್ಥಿತಿಮಾಚರೇಃ।**
**ನಿಷಣ್ಣಾಯಾಂ ನಿಷೀದಾಸ್ಯಾಂ ಪೀತಾಂಭಸಿ ಪಿಬೇರಪಃ॥**

(ರಘು-1-89). ವಿಷ್ಣುಪುರಾಣದಲ್ಲಿ ಶಿಷ್ಯನು ಗುರುಸೇವೆಯನ್ನು ಮಾಡ ಬೇಕಾದ ವಿಧಾನ ಈ ರೀತಿ ಉಕ್ತವಾಗಿದೆ—

**ಸ್ಥಿತೇ ತಿಷ್ಠೇತ್ ವ್ರಜೇದ್ಯಾತೇ ನೀಚೈರಾಸೀತ ಚಾಸತಿ।**

(3-9-4). ಈ ಹೋಲಿಕೆಗಳನ್ನು ಗಮನಿಸಿದಾಗ ಕಾಳಿದಾಸನ ಮೇಲೆ ವಿಷ್ಣುಪುರಾಣದ ಪ್ರಭಾವ ಆಗಿತ್ತೆಂಬುದು ಸ್ಪಷ್ಟವಾಗುತ್ತದೆ.

ವಿಷ್ಣುಪುರಾಣದಲ್ಲಿ ರಾಷ್ಟ್ರಭಕ್ತಿ ಪ್ರಚೋದಕವಾದ ಈ ಶ್ಲೋಕಗಳು ಗಮನಾರ್ಹವಾದವುಗಳು. ಭರತ ಖಂಡವು ಕರ್ಮಭೂಮಿಯೆಂದೂ ಇಲ್ಲಿ ಜನಿಸುವುದು ಪುಣ್ಯಬಲದಿಂದಲೇ ಎಂದೂ ಇದು ಅನ್ಯರಿಗೆ ದುರ್ಲಭ ವೆಂದೂ ಹೇಳಲಾಗಿದೆ—

**ಅತ್ರ ಜನ್ಮಸಹಸ್ರಾಣಂ ಸಹಸ್ರೈರಪಿ ಸತ್ತಮ।**
**ಕದಾಚಿಲ್ಲಭತೇ ಜಂತುರ್ಮಾನುಷ್ಯಂ ಪುಣ್ಯಸಂಚಯಾತ್॥**

**ಗಾಯಂತಿ ದೇವಾಃ ಕಿಲ ಗೀತಕಾನಿ**
**ಧನ್ಯಾಸ್ತು ತೇ ಭಾರತ ಭೂಮಿಭಾಗೇ।**
**ಸ್ವರ್ಗಾಪವರ್ಗಾಸ್ಪದ ಮಾರ್ಗಭೂತೇ**
**ಭವಂತಿ ಭೂಯಃ ಪುರುಷಾಃ ಸುರತ್ವಾತ್॥**

(2-3-23, 24)

ವಿಷ್ಣುಪುರಾಣವು ಉತ್ತಮ ಕಾವ್ಯದಂತೆ ರಮಣೀಯ ವರ್ಣನೆ ಗಳಿಂದ ತುಂಬಿದೆ ಎಂದು ಹಿಂದೆ ಹೇಳಿದ್ದೇವೆ. ದೃಷ್ಟಾಂತವಾಗಿ ಈ ಶರದ್ವರ್ಣನೆಯನ್ನು ನೋಡಬಹುದು.

**ಮಯೂರಾ ಮೌನಮಾತಸ್ಥುಃ ಪರಿತ್ಯಕ್ತಮದಾ ವನೇ।**
**ಅಸಾರತಾಂ ಪರಿಜ್ಞಾಯ ಸಂಸಾರಸ್ಯೇವ ಯೋಗಿನಃ॥**

**ಉತ್ಸೃಜ್ಯ ಜಲಸರ್ವಸ್ವಂ ವಿಮಲಾಃ ಸಿತಮೂರ್ತಯಃ।**
**ತತ್ಯಜುಶ್ಚಾಂಬರಂ ಮೇಘಾ ಗೃಹಂ ವಿಜ್ಞಾನಿನೋ ಯಥಾ॥**

**ತಾರಕಾ ವಿಮಲೇ ವ್ಯೋಮ್ನಿ ರರಾಜಾಖಂಡಮಂಡಲಃ।**
**ಚಂದ್ರಶ್ಚರಮದೇಹಾತ್ಮಾ ಯೋಗೀ ಸಾಧುಕುಲೇ ಯಥಾ॥**

ಪಂಚಮಾಂಶದ ಹತ್ತನೆಯ ಅಧ್ಯಾಯದಲ್ಲಿ ಬಂದಿರುವ, ಉಪಮಾ ಪರಂಪರೆಗಳಿಂದ ಕೂಡಿದ ಈ ಶರದ್ವರ್ಣನೆ ಅತ್ಯಂತ ಮೋಹಕವಾದುದು. ಗೋಪಕನ್ನಿಕೆಯರು ಶ್ರೀಕೃಷ್ಣನಲ್ಲಿ ಪ್ರೇಮಾಂಧರಾಗಿ ಆತನನ್ನೇ ಧ್ಯಾನಿಸುತ್ತಿದ್ದರೆಂಬ ವರ್ಣನೆ ರಮಣೀಯವಾಗಿದೆ—

**ತಚ್ಚಿತ್ತ ವಿಮಲಾಹ್ಲಾದ ಕ್ಷೀಣಪುಣ್ಯಚಯಾ ತಥಾ।**
**ತದಪ್ರಾಪ್ತಿ ಮಹಾದುಃಖವಿಲೀನಾಶೇಷಪಾತಕಾ॥**

**ಚಿಂತಯಂತೀ ಜಗತ್ಸೂತಿಂ ಪರಬ್ರಹ್ಮಸ್ವರೂಪಿಣಮ್।**
**ನಿರುಚ್ಛ್ವಾಸತಯಾ ಮುಕ್ತಿಂ ಗತಾನ್ಯಾ ಗೋಪಕನ್ಯಕಾ॥**

(5-13-21, 22)

ಈ ಎರಡು ಶ್ಲೋಕಗಳನ್ನು ಮಮ್ಮಟನು ಕಾವ್ಯಪ್ರಕಾಶದಲ್ಲಿ ಉದಾಹರಿಸಿರುವುದು ಗಮನಾರ್ಹ. (ಉಲ್ಲಾಸ 4, ಶ್ಲೋಕ 81-82). ಶ್ರೀಕೃಷ್ಣಚರಿತೆಯಿರುವ ಪಂಚಮಾಂಶವೇ ಒಂದು ಮಹಾಕಾವ್ಯವಾಗಿದೆ.

ವಿಷ್ಣುಪುರಾಣವು ಆಧ್ಯಾತ್ಮಿಕ ವಿಷಯವಾಗಿ ಗಂಭೀರವಾದ ಸಮಾಲೋಚನೆಯನ್ನು ಮಾಡಿದೆಯಲ್ಲದೆ ಮನನೀಯವಾದ ಲೋಕನೀತಿಗಳನ್ನು ಅರ್ಥವತ್ತಾಗಿ ತಿಳಿಸುತ್ತದೆ. ಇದರಲ್ಲಿರುವ ಹಲವಾರು ಶ್ಲೋಕಗಳನ್ನು ಸುಭಾಷಿತಕಾರರು ತಮ್ಮ ನೀತಿ ಗ್ರಂಥಗಳಲ್ಲಿ ಸಂಗ್ರಹಿಸಿದ್ದಾರೆ. ಈ ಶ್ಲೋಕಗಳನ್ನು ನೋಡಿ—

**ಯಾ ದುಸ್ತ್ಯಜಾ ದುರ್ಮತಿಭಿಃ ಯಾ ನ ಜೀರ್ಯತಿಜೀರ್ಯತಃ।**
**ತಾಂ ತೃಷ್ಣಾಂ ಸಂತ್ಯಜೇತ್ ಪ್ರಾಜ್ಞಃ ಸುಖೇನೈವಾಭಿಪೂರ್ಯತೇ॥**

ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ।
ಧನಾಶಾ ಜೀವಿತಾಶಾ ಚ ಜೀರ್ಯತೋಽಪಿ ನ ಜೀರ್ಯತಃ॥

(4-10-26, 27)

ಕಲಿಯುಗದಲ್ಲಿ ನಡೆಯುವ ಅನಾಚಾರವನ್ನು ಕುರಿತು ಆರನೆಯ ಅಂಶದಲ್ಲಿ ಬಂದಿರುವ ಶ್ಲೋಕಗಳು ಕುತೂಹಲಕರವಾದವುಗಳು—

**ಸರ್ವಮೇವ ಕಲೌ ಶಾಸ್ತ್ರಂ ಯಸ್ಯ ಯದ್ವಚನಂ ದ್ವಿಜ॥**

ವಿವಾಹಾ ನ ಕಲೌ ಧರ್ಮ್ಯಾ ನ ಶಿಷ್ಯಗುರುಸಂಸ್ಥಿತಿಃ।
ನ ದಾಂಪತ್ಯಕ್ರಮೋ ನೈವ ವಹ್ನಿದೇವಾತ್ಮಕಃ ಕ್ರಮಃ॥

ವೇದಾದಾನಂ ಕರಿಷ್ಯಂತಿ ವಟವಶ್ಚಾಕೃತವ್ರತಾಃ।
ಯಶ್ಚ ಯಶ್ಚಾಬಲಃ ಸರ್ವಃ ಸ ಸ ಭೃತ್ಯಃ ಕಲೌ ಯುಗೇ॥

ಇತ್ಯಾದಿ.

ಈ ಪುರಾಣದಲ್ಲಿ ಉಕ್ತವಾಗಿರುವ ಖಗೋಳಶಾಸ್ತ್ರದ ವಿಚಾರಗಳು ಈಗಿನ ವಿಜ್ಞಾನವು ಸಮರ್ಥಿಸುವಂತಹವೇ ಸರಿ. ಪುರಾಣಕರ್ತೃವಿಗೆ ಶಾಸ್ತ್ರೀಯವಾದ ಜ್ಯೋತಿಶ್ಶಾಸ್ತ್ರವಿಜ್ಞಾನ ತಿಳಿದಿತ್ತೆಂಬುದಕ್ಕೆ ಪ್ರಮಾಣ ವುಂಟು. ಇದರಲ್ಲಿ ಉಕ್ತವಾದ ಖಗೋಳ ವಿಜ್ಞಾನವನ್ನು ಹೀಗೆ ಸಂಗ್ರಹಿಸಿ ಹೇಳಬಹುದು. ಈ ವಿಚಾರವು ದ್ವಿತೀಯಾಂಶದ ಎಂಟನೆಯ ಅಧ್ಯಾಯ ದಿಂದ ಹನ್ನೆರಡನೆಯ ಅಧ್ಯಾಯದವರೆಗೆ ಪ್ರಸ್ತುತವಾಗಿದೆ: "ಸೂರ್ಯನಿಗೆ ಉದಯಾಸ್ತಮಾನಗಳಿಲ್ಲ. ಅವನನ್ನು ಜನರು ಕಂಡಾಗ ಉದಿತನಾದ ನೆಂದೂ ಮರೆಯಾದಾಗ ಅಸ್ತಂಗತನಾದನೆಂದೂ ವ್ಯವಹರಿಸುತ್ತಾರೆ. ಅಹಃ ಪ್ರಮಾಣ ರಾತ್ರಿಪ್ರಮಾಣಗಳು ಹೆಚ್ಚುಕಡಿಮೆಯಾಗುವುದಕ್ಕೆ ಕಾರಣಗಳನ್ನು ಹೇಳಲಾಗಿದೆ. ಸೂರ್ಯನು ಸಮುದ್ರದಿಂದ ಜಲವನ್ನು ಹೀರಿ ಮಳೆ ಸುರಿಸುತ್ತಾನೆ. ಚಂದ್ರನು ಭೂಮಿಗೂ ಸೂರ್ಯನಿಗೂ ಸಮ ಕಕ್ಷೆಯಲ್ಲಿ ಬಂದಾಗ ಅಮಾವಾಸ್ಯೆಯಾಗುತ್ತದೆ. ದಕ್ಷಿಣಾಯನ, ಉತ್ತರಾಯಣ. ವಿಷುವದ್ರೇಖೆ ಮತ್ತು ಮೇಷಾದಿ ರಾಶಿಗಳನ್ನು ಶಾಸ್ತ್ರೀಯವಾಗಿ ಗುರುತಿಸ ಲಾಗಿದೆ. ಭೂಮಿಯ ಛಾಯೆಗೆ ರಾಹು ಎಂದು ಹೆಸರು. ಈ ರಾಹು ಹುಣ್ಣಿಮೆಯಂದು ಚಂದ್ರನ ಬಳಿಯೂ ಅಮಾವಾಸ್ಯೆಯಂದು ಸೂರ್ಯನ ಬಳಿಯೂ ಇರುತ್ತದೆ. ಆಕಾಶದಲ್ಲಿ ಅನಂತ ತಾರಾಪುಂಜಗಳಿವೆ. ಈ ಜ್ಯೋತಿಶ್ಚಕ್ರವು 'ವಾಯುರಶ್ಮಿ'ಗಳಿಂದ ಒಂದಕ್ಕೊಂದು ಬದ್ಧವಾಗಿ ಹಿಡಿಯ ಲ್ಪಟ್ಟು ಆಕಾಶದಲ್ಲಿ ನಿಂತಿವೆ. ಭೂಮಿಯನ್ನು ಸೂರ್ಯನು ಹಿಡಿದು ನಿಲ್ಲಿಸಿದ್ದಾನೆ. ಸೂರ್ಯಾದಿಗ್ರಹಗಳು ಧ್ರುವನಕ್ಷತ್ರದಿಂದ ವಾಯುರಶ್ಮಿಗಳ ಮೂಲಕ ಧರಿಸಲ್ಪಟ್ಟಿವೆ. ಧ್ರುವನಕ್ಷತ್ರವನ್ನು ಶಿಶುಮಾರನಕ್ಷತ್ರಚಕ್ರವು ಹಿಡಿದು ನಿಲ್ಲಿಸಿದೆ. ಶಿಶುಮಾರ ಚಕ್ರವನ್ನು ಅದರ ಸ್ಥಳದಲ್ಲಿ ಹಿಡಿದು ನಿಲ್ಲಿಸಿದವನು ಶ್ರೀಮನ್ನಾರಾಯಣನೇ."

ವಾತರಶ್ಮಿಯೆಂದರೆ ವಿಜ್ಞಾನಿಗಳು ಹೇಳುವ ಆಕರ್ಷಣ ಶಕ್ತಿಯೇ (Power of gravity).

## ಆಧ್ಯಾತ್ಮ

ಶ್ರೀವಿಷ್ಣುಪುರಾಣವು ಪ್ರತಿಪಾದಿಸುವ ಅಧ್ಯಾತ್ಮ ತತ್ತ್ವವೇನೆಂಬುದು ಈಗ ಪರಿಶೀಲನೀಯ. ಈ ಪುರಾಣವು 'ವೇದಸಂಮತ'ವಾದ್ದರಿಂದ ಇದರಲ್ಲಿ ಉಕ್ತವಾದದ್ದು ವೇದಾಂತ ಅಥವಾ ಔಪನಿಷದವಾಗಬಹುದೇ ಹೊರತು ಇನ್ನೊಂದಾಗಲು ಶಕ್ಯವಿಲ್ಲ. ಸಾಂಖ್ಯ ಮತದ ಪ್ರಕ್ರಿಯೆ ಅಲ್ಲಲ್ಲಿ ಕಾಣಿಸಿಕೊಂಡಿರುವುದಾದರೂ ಅದು ವೇದಾಂತೋಪಯೋಗಿಯೇ ಹೊರತು ಕಾಪಿಲ ಸಾಂಖ್ಯವಲ್ಲ. ಅನ್ಯದರ್ಶನಗಳ ನಿಂದೆಯೂ ಇದರಲ್ಲಿಲ್ಲ. ಚಾರ್ವಾಕ, ಬೌದ್ಧ, ಜೈನ ಸಿದ್ಧಾಂತಗಳನ್ನು ದೂಷಿಸಿರುವುದೇನೋ ನಿಜ. ವೇದವನ್ನು ಪ್ರಮಾಣವಾಗಿ ಆ ದರ್ಶನಗಳು ಸ್ವೀಕರಿಸಿಲ್ಲವಾದ್ದರಿಂದ ಇದೊಂದು ಸಾಮಾನ್ಯಾಕಾರದ ದೂಷಣೆ ಎಂದು ತಿಳಿದುಕೊಳ್ಳಬೇಕು. ಹೆಸರೇ ತಿಳಿಸುವಂತೆ ಈ ಪುರಾಣವು ವಿಷ್ಣುವಿನ ಮಹಿಮೆಯನ್ನು ವಿವರಿಸುವುದಕ್ಕಾಗಿ ಹೊರಟಿದೆ. ವಿಷ್ಣುವೆಂದರೆ ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣುವೇ? ಅಥವಾ ನಿರ್ಗುಣವೂ ನಿರಾಕಾರವೂ ತ್ರಿಮೂರ್ತಿಗಳಿಗೆ ಕಾರಣಭೂತವೂ ಆದ ಪರಬ್ರಹ್ಮವೇ? ಎಂಬುದು ವಿಚಾರಣೀಯ. ಈ ಪುರಾಣವನ್ನು ಸಮಗ್ರವಾಗಿ ಪರಿಶೀಲಿಸಿದರೆ ಸಗುಣನಾದ ವಿಷ್ಣುವಿಗೆ ಕಾರಣವಾದ ನಿರ್ಗುಣವೂ ನಿರಾಕಾರವೂ ಆದ, ಸತ್ತಾಮಾತ್ರಸ್ವರೂಪವಾದ ಮತ್ತು ಜ್ಞಾನ ಸ್ವರೂಪವಾದ ಅದ್ವೈತ ಬ್ರಹ್ಮವನ್ನು ಇದು ಪ್ರತಿಪಾದಿಸುತ್ತದೆ ಎಂದು ತಿಳಿದು ಬರುತ್ತದೆ. ಈ ಬ್ರಹ್ಮವು ತನ್ನ ಮಾಯಾಶಕ್ತಿಯಿಂದ ಸಗುಣವಾಗಿ ಏರ್ಪಟ್ಟಾಗ ವಿಷ್ಣು, ಬ್ರಹ್ಮ, ಶಿವ ಎಂಬ ತ್ರಿಮೂರ್ತಿಯಾಗಿ ತೋರುತ್ತದೆ. ಈ ತ್ರಿಮೂರ್ತಿಗಳಲ್ಲಿ ವಿಷ್ಣುಮೂರ್ತಿ ಸತ್ವಗುಣ ಪ್ರಧಾನವಾದ್ದರಿಂದ ವಿಷ್ಣುರೂಪಕ್ಕೆ ಪ್ರಾಶಸ್ತ್ಯವನ್ನಿತ್ತು ವಿಷ್ಣುವನ್ನು ವಿಶೇಷವಾಗಿ ಸ್ತುತಿಸಲಾಗಿದೆ ಎಂದು ನಿಶ್ಚಿತವಾಗುತ್ತದೆ. ಈ ವಿಷಯವನ್ನು ಇಲ್ಲಿ ಸಂಕ್ಷೇಪವಾಗಿ ಪ್ರಮಾಣೀಕರಿಸಬಹುದು.

**ಪರಮಾತ್ಮನ ಸ್ವರೂಪ**—ಪರಮಾರ್ಥ ತತ್ತ್ವವು ಜ್ಞಾನಸ್ವರೂಪವೂ ಅತ್ಯಂತ ನಿರ್ಮಲವೂ ಆಗಿದೆ. ಭ್ರಾಂತಿಯಿಂದ ಅದು ಅರ್ಥರೂಪದಲ್ಲಿ ತೋರುತ್ತದೆ ಎಂದು ಈ ಶ್ಲೋಕ ತಿಳಿಸುತ್ತದೆ—

**ಜ್ಞಾನಸ್ವರೂಪಮತ್ಯಂತನಿರ್ಮಲಂ ಪರಮಾರ್ಥತಃ।**
**ತಮೇವಾರ್ಥಸ್ವರೂಪೇಣ ಭ್ರಾಂತಿದರ್ಶನತಃ ಸ್ಥಿತಮ್॥**

(1-2-6)

ಬ್ರಹ್ಮವು ಜಗದ್ರೂಪವಾಗಿ ಕಾಣುವುದು ಭ್ರಾಂತಿಯಿಂದ ಎಂದು ಸ್ಫುಟವಾಗಿ ಇಲ್ಲಿ ಹೇಳಿದೆ. ವಿಷ್ಣುವು ಜ್ಞಾನಮಯನೆಂದೂ ಆ ಜ್ಞಾನಕ್ಕೆ ಬ್ರಹ್ಮ ಎಂಬ ಹೆಸರಿದೆ ಎಂದೂ ತಿಳಿಯಬೇಕು—

**ವಿಷ್ಣೋರ್ಜ್ಞಾನಮಯಸ್ಯೋಕ್ತಂ ತಜ್ಜ್ಞಾನಂ ಬ್ರಹ್ಮಸಂಜ್ಞಿತಮ್॥**

(1-22-51)

'ವಿಜ್ಞಾನಮದ್ವೈತಮಯಮ್' (1-22-48) ಎಂಬ ಮಾತು ಇದನ್ನೇ ಸಮರ್ಥಿಸುತ್ತದೆ. ಸರ್ವಭೇದರಹಿತವಾಗಿಯೂ ಸತ್ತಾಮಾತ್ರವಾಗಿಯೂ ವಾಕ್ಕುಗಳಿಗೆ ಅಗೋಚರವಾಗಿಯೂ ಅನುಭವೈಕಗಮ್ಯವಾಗಿಯೂ ಇರುವ ಜ್ಞಾನವೇ ಬ್ರಹ್ಮ—

**ಪ್ರತ್ಯಸ್ತಮಿತ ಭೇದಂ ಯತ್ ಸತ್ತಾಮಾತ್ರಮಗೋಚರಮ್।**
**ವಚಸಾಮಾತ್ಮಸಂವೇದ್ಯಂ ತಜ್ಜ್ಞಾನಂ ಬ್ರಹ್ಮಸಂಜ್ಞಿತಮ್॥**

(6-7-53)

ಈ ಸತ್ತಾಮಾತ್ರವಾದ ಬ್ರಹ್ಮವೇ ಸಗುಣವಾದ ವಿಷ್ಣುವಿನ ಪರಮಾರ್ಥ ಸ್ವರೂಪವೆಂದೂ ಅದು ಅರೂಪವೆಂದೂ ಇದರ ಮುಂದಿನ ಶ್ಲೋಕ ದಲ್ಲಿಯೇ ಹೇಳಿದೆ—

**ತಚ್ಚ ವಿಷ್ಣೋಃ ಪರಂ ರೂಪಮರೂಪಾಖ್ಯಮನುತ್ತಮಮ್॥**

(6-7-54)

ತ್ರಿಮೂರ್ತಿಗಳಲ್ಲೊಬ್ಬನಾದ ವಿಷ್ಣು ಸಗುಣನೆಂದೂ ರೂಪಸಹಿತನೆಂದೂ ಭಕ್ತರು ಆರಾಧಿಸುತ್ತಾರೆ. ಆತನಿಗೆ ಅರೂಪವಾದ ಇನ್ನೊಂದು ಸ್ವರೂಪ

ಇದೆ ಎಂದಾದರೆ ಅದು ಅದ್ವೈತವಾದ ಪರಬ್ರಹ್ಮವೇ ಆಗುತ್ತದೆ. ಬ್ರಹ್ಮ ವಿಷ್ಣು ಶಿವ—ಎಂಬುವರು ಒಬ್ಬನೇ ಪರಮಾತ್ಮನ ವಿಭಿನ್ನರೂಪಗಳು. ಪರಮಾತ್ಮನು ಸತ್ತ್ವಗುಣವನ್ನಾಶ್ರಯಿಸಿ ವಿಷ್ಣುವೆನಿಸುತ್ತಾನೆ. ರಜೋಗುಣ ವನ್ನಾಶ್ರಯಿಸಿ ಬ್ರಹ್ಮನೆಂದೂ ತಮೋಗುಣವನ್ನಾಶ್ರಯಿಸಿ ಶಿವನೆಂದೂ ಆರಾಧಿತನಾಗುತ್ತಾನೆ. ಗುಣೋಪಾಧಿಯಿಂದ ಹೆಸರು ಬೇರೆ ಬೇರೆ ಯಾಗಿವೆಯೇ ಹೊರತು ತಾತ್ತ್ವಿಕವಾಗಿ ವಸ್ತುವಿನಲ್ಲಿ ಯಾವ ಭೇದವೂ ಇಲ್ಲ. ಸೃಷ್ಟಿ ಸ್ಥಿತಿ ಲಯಗಳು ಒಬ್ಬನೇ ಈಶ್ವರನಿಂದ ತ್ರಿಮೂರ್ತಿರೂಪ ವನ್ನಾಶ್ರಯಿಸಿ ನಡೆಯುತ್ತವೆ. ಈ ಮಾತನ್ನು ವಿಷ್ಣುಪುರಾಣವು ಹೆಜ್ಜೆ ಹೆಜ್ಜೆಗೂ ಪ್ರತಿಪಾದಿಸುತ್ತ ಬಂದಿದೆ. ಕೆಲವು ವಾಕ್ಯಗಳನ್ನು ಈ ವಿಷಯದ ದೃಢತೆಗಾಗಿ ಉದಾಹರಿಸಬಹುದು—

1. **ವಿಷ್ಣುರ್ಬ್ರಹ್ಮಸ್ವರೂಪೇಣ ಸ್ವಯಮೇವ ವ್ಯವಸ್ಥಿತಃ ॥**

(1-2-56)

2. **ಸೃಷ್ಟಿಸ್ಥಿತ್ಯಂತ ಕರಣೀಂ ಬ್ರಹ್ಮವಿಷ್ಣುಶಿವಾತ್ಮಿಕಾಮ್ ।**
**ಸ ಸಂಜ್ಞಾಂ ಯಾತಿ ಭಗವಾನೇಕ ಏವ ಜನಾರ್ದನಃ ॥**

(1-2-66)

3. **ತ್ವಂ ಕರ್ತಾ ಸರ್ವಭೂತಾನಾಂ ತ್ವಂ ಪಾತಾ**
**ತ್ವಂ ವಿನಾಶಕೃತ್ ।**
**ಸರ್ಗಾದಿಷು ಪ್ರಭೋ ಬ್ರಹ್ಮವಿಷ್ಣುರುದ್ರಾತ್ಮರೂಪಧೃತ್ ॥**

(1-4-15)

4. **ಶಕ್ತಯೋ ಯಸ್ಯ ದೇವಸ್ಯ ಬ್ರಹ್ಮವಿಷ್ಣುಶಿವಾತ್ಮಿಕಾಃ ।**
**ಭವಂತ್ಯಭೂತಪೂರ್ವಸ್ಯ ತದ್ವಿಷ್ಣೋಃ ಪರಮಂ ಪದಮ್ ॥**

(1-9-56)

5. **ಪ್ರಸೀದ ಸರ್ವ ಸರ್ವಾತ್ಮನ್ ಕ್ಷರಾಕ್ಷರಮಯೇಶ್ವರ ।**
**ಬ್ರಹ್ಮವಿಷ್ಣುಶಿವಾಖ್ಯಾಭಿಃ ಕಲ್ಪನಾಭಿರುದೀರಿತಃ ॥**

(5-18-51)

6. **ಸರ್ಗಸ್ಥಿತಿವಿನಾಶಾನಾಂ ಕರ್ತಾ ಕರ್ತೃಪತಿರ್ಭವಾನ್।**
**ಬ್ರಹ್ಮವಿಷ್ಣುಶಿವಾಖ್ಯಾಭಿರಾತ್ಮಮೂರ್ತಿಭಿರೀಶ್ವರ॥**

(5-30-10)

ಮೇಲ್ಕಂಡ ವಚನಗಳಿಂದ ಈಶ್ವರನು ಒಬ್ಬನೇ ಇರುವನೆಂದೂ ಭಕ್ತರು ಆರಾಧನೆಗೋಸ್ಕರ ಸಗುಣಮೂರ್ತಿಗಳನ್ನು ಕಲ್ಪಿಸಿಕೊಂಡಿದ್ದಾರೆಂದೂ ತಿಳಿದುಬರುತ್ತದೆ. ನಾವು ಮೊದಲು ಹೇಳಿದಂತೆ ಸತ್ತ್ವಗುಣ ಮೂರ್ತಿಯಾದ ವಿಷ್ಣುವನ್ನು ಪರಮೇಶ್ವರನೆಂದು ಹೊಗಳಿರುವುದು, ಆತನು ಬ್ರಹ್ಮವಸ್ತುವಿಗೆ ಸಮೀಪದಲ್ಲಿರುವ ಉತ್ಕೃಷ್ಟ ಮೂರ್ತಿ ಎಂದೇ. ಸತ್ತ್ವಗುಣವೇ ಇದಕ್ಕೆ ನಿಮಿತ್ತ. ಈ ಮಾತನ್ನು ಮುಂದಿನ ಶ್ಲೋಕವು ಸಮರ್ಥಿಸುತ್ತದೆ—

**ಸ ಪರಃ ಪರಶಕ್ತೀನಾಂ ಬ್ರಹ್ಮಣಃ ಸಮನಂತರಮ್।**
**ಮೂರ್ತಂ ಬ್ರಹ್ಮ ಮಹಾಭಾಗ ಸರ್ವಬ್ರಹ್ಮಮಯೋ ಹರಿಃ॥**

(1-22-63)

ಪರಬ್ರಹ್ಮದ ಪರಮಶಕ್ತಿಗಳಲ್ಲಿ ಮೂರ್ತಸ್ವರೂಪವಾಗಿ ಕಾಣಿಸಿಕೊಂಡಿರುವ ಶ್ರೀಹರಿಯು ಪರಬ್ರಹ್ಮದ ಅನಂತರ ಶ್ರೇಷ್ಠವಾದ ರೂಪವೆಂದು ಈ ಶ್ಲೋಕ ತಿಳಿಸುತ್ತದೆ. ಬ್ರಹ್ಮವಸ್ತುವಿನ ಮಹಾಶಕ್ತಿಗಳಲ್ಲಿ ಬ್ರಹ್ಮ ವಿಷ್ಣು ಶಿವ ಎಂಬಿವು ಪ್ರಧಾನವಾದವು—

**ಬ್ರಹ್ಮ ವಿಷ್ಣು ಶಿವಾ ಬ್ರಹ್ಮನ್ ಪ್ರಧಾನಾ ಬ್ರಹ್ಮಶಕ್ತಯಃ॥**

(1-22-58)

ಈ ಶಕ್ತಿಗಳಲ್ಲಿ ವಿಷ್ಣುಶಕ್ತಿ ಸರ್ವೋತ್ತಮವೆಂದು ವಿಷ್ಣುಪುರಾಣ ಭಾವಿಸುತ್ತದೆ. ವಿಷ್ಣುವೇ ಒಂದು ಕಡೆ ಶಂಕರನನ್ನು ಕುರಿತು, 'ನನಗೂ ನಿನಗೂ ಭೇದವಿಲ್ಲ. ಈ ಜಗತ್ತೆಲ್ಲವೂ ನಮ್ಮಿಬ್ಬರ ಸ್ವರೂಪವೇ. ಅವಿದ್ಯಾಮೋಹಿತರಾದ ದ್ವೈತಿಗಳು ನಮ್ಮಿಬ್ಬರಲ್ಲಿ ಭೇದವಿದೆಯೆಂದು ತಿಳಿದಿದ್ದಾರೆ'—ಎಂದು ಸ್ಪಷ್ಟವಾಗಿ ನುಡಿದಿದ್ದಾನೆ—

**ಯೋಽಹಂ ಸತ್ತ್ವಂ ಜಗಚ್ಚೇದಂ ಸದೇವಾಸುರಮಾನುಷಮ್।**
**ಮತ್ತೋ ನಾನ್ಯದಶೇಷಂ ಯತ್ ತತ್ತ್ವಂ ಜ್ಞಾತುಮಿಹಾರ್ಹಸಿ॥**

**ಅವಿದ್ಯಾಮೋಹಿತಾತ್ಮಾನಃ ಪುರುಷಾ ಭಿನ್ನದರ್ಶಿನಃ।**
**ವದಂತಿ ಭೇದಂ ಪಶ್ಯಂತಿ ಚಾವಯೋರಂತರಂ ಹರ॥**
(5-33-48, 49)

## ವಿಶ್ವದ ಉತ್ಪತ್ತಿ

ವಿಷ್ಣುಪುರಾಣದಲ್ಲಿ ಹೇಳಿದ ವಿಶ್ವದ ಉತ್ಪತ್ತಿಕ್ರಮವು ಬಹುಮಟ್ಟಿಗೆ ಕಾಪಿಲಸಾಂಖ್ಯದ ಕ್ರಮವನ್ನು ಹೋಲುತ್ತದೆ. ಸಾಂಖ್ಯಮತದಂತೆ ಪುರುಷ, ಪ್ರಕೃತಿ ಎಂಬಿವು ಜಗತ್ತಿನ ಎರಡು ಸ್ವತಂತ್ರವಾದ ಮೂಲತತ್ತ್ವಗಳು. ಅದರಲ್ಲಿ ಪುರುಷನೆಂದರೆ ಜೀವಾತ್ಮ. ಜೀವಾತ್ಮರು ಅಸಂಖ್ಯರಾಗಿದ್ದಾರೆ. ಪ್ರಧಾನವು ಸ್ವತಂತ್ರವಾಗಿದ್ದು ಪುರುಷನಿಂದ ನಿರ್ಮಿತವಾಗಿಲ್ಲ. ಆದರೆ ವಿಷ್ಣುಪುರಾಣದ ಪ್ರಕಾರ ವಿಷ್ಣು ಎಂಬುದೊಂದೇ ಸ್ವತಂತ್ರವಾದ ಮೂಲ ತತ್ತ್ವ. ಆದರಿಂದ ಅವಿದ್ಯಾರೂಪವಾದ ಪ್ರಧಾನವು ಅಥವಾ ಪ್ರಕೃತಿಯು ಕಾಣಿಸಿಕೊಂಡಿದ್ದು ಈ ಪ್ರಕೃತಿ ವಿಶ್ವದ ಅನಂತರೂಪಗಳಿಗೆ ಕಾರಣವಾಗಿದೆ. ಈ ಜಗತ್ತು ಮತ್ತು ಅದಕ್ಕೆ ಕಾರಣವಾದ ಪ್ರಕೃತಿ ವಿಷ್ಣುವಿಗಿಂತ ಪೃಥಕ್ಕಾಗಿ ಇಲ್ಲ. ಕ್ಷೇತ್ರಜ್ಞನೆನಿಸಿದ ಜೀವಾತ್ಮನೂ ಸಹ ವಿಷ್ಣುವಿನ ಒಂದು ರೂಪವೇ ಹೊರತು ಬೇರೆಯಾದ ತತ್ತ್ವವಲ್ಲ. ಈ ಪ್ರಕ್ರಿಯೆ ಅದ್ವೈತವೇದಾಂತದ ಸಿದ್ಧಾಂತವೆಂದು ಬೇರೆಯಾಗಿ ಹೇಳುವ ಕಾರಣವಿಲ್ಲ. ಪ್ರಥಮಾಂಶದ ಎರಡರಿಂದ ಐದನೆಯ ಅಧ್ಯಾಯದವರೆಗೆ ಜಗತ್ತಿನ ಸೃಷ್ಟಿಕ್ರಮವು ವಿಸ್ತಾರವಾಗಿ ನಿರೂಪಿತವಾಗಿದೆ. ಆ ಕ್ರಮವು ಸಾಂಖ್ಯಮತಾನುಸಾರಿ ಯೆಂದು ಸಾಮಾನ್ಯ ಓದುಗರಿಗೆ ತೋರಬಹುದಾದ್ದರಿಂದ ಈ ಮಾತನ್ನು ಇಲ್ಲಿ ಹೇಳಬೇಕಾಯಿತು. ಭಗವದ್ಗೀತೆ, ಶ್ರೀಮದ್ಭಾಗವತ ಮುಂತಾದ ಗ್ರಂಥಗಳಲ್ಲಿ ಹೇಳಿರುವ ವೇದಾಂತಸಮ್ಮತವಾದ ಸೃಷ್ಟಿಪ್ರಕ್ರಿಯೆ ಮತ್ತು ಪರಮಾರ್ಥ ತತ್ತ್ವಗಳ ನಿರೂಪಣೆಯೇ ವಿಷ್ಣುಪುರಾಣದಲ್ಲಿಯೂ ಬಂದಿದೆ. ಈ ಶ್ಲೋಕಗಳನ್ನು ಈಗ ಪರಿಶೀಲಿಸಬಹುದು. ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ವಿಷ್ಣು ಕಾರಣನೆಂದೂ ಆತನೇ ಜಗತ್ತಾಗಿ ಕಾಣುವನೆಂದೂ ಈ ಶ್ಲೋಕ ಹೇಳುತ್ತದೆ—

**ವಿಷ್ಣೋಃ ಸಕಾಶಾದುದ್ಭೂತಂ ಜಗತ್‌ತತ್ರೈವ ಚ ಸ್ಥಿತಮ್।**
**ಸ್ಥಿತಿಸಂಯಮಕರ್ತಾಽಸೌ ಜಗತೋಽಸ್ಯ ಜಗಚ್ಚ ಸಃ॥**

(1-1-31)

ಜೀವಾತ್ಮನೂ ವ್ಯಕ್ತ, ಅವ್ಯಕ್ತ, ಕಾಲ ಇವೆಲ್ಲವೂ ಪರಬ್ರಹ್ಮದ ರೂಪವೆಂದು ಈ ಶ್ಲೋಕ ಹೇಳುತ್ತದೆ—

**ಪರಸ್ಯ ಬ್ರಹ್ಮಣೋ ರೂಪಂ ಪುರುಷಃ ಪ್ರಥಮಂ ದ್ವಿಜ।**
**ವ್ಯಕ್ತಾವ್ಯಕ್ತೇ ತಥೈವಾನ್ಯೇ ರೂಪೇ ಕಾಲಸ್ತಥಾ ಪರಮ್॥**

(1-2-15)

ವಿಷ್ಣುವಿನಿಂದ ಸೃಷ್ಟಿಯ ಆರಂಭದಲ್ಲಿ ಅವಿದ್ಯೆ ಕಾಣಿಸಿತು, ಅವಿದ್ಯೆ ಇಲ್ಲದೆ ಜಗತ್ತೇ ಇಲ್ಲವಾದ್ದರಿಂದ. "ಅವಿದ್ಯಾ ಪಂಚ ಪರ್ವೈಷಾ ಪ್ರಾದುರ್ಭೂತಾ ಮಹಾತ್ಮನಃ" (1-5-5).

ವಿಷ್ಣುಪುರಾಣದಲ್ಲಿ ಪ್ರತಿಪಾದಿಸಿರುವ ಅಧ್ಯಾತ್ಮ ತತ್ತ್ವವು ಅದ್ವೈತ ಸಿದ್ಧಾಂತವೇ ಆಗಿದೆಯೆಂದು ಮೇಲೆ ತಿಳಿಸಿದ್ದಾಯಿತು. ಇನ್ನೂ ಹೆಚ್ಚಿನ ಕೆಲವು ಪ್ರಮಾಣಗಳನ್ನು ಈಗ ಪರಿಶೀಲಿಸಬಹುದು. ಪರಮಾತ್ಮನಿಗೆ ರೂಪ, ವರ್ಣ, ನಾಮ ಇತ್ಯಾದಿ ವಿಶೇಷಗಳಾವುವೂ ಇಲ್ಲವೆಂದು ಹೇಳಲಾಗಿದೆ—

**ಪರಃ ಪರಾಣಾಂ ಪರಮಃ ಪರಮಾತ್ಮಾತ್ಮಸಂಸ್ಥಿತಃ।**
**ರೂಪವರ್ಣಾದಿನಿರ್ದೇಶವಿಶೇಷಣವಿವರ್ಜಿತಃ॥**

(1-2-10)

ಶ್ರೀಕೃಷ್ಣನು ನಿರಾಕೃತಿ ಪರಬ್ರಹ್ಮನೆಂದೂ ಆತನು ಲೋಕಾನುಗ್ರಹಾರ್ಥವಾಗಿ ಸರೂಪನಾಗಿ ಅವತರಿಸಿದನೆಂದೂ ಹೇಳಿದೆ—"ಯತ್ರಾವತೀರ್ಣಂ ಕೃಷ್ಣಾಖ್ಯಂ ಪರಬ್ರಹ್ಮ ನಿರಾಕೃತಿ" (4-12-4).

ಆಕಾಶ, ಕಾಲ ಮುಂತಾದವು ಸನ್ನಿಧಾನಮಾತ್ರದಿಂದ ವೃಕ್ಷದ ಉತ್ಪತ್ತಿಗೆ ಹೇಗೆ ಕಾರಣವಾಗುತ್ತದೆಯೋ ಹಾಗೆ ಶ್ರೀಹರಿಯು ವಿಶ್ವಕ್ಕೆ ಸ್ವತಃಪರಿಣಾಮ ವಿಲ್ಲದೆಯೇ ಕಾರಣವಾಗಿರುತ್ತಾನೆ—"ತಥೈವಾಪರಿಣಾಮೇನ ವಿಶ್ವಸ್ಯ ಭಗವಾನ್ ಹರಿಃ" (2-7-27).

ಆತನೇ ಮೂಲಪ್ರಕೃತಿಯಾಗಿದ್ದು ವ್ಯಕ್ತರೂಪಿಯಾಗುತ್ತಾನೆ ಎಂದು ನುಡಿದು ವಿವರ್ತವಾದವನ್ನು ಇಲ್ಲಿ ಸೂಚಿಸಲಾಗಿದೆ—'ಸ ಏವ ಮೂಲಪ್ರಕೃತಿಃ ವ್ಯಕ್ತರೂಪೀ ಜಗಚ್ಚ ಸಃ.' ಅದ್ವೈತವೇದಾಂತಿಗಳು ಈ ವಿಷಯದಲ್ಲಿ "ಮೃತ್ತಿಕೇತ್ಯೇವ ಸತ್ಯಮ್" ಎಂದು ಉದಾಹರಿಸುವ ಶ್ರುತಿಯ ಅರ್ಥ 'ಮಹೀ ಘಟತ್ತ್ವಂ ಘಟತಃ ಕಪಾಲಿಕಾ....' ಎಂಬ ಶ್ಲೋಕದಲ್ಲಿ ಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ. ಆದ್ದರಿಂದ ವಿಜ್ಞಾನದ ಹೊರತಾಗಿ ಯಾವ ವಸ್ತುಜಾತವೂ ಇಲ್ಲವೆಂದು 'ತಸ್ಮಾನ್ನ ವಿಜ್ಞಾನಮೃತೇಽಸ್ತಿ ಕಿಂಚಿತ್, ಕ್ವಚಿತ್ ಕದಾಚಿತ್ ದ್ವಿಜ ವಸ್ತುಜಾತಮ್' ಎಂಬ ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸಲಾಗಿದೆ (2-12-41, 42).

ಹಾಗಿದ್ದರೆ ಲೋಕದಲ್ಲಿ ದ್ವೈತರೂಪವಾದ ಈ ಜಗತ್ತು ಕಾಣಿಸುವುದು ಹೇಗೆ? ಎಂಬ ಪ್ರಶ್ನೆ ಏಳುತ್ತದೆ. ಜ್ಞಾನಾತ್ಮನಾದ ಪರಮಾತ್ಮನಿಗೆ ಯಾವ ರೂಪವೂ ಇಲ್ಲವೆಂದೂ, ಮೂರ್ತವಾದ ಜಗತ್ತು ಅಜ್ಞಾನಿಗಳಿಗೆ ಭ್ರಾಂತಿಯಿಂದ ಕಾಣಿಸುತ್ತಿದೆಯೆಂದೂ ವಿಷ್ಣುಪುರಾಣ ಹೇಳುತ್ತದೆ. ಜ್ಞಾನಸ್ವರೂಪವನ್ನು ಅರ್ಥಸ್ವರೂಪವಾಗಿ ಕಾಣುತ್ತ ಬುದ್ಧಿಹೀನರು ಮೋಹಸಂಪ್ಲವದಲ್ಲಿ ತೊಳಲಾಡುತ್ತಿದ್ದಾರೆ ಎಂದು ಹೇಳುತ್ತದೆ (1-4-39, 40). ಶೈಲಾದಿಗಳೆಲ್ಲವೂ ವಿಜ್ಞಾನ ವಿಜೃಂಭಿತಗಳು. ಯಾವಾಗ ಕರ್ಮಕ್ಷಯವಾಗಿ ಜ್ಞಾನವು ದೋಷರಹಿತವಾಗುತ್ತದೆಯೋ ಆಗ ವಸ್ತುಭೇದಗಳಾವುವೂ ಕಾಣಿಸುವುದಿಲ್ಲ (2-12-39, 40). ಭಿನ್ನದರ್ಶಿಗಳಾದ ಜನರು ಅವಿದ್ಯಾಮೋಹಿತಾತ್ಮರು (5-33-49). ಈ ಜಗತ್ತು ಭಿನ್ನವಾಗಿ ಕಾಣುವುದು ಅವಿದ್ಯಾವಶದಿಂದ (13-17-38). ಶುದ್ಧನೂ ಏಕನೂ ಆದ ಪರಮಾತ್ಮನನ್ನು ಈಶ್ವರನೆನ್ನುವುದು ಹೇಗೆ, ಈಶಿತವ್ಯವೇ ಇಲ್ಲದ್ದರಿಂದ? ಎಂಬ ಪ್ರಶ್ನೆಗೆ ಆತನು ಈಶ್ವರನೆನ್ನುವುದು ಔಪಚಾರಿಕವಾಗಿ ಎಂದು ವಿಷ್ಣುಪುರಾಣವು ಉತ್ತರ ಕೊಡುತ್ತದೆ (1-9-46). ಒಬ್ಬನೇ ಪರಮಾತ್ಮನು ಸೃಜ್ಯನೂ ಸರ್ಗಕರ್ತನೂ ಆಗಿದ್ದಾನೆ. ಆತನೇ ಪಾಲಕನೂ, ಪಾಲನೀಯನೂ, ಸಂಹಾರಕರ್ತನೂ ಆಗಿದ್ದಾನೆ (1-2-70). ಆತನೇ ಭೋಕ್ತೃವೂ, ಭೋಗ್ಯವೂ, ಕರ್ತೃವೂ, ಕಾರ್ಯವೂ ಆಗಿದ್ದಾನೆ (2-9-50).

ಇದಕ್ಕಿಂತ ಸ್ಪಷ್ಟವಾದ ಉಲ್ಲೇಖಗಳನ್ನು ಪ್ರಹ್ಲಾದಚರಿತ್ರೆಯಲ್ಲಿಯೂ, ಋಭು-ನಿದಾಘರ ಕಥೆಯಲ್ಲಿಯೂ ಕಾಣಬಹುದು. ಪ್ರಹ್ಲಾದನು ತಂದೆ

ಹಿರಣ್ಯಕಶಿಪುವಿಗೆ ವಿಷ್ಣು ಯಾರೆಂಬುದನ್ನು ತಿಳಿಸುತ್ತ, ಈ ವಿಶ್ವವು ಯಾರಿಂದ ಹುಟ್ಟಿದೆಯೋ ಯಾವಾತನು ಸ್ವಯಂ ವಿಶ್ವವಾಗಿದ್ದಾನೋ ಆತನೇ ವಿಷ್ಣುವೆನ್ನುತ್ತಾನೆ—

**ಯತೋ ಯಶ್ಚ ಸ್ವಯಂ ವಿಶ್ವಂ ಸ ವಿಷ್ಣುಃ ಪರಮೇಶ್ವರಃ।**

(1-17-22)

ಇನ್ನೊಂದೆಡೆ, ದೇವ ಮನುಷ್ಯಾದಿಗಳೆಲ್ಲರೂ ವಿಷ್ಣುವಿನ ರೂಪವೆಂದೂ ತೋರಿಕೆಗೆ ಮಾತ್ರ ಭಿನ್ನವಾಗಿರುವುದೆಂದೂ ಹೇಳುತ್ತಾನೆ (1-19-47). ಹಿರಣ್ಯಕಶಿಪು ಪ್ರಹ್ಲಾದನನ್ನು ಸರ್ಪಗಳಿಂದ ಬಂಧಿಸಿದಾಗ, ಪ್ರಹ್ಲಾದನು ತಾನೇ ವಿಷ್ಣುವೆಂದು ಅಭೇದ ಜ್ಞಾನದಿಂದ ಸ್ತುತಿಸಿದನೆಂದೂ, ಆಗ ಆತನ ಪಾಪಗಳೆಲ್ಲವೂ ತೊಳೆದು ಅಂತಃಕರಣ ಶುದ್ಧಿಯಾಯಿತೆಂದೂ, ಸರ್ಪಬಂಧಗಳು ಕಳಚಿಹೋದುವೆಂದೂ ಹೇಳಿರುವ ಈ ಭಾಗವು ಅತ್ಯಂತ ಮನನೀಯವಾಗಿದೆ—

**ಸರ್ವಗತ್ವಾದನಂತಸ್ಯ ಸ ಏವಾಹಮವಸ್ಥಿತಃ।**
**ಮತ್ತಃ ಸರ್ವಮಹಂ ಸರ್ವಂ ಮಯಿ ಸರ್ವಂ ಸನಾತನೇ॥**

**ಅಹಮೇವಾಕ್ಷಯೋ ನಿತ್ಯಃ ಪರಮಾತ್ಮಾತ್ಮಸಂಶ್ರಯಃ।**
**ಬ್ರಹ್ಮಸಂಜ್ಞೋಽಹಮೇವಾಗ್ರೇ ತಥಾಂತೇ ಚ ಪರಃ ಪುಮಾನ್॥**

(1-19-85, 86)

ಮತ್ತೆ ಮುಂದಿನ ಶ್ಲೋಕಗಳನ್ನು ನೋಡಿ—

**ಏವಂ ಸಂಚಿನ್ತಯನ್ ವಿಷ್ಣುಂ ಅಭೇದೇನಾತ್ಮನೋ ದ್ವಿಜ।**
**ತನ್ಮಯತ್ವಮವಾಪ್ಯಾಗ್ರ್ಯಂ ಮೇನೇ ಚಾತ್ಮಾನಮಚ್ಯುತಮ್॥**

**ವಿಸಸ್ಮಾರ ತಥಾತ್ಮಾನಂ ನಾನ್ಯತ್ ಕಿಂಚಿದಜಾನತ।**
**ಅಹಮೇವಾವ್ಯಯೋಽನನ್ತಃ ಪರಮಾತ್ಮೇತ್ಯಚಿಂತಯತ್॥**

(1-20-1, 2)

ಹೀಗೆಯೇ ಋಭು-ನಿದಾಘರ ಚರಿತ್ರೆಯಲ್ಲಿ ಅಭೇದಸಿದ್ಧಾಂತ ಎದ್ದು ಕಾಣುತ್ತದೆ. ಅಲ್ಲಿ ಅದ್ವೈತ ಶಬ್ದವೇ ಅನೇಕ ಬಾರಿ ಪ್ರಯುಕ್ತವಾಗಿದೆ.

ಈ ಕಥೆಯನ್ನು ಜಡಭರತನು ಸೌವೀರ ರಾಜನಿಗೆ ಹೇಳಿದ್ದಾನೆ. 'ವಿಜ್ಞಾನಂ ಪರಮಾರ್ಥೋಽಸೌ ದ್ವೈತಿನೋಽತಥ್ಯದರ್ಶಿನಃ' ಎಂದು ಸ್ಪಷ್ಟವಾಗಿ ತಿಳಿಸಿ ಏಕಸ್ವರೂಪನಾದ ಆತ್ಮನ ಭೇದವು ಬಾಹ್ಯವಾದ ದೇಹಾದಿ ಕರ್ಮನಿಮಿತ್ತವೆಂದೂ ದೇಹಾದಿರೂಪವಾದ ಆವರಣವು ನಷ್ಟವಾಗಲು ಭೇದ ಉಳಿಯುವುದಿಲ್ಲವೆಂದೂ ತಿಳಿಸಿ 'ಅದ್ವೈತಾಂತರ್ಗತವಾದ ಕಥೆ'ಯನ್ನು ಜಡಭರತನು ಹೇಳಿದ್ದಾನೆ. ನಿದಾಘನು ಋಭುವಿನ ಶಿಷ್ಯ. ಎಷ್ಟು ಕಾಲ ಕಳೆದರೂ ನಿದಾಘನಿಗೆ 'ಅದ್ವೈತವಾಸನಾ' ಹುಟ್ಟಲಿಲ್ಲವೆಂದು ಅನೇಕ ಸಲ ಶಿಷ್ಯನ ಮನೆಗೆ ಬಂದು ಋಭು ಪ್ರಕಾರಾಂತದಿಂದ ಅದ್ವೈತ ತತ್ತ್ವವನ್ನು ಬೋಧಿಸುತ್ತಾನೆ. ಈ ಕಥೆಯಲ್ಲಿ ಬಂದಿರುವ ಕೆಳಗಿನ ವಾಕ್ಯಗಳು ಗಮನಾರ್ಹವಾದವು—ಋಭುವನ್ನು ಬಿಟ್ಟು ಬೇರೊಬ್ಬನಿಗೆ ಅದ್ವೈತ ಸಂಸ್ಕಾರ ಆಗಿರಲಿಲ್ಲವೆಂದು ನಿದಾಘನು ಹೇಳುತ್ತಾನೆ—

**ನಾನ್ಯಸ್ಯಾದ್ವೈತಸಂಸ್ಕಾರಸಂಸ್ಕೃತಂ ಮಾನಸಂ ತಥಾ ॥**

ಪರಮಾರ್ಥಸಾರಭೂತವಾದದ್ದು ಅದ್ವೈತವೇ—

**ಪರಮಾರ್ಥಸಾರಭೂತಂ ತದದ್ವೈತಮಶೇಷತಃ ॥**

ಋಭುವಿನ ಉಪದೇಶದಂತೆ ನಿದಾಘನು ಅದ್ವೈತ ಪರನಾಗಿ ಸರ್ವ ಪ್ರಾಣಿಗಳು ತನಗೆ ಅಭಿನ್ನವಾದವುಗಳೆಂದು ಕಂಡುಕೊಂಡನು—

**ನಿದಾಘೋಽಪ್ಯುಪದೇಶನ ತೇನಾದ್ವೈತ ಪರೋಽಭವತ್ ।**
**ಸರ್ವಭೂತಾನ್ಯಭೇದೇನ ದದೃಶೇ ಸ ತದಾತ್ಮನಃ ॥**

ಈ ಕಥೆಯನ್ನು ತಿಳಿಸಿ ಜಡಭರತನು ಸೌವೀರರಾಜನಿಗೆ ಹೇಳುತ್ತಾನೆ—ಒಂದೇ ಆಕಾಶವು ಭ್ರಾಂತಿಗೊಂಡ ದೃಷ್ಟಿದೋಷವುಳ್ಳವರಿಗೆ ಬಿಳುಪು ಕಪ್ಪು ಮೊದಲಾದ ಭೇದವುಳ್ಳದ್ದಾಗಿ ಹೇಗೆ ಕಾಣುತ್ತದೆಯೋ ಹಾಗೆ ಒಬ್ಬನೇ ಆತ್ಮನು ಅಜ್ಞಾನಿಗಳಿಗೆ ಭಿನ್ನಭಿನ್ನವಾಗಿ ಕಾಣುತ್ತಾನೆ. ಇರತಕ್ಕದ್ದೆಲ್ಲವೂ ಒಂದೇ ವಸ್ತು. ಆತನೇ ಅಚ್ಯುತ, ಅವನೇ ನಾನು, ಅವನೇ ನೀನು, ಅವನೇ ಎಲ್ಲವೂ. ಭೇದಮೋಹವನ್ನು ತ್ಯಜಿಸು—

**ಸಿತನೀಲಾದಿಭೇದೇನ ಯಥೈಕಂ ದೃಶ್ಯತೇ ನಭಃ ।**
**ಭ್ರಾಂತಿದೃಷ್ಟಿಭಿರಾತ್ಮಾಪಿ ತಥೈಕಸ್ಸನ್ ಪೃಥಕ್ ಪೃಥಕ್ ॥**

**ಏಕಃ ಸಮಸ್ತಂ ಯದಿಹಾಸ್ತಿ ಕಿಂಚಿತ್**
**ತದಚ್ಯುತೋ ನಾಸ್ತಿ ಪರಂ ತತೋಽನ್ಯತ್।**
**ಸೋಽಹಂ ಸ ಚ ತ್ವಂ ಸ ಚ ಸರ್ವಮೇತತ್**
**ಆತ್ಮಸ್ವರೂಪಂ, ತ್ಯಜ ಮೋಹಭೇದಮ್॥**

(ನೋಡಿ:—ದ್ವಿತೀಯಾಂಶದ 15, 16 ನೇ ಅಧ್ಯಾಯಗಳು)

ಈ ಪ್ರಕಾರವಾಗಿ ಅದ್ವೈತವನ್ನು ಪ್ರತಿಪಾದಿಸುವ ನೂರಾರು ವಚನಗಳನ್ನು ಇನ್ನೂ ಉದಾಹರಿಸಬಹುದು. ಹೀಗಿದ್ದರೂ ಅಲ್ಲಲ್ಲಿ ಅಧ್ಯಾಹಾರ ಮಾಡಿ ಶಬ್ದವನ್ನು ಯಥೇಚ್ಛವಾಗಿ ತಿರುಚಿ, ಬೇರೆ ವಿಧವಾಗಿ ಇವುಗಳಿಗೆ ಅರ್ಥವನ್ನು ಕಲ್ಪಿಸುವುದಾದರೆ, ಪೂರ್ವಗೃಹೀತವಾದ ಅಭಿಪ್ರಾಯವನ್ನು ಇವುಗಳಿಗೆ ತುರುಕಿದಂತೆ ಆಗುತ್ತದೆಯೇ ಹೊರತು, ವಿಷ್ಣುಪುರಾಣವು ಏನು ಹೇಳುತ್ತದೆ ಎಂಬುದನ್ನು ನಾವು ಗ್ರಹಿಸಿದಂತಾಗುವುದಿಲ್ಲ.

ಇರತಕ್ಕದ್ದು ಒಂದೇ ಪರಮಾರ್ಥವಸ್ತು. ಇದು ನಿರ್ಗುಣವೂ ನಿರ್ವಿಕಾರವೂ ಪರಿಶುದ್ಧವೂ ಆದ ಬ್ರಹ್ಮವೆನಿಸುತ್ತದೆ. ತನ್ನ ಶಕ್ತಿವಿಶೇಷದಿಂದ ಬ್ರಹ್ಮ, ವಿಷ್ಣು, ಶಿವ ಎಂಬ ಮೂರ್ತಸ್ವರೂಪವನ್ನು ಅದು ಧರಿಸುತ್ತದೆ. ಈ ಮೂರ್ತಿತ್ರಯದಲ್ಲಿ ಸತ್ತ್ವಪ್ರಧಾನವಾದ ವಿಷ್ಣುಮೂರ್ತಿ ಶ್ರೇಷ್ಠವಾದದ್ದು. ಬ್ರಹ್ಮದ ಅವಿದ್ಯಾಶಕ್ತಿಯಿಂದ ಜೀವಭೇದಗಳೂ ಜಗತ್ತೂ ಕಲ್ಪಿತವಾಗಿವೆ. ಇದಿಷ್ಟು ವಿಷ್ಣುಪುರಾಣದಲ್ಲಿ ಹೇಳಿದ ಅಧ್ಯಾತ್ಮಸಾರ.

## ಸಾಧನಮಾರ್ಗ

ವಿಷ್ಣುಪುರಾಣವು ಶಾಸ್ತ್ರೋಕ್ತ ಕರ್ಮವನ್ನೂ ಭಗವದ್ ಭಕ್ತಿಯನ್ನೂ ಮೋಕ್ಷ ಸಾಧನ ಮಾರ್ಗಗಳೆಂದು ಅಂಗೀಕರಿಸಿದೆ. ಕರ್ಮಾನುಷ್ಠಾನದಿಂದ ಅಂತಃಕರಣವು ಶುದ್ಧವಾಗುತ್ತದೆ. ಆ ಅಂತಃಕರಣದಲ್ಲಿ ಭಗವಂತನು ನೆಲೆಸುತ್ತಾನೆ. ಆಗ ಶುದ್ಧ ಜ್ಞಾನವುಂಟಾಗಿ 'ವಿಷ್ಣು' ಎಂಬ ಪರಮ ಪದವು ಲಭಿಸುತ್ತದೆ (1-6-12, 13). ಕೇವಲ ಕರ್ಮಿಗಳಿಗೆ ಪ್ರಾಜಾಪತ್ಯವೇ ಮೊದಲಾದ ಶ್ರೇಷ್ಠ ಲೋಕವು ಲಭಿಸುತ್ತದೆ. ಸಂನ್ಯಾಸಿಗಳಾದ ಯೋಗಿಗಳಿಗೆ ಲಭಿಸತಕ್ಕದ್ದು ಬ್ರಹ್ಮವಸ್ತು. 'ಓಂ ನಮೋ ಭಗವತೇ ವಾಸುದೇವಾಯ'

ಎಂಬ ದ್ವಾದಶಾಕ್ಷರ ಚಿಂತಕರು ಜ್ಞಾನದ್ವಾರ ಮೋಕ್ಷವನ್ನು ಪಡೆಯುತ್ತಾರೆ. (1-6-37 ರಿಂದ 40) ಧ್ರುವನು ಸಗುಣಮೂರ್ತಿಯಾದ ವಿಷ್ಣುವನ್ನು ಕಂಡರೂ ಮುಕ್ತನಾಗಲಿಲ್ಲ. ಭಗವದ್ ಧ್ಯಾನದಿಂದ ಬಹುಕಾಲದ ಮೇಲೆ ಪುಣ್ಯ ಪಾಪಗಳನ್ನು ತೊಡೆದು ಹಾಕಿ ಮೋಕ್ಷವನ್ನು ಪಡೆಯುತ್ತಾನೆ (1-20-34). ಮೋಕ್ಷಪ್ರಾಪ್ತಿಗೆ ಪಾಪದಂತೆ ಪುಣ್ಯವೂ ವಿಘ್ನಕಾರಿಯೇ. 'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇಽರ್ಜುನ' ಎಂಬ ಗೀತಾವಾಕ್ಯದ ವಿವರಣೆ ಧ್ರುವನ ಮೋಕ್ಷಪ್ರಾಪ್ತಿಯಲ್ಲಿ ಸ್ಪಷ್ಟವಾಗುತ್ತದೆ. ಭಗವದ್ ಧ್ಯಾನದಿಂದ ಜ್ಞಾನ, ಜ್ಞಾನದಿಂದ ಪುಣ್ಯಪಾಪಗಳ ನಿವೃತ್ತಿ, ಅನಂತರ ಮೋಕ್ಷ ಪ್ರಾಪ್ತಿ ಎಂಬುದು ಕ್ರಮ. ಧ್ಯಾನಯೋಗದ ವಿವರಣೆ ಖಾಂಡಿಕ್ಯ-ಕೇಶಿಧ್ವಜರ ಸಲ್ಲಾಪದಲ್ಲಿ ಬಹು ಸುಂದರವಾಗಿ ವರ್ಣಿತ ವಾಗಿದೆ. ಷಷ್ಠಾಂಶದ ಏಳನೆಯ ಅಧ್ಯಾಯದಲ್ಲಿ ಈ ವಿಷಯವಿದ್ದು ಈ ಭಾಗವು ವಿಷ್ಣುಪುರಾಣದ ಹೃದಯವೆನ್ನಬಹುದು. ಈ ಅಧ್ಯಾಯದಲ್ಲಿ ವಿಷ್ಣುವನ್ನು ಅಷ್ಟಭುಜನನ್ನಾಗಿಯೂ ಧ್ಯಾನಿಸಬಹುದೆಂದು ಹೇಳಿರುವುದು ಕುತೂಹಲಕರವಾಗಿದೆ. ಮೂರ್ತರೂಪವನ್ನು ಧ್ಯಾನಿಸುತ್ತ ಮೂರ್ತಿಯ ಒಂದೊಂದೇ ಅಂಶವನ್ನು ಕಳಚುತ್ತ ಭಗವಂತನ ಕಲ್ಪನಾಹೀನವಾದ ಸ್ವರೂಪಗ್ರಹಣವೇ ಸಮಾಧಿ ಎಂದು ಇಲ್ಲಿ ಹೇಳಿದೆ. ಈ ಸಮಾಧಿಯಲ್ಲಿ ಧ್ಯಾತಾ, ಧ್ಯೇಯ, ಧ್ಯಾನ ಎಂಬ ತ್ರಿಪುಟಿ ಇರುವುದಿಲ್ಲ. ಇದೇ ನಿರ್ವಿಕಲ್ಪಕ ಸಮಾಧಿ. ಈ ಸಮಾಧಿ ಯಾರಿಗೆ ಪ್ರಾಪ್ತವಾಗುವುದೋ ಅವನೇ ಕೃತಕೃತ್ಯ. ಆ ಸ್ಥಿತಿಯಲ್ಲಿ ಅಜ್ಞಾನದ ಕೃತವಾದ ಭೇದವು ನಷ್ಟವಾಗಿ ಪರಮಾತ್ಮ ನೊಡನೆ ತದ್ಭಾವಭಾವವನ್ನು ಹೊಂದಿ ಅಭೇದಿಯಾಗುತ್ತಾನೆ—

**ವಿಭೇದಜನಕೇಽಜ್ಞಾನೇ ನಾಶಮಾತ್ಯಂತಿಕಂ ಗತೇ।**
**ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ॥**

(6-7-96)

'ಭೇದಜ್ಞಾನವನ್ನುಂಟುಮಾಡುವ ಅಜ್ಞಾನವು ಸಂಪೂರ್ಣವಾಗಿ ನಾಶ ಹೊಂದಿದ ಮೇಲೆ ತನಗೂ ಬ್ರಹ್ಮವಸ್ತುವಿಗೂ ವಾಸ್ತವವಾಗಿ ಇಲ್ಲದಿರುವ ಭೇದವನ್ನು ಯಾವನು ಮಾಡಿಯಾನು!'

ಭಕ್ತಿಯ ಸ್ವರೂಪವೇನೆಂಬುದನ್ನು ತೋರಿಸುವ ಈ ಶ್ಲೋಕ ಮನೋಹರವಾಗಿದೆ—

**ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ।**
**ತ್ವಾಮನುಸ್ಮರತಃ ಸಾ ಮೇ ಹೃದಯಾನ್ಮಾಪಸರ್ಪತು॥**

(1-20-19)

ಯಾವ ಯಾವ ಜನ್ಮ ಬಂದರೂ ನನಗೆ ನಿನ್ನಲ್ಲಿ ಅವ್ಯಭಿಚಾರಿಣೀ ಭಕ್ತಿ ಇರಲೆಂದು ಪ್ರಹ್ಲಾದನು ವಿಷ್ಣುವನ್ನು ಪ್ರಾರ್ಥಿಸಿಕೊಳ್ಳುತ್ತ ಈ ಮಾತನ್ನು ಹೇಳಿದ್ದಾನೆ. 'ವಿವೇಕಹೀನರಿಗೆ ವಿಷಯಸುಖಗಳನ್ನು ಕೊಡುವ ವಸ್ತುಗಳಲ್ಲಿ ಅವಿಚ್ಛಿನ್ನವಾದ ಯಾವ ಪ್ರೀತಿಯಿರುತ್ತದೆಯೋ, ಅಂತಹ ಪ್ರೀತಿಯು ಸದಾ ನಿನ್ನನ್ನು ಧ್ಯಾನಿಸುತ್ತಿರುವ ನನ್ನ ಹೃದಯದಿಂದ ಯಾವಾಗಲೂ ಚಲಿಸದಿರಲಿ.' ಇಂತಹ ಅವ್ಯಭಿಚಾರಿಣೀಭಕ್ತಿಯು ಯಾವ ಕೃತಕೃತ್ಯನಿಗೆ ಉಂಟಾಗುವುದೋ ಅವನಿಗೆ ಧರ್ಮಾರ್ಥಕಾಮಗಳಿಂದ ಆಗ ಬೇಕಾದದ್ದೇನೂ ಇಲ್ಲ. ಮುಕ್ತಿಯು ಅವನ ಕೈಯಲ್ಲಿಯೇ ಇರುತ್ತದೆ— 'ಮುಕ್ತಿಸ್ತಸ್ಯ ಕರೇ ಸ್ಥಿತಾ'.

## ವಿಷ್ಣುಪುರಾಣ ಮತ್ತು ಶ್ರೀಮದ್ಭಾಗವತ

ಪ್ರಸಿದ್ಧವಾದ ವಿಷ್ಣುವಿನ ದಶಾವತಾರಗಳಲ್ಲಿ ಕೂರ್ಮ, ವರಾಹ, ನೃಸಿಂಹ, ಶ್ರೀರಾಮ ಮತ್ತು ಶ್ರೀಕೃಷ್ಣ ಈ ಐದು ಅವತಾರಗಳ ವಿಚಾರ ವಿಷ್ಣುಪುರಾಣದಲ್ಲಿ ಬಂದಿದೆ. ಇವುಗಳಲ್ಲಿ ಶ್ರೀರಾಮನ ಚರಿತೆ ಚಿಕ್ಕದಾಗಿಯೂ ಶ್ರೀಕೃಷ್ಣಚರಿತೆ ವಿಸ್ತಾರವಾಗಿಯೂ ಬಂದಿದೆ. ನೃಸಿಂಹನು ಹಿರಣ್ಯಕಶಿಪುವನ್ನು ಸಂಹರಿಸಿದ ವೃತ್ತಾಂತಕ್ಕೆ ಯಾವ ಪ್ರಾಧಾನ್ಯವೂ ಇಲ್ಲದೆ ಆನುಷಂಗಿಕವಾಗಿ ಒಂದೇ ಮಾತಿನಲ್ಲಿ ಸೂಚಿಸಲಾಗಿದೆ. ವಿಷ್ಣುವಿನ ದಶಾವತಾರಗಳ ವೃತ್ತಾಂತ ಪ್ರಧಾನವಾಗಿ ಕಾಣಿಸಿಕೊಳ್ಳುವುದು ಶ್ರೀಮದ್ ಭಾಗವತದಲ್ಲಿ. ವಿಷ್ಣುಪುರಾಣದಲ್ಲಿ ಭಕ್ತಿಯು ಪ್ರಧಾನವೆಂದು ನಿರೂಪಿತ ವಾಗಿದ್ದರೂ ಸೂಕ್ಷ್ಮರೂಪದಲ್ಲಿದೆ. ಇದು ಶ್ರೀಮದ್ಭಾಗವತದಲ್ಲಿ ವಿಸ್ತೃತ ವಾಗಿದ್ದು ಅತ್ಯಂತ ಮನೋರಮವಾಗಿ ನಿರೂಪಿತವಾಗಿದೆ. ಭಗವದ್ಭಕ್ತಿಯ

ಶ್ರೇಷ್ಠತೆಯನ್ನು ಪ್ರತಿಪಾದಿಸುವುದಕ್ಕಾಗಿಯೇ ಭಾಗವತವು ವಿರಚಿತವಾಗಿದೆ ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಭಕ್ತಿಯನ್ನು ವರ್ಣಿಸುವ ಪ್ರಸಂಗ ದಲ್ಲಿ ಭಾಗವತಕಾರರು ಮೈಮರೆತು ಭಗವಂತನಲ್ಲಿ ತಲ್ಲೀನರಾಗಿರುತ್ತಾರೆ. ವಿಷ್ಣುಪುರಾಣದ ಎಲ್ಲ ಅಂಶಗಳ ವಿಸ್ತೃತ ನಿರೂಪಣೆ ಭಾಗವತದ ಉದ್ದೇಶ ವೆಂದು ತೋರುತ್ತದೆ. ಆದರೆ ವಿಷ್ಣುಪುರಾಣದ ಭಾಷಾಲಾಲಿತ್ಯ, ಸರಳತೆ ಭಾಗವತದಲ್ಲಿ ಕಂಡುಬರುವುದಿಲ್ಲ. ವಿಷಯ ಸಾಮ್ಯ, ಶಬ್ದಸಾದೃಶ್ಯ—ಮುಂತಾದುವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಭಾಗವತವು ವಿಷ್ಣು ಪುರಾಣದ ಭಾಷ್ಯವೆನಿಸಬಹುದು. ಹೇಗಿದ್ದರೂ ಭಾಗವತಕಾರರ ಕಣ್ಣೆದು ರಿಗೆ ವಿಷ್ಣುಪುರಾಣವಿದ್ದಿತು—ಎಂದು ನಮ್ಮ ಖಚಿತವಾದ ಅಭಿಪ್ರಾಯ.

## ಪುರಾಣಗಳ ಮಹತ್ತ್ವ

ಪುರಾಣಗಳನ್ನು ಶ್ರವಣಮಾಡಿಸುವ ಸಂಪ್ರದಾಯ ನಮ್ಮ ಭರತ ಖಂಡದಲ್ಲಿ ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ. ಹಳ್ಳಿಹಳ್ಳಿ ಯಲ್ಲಿಯೂ ಪಟ್ಟಣದಲ್ಲಿಯೂ ದೇವಾಲಯ ಮುಂತಾದ ಸಾರ್ವಜನಿಕ ಸ್ಥಳದಲ್ಲಿಯೂ ಸಂಜೆಯ ಹೊತ್ತು ಪುರಾಣಶ್ರವಣ ಒಂದು ಸಾಮಾನ್ಯ ದೃಶ್ಯವಾಗಿತ್ತು. ಇತ್ತೀಚೆಗೆ ಈ ಪದ್ಧತಿ ಶಿಥಿಲವಾಗುತ್ತಿರುವುದು ನಮ್ಮ ಸಂಸ್ಕೃತಿಯ ಬೆಳವಣಿಗೆಗೆ ಅಪಾಯಕಾರಿಯಾಗಿ ಪರಿಣಮಿಸುತ್ತಿದೆ. ರಾಮಾಯಣ ಮಹಾಭಾರತಗಳ ಸಾಮಾನ್ಯ ಪರಿಚಯವೂ ನಮ್ಮ ಮಕ್ಕ ಳಿಗೆ ಇಲ್ಲದಿರುವುದು ವಿಷಾದಕರ. ಧ್ರುವ, ಪ್ರಹ್ಲಾದ, ಮಾರ್ಕಂಡೇಯ, ಅಂಬರೀಷ ಮೊದಲಾದ ಭಕ್ತರ ಚರಿತೆಯಾಗಲಿ ನಳ, ಹರಿಶ್ಚಂದ್ರ, ಯಯಾತಿ ಮುಂತಾದ ಧೀರೋದಾತ್ತ ಪುರುಷರ ಕಥೆಯಾಗಲಿ ದಮಯಂತಿ, ಅನಸೂಯಾ, ಚಂದ್ರಮತಿ ಮುಂತಾದ ಸಾಧ್ವೀಶಿರೋ ಮಣಿಗಳ ವಿಚಾರವಾಗಲಿ, ಈಗಿನವರಿಗೆ ಅಪರಿಚಿತ. ಪುರಾಣ ಶ್ರವಣ ಪದ್ಧತಿಯು ಕ್ಷೀಣವಾಗುತ್ತಿರುವುದೇ ಇದಕ್ಕೆ ಕಾರಣ. ಅಲ್ಲದೆ, ನಮ್ಮವರಲ್ಲಿ ಬಲ್ಲವರೂ ಸಹ ಪುರಾಣದಲ್ಲೇನಿದೆ? ಎಂದು ಅಸಡ್ಡೆಯಿಂದ 'ನಿನ್ನ ಪುರಾಣ ಬೇಡ' ಎಂಬ ನಿಂದಾವಾಕ್ಯವನ್ನು ಬಳಸುವ ಮಟ್ಟಕ್ಕೆ ಹೋಗಿದ್ದಾರೆ. ಆದರೆ ವಸ್ತುಸ್ಥಿತಿ ಇವರು ತಿಳಿದುಕೊಂಡಿರುವುದಕ್ಕಿಂತ

ಭಿನ್ನವಾಗಿದೆ. ಪುರಾಣವು 'ಚತುರ್ದಶ ವಿದ್ಯೆಗಳಲ್ಲೊಂದು' ಎಂದು ಪ್ರಾಚೀನರು ಹೇಳಿರುವುದು ಬರಿಯ ಪ್ರಶಂಸೆಯ ನುಡಿಯಲ್ಲ. ಸಾಮಾನ್ಯ ಜನರಿಗೆ ಅತ್ಯಾವಶ್ಯಕವಾದ ಲೌಕಿಕ ಮತ್ತು ಪಾರಮಾರ್ಥಿಕ ವಿಷಯಗಳನ್ನು ತಿಳಿಸುವುದಕ್ಕಾಗಿಯೇ ಪುರಾಣಗಳು ಹೊರಟಿವೆ ಎಂಬುದನ್ನು ಮರೆಯ ಕೂಡದು. ಇವುಗಳಲ್ಲಿ ಬರುವ ಕಥೆಗಳು ಅತ್ಯಂತ ರೋಚಕವಾದವು. ಕಲಿಯಬೇಕಾದ ಲೋಕನೀತಿಗಳು ಅಮೂಲ್ಯವಾದವು. ಶಾಸ್ತ್ರದ ಪೆಡಸಿಲ್ಲದೆ ಸುಲಭವಾಗಿ ವಿವರಿಸುವ ಅಧ್ಯಾತ್ಮ ತತ್ತ್ವಗಳು ಮನನೀಯ ವಾದವು. ಆನುಷಂಗಿಕವಾಗಿ ಪ್ರಸ್ತಾಪಿಸಲ್ಪಡುವ ಯೋಗ, ಜ್ಯೌತಿಷ ಮುಂತಾದ ಸಾಹಿತ್ಯಗಳು ಅವಶ್ಯ ತಿಳಿಯಬೇಕಾದವು. ವಂಶ, ವಂಶಾನು ಚರಿತಗಳಲ್ಲಿ ಬರುವ ಅತಿ ದೀರ್ಘವಾದ ಹೆಸರುಗಳ ಪಟ್ಟಿ ಬೇಸರ ತರಬಹುದಾದರೂ ಐತಿಹಾಸಿಕ ಮೌಲ್ಯ ಅದಕ್ಕುಂಟೆಂಬುದನ್ನು ಮರೆಯಬಾರದು. ಅಲ್ಲದೆ ಆಚಾರಸಂಹಿತೆ, ಧರ್ಮಸಂಹಿತೆ—ಇವು ಶಿಷ್ಟ ಜನರಿಗೆ ಉಪಯುಕ್ತವಾದವು.

ಪುರಾಣಕಥೆಗಳಲ್ಲಿ ಅದ್ಭುತವೂ ಅಲೌಕಿಕವೂ ಆದ ಸನ್ನಿವೇಶಗಳಿವೆ ಎಂಬುದು ನಿಜ. ಇದನ್ನು ನಂಬುವುದಕ್ಕಾಗುವುದಿಲ್ಲವೆಂದು ಕೆಲವರು ಆಕ್ಷೇಪಿಸುತ್ತಾರೆ. ನಂಬತಕ್ಕವರು ನಂಬಲಿ, ನಂಬದಿರುವವರಿಗೂ ಈ ಕಥೆಗಳು ಮೌಲಿಕವಾದ ನೀತಿತತ್ತ್ವವನ್ನು ಸಾರುತ್ತವೆ—ಎನ್ನುವುದು ಸತ್ಯವೇ. ನಮ್ಮಲ್ಲಿ ಕ್ರಮಬದ್ಧವಾಗಿ ಪುರಾಣಗಳ ಶಾಸ್ತ್ರೀಯವಾದ ಅಧ್ಯಯನ ನಡೆದಿಲ್ಲ. ವೇದಾಂತಾದಿ ಶಾಸ್ತ್ರಗಳಲ್ಲಿಯೂ ಆಧುನಿಕ ವಿದ್ಯೆ ಗಳಲ್ಲಿಯೂ ಪರಿಣತರಾದ ವಿದ್ವಾಂಸರು ಈ ಕಾರ್ಯವನ್ನು ಶ್ರದ್ಧೆಯಿಂದ ಕೈಗೊಂಡರೆ ಭಾರತೀಯ ವಿದ್ಯೆಗೆ ಒಂದು ಮಹತ್ತರವಾದ ಸೇವೆಯನ್ನು ಸಲ್ಲಿಸಿದಂತಾಗುತ್ತದೆ.

## ಕೃತಜ್ಞತಾ ಸಮರ್ಪಣೆ

ಈ ಪುರಾಣಗಳಲ್ಲಿ ಹಲವಾರು ಪಾಶ್ಚಾತ್ಯ ವಿದ್ವಾಂಸರು ಆಸಕ್ತಿವಹಿ ಸಿರುವುದು ನಮಗೆ ಸಂತೋಷವನ್ನೂ ಹೆಮ್ಮೆಯನ್ನೂ ಉಂಟುಮಾಡುತ್ತದೆ. ಕೆಲವು ಪುರಾಣಗಳನ್ನು ಅವರು ಪರಿಶೋಧಿಸಿ, ಪರಿಷ್ಕರಿಸಿ ಇಂಗ್ಲಿಷ್,

ಫ್ರೆಂಚ್, ಜರ್ಮನ್ ಮುಂತಾದ ಪಾಶ್ಚಾತ್ತ್ಯ ಭಾಷೆಗಳಿಗೆ ಭಾಷಾಂತರಿಸಿ ಪ್ರಕಟಿಸಿದ್ದಾರೆ. ವಿಷ್ಣುಪುರಾಣದ ವಿಷಯದಲ್ಲಿ ಬಹು ದೊಡ್ಡ ಕೆಲಸವನ್ನು ಮಾಡಿದವರು ಶ್ರೀ ಹೆಚ್. ಹೆಚ್. ವಿಲ್‌ಸನ್ ಸಾಹೇಬರು. ಅವರ ಪರಿಶ್ರಮ ಪ್ರಶಂಸನೀಯವಾದದ್ದು. ಹಸ್ತಪ್ರತಿಗಳನ್ನು ದೊರಕಿದಷ್ಟು ಕಲೆಹಾಕಿ ತಾಳೆನೋಡಿ ಸರಿಯೆನಿಸಿದ ಪಾಠವನ್ನು ಸ್ವೀಕರಿಸಿ ಪ್ರಕಟಿಸಿದ್ದಾರೆ. ಈ ಗ್ರಂಥಕ್ಕೆ ಅವರು ಬರೆದ ದೀರ್ಘವಾದ ಮುನ್ನುಡಿ ವಿಲ್ಸನ್ ಸಾಹೇಬರ ಅಪಾರವಾದ ಪಾಂಡಿತ್ಯವನ್ನು ಪ್ರದರ್ಶಿಸುತ್ತದೆ. ವಿಷ್ಣುಪುರಾಣದ ಎಲ್ಲ ಶ್ಲೋಕಗಳಿಗೆ ಇಂಗ್ಲೀಷಿನಲ್ಲಿ ಅರ್ಥವನ್ನು ಬರೆದು, ತುಂಬ ಉಪಯುಕ್ತ ವಾದ ಅಡಿಟಿಪ್ಪಣಿಗಳನ್ನು ಬರೆದಿರುತ್ತಾರೆ. ಈ ಅಡಿಟಿಪ್ಪಣಿಗಳಲ್ಲಿ ಮತ್ಸ್ಯಪುರಾಣ ಮೊದಲಾದ ಇತರ ಪುರಾಣಗಳಲ್ಲಿ ಬಂದಿರುವ ವಿಷಯ ಗಳಿಗೂ ಈ ಪುರಾಣದ ವಿಷಯಗಳಿಗೂ ಇರುವ ಸಾಮ್ಯ-ವೈಷಮ್ಯಗಳನ್ನು ತೋರಿಸಿದ್ದಾರೆ. ಈ ವಿದ್ವಾಂಸರ ಪರಿಶ್ರಮ ಅಸಾಧಾರಣವಾದದ್ದು. ಅವರು ತಳೆದ ನಿಲುವಿನಲ್ಲಿ ಭಿನ್ನಾಭಿಪ್ರಾಯಗಳಿರಬಹುದಾದರೂ ಅವರಿಂದಾದ ಉಪಕಾರ ಎಂದೆಂದಿಗೂ ಸ್ಮರಣೀಯವಾಗಿದೆ.

ನಾನು ಈ ಅನುವಾದವನ್ನು ಬರೆಯುವುದಕ್ಕೆ ಪ್ರೋತ್ಸಾಹಿಸಿದವರು ಬೆಂಗಳೂರು ಶ್ರೀರಾಮಕೃಷ್ಣಾಶ್ರಮದ ಅಧ್ಯಕ್ಷರಾದ ಸ್ವಾಮಿ ಚಿದಾನಂದಜೀ ಅವರು. ನನ್ನ ಅನಾರೋಗ್ಯ ಮತ್ತು ನೇತ್ರದೋಷಗಳಿಂದ ಈ ಅನುವಾದ ಕಾರ್ಯ ನನಗೆ ಸಾಧ್ಯವಿಲ್ಲವೆಂದು ಅವರಿಗೆ ನಿವೇದಿಸಿದೆ. ಆದರೂ ಶ್ರೀರಾಮಕೃಷ್ಣ ಪರಮಹಂಸರ ಕೃಪೆಯಿಂದ ಇದು ಸಾಧ್ಯವಾಗುವುದೆಂದು ಅವರು ಒತ್ತಾಯಿಸಿದ್ದರಿಂದ ಈ ಕಾರ್ಯವನ್ನು ನಾನು ಕೈಗೊಳ್ಳ ಬೇಕಾಯಿತು. ಅಂತೆಯೇ ಇದು ಸಾಧ್ಯವಾದದ್ದು ಶ್ರೀರಾಮಕೃಷ್ಣ ಪರಮಹಂಸರ ಕೃಪೆಯಿಂದಲೇ—ಎಂದು ನಾನು ನಂಬಿದ್ದೇನೆ. ಹೀಗೆ ನನ್ನನ್ನು ಪ್ರೋತ್ಸಾಹಿಸಿದ್ದಲ್ಲದೆ ಈ ಗ್ರಂಥದ ಪ್ರಕಟಣೆಯ ಭಾರವನ್ನು ವಹಿಸಿಕೊಂಡು ನಿರ್ವಹಿಸಿದ ಶ್ರೀ ಚಿದಾನಂದ ಸ್ವಾಮಿಜೀ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ನನ್ನ ನೇತ್ರದೋಷದಿಂದಾಗಿ ಮುದ್ರಣದ ಕರಡನ್ನು ಶೋಧಿಸುವುದು ನನ್ನಿಂದಾಗಲಿಲ್ಲ. ಅಲ್ಲದೆ ಗ್ರಂಥಕ್ಕೆ ಸಂಬಂಧಿಸಿದ ಕೆಲವು ಅಂಶಗಳನ್ನು ಬರೆಯುವುದೂ ಹಸ್ತಪ್ರತಿಯನ್ನು ಮುದ್ರಣಕ್ಕೆ ಸಿದ್ಧಪಡಿಸುವುದೂ ನನಗೆ

ಕಷ್ಟವೆನಿಸಿತು. ಈ ಸಮಯದಲ್ಲಿ ಸ್ವಸಂತೋಷದಿಂದ ಮುಂದೆ ಬಂದು ಉತ್ಸಾಹದಿಂದ ಮೇಲ್ಕಂಡ ಕಾರ್ಯಗಳನ್ನು ನಿರ್ವಹಿಸಿ ನನಗೆ ಮಹೋಪಕಾರವನ್ನು ಮಾಡಿದವರು ನನ್ನ ಮಾನ್ಯಮಿತ್ರರಾದ ವಿದ್ವಾನ್ ಎಸ್. ಎ. ರಾಮಚಂದ್ರ ಭಟ್ಟರು. ಇವರಿಗೆ ನನ್ನ ಅನಂತ ಪ್ರಣಾಮ ಗಳನ್ನರ್ಪಿಸುತ್ತೇನೆ.

ಅಲ್ಲದೆ ಈ ಗ್ರಂಥದ ಅನುವಾದ ಕಾರ್ಯದಲ್ಲಿ ಕೆಲವೆಡೆ ತೊಡಕು ಗಳು ಕಾಣಿಸಿದವು. ಆ ಸಮಯದಲ್ಲಿ ಬೆಂಗಳೂರು ಶ್ರೀಶಂಕರಮಠದಲ್ಲಿ ವೇದಾಂತ ಪ್ರಾಧ್ಯಾಪಕರಾದ ಬ್ರ॥ ಶ್ರೀ ಕೆ. ಕೃಷ್ಣಜೋಯ್ಸರು ಶ್ರೀಧರೀಯ ಮತ್ತು ವಿಷ್ಣುಚಿತ್ತೀಯ ಎಂಬ ವ್ಯಾಖ್ಯಾನದ್ವಯಸಹಿತವಾದ ವಿಷ್ಣುಪುರಾಣ ವನ್ನು ಒದಗಿಸಿಕೊಟ್ಟು ಉಪಕರಿಸಿದ್ದಾರೆ. ಈ ವ್ಯಾಖ್ಯಾನಗಳಲ್ಲಿ ಶ್ರೀಧರ ಸ್ವಾಮಿಗಳ ವ್ಯಾಖ್ಯಾನದಿಂದ ನಾನು ತುಂಬ ಉಪಕೃತನಾಗಿದ್ದೇನೆ. ಆದಕ್ಕಾಗಿ ವಿಖ್ಯಾತ ವಿದ್ವಾಂಸರಾದ ಬ್ರ॥ ಶ್ರೀ ಕೃಷ್ಣಜೋಯ್ಸರಿಗೆ ನಾನು ಕೃತಜ್ಞ ನಾಗಿದ್ದೇನೆ.

ಶ್ರೀಮದ್ವಾಲ್ಮೀಕಿರಾಮಾಯಣದಲ್ಲಿಯೂ ಶ್ರೀಮದ್ ಭಾಗವತದ ದಶಮ ಸ್ಕಂಧದಲ್ಲಿಯೂ ನಾನು ಅನುಸರಿಸಿದ ಅನುವಾದಕ್ರಮವನ್ನು ಇಲ್ಲಿಯೂ ಅನುಸರಿಸಿದ್ದೇನೆ. ಕನ್ನಡ ಅನುವಾದವು ಶ್ಲೋಕಗಳಿಗೆ ಕೇವಲ ಭಾಷಾಂತರವಾಗದೆ ತಾತ್ಪರ್ಯಕಥನವಾಗಿರುತ್ತದೆ. ಕನ್ನಡದ ಶೈಲಿಗೆ ಯಥಾ ಶ್ರುತವಾದ ಭಾಷಾಂತರ ಒಗ್ಗುವುದಿಲ್ಲವೆಂದು ಈ ಕ್ರಮವನ್ನು ಪಾಲಿಸಿದ್ದೇನೆ. ಈ ಗ್ರಂಥದಿಂದ ಭಗವದ್ಭಕ್ತರಿಗೂ, ತತ್ತ್ವಜಿಜ್ಞಾಸುಗಳಿಗೂ ಪ್ರಯೋಜನವಾದೀತೆಂದು ನಂಬಿದ್ದೇನೆ.

ಬೆಂಗಳೂರು
ಅಕ್ಷಯ ಸಂವತ್ಸರದ
ವೈಶಾಖ ಶುದ್ಧ ಪಂಚಮೀ
ತಾ॥ 14-5-1986

ಎನ್. ರಂಗನಾಥಶರ್ಮಾ
ಅನುವಾದಕ

# ವಿಷಯಾನುಕ್ರಮಣಿಕೆ

## ದ್ವಿತೀಯಾಂಶ

## ತೃತೀಯಾಂಶ

ಓಂ

ಶ್ರೀಮನ್ನಾರಾಯಣಾಯ ನಮಃ

# ಶ್ರೀವಿಷ್ಣುಪುರಾಣಮ್

## ಪ್ರಥಮಾಂಶಃ

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್॥**

### ಪ್ರಥಮೋಽಧ್ಯಾಯಃ

*ಶ್ರೀ ಸೂತ ಉವಾಚ:*

**ಪರಾಶರಂ ಮುನಿವರಂ ಕೃತಪೌರ್ವಾಹ್ಣಿಕಕ್ರಿಯಮ್।**
**ಮೈತ್ರೇಯಃ ಪರಿಪಪ್ರಚ್ಛ ಪ್ರಣಿಪತ್ಯಾಭಿವಾದ್ಯ ಚ॥** 1

---

## ಪ್ರಥಮ ಅಂಶ

### ಅಧ್ಯಾಯ 1

### ಉಪೋದ್ಘಾತ

ಮೈತ್ರೇಯರ ಪ್ರಶ್ನೆಗೆ ಪರಾಶರರಿಂದ ಉತ್ತರ: ವಸಿಷ್ಠರ ಆದೇಶದಂತೆ ಪರಾಶರರು ಯಾಗವನ್ನು ನಿಲ್ಲಿಸುವುದು. ಪುಲಸ್ತ್ಯರಿಂದ ಮೈತ್ರೇಯರಿಗೆ ಹಿತಬೋಧನೆ.

ಸೂತರು ಹೇಳಿದರು: ಬೆಳಗಿನ ಸಂಧ್ಯಾದಿಕೃತ್ಯವನ್ನು ಮುಗಿಸಿ ಕುಳಿತಿದ್ದ ಪರಾಶರ ಮುನಿಗಳ ಬಳಿಗೆ ಮೈತ್ರೇಯರು ಬಂದು ನಮಸ್ಕರಿಸಿ ಅಭಿವಾದನೆ ಮಾಡಿ ಹೀಗೆ ಕೇಳಿದರು (1): "ಗುರುಗಳೇ, ನಿಮ್ಮಿಂದ ಸಕಲ

**ತ್ವತ್ತೋ ಹಿ ವೇದಾಧ್ಯಯನಮಧೀತಮಖಿಲಂ ಗುರೋ।**
**ಧರ್ಮಶಾಸ್ತ್ರಾಣಿ ಸರ್ವಾಣಿ ತಥಾಂಗಾನಿ ಯಥಾಕ್ರಮಮ್॥** 2

**ತ್ವತ್ಪ್ರಸಾದಾನ್ಮುನಿಶ್ರೇಷ್ಠ ಮಾಮನ್ಯೇ ನಾಕೃತಶ್ರಮಮ್।**
**ವಕ್ಷ್ಯಂತಿ ಸರ್ವಶಾಸ್ತ್ರೇಷು ಪ್ರಾಯಶೋ ಯೇಽಪಿ ವಿದ್ವಿಷಃ॥** 3

**ಸೋಽಹಮಿಚ್ಛಾಮಿ ಧರ್ಮಜ್ಞ ಶ್ರೋತುಂ ತ್ವತ್ತೋ ಯಥಾ ಜಗತ್।**
**ಬಭೂವ ಭೂಯಶ್ಚ ಯಥಾ ಮಹಾಭಾಗ ಭವಿಷ್ಯತಿ॥** 4

**ಯನ್ಮಯಂ ಚ ಜಗದ್ ಬ್ರಹ್ಮನ್ಯತಶ್ಚೈತಚ್ಚರಾಚರಮ್।**
**ಲೀನಮಾಸೀದ್ಯಥಾ ಯತ್ರ ಲಯಮೇಷ್ಯತಿ ಯತ್ರ ಚ॥** 5

**ಯತ್ಪ್ರಮಾಣಾನಿ ಭೂತಾನಿ ದೇವಾದೀನಾಂ ಚ ಸಂಭವಮ್।**
**ಸಮುದ್ರಪರ್ವತಾನಾಂ ಚ ಸಂಸ್ಥಾನಂ ಚ ಯಥಾ ಭುವಃ॥** 6

---

ವೇದಾಧ್ಯಯನವನ್ನು ಮಾಡಿ ಸಮಸ್ತ ಧರ್ಮಶಾಸ್ತ್ರಗಳನ್ನೂ ಹಾಗೆಯೇ ವೇದಾಂಗಗಳನ್ನೂ ಕ್ರಮವಾಗಿ ಕಲಿತಿದ್ದೇನೆ. ನಾನು ಸಕಲ ಶಾಸ್ತ್ರಗಳಲ್ಲಿಯೂ ಪರಿಣತಿಯನ್ನು ಪಡೆದಿಲ್ಲವೆಂದು, ಮಹರ್ಷಿಗಳೆ, ನಿಮ್ಮ ಅನುಗ್ರಹದಿಂದ ಇನ್ನು ಮೇಲೆ ಯಾರೂ ನನ್ನನ್ನು ಹೇಳಲಾರರು. ವೈರಿಗಳೂ ಹೇಳಲಿಕ್ಕಿಲ್ಲ (2-3). ಹೀಗೆ ನಿಮ್ಮ ಶಿಷ್ಯನಾದ ನಾನು, ಓ ಧರ್ಮಜ್ಞರಾದ ಮಹಾತ್ಮರೆ, ಈ ಜಗತ್ತು ಹೇಗೆ ಹುಟ್ಟಿತು? ಇನ್ನು ಮುಂದೆ ಏನಾದೀತು?—ಎಂದು ನಿಮ್ಮಿಂದ ತಿಳಿಯಲು ಬಯಸುತ್ತೇನೆ (4). ಹೇ ಬ್ರಹ್ಮರ್ಷಿಗಳೆ, ಈ ಜಗತ್ತಿಗೆ ಉಪಾದಾನಕಾರಣ ಯಾವುದು? ಚರಾಚರಾತ್ಮಕವಾದ ಇದು ಯಾರಿಂದ ಉದ್ಭವಿಸಿತು? (ಹುಟ್ಟುವುದಕ್ಕೆ ಮೊದಲು) ಹೇಗೆ ಎಲ್ಲಿ ಅಡಗಿತ್ತು? ಮುಂದೆ ಎಲ್ಲಿ ಲಯ ಹೊಂದುತ್ತದೆ? (5). ಆಕಾಶಾದಿ ಭೂತಗಳ ಪರಿಮಾಣವೆಷ್ಟು?—ಎಂಬುದನ್ನು ತಿಳಿಯಲು ಇಚ್ಛಿಸುತ್ತೇನೆ. ಹಾಗೆಯೇ ದೇವಾದಿಗಳ ಉತ್ಪತ್ತಿ, ಸಮುದ್ರ ಪರ್ವತಗಳ ಸಂಭವ, ಭೂಮಿಯ ಆಧಾರ, ಸೂರ್ಯಾದಿ ಗ್ರಹನಕ್ಷತ್ರಗಳ

**ಸೂರ್ಯಾದೀನಾಂ ಚ ಸಂಸ್ಥಾನಂ ಪ್ರಮಾಣಂ ಮುನಿಸತ್ತಮ।**
**ದೇವಾದೀನಾಂ ತಥಾ ವಂಶಾನ್ಮನೂನ್ಮನ್ವಂತರಾಣಿ ಚ॥ 7**

**ಕಲ್ಪಾನ್ ಕಲ್ಪವಿಭಾಗಾಂಶ್ಚ ಚಾತುರ್ಯುಗವಿಕಲ್ಪಿತಾನ್।**
**ಕಲ್ಪಾಂತಸ್ಯ ಸ್ವರೂಪಂ ಚ ಯುಗಧರ್ಮಾಂಶ್ಚ ಕೃತ್ಸ್ನಶಃ॥ 8**

**ದೇವರ್ಷಿಪಾರ್ಥಿವಾನಾಂ ಚ ಚರಿತಂ ಯನ್ಮಹಾಮುನೇ।**
**ವೇದಶಾಖಾಪ್ರಣಯನಂ ಯಥಾವದ್ವ್ಯಾಸಕರ್ತೃಕಮ್॥ 9**

**ಧರ್ಮಾಂಶ್ಚ ಬ್ರಾಹ್ಮಣಾದೀನಾಂ ತಥಾ ಚಾಶ್ರಮವಾಸಿನಾಮ್।**
**ಶ್ರೋತುಮಿಚ್ಛಾಮ್ಯಹಂ ಸರ್ವಂ ತ್ವತ್ತೋ ವಾಸಿಷ್ಠನಂದನ॥ 10**

**ಬ್ರಹ್ಮನ್ಪ್ರಸಾದಪ್ರವಣಂ ಕುರುಷ್ವ ಮಯಿ ಮಾನಸಮ್।**
**ಯೇನಾಹಮೇತಜ್ಜಾನೀಯಾಂ ತ್ವತ್ಪ್ರಸಾದಾನ್ಮಹಾಮುನೇ॥ 11**

---

ಆಧಾರ ಮತ್ತು ಪರಿಮಾಣ, ದೇವಾದಿಗಳ ವಂಶ, ಮನುಗಳು, ಮನ್ವಂತರಗಳು (6-7); ಹಾಗೆಯೇ ಚತುರ್ಯುಗಗಳಿಂದ ವಿಶಿಷ್ಟವಾದ ಕಲ್ಪಗಳು, ಕಲ್ಪಭೇದಗಳು, ಪ್ರಳಯದ ಸ್ವರೂಪ, ಸಮಸ್ತ ಯುಗಧರ್ಮ ಗಳು, ದೇವರ್ಷಿಗಳ ಮತ್ತು ರಾಜರ ಚರಿತ್ರೆ, ವ್ಯಾಸಮುನಿಗಳು ಮಾಡಿದ ವೇದ ಶಾಖೆಗಳ ವಿಭಾಗ (8-9); ಬ್ರಾಹ್ಮಣಾದಿ ವರ್ಣಗಳ ಮತ್ತು ಬ್ರಹ್ಮಚರ್ಯಾದ್ಯಾಶ್ರಮಗಳಲ್ಲಿರತಕ್ಕವರ ಧರ್ಮಗಳು—ಇವೆಲ್ಲವನ್ನೂ, ವಾಸಿಷ್ಠರಾದ ಶಕ್ತಿ ಮುನಿಗಳ ಪುತ್ರರೆ, ನಿಮ್ಮಿಂದ ಕೇಳಲು ಬಯಸುತ್ತೇನೆ (10). ಹೇ ಬ್ರಹ್ಮನ್—ಮಹಾಮುನಿಗಳೆ, ನನ್ನ ವಿಷಯದಲ್ಲಿ ನಿಮ್ಮ ಮನಸ್ಸಿಗೆ ಅನುಗ್ರಹೇಚ್ಛೆಯುಂಟಾಗಲಿ. ನಿಮ್ಮ ಪ್ರಸಾದದಿಂದ ಇದೆಲ್ಲವನ್ನೂ ನಾನು ತಿಳಿಯುವಂತಾಗಲಿ" ಎಂದರು (11). ಆಗ ಪರಾಶರ ಮುನಿಗಳು ಹೇಳಿದರು: ಒಳ್ಳೆಯದು; ಮೈತ್ರೇಯ, ನನಗೀಗ ಒಂದು ಹಿಂದಿನ ಸಂಗತಿ ನೆನಪಿಗೆ ಬಂದಿತು. ನನ್ನ ತಂದೆಯ ತಂದೆಯವರಾದ ಭಗವಾನ್ ವಸಿಷ್ಠರು ಹೇಳಿದ ಮಾತಿದು: ಹಿಂದೆ ವಿಶ್ವಾಮಿತ್ರರಿಂದ ಪ್ರೇರಿತನಾದ ಒಬ್ಬ

*ಶ್ರೀ ಪರಾಶರ ಉವಾಚ:*

**ಸಾಧು ಮೈತ್ರೇಯ ಧರ್ಮಜ್ಞ ಸ್ಮಾರಿತೋಽಸ್ಮಿ ಪುರಾತನಮ್।**
**ಪಿತುಃ ಪಿತಾ ಮೇ ಭಗವಾನ್ ವಸಿಷ್ಠೋ ಯದುವಾಚ ಹ॥ 12**

**ವಿಶ್ವಾಮಿತ್ರಪ್ರಯುಕ್ತೇನ ರಕ್ಷಸಾ ಭಕ್ಷಿತಃ ಪುರಾ।**
**ಶ್ರುತಸ್ತಾತಸ್ತತಃ ಕ್ರೋಧೋ ಮೈತ್ರೇಯಾಭೂನ್ಮಮಾತುಲಃ॥ 13**

**ತತೋಽಹಂ ರಕ್ಷಸಾಂ ಸತ್ರಂ ವಿನಾಶಾಯ ಸಮಾರಭಮ್।**
**ಭಸ್ಮೀಭೂತಾಶ್ಚ ಶತಶಸ್ತಸ್ಮಿನ್ ಸತ್ರೇ ನಿಶಾಚರಾಃ॥ 14**

**ತತಃ ಸಂಕ್ಷೀಯಮಾಣೇಷು ತೇಷು ರಕ್ಷಸ್ಸ್ವಶೇಷತಃ।**
**ಮಾಮುವಾಚ ಮಹಾಭಾಗೋ ವಸಿಷ್ಠೋ ಮತ್ಪಿತಾಮಹಃ॥ 15**

**ಅಲಮತ್ಯಂತಕೋಪೇನ ತಾತ ಮನ್ಯುಮಿಮಂ ಜಹಿ।**
**ರಾಕ್ಷಸಾ ನಾಪರಾಧ್ಯಂತಿ ಪಿತುಸ್ತೇ ವಿಹಿತಂ ಹಿ ತತ್॥ 16**

**ಮೂಢಾನಾಮೇವ ಭವತಿ ಕ್ರೋಧೋ ಜ್ಞಾನವತಾಂ ಕುತಃ।**
**ಹನ್ಯತೇ ತಾತ ಕಃ ಕೇನ ಯತಃ ಸ್ವಕೃತಭುಕ್ಪುಮಾನ್॥ 17**

---

ರಾಕ್ಷಸನು ನನ್ನ ತಂದೆಯನ್ನು ಭಕ್ಷಿಸಿಬಿಟ್ಟನು. ಅದನ್ನು ಕೇಳಿ, ಮೈತ್ರೇಯ, ನನಗೆ ಬಹಳ ಕ್ರೋಧ ಉಂಟಾಯಿತು (12). ಆಗ ನಾನು ರಾಕ್ಷಸರನ್ನು ನಾಶಗೊಳಿಸಬೇಕೆಂದು ಒಂದು ಯಾಗವನ್ನಾರಂಭಿಸಿದೆ. ಆ ಯಾಗದಲ್ಲಿ ನೂರಾರು ರಾಕ್ಷಸರು ಭಸ್ಮವಾಗುತ್ತಿದ್ದರು. ಹೀಗೆ ಅವರೆಲ್ಲರೂ ನಾಶವಾಗುತ್ತಿರಲಾಗಿ, ಮಹಾತ್ಮರೂ ನನ್ನ ಪಿತಾಮಹರೂ ಆದ ವಸಿಷ್ಠರು ಆಗಮಿಸಿ ನನ್ನನ್ನು ಕುರಿತು ಹೀಗೆಂದರು (13-15): "ಮಗು, ಇಷ್ಟು ಕೋಪ ಬೇಡ. ಕೋಪವನ್ನು ತ್ಯಜಿಸು. ಇದು ರಾಕ್ಷಸರ ತಪ್ಪಲ್ಲ. ನಿನ್ನ ತಂದೆಯ ವಿಧಿಲಿಖಿತ ಹಾಗಿತ್ತು. ಕೋಪ ಬರುವುದು ಮೂಢರಿಗೇ ಸರಿ. ಜ್ಞಾನಿಗಳಿಗೆ ಕೋಪವೆಲ್ಲಿ? ವತ್ಸ, ಯಾರನ್ನು ಯಾವನು ಕೊಂದಾನು? ಏಕೆಂದರೆ, ಮನುಷ್ಯನು ತಾನು ಮಾಡಿದ್ದನ್ನು ಅನುಭವಿಸುತ್ತಾನೆ (16-17). ಮಗು, ಮಾನವರು

**ಸಂಚಿತಸ್ಯಾಪಿ ಮಹತಾ ವತ್ಸ ಕ್ಲೇಶೇನ ಮಾನವೈಃ।**
**ಯಶಸಸ್ತಪಸಶ್ಚೈವ ಕ್ರೋಧೋ ನಾಶಕರಃ ಪರಃ॥** 18

**ಸ್ವರ್ಗಾಪವರ್ಗವ್ಯಾಸೇಧಕಾರಣಂ ಪರಮರ್ಷಯಃ।**
**ವರ್ಜಯಂತಿ ಸದಾ ಕ್ರೋಧಂ ತಾತ ಮಾ ತದ್ವಶೋ ಭವ॥** 19

**ಅಲಂ ನಿಶಾಚರೈರ್ದಗ್ಧೈರ್ದೀನೈರನಪಕಾರಿಭಿಃ।**
**ಸತ್ರಂ ತೇ ವಿರಮತ್ವೇತತ್ ಕ್ಷಮಾಸಾರಾ ಹಿ ಸಾಧವಃ॥** 20

**ಏವಂ ತಾತೇನ ತೇನಾಹಮನುನೀತೋ ಮಹಾತ್ಮನಾ।**
**ಉಪಸಂಹೃತವಾನ್ ಸತ್ರಂ ಸದ್ಯಸ್ತದ್ವಾಕ್ಯಗೌರವಾತ್॥** 21

**ತತಃ ಪ್ರೀತಃ ಸ ಭಗವಾನ್ ವಸಿಷ್ಠೋ ಮುನಿಸತ್ತಮಃ।**
**ಸಂಪ್ರಾಪ್ತಶ್ಚ ತದಾ ತತ್ರ ಪುಲಸ್ತ್ಯೋ ಬ್ರಹ್ಮಣಃ ಸುತಃ॥** 22

---

ಬಹು ಕ್ಲೇಶದಿಂದ ಯಶಸ್ಸನ್ನೂ ತಪಃಶಕ್ತಿಯನ್ನೂ ಸಂಪಾದಿಸಬೇಕಾಗುತ್ತದೆ. ಅದನ್ನು ನಾಶಪಡಿಸುವುದರಲ್ಲಿ ಪ್ರಬಲವಾದದ್ದು ಕ್ರೋಧ (18). ಇದು ಸ್ವರ್ಗ, ಮೋಕ್ಷಗಳೆರಡನ್ನೂ ತಡೆಗಟ್ಟಲು ಕಾರಣವಾಗಿದೆ. ಆದ್ದರಿಂದಲೇ ಮಹರ್ಷಿಗಳು ಕ್ರೋಧವನ್ನು ವರ್ಜಿಸುತ್ತಾರೆ. ವತ್ಸ, ನೀನು ಇದಕ್ಕೆ ವಶನಾಗಬೇಡ (19). ನಿಶಾಚರರನ್ನು ಭಸ್ಮಮಾಡುವುದು ಸಾಕು. ಅಲ್ಲದೆ ದೀನರಾದ ಇವರು ಅಪರಾಧ ಮಾಡಿದವರಲ್ಲ. ಈ ಯಾಗವು ನಿಲ್ಲಲಿ. ತಾಳ್ಮೆಯೇ ಸಜ್ಜನರಿಗೆ ಬಲ" ಎಂದರು (20). ಹೀಗೆ ಮಹಾತ್ಮರಾದ ನನ್ನ ಪಿತಾಮಹರು ನನಗೆ ಹಿತೋಪದೇಶವನ್ನು ಮಾಡಲು, ಅವರ ಮಾತಿಗೆ ಗೌರವವನ್ನಿತ್ತು, ನಾನು ಒಡನೆಯೇ ಯಾಗವನ್ನು ನಿಲ್ಲಿಸಿದೆನು. ಮಹಾತ್ಮರಾದ ವಸಿಷ್ಠರಿಗೆ ಅದರಿಂದ ಬಹಳ ಸಂತೋಷವಾಯಿತು. ಅಷ್ಟು ಹೊತ್ತಿಗೆ ಸರಿಯಾಗಿ ಬ್ರಹ್ಮಪುತ್ರರಾದ ಪುಲಸ್ತ್ಯರು ಅಲ್ಲಿಗೆ ಆಗಮಿಸಿದರು (21-22). ನನ್ನ ಪಿತಾಮಹ ವಸಿಷ್ಠರು ಅವರಿಗೆ ಅರ್ಘ್ಯವನ್ನಿತ್ತು ಸತ್ಕರಿಸಿದರು. ಅನಂತರ ಪುಲಹರಿಗೆ ಜ್ಯೇಷ್ಠರೂ ಮಹಾತ್ಮರೂ ಆದ ಪುಲಸ್ತ್ಯರು

**ಪಿತಾಮಹೇನ ದತ್ತಾರ್ಘ್ಯಃ ಕೃತಾಸನಪರಿಗ್ರಹಃ।**
**ಮಾಮುವಾಚ ಮಹಾಭಾಗೋ ಮೈತ್ರೇಯ ಪುಲಹಾಗ್ರಜಃ॥ 23**

*ಪುಲಸ್ತ್ಯ ಉವಾಚ:*

**ವೈರೇ ಮಹತಿ ಯದ್ವಾಕ್ಯಾದ್ ಗುರೋರದ್ಯಾಶ್ರಿತಾ ಕ್ಷಮಾ।**
**ತ್ವಯಾ ತಸ್ಮಾತ್ಸಮಸ್ತಾನಿ ಭವಾಂಚ್ಛಾಸ್ತ್ರಾಣಿ ವೇತ್ಸ್ಯತಿ॥ 24**

**ಸಂತತೇರ್ನಮಮೋಚ್ಛೇದಃ ಕ್ರುದ್ಧೇನಾಪಿ ಯತಃ ಕೃತಃ।**
**ತ್ವಯಾ ತಸ್ಮಾನ್ಮಹಾಭಾಗ ದದಾಮ್ಯನ್ಯಂ ಮಹಾವರಮ್॥ 25**

**ಪುರಾಣಸಂಹಿತಾಕರ್ತಾ ಭವಾನ್ ವತ್ಸ ಭವಿಷ್ಯತಿ।**
**ದೇವತಾಪಾರಮಾರ್ಥ್ಯಂ ಚ ಯಥಾವದ್ವೇತ್ಸ್ಯತೇ ಭವಾನ್॥ 26**

**ಪ್ರವೃತ್ತೇ ಚ ನಿವೃತ್ತೇ ಚ ಕರ್ಮಣ್ಯಸ್ತಮಲಾ ಮತಿಃ।**
**ಮತ್ಪ್ರಸಾದಾದಸಂದಿಗ್ಧಾ ತವ ವತ್ಸ ಭವಿಷ್ಯತಿ॥ 27**

**ತತಶ್ಚ ಪ್ರಾಹ ಭಗವಾನ್ವಸಿಷ್ಠೋ ಮೇ ಪಿತಾಮಹಃ।**
**ಪುಲಸ್ತ್ಯೇನ ಯದುಕ್ತಂ ತೇ ಸರ್ವಮೇತದ್ಭವಿಷ್ಯತಿ॥ 28**

---

ಆಸನದಲ್ಲಿ ಕುಳಿತುಕೊಂಡು, ಮೈತ್ರೇಯನನ್ನು ಉದ್ದೇಶಿಸಿ ಹೀಗೆಂದರು (23): "ಪರಾಶರ, ನಿನಗೆ (ರಾಕ್ಷಸರಲ್ಲಿ) ಮಹತ್ತರವಾದ ಕ್ರೋಧವಿದ್ದರೂ ಸಹ ಹಿರಿಯರಾದ ವಸಿಷ್ಠರ ಮಾತಿನಿಂದ ತಾಳ್ಮೆಯನ್ನೀಗ ತಂದುಕೊಂಡೆ ಯಲ್ಲ; ಆದ್ದರಿಂದ ಸಮಸ್ತ ಶಾಸ್ತ್ರಗಳ ತತ್ತ್ವವನ್ನೂ ನೀನು ತಿಳಿದವ ನಾಗುವೆ (24). ನೀನು ಕ್ರುದ್ಧನಾದರೂ ನನ್ನ ಸಂತತಿಯಾದ ರಾಕ್ಷಸರ ಮೂಲೋಚ್ಛೇದವನ್ನು ಮಾಡಲಿಲ್ಲ. ಆದ್ದರಿಂದ, ಮಹಾಭಾಗ, ನಿನಗೆ ಇನ್ನೊಂದು ದೊಡ್ಡ ವರವನ್ನು ಕೊಡುವೆನು. ನೀನು ಪುರಾಣಸಂಹಿತೆಯ ಕರ್ತನಾಗುವೆ. ದೇವತೆಗಳ ಯಥಾರ್ಥಸ್ವರೂಪವು ಸರಿಯಾಗಿ ನಿನಗೆ ತಿಳಿಯುವುದು (25-26). ವತ್ಸ, ನನ್ನ ಅನುಗ್ರಹದಿಂದ ನಿನಗೆ ಪ್ರವೃತ್ತಿ ನಿವೃತ್ತಿ ಮಾರ್ಗಗಳ ಕರ್ತವ್ಯದಲ್ಲಿ ಪರಿಶುದ್ಧವಾದ ತಿಳಿವಳಿಕೆ ಹುಟ್ಟು ವುದು" (27). ಆಗ ನನ್ನ ಪಿತಾಮಹರಾದ ಭಗವಾನ್ ವಸಿಷ್ಠರು

**ಇತಿ ಪೂರ್ವಂ ವಸಿಷ್ಠೇನ ಪುಲಸ್ತ್ಯೇನ ಚ ಧೀಮತಾ।**
**ಯದುಕ್ತಂ ತತ್ಸ್ಮೃತಿಂ ಯಾತಿ ತ್ವತ್ಪ್ರಶ್ನಾದಖಿಲಂ ಮಮ॥** 29

**ಸೋಽಹಂ ವದಾಮ್ಯಶೇಷಂ ತೇ ಮೈತ್ರೇಯ ಪರಿಪೃಚ್ಛತೇ।**
**ಪುರಾಣಸಂಹಿತಾಂ ಸಮ್ಯಕ್ ತಾಂ ನಿಬೋಧ ಯಥಾತಥಮ್॥**

**ವಿಷ್ಣೋಃ ಸಕಾಶಾದುದ್ಭೂತಂ ಜಗತ್ತತ್ರೈವ ಚ ಸ್ಥಿತಮ್।**
**ಸ್ಥಿತಿಸಂಯಮಕರ್ತಾಸೌ ಜಗತೋಽಸ್ಯ ಜಗಚ್ಚ ಸಃ॥** 31

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಪ್ರಥಮೋಽಧ್ಯಾಯಃ

---

"ಪರಾಶರ, ಪುಲಸ್ತ್ಯರು ಹೇಳಿದುದೆಲ್ಲವೂ ನಿನಗೆ ಸಿದ್ಧಿಸುವುದು" ಎಂದರು. ಹೀಗೆ ಜ್ಞಾನಿಗಳಾದ ವಸಿಷ್ಠರೂ ಪುಲಸ್ತ್ಯರೂ ಹಿಂದೆ ಏನು ಹೇಳಿದ್ದರೋ ಅದೆಲ್ಲವೂ ನಿನ್ನ ಪ್ರಶ್ನೆಯಿಂದೀಗ ಸ್ಮರಣೆಗೆ ಬರುತ್ತಿದೆ (28-29). ಮೈತ್ರೇಯ, ಆದ್ದರಿಂದ ನಾನು ಈಗ ಪ್ರಶ್ನೆ ಮಾಡುತ್ತಿರುವ ನಿನಗೆ ಆ ಪುರಾಣಸಂಹಿತೆಯನ್ನು ಸರಿಯಾಗಿ ವಿವರಿಸುವೆನು. ಗಮನವಿಟ್ಟು ತಿಳಿದುಕೊ. ಈ ಜಗತ್ತು ವಿಷ್ಣುವಿನಿಂದ ಹುಟ್ಟಿದೆ. ಅವನಲ್ಲಿಯೇ ನಿಂತಿದೆ. ವಿಷ್ಣುವೇ ಈ ಜಗತ್ತಿನ ಸ್ಥಿತಿಲಯಗಳಿಗೆ ಕರ್ತೃ. ಆತನೇ ಈ ಜಗತ್ತು (30-31).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಒಂದನೆಯ ಅಧ್ಯಾಯ ಮುಗಿಯಿತು.



## ದ್ವಿತೀಯೋऽಧ್ಯಾಯಃ

*ಪರಾಶರ ಉವಾಚ:*

ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ।
ಸದೈಕರೂಪರೂಪಾಯ ವಿಷ್ಣವೇ ಸರ್ವಜಿಷ್ಣವೇ॥ 1

ನಮೋ ಹಿರಣ್ಯಗರ್ಭಾಯ ಹರಯೇ ಶಂಕರಾಯ ಚ।
ವಾಸುದೇವಾಯ ತಾರಾಯ ಸರ್ಗಸ್ಥಿತ್ಯಂತಕಾರಿಣೇ॥ 2

ಏಕಾನೇಕಸ್ವರೂಪಾಯ ಸ್ಥೂಲಸೂಕ್ಷ್ಮಾತ್ಮನೇ ನಮಃ।
ಅವ್ಯಕ್ತವ್ಯಕ್ತರೂಪಾಯ ವಿಷ್ಣವೇ ಮುಕ್ತಿಹೇತವೇ॥ 3

ಸರ್ಗಸ್ಥಿತಿವಿನಾಶಾನಾಂ ಜಗತೋ ಯೋ ಜಗನ್ಮಯಃ।
ಮೂಲಭೂತೋ ನಮಸ್ತಸ್ಮೈ ವಿಷ್ಣವೇ ಪರಮಾತ್ಮನೇ॥ 4

---

## ಅಧ್ಯಾಯ 2

ಇಪ್ಪತ್ತುನಾಲ್ಕು ತತ್ತ್ವಗಳ ವಿಚಾರ. ಜಗತ್ತಿನ ಉತ್ಪತ್ತಿಕ್ರಮ. ವಿಷ್ಣುವಿನ ಮಹಿಮೆ.

ವಿಕಾರರಹಿತನೂ ಶುದ್ಧನೂ ಅವಿನಾಶಿಯೂ ಪರಮಾತ್ಮನೂ ಸರ್ವದಾ ಏಕರೂಪನೂ ಸರ್ವವಿಜಯಿಯೂ ಆದ ವಿಷ್ಣುವಿಗೆ ನಮಸ್ಕಾರ. ಹಿರಣ್ಯಗರ್ಭನೂ (ಬ್ರಹ್ಮ) ಹರಿಯೂ ಶಂಕರನೂ ಭಕ್ತತಾರಕನೂ ಸೃಷ್ಟಿ ಸ್ಥಿತಿಲಯಗಳಿಗೆ ಕರ್ತನೂ ಆದ ವಾಸುದೇವನಿಗೆ ನಮಸ್ಕಾರ (1-2). ಏಕನಾಗಿದ್ದರೂ ಅನೇಕರೂಪನಾಗಿ, ಸೂಕ್ಷ್ಮನಾಗಿದ್ದರೂ ಸ್ಥೂಲರೂಪನಾಗಿ, ಅವ್ಯಕ್ತನಾಗಿದ್ದರೂ ವ್ಯಕ್ತಸ್ವರೂಪನಾಗಿ ತೋರುತ್ತಿರುವ ಮತ್ತು ಮುಕ್ತಿಗೆ ಕಾರಣನಾದ ವಿಷ್ಣುವಿಗೆ ನಮಸ್ಕಾರ (3). ಜಗದ್ರೂಪನಾಗಿ ಕಾಣುವ ಯಾವಾತನು ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಮೂಲಕಾರಣನಾಗಿರುವನೋ ಅಂತಹ ಪರಮಾತ್ಮನಾದ ವಿಷ್ಣುವಿಗೆ ನಮಸ್ಕಾರ (4).

**ಆಧಾರಭೂತಂ ವಿಶ್ವಸ್ಯಾಪ್ಯಣೀಯಾಂಸಮಣೀಯಸಾಮ್ ।**
**ಪ್ರಣಮ್ಯ ಸರ್ವಭೂತಸ್ಥಮಚ್ಯುತಂ ಪುರುಷೋತ್ತಮಮ್ ॥** 5

**ಜ್ಞಾನಸ್ವರೂಪಮತ್ಯಂತನಿರ್ಮಲಂ ಪರಮಾರ್ಥತಃ ।**
**ತಮೇವಾರ್ಥಸ್ವರೂಪೇಣ ಭ್ರಾಂತಿದರ್ಶನತಃ ಸ್ಥಿತಮ್ ॥** 6

**ವಿಷ್ಣುಂ ಗ್ರಸಿಷ್ಣುಂ ವಿಶ್ವಸ್ಯ ಸ್ಥಿತೌ ಸರ್ಗೇ ತಥಾ ಪ್ರಭುಮ್ ।**
**ಪ್ರಣಮ್ಯ ಜಗತಾಮೀಶಮಜಮಕ್ಷಯಮವ್ಯಯಮ್ ॥** 7

**ಕಥಯಾಮಿ ಯಥಾಪೂರ್ವಂ ದಕ್ಷಾದ್ಯೈರ್ಮುನಿಸತ್ತಮೈಃ ।**
**ಪೃಷ್ಟಃ ಪ್ರೋವಾಚ ಭಗವಾನಬ್ಜಯೋನಿಃ ಪಿತಾಮಹಃ ॥** 8

**ತೈಶ್ಚೋಕ್ತಂ ಪುರುಕುತ್ಸಾಯ ಭೂಭುಜೇ ನರ್ಮದಾತಟೇ ।**
**ಸಾರಸ್ವತಾಯ ತೇನಾಪಿ ಮಹ್ಯಂ ಸಾರಸ್ವತೇನ ಚ ॥** 9

---

ವಿಶ್ವಕ್ಕೆ ಆಧಾರನಾಗಿ ಅಣುಗಳಿಗಿಂತ ಅಣುವಾಗಿ ಸರ್ವಭೂತಗಳಲ್ಲಿಯೂ ನೆಲೆಸಿರುವ ಪುರುಷೋತ್ತಮನಾದ ವಿಷ್ಣುವಿಗೆ ನಮಸ್ಕರಿಸುತ್ತೇನೆ (5). ಪರಮಾರ್ಥದಲ್ಲಿ ಅತ್ಯಂತ ಪರಿಶುದ್ಧವಾದ ಜ್ಞಾನಸ್ವರೂಪನಾಗಿದ್ದರೂ ಯಾವಾತನು ಅಜ್ಞಾನವಶದಿಂದ ನಾನಾಪದಾರ್ಥರೂಪನಾಗಿ ಕಾಣುತ್ತಿದ್ದಾನೋ, (ಪ್ರಳಯ ಕಾಲದಲ್ಲಿ) ವಿಶ್ವವನ್ನು ನುಂಗತಕ್ಕವನಾಗಿ, ಸೃಷ್ಟಿ ಸ್ಥಿತಿಗಳಿಗೆ ಸ್ವಾಮಿಯಾಗಿ, ಜಗದೀಶ್ವರನೂ ಅಜನೂ ಅಕ್ಷಯನೂ ಅವ್ಯಯನೂ ಆಗಿರುವ ಆ ವಿಷ್ಣುವನ್ನು ವಂದಿಸುತ್ತೇನೆ (6-7). ಹೀಗೆ ವಿಷ್ಣುವನ್ನು ನಮಸ್ಕರಿಸಿ, ಹಿಂದೆ ದಕ್ಷಾದಿಮುನಿಸತ್ತಮರು ಕೇಳಿದಾಗ ಲೋಕಪಿತಾಮಹನಾದ ಭಗವಾನ್ ಬ್ರಹ್ಮದೇವನು ಏನು ಹೇಳಿದನೋ ಅದನ್ನು ಹೇಳುತ್ತೇನೆ. ಆ ವಿಷಯವನ್ನು ದಕ್ಷಾದಿಮುನಿಗಳು ಪುರುಕುತ್ಸನೆಂಬ ರಾಜನಿಗೆ ನರ್ಮದಾ ತೀರದಲ್ಲಿ ಹೇಳಿದರು. ಪುರುಕುತ್ಸನು ಅದನ್ನು ಸಾರಸ್ವತನಿಗೂ ಸಾರಸ್ವತನು ನನಗೂ ಹೇಳಿದರು* (8-9). ನಮ್ಮ ದೇಹದಲ್ಲಿ ನೆಲೆಸಿರುವ ಪರಮಶ್ರೇಷ್ಠನಾದ ಪರಮಾತ್ಮನು ಪರಗಳಾದ

---

* ಇದರ ಹೆಚ್ಚಿನ ವಿವರಣೆ ಆರನೆಯ ಅಂಶದ ಎಂಟನೆಯ ಅಧ್ಯಾಯದಲ್ಲಿ ಬಂದಿದೆ (ಶ್ಲೋ. 42-50).

ಪರಃ ಪರಾಣಾಂ ಪರಮಃ ಪರಮಾತ್ಮಾತ್ಮಸಂಸ್ಥಿತಃ।
ರೂಪವರ್ಣಾದಿನಿರ್ದೇಶವಿಶೇಷಣವಿವರ್ಜಿತಃ॥ 10

ಅಪಕ್ಷಯವಿನಾಶಾಭ್ಯಾಂ ಪರಿಣಾಮರ್ಧಿಜನ್ಮಭಿಃ।
ವರ್ಜಿತಃ ಶಕ್ಯತೇ ವಕ್ತುಂ ಯಃ ಸದಾಸ್ತೀತಿ ಕೇವಲಮ್॥ 11

ಸರ್ವತ್ರಾಸೌ ಸಮಸ್ತಂ ಚ ವಸತ್ಯತ್ರೇತಿ ವೈ ಯತಃ।
ತತಃ ಸ ವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೇ॥ 12

ತದ್ ಬ್ರಹ್ಮ ಪರಮಂ ನಿತ್ಯಮಜಮಕ್ಷಯಮವ್ಯಯಮ್।
ಏಕಸ್ವರೂಪಂ ತು ಸದಾ ಹೇಯಾಭಾವಾಚ್ಚ ನಿರ್ಮಲಮ್॥ 13

ತದೇವ ಸರ್ವಮೇವೈತದ್ ವ್ಯಕ್ತಾವ್ಯಕ್ತಸ್ವರೂಪವತ್।
ತಥಾ ಪುರುಷರೂಪೇಣ ಕಾಲರೂಪೇಣ ಚ ಸ್ಥಿತಮ್॥ 14

---

ಇಂದ್ರಿಯಾದಿಗಳಿಗೂ ಅಗೋಚರನಾಗಿ ಪರನೆನಿಸಿದ್ದಾನೆ. ಆತನಿಗೆ ರೂಪ ವರ್ಣಾದಿಯಾದ ವಿಶೇಷಗಳೂ ಇಲ್ಲ. ಅವನಿಗೆ ಕ್ಷಯವಿನಾಶಗಳಿಲ್ಲ. ಪರಿಣಾಮ ವೃದ್ಧಿಗಳಿಲ್ಲ. ಜನ್ಮವಿಲ್ಲ. ಇಂತಹವನನ್ನು ಹೇಗೆ ಗುರುತಿಸಿ ಹೇಳಲಾದೀತು? ಯಾವಾಗಲೂ 'ಅಸ್ತಿ-ಸತ್' ಎಂದು ಮಾತ್ರ ಹೇಳ ಲಾದೀತು* (10-11). ಅವನು ಎಲ್ಲೆಲ್ಲಿಯೂ ಇದ್ದು ಎಲ್ಲವೂ ಆಗಿರುವುದ ರಿಂದ 'ಇಲ್ಲಿ ಇದ್ದಾನೆ—ವಸತಿ' ಎಂದು ಹೇಳಲು ಬರುತ್ತದೆ. ಆದ್ದರಿಂದ ವಿದ್ವಾಂಸರು ಅವನನ್ನು 'ವಾಸುದೇವ' ಎನ್ನುತ್ತಾರೆ. (ವಸತೀತಿ ವಾಸುಃ; ದೀವ್ಯತಿ = ಪ್ರಕಾಶಿಸುತ್ತಾನೆಯಾದ್ದರಿಂದ ದೇವ. ವಾಸುವಾದ ದೇವ = ವಾಸುದೇವ) (12). ಆದೇ ಪರಬ್ರಹ್ಮ; ನಿತ್ಯವೂ ಅಜವೂ ಅಕ್ಷಯವೂ ಅವ್ಯಯವೂ ಆದದ್ದು. ಸದಾ ಏಕಸ್ವರೂಪವಾದದ್ದು. ತ್ಯಾಜ್ಯವಾದ ಯಾವ ಅಂಶವೂ ಇಲ್ಲದ್ದರಿಂದ ನಿರ್ಮಲ (13). ವ್ಯಕ್ತವೂ ಅವ್ಯಕ್ತವೂ ಆದ ಸ್ವರೂಪವುಳ್ಳ (ಕಾರ್ಯಕಾರಣಾತ್ಮಕವಾದ) ಈ ಜಗತ್ತೆಲ್ಲವೂ ಆ ಪರ

* ಅಸ್ತಿ, ಜಾಯತೇ, ವರ್ಧತೇ, ಪರಿಣಮತೇ, ಅಪಕ್ಷೀಯತೇ, ನಶ್ಯತಿ— ಎಂಬಿವು ಷಡ್ಭಾವವಿಕಾರಗಳು. ಇವುಗಳಲ್ಲಿ 'ಅಸ್ತಿ' ಎಂಬುದನ್ನು ಇಲ್ಲಿ ವಿಕಾರವಾಗಿ ಪರಿಗಣಿಸಿಲ್ಲವೆಂಬುದು ಗಮನಾರ್ಹ.

**ಪರಸ್ಯ ಬ್ರಹ್ಮಣೋ ರೂಪಂ ಪುರುಷಃ ಪ್ರಥಮಂ ದ್ವಿಜ।**
**ವ್ಯಕ್ತಾವ್ಯಕ್ತೇ ತಥೈವಾನ್ಯೇ ರೂಪೇ ಕಾಲಸ್ತಥಾ ಪರಮ್॥ 15**

**ಪ್ರಧಾನಪುರುಷವ್ಯಕ್ತಕಾಲಾನಾಂ ಪರಮಂ ಹಿ ಯತ್।**
**ಪಶ್ಯಂತಿ ಸೂರಯಃ ಶುದ್ಧಂ ತದ್ವಿಷ್ಣೋಃ ಪರಮಂ ಪದಮ್॥ 16**

**ಪ್ರಧಾನಪುರುಷವ್ಯಕ್ತಕಾಲಾಸ್ತು ಪ್ರವಿಭಾಗಶಃ।**
**ರೂಪಾಣಿ ಸ್ಥಿತಿಸರ್ಗಾಂತವ್ಯಕ್ತಿಸದ್ಭಾವಹೇತವಃ॥ 17**

**ವ್ಯಕ್ತಂ ವಿಷ್ಣುಸ್ತಥಾವ್ಯಕ್ತಂ ಪುರುಷಃ ಕಾಲ ಏವ ಚ।**
**ಕ್ರೀಡತೋ ಬಾಲಕಸ್ಯೇವ ಚೇಷ್ಟಾಂ ತಸ್ಯ ನಿಶಾಮಯ॥ 18**

**ಅವ್ಯಕ್ತಂ ಕಾರಣಂ ಯತ್ತತ್ ಪ್ರಧಾನಮೃಷಿಸತ್ತಮೈಃ।**
**ಪ್ರೋಚ್ಯತೇ ಪ್ರಕೃತಿಃ ಸೂಕ್ಷ್ಮಾ ನಿತ್ಯಂ ಸದಸದಾತ್ಮಕಮ್॥ 19**

---

ಬ್ರಹ್ಮವೇ. ಅದೇ ಪುರುಷ(ಜೀವ)ರೂಪದಿಂದಲೂ ಕಾಲರೂಪದಿಂದಲೂ ಇದೆ (14). ಹೇ ದ್ವಿಜ-ಮೈತ್ರೇಯ, ಆ ಪರಬ್ರಹ್ಮದ ಶ್ರೇಷ್ಠವಾದ ರೂಪವೇ ಪುರುಷ (ಜೀವ). ವ್ಯಕ್ತ ಮತ್ತು ಅವ್ಯಕ್ತಗಳು (ಜಗತ್ತು) ಅದರ ಇನ್ನೆರಡು ರೂಪಗಳು. ಕಾಲವು ಮತ್ತೊಂದು ರೂಪ (15). ಹೀಗೆ ಪ್ರಧಾನ (ಅವ್ಯಕ್ತ), ಪುರುಷ, ವ್ಯಕ್ತ ಮತ್ತು ಕಾಲಗಳಿಗೆ ಪರಮಮೂಲವೆಂದು ಜ್ಞಾನಿಗಳು ಯಾವುದನ್ನು ತಿಳಿದಿದ್ದಾರೋ ಅದೇ ಶುದ್ಧವಾದ ವಿಷ್ಣುವಿನ ಪರಮಪದ (16). ಪ್ರಧಾನ (ಅವ್ಯಕ್ತಪ್ರಕೃತಿ), ಪುರುಷ (ಜೀವ), ಅವ್ಯಕ್ತ (ಪೃಥಿವ್ಯಾದಿ) ಮತ್ತು ಕಾಲ—ಇವು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳು ಸ್ಫುಟವಾಗಿ ನಡೆಯುತ್ತಿರುವುದಕ್ಕೆ ಯಥಾರ್ಹವಾಗಿ ಕಾರಣವಾದ ವಿಷ್ಣುವಿನ ರೂಪಗಳು (17). ವ್ಯಕ್ತ, ಅವ್ಯಕ್ತ, ಪುರುಷ, ಕಾಲ—ಇವು ನಾಲ್ಕು ವಿಷ್ಣುವಿನ ರೂಪಗಳೇ. ಆಟವಾಡುವ ಬಾಲಕನ ಚೇಷ್ಟೆಯಂತೆ ಆತನು ಮಾಡುವ ಲೀಲೆಯೇನೆಂಬುದನ್ನು ಕೇಳು! (18) ಜಗತ್ತಿಗೆ ಕಾರಣವಾದ ಯಾವ ಅವ್ಯಕ್ತ ಉಂಟೋ ಅದನ್ನು ಋಷಿಜನರು ಪ್ರಧಾನವೆಂದೂ ಸೂಕ್ಷ್ಮವಾದ ಪ್ರಕೃತಿಯೆಂದೂ ಹೇಳುತ್ತಾರೆ. ಈ ಅವ್ಯಕ್ತವು ಸದಾ (ವೃದ್ಧ್ಯಾದಿರಹಿತವಾಗಿ) ಏಕರೂಪವಾಗಿರುತ್ತದೆ. ಅದು ಕಾರ್ಯಕಾರಣ

ಅಕ್ಷಯ್ಯಂ ನಾನ್ಯದಾಧಾರಮಮೇಯಮಜರಂ ಧ್ರುವಮ್।
ಶಬ್ದಸ್ಪರ್ಶವಿಹೀನಂ ತದ್ರೂಪಾದಿಭಿರಸಂಹಿತಮ್॥ 20

ತ್ರಿಗುಣಂ ತಜ್ಜಗದ್ಯೋನಿರನಾದಿಪ್ರಭವಾಪ್ಯಯಮ್।
ತೇನಾಗ್ರೇ ಸರ್ವಮೇವಾಸೀದ್ವ್ಯಾಪ್ತಂ ವೈ ಪ್ರಲಯಾದನು॥ 21

ವೇದವಾದವಿದೋ ವಿದ್ವನ್ನಿಯತಾ ಬ್ರಹ್ಮವಾದಿನಃ।
ಪಠಂತಿ ಚೈತಮೇವಾರ್ಥಂ ಪ್ರಧಾನಪ್ರತಿಪಾದಕಮ್॥ 22

ನಾಹೋ ನ ರಾತ್ರಿರ್ನ ನಭೋ ನ ಭೂಮಿ-
ರ್ನಾಸೀತ್ತಮೋಜ್ಯೋತಿರಭೂಚ್ಚ ನಾನ್ಯತ್।
ಶ್ರೋತ್ರಾದಿಬುದ್ಧ್ಯಾನುಪಲಭ್ಯಮೇಕಂ
ಪ್ರಾಧಾನಿಕಂ ಬ್ರಹ್ಮ ಪುಮಾಂಸ್ತದಾಸೀತ್॥ 23

---

ರೂಪವಾದದ್ದು (ಸತ್ = ಕಾರ್ಯ, ಅಸತ್ = ಕಾರಣ). ಅದು ಕ್ಷಯಿಸ ತಕ್ಕದ್ದಲ್ಲ. ಅದಕ್ಕೆ ಇನ್ನೊಂದು ಆಧಾರವಿಲ್ಲ. ಅಜರವೂ ಶಾಶ್ವತವೂ ಆದದ್ದು. ಅದಕ್ಕೆ ಶಬ್ದ, ಸ್ಪರ್ಶ, ರೂಪಾದಿಗಳಿಲ್ಲ (19-20). ಈ ಅವ್ಯಕ್ತವು ತ್ರಿಗುಣಾತ್ಮಕವಾದದ್ದು. ಇದು ಜಗತ್ತಿಗೆ ಕಾರಣ. ಇದಕ್ಕೆ ಆದಿ ಇಲ್ಲ. ಹುಟ್ಟುವ ಪದಾರ್ಥಗಳೆಲ್ಲ ಇದರಲ್ಲಿ ಲೀನವಾಗುತ್ತವೆ. ಹಿಂದೆ ಪ್ರಳಯ ವಾದ ಮೇಲೆ ಎಲ್ಲೆಲ್ಲಿಯೂ ಈ ಪ್ರಧಾನವು (ಅವ್ಯಕ್ತ, ಪ್ರಕೃತಿ) ವ್ಯಾಪಿಸಿ ಕೊಂಡಿತ್ತು (21). ಹೇ ವಿದ್ವನ್—ಮೈತ್ರೇಯ, ವೇದವಾದಿಗಳಾದ ಬ್ರಹ್ಮ ವಿದರು ಈ ಪ್ರಧಾನವನ್ನು ಪ್ರತಿಪಾದಿಸುತ್ತ ಹೀಗೆ ಹೇಳಿದ್ದಾರೆ: "ಆಗ (ಪ್ರಳಯಕಾಲದಲ್ಲಿ) ಹಗಲು ರಾತ್ರಿಗಳಿರಲಿಲ್ಲ. ಭೂಮ್ಯಾಕಾಶಗಳಿರಲಿಲ್ಲ. ಕತ್ತಲೆ ಬೆಳಕುಗಳಾಗಲಿ ಇನ್ನೊಂದು ಪದಾರ್ಥವಾಗಲಿ ಇರಲಿಲ್ಲ. ಆಗ ಪ್ರಧಾನ, ಬ್ರಹ್ಮ, ಪುರುಷ (ಜೀವಾತ್ಮ)—ಇಷ್ಟೇ ಇದ್ದಿತು" (22-23). ಬ್ರಾಹ್ಮಣ-ಮೈತ್ರೇಯ, ಪ್ರಧಾನ ಮತ್ತು ಪುರುಷ (ಜೀವಾತ್ಮ)—ಇವ ರಿಬ್ಬರೂ ವಿಷ್ಣುವಿನ (ನಿರುಪಾಧಿಕ) ಸ್ವರೂಪದಿಂದ ಈಚೆಗೆ ಬಂದ ಎರಡು ರೂಪಗಳು. ಆ ವಿಷ್ಣುವಿನ ಇನ್ನೊಂದು ರೂಪದಿಂದ ಪ್ರಧಾನವೂ

**ವಿಷ್ಣೋಃ ಸ್ವರೂಪಾತ್ಪರತೋ ಹಿ ತೇ ದ್ವೇ-**
**ರೂಪೇ ಪ್ರಧಾನಂ ಪುರುಷಶ್ಚ ವಿಪ್ರ।**
**ತಸ್ಯೈವ ತೇಽನ್ಯೇನ ಧೃತೇ ವಿಯುಕ್ತೇ**
**ರೂಪಾಂತರಂ ತದ್ ದ್ವಿಜ ಕಾಲಸಂಜ್ಞಮ್॥** 24

**ಪ್ರಕೃತೌ ಸಂಸ್ಥಿತಂ ವ್ಯಕ್ತಮತೀತಪ್ರಲಯೇ ತು ಯತ್।**
**ತಸ್ಮಾತ್ ಪ್ರಾಕೃತಸಂಜ್ಞೋಽಯಮುಚ್ಯತೇ ಪ್ರತಿಸಂಚರಃ॥** 25

**ಅನಾದಿರ್ಭಗವಾನ್ಕಾಲೋ ನಾಂತೋಽಸ್ಯ ದ್ವಿಜ ವಿದ್ಯತೇ।**
**ಅವ್ಯುಚ್ಛಿನ್ನಾಸ್ತತಸ್ತ್ವೇತೇ ಸರ್ಗಸ್ಥಿತ್ಯಂತಸಂಯಮಾಃ॥** 26

**ಗುಣಸಾಮ್ಯೇ ತತಸ್ತಸ್ಮಿನ್ ಪೃಥಕ್ಪುಂಸಿ ವ್ಯವಸ್ಥಿತೇ।**
**ಕಾಲಸ್ವರೂಪಂ ತದ್ವಿಷ್ಣೋರ್ಮೈತ್ರೇಯ ಪರಿವರ್ತತೇ॥** 27

**ತತಸ್ತು ತತ್ಪರಂ ಬ್ರಹ್ಮ ಪರಮಾತ್ಮಾ ಜಗನ್ಮಯಃ।**
**ಸರ್ವಗಃ ಸರ್ವಭೂತೇಶಃ ಸರ್ವಾತ್ಮಾ ಪರಮೇಶ್ವರಃ॥** 28

---

ಜೀವಾತ್ಮನೂ ಸಂಯೋಗವಿಯೋಗಗಳನ್ನು ಪಡೆಯುತ್ತಾರೆ. ಆ ಇನ್ನೊಂದು ರೂಪಕ್ಕೆ ಕಾಲವೆಂದು ಹೆಸರು (24). ಹಿಂದಿನ ಪ್ರಳಯದಲ್ಲಿ ಈ ವ್ಯಕ್ತವಾದ ಜಗತ್ತು ಪ್ರಕೃತಿಯಲ್ಲಿ (ಪ್ರಧಾನದಲ್ಲಿ) ಲೀನವಾಗಿತ್ತು. ಆದ್ದರಿಂದ ಈ ಪ್ರಳಯವು ಪ್ರಾಕೃತವೆನಿಸುತ್ತದೆ (25). ಭಗವಾನ್ಕಾಲವು ಅನಾದಿಯಾಗಿದ್ದು, ಅದಕ್ಕೆ ಅಂತ್ಯವೂ ಇಲ್ಲ. ಆದ್ದರಿಂದ ಸೃಷ್ಟಿ, ಸ್ಥಿತಿ, ಪ್ರಳಯಗಳು ನಿಯಮದಿಂದ ವಿಚ್ಛೇದವಿಲ್ಲದೆ ಬರುತ್ತಲೇ ಇರುತ್ತವೆ (26). ಹೀಗೆ ಪ್ರಳಯಕಾಲದಲ್ಲಿ ಪ್ರಧಾನವು ಗುಣಸಾಮ್ಯದಿಂದಲೂ ಪುರುಷನು (ಜೀವಾತ್ಮ) ಅದರಿಂದ ವಿಯುಕ್ತನಾಗಿಯೂ ಇರಲಾಗಿ, ಮೈತ್ರೇಯ, ವಿಷ್ಣುವಿನ ಕಾಲವೆಂಬ ಸ್ವರೂಪವು (ಪ್ರಧಾನ-ಪುರುಷರನ್ನು ಕೂಡಿಸುವ) ಕಾರ್ಯದಲ್ಲಿ ಪ್ರವೃತ್ತವಾಗುತ್ತದೆ (27). ಆಗ ಸೃಷ್ಟಿಕಾಲವು ಪ್ರಾಪ್ತವಾದ್ದರಿಂದ, ಪರಬ್ರಹ್ಮ ಪರಮಾತ್ಮ ಜಗನ್ಮಯ ಸರ್ವಗ ಸರ್ವಭೂತೇಶ ಸರ್ವಾತ್ಮ ಪರಮೇಶ್ವರನೆನಿಸಿದ ಹರಿಯು ತನ್ನ ಇಚ್ಛೆಯಿಂದ ಪ್ರಧಾನ

**ಪ್ರಧಾನಪುರುಷೌ ಚಾಪಿ ಪ್ರವಿಶ್ಯಾತ್ಮೇಚ್ಛಯಾ ಹರಿಃ।**
**ಕ್ಷೋಭಯಾಮಾಸ ಸಂಪ್ರಾಪ್ತೇ ಸರ್ಗಕಾಲೇ ವ್ಯಯಾವ್ಯಯೌ॥ 29**

**ಯಥಾ ಸನ್ನಿಧಿಮಾತ್ರೇಣ ಗಂಧಃ ಕ್ಷೋಭಾಯ ಜಾಯತೇ।**
**ಮನಸೋ ನೋಪಕರ್ತೃತ್ವಾತ್ತಥಾಸೌ ಪರಮೇಶ್ವರಃ॥ 30**

**ಸ ಏವ ಕ್ಷೋಭಕೋ ಬ್ರಹ್ಮನ್ ಕ್ಷೋಭ್ಯಶ್ಚ ಪುರುಷೋತ್ತಮಃ।**
**ಸ ಸಂಕೋಚವಿಕಾಸಾಭ್ಯಾಂ ಪ್ರಧಾನತ್ವೇಽಪಿ ಚ ಸ್ಥಿತಃ॥ 31**

**ವಿಕಾಸಾಣುಸ್ವರೂಪೈಶ್ಚ ಬ್ರಹ್ಮರೂಪಾದಿಭಿಸ್ತಥಾ।**
**ವ್ಯಕ್ತಸ್ವರೂಪಶ್ಚ ತಥಾ ವಿಷ್ಣುಃ ಸರ್ವೇಶ್ವರೇಶ್ವರಃ॥ 32**

**ಗುಣಸಾಮ್ಯಾತ್ತತಸ್ತಸ್ಮಾತ್ ಕ್ಷೇತ್ರಜ್ಞಾಧಿಷ್ಠಿತಾನ್ಮುನೇ।**
**ಗುಣವ್ಯಂಜನಸಂಭೂತಿಃ ಸರ್ಗಕಾಲೇ ದ್ವಿಜೋತ್ತಮ॥ 33**

---

ಪುರುಷರನ್ನು ಪ್ರವೇಶಮಾಡಿ, ವಿಕಾರಿಯಾದ ಪ್ರಧಾನವನ್ನೂ ಅವಿಕಾರಿಯಾದ ಪುರುಷನನ್ನೂ ಕ್ಷೋಭೆಗೊಳಿಸಿದನು (28-29). ಗಂಧವು ಸಾನ್ನಿಧ್ಯದಲ್ಲಿದ್ದರೆ ಮನಸ್ಸನ್ನು ವಿಚಲಿತವಾಗಿ ಮಾಡುತ್ತದೆ. ಗಂಧವು ತಾನಾಗಿ ಯಾವ ಕ್ರಿಯೆಯನ್ನೂ ಮಾಡುವುದಿಲ್ಲ. ಹಾಗೆ ಪರಮೇಶ್ವರನು ಯಾವ ಕ್ರಿಯೆಯನ್ನೂ ಮಾಡದಿದ್ದರೂ ಅವನ ಸಾನ್ನಿಧ್ಯ ಮಾತ್ರದಿಂದ ಪ್ರಧಾನವೂ ಪುರುಷನೂ ಕ್ಷೋಭೆಗೊಂಡು ವಿಚಲಿತರಾಗುತ್ತಾರೆ (30). ಮೈತ್ರೇಯ, ವಾಸ್ತವವಾಗಿ ಕ್ಷೋಭೆಗೊಳಿಸತಕ್ಕವನೂ ಕ್ಷೋಭೆಗೊಳ್ಳತಕ್ಕದ್ದೂ ಪರಮೇಶ್ವರನೇ! ಏಕೆಂದರೆ, ಪ್ರಧಾನವು ಸಂಕೋಚದಿಂದ ಸಾಮ್ಯಾವಸ್ಥೆಯಲ್ಲಿರಲಿ ಅಥವಾ ವಿಕಾಸದಿಂದ ಜಗತ್ತಾಗಿರಲಿ, ಪರಮೇಶ್ವರನೇ ಪ್ರಧಾನರೂಪದಲ್ಲಿರುತ್ತಾನೆ (31). ಸರ್ವೇಶ್ವರನಾದ ವಿಷ್ಣುವೇ ವಿಕಾಸಗೊಂಡ ಪೃಥಿವ್ಯಾದಿ ರೂಪದಿಂದಲೂ ಅಣುರೂಪದಿಂದಲೂ ಬ್ರಹ್ಮಾದಿ ದೇವತಾ ಸ್ವರೂಪದಿಂದಲೂ ವ್ಯಕ್ತವಾದ ಮಹತ್ತತ್ತ್ವಾದಿರೂಪನಾಗಿ ಇದ್ದಾನೆ (32). ದ್ವಿಜೋತ್ತಮ, ಗುಣಸಾಮ್ಯದಲ್ಲಿರುವ ಪ್ರಕೃತಿ(ಪ್ರಧಾನ)ಯಲ್ಲಿ ಕ್ಷೇತ್ರಜ್ಞನಾದ ಈಶ್ವರನು ಸೃಷ್ಟಿಕಾಲದಲ್ಲಿ ಪ್ರವೇಶಿಸಿದಾಗ, (ಕ್ಷೋಭೆಗೊಂಡ ಪ್ರಕೃತಿಯ ಏರುಪೇರಿನಿಂದ) ಮಹತ್ತತ್ತ್ವವೆಂಬ ವ್ಯಕ್ತವಸ್ತುವಿನ ಉತ್ಪತ್ತಿ

**ಪ್ರಧಾನತತ್ತ್ವಮುದ್ಭೂತಂ ಮಹಾಂತಂ ತತ್ಸಮಾವೃಣೋತ್।**
**ಸಾತ್ತ್ವಿಕೋ ರಾಜಸಶ್ಚೈವ ತಾಮಸಶ್ಚ ತ್ರಿಧಾ ಮಹಾನ್॥ 34**

**ಪ್ರಧಾನತತ್ತ್ವೇನ ಸಮಂ ತ್ವಚಾ ಬೀಜಮಿವಾವೃತಮ್।**
**ವೈಕಾರಿಕಸ್ತೈಜಸಶ್ಚ ಭೂತಾದಿಶ್ಚೈವ ತಾಮಸಃ॥ 35**

**ತ್ರಿವಿಧೋಽಯಮಹಂಕಾರೋ ಮಹತ್ತತ್ತ್ವಾದಜಾಯತ।**
**ಭೂತೇಂದ್ರಿಯಾಣಾಂ ಹೇತುಃ ಸ ತ್ರಿಗುಣಾತ್ಮಾನ್ಮಹಾಮುನೇ॥ 36**

**ಯಥಾ ಪ್ರಧಾನೇನ ಮಹಾನ್ ಮಹತಾ ಸ ತಥಾವೃತಃ।**
**ಭೂತಾದಿಸ್ತು ವಿಕುರ್ವಾಣಃ ಶಬ್ದತನ್ಮಾತ್ರಕಂ ತತಃ॥ 37**

**ಸಸರ್ಜ ಶಬ್ದತನ್ಮಾತ್ರಾದಾಕಾಶಂ ಶಬ್ದಲಕ್ಷಣಮ್।**
**ಶಬ್ದಮಾತ್ರಂ ತಥಾಕಾಶಂ ಭೂತಾದಿಃ ಸ ಸಮಾವೃಣೋತ್॥ 38**

---

ಯಾಗುತ್ತದೆ (33). ಉತ್ಪನ್ನವಾದ ಮಹತ್ತತ್ತ್ವವನ್ನು ಪ್ರಧಾನವು ಆವರಿಸಿಕೊಂಡಿತು. ಮಹತ್ತಾದರೋ ಸಾತ್ತ್ವಿಕ, ರಾಜಸ, ತಾಮಸವೆಂದು ಮೂರು ವಿಧ. ಬೀಜವು ಸಿಪ್ಪೆಯಿಂದ ಆವರಿಸಲ್ಪಟ್ಟಿರುವಂತೆ, ಮಹತ್ತು ಪ್ರಧಾನದಿಂದ ಆವೃತವಾಗಿದೆ. ಮಹತ್ತತ್ತ್ವದಿಂದ* (ಸಾತ್ತ್ವಿಕವಾದ) ವೈಕಾರಿಕ, (ರಾಜಸವಾದ) ತೈಜಸ ಮತ್ತು ತಾಮಸವಾದ ಭೂತಾದಿ—ಎಂಬ ಮೂರು ಬಗೆಯ ಅಹಂಕಾರ ಹುಟ್ಟಿತು (34-35). ಆ ಅಹಂಕಾರವು ತ್ರಿಗುಣಾತ್ಮಕವಾದ್ದರಿಂದ ಪೃಥಿವ್ಯಾದಿ ಭೂತಗಳ ಮತ್ತು ಇಂದ್ರಿಯಗಳ ಉತ್ಪತ್ತಿಗೆ ಹೇತುವಾಗಿದೆ. ಮಹತ್ತು ಪ್ರಧಾನದಿಂದ ಆವೃತವಾಗಿರುವಂತೆ ಅಹಂಕಾರವು ಮಹತ್ತಿನಿಂದ ಆವೃತವಾಗಿದೆ (36). ಭೂತಾದಿಯೆಂಬ ತಾಮಸಾಹಂಕಾರವು ವಿಕಾರಗೊಂಡು ಶಬ್ದತನ್ಮಾತ್ರೆಯನ್ನು ಉಂಟು ಮಾಡಿತು (36-37). ಈ ಭೂತಾದಿ ಎಂಬ ಅಹಂಕಾರವು ಶಬ್ದತನ್ಮಾತ್ರೆಯಿಂದ ಶಬ್ದಗುಣಕವಾದ ಆಕಾಶವನ್ನು ನಿರ್ಮಿಸಿತು. ಭೂತಾದಿಯು ಶಬ್ದ

---

* ಮಹತ್ತತ್ತ್ವವೇ ಬುದ್ಧಿ. ಇದನ್ನು ಯಶಸ್ಸು, ಚಿತಿ, ಪ್ರಜ್ಞೆ, ಸಂವಿತ್, ಬ್ರಹ್ಮಾ, ಈಶ್ವರ—ಎಂದೂ ವಾಯುಪುರಾಣ, ಲಿಂಗಪುರಾಣಾದಿಗಳಲ್ಲಿ ವ್ಯವಹರಿಸಿದ್ದಾರೆ.

ಆಕಾಶಸ್ತು ವಿಕುರ್ವಾಣಃ ಸ್ಪರ್ಶಮಾತ್ರಂ ಸಸರ್ಜ ಹ।
ಬಲವಾನಭವದ್ವಾಯುಸ್ತಸ್ಯ ಸ್ಪರ್ಶೋ ಗುಣೋ ಮತಃ॥ 39

ಆಕಾಶಂ ಶಬ್ದಮಾತ್ರಂ ತು ಸ್ಪರ್ಶಮಾತ್ರಂ ಸಮಾವೃಣೋತ್।
ತತೋ ವಾಯುರ್ವಿಕುರ್ವಾಣೋ ರೂಪಮಾತ್ರಂ ಸಸರ್ಜ ಹ॥ 40

ಜ್ಯೋತಿರುತ್ಪದ್ಯತೇ ವಾಯೋಸ್ತದ್ರೂಪಗುಣಮುಚ್ಯತೇ।
ಸ್ಪರ್ಶಮಾತ್ರಂ ತು ವೈ ವಾಯೂರೂಪಮಾತ್ರಂ ಸಮಾವೃಣೋತ್॥

ಜ್ಯೋತಿಶ್ಚಾಪಿ ವಿಕುರ್ವಾಣಂ ರಸಮಾತ್ರಂ ಸಸರ್ಜ ಹ।
ಸಂಭವಂತಿ ತತೋಽಂಭಾಂಸಿ ರಸಾಧಾರಾಣಿ ತಾನಿ ಚ॥ 42

ರಸಮಾತ್ರಾಣಿ ಚಾಂಭಾಂಸಿ ರೂಪಮಾತ್ರಂ ಸಮಾವೃಣೋತ್।
ವಿಕುರ್ವಾಣಾನಿ ಚಾಂಭಾಂಸಿ ಗಂಧಮಾತ್ರಂ ಸಸರ್ಜಿರೇ॥ 43

ಸಂಘಾತೋ ಜಾಯತೇ ತಸ್ಮಾತ್ತಸ್ಯ ಗಂಧೋ ಗುಣೋ ಮತಃ।
ತಸ್ಮಿಂಸ್ತಸ್ಮಿಂಸ್ತು ತನ್ಮಾತ್ರಂ ತೇನ ತನ್ಮಾತ್ರತಾ ಸ್ಮೃತಾ॥ 44

---

ತನ್ಮಾತ್ರವನ್ನೂ ಆಕಾಶವನ್ನೂ ವ್ಯಾಪಿಸಿಕೊಂಡಿತು (38). ಆಕಾಶವು ವಿಕೃತವಾಗಿ ಸ್ಪರ್ಶತನ್ಮಾತ್ರವನ್ನೂ ಅದು ಬಲವಾದ ವಾಯುವನ್ನೂ ನಿರ್ಮಿಸಿದವು. ವಾಯುವಿನ ಗುಣ ಸ್ಪರ್ಶ. ಶಬ್ದತನ್ಮಾತ್ರವು ಆಕಾಶವನ್ನೂ ಸ್ಪರ್ಶತನ್ಮಾತ್ರವನ್ನೂ (ವಾಯುವನ್ನೂ) ಆಕ್ರಮಿಸಿಕೊಂಡಿತು. ಆಮೇಲೆ ವಾಯುವು ವಿಕೃತವಾಗಿ ರೂಪತನ್ಮಾತ್ರವನ್ನು ಸೃಜಿಸಿತು (39-40). ಆ ವಾಯುವಿನಿಂದ (ರೂಪತನ್ಮಾತ್ರದ ಮೂಲಕ) ಅಗ್ನಿ ಹುಟ್ಟುತ್ತದೆ. ಅದರ ಗುಣ ರೂಪ. ಸ್ಪರ್ಶತನ್ಮಾತ್ರದಿಂದ ಕೂಡಿದ ವಾಯುವು ರೂಪಮಾತ್ರೆಯನ್ನೂ ಅಗ್ನಿಯನ್ನೂ ಆವರಿಸಿಕೊಂಡಿತು (41). ಅಗ್ನಿಯೂ ವಿಕೃತವಾಗಿ ರಸಮಾತ್ರೆಯನ್ನು ಸೃಜಿಸಿತು. ಅದರಿಂದ ರಸಗುಣವುಳ್ಳ ಜಲ ಹುಟ್ಟಿತು (42). ರೂಪತನ್ಮಾತ್ರೆಯು ರಸತನ್ಮಾತ್ರೆಯನ್ನೂ ಜಲವನ್ನೂ ಆವರಿಸಿತು. ಜಲವು ವಿಕೃತವಾಗಿ ಗಂಧಮಾತ್ರೆಯನ್ನು ಸೃಷ್ಟಿಸಿತು. ಅದರಿಂದ ಪೃಥಿವೀ ಸಂಘಾತವು ಜನಿಸುತ್ತದೆ. ಅದರ ಗುಣ ಗಂಧ. ಈ ಆಕಾಶಾದಿ ಭೂತದಲ್ಲಿ ಶಬ್ದಾದಿ ತನ್ಮಾತ್ರೆ ಇದೆ. ಆದ್ದರಿಂದ ಅದು ಶಬ್ದಾದಿ ಗುಣವುಳ್ಳದ್ದಾಗಿದೆ.

**ತನ್ಮಾತ್ರಾಣ್ಯವಿಶೇಷಾಣಿ ಅವಿಶೇಷಾಸ್ತತೋ ಹಿ ತೇ।**
**ನ ಶಾಂತಾಪಿ ಘೋರಾಸ್ತೇ ನ ಮೂಢಾಶ್ಚಾವಿಶೇಷಿಣಃ॥ 45**

**ಭೂತತನ್ಮಾತ್ರಸರ್ಗೋಽಯಮಹಂಕಾರಾತ್ತು ತಾಮಸಾತ್।**
**ತೈಜಸಾನೀಂದ್ರಿಯಾಣ್ಯಾಹುರ್ದೇವಾ ವೈಕಾರಿಕಾ ದಶ॥ 46**

**ಏಕಾದಶಂ ಮನಶ್ಚಾತ್ರ ದೇವಾ ವೈಕಾರಿಕಾಃ ಸ್ಮೃತಾಃ।**
**ತ್ವಕ್ ಚಕ್ಷುರ್ನಾಸಿಕಾ ಜಿಹ್ವಾ ಶ್ರೋತ್ರಮತ್ರ ಚ ಪಂಚಮಮ್॥ 47**

**ಶಬ್ದಾದೀನಾಮವಾಪ್ತ್ಯರ್ಥಂ ಬುದ್ಧಿಯುಕ್ತಾನಿ ವೈ ದ್ವಿಜ।**
**ಪಾಯೂಪಸ್ಥೌ ಕರೌ ಪಾದೌ ವಾಕ್ ಚ ಮೈತ್ರೇಯಪಂಚಮೀ॥ 48**

---

(43-44). (ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ) ಪಂಚತನ್ಮಾತ್ರೆಗಳಲ್ಲಿ (ಶಾಂತ-ಘೋರ ಮೂಢತ್ವಗಳೆಂಬ) ವಿಶೇಷಗಳಿಲ್ಲ. ಅವು ನಿರ್ವಿಶೇಷಗಳೆನಿಸಿವೆ. ಆದ್ದರಿಂದ ಈ ತನ್ಮಾತ್ರೆಗಳು ಶಾಂತವೂ ಅಲ್ಲ, ಘೋರವೂ ಅಲ್ಲ , ಮೂಢವೂ ಅಲ್ಲ* (45). ಈ ಪ್ರಕಾರವಾಗಿ ಭೂತಾದಿಯೆಂಬ ತಾಮಸಾಹಂಕಾರದಿಂದ ಶಬ್ದಾದಿ ಪಂಚತನ್ಮಾತ್ರೆಗಳೂ ಆಕಾಶಾದಿ ಪಂಚಭೂತಗಳೂ ಹುಟ್ಟಿವೆ. (ರಾಜಸವಾದ) ತೈಜಸಾಹಂಕಾರದಿಂದ (ಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯಗಳೂ ಸೇರಿ ಹತ್ತು) ಇಂದ್ರಿಯಗಳಾಗಿವೆ. ಇವುಗಳ ಹತ್ತು ಅಧಿಷ್ಠಾತೃ ದೇವತೆಗಳು ಮಾತ್ರ ವೈಕಾರಿಕಗಳು —ಎಂದರೆ ಸಾತ್ತ್ವಿಕಾಹಂಕಾರದಿಂದ ಹುಟ್ಟಿದವು (46). ಹನ್ನೊಂದನೆಯ ಇಂದ್ರಿಯವಾದ ಮನಸ್ಸು ಮಾತ್ರ ವೈಕಾರಿಕ. ಇದರ ಅಧಿದೇವತೆಗಳೂ ವೈಕಾರಿಕಗಳು (ಸಾತ್ತ್ವಿಕ). ತ್ವಕ್ (ಚರ್ಮ), ಚಕ್ಷು, ಘ್ರಾಣ, ಜಿಹ್ವೆ, ಶ್ರೋತ್ರ—ಇವು ಬುದ್ಧಿಯ ನೆರವಿನಿಂದ ಶಬ್ದಾದಿ ವಿಷಯಗಳನ್ನು ಗ್ರಹಿಸತಕ್ಕ ಐದು ಜ್ಞಾನೇಂದ್ರಿಯಗಳು. ಗುದ, ಗುಹ್ಯ, ಕಾಲುಗಳು, ಕೈಗಳು ಮತ್ತು ವಾಕ್ (ಮುಖ)—ಇವು ಐದು ಕರ್ಮೇಂದ್ರಿಯಗಳು (47-48).

*ಶಾಂತವು ಸುಖವನ್ನೂ ಘೋರವು ದುಃಖವನ್ನೂ ಮೂಢವು ಮೋಹವನ್ನೂ ಉಂಟುಮಾಡುತ್ತವೆ. ತನ್ಮಾತ್ರೆಗಳಲ್ಲಿ ಶಾಂತತ್ವಾದಿ ವಿಶೇಷಗಳಿಲ್ಲವಾದ್ದರಿಂದ ಅವು ಸುಖಾದಿಗಳನ್ನುಂಟುಮಾಡುವುದಿಲ್ಲ. ಸುಖಾದಿಭೋಗಯೋಗ್ಯಗಳಲ್ಲವೆಂದು ತಾತ್ಪರ್ಯ.

**ವಿಸರ್ಗಶಿಲ್ಪಗತ್ಯುಕ್ತಿ ಕರ್ಮ ತೇಷಾಂ ಚ ಕಥ್ಯತೇ।**
**ಆಕಾಶವಾಯುತೇಜಾಂಸಿ ಸಲಿಲಂ ಪೃಥಿವೀ ತಥಾ॥ 49**

**ಶಬ್ದಾದಿಭಿರ್ಗುಣೈರ್ಬ್ರಹ್ಮನ್ ಸಂಯುಕ್ತಾನ್ಯುತ್ತರೋತ್ತರೈಃ।**
**ಶಾಂತಾ ಘೋರಾಶ್ಚ ಮೂಢಾಶ್ಚ ವಿಶೇಷಸ್ತೇನ ತೇ ಸ್ಮೃತಾಃ॥ 50**

**ನಾನಾವೀರ್ಯಾಃ ಪೃಥಗ್ಭೂತಾಸ್ತತಸ್ತೇ ಸಂಹತಿಂ ವಿನಾ।**
**ನಾಶಕ್ನುವನ್ಪ್ರಜಾಃ ಸ್ರಷ್ಟುಮಸಮಾಗಮ್ಯ ಕೃತ್ಸ್ನಶಃ॥ 51**

**ಸಮೇತ್ಯಾನ್ಯೋಽನ್ಯಸಂಯೋಗಂ ಪರಸ್ಪರಸಮಾಶ್ರಯಾಃ।**
**ಏಕಸಂಘಾತಲಕ್ಷ್ಯಾಶ್ಚ ಸಂಪ್ರಾಪ್ಯೈಕ್ಯಮಶೇಷತಃ॥ 52**

**ಪುರುಷಾಧಿಷ್ಠಿತತ್ವಾಚ್ಚ ಪ್ರಧಾನಾನುಗ್ರಹೇಣ ಚ।**
**ಮಹದಾದ್ಯಾ ವಿಶೇಷಾಂತಾ ಹ್ಯಂಡಮುತ್ಪಾದಯಂತಿ ತೇ॥ 53**

---

ಮಲತ್ಯಾಗ, ಸಂತತಿನಿರ್ಮಾಣ, ಗಮನಾಗಮನ (ದಾನಾದಾನ), ಮಾತಾಡುವುದು—ಇವು ಕರ್ಮೇಂದ್ರಿಯಗಳ ಕೆಲಸ. ಆಕಾಶ, ವಾಯು, ತೇಜಸ್ಸು, ಜಲ, ಪೃಥಿವೀ—ಇವು ಕ್ರಮವಾಗಿ ಶಬ್ದಾದಿಗುಣಗಳಿಂದ ಕೂಡಿರುವ ಕಾರಣ ಇವು ಶಾಂತ, ಘೋರಗಳೆಂದೂ ಆದ್ದರಿಂದ ವಿಶೇಷ ಯುಕ್ತಗಳೆಂದೂ ಪರಿಗಣಿತವಾಗಿವೆ (49-50). ಈ ಮಹದಾದಿಗಳೂ ಪಂಚಭೂತಗಳೂ ನಾನಾ ಬಗೆಯ ಶಕ್ತಿಯುಳ್ಳವು. ಇವು ಎಲ್ಲ ಬಗೆ ಯಲ್ಲಿಯೂ ಒಟ್ಟು ಸೇರಿ ಸಂಘಾತವಾಗದೆ ಪ್ರಜೆಗಳನ್ನು (ಜಗತ್ತನ್ನು) ನಿರ್ಮಿಸಲು ಅಸಮರ್ಥವಾದವು (51). ಆದ್ದರಿಂದ ಅವು ಅನ್ಯೋನ್ಯವಾಗಿ ಸೇರಿಕೊಂಡು ಒಂದನ್ನೊಂದು ಆಶ್ರಯಿಸಿ ಎಲ್ಲವೂ ಸೇರಿ ಒಂದೇ ಸಂಘಾತ ವಾದವು. ಪರಮಾತ್ಮನು ಅಧಿಷ್ಠಿತನಾದ್ದರಿಂದಲೂ ಪ್ರಧಾನವು ಅನುಗ್ರಹಿ ಸಿದ್ದರಿಂದಲೂ (ತಾನು ವಿಸ್ತರಿಸಿ ನಾನಾ ಗುಣಗಳನ್ನೂ ಕ್ರಿಯೆಗಳನ್ನೂ ಅಭಿವ್ಯಕ್ತಿಗೊಳಿಸಿದ್ದು ಪ್ರಧಾನದ ಅನುಗ್ರಹ) ಮಹದಾದಿಯಾಗಿ ಪಂಚ ಭೂತಾಂತ ಪದಾರ್ಥಗಳು ಒಂದು ಅಂಡವನ್ನು ಉತ್ಪಾದಿಸಿದವು (52-53). ಹೇ ಮಹಾಬುದ್ಧಿ—ಮೈತ್ರೇಯ, ಆ ಅಂಡವು ಪಂಚಭೂತಗಳಿಂದ ಕ್ರಮವಾಗಿ ವರ್ಧಿಸಿ ಮಹತ್ತರವಾದ ಅಂಡವಾಗಿ ನೀರಿನ ಗುಳ್ಳೆಯಂತೆ

**ತತ್ಕ್ರಮೇಣ ವಿವೃದ್ಧಂ ಸಜ್ಜಲಬುದ್ಬುದವತ್ಸಮಮ್ ।**
**ಭೂತೇಭ್ಯೋಽಂಡಂ ಮಹಾಬುದ್ಧೇ**
**ಮಹತ್ತದುದಕೇಶಯಮ್ ॥ 54**

**ಪ್ರಾಕೃತಂ ಬ್ರಹ್ಮರೂಪಸ್ಯ ವಿಷ್ಣೋಃ ಸ್ಥಾನಮನುತ್ತಮಮ್ ॥ 55**

**ತತ್ರಾವ್ಯಕ್ತಸ್ವರೂಪೋಽಸೌ ವ್ಯಕ್ತರೂಪೋ ಜಗತ್ಪತಿಃ ।**
**ವಿಷ್ಣುರ್ಬ್ರಹ್ಮಸ್ವರೂಪೇಣ ಸ್ವಯಮೇವ ವ್ಯವಸ್ಥಿತಃ ॥ 56**

**ಮೇರುರುಲ್ಬಮಭೂತ್ತಸ್ಯ ಜರಾಯುಶ್ಚ ಮಹೀಧರಾಃ ।**
**ಗರ್ಭೋದಕಂ ಸಮುದ್ರಾಶ್ಚ ತಸ್ಯಾಸನ್ಸುಮಹಾತ್ಮನಃ ॥ 57**

**ಸಾದ್ರಿದ್ವೀಪಸಮುದ್ರಾಶ್ಚ ಸಜ್ಯೋತಿರ್ಲೋಕಸಂಗ್ರಹಃ ।**
**ತಸ್ಮಿನ್ನಂಡೇಽಭವದ್ವಿಪ್ರ ಸದೇವಾಸುರಮಾನುಷಃ ॥ 58**

**ವಾರಿವಹ್ನ್ಯನಿಲಾಕಾಶೈಸ್ತತೋ ಭೂತಾದಿನಾ ಬಹಿಃ ।**
**ವೃತಂ ದಶಗುಣೈರಂಡಂ ಭೂತಾದಿರ್ಮಹತಾ ತಥಾ ॥ 59**

---

ನೀರಿನಲ್ಲಿ ನಿಂತಿತು. ಬ್ರಹ್ಮರೂಪನಾದ ವಿಷ್ಣುವಿಗೆ ಅದು ಶ್ರೇಷ್ಠವಾದ ಪ್ರಾಕೃತ (ಪ್ರಕೃತಿನಿರ್ಮಿತ) ಸ್ಥಾನವೆನಿಸಿತು (54-55). ಸ್ವಯಂ ಅವ್ಯಕ್ತನಾದ ಜಗದೀಶ್ವರನು ವ್ಯಕ್ತರೂಪವನ್ನು ಧರಿಸಿ ಬ್ರಹ್ಮನಾಗಿ (ಹಿರಣ್ಯಗರ್ಭ ಬ್ರಹ್ಮ) ಆ ಅಂಡದಲ್ಲಿ ವ್ಯವಸ್ಥಿತನಾದನು. ಮಹಾತ್ಮನಾದ ಹಿರಣ್ಯಗರ್ಭನಿಗೆ ಮೇರುವೇ ಗರ್ಭದ ಪೊರೆಯಾಯಿತು. ಪರ್ವತಗಳು ಗರ್ಭಕೋಶ. ಸಮುದ್ರಗಳು, ಗರ್ಭಕೋಶದ ನೀರು (56-57). ಹೇ ವಿಪ್ರ, ಪರ್ವತ ದ್ವೀಪ ಸಮುದ್ರಗಳೂ ಗ್ರಹನಕ್ಷತ್ರಗಳಿಂದಲೂ ದೇವಾಸುರಮಾನುಷ ರಿಂದಲೂ ಸಹಿತವಾದ ಲೋಕಸಮುದಾಯವೂ ಆ ಬ್ರಹ್ಮಾಂಡದೊಳಗೆ ನಿರ್ಮಿತವಾದವುಗಳು (58). ಈ ಬ್ರಹ್ಮಾಂಡವನ್ನು ಹೊರಗಿನಿಂದ ಜಲ, ಅಗ್ನಿ, ವಾಯು, ಆಕಾಶ, ಭೂತಾದಿಯೆಂಬ ಅಹಂಕಾರಗಳು ಕ್ರಮವಾಗಿ ಒಂದಕ್ಕಿಂತ ಇನ್ನೊಂದು ಹತ್ತರಷ್ಟು ಪರಿಮಾಣವುಳ್ಳದ್ದಾಗಿ, ವ್ಯಾಪಿಸಿ ಕೊಂಡಿವೆ. ಭೂತಾದಿಯನ್ನು ಮಹತ್ತೂ ಅವುಗಳಿಂದ ಸಹಿತವಾದ ಮಹತ್ತನ್ನು ಪ್ರಧಾನವೂ ಆವರಿಸಿವೆ. ಹೀಗೆ ಜಲಾದಿಯಾದ ಸಪ್ತಪದಾರ್ಥ

**ಏಭಿರಾವರಣೈರಂಡಂ ಸಪ್ತಭಿಃ ಪ್ರಾಕೃತೈರ್ವೃತಮ್ ।**
**ನಾರಿಕೇಲಫಲಸ್ಯಾಂತರ್ಬೀಜಂ ಬಾಹ್ಯದಲೈರಿವ ॥** 60

**ಜುಷನ್ ರಜೋಗುಣಂ ತತ್ರ ಸ್ವಯಂ ವಿಶ್ವೇಶ್ವರೋ ಹರಿಃ ।**
**ಬ್ರಹ್ಮಾ ಭೂತ್ವಾಸ್ಯ ಜಗತೋ ವಿಸೃಷ್ಟೌ ಸಂಪ್ರವರ್ತತೇ ॥** 61

**ಸೃಷ್ಟಂ ಚ ಪಾತ್ಯನುಯುಗಂ ಯಾವತ್ಕಲ್ಪವಿಕಲ್ಪನಾ ।**
**ಸತ್ತ್ವಭೃದ್ಭಗವಾನ್ವಿಷ್ಣುರಪ್ರಮೇಯಪರಾಕ್ರಮಃ ॥** 62

**ತಮೋದ್ರೇಕೀ ಚ ಕಲ್ಪಾಂತೇ ರುದ್ರರೂಪೀ ಜನಾರ್ದನಃ ।**
**ಮೈತ್ರೇಯಾಖಿಲಭೂತಾನಿ ಭಕ್ಷಯತ್ಯತಿದಾರುಣಃ ॥** 63

**ಭಕ್ಷಯಿತ್ವಾ ಚ ಭೂತಾನಿ ಜಗತ್ಯೇಕಾರ್ಣವೀಕೃತೇ ।**
**ನಾಗಪರ್ಯಂಕಶಯನೇ ಶೇತೇ ಚ ಪರಮೇಶ್ವರಃ ॥** 64

---

ಗಳಿಂದ ಈ ಬ್ರಹ್ಮಾಂಡವು ತೆಂಗಿನಕಾಯಿಯಲ್ಲಿರುವ ಬೀಜವು ಹೊರಗಿನ ಸಿಪ್ಪೆ ನಾರುಗಳಿಂದ ವ್ಯಾಪ್ತವಾಗಿರುವಂತೆ, ಆವೃತವಾಗಿದೆ* (59-60). ಆಮೇಲೆ ವಿಶ್ವಾಧಿಪನಾದ ಹರಿಯು ರಜೋಗುಣವನ್ನಾಶ್ರಯಿಸಿ (ಚತುರ್ಮುಖ) ಬ್ರಹ್ಮನಾಗಿ ಜಗತ್ತಿನ ಸೃಷ್ಟಿಯಲ್ಲಿ ಪ್ರವೃತ್ತನಾಗುತ್ತಾನೆ. ಅಪ್ರಮೇಯ ಪರಾಕ್ರಮನಾದ ಆ ಭಗವಂತನು ಸತ್ತ್ವಗುಣವನ್ನಾಶ್ರಯಿಸಿ ವಿಷ್ಣುವಾಗಿ ತಾನು ಸೃಷ್ಟಿಸಿದ ಜಗತ್ತನ್ನು ಎಲ್ಲ ಯುಗಗಳಲ್ಲಿಯೂ, ಮುಂದೆ ಪ್ರಳಯವಾಗುವವರೆಗೆ ಕಾಪಾಡುತ್ತಾನೆ (61-62). ಅನಂತರ ಪ್ರಳಯ ಕಾಲ ಬಂದಾಗ, ಮೈತ್ರೇಯ, ಆ ಜನಾರ್ದನನು ತಮೋಗುಣವನ್ನಾಶ್ರಯಿಸಿ ರುದ್ರರೂಪದಿಂದ ಅತಿಭೀಕರನಾಗಿ ಸಕಲಭೂತಗಳನ್ನೂ ತಿಂದು ತೇಗಿಬಿಡುತ್ತಾನೆ! (63). ಹೀಗೆ ಸರ್ವಭೂತಗಳನ್ನೂ ಭಕ್ಷಿಸಿದ ಮೇಲೆ, ವಿಶ್ವವೆಲ್ಲವೂ ಜಲಮಯವಾಗಿರುತ್ತದೆ. ಅಲ್ಲಿ ಆದಿಶೇಷನೆಂಬ ಪರ್ಯಂಕಶಯನದಲ್ಲಿ ಆ ಪರಮೇಶ್ವರನು ಪವಡಿಸುತ್ತಾನೆ (64).

---

* ಇಲ್ಲಿ ಪೃಥಿವಿಯನ್ನು ಕೈ ಬಿಟ್ಟಿರುವುದು ಗಮನಾರ್ಹ. ಅದು ಈ ಬ್ರಹ್ಮಾಂಡದ ಹೊರಗೆ ಇಲ್ಲವೆಂದಾಗುತ್ತದೆ. ಜಲಾದಿ ಸಪ್ತಪದಾರ್ಥಗಳು ಈ ಅಂಡದ ಒಳಗಡೆಯೂ ಇವೆ, ಪ್ರಕೃತಿಯ ವಿಕಾರವೇ ಜಗತ್ತಾದ್ದರಿಂದ.

**ಪ್ರಬುದ್ಧಶ್ಚ ಪುನಃ ಸೃಷ್ಟಿಂ ಕರೋತಿ ಬ್ರಹ್ಮರೂಪಧೃಕ್ ॥ 65**

**ಸೃಷ್ಟಿಸ್ಥಿತ್ಯಂತಕರಣೀಂ ಬ್ರಹ್ಮವಿಷ್ಣುಶಿವಾತ್ಮಿಕಮ್ ।**
**ಸ ಸಂಜ್ಞಾಂ ಯಾತಿ ಭಗವಾನೇಕ ಏವ ಜನಾರ್ದನಃ ॥ 66**

**ಸೃಷ್ಟಾ ಸೃಜತಿ ಚಾತ್ಮಾನಂ ವಿಷ್ಣುಃ ಪಾಲ್ಯಂ ಚ ಪಾತಿ ಚ ।**
**ಉಪಸಂಹ್ರಿಯತೇ ಚಾಂತೇ ಸಂಹರ್ತಾ ಚ ಸ್ವಯಂ ಪ್ರಭುಃ ॥ 67**

**ಪೃಥಿವ್ಯಾಪಸ್ತಥಾ ತೇಜೋ ವಾಯುರಾಕಾಶ ಏವ ಚ ।**
**ಸರ್ವೇಂದ್ರಿಯಾಂತಃಕರಣಂ ಪುರುಷಾಖ್ಯಂ ಹಿ ಯಜ್ಜಗತ್ ॥ 68**

**ಸ ಏವ ಸರ್ವಭೂತಾತ್ಮಾ ವಿಶ್ವರೂಪೋ ಯತೋಽವ್ಯಯಃ ।**
**ಸರ್ಗಾದಿಕಂ ತು ತಸ್ಯೈವ ಭೂತಸ್ಥಮುಪಕಾರಕಮ್ ॥ 69**

---

(ಯೋಗನಿದ್ರೆಯಿಂದ) ಎಚ್ಚೆತ್ತ ಮೇಲೆ ಮತ್ತೆ ಬ್ರಹ್ಮರೂಪವನ್ನು ಧರಿಸಿ ಸೃಷ್ಟಿಯನ್ನು ಮಾಡುತ್ತಾನೆ. ಜನಾರ್ದನನೆನಿಸಿದ ಆ ಒಬ್ಬ ಭಗವಂತನೇ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡತಕ್ಕ ಬ್ರಹ್ಮ-ವಿಷ್ಣು-ಶಿವ ಎಂಬ ಮೂರು ಹೆಸರನ್ನು ಧರಿಸುತ್ತಾನೆ (65-66). ಆ ಪ್ರಭುವು ಸೃಷ್ಟಿಕರ್ತನಾಗಿ ತನ್ನನ್ನೇ ಸೃಷ್ಟಿಸಿಕೊಂಡು, ಪಾಲನೀಯವಾದ ಅದನ್ನು ವಿಷ್ಣುವಾಗಿ ಪಾಲಿಸುತ್ತಾನೆ. ಕಡೆಗೆ ಸಂಹಾರಕನಾಗಿ ಸಂಹರಿಸಿ ತಾನೇ ಉಪಸಂಹೃತನಾಗುತ್ತಾನೆ—ಲೀನನಾಗುತ್ತಾನೆ (67). ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ, ಸರ್ವೇಂದ್ರಿಯಗಳು, ಅಂತಃಕರಣ—ಈ ರೂಪವಾದ ಜಗತ್ತೆಂದರೆ ಆ ಪುರುಷನೇ ಸರಿಯಷ್ಟೆ* ಆ ಪುರುಷನೇ ಸರ್ವಭೂತಗಳ ಅಂತರಾತ್ಮನೂ ವಿಶ್ವಾಕಾರನೂ ಅವ್ಯಯನೂ ಆಗಿದ್ದಾನೆ. ಆದ್ದರಿಂದ ಪ್ರಾಣಿಗಳಿಗಾಗುವ ಸೃಷ್ಟಿಸ್ಥಿತಿಲಯಗಳು ಆತನಿಗೇ ಉಪಕಾರಕ§ (68-69). ಸರ್ವಸ್ವರೂಪನೂ

---

* 'ಪುರುಷ ಏವೇದಗ್ಁಸರ್ವಮ್' (ಪುರುಷಸೂಕ್ತ).

§ ಸೃಷ್ಟಿಸ್ಥಿತಿಲಯಗಳು ಭಗವಂತನ ಲೀಲೆಯೆಂದು ಹಿಂದೆ ಉಪಕ್ರಮಿಸಿದೆ (ಶ್ಲೋ. 18). ಲೀಲೆಯಾದ್ದರಿಂದ ವಿನೋದಕಾರಿ ಎಂದು ಅಭಿಪ್ರಾಯ.

**ಸ ಏವ ಸೃಜ್ಯಃ ಸ ಚ ಸರ್ಗಕರ್ತಾ**
**ಸ ಏವ ಪಾತ್ಯತ್ತಿ ಚ ಪಾಲ್ಯತೇ ಚ।**
**ಬ್ರಹ್ಮಾದ್ಯವಸ್ಥಾಭಿರಶೇಷಮೂರ್ತಿ-**
**ರ್ವಿಷ್ಣುರ್ವರಿಷ್ಠೋ ವರದೋ ವರೇಣ್ಯಃ॥** 70

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ದ್ವಿತೀಯೋಽಧ್ಯಾಯಃ

---

ಶ್ರೇಷ್ಠನೂ ವರದನೂ ವರೇಣ್ಯನೂ ಆದ ವಿಷ್ಣುವೇ ಬ್ರಹ್ಮಾದಿರೂಪಗಳಿಂದ ತನ್ನನ್ನು ತಾನೇ ಸೃಷ್ಟಿಸಿಕೊಂಡು ಸೃಷ್ಟಿಕರ್ತನಾಗುತ್ತಾನೆ. ತಾನೇ ತನ್ನನ್ನು ಪಾಲಿಸಿಕೊಳ್ಳುತ್ತಾನೆ. ತಾನೇ ಭಕ್ಷಿಸುತ್ತಾನೆ—ಉಪಸಂಹೃತನಾಗುತ್ತಾನೆ (70).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಎರಡನೆಯ ಅಧ್ಯಾಯ ಮುಗಿಯಿತು.



## ತೃತೀಯೋಽಧ್ಯಾಯಃ

*ಶ್ರೀ ಮೈತ್ರೇಯ ಉವಾಚ:*

**ನಿರ್ಗುಣಸ್ಯಾಪ್ರಮೇಯಸ್ಯ ಶುದ್ಧಸ್ಯಾಪ್ಯಮಲಾತ್ಮನಃ।**
**ಕಥಂ ಸರ್ಗಾದಿಕರ್ತೃತ್ವಂ ಬ್ರಹ್ಮಣೋಽಭ್ಯುಪಗಮ್ಯತೇ॥** 1

*ಶ್ರೀ ಪರಾಶರ ಉವಾಚ:*

**ಶಕ್ತಯಃ ಸರ್ವಭಾವಾನಾಮಚಿಂತ್ಯಜ್ಞಾನಗೋಚರಾಃ।**
**ಯತೋಽತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವಶಕ್ತಯಃ॥** 2

**ಭವಂತಿ ತಪತಾಂ ಶ್ರೇಷ್ಠ ಪಾವಕಸ್ಯ ಯಥೋಷ್ಣತಾ।**
**ತನ್ನಿಬೋಧ ಯಥಾ ಸರ್ಗೇ ಭಗವಾನ್ ಸಂಪ್ರವರ್ತತೇ॥** 3

---

## ಅಧ್ಯಾಯ 3

ಬ್ರಹ್ಮಾದಿಗಳ ಆಯುಸ್ಸು; ಕಾಲದ ಸ್ವರೂಪ ಮತ್ತು ವಿಭಜನೆ

ಆಗ ಮೈತ್ರೇಯರು ಕೇಳಿದರು: "ಭಗವನ್, ನಿರ್ಗುಣವೂ ಅಪ್ರಮೇಯವೂ ಶುದ್ಧವೂ ನಿರ್ಮಲವೂ ಆದ ಬ್ರಹ್ಮವು ಸೃಷ್ಟಿಸ್ಥಿತಿಲಯಗಳ ಕರ್ತೃವೆಂದು ಹೇಗೆ ಒಪ್ಪಿಕೊಳ್ಳಲಾಗುತ್ತದೆ?" (1). ಪರಾಶರರು ಹೇಳಿದರು: ಮುನಿಶ್ರೇಷ್ಠ—ಮೈತ್ರೇಯ, ಸಮಸ್ತ ಪದಾರ್ಥಗಳ ಶಕ್ತಿಗಳೂ ಚಿಂತನ ಮತ್ತು ಜ್ಞಾನಗಳಿಗೆ ಗೋಚರವಾಗತಕ್ಕವಲ್ಲ. ಹಾಗೆಯೇ ಬ್ರಹ್ಮ ದಲ್ಲಿರುವ ಸರ್ಗಾದಿನಿರ್ಮಾಣ ಶಕ್ತಿಗಳೂ ಗೋಚರವಾಗುವುದಿಲ್ಲ. ಅದು ಅಗ್ನಿಯಲ್ಲಿರುವ ಉಷ್ಣತಾಶಕ್ತಿಯ ಹಾಗೆ. ಆದ್ದರಿಂದ ಭಗವಂತನು ಸೃಷ್ಟಿಯ ರಚನೆಯನ್ನು ಮಾಡಲು ಹೇಗೆ ಪ್ರವೃತ್ತನಾಗುತ್ತಾನೆಂಬುದನ್ನು ತಿಳಿದುಕೊ* (2-3). ನಾರಾಯಣ ಎಂಬ ಹೆಸರಿನ ಆ ಭಗವಂತನೇ ಲೋಕಪಿತಾ

---

* ಮೈತ್ರೇಯರ ಪ್ರಶ್ನೆಗೆ ಸರಿಯಾದ ಉತ್ತರ ಸಿಗಲಿಲ್ಲವೆಂದು ಕಾಣುತ್ತದೆ. ಅಂಚಿತ್ಯವೂ ಅಜ್ಞೇಯವೂ ಆದ ವಿಷಯವನ್ನು ಹೇಳಲಾಗುವುದಿಲ್ಲ—ಎಂದು ಹೇಳಿ ದಂತಾಯಿತು.

**ನಾರಾಯಣಾಖ್ಯೋ ಭಗವಾನ್ ಬ್ರಹ್ಮಾ ಲೋಕಪಿತಾಮಹಃ।**
**ಉತ್ಪನ್ನಃ ಪ್ರೋಚ್ಯತೇ ವಿದ್ವನ್ನಿತ್ಯ ಏವೋಪಚಾರತಃ॥ 4**

**ನಿಜೇನ ತಸ್ಯ ಮಾನೇನ ಆಯುರ್ವರ್ಷಶತಂ ಸ್ಮೃತಮ್।**
**ತತ್ಪರಾಖ್ಯಂ ತದರ್ಧಂ ಚ ಪರಾರ್ಧಮಭಿಧೀಯತೇ॥ 5**

**ಕಾಲಸ್ವರೂಪಂ ವಿಷ್ಣೋಶ್ಚ ಯನ್ಮಯೋಕ್ತಂ ತವಾನಘ।**
**ತೇನ ತಸ್ಯ ನಿಬೋಧ ತ್ವಂ ಪರಿಮಾಣೋಪಪಾದನಮ್॥ 6**

**ಅನ್ಯೇಷಾಂ ಚೈವ ಜಂತೂನಾಂ ಚರಾಣಾಮಚರಾಶ್ಚಯೇ।**
**ಭೂಭೂಭೃತ್ಸಾಗರಾದೀನಾಮಶೇಷಾಣಾಂ ಚ ಸತ್ತಮ॥ 7**

**ಕಾಷ್ಠಾ ಪಂಚದಶಾಖ್ಯಾತಾ ನಿಮೇಷಾ ಮುನಿಸತ್ತಮ।**
**ಕಾಷ್ಠಾತ್ರಿಂಶತ್ಕಲಾ ತ್ರಿಂಶತ್ಕಲಾ ಮೌಹೂರ್ತಿಕೋವಿಧಿಃ॥ 8**

---

ಮಹನಾದ ಬ್ರಹ್ಮನಾಗಿದ್ದಾನೆ. ಬ್ರಹ್ಮನು (ಕಮಲದಲ್ಲಿ) ಉತ್ಪನ್ನನಾದನೆಂದು ಹೇಳುವುದು ಔಪಚಾರಿಕವಾಗಿ. ಆತನು ನಿತ್ಯನಾದವನು (4). ಬ್ರಹ್ಮನಿಗೆ ತನ್ನ ಬ್ರಹ್ಮಮಾನದಿಂದ ಆಯುಸ್ಸು ನೂರು ವರ್ಷ. (ಇದೂ ಔಪಚಾರಿಕ. ನಾರಾಯಣನು ಬ್ರಹ್ಮನಾಗಿ ಕಾರ್ಯಪ್ರವೃತ್ತನಾಗುವುದು ನೂರು ವರ್ಷ ಎಂದು ತಾತ್ಪರ್ಯ). ಬ್ರಹ್ಮನ ಈ ನೂರು ವರ್ಷಗಳಿಗೆ ಪರವೆಂದೂ ಅದರ ಅರ್ಧಪ್ರಮಾಣಕ್ಕೆ ಪರಾರ್ಧವೆಂದೂ ಹೆಸರು (5). ದೋಷರಹಿತ—ಮೈತ್ರೇಯ, ಕಾಲವೆಂಬುದು ವಿಷ್ಣುವಿನ ಒಂದು ರೂಪವೆಂದು ನಿನಗೆ ನಾನು ಹಿಂದೆ ಹೇಳಿದ್ದೇನೆ. ಈಗ ಆ ಕಾಲದಿಂದ ಬ್ರಹ್ಮನ ಮತ್ತು ಪ್ರಾಣಿಗಳು, ಪರ್ವತ ಸಮುದ್ರಾದಿಗಳೆಂಬ ಸಕಲ ಸ್ಥಾವರಜಂಗಮಗಳ ಆಯುಸ್ಸನ್ನು ಅಳೆಯುವ ವಿಧಾನವನ್ನು ಹೇಳುತ್ತೇನೆ, ಕೇಳು (6-7). ಹದಿನೈದು ನಿಮಿಷಗಳಿಗೆ ಒಂದು ಕಾಷ್ಠಾ. ಮೂವತ್ತು ಕಾಷ್ಠಗಳಿಗೆ ಒಂದು ಕಲಾ. ಮೂವತ್ತು ಕಲೆಗಳಿಗೆ ಒಂದು ಮುಹೂರ್ತ. ಅಷ್ಟೇ (ಮೂವತ್ತು) ಮುಹೂರ್ತಗಳಿಗೆ ಮನುಷ್ಯರ ಒಂದು ಅಹೋರಾತ್ರಿ* (ದಿನ). ಅಷ್ಟೇ (ಮೂವತ್ತು) ಅಹೋರಾತ್ರಗಳು ಸೇರಿದರೆ ಒಂದು ಮಾಸ. ಈ ಮಾಸವು

* ಕಾಲವಿಭಾಗದಲ್ಲಿ ಮತಭೇದಗಳುಂಟು. ಅನುಬಂಧವನ್ನು ನೋಡಿ—1.

**ತಾವತ್ಸಂಖ್ಯೈರಹೋರಾತ್ರಂ ಮುಹೂರ್ತೈರ್ಮಾನುಷಂ ಸ್ಮೃತಮ್।**
**ಅಹೋರಾತ್ರಾಣಿ ತಾವಂತಿ ಮಾಸಃ ಪಕ್ಷದ್ವಯಾತ್ಮಕಃ॥ 9**

**ತೈಃ ಷಡ್ಭಿರಯನಂ ವರ್ಷಂ ದ್ವೇಽಯನೇ ದಕ್ಷಿಣೋತ್ತರೇ।**
**ಅಯನಂ ದಕ್ಷಿಣಂ ರಾತ್ರಿರ್ದೇವಾನಾಮುತ್ತರಂ ದಿನಮ್॥ 10**

**ದಿವ್ಯೈರ್ವರ್ಷಸಹಸ್ರೈಸ್ತು ಕೃತತ್ರೇತಾದಿಸಂಜ್ಞಿತಮ್।**
**ಚತುರ್ಯುಗಂ ದ್ವಾದಶಭಿಸ್ತದ್ವಿಭಾಗಂ ನಿಬೋಧ ಮೇ॥ 11**

**ಚತ್ವಾರಿ ತ್ರೀಣಿ ದ್ವೇ ಚೈಕಂ ಕೃತಾದಿಷು ಯಥಾಕ್ರಮಮ್।**
**ದಿವ್ಯಾಬ್ದಾನಾಂ ಸಹಸ್ರಾಣಿ ಯುಗೇಷ್ವಾಹುಃ ಪುರಾವಿದಃ॥ 12**

**ತತ್ಪ್ರಮಾಣೈಃ ಶತೈಃ ಸಂಧ್ಯಾ ಪೂರ್ವಾ ತತ್ರಾಭಿಧೀಯತೇ।**
**ಸಂಧ್ಯಾಂಶಶ್ಚೈವ ತತ್ತುಲ್ಯೋ ಯುಗಸ್ಯಾನಂತರೋ ಹಿ ಸಃ॥ 13**

---

ಎರಡು ಪಕ್ಷಗಳಿಂದ ಕೂಡಿದೆ. ಒಂದು ಪಕ್ಷಕ್ಕೆ ಹದಿನೈದು ದಿನ (8-9). ಆರು ಮಾಸಗಳಿಗೆ ಒಂದು ಅಯನ. ಇದರಲ್ಲಿ ದಕ್ಷಿಣಾಯನ, ಉತ್ತರಾಯಣಗಳೆಂದು ಎರಡು ಭೇದ. ಈ ಎರಡು ಅಯನಗಳೂ ಸೇರಿ (ಹನ್ನೆರಡು ಮಾಸಗಳಿಗೆ) ಒಂದು ವರ್ಷ. ದಕ್ಷಿಣಾಯನವು ದೇವತೆಗಳಿಗೆ ರಾತ್ರಿಯೆಂದೂ ಉತ್ತರಾಯಣವು ಹಗಲೆಂದೂ ಸ್ಮೃತವಾಗಿದೆ (10). (ಮಾನವರ ಒಂದು ವರ್ಷ ದೇವತೆಗಳಿಗೆ ಒಂದು ದಿನ. ಮಾನವರ ಮುನ್ನೂರು ಅರವತ್ತು ವರ್ಷಗಳು ದೇವತೆಗಳಿಗೆ ಒಂದು ವರ್ಷ. ಇದಕ್ಕೆ ದಿವ್ಯವರ್ಷ ಎಂದು ಹೆಸರು.) ಇಂತಹ ಹನ್ನೆರಡು ಸಾವಿರ ದಿವ್ಯವರ್ಷ ಗಳಿಂದ ಕೃತ, ತ್ರೇತಾ, ದ್ವಾಪರ, ಕಲಿ ಎಂಬ ಚತುರ್ಯುಗಗಳಾಗುತ್ತವೆ. ಅವುಗಳ ವಿಭಾಗವನ್ನು ಹೇಳುತ್ತೇನೆ, ಕೇಳು (11). ಈ ಯುಗಗಳ ಕಾಲ ಪರಿಮಾಣ ಹೀಗಿದೆ: ಕೃತಯುಗಕ್ಕೆ ನಾಲ್ಕು ಸಾವಿರ ದಿವ್ಯವರ್ಷಗಳು; ತ್ರೇತಾಯುಗಕ್ಕೆ ಮೂರು ಸಾವಿರ; ದ್ವಾಪರ ಯುಗಕ್ಕೆ ಎರಡು ಸಾವಿರ; ಕಲಿಯುಗಕ್ಕೆ ಒಂದು ಸಾವಿರ. (ಹೀಗೆ ಹತ್ತು ಸಾವಿರ ದಿವ್ಯವರ್ಷ ಗಳಾದವು) (12). ಈ ಪ್ರತಿಯೊಂದು ಯುಗದ ಹಿಂದೆ ಮತ್ತು ಮುಂದೆ ಕಾಲವಿಶೇಷವಿರುತ್ತದೆ. ಹಿಂದಿರುವ ಕಾಲಕ್ಕೆ ಸಂಧ್ಯೆಯೆಂದೂ ಮುಂದಿರುವ ಕಾಲಕ್ಕೆ ಸಂಧ್ಯಾಂಶವೆಂದೂ ಹೆಸರು. ಈ ಎರಡರಲ್ಲಿ ಪ್ರತಿಯೊಂದರ

**ಸಂಧ್ಯಾ ಸಂಧ್ಯಾಂಶಯೋರಂತರ್ಯಃ ಕಾಲೋ ಮುನಿಸತ್ತಮ।**
**ಯುಗಾಖ್ಯಃ ಸ ತು ವಿಜ್ಞೇಯಃ ಕೃತತ್ರೇತಾದಿಸಂಜ್ಞಿತಃ॥ 14**

**ಕೃತಂ ತ್ರೇತಾ ದ್ವಾಪರಶ್ಚ ಕಲಿಶ್ಚೈವ ಚತುರ್ಯುಗಮ್।**
**ಪ್ರೋಚ್ಯತೇ ತತ್ಸಹಸ್ರಂ ಚ ಬ್ರಹ್ಮಣೋ ದಿವಸಂ ಮುನೇ॥ 15**

**ಬ್ರಹ್ಮಣೋ ದಿವಸೇ ಬ್ರಹ್ಮನ್ ಮನವಸ್ತು ಚತುರ್ದಶ।**
**ಭವಂತಿ ಪರಿಮಾಣಂ ಚ ತೇಷಾಂ ಕಾಲಕೃತಂ ಶೃಣು॥ 16**

**ಸಪ್ತರ್ಷಯಃ ಸುರಾ ಶಕ್ರೋ ಮನುಸ್ತತ್ಸೂನವೋ ನೃಪಾಃ।**
**ಏಕಕಾಲೇ ಹಿ ಸೃಜ್ಯಂತೇ ಸಂಹ್ರಿಯಂತೇ ಚ ಪೂರ್ವವತ್॥ 17**

---

ಪ್ರಮಾಣವೂ ಆಯಾ ಯುಗಕ್ಕೆ ಹೇಳಿದ ಸಂಖ್ಯೆಯ ನೂರು ದಿವ್ಯವರ್ಷಗಳು* (13). ಸಂಧ್ಯಾ-ಸಂಧ್ಯಾಂಶಗಳ ನಡುವೆ ಯಾವ ಕಾಲವುಂಟೋ ಅದನ್ನು ಕೃತ, ತ್ರೇತಾದಿಯುಗವೆಂದು ತಿಳಿಯಬೇಕು. ಎಲೈ ಮುನಿಯೇ, ಕೃತ ತ್ರೇತಾ ದ್ವಾಪರ ಕಲಿ—ಇವು ಸೇರಿ ಒಂದು ಚತುರ್ಯುಗವಾಗುತ್ತದೆ. ಇಂತಹ ಸಾವಿರ ಚತುರ್ಯುಗಗಳಿಗೆ ಬ್ರಹ್ಮನ ಒಂದು ದಿನ (ಹಗಲು) ವಾಗುತ್ತದೆ (14-15). ಬ್ರಹ್ಮನ ಈ ಒಂದು ದಿನದಲ್ಲಿ ಹದಿನಾಲ್ಕು ಮನುಗಳು ಆಗುತ್ತಾರೆ. ಅವರ ಕಾಲಕೃತವಾದ ಪರಿಮಾಣವನ್ನು ಕೇಳು: ಸಪ್ತರ್ಷಿಗಳು, ದೇವತೆಗಳು, ಇಂದ್ರ, ಮನು, ಮನುವಿನ ಮಕ್ಕಳಾದ ರಾಜರು—ಇವರು ಪೂರ್ವಕಲ್ಪಾನುಸಾರವಾಗಿ ಏಕಕಾಲದಲ್ಲಿ ಸಂಭವಿಸುತ್ತಾರೆ. ಏಕಕಾಲದಲ್ಲಿ ಅವರ ಸಮಾಪ್ತಿಯಾಗುತ್ತದೆ§ (16-17). ಇಪ್ಪತ್ತೇಳು

---

| | | | | | |
|---|---|---|---|---|---|
| * ಕೃತಯುಗ | 4000 | ದಿವ್ಯವರ್ಷ | ದ್ವಾಪರಯುಗ | 2000 | ದಿವ್ಯವರ್ಷ |
| ಸಂಧ್ಯಾ | 400 | ದಿವ್ಯವರ್ಷ | ಸಂಧ್ಯಾ | 200 | ದಿವ್ಯವರ್ಷ |
| ಸಂಧ್ಯಾಂಶ | 400 | ದಿವ್ಯವರ್ಷ | ಸಂಧ್ಯಾಂಶ | 200 | ದಿವ್ಯವರ್ಷ |
| ತ್ರೇತಾಯುಗ | 3000 | ದಿವ್ಯವರ್ಷ | ಕಲಿಯುಗ | 1000 | ದಿವ್ಯವರ್ಷ |
| ಸಂಧ್ಯಾ | 300 | ದಿವ್ಯವರ್ಷ | ಸಂಧ್ಯಾ | 100 | ದಿವ್ಯವರ್ಷ |
| ಸಂಧ್ಯಾಂಶ | 300 | ದಿವ್ಯ ವರ್ಷ | ಸಂಧ್ಯಾಂಶ | 100 | ದಿವ್ಯವರ್ಷ |

ಎಲ್ಲಾ ಒಟ್ಟು 12000 ದಿವ್ಯವರ್ಷಗಳು.

§ ವಿವರಗಳಿಗೆ 3ನೇ ಅಂಶದ 1-2 ಅಧ್ಯಾಯಗಳನ್ನು ನೋಡಿ.

**ಚತುರ್ಯುಗಾಣಾಂ ಸಂಖ್ಯಾತಾ ಸಾಧಿಕಾ ಹ್ಯೇಕಸಪ್ತತಿಃ।**
**ಮನ್ವಂತರಂ ಮನೋಃ ಕಾಲಃ ಸುರಾದೀನಾಂ ಚ ಸತ್ತಮ॥ 18**

**ಅಷ್ಟೌಶತಸಹಸ್ರಾಣಿ ದಿವ್ಯಯಾ ಸಂಖ್ಯಯಾ ಸ್ಮೃತಮ್।**
**ದ್ವಿಪಂಚಾಶತ್ತಥಾನ್ಯಾನಿ ಸಹಸ್ರಾಣ್ಯಧಿಕಾನಿ ತು॥ 19**

**ತ್ರಿಂಶತ್ಕೋಟ್ಯಸ್ತು ಸಂಪೂರ್ಣಾಃ ಸಂಖ್ಯಾತಾಃ ಸಂಖ್ಯಯಾ ದ್ವಿಜ।**
**ಸಪ್ತಷಷ್ಟಿಸ್ತಥಾನ್ಯಾನಿ ನಿಯುತಾನಿ ಮಹಾಮುನೇ॥ 20**

**ವಿಂಶತಿಸ್ತು ಸಹಸ್ರಾಣಿ ಕಾಲೋಽಯಮಧಿಕಂ ವಿನಾ।**
**ಮನ್ವಂತರಸ್ಯ ಸಂಖ್ಯೇಯಂ ಮಾನುಷೈರ್ವತ್ಸರೈರ್ದ್ವಿಜ॥ 21**

**ಚತುರ್ದಶಗುಣೋ ಹ್ಯೇಷ ಕಾಲೋ ಬ್ರಾಹ್ಮಮಹಃ ಸ್ಮೃತಮ್।**
**ಬ್ರಾಹ್ಮೋ ನೈಮಿತ್ತಿಕೋ ನಾಮ ತಸ್ಯಾಂತೇ ಪ್ರತಿಸಂಚರಃ॥ 22**

**ತದಾ ಹಿ ದಹ್ಯತೇ ಸರ್ವಂ ತ್ರೈಲೋಕ್ಯಂ ಭೂರ್ಭುವಾದಿಕಮ್।**
**ಜನಂ ಪ್ರಯಾಂತಿ ತಾಪಾರ್ತಾ ಮಹರ್ಲೋಕನಿವಾಸಿನಃ॥ 23**

---

ಚತುರ್ಯುಗಗಳೂ ಸ್ವಲ್ಪ ಅಧಿಕ ವರ್ಷಗಳೂ ಸೇರಿ ಒಂದು ಮನ್ವಂತರವಾಗುತ್ತದೆ. ಇದು ಒಬ್ಬ ಮನು ಮತ್ತು ದೇವಾದಿಗಳು ಇರುವ ಕಾಲ. ಒಂದು ಮನ್ವಂತರಕ್ಕೆ 852,000 ದಿವ್ಯವರ್ಷಗಳಾಗುತ್ತವೆ. ಮನುಷ್ಯರ ವರ್ಷಗಣನೆಯಿಂದ ಒಂದು ಮನ್ವಂತರಕ್ಕೆ 306,720,000 ವರ್ಷಗಳಾಗುತ್ತವೆ. ಇದರಲ್ಲಿ ಚಿಲ್ಲರೆಯಾಗಿರುವ ಅಧಿಕ ವರ್ಷಗಳು ಸೇರಿಲ್ಲ. (18-21). ಇದರ ಹದಿನಾಲ್ಕರಷ್ಟು ಕಾಲಕ್ಕೆ (ಹದಿನಾಲ್ಕು ಮನ್ವಂತರಗಳಿಗೆ) ಬ್ರಹ್ಮನ ಒಂದು ಹಗಲಾಗುತ್ತದೆ. ಈ ಹಗಲಿನ ಕಡೆಯಲ್ಲಿ ಪ್ರಳಯವಾಗುತ್ತದೆ. ಬ್ರಹ್ಮಸಂಬಂಧಿಯಾದ್ದರಿಂದ ಈ ಪ್ರಳಯಕ್ಕೆ ಬ್ರಾಹ್ಮ ಎಂದು ನೈಮಿತ್ತಿಕವಾದ ಹೆಸರು (22). ಆಗ ಭೂರ್ಲೋಕ, ಭುವರ್ಲೋಕ, ಸುವರ್ಲೋಕಗಳೆಂಬ ಲೋಕತ್ರಯವು ಸುಟ್ಟು ಹೋಗುತ್ತದೆ. ಮಹರ್ಲೋಕದಲ್ಲಿ ವಾಸಿಸುವ ಸಿದ್ಧಪುರುಷರು ತಾಪಾರ್ತರಾಗಿ ಜನಲೋಕಕ್ಕೆ ಹೊರಟು ಹೋಗುತ್ತಾರೆ (23). ತ್ರಿಲೋಕವೂ ಜಲಮಯವಾಗಲಾಗಿ ನಾರಾಯಣ ಸ್ವರೂಪನಾದ ಬ್ರಹ್ಮನು ಲೋಕತ್ರಯವನ್ನು ತಿಂದು ತೃಪ್ತನಾಗಿ ಶೇಷಶಯ್ಯೆ

**ಏಕಾರ್ಣವೇ ತು ತ್ರೈಲೋಕ್ಯೇ ಬ್ರಹ್ಮಾ ನಾರಾಯಣಾತ್ಮಕಃ।**
**ಭೋಗಿಶಯ್ಯಾಂ ಗತಃ ಶೇತೇ ತ್ರೈಲೋಕ್ಯಗ್ರಾಸಬೃಂಹಿತಃ॥** 24

**ಜನಸ್ಥೈರ್ಯೋಗಿಭಿರ್ದೇವಶ್ಚಿಂತ್ಯಮಾನೋಽಬ್ಜಸಂಭವಃ।**
**ತತ್ಪ್ರಮಾಣಾಂ ಹಿ ತಾಂ ರಾತ್ರಿಂ ತದಂತೇ ಸೃಜತೇ ಪುನಃ॥** 25

**ಏವಂ ತು ಬ್ರಹ್ಮಣೋ ವರ್ಷಮೇವಂ ವರ್ಷಶತಂ ಚ ಯತ್।**
**ಶತಂ ಹಿ ತಸ್ಯ ವರ್ಷಾಣಾಂ ಪರಮಾಯುರ್ಮಹಾತ್ಮನಃ॥** 26

**ಏಕಮಸ್ಯ ವ್ಯತೀತಂ ತು ಪರಾರ್ಧಂ ಬ್ರಹ್ಮಣೋಽನಘ।**
**ತಸ್ಯಾಂತೇಽಭೂನ್ಮಹಾಕಲ್ಪಃ ಪಾದ್ಮ ಇತ್ಯಭಿವಿಶ್ರುತಃ॥** 27

**ದ್ವಿತೀಯಸ್ಯ ಪರಾರ್ಧಸ್ಯ ವರ್ತಮಾನಸ್ಯ ವೈ ದ್ವಿಜ।**
**ವಾರಾಹ ಇತಿ ಕಲ್ಪೋಽಯಂ ಪ್ರಥಮಃ ಪರಿಕೀರ್ತಿತಃ॥** 28

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ತೃತೀಯೋಽಧ್ಯಾಯಃ

---

ಯಲ್ಲಿ ಪವಡಿಸುತ್ತಾನೆ. ಕಮಲಯೋನಿಯಾದ ಆ ಬ್ರಹ್ಮನನ್ನು ಜನಲೋಕದಲ್ಲಿರುವ ಯೋಗಿಗಳು ಧ್ಯಾನಿಸುತ್ತ ಇರುವರು. ಹಗಲಿನಷ್ಟೇ ಪ್ರಮಾಣದ ರಾತ್ರಿಯನ್ನು ಕಳೆದು ಬ್ರಹ್ಮನು ಮತ್ತೆ ಸೃಷ್ಟಿಕಾರ್ಯದಲ್ಲಿ ತೊಡಗುತ್ತಾನೆ (24-25). ಹೀಗೆ (ಪಕ್ಷಮಾಸಾದಿಗಳ ಗಣನೆಯಂತೆ) ಬ್ರಹ್ಮನಿಗೆ ಒಂದು ವರ್ಷವೂ ಹಾಗೆಯೇ ನೂರು ವರ್ಷಗಳೂ ಕಳೆಯುತ್ತವೆ. ಮಹಾತ್ಮನಾದ ಬ್ರಹ್ಮನಿಗೆ ನೂರು ವರ್ಷ ಪರಮಾಯುಸ್ಸಷ್ಟೆ. ಈ ಪ್ರಕಾರ ಬ್ರಹ್ಮನ ಒಂದು ಪರಾರ್ಧ (50 ವರ್ಷ) ಕಳೆದಿದೆ. ಹೀಗೆ ಪಾದ್ಮವೆಂಬ ಒಂದು ಮಹಾಕಲ್ಪ* ಮುಗಿಯಿತು (26-27). ಹೇ ದ್ವಿಜ—ಮೈತ್ರೇಯ, ಈಗ ನಡೆಯುತ್ತಿರುವುದು ದ್ವಿತೀಯ ಪರಾರ್ಧ. ಇದರಲ್ಲಿ ಮೊದಲನೆಯದಾದ ವಾರಾಹಕಲ್ಪ ನಡೆಯುತ್ತಿದೆ (28).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಮೂರನೆಯ ಅಧ್ಯಾಯ ಮುಗಿಯಿತು.



*ಬ್ರಹ್ಮನ ಒಂದು ದಿನಕ್ಕೆ ಕಲ್ಪವೆಂದೂ ಐವತ್ತುವರ್ಷಗಳಿಗೆ ಮಹಾಕಲ್ಪವೆಂದೂ ಹೆಸರು.

**ಚತುರ್ಥೋಽಧ್ಯಾಯಃ**

*ಶ್ರೀ ಮೈತ್ರೇಯ ಉವಾಚ:*

**ಬ್ರಹ್ಮಾ ನಾರಾಯಣಾಖ್ಯೋಽಸೌ ಕಲ್ಪಾದೌ ಭಗವಾನ್ಯಥಾ।**
**ಸಸರ್ಜ ಸರ್ವಭೂತಾನಿ ತದಾಚಕ್ಷ್ವ ಮಹಾಮುನೇ॥** 1

*ಶ್ರೀಪರಾಶರ ಉವಾಚ:*

**ಪ್ರಜಾಃ ಸಸರ್ಜ ಭಗವಾನ್ ಬ್ರಹ್ಮಾ ನಾರಾಯಣಾತ್ಮಕಃ।**
**ಪ್ರಜಾಪತಿಪತಿರ್ದೇವೋ ಯಥಾ ತನ್ಮೇ ನಿಶಾಮಯ॥** 2

**ಅತೀತಕಲ್ಪಾವಸಾನೇ ನಿಶಾಸುಪ್ತೋತ್ಥಿತಃ ಪ್ರಭುಃ।**
**ಸತ್ತ್ವೋದ್ರಿಕ್ತಸ್ತಥಾ ಬ್ರಹ್ಮಾ ಶೂನ್ಯಂ ಲೋಕಮವೈಕ್ಷತ॥** 3

**ನಾರಾಯಣಃ ಪರೋಽಚಿಂತ್ಯಃ ಪರೇಷಾಮಪಿ ಸ ಪ್ರಭುಃ।**
**ಬ್ರಹ್ಮಸ್ವರೂಪೀ ಭಗವಾನನಾದಿಃ ಸರ್ವಸಂಭವಃ॥** 4

---

## ಅಧ್ಯಾಯ 4

ಭೂದೇವಿಯಿಂದ ವಿಷ್ಣುವಿನ ಸ್ತುತಿ. ಆತನು ವರಾಹರೂಪದಿಂದ ಭೂಮಿಯನ್ನೆತ್ತುವುದು. ಬ್ರಹ್ಮನಿಂದ ಸೃಷ್ಟಿಯ ಪ್ರಾರಂಭ.

ಮೈತ್ರೇಯರು ಹೀಗೆಂದರು: "ಮಹರ್ಷಿಗಳೇ, ನಾರಾಯಣನೆಂಬ ಭಗವಾನ್ ಬ್ರಹ್ಮದೇವನು ಕಲ್ಪಾದಿಯಲ್ಲಿ ಸಕಲ ಭೂತಗಳನ್ನೂ ಹೇಗೆ ಸೃಜಿಸಿದನೆಂಬುದನ್ನು ಹೇಳಿರಿ" (1). ಪರಾಶರ ಮುನಿಗಳು ಹೇಳಿದರು: ಪ್ರಜಾಪತಿಗಳಿಗೆ ಸ್ವಾಮಿಯೂ ನಾರಾಯಣಸ್ವರೂಪನೂ ಆದ ಭಗವಾನ್ ಬ್ರಹ್ಮದೇವನು ಪ್ರಜೆಗಳನ್ನು ಹೇಗೆ ಸೃಜಿಸಿದನೆಂಬುದನ್ನು ಹೇಳುತ್ತೇನೆ ಕೇಳು (2). ಹಿಂದಿನ ಕಲ್ಪದ ಕಡೆಯಲ್ಲಿ ಸತ್ತ್ವಗುಣಯುಕ್ತನೂ ಪ್ರಭುವೂ ಆದ ಬ್ರಹ್ಮದೇವನು ರಾತ್ರಿಯ ನಿದ್ರೆಯಿಂದೆದ್ದು ಲೋಕವು ಶೂನ್ಯವಾಗಿರುವುದನ್ನು ಕಂಡನು (3). ಬ್ರಹ್ಮಸ್ವರೂಪನಾದ ಭಗವಾನ್ ನಾರಾಯಣನು ಸರ್ವೋತ್ತಮನಾದವನು; ಅಚಿಂತ್ಯಮಹಿಮ; ಶ್ರೇಷ್ಠರಾದ ದೇವಾದಿ

ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ।
ಬ್ರಹ್ಮಸ್ವರೂಪಿಣಂ ದೇವಂ ಜಗತಃ ಪ್ರಭವಾಪ್ಯಯಮ್॥ 5

ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ।
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ॥ 6

ತೋಯಾಂತಃಸ್ಥಾಂ ಮಹೀಂ ಜ್ಞಾತ್ವಾ ಜಗತ್ಯೇಕಾರ್ಣವೀಕೃತೇ।
ಅನುಮಾನಾತ್ತದುದ್ಧಾರಂ ಕರ್ತುಕಾಮಃ ಪ್ರಜಾಪತಿಃ॥ 7

ಅಕರೋತ್ ಸ್ವತನೂಮನ್ಯಾಂ ಕಲ್ಪಾದಿಷು ಯಥಾ ಪುರಾ।
ಮತ್ಸ್ಯಕೂರ್ಮಾದಿಕಾಂ ತದ್ವದ್ ವಾರಾಹಂ ವಪುರಾಸ್ಥಿತಃ॥ 8

ವೇದಯಜ್ಞಮಯಂ ರೂಪಮಶೇಷಜಗತಃ ಸ್ಥಿತೌ।
ಸ್ಥಿತಃಸ್ಥಿರಾತ್ಮಾ ಸರ್ವಾತ್ಮಾ ಪರಮಾತ್ಮಾ ಪ್ರಜಾಪತಿಃ॥ 9

---

ಗಳಿಗೂ ಪ್ರಭು; ಅನಾದಿ; ಸಮಸ್ತ ವಸ್ತುಗಳ ಉತ್ಪತ್ತಿಗೆ ಕಾರಣ (4). ಬ್ರಹ್ಮ ರೂಪನೂ ಜಗತ್ತಿನ ಉತ್ಪತ್ತಿ ನಾಶಗಳಿಗೆ ಕಾರಣನೂ ಆದ ನಾರಾಯಣನ ವಿಷಯವಾಗಿ ಮುಂದಿನ ಶ್ಲೋಕವನ್ನು (ಮನು ಮೊದಲಾದ ಸ್ಮೃತಿ ಕಾರರು) ಹೇಳುತ್ತಾರೆ: (5). "ಜಲಕ್ಕೆ ನಾರ ಎಂದು ಹೆಸರು. ಏಕೆಂದರೆ ಅದು ನರನಿಂದ (ನಾರಾಯಣನಿಂದ) ಜನಿಸಿದ್ದು. ಈ 'ನಾರ'ವು ಹಿಂದೆ (ಪ್ರಳಯಕಾಲದಲ್ಲಿ) ಅವನಿಗೆ 'ಅಯನ' (ನಿವಾಸಸ್ಥಾನ) ವಾದ್ದರಿಂದ ಆತನು 'ನಾರಾಯಣ' ಎಂದು ಸ್ಮೃತನಾಗಿದ್ದಾನೆ" (6). ಜಗತ್ತೆಲ್ಲವೂ ಜಲಮಯವಾಗಿರುವುದನ್ನು ಕಂಡು, ಪೃಥಿವಿಯು ನೀರಿನಲ್ಲಿ ಮುಳುಗಿದೆ ಯೆಂದು ಊಹಿಸಿ ತಿಳಿದು, ಆ ಪ್ರಜಾಪತಿಯು ಪೃಥಿವಿಯನ್ನೆತ್ತಬೇಕೆಂದು ಬಯಸಿದನು. ಹಿಂದೆ ಕಲ್ಪಾದಿಗಳಲ್ಲಿ ಹೇಗೆ ಮತ್ಸ್ಯಕೂರ್ಮಾದಿಗಳ ಶರೀರ ವನ್ನು ಧರಿಸಿದ್ದನೋ ಹಾಗೆ ಈ ಸಲ ವರಾಹರೂಪವನ್ನು ಧರಿಸಿದನು (7-8). ಆ ವರಾಹ ರೂಪವು ದೇವಯಜ್ಞಮಯವಾದದ್ದು. ಎಲ್ಲ ಜಗತ್ತಿನ ಸ್ಥಿತಿಯಲ್ಲಿ ತತ್ಪರನೂ ಸ್ಥಿರನೂ ಸರ್ವಾತ್ಮನೂ ಪ್ರಜಾಪತಿಯೂ ಸ್ವಯಮಾ ಧಾರನೂ ಆದ ಪರಮಾತ್ಮನು ಪೃಥಿವಿಯನ್ನು ಎತ್ತಿತರಬೇಕೆಂದು

**ಜನಲೋಕಗತೈಸ್ಸಿದ್ಧೈಸ್ಸನಕಾದ್ಯೈರಭಿಷ್ಟುತಃ ।**
**ಪ್ರವಿವೇಶ ತದಾ ತೋಯಮಾತ್ಮಾಧಾರೋ ಧರಾಧರಃ ॥ 10**

**ನಿರೀಕ್ಷ್ಯಂ ತಂ ತದಾ ದೇವೀ ಪಾತಾಲತಲಮಾಗತಮ್ ।**
**ತುಷ್ಟಾವ ಪ್ರಣತಾ ಭೂತ್ವಾ ಭಕ್ತಿನಮ್ರಾ ವಸುಂಧರಾ ॥ 11**

*ಪೃಥಿವ್ಯುವಾಚ:*

**ನಮಸ್ತೇ ಪುಂಡರೀಕಾಕ್ಷ ಶಂಖಚಕ್ರಗದಾಧರ ।**
**ಮಾಮುದ್ಧರಾಸ್ಮಾದದ್ಯ ತ್ವಂ ತ್ವತ್ತೋಽಹಂ ಪೂರ್ವಮುತ್ಥಿತಾ ॥ 12**

**ತ್ವಯಾಹಮುದ್ಧೃತಾ ಪೂರ್ವಂ ತ್ವನ್ಮಯಾಹಂ ಜನಾರ್ದನ ।**
**ತಥಾನ್ಯಾನಿ ಚ ಭೂತಾನಿ ಗಗನಾದೀನ್ಯಶೇಷತಃ ॥ 13**

**ನಮಸ್ತೇ ಪರಮಾತ್ಮಾತ್ಮನ್ ಪುರುಷಾತ್ಮನ್ನಮೋಽಸ್ತು ತೇ ।**
**ಪ್ರಧಾನವ್ಯಕ್ತಭೂತಾಯ ಕಾಲಭೂತಾಯ ತೇ ನಮಃ ॥ 14**

---

ಉದ್ದೇಶಿಸಿ, ಜನಲೋಕದಲ್ಲಿದ್ದ ಸನಕಾದಿಸಿದ್ಧಪುರುಷರಿಂದ ಸ್ತುತಿಸಲ್ಪಡುತ್ತ, ನೀರಿನೊಳಗೆ ಪ್ರವೇಶಿಸಿದನು (9-10). ಆಗ ಪಾತಾಳಕ್ಕೆ ಬಂದ ಆತನನ್ನು ನೋಡಿ ಭೂದೇವಿಯು ನಮಸ್ಕರಿಸಿ, ಭಕ್ತಿನಮ್ರಳಾಗಿ ಹೀಗೆ ಸ್ತುತಿಸಿದಳು: "ಹೇ ಪುಂಡರೀಕಾಕ್ಷ, ಶಂಖಚಕ್ರಗದಾಧರ, ನನ್ನನ್ನು ಈ ನೀರಿನಿಂದ ಮೇಲೆತ್ತು. ಹಿಂದಿನ ಕಲ್ಪದಲ್ಲಿ ನಾನು ನಿನ್ನಿಂದಲೇ ಮೇಲೆ ಬಂದಿದ್ದೆನು (11-12). ಜನಾರ್ದನ, ಹಿಂದೆ ನೀನೇ ನನ್ನನ್ನು ಮೇಲೆತ್ತಿರುವೆ. ನಾನು ನಿನ್ನಿಂದ ಆದವಳು—ತ್ವನ್ಮಯಳು.* ನನ್ನಂತೆಯೇ ಆಕಾಶಾದಿ ಸಮಸ್ತಭೂತಗಳು ಸಹ. ಹೇ ಪರಮಾತ್ಮಸ್ವರೂಪನೆ, ನಿನಗೆ ನಮಸ್ಕಾರ. ಆತ್ಮರಿಗೆ ಅಂತರಾತ್ಮನೆ, ನಮಸ್ಕಾರ. ಪ್ರಧಾನವಾದ ಕಾರಣವೂ ವ್ಯಕ್ತವಾದ ಕಾರ್ಯವೂ ಆದ ನಿನಗೆ ನಮಸ್ಕಾರ. ಕಾಲಸ್ವರೂಪನಾದ ನಿನಗೆ ನಮೋಽಸ್ತು (13-14). ಸಕಲ ಪದಾರ್ಥಗಳಿಗೂ ನೀನು ಕರ್ತ, ಪಾಲಕ, ಸಂಹಾರಕ. ಓ ಸ್ವಾಮಿ, ಸೃಷ್ಟಿ ಸ್ಥಿತಿ ಲಯಗಳಲ್ಲಿ ನೀನೇ ಬ್ರಹ್ಮ-ವಿಷ್ಣು-

* ನೀನು ನನಗೆ ಉಪಾದಾನಕಾರಣ.

**ತ್ವಂ ಕರ್ತಾ ಸರ್ವಭೂತಾನಾಂ ತ್ವಂ ಪಾತಾ ತ್ವಂ ವಿನಾಶಕೃತ್।**
**ಸರ್ಗಾದಿಷು ಪ್ರಭೋ ಬ್ರಹ್ಮವಿಷ್ಣುರುದ್ರಾತ್ಮರೂಪಧೃಕ್॥ 15**

**ಸಂಭಕ್ಷಯಿತ್ವಾ ಸಕಲಂ ಜಗತ್ಯೇಕಾರ್ಣವೀಕೃತೇ।**
**ಶೇಷೇ ತ್ವಮೇವ ಗೋವಿಂದ ಚಿಂತ್ಯಮಾನೋ ಮನೀಷಿಭಿಃ॥ 16**

**ಭವತೋ ಯತ್ಪರಂ ತತ್ತ್ವಂ ತನ್ನ ಜಾನಾತಿ ಕಶ್ಚನ।**
**ಅವತಾರೇಷು ಯದ್ರೂಪಂ ತದರ್ಚಂತಿ ದಿವೌಕಸಃ॥ 17**

**ತ್ವಾಮಾರಾಧ್ಯ ಪರಂ ಬ್ರಹ್ಮ ಯಾತಾ ಮುಕ್ತಿಂ ಮುಮುಕ್ಷವಃ।**
**ವಾಸುದೇವಮನಾರಾಧ್ಯ ಕೋ ಮೋಕ್ಷಂ ಸಮವಾಪ್ಸ್ಯತಿ॥ 18**

**ಯತ್ಕಿಂಚಿನ್ಮನಸಾ ಗ್ರಾಹ್ಯಂ ಯದ್‌ಗ್ರಾಹ್ಯಂ ಚಕ್ಷುರಾದಿಭಿಃ।**
**ಬುದ್ಧ್ಯಾ ಚ ಯತ್ಪರಿಚ್ಛೇದ್ಯಂ ತದ್ರೂಪಮಖಿಲಂ ತವ॥ 19**

**ತ್ವನ್ಮಯಾಹಂ ತ್ವದಾಧಾರಾ ತ್ವತ್ಸೃಷ್ಟಾ ತ್ವತ್ಸಮಾಶ್ರಯಾ।**
**ಮಾಧವೀಮಿತಿ ಲೋಕೋಽಯಮಭಿಧತ್ತೇ ತತೋ ಹಿ ಮಾಮ್॥**

---

ರುದ್ರರ ರೂಪವನ್ನು ಧರಿಸುತ್ತೀಯೆ. (ಪ್ರಳಯಕಾಲದಲ್ಲಿ) ಜಗತ್ತನ್ನು ನುಂಗಿ ನೊಣೆದು, ಎಲ್ಲವೂ ಸಲಿಲಮಯವಾಗಲಾಗಿ, ಹೇ ಗೋವಿಂದ, ಜ್ಞಾನಿಗಳಿಂದ ಸ್ತುತಿಸಲ್ಪಡುತ್ತ ನೀನೇ (ಶೇಷಶಾಯಿಯಾಗಿ) ಮಲಗುತ್ತೀಯೆ (15-16). ನಿನ್ನ ಪರಮಾರ್ಥವಾದ ತಾತ್ತ್ವಿಕಸ್ವರೂಪವು ಯಾರಿಗೂ ಗೊತ್ತಿಲ್ಲ. ಆದ್ದರಿಂದ ನಿನ್ನ ಅವತಾರಗಳಲ್ಲಿ ಪ್ರಕಟವಾಗುವ ಯಾವ ರೂಪ ಉಂಟೋ ಅದನ್ನು ಮಾತ್ರ ದೇವತೆಗಳು ಅರ್ಚಿಸುತ್ತಾರೆ (17). ಮುಮುಕ್ಷುಗಳು ಪರಬ್ರಹ್ಮವಾದ ನಿನ್ನನ್ನು ಆರಾಧಿಸಿ ಮುಕ್ತಿಯನ್ನು ಪಡೆದಿದ್ದಾರೆ. ವಾಸುದೇವನಾದ ನಿನ್ನನ್ನು ಆರಾಧಿಸದೆ ಯಾರಿಗೆ ತಾನೇ ಮುಕ್ತಿ ದೊರಕೀತು? ಮನಸ್ಸಿಗೆ, ಇಂದ್ರಿಯಗಳಿಗೆ ಅಥವಾ ಬುದ್ಧಿಗೆ ಗೋಚರವಾಗಬಲ್ಲದ್ದು ಏನೇನುಂಟೋ ಅದೆಲ್ಲವೂ ನಿನ್ನ ರೂಪವೇ (18-19). ನಾನು ನಿನ್ನ ಒಂದು ರೂಪವೇ. ನೀನೇ ನನಗೆ ಆಧಾರ. ನೀನೇ ನನ್ನನ್ನು ಸೃಷ್ಟಿಸಿದ್ದೀಯೆ. ನಿನ್ನನ್ನು ಆಶ್ರಯಿಸಿ ಉಳಿದುಕೊಂಡಿದ್ದೇನೆ. ಆದ್ದರಿಂದ ಜನರು ನನ್ನನ್ನು (ಮಾಧವನಿಗೆ ಸಂಬಂಧಿಸಿದವಳಾದ್ದರಿಂದ) ಮಾಧವಿ

**ಜಯಾಖಿಲಜ್ಞಾನಮಯ ಜಯ ಸ್ಥೂಲಮಯಾವ್ಯಯ।**
**ಜಯಾನಂತ ಜಯಾವ್ಯಕ್ತ ಜಯ ವ್ಯಕ್ತಮಯ ಪ್ರಭೋ॥ 21**

**ಪರಾಪರಾತ್ಮನ್ವಿಶ್ವಾತ್ಮಂಜಯ ಯಜ್ಞಪತೇಽನಘ।**
**ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮೋಂಕಾರಸ್ತ್ವಮಗ್ನಯಃ॥ 22**

**ತ್ವಂ ವೇದಾಸ್ತ್ವಂ ತದಂಗಾನಿ ತ್ವಂ ಯಜ್ಞಪುರುಷೋ ಹರೇ।**
**ಸೂರ್ಯಾದಯೋ ಗ್ರಹಾಸ್ತಾರಾ ನಕ್ಷತ್ರಾಣ್ಯಖಿಲಂ ಜಗತ್॥ 23**

**ಮೂರ್ತಾಮೂರ್ತಮದೃಶ್ಯಂ ಚ ದೃಶ್ಯಂ ಚ ಪುರುಷೋತ್ತಮ।**
**ಯಚ್ಚೋಕ್ತಂ ಯಚ್ಚ ನೈವೋಕ್ತಂ ಮಯಾತ್ರ ಪರಮೇಶ್ವರ।**
**ತತ್ಸರ್ವಂ ತ್ವಂ ನಮಸ್ತುಭ್ಯಂ ಭೂಯೋ ಭೂಯೋ ನಮೋ ನಮಃ॥**

*ಶ್ರೀ ಪರಾಶರ ಉವಾಚ:*

**ಏವಂ ಸಂಸ್ತೂಯಮಾನಸ್ತು ಪೃಥಿವ್ಯಾ ಧರಣೀಧರಃ।**
**ಸಾಮಸ್ವರಧ್ವನಿಃ ಶ್ರೀಮಾಂಜಗರ್ಜ ಪರಿಘರ್ಘರಮ್॥ 25**

---

ಎನ್ನುತ್ತಾರೆ (20). ಹೇ ಸಂಪೂರ್ಣ ಜ್ಞಾನಮಯ, ಸ್ಥೂಲಮಯ, ಅವ್ಯಯ, ಅನಂತ, ಅವ್ಯಕ್ತ, ವ್ಯಕ್ತಮಯ, ಸ್ವಾಮಿ, ಜಯ ಜಯ ಜಯ ಜಯ! ಹೇ ಪರಾಪರಸ್ವರೂಪ, ವಿಶ್ವಾತ್ಮ, ಯಜ್ಞಪತಿ, ಅನಘ, ಜಯ! ನೀನೇ ಯಜ್ಞ, ನೀನೇ ವಷಟ್ಕಾರ, ನೀನೇ ಓಂಕಾರ, (ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯ) ಎಂಬ ಅಗ್ನಿಗಳು ನೀನೇ (21-22). ಹೇ ಹರೇ, ವೇದ ವೇದಾಂಗಗಳು ನೀನೇ. ಯಜ್ಞಪುರುಷನೂ ಸೂರ್ಯಾದಿ ಗ್ರಹಗಳೂ ತಾರೆಗಳೂ ಅಶ್ವಿನ್ಯಾದಿ ನಕ್ಷತ್ರಗಳೂ ಸಕಲ ವಿಶ್ವವೂ ನೀನೇ (23). ಮೂರ್ತ-ಅಮೂರ್ತ, ದೃಶ್ಯ-ಅದೃಶ್ಯ, ಇದುವರೆಗೆ ನಾನು ಹೇಳಿದ್ದು-ಹೇಳದೆ ಇದ್ದದ್ದು, ಹೇ ಪರಮೇಶ್ವರ, ಹೇ ಪುರುಷೋತ್ತಮ, ಅದೆಲ್ಲವೂ ನೀನೇ ಆಗಿದ್ದೀಯೆ. ನಿನಗೆ ನಮಸ್ಕಾರ, ಮತ್ತೆ ಮತ್ತೆ ನಮೋ ನಮಃ" (24). ಪರಾಶರರು ಹೇಳಿದರು: ಮೈತ್ರೇಯ, ಪೃಥಿವಿಯು ಈ ರೀತಿಯಲ್ಲಿ ಸ್ತುತಿಸಲಾಗಿ, (ಮಹಾವರಾಹ ರೂಪದಲ್ಲಿದ್ದ) ತೇಜಸ್ವಿಯಾದ ಧರಣೀಧರನು ಸಾಮಗಾನದ ಧ್ವನಿಯಲ್ಲಿ ಗರ್ಜಿಸಿದನು (25). ಅರಳಿದ

ತತಃ ಸಮುತ್ಕ್ಷಿಪ್ಯ ಧರಾಂ ಸ್ವದಂಷ್ಟ್ರಯಾ
ಮಹಾವರಾಹಃ ಸ್ಫುಟಪದ್ಮಲೋಚನಃ ।
ರಸಾತಲಾದುತ್ಪಲಪತ್ರಸನ್ನಿಭಃ
ಸಮುತ್ಥಿತೋ ನೀಲ ಇವಾಚಲೋ ಮಹಾನ್ ॥ 26

ಉತ್ತಿಷ್ಠತಾ ತೇನ ಮುಖಾನಿಲಾಹತಂ
ತತ್ಸಂಭವಾಂಭೋ ಜನಲೋಕಸಂಶ್ರಯಾನ್ ।
ಪ್ರಕ್ಷಾಲಯಾಮಾಸ ಹಿ ತಾನ್ಮಹಾದ್ಯುತೀನ್
ಸನಂದನಾದೀನಪಕಲ್ಮಷಾನ್ ಮುನೀನ್ ॥ 27

ಪ್ರಯಾಂತಿ ತೋಯಾನಿ ಖುರಾಗ್ರವಿಕ್ಷತ-
ರಸಾತಲೇಽಧಃ ಕೃತಶಬ್ದಸಂತತಿ ।
ಶ್ವಾಸಾನಿಲಾಸ್ತಾಃ ಪರಿತಃ ಪ್ರಯಾಂತಿ
ಸಿದ್ಧಾ ಜನೇ ಯೇ ನಿಯತಾ ವಸಂತಿ ॥ 28

---

ತಾವರೆಯಂತೆ ಕಣ್ಣುಳ್ಳದ್ದೂ ನೈದಿಲೆಯ ದಳದಂತೆ ಕಪ್ಪುಬಣ್ಣವುಳ್ಳದ್ದೂ ಆದ ಆ ಮಹಾವರಾಹವು ತನ್ನ ಕೋರೆದಾಡೆಯಿಂದ ಭೂಮಿಯನ್ನೆತ್ತಿ, ದೊಡ್ಡ ನೀಲಾಚಲದಂತೆ ರಸಾತಳದಿಂದ ಮೇಲೆದ್ದಿತು* (26). ಆ ಮಹಾ ವರಾಹವು ಮೇಲೇಳುತ್ತಿರುವಾಗ ಅದರ ಬಾಯಿಯಿಂದ ಹೊರಟ ಬಿರುಗಾಳಿಯಿಂದ ಉಕ್ಕಿ ಪುಟಿದೆದ್ದ ಸಮುದ್ರದ ನೀರು, ಜನಲೋಕದಲ್ಲಿ ಆಶ್ರಯವನ್ನು ಪಡೆದಿದ್ದ ನಿರ್ಮಲರಾದ ಸನಂದನಾದಿ ತೇಜಸ್ವಿ ಮುನಿಗಳನ್ನು ತೊಳೆಯಿತು! (27). ಅದರ ಕಾಲ್ಗೊರಸುಗಳಿಂದ ಚಲ್ಲಾಪಿಲ್ಲಿಯಾದ ಜಲರಾಶಿಯು ಭೋರ್ಗರೆಯುತ್ತ ರಸಾತಳದ ಕೆಳಗೆ ನುಗ್ಗಿತು! ಅದರ ಉಸಿರಿನಿಂದೆದ್ದ ಸುಂಟರಗಾಳಿಯು ಜನಲೋಕದಲ್ಲಿದ್ದ ಸಿದ್ಧ ಪುರುಷರ ಸುತ್ತಲೂ ವ್ಯಾಪಿಸಿತು (28). ಪೃಥಿವಿಯನ್ನು ಹೊತ್ತು

---

*ಪಾತಾಳ, ರಸಾತಳ—ಇವೆರಡೂ ಒಂದೇ ಅರ್ಥದಲ್ಲಿ ಪ್ರಯುಕ್ತವಾಗಿವೆ. ಹಿರಣ್ಯಾಕ್ಷನನ್ನು ಕೊಂದು ಮಹಾವರಾಹವು ಭೂಮಿಯನ್ನು ಮೇಲೆತ್ತಿತೆಂಬ ಕಥೆ ಭಾಗವತದಲ್ಲಿದೆ.

ಉತ್ತಿಷ್ಠತಸ್ತಸ್ಯ ಜಲಾರ್ದ್ರಕುಕ್ಷೇ-
ರ್ಮಹಾವರಾಹಸ್ಯ ಮಹೀಂ ವಿಗೃಹ್ಯ।
ವಿಧುನ್ವತೋ ವೇದಮಯಂ ಶರೀರಂ
ರೋಮಾಂತರಸ್ಥಾ ಮುನಯಃ ಸ್ತುವಂತಿ ॥ 29

ತಂ ತುಷ್ಟುವುಸ್ತೋಷಪರೀತಚೇತಸೋ
ಲೋಕೇ ಜನೇ ಯೇ ನಿವಸಂತಿ ಯೋಗಿನಃ।
ಸನಂದನಾದ್ಯಾ ಹ್ಯತಿನಮ್ರಕಂಧರಾ
ಧರಾಧರಂ ಧೀರತರೋದ್ಧತೇಕ್ಷಣಮ್ ॥ 30

ಜಯೇಶ್ವರಾಣಾಂ ಪರಮೇಶ ಕೇಶವ
ಪ್ರಭೋ ಗದಾಶಂಖಧರಾಸಿಚಕ್ರಧೃಕ್।
ಪ್ರಸೂತಿನಾಶಸ್ಥಿತಿಹೇತುರೀಶ್ವರ-
ಸ್ತ್ವಮೇವ ನಾನ್ಯತ್ಪರಮಂ ಚ ಯತ್ಪದಮ್ ॥ 31

---

ಮೇಲೇಳುತ್ತಿದ್ದ ಆ ಮಹಾವರಾಹದ ಹೊಟ್ಟೆಯು ನೀರಿನಿಂದ ಒದ್ದೆಯಾಗಿರಲು, ಅದು ತನ್ನ ವೇದಮಯವಾದ ಶರೀರವನ್ನು ಕೊಡಹುತ್ತಿತ್ತು. ಆಗ ಅದರ ರೋಮಾವಳಿಗಳಲ್ಲಿ ಆಶ್ರಯ ಪಡೆದಿದ್ದ ಮುನಿಗಳು (ಭಯದಿಂದ) ಸ್ತೋತ್ರ ಮಾಡುತ್ತಿದ್ದರು! (29). ಧೀರವೂ ಉದ್ಧತವೂ ಆದ ನೇತ್ರವುಳ್ಳ ಧರಾಧರನಾದ ಆ ಸ್ವಾಮಿಯನ್ನು, ಜನಲೋಕದಲ್ಲಿದ್ದ ಸನಂದನಾದಿ ಯೋಗಿಗಳು ಸಂತುಷ್ಟರಾಗಿ ಕತ್ತನ್ನು ಬಾಗಿಸಿ (ಭಕ್ತಿಯಿಂದ) ಹೀಗೆ ಸ್ತುತಿಸುತ್ತಿದ್ದರು (30): "ಈಶ್ವರರಿಗೆ ಪರಮೇಶ್ವರನಾದ ಕೇಶವನೇ ಜಯ! ಗದೆ, ಶಂಖ, ಖಡ್ಗ, ಚಕ್ರಗಳನ್ನು ಧರಿಸಿದ ಸ್ವಾಮಿಯೇ ಜಯ! ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಈಶ್ವರನು ನೀನೇ. ಪರಮಪದವೆಂದರೆ ನೀನಲ್ಲದೆ ಬೇರೆ ಇಲ್ಲ (31). ಓ ಪ್ರಭುವೆ, ನೀನೇ ಯಜ್ಞಪುರುಷನಾಗಿದ್ದೀಯೆ. ನಿನ್ನ ಪಾದಗಳೇ ನಾಲ್ಕು ವೇದಗಳು. ಕೋರೆದಾಡೆಯೇ ಯೂಪ. ಹಲ್ಲುಗಳೇ ಯಜ್ಞಗಳು. ಮುಖವೇ ಹೋಮಕುಂಡ.

ಪಾದೇಷು ವೇದಾಸ್ತವ ಯೂಪದಂಷ್ಟ್ರ-
ದಂತೇಷು ಯಜ್ಞಾಶ್ಚಿತಯಶ್ಚ ವಕ್ತ್ರೇ।
ಹುತಾಶಜಿಹ್ವೋಽಸಿ ತನೂರುಹಾಣಿ
ದರ್ಭಾಃ ಪ್ರಭೋ ಯಜ್ಞಪುಮಾಂಸ್ತ್ವಮೇವ॥ 32

ವಿಲೋಚನೇ ರಾತ್ರ್ಯಹನೀ ಮಹಾತ್ಮ-
ನ್ಸರ್ವಾಶ್ರಯಂ ಬ್ರಹ್ಮ ಪರಂ ಶಿರಸ್ತೇ।
ಸೂಕ್ತಾನ್ಯಶೇಷಾಣಿ ಸಟಾಕಲಾಪೋ
ಘ್ರಾಣಂ ಸಮಸ್ತಾನಿ ಹವೀಂಷಿ ದೇವ॥ 33

ಸ್ರುಕ್‌ತುಂಡ ಸಾಮಸ್ವರಧೀರನಾದ
ಪ್ರಾಗ್ವಂಶಕಾಯಾಖಿಲಸತ್ರಸಂಧೇ।
ಪೂರ್ತೇಷ್ಟಧರ್ಮಶ್ರವಣೋಽಸಿ ದೇವ
ಸನಾತನಾತ್ಮನ್ ಭಗವಾನ್ ಪ್ರಸೀದ॥ 34

---

ನಾಲಿಗೆಯೇ ಅಗ್ನಿ. ರೋಮಗಳೇ ದರ್ಭೆಗಳು* (32). ಹೇ ಮಹಾತ್ಮ, ರಾತ್ರಿ ಹಗಲುಗಳು ನಿನ್ನ ಎರಡು ಕಣ್ಣುಗಳು. ಸರ್ವಾಧಾರವಾದ ಪರಬ್ರಹ್ಮವು ನಿನ್ನ ಶಿರಸ್ಸು. ಸಮಸ್ತ ಸೂಕ್ತಗಳೂ ನಿನ್ನ ಹೆಗಲಿನಲ್ಲಿರುವ ರೋಮಗುಚ್ಛ. ನಿನ್ನ ನಾಸಿಕವೇ ಸಮಸ್ತ ಆಹುತಿಗಳು (33). ನಿನ್ನ ಮೂತಿಯೇ ಸ್ರುಕ್ (ಹವಿಸ್ಸನ್ನು ಹಾಕುವ ಹುಟ್ಟು). ಧೀರನಾದವೇ ಸಾಮಧ್ವನಿ. ಶರೀರವೇ ಯಜ್ಞಶಾಲೆಯ ಪೂರ್ವಕ್ಕಿರುವ ಯಜಮಾನ ಗೃಹ. ನಿನ್ನ ಶರೀರದ ಸಂದುಗಳೇ ನಾನಾ ಯಾಗಗಳು. ಕಿವಿಗಳೇ ಇಷ್ಟ, ಪೂರ್ತಗಳೆಂಬ ಧರ್ಮಕಾರ್ಯಗಳು. ಹೇ ದೇವ, ಸನಾತನ, ಭಗವನ್ ಪ್ರಸನ್ನನಾಗು (34). ಹೇ ಅಕ್ಷರ, ವಿಶ್ವಮೂರ್ತಿ, ಒಂದು ಹೆಜ್ಜೆಯಿಂದ

* ಈ ಶ್ಲೋಕದಲ್ಲಿ 'ಪಾದೇಷು ವೇದಾ'—ಎಂಬುದಕ್ಕೆ 'ಪಾದಗಳಲ್ಲಿ ವೇದಗಳಿವೆ' ಎಂದು ಅರ್ಥ ಹೇಳಬೇಕಾಗುತ್ತದೆ. ಆದರೆ 'ಯೂಪದಂಷ್ಟ್ರ' ಮುಂತಾದ ರೂಪಕಗಳಿಗೆ ಅನುಗುಣವಾಗಿ ಎಲ್ಲೆಡೆಯೂ ರೂಪಕ ಕ್ರಮದಿಂದಲೇ ಅರ್ಥವನ್ನು ಬರೆದಿದೆ. ಇಲ್ಲಿ 'ವೇದಗಳೇ ಪಾದಗಳು, ಯೂಪವೇ ಕೋರೆದಾಡೆ' ಇತ್ಯಾದಿ ತಿರುವುಮುರುವಾಗಿಯೂ ಅರ್ಥ ಹೇಳಬಹುದು.

**ಪದಕ್ರಮಾಕ್ರಾಂತಭುವಂ ಭವಂತ-**
**ಮಾದಿಸ್ಥಿತಂ ಚಾಕ್ಷರ ವಿಶ್ವಮೂರ್ತೇ।**
**ವಿಶ್ವಸ್ಯ ವಿದ್ಮಃ ಪರಮೇಶ್ವರೋಽಸಿ**
**ಪ್ರಸೀದ ನಾಥೋಽಸಿ ಪರಾವರಸ್ಯ॥** 35

**ದಂಷ್ಟ್ರಾಗ್ರವಿನ್ಯಸ್ತಮಶೇಷಮೇತದ್-**
**ಭೂಮಂಡಲಂ ನಾಥ ವಿಭಾವ್ಯತೇ ತೇ।**
**ವಿಗಾಹತಃ ಪದ್ಮವನಂ ವಿಲಗ್ನಂ**
**ಸರೋಜಿನೀಪತ್ರಮಿವೋಢಪಂಕಮ್॥** 36

**ದ್ಯಾವಾಪೃಥಿವ್ಯೋರತುಲಪ್ರಭಾವ**
**ಯದಂತರಂ ತದ್ವಪುಷಾ ತವೈವ**
**ವ್ಯಾಪ್ತಂ ಜಗದ್ವ್ಯಾಪ್ತಿಸಮರ್ಥದೀಪ್ತೇ।**
**ಹಿತಾಯ ವಿಶ್ವಸ್ಯ ವಿಭೋ ಭವ ತ್ವಮ್॥** 37

**ಪರಮಾರ್ಥಸ್ತ್ವಮೇವೈಕೋ ನಾನ್ಯೋಽಸ್ತಿ ಜಗತಃ ಪತೇ।**
**ತವೈಷ ಮಹಿಮಾ ಯೇನ ವ್ಯಾಪ್ತಮೇತಚ್ಚರಾಚರಮ್॥** 38

---

ಭೂಮಿಯನ್ನು ವ್ಯಾಪಿಸಿದ ನಿನ್ನನ್ನು ವಿಶ್ವಕ್ಕೆ ಆದಿಕಾರಣನೆಂದೂ ಪರಮೇಶ್ವರನೆಂದೂ ತಿಳಿದಿದ್ದೇವೆ. ಚರಾಚರಗಳಿಗೆ ಸ್ವಾಮಿಯಾಗಿದ್ದೀಯೆ. ಪ್ರಸನ್ನನಾಗು (35). ನಿನ್ನ ಕೋರೆದಾಡೆಯಲ್ಲಿ ನೆಲೆಸಿರುವ ಈ ಸಮಸ್ತ ಭೂಮಂಡಲವೂ, ಕಮಲವನಕ್ಕೆ ನುಗ್ಗಿದಾಗ ನಿನ್ನ ದಾಡೆಗೆ ಅಂಟಿರುವ ಕೆಸರು ಹತ್ತಿದ ತಾವರೆ ಎಲೆಯಂತೆ ಕಾಣುತ್ತಿದೆ! (36). ಹೇ ಅಸಮಾನ ಮಹಿಮ, ಭೂಮ್ಯಾಕಾಶಗಳ ನಡುವೆ ಇರುವ ಸ್ಥಳವೆಲ್ಲ ನಿನ್ನ ದೇಹ ದಿಂದಲೇ ವ್ಯಾಪ್ತವಾಗಿದೆ. ವಿಶ್ವವನ್ನೇ ವ್ಯಾಪಿಸುವ ದೀಪ್ತಿಯುಳ್ಳವನು ನೀನು. ಹೇ ಸ್ವಾಮಿ, ವಿಶ್ವಕ್ಕೆ ಕಲ್ಯಾಣವನ್ನು ಮಾಡು (37). ಹೇ ಜಗದೀಶ್ವರ, ಪರಮಾರ್ಥವಸ್ತುವೆಂದರೆ ನೀನೊಬ್ಬನೇ, ಇನ್ನೊಬ್ಬನಿಲ್ಲ. ಈ ಚರಾಚರವನ್ನೆಲ್ಲ ವ್ಯಾಪಿಸಿಕೊಂಡಿರುವುದು ನಿನ್ನ ಮಹಿಮೆ. ಮೂರ್ತವಾಗಿ ಕಣ್ಣಿಗೆ ಕಾಣಿಸುತ್ತಿರುವುದೇನುಂಟೋ ಅದೆಲ್ಲವೂ ಜ್ಞಾನಾತ್ಮನಾದ ನಿನ್ನ

**ಯದೇತದ್ ದೃಶ್ಯತೇ ಮೂರ್ತಮೇತಜ್ಜ್ಞಾನಾತ್ಮನಸ್ತವ।**
**ಭ್ರಾಂತಿಜ್ಞಾನೇನ ಪಶ್ಯಂತಿ ಜಗದ್ರೂಪಮಯೋಗಿನಃ॥ 39**

**ಜ್ಞಾನಸ್ವರೂಪಮಖಿಲಂ ಜಗದೇತದಬುದ್ಧಯಃ।**
**ಅರ್ಥಸ್ವರೂಪಂ ಪಶ್ಯಂತೋ ಭ್ರಾಮ್ಯಂತೇ ಮೋಹಸಂಪ್ಲವೇ॥ 40**

**ಯೇ ತು ಜ್ಞಾನವಿದಃ ಶುದ್ಧಚೇತಸಸ್ತೇಽಖಿಲಂ ಜಗತ್।**
**ಜ್ಞಾನಾತ್ಮಕಂ ಪ್ರಪಶ್ಯನ್ತಿ ತ್ವದ್ರೂಪಂ ಪರಮೇಶ್ವರ॥ 41**

**ಪ್ರಸೀದ ಸರ್ವ ಸರ್ವಾತ್ಮನ್ ವಾಸಾಯ ಜಗತಾಮಿಮಾಮ್।**
**ಉದ್ಧರೋರ್ವೀಮಮೇಯಾತ್ಮಂಛನ್ನೋದೇಹ್ಯಬ್ಜಲೋಚನ॥ 42**

**ಸತ್ತ್ವೋದ್ರಿಕ್ತೋಽಸಿ ಭಗವನ್ ಗೋವಿಂದ ಪೃಥಿವೀಮಿಮಾಮ್।**
**ಸಮುದ್ಧರ ಭವಾಯೇಶ ಶನ್ನೋ ದೇಹ್ಯಬ್ಜಲೋಚನ॥ 43**

**ಸರ್ಗಪ್ರವೃತ್ತಿರ್ಭವತೋ ಜಗತಾಮುಪಕಾರಿಣೀ।**
**ಭವತ್ವೇಷಾ ನಮಸ್ತೇಽಸ್ತು ಶನ್ನೋ ದೇಹ್ಯಬ್ಜಲೋಚನ॥ 44**

---

ರೂಪವೇ. ಯೋಗಿಗಳಲ್ಲದವರು ಭ್ರಾಂತಿಜ್ಞಾನದಿಂದ ಜಗತ್ತೆಂಬ ಬೇರೆ ವಸ್ತುವಿದೆಯೆಂದು ತಿಳಿದಿದ್ದಾರೆ (38-39). ಈ ಜಗತ್ತೆಲ್ಲವೂ ಜ್ಞಾನ ಸ್ವರೂಪವೇ. ಬುದ್ಧಿಹೀನರು ಇದನ್ನು ಜ್ಞಾನಗೋಚರವಾದ ವಸ್ತುವೆಂದು ತಿಳಿದು ಮೋಹದ ಜಂಜಾಟದಲ್ಲಿ ಅಲೆಯುತ್ತಿದ್ದಾರೆ. ಪರಮೇಶ್ವರ, ಯಾರು ಶುದ್ಧಚಿತ್ತರಾಗಿ ಪರಮಾರ್ಥ ಜ್ಞಾನವನ್ನು ಪಡೆದಿದ್ದಾರೋ ಅವರು ಈ ಜಗತ್ತನ್ನು ಜ್ಞಾನಾತ್ಮಕವಾದ ನಿನ್ನ ರೂಪವೆಂದು ನಿಶ್ಚಯಿಸಿಕೊಂಡಿದ್ದಾರೆ (40-41). ಹೇ ಸರ್ವ, ಸರ್ವರ ಅಂತರಾತ್ಮ, ಕಮಲಲೋಚನ, ಜಗತ್ತಿನ ಚರಾಚರಗಳ ನಿವಾಸಕ್ಕಾಗಿ ಈ ಪೃಥಿವಿಯನ್ನು ಉದ್ಧರಿಸು, ಪ್ರಸನ್ನನಾಗು (42). ಹೇ ಭಗವನ್-ಗೋವಿಂದ, ಸತ್ತ್ವಗುಣದಿಂದ ಉದ್ರಿಕ್ತನಾಗಿದ್ದೀಯೆ. ಜಗತ್ತಿನ ಉದ್ಭವಕ್ಕಾಗಿ ಈ ಪೃಥ್ವಿಯನ್ನು ಮೇಲೆತ್ತು. ಹೇ ಪದ್ಮಲೋಚನ, ನಮಗೆ ಶಾಂತಿಯನ್ನು ನೀಡು (43). ನಿನ್ನ ಈ ಸೃಷ್ಟಿ ಪ್ರವೃತ್ತಿಯು ಜಗತ್ತಿಗೆ ಉಪಕಾರವಾಗಲಿ. ನಿನಗೆ ನಮಸ್ಕಾರ. ನಮಗೆ ಶಾಂತಿಯನ್ನು ನೀಡು" ಎಂದು ಸ್ತುತಿಸಿದರು (44). ಪರಾಶರರು

*ಶ್ರೀಪರಾಶರ ಉವಾಚ:*

**ಏವಂ ಸಂಸ್ತೂಯಮಾನಸ್ತು ಪರಮಾತ್ಮಾ ಮಹೀಧರಃ।**
**ಉಜ್ಜಹಾರ ಕ್ಷಿತಿಂ ಕ್ಷಿಪ್ರಂ ನ್ಯಸ್ತವಾಂಶ್ಚ ಮಹಾಂಭಸಿ॥ 45**

**ತಸ್ಯೋಪರಿ ಜಲೌಘಸ್ಯ ಮಹತೀ ನೌರಿವ ಸ್ಥಿತಾ।**
**ವಿತತತ್ವಾತ್ತು ದೇಹಸ್ಯ ನ ಮಹೀ ಯಾತಿ ಸಂಪ್ಲವಮ್॥ 46**

**ತತಃ ಕ್ಷಿತಿಂ ಸಮಾಂ ಕೃತ್ವಾ ಪೃಥಿವ್ಯಾಂ ಸೋಽಚಿನೋದ್ಗಿರೀನ್।**
**ಯಥಾವಿಭಾಗಂ ಭಗವಾನನಾದಿಃ ಪರಮೇಶ್ವರಃ॥ 47**

**ಪ್ರಾಕ್ಸರ್ಗದಗ್ಧಾನಖಿಲಾನ್ ಪರ್ವತಾನ್ ಪೃಥಿವೀತಲೇ।**
**ಅಮೋಘೇನ ಪ್ರಭಾವೇಣ ಸಸರ್ಜಾಮೋಘವಾಂಛಿತಃ॥ 48**

**ಭೂವಿಭಾಗಂ ತತಃ ಕೃತ್ವಾ ಸಪ್ತದ್ವೀಪಾನ್ಯಥಾತಥಮ್।**
**ಭೂರಾದ್ಯಾಂಶ್ಚತುರೋ ಲೋಕಾನ್ಪೂರ್ವವತ್ಸಮಕಲ್ಪಯತ್॥ 49**

---

ಹೇಳಿದರು: ಹೀಗೆ ಸ್ತುತಿಸಲ್ಪಡುತ್ತಿದ್ದ ಪರಮಾತ್ಮನು ಶೀಘ್ರವಾಗಿ ಪೃಥಿವಿಯನ್ನು ಎತ್ತಿತಂದು ಅಪಾರವಾದ ಜಲರಾಶಿಯ ಮೇಲೆ ಸ್ಥಾಪಿಸಿದನು (45). ಆ ಭೂಮಿಯು ಜಲರಾಶಿಯ ಮೇಲೆ ಮಹಾನೌಕೆಯಂತೆ ನಿಂತುಕೊಂಡಿತು. ಅದರ ಆಕಾರವು ವಿಶಾಲವಾದ್ದರಿಂದ ನೀರಿನಲ್ಲಿ ಮುಳುಗುತ್ತಿಲ್ಲ. ಅನಾದಿಯಾದ ಭಗವಾನ್ ಪರಮೇಶ್ವರನು ಭೂಮಿಯ ಮೇಲ್ಮೈಯನ್ನು ಸಮವಾಗಿ ಮಾಡಿ, ಅದರ ಮೇಲೆ ಪರ್ವತಗಳನ್ನು ವಿಭಾಗಪೂರ್ವಕವಾಗಿ ಸ್ಥಾಪಿಸಿದನು (46-47). ಪೂರ್ವಸೃಷ್ಟಿಯ ಕಡೆಯಲ್ಲಿ ನಾಶವಾಗಿದ್ದ ಪರ್ವತಗಳನ್ನು, ಸತ್ಯಸಂಕಲ್ಪನಾದ ಆತನು ತನ್ನ ಅಪಾರವಾದ ಮಹಿಮೆಯಿಂದ ಸೃಜಿಸಿದನು (48). ಹಿಂದೆ ಇದ್ದಂತೆ ಭೂಮಿಯನ್ನು ಸಪ್ತದ್ವೀಪಗಳಾಗಿ ವಿಂಗಡಿಸಿ, ಭೂಃ ಭುವಃ ಸುವಃ ಮಹಃ—ಎಂಬ ನಾಲ್ಕು ಲೋಕಗಳನ್ನು ಪೂರ್ವಕಲ್ಪದಂತೆ ನಿರ್ಮಿಸಿದನು (49). ಮತ್ತೆ ಆ ಹರಿಯು ರಜೋಗುಣದಿಂದ ಯುಕ್ತನಾಗಿ ಚತುರ್ಮುಖ ಬ್ರಹ್ಮನ ರೂಪವನ್ನು ಧರಿಸಿ

ಬ್ರಹ್ಮರೂಪಧರೋ ದೇವಸ್ತತೋಽಸೌ ರಜಸಾವೃತಃ।
ಚಕಾರ ಸೃಷ್ಟಿಂ ಭಗವಾಂಶ್ಚತುರ್ವಕ್ತ್ರಧರೋ ಹರಿಃ॥ 50

ನಿಮಿತ್ತಮಾತ್ರಮೇವಾಸೌ ಸೃಜ್ಯಾನಾಂ ಸರ್ಗಕರ್ಮಣಿ।
ಪ್ರಧಾನಕಾರಣೀಭೂತಾ ಯತೋ ವೈ ಸೃಜ್ಯಶಕ್ತಯಃ॥ 51

ನಿಮಿತ್ತಮಾತ್ರಂ ಮುಕ್ತ್ವೈವಂ ನಾನ್ಯತ್ಕಿಂಚಿದಪೇಕ್ಷತೇ।
ನೀಯತೇ ತಪತಾಂ ಶ್ರೇಷ್ಠ ಸ್ವಶಕ್ತ್ಯಾ ವಸ್ತು ವಸ್ತುತಾಮ್॥ 52

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಚತುರ್ಥೋಽಧ್ಯಾಯಃ

---

ಸೃಷ್ಟಿಕಾರ್ಯದಲ್ಲಿ ಪ್ರವೃತ್ತನಾದನು. ಬ್ರಹ್ಮನು ವಸ್ತುಗಳ ನಿರ್ಮಾಣ ಕಾರ್ಯದಲ್ಲಿ ನಿಮಿತ್ತಮಾತ್ರನು. ವಸ್ತುಗಳಲ್ಲಿರುವ ವಿಭಿನ್ನ ಶಕ್ತಿಗಳೇ ಅವುಗಳ ಸೃಷ್ಟಿಕಾರ್ಯದಲ್ಲಿ ಮುಖ್ಯ ಕಾರಣಗಳು* (50-51). ಹೇ ತಪಸ್ವಿ—ಮೈತ್ರೇಯ, ಪದಾರ್ಥವು ನಿಮಿತ್ತಕಾರಣನಾದ ಈಶ್ವರನನ್ನು ಬಿಟ್ಟು, ಉಳಿದ ಯಾವ ಕಾರಣವನ್ನೂ ಬಯಸುವುದಿಲ್ಲ. ಅದು ತನ್ನ ಶಕ್ತಿಯಿಂದಲೇ ಅಭಿವ್ಯಕ್ತವಾಗಿ ವಸ್ತುರೂಪವನ್ನು ಪಡೆಯುತ್ತದೆ (52).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ನಾಲ್ಕನೆಯ ಅಧ್ಯಾಯ ಮುಗಿಯಿತು.



---

* ಭಗವಂತನ ಇಚ್ಛಾಮಾತ್ರದಿಂದ ಪದಾರ್ಥಶಕ್ತಿಗಳು ಉದ್ಬುದ್ಧವಾಗಿ ವಸ್ತು ವಿಕಾಸಕ್ಕೆ ಕಾರಣಗಳಾಗುತ್ತವೆ.

## ಪಂಚಮೋಽಧ್ಯಾಯಃ

*ಶ್ರೀ ಮೈತ್ರೇಯ ಉವಾಚ:*

**ಯಥಾ ಸಸರ್ಜ ದೇವೋಽಸೌ ದೇವರ್ಷಿಪಿತೃದಾನವಾನ್।**
**ಮನುಷ್ಯತಿರ್ಯಗ್ವೃಕ್ಷಾದೀನ್ ಭೂವ್ಯೋಮಸಲಿಲೌಕಸಃ॥** 1

**ಯದ್‌ಗುಣಂ ಯತ್ಸ್ವಭಾವಂ ಚ ಯದ್ರೂಪಂ ಚ ಜಗದ್‌ದ್ವಿಜ।**
**ಸರ್ಗಾದೌ ಸೃಷ್ಟವಾನ್ಬ್ರಹ್ಮಾ ತನ್ಮಮಾಚಕ್ಷ್ವ ಕೃತ್ಸ್ನಶಃ॥** 2

*ಶ್ರೀ ಪರಾಶರ ಉವಾಚ:*

**ಮೈತ್ರೇಯ ಕಥಯಾಮ್ಯೇತತ್ ಶೃಣುಷ್ವ ಸುಸಮಾಹಿತಃ।**
**ಯಥಾ ಸಸರ್ಜ ದೇವೋಽಸೌ ದೇವಾದೀನಖಿಲಾನ್ವಿಭುಃ॥** 3

---

### ಅಧ್ಯಾಯ 5

### ದೇವಮನುಷ್ಯಾದಿಗಳ ಸೃಷ್ಟಿ

ಮೈತ್ರೇಯರು ಹೀಗೆಂದರು: "ಹೇ ದ್ವಿಜೋತ್ತಮ, ಸರ್ಗಾದಿಯಲ್ಲಿ ಬ್ರಹ್ಮದೇವನು ಭೂಮ್ಯಾಕಾಶ ಜಲಗಳಲ್ಲಿ ವಾಸಮಾಡುವ ದೇವ, ಋಷಿ, ಪಿತೃ, ದಾನವ ಗಣಗಳನ್ನು, ಮನುಷ್ಯ, ತಿರ್ಯಗ್ಜಂತು, ವೃಕ್ಷ— ಮೊದಲಾದವನ್ನು ಹೇಗೆ ಸೃಜಿಸಿದನು? ಜಗತ್ತಿನ ಗುಣ ಸ್ವಭಾವ ಸ್ವರೂಪ ಗಳೇನು?* ಇದೆಲ್ಲವನ್ನೂ ಪೂರ್ತಿಯಾಗಿ ನನಗೆ ತಿಳಿಸಿರಿ" (1-2). ಪರಾಶರ ಮುನಿಗಳು ಹೇಳಿದರು: ಮೈತ್ರೇಯ, ಆ ಪ್ರಭುವಾದ ಬ್ರಹ್ಮನು ದೇವಾದಿಗಳೆಲ್ಲರನ್ನೂ ಹೇಗೆ ಸೃಷ್ಟಿಸಿದನೆಂಬುದೆಲ್ಲವನ್ನೂ ಹೇಳುವೆನು. ಸಾವಧಾನವಾಗಿ ಕೇಳು (3). ಹಿಂದಿನ ಕಲ್ಪಾದಿಯಲ್ಲಿ ಹೇಗೋ ಹಾಗೆ

* ಗುಣ—ಸತ್ವ, ರಜಸ್ಸು, ತಮಸ್ಸು; ಸ್ವಭಾವ—ಈ ಮೂರು ಗುಣಗಳ ಕಾರ್ಯ; ಸ್ವರೂಪ—ದ್ವಿಪಾದ, ಚತುಷ್ಪಾದ ಮುಂತಾದ ಆಕೃತಿ.

**ಸೃಷ್ಟಿಂ ಚಿಂತಯತಸ್ತಸ್ಯ ಕಲ್ಪಾದಿಷು ಯಥಾ ಪುರಾ।**
**ಅಬುದ್ಧಿಪೂರ್ವಕಃ ಸರ್ಗಃ ಪ್ರಾದುರ್ಭೂತಸ್ತಮೋಮಯಃ॥ 4**

**ತಮೋ ಮೋಹೋ ಮಹಾಮೋಹಸ್ತಾಮಿಸ್ರೋ ಹ್ಯಂಧಸಂಜ್ಞಿತಃ।**
**ಅವಿದ್ಯಾ ಪಂಚಪರ್ವೈಷಾ ಪ್ರಾದುರ್ಭೂತಾ ಮಹಾತ್ಮನಃ॥ 5**

**ಪಂಚಧಾವಸ್ಥಿತಃ ಸರ್ಗೋ ಧ್ಯಾಯತೋಽಪ್ರತಿಬೋಧವಾನ್।**
**ಬಹಿರಂತೋಽಪ್ರಕಾಶಶ್ಚ ಸಂವೃತಾತ್ಮಾ ನಗಾತ್ಮಕಃ॥ 6**

**ಮುಖ್ಯಾ ನಗಾ ಯತಃ ಪ್ರೋಕ್ತಾ ಮುಖ್ಯಸರ್ಗಸ್ತತಸ್ತ್ವಯಮ್॥ 7**

**ತಂ ದೃಷ್ಟ್ವಾ ಸಾಧಕಂ ಸರ್ಗಮಮನ್ಯದಪರಂ ಪುನಃ॥ 8**

---

ಬ್ರಹ್ಮನು ಸೃಷ್ಟಿ ಮಾಡಬೇಕೆಂದು ಆಲೋಚಿಸುತ್ತಿದ್ದಾಗ, ಇದ್ದಕ್ಕಿದ್ದಂತೆ ಅಜ್ಞಾನಪೂರ್ವಕವಾದ ಒಂದು ತಮೋಮೂರ್ತಿಯ ಸೃಷ್ಟಿಯಾಯಿತು! (4). ಆ ಮಹಾತ್ಮನಿಂದ ಆವಿರ್ಭವಿಸಿದ ತಮೋಮೂರ್ತಿಯಾದರೋ ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ—ಎಂದು ಐದು ಪ್ರಕಾರವಾದ* ಅವಿದ್ಯೆ (5). ಧ್ಯಾನಿಸುತ್ತಿದ್ದ ಬ್ರಹ್ಮನಿಂದ ಬುದ್ಧಿರಹಿತವಾದ ಐದು ಪ್ರಕಾರದ ಸೃಷ್ಟಿಯಾಯಿತು. ಇದು ಹೊರಗೂ ಒಳಗೂ ಪ್ರಕಾಶವಿಲ್ಲದ್ದು. (ಗತಿಶೂನ್ಯವಾದ್ದರಿಂದ) ನಗ ಎನಿಸಿತು. ಮೊದಲು ಉದ್ಭವಿಸಿದ್ದರಿಂದ ಈ ನಗಗಳು ಮುಖ್ಯವೆನಿಸಿ ಈ ಸೃಷ್ಟಿಯು ಮುಖ್ಯಸರ್ಗ ಎನ್ನಿಸಿತು (6-7). ಅದು ಕಾರ್ಯಸಾಧಕವಲ್ಲವಾದ್ದರಿಂದ ಬ್ರಹ್ಮನು ಇನ್ನೊಂದು ಸೃಷ್ಟಿಯನ್ನು ಉದ್ದೇಶಿಸಿದನು. ಅವನು ಹಾಗೆಯೇ ಧ್ಯಾನಿಸುತ್ತಿರಲಾಗಿ ತಿರ್ಯಗ್ಗಾಮಿಗಳ ಸೃಷ್ಟಿಯಾಯಿತು. ತಿರ್ಯಕ್ (ಗಾಳಿಯಂತೆ

---

* ಸಾಂಖ್ಯಮತದ ಪ್ರಕಾರ ಇವು ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ—ಎಂಬ ಪಂಚಕ್ಲೇಶಗಳಾಗಬಹುದು. ಆದರೆ ಇಲ್ಲಿ ವೃಕ್ಷ, ಗುಲ್ಮ, ಲತಾ, ವೀರುತ್, ತೃಣ—ಎಂಬ ಜ್ಞಾನರಹಿತ ಪಂಚವಸ್ತುಗಳಾಗಿರಬಹುದೆಂದು ತೋರುತ್ತದೆ.

**ತಸ್ಯಾಭಿಧ್ಯಾಯತಃ ಸರ್ಗಸ್ತಿರ್ಯಕ್ಸ್ರೋತಾಭ್ಯವರ್ತತ।**
**ಯಸ್ಮಾತ್ತಿರ್ಯಕ್ಪ್ರವೃತ್ತಿಸ್ಸ ತಿರ್ಯಕ್ ಸ್ರೋತಾಸ್ತತಃ ಸ್ಮೃತಃ॥** 9

**ಪಶ್ವಾದಯಾಸ್ತೇ ವಿಖ್ಯಾತಾಸ್ತಮಃಪ್ರಾಯಾ ಹ್ಯವೇದಿನಃ।**
**ಉತ್ಪಥಗ್ರಾಹಿಣಶ್ಚೈವ ತೇಽಜ್ಞಾನೇ ಜ್ಞಾನಮಾನಿನಃ॥** 10

**ಅಹಂಕೃತಾ ಅಹಮ್ಮಾನಾ ಅಷ್ಟಾವಿಂಶದ್ವಧಾತ್ಮಕಾಃ।**
**ಅಂತಃಪ್ರಕಾಶಾಸ್ತೇ ಸರ್ವೇ ಆವೃತಾಶ್ಚ ಪರಸ್ಪರಮ್॥** 11

**ತಮಪ್ಯಸಾಧಕಂ ಮತ್ವಾ ಧ್ಯಾಯತೋಽನ್ಯಸ್ತತೋಽಭವತ್।**
**ಊರ್ಧ್ವಸ್ರೋತಾಸ್ತೃತೀಯಸ್ತು ಸಾತ್ತ್ವಿಕೋರ್ಧ್ವಮವರ್ತತ॥** 12

**ತೇ ಸುಖಪ್ರೀತಿಬಹುಲಾ ಬಹಿರಂತಸ್ತ್ವನಾವೃತಾಃ।**
**ಪ್ರಕಾಶಾ ಬಹಿರಂತಶ್ಚ ಊರ್ಧ್ವಸ್ರೋತೋದ್ಭವಾಃ ಸ್ಮೃತಾಃ॥** 13

---

ಅಡ್ಡಲಾಗಿ) ಸಂಚಾರವಿದ್ದುದರಿಂದ ಅದು ತಿರ್ಯಗ್ಗಾಮಿಯೆನಿಸುತ್ತದೆ (8-9). ಪಶು, ಪಕ್ಷಿ—ಮೊದಲಾದವು ಈ ಗುಂಪಿಗೆ ಸೇರುತ್ತವೆ. ಇವು ತಮೋಮಯವಾಗಿದ್ದು ವಿವೇಕಜ್ಞಾನವಿಲ್ಲದವುಗಳಾಗಿವೆ. ಅನುಚಿತ ಮಾರ್ಗದಲ್ಲಿ ಹೋಗುತ್ತ ವಿಪರೀತಜ್ಞಾನವನ್ನೇ ಸರಿಯಾದ ಜ್ಞಾನವೆಂದು ಕೊಂಡಿವೆ (10). ಇವು 'ನಾನು' ಎಂಬ ಅಹಂಕಾರವುಳ್ಳವು. 'ನಾನು ಹೆಚ್ಚು' ಎಂಬ ಅಹಂಮಾನವುಳ್ಳವು. ಇವು ಇಪ್ಪತ್ತೆಂಟು 'ವಧ'*ಗಳಿಗೆ ಒಳಗಾದವು. ಇವು ಆಂತರಿಕವಾದ ಸುಖದುಃಖಗಳನ್ನು ಬಲ್ಲವು. (ಇನ್ನೊಂದು ವರ್ಗದೊಡನೆ ಸೇರದೆ) ತಮ್ಮ ತಮ್ಮಲ್ಲಿ ಸೇರಿಕೊಂಡಿರತಕ್ಕವು (11). ಅದೂ ಸಾಧಕವಲ್ಲವೆಂದು ಬಗೆದು ಮತ್ತೆ ಬ್ರಹ್ಮನು ಧ್ಯಾನಿಸುತ್ತಿರುವಾಗ ಊರ್ಧ್ವಗಾಮಿಗಳ ಮತ್ತೊಂದು ಸೃಷ್ಟಿಯಾಯಿತು. ಆದು ಸಾತ್ವಿಕವಾಗಿದ್ದು ಊರ್ಧ್ವಲೋಕದಲ್ಲಿ ನೆಲೆಸಿರುವಂತಹದು (12). ಈ ಸೃಷ್ಟಿಯ ಜನರು ಸುಖ ಪ್ರೇಮಗಳನ್ನೇ ವಿಶೇಷವಾಗಿ ಬಯಸತಕ್ಕವರು ಮತ್ತು ಒಳಗೂ ಹೊರಗೂ ಒಂಟಿಯಾಗಿರತಕ್ಕವರು. ಇವರಿಗೆ ಬಾಹ್ಯ ಮತ್ತು ಆಂತರಿಕ

---

* ಇವುಗಳ ವಿವರಣೆಗೆ ಅನುಬಂಧವನ್ನು ನೋಡಿ—2.

ತುಷ್ಟಾತ್ಮನಸ್ತೃತೀಯಸ್ತು ದೇವಸರ್ಗಸ್ತು ಸ ಸ್ಮೃತಃ।
ತಸ್ಮಿನ್ಸರ್ಗೇऽಭವತ್ಪ್ರೀತಿರ್ನಿಷ್ಪನ್ನೇ ಬ್ರಹ್ಮಣಸ್ತದಾ॥ 14

ತತೋऽನ್ಯಂ ಸ ತದಾ ದಧ್ಯೌ ಸಾಧಕಂ ಸರ್ಗಮುತ್ತಮಮ್।
ಅಸಾಧಕಾಂಸ್ತು ತಾಂ ಜ್ಞಾತ್ವಾ ಮುಖ್ಯಸರ್ಗಾದಿಸಂಭವಾನ್॥ 15

ತಥಾಭಿಧ್ಯಾಯತಸ್ತಸ್ಯ ಸತ್ಯಾಭಿಧ್ಯಾಯಿನಸ್ತತಃ।
ಪ್ರಾದುರ್ಬಭೂವ ಚಾವ್ಯಕ್ತಾದರ್ವಾಕ್ಸ್ರೋತಾಸ್ತು ಸಾಧಕಃ॥ 16

ಯಸ್ಮಾದರ್ವಾಗ್ವ್ಯವರ್ತಂತ ತತೋऽರ್ವಾಕ್ಸ್ರೋತಸಸ್ತು ತೇ।
ತೇ ಚ ಪ್ರಕಾಶಬಹುಲಾಸ್ತಮೋದ್ರಿಕ್ತಾ ರಜೋऽಧಿಕಾಃ॥ 17

ತಸ್ಮಾತ್ತೇ ದುಃಖಬಹುಲಾ ಭೂಯೋಭೂಯಶ್ಚ ಕಾರಿಣಃ।
ಪ್ರಕಾಶಾ ಬಹಿರಂತಶ್ಚ ಮನುಷ್ಯಾಃ ಸಾಧಕಾಸ್ತು ತೇ॥ 18

---

ವಾದ ದೃಷ್ಟಿಯೂ ಜ್ಞಾನವೂ ಉಂಟು. ಈ ಸೃಷ್ಟಿಯೇ ಮೂರನೆಯ ದೇವಸರ್ಗ. ಇದರಿಂದ ಬ್ರಹ್ಮದೇವನಿಗೆ ಸಂತೋಷವಾಯಿತು (13-14). ಆದರೂ ಸಹ ಈ ಮುಖ್ಯಸರ್ಗಾದಿಗಳಲ್ಲಿ ಹುಟ್ಟಿದವರು ತನ್ನ ಉದ್ದೇಶ ಸಿದ್ಧಿಗೆ ಸಾಧಕರಲ್ಲವೆಂದು ಬಗೆದು, ಬ್ರಹ್ಮನು ಉತ್ತಮವಾದ ಇನ್ನೊಂದು ಸೃಷ್ಟಿಯನ್ನು ಮಾಡಬೇಕೆಂದು ಧ್ಯಾನಸ್ಥನಾದನು (15). ಸತ್ಯಸಂಕಲ್ಪನಾಗಿ ಹಾಗೆ ಧ್ಯಾನಮಾಡುತ್ತಿರುವಾಗ ಕಾರ್ಯಸಾಧಕವಾದ ಅರ್ವಾಕ್ಸ್ರೋತದ ಸೃಷ್ಟಿಯು ಅವ್ಯಕ್ತದಿಂದ (ಪ್ರಧಾನದಿಂದ) ಪ್ರಾದುರ್ಭವಿಸಿತು (16). ಈ ಸೃಷ್ಟಿಯಲ್ಲಾದ ಮನುಷ್ಯರು (ಅರ್ವಾಕ್ =) ಕೆಳಗೆ (ಭೂಮಿಯಲ್ಲಿ) ಸಂಚರಿಸುವುದರಿಂದ ಇವರಿಗೆ ಅರ್ವಾಕ್ ಸ್ರೋತರೆಂದು ಹೆಸರು. ಇವರಲ್ಲಿ ಸತ್ತ್ವ, ರಜಸ್ಸು, ತಮಸ್ಸು—ಈ ಮೂರು ಗುಣಗಳೂ ಅಧಿಕ ವಾಗಿವೆ (17). ಇವರಿಗೆ ದುಃಖವು ಅಧಿಕ. ಇವರು ಅತ್ಯಂತ ಕ್ರಿಯಾ ಶೀಲರು. ಬಾಹ್ಯ ಮತ್ತು ಆಂತರಿಕವಾದ ಜ್ಞಾನವುಂಟು. ಆದ್ದರಿಂದ ಇವರು ಕಾರ್ಯಸಾಧಕರು. ಇವರೇ ಮನುಷ್ಯರು (18). ಹೇ ಮುನಿಸತ್ತಮ—ಹೀಗೆ ಇಲ್ಲಿ (ಬ್ರಹ್ಮನಿಂದ ಮುಂದೆ ನಿರ್ಮಿತಗಳಾದ) ಆರು ಸೃಷ್ಟಿಗಳನ್ನು

ಇತ್ಯೇತೇ ಕಥಿತಾಃ ಸರ್ಗಾಃ ಷಡತ್ರ ಮುನಿಸತ್ತಮ।
ಪ್ರಥಮೋ ಮಹತಃ ಸರ್ಗೋ ವಿಜ್ಞೇಯೋ ಬ್ರಹ್ಮಣಸ್ತು ಸಃ॥ 19

ತನ್ಮಾತ್ರಾಣಾಂ ದ್ವಿತೀಯಶ್ಚ ಭೂತಸರ್ಗೋ ಹಿ ಸ ಸ್ಮೃತಃ।
ವೈಕಾರಿಕಸ್ತೃತೀಯಸ್ತು ಸರ್ಗ ಐಂದ್ರಿಯಕಃ ಸ್ಮೃತಃ॥ 20

ಇತ್ಯೇಷ ಪ್ರಾಕೃತಃ ಸರ್ಗಃ ಸಂಭೂತೋ ಬುದ್ಧಿಪೂರ್ವಕಃ।
ಮುಖ್ಯಸರ್ಗಶ್ಚತುರ್ಥಸ್ತು ಮುಖ್ಯಾ ವೈ ಸ್ಥಾವರಾಃ ಸ್ಮೃತಾಃ॥ 21

ತಿರ್ಯಕ್ಸ್ರೋತಾಸ್ತು ಯಃ ಪ್ರೋಕ್ತಸ್ತೈರ್ಯಗ್ಯೋನ್ಯಃ ಸ ಉಚ್ಯತೇ।
ತದೂರ್ಧ್ವಸ್ರೋತಸಾಂ ಷಷ್ಠೋ ದೇವಸರ್ಗಸ್ತು ಸಂಸ್ಮೃತಃ॥ 22

---

ಹೇಳಲಾಯಿತು. ಮೊದಲನೆಯದು ಮಹತ್ತಿನ ಸೃಷ್ಟಿ. ಇದೇ ಬ್ರಹ್ಮನ ಸೃಷ್ಟಿಯೆಂದು ತಿಳಿಯತಕ್ಕದ್ದು* (19). (ಅಹಂಕಾರವೂ ಸೇರಿ) ಪಂಚತನ್ಮಾತ್ರೆಗಳ ಸರ್ಗ (ಸೃಷ್ಟಿ) ಎರಡನೆಯದು. ಅದಕ್ಕೆ ಭೂತಸರ್ಗವೆಂದು ಹೆಸರು. ಮೂರನೆಯದು ವೈಕಾರಿಕ. (ಇಂದ್ರಿಯಗೋಚರಗಳಾದ ಪಂಚಭೂತಗಳನ್ನೂ ಇಂದ್ರಿಯಗಳನ್ನೂ ಒಳಗೊಂಡಿರುವುದರಿಂದ) ಇದು ಐಂದ್ರಿಯಿಕ ಎನ್ನಲ್ಪಡುತ್ತದೆ (20). ಈ ರೀತಿಯಲ್ಲಿ ಬುದ್ಧಿ (ಮಹತ್) ಪೂರ್ವಕವಾದ ಪ್ರಾಕೃತಸರ್ಗವು ನಿರ್ಮಿತವಾಯಿತು. ನಾಲ್ಕನೆಯದು ಮುಖ್ಯಸರ್ಗ. ಏಕೆಂದರೆ ಸ್ಥಾವರಗಳು ಮುಖ್ಯವೆಂದು ಗಣಿತವಾಗಿವೆ. ತಿರ್ಯಗ್ಗಾಮಿಗಳ ಸೃಷ್ಟಿಯೆಂದು ಯಾವುದನ್ನು ಹೇಳಿದೆನೋ ಅದಕ್ಕೆ ತೈರ್ಯಗ್ಯೋನ್ಯ ಎಂದು ಹೆಸರು. (ಇದು ಐದನೆಯದು). ಊರ್ಧ್ವಸ್ರೋತರ ಸರ್ಗ ಆರನೆಯದು. ಅದು ದೇವಸರ್ಗ ಎನಿಸಿದೆ. ಅರ್ವಾಕ್‌ಸ್ರೋತರಾದ ಮನುಷ್ಯರ ಸರ್ಗ

---

* ಮಹತ್ತತ್ತ್ವಕ್ಕೆ ಬುದ್ಧಿಯೆಂದೂ ಬ್ರಹ್ಮನೆಂದೂ ಹೆಸರಿದೆ. ಇದನ್ನೇ ಸೃಷ್ಟಿಕರ್ತನಾದ ಬ್ರಹ್ಮನೆಂದು ವ್ಯವಹರಿಸಿದ್ದು ಪುರಾಣಗಳಲ್ಲಿ ಕಂಡುಬರುತ್ತದೆ. ಇವನನ್ನು ಬಿಟ್ಟು ಇವನಿಂದಾದ (ಮಹತ್ತಿನಿಂದಾದ) ಮುಂದಿನ ಸೃಷ್ಟಿಗಳನ್ನು ಎಣಿಸಿದಾಗ ಮನುಷ್ಯಸೃಷ್ಟಿ ಆರನೆಯದಾಗುತ್ತದೆ. ಕೆಲವರು ಐಂದ್ರಿಯಿಕ ಮತ್ತು ದೇವಸರ್ಗಗಳನ್ನು ಒಂದೆಂದು ಗಣಿಸಿ 'ಆರು' ಸಂಖ್ಯೆಯನ್ನು ಸರಿಪಡಿಸುತ್ತಾರೆ. ಇದು ಮೂಲಕ್ಕೆ ಹೊಂದುವುದಿಲ್ಲ.

**ತತೋಽರ್ವಾಕ್ಸ್ರೋತಸಾಂ ಸರ್ಗಃ ಸಪ್ತಮಃ ಸ ತು ಮಾನುಷಃ॥ 23**

**ಅಷ್ಟಮೋಽನುಗ್ರಹಃ ಸರ್ಗಃ ಸಾತ್ತ್ವಿಕಸ್ತಾಮಸಶ್ಚ ಸಃ।**
**ಪಂಚೈತೇ ವೈಕೃತಾಃ ಸರ್ಗಾಃ ಪ್ರಾಕೃತಾಸ್ತು ತ್ರಯಃ ಸ್ಮೃತಾ॥ 24**

**ಪ್ರಾಕೃತೋ ವೈಕೃತಶ್ಚೈವ ಕೌಮಾರೋ ನವಮಃ ಸ್ಮೃತಃ।**
**ಇತ್ಯೇತೇ ವೈ ಸಮಾಖ್ಯಾತಾ ನವ ಸರ್ಗಾಃ ಪ್ರಜಾಪತೇಃ॥ 25**

**ಪ್ರಾಕೃತಾ ವೈಕೃತಾಶ್ಚೈವ ಜಗತೋ ಮೂಲಹೇತವಃ।**
**ಸೃಜತೋ ಜಗದೀಶಸ್ಯ ಕಿಮನ್ಯಚ್ಛ್ರೋತುಮಿಚ್ಛಸಿ॥ 26**

*ಶ್ರೀ ಮೈತ್ರೇಯ ಉವಾಚ:*

**ಸಂಕ್ಷೇಪಾತ್ಕಥಿತಃ ಸರ್ಗೋ ದೇವಾದೀನಾಂ ಮುನೇ ತ್ವಯಾ।**
**ವಿಸ್ತರಾಚ್ಛ್ರೋತುಮಿಚ್ಛಾಮಿ ತ್ವತ್ತೋ ಮುನಿವರೋತ್ತಮ॥ 27**

---

ಏಳನೆಯದು. ಇದು ಮಾನುಷ ಸರ್ಗ (21-23). ಎಂಟನೆಯದು ಅನುಗ್ರಹ ಸರ್ಗ. ಇದು ಸಾತ್ತ್ವಿಕವೂ ತಾಮಸವೂ ಆಗಿದೆ. ಇವುಗಳಲ್ಲಿ ಕಡೆಯ ಐದು ವೈಕೃತಗಳು. ಮೊದಲನೆಯ ಮೂರು ಪ್ರಾಕೃತಗಳು (24). ಒಂಬತ್ತನೆಯದು ಕೌಮಾರ ಸರ್ಗ.* ಇದು ಪ್ರಾಕೃತವೂ ಹೌದು; ವೈಕೃತವೂ ಹೌದು. ಈ ಪ್ರಕಾರದಲ್ಲಿ ಭಗವಂತನ ಒಂಬತ್ತು ಸೃಷ್ಟಿಗಳನ್ನು ಹೇಳಿದ್ದಾಯಿತು (25). ಸೃಜಿಸಲು ಉದ್ದೇಶಿಸಿದ ಜಗದೀಶ್ವರನ ಈ ಎಲ್ಲ ಪ್ರಾಕೃತ ವೈಕೃತಸರ್ಗಗಳೂ ಜಗತ್ತಿ ಮೂಲಕಾರಣಗಳು. ಮೈತ್ರೇಯ, ಇನ್ನೇನು ಕೇಳಲು ಬಯಸುತ್ತೀಯೆ? (26) ಮೈತ್ರೇಯರು "ಮುನಿಗಳೆ, ದೇವಾದಿಗಳ ಸರ್ಗವನ್ನು ಸಂಕ್ಷೇಪವಾಗಿ ಹೇಳಿದಿರಿ. ಅದನ್ನು ಇನ್ನೂ ವಿಸ್ತಾರವಾಗಿ ಕೇಳಲಪೇಕ್ಷಿಸುತ್ತೇನೆ" ಎಂದರು. ಆಗ ಪರಾಶರ ಮುನಿಗಳು ಹೇಳಿದರು: ಆ ಪ್ರಜೆಗಳು ಹಿಂದೆ ಮಾಡಿದ ಪುಣ್ಯಪಾಪಗಳೆಂಬ ಕರ್ಮಗಳಿಂದ ಸಂಯುಕ್ತರಾಗಿದ್ದರು. ಅವುಗಳ ಸಂಸ್ಕಾರದಿಂದ ಅವರಿಗೆ

---

* ಅನುಗ್ರಹ, ಕೌಮಾರಸರ್ಗಗಳ ವಿವರಣೆಗೆ ಅನುಬಂಧವನ್ನು ನೋಡಿ—3.

*ಶ್ರೀಪರಾಶರ ಉವಾಚ:*

**ಕರ್ಮಭಿರ್ಭಾವಿತಾಃ ಪೂರ್ವೈಃ ಕುಶಲಾಕುಶಲೈಸ್ತು ತಾಃ।**
**ಖ್ಯಾತ್ಯಾ ತಯಾ ಹ್ಯನಿರ್ಮುಕ್ತಾಃ ಸಂಹಾರೇ ಹ್ಯುಪಸಂಹೃತಾಃ॥ 28**

**ಸ್ಥಾವರಾಂತಾಃ ಸುರಾದ್ಯಾಸ್ತು ಪ್ರಜಾ ಬ್ರಹ್ಮಂಶ್ಚತುರ್ವಿಧಾಃ।**
**ಬ್ರಹ್ಮಣಃ ಕುರ್ವತಃ ಸೃಷ್ಟಿಂ ಜಜ್ಞಿರೇ ಮನಸಾಸ್ತು ತಾಃ॥ 29**

**ತತೋ ದೇವಾಸುರಪಿತೄನ್ಮನುಷ್ಯಾಂಶ್ಚ ಚತುಷ್ಟಯಮ್।**
**ಸಿಸೃಕ್ಷುರಂಭಾಂಸ್ಯೇತಾನಿ ಸ್ವಮಾತ್ಮಾನಮಯೂಯುಜತ್॥ 30**

**ಯುಕ್ತಾತ್ಮನಸ್ತಮೋಮಾತ್ರಾ ಹ್ಯುದ್ರಿಕ್ತಾಭೂತ್ಪ್ರಜಾಪತೇಃ।**
**ಸಿಸೃಕ್ಷೋರ್ಜಘನಾತ್ಪೂರ್ವಮಸುರಾ ಜಜ್ಞಿರೇ ತತಃ॥ 31**

---

ಬಿಡುಗಡೆಯಾಗಿರಲಿಲ್ಲ. ಪ್ರಳಯಕಾಲದಲ್ಲಿ ಆ ಸಂಸ್ಕಾರಗಳೊಂದಿಗೇ ವಿಲೀನರಾಗಿದ್ದರು, ಅಷ್ಟೆ (27-28). ಮೈತ್ರೇಯ, ದೇವತೆಗಳಿಂದ ಹಿಡಿದು ಸ್ಥಾವರಗಳವರೆಗೆ ಇರುವ ಪ್ರಜಾವರ್ಗವು ನಾಲ್ಕು ವಿಧ.* ಸೃಷ್ಟಿಕಾರ್ಯದಲ್ಲಿ ಪ್ರವೃತ್ತನಾದ ಬ್ರಹ್ಮನ ಮನಸ್ಸಿನಿಂದ ಈ ಪ್ರಜಾವರ್ಗವು ಜನಿಸಿತು (29). ದೇವ, ಅಸುರ, ಪಿತೃ, ಮನುಷ್ಯ—ಎಂಬ ಚತುಷ್ಟಯ ವನ್ನೂ ಮತ್ತು ಜಲವನ್ನೂ ಸೃಜಿಸಬೇಕೆಂದು ತನ್ನ ದೇಹವನ್ನೇ ಉಪಯೋಗಿಸಿದನು. ಧ್ಯಾನಸ್ಥನಾದ ಬ್ರಹ್ಮನ ದೇಹದಿಂದ ತಮೋಗುಣವು ಉದ್ರಿಕ್ತವಾಯಿತು. ಆಗ ಆತನ ಸೊಂಟದ ಮುಂಭಾಗದಿಂದ ಮೊದಲು ಅಸುರರು ಹುಟ್ಟಿದರು (30-31). ಆಮೇಲೆ ಬ್ರಹ್ಮನು ತಮೋಮಯನಾದ ಆ ದೇಹವನ್ನು ಪರಿತ್ಯಜಿಸಿದನು. ಮೈತ್ರೇಯ, ಪರಿತ್ಯಕ್ತವಾದ ಆ ದೇಹ ರಾತ್ರಿಯಾಯಿತು. ಮತ್ತೆ ಸೃಷ್ಟಿಸಬೇಕೆಂದು ಇನ್ನೊಂದು ದೇಹವನ್ನು

---

* ಮುಂದಿನ ಶ್ಲೋಕದಲ್ಲಿ ಹೇಳುವಂತೆ ದೇವ, ಅಸುರ, ಪಿತೃ, ಮನುಷ್ಯ—ಎಂದು ನಾಲ್ಕು ವಿಧ. ಹೀಗೆ ಹೇಳಿದರೆ 'ಸ್ಥಾವರ' ಬಿಟ್ಟುಹೋಗುತ್ತದೆ. ಆದ್ದರಿಂದ ದೇವ, ಮನುಷ್ಯ, ತಿರ್ಯಗ್‌ಜಂತು, ವೃಕ್ಷಾದಿ ಸ್ಥಾವರ—ಎಂದು ವಿಂಗಡಿಸುವುದು ಉತ್ತಮ.

**ಉತ್ಸಸರ್ಜ ತತಸ್ತಾಂ ತು ತಮೋಮಾತ್ರಾತ್ಮಿಕಾಂ ತನುಮ್।**
**ಸಾ ತು ತ್ಯಕ್ತಾ ತನುಸ್ತೇನ ಮೈತ್ರೇಯಾಭೂದ್ವಿಭಾವರೀ॥** 32

**ಸಿಸೃಕ್ಷುರನ್ಯದೇಹಸ್ಥಃ ಪ್ರೀತಿಮಾಪ ತತಃ ಸುರಾಃ।**
**ಸತ್ತ್ವೋದ್ರಿಕ್ತಾಃ ಸಮುದ್ಭೂತಾ ಮುಖತೋ ಬ್ರಹ್ಮಣೋ ದ್ವಿಜ॥**

**ತ್ಯಕ್ತಾ ಸಾಪಿ ತನುಸ್ತೇನ ಸತ್ತ್ವಪ್ರಾಯಮಭೂದ್ದಿನಮ್।**
**ತತೋ ಹಿ ಬಲಿನೋ ರಾತ್ರಾವಸುರಾ ದೇವತಾ ದಿವಾ॥** 34

**ಸತ್ತ್ವಮಾತ್ರಾತ್ಮಿಕಾಮೇವ ತತೋಽನ್ಯಾಂ ಜಗೃಹೇ ತನುಮ್।**
**ಪಿತೃವನ್ಮನ್ಯಮಾನಸ್ಯ ಪಿತರಸ್ತಸ್ಯ ಜಜ್ಞಿರೇ॥** 35

**ಉತ್ಸಸರ್ಜ ತತಸ್ತಾಂ ತು ಪಿತೄನ್ ಸೃಷ್ಟ್ವಾಪಿ ಸ ಪ್ರಭುಃ।**
**ಸಾ ಚೋತ್ಸೃಷ್ಟಾಭವತ್ಸಂಧ್ಯಾ ದಿನನಕ್ತಾಂತರಸ್ಥಿತಾ॥** 36

**ರಜೋಮಾತ್ರಾತ್ಮಿಕಾಮನ್ಯಾಂ ಜಗೃಹೇ ಸ ತನುಂ ತತಃ।**
**ರಜೋಮಾತ್ರೋತ್ಕಟಾ ಜಾತಾ ಮನುಷ್ಯಾ ದ್ವಿಜಸತ್ತಮ॥** 37

---

ಧರಿಸಲಾಗಿ ಆತನಿಗೆ ಸಂತೋಷವಾಯಿತು. ಆಗ ಬ್ರಹ್ಮನ ಮುಖದಿಂದ ಸತ್ತ್ವಗುಣಪ್ರಧಾನರಾದ ದೇವತೆಗಳು ಜನಿಸಿದರು (32-33). ಆಮೇಲೆ ಸತ್ತ್ವಗುಣದಿಂದ ಆವಿಷ್ಟವಾದ ಆ ಶರೀರವನ್ನೂ ಬ್ರಹ್ಮನು ತ್ಯಜಿಸಲಾಗಿ, ಸತ್ತ್ವಬಹುಳವಾದ ಹಗಲು ಹುಟ್ಟಿತು. ಆದ್ದರಿಂದ ಅಸುರರು ರಾತ್ರಿಯಲ್ಲಿಯೂ ದೇವತೆಗಳು ಹಗಲಿನಲ್ಲಿಯೂ ಬಲಶಾಲಿಗಳಾಗಿರುತ್ತಾರೆ (34). ಮತ್ತೆ ಬ್ರಹ್ಮನು ಸತ್ತ್ವಾಂಶದಿಂದ ಕೂಡಿದ ಇನ್ನೊಂದು ಶರೀರವನ್ನು ಧರಿಸಿ, ತಾನು ಜಗತ್ತಿನ ಪಿತೃವೆಂದು ಭಾವಿಸುತ್ತಿರಲಾಗಿ, ಪಿತೃದೇವತೆಗಳು ಹುಟ್ಟಿದರು. ಹೀಗೆ ಪಿತೃಗಳನ್ನು ಸೃಜಿಸಿ ಬ್ರಹ್ಮನು ಆ ದೇಹವನ್ನೂ ತ್ಯಜಿಸಿದನು. ಆ ದೇಹವು ಹಗಲು ರಾತ್ರಿಗಳ ನಡುವಿನ ಕಾಲವಾದ ಸಂಧ್ಯೆ (ಸಂಜೆ)ಯಾಯಿತು (35-36). ಅನಂತರ ಆತನು ಹೆಚ್ಚಾಗಿ ರಜೋಗುಣ ವಿಶಿಷ್ಟವಾದ ಇನ್ನೊಂದು ದೇಹವನ್ನು ಧರಿಸಲಾಗಿ, ಅದರಿಂದ ರಜೋಗುಣಪ್ರಾಯರಾದ ಮನುಷ್ಯರು ಹುಟ್ಟಿದರು. ಒಡನೆಯೇ ಪ್ರಜಾಪತಿಯು ಆ ದೇಹವನ್ನು ತ್ಯಜಿಸಲಾಗಿ ಜ್ಯೋತ್ಸ್ನೆಯೆಂಬ ಪ್ರಾತಃಸಂಧ್ಯೆ

**ತಾಮಪ್ಯಾಶು ಸ ತತ್ಯಾಜ ತನುಂ ಸದ್ಯಃ ಪ್ರಜಾಪತಿಃ।**
**ಜ್ಯೋತ್ಸ್ನಾಸಮಭವತ್ಸಾಪಿ ಪ್ರಾಕ್ಸಂಧ್ಯಾ ಯಾಭಿಧೀಯತೇ॥ 38**

**ಜ್ಯೋತ್ಸ್ನಾಗಮೇ ತು ಬಲಿನೋ ಮನುಷ್ಯಾಃ ಪಿತರಸ್ತಥಾ।**
**ಮೈತ್ರೇಯ ಸಂಧ್ಯಾಸಮಯೇ ತಸ್ಮಾದೇತೇ ಭವಂತಿ ವೈ॥ 39**

**ಜ್ಯೋತ್ಸ್ನಾ ರಾತ್ರ್ಯಹನೀ ಸಂಧ್ಯಾ ಚತ್ವಾರ್ಯೇತಾನಿ ವೈ ಪ್ರಭೋಃ।**
**ಬ್ರಹ್ಮಣಸ್ತು ಶರೀರಾಣಿ ತ್ರಿಗುಣೋಪಾಶ್ರಯಾಣಿ ತು॥ 40**

**ರಜೋಮಾತ್ರಾತ್ಮಿಕಾಮೇವ ತತೋಽನ್ಯಾಂ ಜಗೃಹೇ ತನುಮ್।**
**ತತಃ ಕ್ಷುದ್ ಬ್ರಹ್ಮಣೋ ಜಾತಾ ಜಜ್ಞೇ ಕಾಮಸ್ತಯಾ ತತಃ॥ 41**

**ಕ್ಷುತ್‌ಕ್ಷಾಮಾನಂಧಕಾರೇಽಥ ಸೋಽಸೃಜದ್ಭಗವಾಂಸ್ತತಃ।**
**ವಿರೂಪಾಃ ಶ್ಮಶ್ರುಲಾಜಾತಾಸ್ತೇಽಭ್ಯಧಾವಂಸ್ತತಃ ಪ್ರಭುಮ್॥ 42**

**ಮೈವಂ ಭೋ ರಕ್ಷ್ಯತಾಮೇಷ ಯೈರುಕ್ತಂ ರಾಕ್ಷಸಾಸ್ತು ತೇ।**
**ಊಚುಃ ಖಾದಾಮ ಇತ್ಯನ್ಯೇ ಯೇ ತೇ ಯಕ್ಷಾಸ್ತು ಜಕ್ಷಣಾತ್॥**

---

ಜನಿಸಿತು (37-38). ಆದ್ದರಿಂದ ಮೈತ್ರೇಯ, ಪ್ರಾತಃಕಾಲದಲ್ಲಿ ಮನುಷ್ಯರೂ ಸಂಜೆ(ಸಾಯಂಸಂಧ್ಯೆ)ಯಲ್ಲಿ ಪಿತೃಗಳೂ ಬಲಿಷ್ಠರಾಗಿರುತ್ತಾರೆ (39). ಜ್ಯೋತ್ಸ್ನೆಯೆಂಬ ಪ್ರಾತಃಸಂಧ್ಯೆ, ರಾತ್ರಿ ಮತ್ತು ಸಾಯಂಕಾಲ—ಇವು ತ್ರಿಗುಣವಿಶಿಷ್ಟಗಳಾದ ಬ್ರಹ್ಮನ ನಾಲ್ಕು ಶರೀರಗಳು. ತರುವಾಯ ಬ್ರಹ್ಮನು ಕೇವಲ ರಜೋಗುಣಮಯವಾದ ಮತ್ತೊಂದು ಶರೀರವನ್ನು ಪಡೆಯಲಾಗಿ ಅದರಿಂದ ಹಸಿವೂ ಹಸಿವಿನಿಂದ ಕಾಮವೂ ಹುಟ್ಟಿದವು* (40-41). ಭಗವಾನ್ ಬ್ರಹ್ಮನು ಅಂಧಕಾರದಲ್ಲಿ ನಿಂತು ಹಸಿವಿನಿಂದ ದೀನರಾದ ಕೆಲವರನ್ನು ಸೃಷ್ಟಿಸಿದನು. ಕುರೂಪಿಗಳೂ ಗಡ್ಡಮೀಸೆಗಳಿಂದ ಕೂಡಿದವರೂ ಆದ ಆ ಜನರು ಬ್ರಹ್ಮನ ಬಳಿಗೆ ಓಡುತ್ತ ಬಂದು “ಸ್ವಾಮಿ, ಹೀಗಾಗುವುದು ಬೇಡ. ನಮ್ಮನ್ನು ರಕ್ಷಿಸು!” ಎಂದು ಕೂಗಿಕೊಂಡರು. ಅವರಲ್ಲಿ ‘ರಕ್ಷಿಸು’ ಎಂದು ಹೇಳಿದವರು ರಾಕ್ಷಸರೆನಿಸಿದರು! ತಿನ್ನುತ್ತೇವೆ ಎಂದು ಯಾರು ಹೇಳಿದರೋ ಅವರು ಜಕ್ಷಣ (ಭಕ್ಷಣ) ನಿಮಿತ್ತದಿಂದ

* ಮೂಲಶ್ಲೋಕದಲ್ಲಿ ಕಾಮ ಎಂಬುದಕ್ಕೆ ಬದಲಾಗಿ ಕೋಪ ಎಂದು ಪಾಠಾಂತರವಿದೆ. ‘ಹಸಿವಿನಿಂದ ಕೋಪ ಹುಟ್ಟಿತು’ ಎಂದು ಅರ್ಥ.

**ಅಪ್ರಿಯಾನಥ ತಾಂದೃಷ್ಟ್ವಾ ಕೇಶಾಃ ಶೀರ್ಯಂತ ವೇಧಸಃ।**
**ಹೀನಾಶ್ಚ ಶಿರಸೋ ಭೂಯಃ ಸಮಾರೋಹಂತ ತಚ್ಛಿರಃ॥ 44**

**ಸರ್ಪಣಾತ್ತೇಽಭವನ್ ಸರ್ಪಾ ಹೀನತ್ವಾದಹಯಃ ಸ್ಮೃತಾಃ।**
**ತತಃ ಕ್ರುದ್ಧೋ ಜಗತ್ಸ್ರಷ್ಟಾ ಕ್ರೋಧಾತ್ಮಾನಂ ವಿನಿರ್ಮಮೇ॥ 45**

**ವರ್ಣೇನ ಕಪಿಶೇನೋಗ್ರಭೂತಾಸ್ತೇ ಪಿಶಿತಾಶನಾಃ।**
**ಗಾಯತೋಽಂಗಾತ್ಸಮುತ್ಪನ್ನಾ ಗಂಧರ್ವಾಸ್ತಸ್ಯ ತತ್ಕ್ಷಣಾತ್॥ 46**

**ಪಿಬಂತೋ ಜಜ್ಞಿರೇ ವಾಚಂ ಗಂಧರ್ವಾಸ್ತೇನ ತೇ ದ್ವಿಜ।**
**ಏತಾನಿ ಸೃಷ್ಟ್ವಾ ಭಗವಾನ್ ಬ್ರಹ್ಮಾ ತಚ್ಛಕ್ತಿಚೋದಿತಃ॥ 47**

**ತತಃ ಸ್ವಚ್ಛಂದತೋಽನ್ಯಾನಿ ವಯಾಂಸಿ ವಯಸೋಽಸೃಜತ್।**
**ಅವಯೋ ವಕ್ಷಸಶ್ಚಕ್ರೇ ಮುಖತೋಽಜಾಃ ಸ ಸೃಷ್ಟವಾನ್॥ 48**

---

ಯಕ್ಷರಾದರು! (42-43). ಮನಸ್ಸಿಗೆ ಅಪ್ರಿಯರಾದ ಅವರನ್ನು ನೋಡಿದಾಗ ಬ್ರಹ್ಮನ ಕೇಶಗಳು ಕೆಳಗೆ ಉದುರಿದವು. ಶಿರಸ್ಸಿನಿಂದ ಹೀನವಾಗಿ ಉದುರಿದ ಅವು ಹಾವುಗಳಾಗಿ ಮತ್ತೆ ಅವನ ಶಿರಸ್ಸನ್ನೇರಿದವು! (44). ಶಿರಸ್ಸಿನಿಂದ 'ಹೀನ'ವಾಗಿ ಬಿದ್ದ ಪ್ರಯುಕ್ತ ಅಹಿಗಳೆಂದೂ ಮೇಲೆ ಏರಿದ್ದರಿಂದ ('ಸರ್ಪಣ'ದಿಂದ) ಸರ್ಪಗಳೆಂದೂ ಅವುಗಳಿಗೆ ಹೆಸರಾಯಿತು. ಅನಂತರ ಜಗತ್ಕರ್ತನು ಕ್ರುದ್ಧನಾಗಿ ಕ್ರೋಧಾತ್ಮರಾದ ಭೂತಗಳನ್ನು ಸೃಜಿಸಿದನು. ಅವು ಹಳದಿಮಿಶ್ರವಾದ ಕಪ್ಪು ಬಣ್ಣದವು. ಮಾಂಸಾಹಾರಿಗಳು. ಆಮೇಲೆ ಗಾನ ಮಾಡುತ್ತಿದ್ದ ಬ್ರಹ್ಮನ ದೇಹದಿಂದ ಕೂಡಲೇ ಗಂಧರ್ವರು ಹುಟ್ಟಿದರು (45-46). ಅವರು ಶಬ್ದವನ್ನು ಕುಡಿಯುವಂತೆ ಹಾಡುತ್ತ (ಗಾಂ-ಧಯಂತಃ) ಜನಿಸಿದ್ದರಿಂದ ಗಂಧರ್ವರೆನಿಸಿದರು. ಹೀಗೆ ಅವರವರ ಕರ್ಮ ಸಂಸ್ಕಾರಗಳಿಂದ ಪ್ರೇರಿತನಾದ ಭಗವಾನ್ ಬ್ರಹ್ಮನು ಹಿಂದೆ ಹೇಳಿದವರನ್ನು ಸೃಜಿಸಿ, ಮತ್ತೆ ಸ್ವೇಚ್ಛೆಯಾಗಿ ತನ್ನ ತೇಜಸ್ಸಿನಿಂದ ಹಕ್ಕಿಗಳನ್ನು, ಎದೆಯಿಂದ ಕುರಿಗಳನ್ನು ಬಾಯಿಯಿಂದ ಮೇಕೆಗಳನ್ನು ಸೃಷ್ಟಿಸಿದನು (47-48). ಆ ಪ್ರಜಾಪತಿಯು ತನ್ನ ಹೊಟ್ಟೆ ಮತ್ತು ಅದರ ಪಾರ್ಶ್ವಗಳಿಂದ

**ಸೃಷ್ಟವಾನುದರಾದ್ಗಾಶ್ಚ ಪಾರ್ಶ್ವಾಭ್ಯಾಂ ಚ ಪ್ರಜಾಪತಿಃ।**
**ಪದ್ಭ್ಯಾಂ ಚಾಶ್ವಾನ್ಸಮಾತಂಗಾನ್ ರಾಸಭಾನ್ ಗವಯಾನ್ ಮೃಗಾನ್॥**

**ಉಷ್ಟ್ರಾನಶ್ವತರಾಂಶ್ಚೈವ ನ್ಯಂಕೂನನ್ಯಾಶ್ಚ ಜಾತಯಃ।**
**ಓಷಧ್ಯಃ ಫಲಮೂಲಿನ್ಯೋ ರೋಮಭ್ಯಸ್ತಸ್ಯ ಜಜ್ಞಿರೇ॥** 50

**ತ್ರೇತಾಯುಗಮುಖೇ ಬ್ರಹ್ಮಾ ಕಲ್ಪಸ್ಯಾದೌ ದ್ವಿಜೋತ್ತಮ।**
**ಸೃಷ್ಟ್ವಾ ಪಶ್ವೋಷಧೀಃ ಸಮ್ಯಗ್ಯುಯೋಜ ಸ ತದಾಧ್ವರೇ॥** 51

**ಗೌರಜಃ ಪುರುಷೋ ಮೇಷಶ್ಚಾಶ್ವಾಶ್ವತರಗರ್ದಭಾಃ।**
**ಏತಾನ್ಗ್ರಾಮ್ಯಾನ್ಪಶೂನಾಹುರಾರಣ್ಯಾಂಶ್ಚ ನಿಬೋಧ ಮೇ॥** 52

**ಶ್ವಾಪದಾ ದ್ವಿಖುರಾ ಹಸ್ತೀ ವಾನರಾಃ ಪಕ್ಷಿಪಂಚಮಾಃ।**
**ಓದಕಾಃ ಪಶವಃ ಷಷ್ಠಾಃ ಸಪ್ತಮಾಸ್ತು ಸರೀಸೃಪಾಃ॥** 53

---

ಗೋವುಗಳನ್ನೂ ಪಾದಗಳಿಂದ ಕುದುರೆ, ಆನೆ, ಕತ್ತೆ, ಕಾಡುಹಸು, ಜಿಂಕೆ, ಒಂಟೆ, ಹೇಸರಗತ್ತೆ, ಚಿಗರೆ—ಮುಂತಾದ ಪ್ರಾಣಿಗಳನ್ನೂ ನಿರ್ಮಿಸಿದನು. ಆತನ ರೋಮಗಳಿಂದ ಫಲಮೂಲ ಪ್ರಧಾನಗಳಾದ ಗಿಡಮೂಲಿಕೆಗಳು ಹುಟ್ಟಿದವು (49-50). ದ್ವಿಜೋತ್ತಮ, ಬ್ರಹ್ಮನು ಕಲ್ಪಾದಿಯಲ್ಲಿ ಈ ಪಶುಗಳನ್ನೂ ಗಿಡಮೂಲಿಕೆಗಳನ್ನೂ ಸೃಷ್ಟಿಸಿ, ತ್ರೇತಾಯುಗದ ಆದಿಯಲ್ಲಿ ಅವು ಯಜ್ಞೋಪಯೋಗಿಯಾಗುವಂತೆ ನಿಯಮಿಸಿದನು (51). ಗೋವು, ಮೇಕೆ, ಪುರುಷ*, ಕುರಿ, ಕುದುರೆ, ಹೇಸರಗತ್ತೆ, ಕತ್ತೆ—ಇವನ್ನು ಗ್ರಾಮ್ಯ ಪಶುಗಳೆಂದು ಹೇಳುತ್ತಾರೆ. ಇನ್ನು ಅರಣ್ಯಪಶುಗಳನ್ನು ಹೇಳುತ್ತೇನೆ ಕೇಳು (52). (ಹುಲಿ ಮೊದಲಾದ) ಹಿಂಸ್ರಪ್ರಾಣಿಗಳು, ಎರಡು ಗೊರಸುಗಳುಳ್ಳ ಇತರ ಪ್ರಾಣಿಗಳು, ಆನೆ, ಕಪಿಗಳು, ಐದನೆಯದಾಗಿ ಪಕ್ಷಿಗಳು, ಆರನೆಯವಾಗಿ ಜಲಜಂತುಗಳು, ಏಳನೆಯವಾಗಿ ಹಾವು ಮೊದಲಾದ

---

* ಇಲ್ಲಿ ಪುರುಷನನ್ನು (ಮನುಷ್ಯನನ್ನು) ಪಶುವೆಂದೇ ಗಣಿಸಲಾಗಿದೆ. ಹಿಂದೆ ನರಮೇಧವಿದ್ದುದರಿಂದ ಮನುಷ್ಯನನ್ನು ಗ್ರಾಮ್ಯಪಶುವೆಂದು ಗಣಿಸಿರಬಹುದು. ಹೆಚ್. ಹೆಚ್. ವಿಲ್ಸನ್ ಅವರು ಪುರುಷ ಶಬ್ದಕ್ಕೆ Hog (ಹಂದಿ) ಎಂದು ಅರ್ಥ ಮಾಡಿದ್ದಾರೆ. ಅದಕ್ಕೆ ಆಧಾರ ತಿಳಿಯದು.

**ಗಾಯತ್ರಂ ಚ ಋಚಶ್ಚೈವ ತ್ರಿವೃತ್ಸ್ತೋಮಂ ರಥಂತರಮ್।**
**ಅಗ್ನಿಷ್ಟೋಮಂ ಚ ಯಜ್ಞಾನಾಂ ನಿರ್ಮಮೇ ಪ್ರಥಮಾನ್ಮುಖಾತ್॥**

**ಯಜೂಂಷಿ ತ್ರೈಷ್ಟುಭಂ ಛಂದಃ ಸ್ತೋಮಂ ಪಂಚದಶಂ ತಥಾ।**
**ಬೃಹತ್ಸಾಮ ತಥೋಕ್ಥಂ ಚ ದಕ್ಷಿಣಾದಸೃಜನ್ಮುಖಾತ್॥** 55

**ಸಾಮಾನಿ ಜಗತೀಛಂದಃ ಸ್ತೋಮಂ ಸಪ್ತದಶಂ ತಥಾ।**
**ವೈರೂಪಮತಿರಾತ್ರಂ ಚ ಪಶ್ಚಿಮಾದಸೃಜನ್ಮುಖಾತ್॥** 56

**ಏಕವಿಂಶಮಥರ್ವಾಣಮಾಪ್ತೋರ್ಯಾಮಾಣಮೇವ ಚ।**
**ಅನುಷ್ಟುಭಂ ಚ ವೈರಾಜಮುತ್ತರಾದಸೃಜನ್ಮುಖಾತ್॥** 57

**ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯಸ್ತಸ್ಯ ಜಜ್ಞಿರೇ।**
**ದೇವಾಸುರಪಿತೄನ್ ಸೃಷ್ಟ್ವಾ ಮನುಷ್ಯಾಂಶ್ಚ ಪ್ರಜಾಪತಿಃ॥** 58

---

ಸರೀಸೃಪಗಳು ವನ್ಯಪಶುಗಳೆನಿಸುತ್ತವೆ (53). ಬ್ರಹ್ಮನು ತನ್ನ ಪೂರ್ವದಿಕ್ಕಿನ ಮುಖದಿಂದ ಗಾಯತ್ರೀ ಛಂದಸ್ಸನ್ನೂ ಋಗ್ವೇದವನ್ನೂ ಯಜ್ಞಗಳಲ್ಲಿ ತ್ರಿವೃತ್‌ಸೋಮ, ರಥಂತರ ಮತ್ತು ಅಗ್ನಿಷ್ಟೋಮಗಳೆಂಬ ಯಜ್ಞಗಳನ್ನೂ ಸೃಜಿಸಿದನು (54). ದಕ್ಷಿಣ ಮುಖದಿಂದ ಯಜುರ್ವೇದ, ತ್ರಿಷ್ಟುಪ್ ಛಂದಸ್ಸು, ಪಂಚದಶಸ್ತೋಮಗಳು, ಬೃಹತ್ಸಾಮ, ಉಕ್ಥವೆಂಬ ಯಜ್ಞ—ಇವನ್ನು ಸೃಜಿಸಿದನು. ಪಶ್ಚಿಮದ ಮುಖದಿಂದ ಸಾಮವೇದ, ಜಗತೀ ಛಂದಸ್ಸು, ಸಪ್ತದಶಸ್ತೋಮ, ವೈರೂಪ, ಅತಿರಾತ್ರಗಳೆಂಬ ಯಜ್ಞ—ಇವನ್ನು ಸೃಜಿಸಿದನು (55-56). ಉತ್ತರ ದಿಕ್ಕಿನ ಮುಖದಿಂದ ಏಕವಿಂಶ ಸ್ತೋಮ, ಅಥರ್ವವೇದ, ಆಪ್ತೋರ್ಯಾಮವೆಂಬ ಯಜ್ಞ, ಅನುಷ್ಟುಪ್ ಛಂದಸ್ಸು, ವೈರಾಜವೆಂಬ ಸಾಮಭೇದ—ಇವುಗಳನ್ನು ಸೃಷ್ಟಿಸಿದನು (57). ಈ ಪ್ರಕಾರದಲ್ಲಿ ಉಚ್ಚನೀಚಗಳಾದ ನಾನಾ ಜಂತುಗಳು ಆತನ ಅಂಗ ಗಳಿಂದ ಹುಟ್ಟಿದವು. ಪಿತಾಮಹನಾದ ಆ ಪ್ರಜಾಪತಿಯು ದೇವಾಸುರ ಪಿತೃ ಮನುಷ್ಯರನ್ನು ಸೃಜಿಸಿ, ಮತ್ತೆ ಕಲ್ಪಾದಿಯಲ್ಲಿ ಯಕ್ಷ, ಪಿಶಾಚ,

**ತತಃ ಪುನಃ ಸಸರ್ಜಾದೌ ಸಂಕಲ್ಪಸ್ಯ ಪಿತಾಮಹಃ।**
**ಯಕ್ಷಾನ್ ಪಿಶಾಚಾನ್ ಗಂಧರ್ವಾನ್ ತಥೈವಾಪ್ಸರಸಾಂ**
**ಗಣಾನ್॥ 59**

**ನರಕಿನ್ನರರಕ್ಷಾಂಸಿ ವಯಃಪಶುಮೃಗೋರಗಾನ್।**
**ಅವ್ಯಯಂ ಚ ವ್ಯಯಂ ಚೈವ ಯದಿದಂ ಸ್ಥಾಣುಜಂಗಮಮ್॥**

**ತತ್ಸಸರ್ಜ ತದಾ ಬ್ರಹ್ಮಾ ಭಗವಾನಾದಿಕೃತ್ಪ್ರಭುಃ।**
**ತೇಷಾಂ ಯೇ ಯಾನಿ ಕರ್ಮಾಣಿ ಪ್ರಾಕ್‌ಸೃಷ್ಟ್ಯಾಂ ಪ್ರತಿಪೇದಿರೇ।**
**ತಾನ್ಯೇವ ತೇ ಪ್ರಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ॥ 61**

**ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮಾವೃತಾನೃತೇ।**
**ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ॥ 62**

**ಇಂದ್ರಿಯಾರ್ಥೇಷು ಭೂತೇಷು ಶರೀರೇಷು ಚ ಸ ಪ್ರಭುಃ।**
**ನಾನಾತ್ವಂ ವಿನಿಯೋಗಂ ಚ ಧಾತೈವಂ ವ್ಯಸೃಜತ್ಸ್ವಯಮ್॥ 63**

---

ಗಂಧರ್ವ, ಅಪ್ಸರ ಸ್ತ್ರೀಯರನ್ನೂ ಸೃಜಿಸಿದನು (58-59). ಅಲ್ಲದೆ ಕಿಂಪುರುಷ, ಕಿಂನರ, ರಕ್ಷೋಗಣಗಳನ್ನೂ ಪಕ್ಷಿ, ಪಶು, ಮೃಗ, ಸರೀಸೃಪ ಗಳನ್ನೂ ಒಟ್ಟಿನಲ್ಲಿ ನಿತ್ಯಾನಿತ್ಯಗಳಾದ ಎಲ್ಲ ಸ್ಥಾವರ ಜಂಗಮಗಳನ್ನೂ ನಿರ್ಮಿಸಿದನು (60). ಆದಿಕರ್ತನೂ ಸ್ವಾಮಿಯೂ ಆದ ಭಗವಾನ್ ಬ್ರಹ್ಮ ದೇವನು ಈ ಪ್ರಕಾರ ಎಲ್ಲವನ್ನೂ ಸೃಷ್ಟಿಸಿದನು. ಹಿಂದಿನ ಸೃಷ್ಟಿಯಲ್ಲಿ ಈ ಜೀವಗಳು ಯಾವ ಯಾವ ಕರ್ಮಗಳನ್ನು ಮಾಡಿ ಸಂಸ್ಕಾರಗಳನ್ನು ಪಡೆದಿರುತ್ತವೆಯೋ ಅವಕ್ಕೆ ಅನುಗುಣವಾದ ಕರ್ಮಶೇಷಗಳನ್ನು ಮತ್ತೆ ಮತ್ತೆ ಸೃಷ್ಟಿಯಾದಾಗಲೂ ಪಡೆಯುತ್ತವೆ (61). ಹಿಂಸೆ-ಅಹಿಂಸೆ, ಮೃದುತ್ವ-ಕ್ರೌರ್ಯ, ಧರ್ಮ-ಅಧರ್ಮ, ಸತ್ಯ-ಅನೃತ—ಇವುಗಳಿಂದ ಸಂಸ್ಕಾರಹೊಂದಿದ ಪ್ರಾಣಿಗಳು ಅಂತಹ ಪ್ರವೃತ್ತಿಯನ್ನೇ ಅವಲಂಬಿಸು ತ್ತವೆ. ಅದು ಆ ಜೀವಿಗೆ ರುಚಿಸುತ್ತದೆ (62). ಹೀಗೆ ಆ ಸೃಷ್ಟಿಕರ್ತನು ಇಂದ್ರಿಯಗೋಚರವಾದ ಶಬ್ದಾದಿ ವಿಷಯಗಳಲ್ಲಿಯೂ ಜೀವಿಗಳಲ್ಲಿಯೂ ಅವುಗಳ ಶರೀರಗಳಲ್ಲಿಯೂ ನಾನಾ ಪ್ರಕಾರಗಳನ್ನೂ ಮತ್ತು ಅವುಗಳ ಉಪಯೋಗ ವ್ಯವಸ್ಥೆಯನ್ನೂ ತಾನೇ ಮಾಡಿದನು (63). ಪಂಚಭೂತಗಳ

**ನಾಮರೂಪಂ ಚ ಭೂತಾನಾಂ ಕೃತ್ಯಾನಾಂ ಚ ಪ್ರಪಂಚನಮ್ ।**
**ವೇದಶಬ್ದೇಭ್ಯ ಏವಾದೌ ದೇವಾದೀನಾಂ ಚಕಾರ ಸಃ ॥ 64**

**ಋಷೀಣಾಂ ನಾಮಧೇಯಾನಿ ಯಥಾ ವೇದಶ್ರುತಾನಿ ವೈ ।**
**ತಥಾ ನಿಯೋಗಯೋಗ್ಯಾನಿ ಹ್ಯನ್ಯೇಷಾಮಪಿ ಸೋಽಕರೋತ್ ॥65**

**ಯಥರ್ತುಷ್ವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ ।**
**ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು ॥ 66**

**ಕರೋತ್ಯೇವಂವಿಧಾಂ ಸೃಷ್ಟಿಂ ಕಲ್ಪಾದೌ ಸ ಪುನಃ ಪುನಃ ।**
**ಸಿಸೃಕ್ಷಾಶಕ್ತಿಯುಕ್ತೋಽಸೌ ಸೃಜ್ಯಶಕ್ತಿಪ್ರಚೋದಿತಃ ॥ 67**

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಪಂಚಮೋಽಧ್ಯಾಯಃ

---

ಮತ್ತು ದೇವಾದಿಜೀವಿಗಳ ನಾಮರೂಪಗಳನ್ನೂ ಕರ್ತವ್ಯಗಳ ವಿವರವನ್ನೂ ಆತನು ವೇದಗಳ ಆಧಾರದಿಂದಲೇ ಗೊತ್ತುಮಾಡಿದನು. ವೇದಗಳಲ್ಲಿ ಇರುವಂತೆಯೇ ಋಷಿಗಳ ನಾಮಧೇಯಗಳನ್ನೂ ಹಾಗೆಯೇ ಇತರರ ಕರ್ತವ್ಯವಿಶೇಷಗಳನ್ನೂ ವೇದಗಳಲ್ಲಿ ಹೇಳಿದಂತೆ ಬ್ರಹ್ಮನು ಗೊತ್ತುಪಡಿಸಿದನು ( 64-65). ಯಾವರೀತಿಯಲ್ಲಿ ವಸಂತಾದಿ ಋತುಗಳು ಪರ್ಯಾಯದಿಂದ ಮತ್ತೆ ಮತ್ತೆ ಬಂದರೂ ಹಿಂದೆ ಇದ್ದ ವಿಭಿನ್ನ ಚಿಹ್ನೆಗಳೇ ಕಾಣಿಸುತ್ತವೆಯೋ ಹಾಗೆಯೇ ಬೇರೆ ಬೇರೆ ಸೃಷ್ಟಿಗಳಲ್ಲಿ ಹಿಂದೆ ಇದ್ದ ವಸ್ತುಗಳೇ ಕಾಣಿಸುತ್ತವೆ (66). ಸೃಷ್ಟಿ ಮಾಡಬೇಕೆಂಬ ಇಚ್ಛಾಶಕ್ತಿಯಿಂದ ಕೂಡಿದ ಬ್ರಹ್ಮನು ಸೃಜ್ಯಮಾನವಸ್ತುಗಳಲ್ಲಿರುವ ಸಂಸ್ಕಾರಶಕ್ತಿಯಿಂದ ಪ್ರೇರಿತನಾಗಿ ಪ್ರತಿಯೊಂದು ಕಲ್ಪಾದಿಯಲ್ಲಿಯೂ ಮತ್ತೆ ಮತ್ತೆ ಹೀಗೆಯೇ ಮಾಡುತ್ತಾನೆ (67).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಐದನೆಯ ಅಧ್ಯಾಯ ಮುಗಿಯಿತು.



## ಷಷ್ಠೋऽಧ್ಯಾಯಃ

*ಶ್ರೀ ಮೈತ್ರೇಯ ಉವಾಚ:*

**ಅರ್ವಾಕ್ಸ್ರೋತಾಸ್ತು ಕಥಿತೋ ಭವತಾ ಯಸ್ತು ಮಾನುಷಃ।**
**ಬ್ರಹ್ಮನ್ವಿಸ್ತರತೋ ಬ್ರೂಹಿ ಬ್ರಹ್ಮಾ ತಮಸೃಜದ್ಯಥಾ॥** 1

**ಯಥಾ ಚ ವರ್ಣಾನಸೃಜದ್ಯದ್ಗುಣಾಂಶ್ಚ ಪ್ರಜಾಪತಿಃ।**
**ಯಚ್ಚ ತೇಷಾಂ ಸ್ಮೃತಂ ಕರ್ಮ ವಿಪ್ರಾದೀನಾಂ ತದುಚ್ಯತಾಮ್॥**

*ಶ್ರೀ ಪರಾಶರ ಉವಾಚ:*

**ಸತ್ಯಾಭಿಧ್ಯಾಯಿನಃ ಪೂರ್ವಂ ಸಿಸೃಕ್ಷೋರ್ಬ್ರಹ್ಮಣೋ ಜಗತ್।**
**ಅಜಾಯಂತ ದ್ವಿಜಶ್ರೇಷ್ಠ ಸತ್ತ್ವೋದ್ರಿಕ್ತಾ ಮುಖಾತ್ಪ್ರಜಾಃ॥** 3

---

## ಅಧ್ಯಾಯ 6

ಚಾತುರ್ವರ್ಣ್ಯದ ವ್ಯವಸ್ಥೆ. ಪೃಥಿವಿಯ ವಿಭಾಗ. ಅನ್ನಾದಿಗಳ ಉತ್ಪತ್ತಿ.

ಮೈತ್ರೇಯರು ಹೇಳಿದರು: "ಬ್ರಾಹ್ಮಣೋತ್ತಮರೆ, ಅರ್ವಾಕ್ ಸ್ರೋತಸರಾದ ಮನುಷ್ಯರ ಸರ್ಗದ ವಿಷಯವನ್ನು ಹೇಳಿದಿರಷ್ಟೆ. ಬ್ರಹ್ಮನು ಈ ಮನುಷ್ಯರನ್ನು ಹೇಗೆ ಸೃಷ್ಟಿಸಿದನೆಂಬುದನ್ನು ವಿಸ್ತಾರವಾಗಿ ಹೇಳಿರಿ. ಯಾವ ಯಾವ ಗುಣಗಳಿಂದ ಕೂಡಿದ ಬ್ರಾಹ್ಮಣಾದಿ ವರ್ಣಗಳನ್ನು ನಿರ್ಮಿಸಿದನು? ಅವರ ಕರ್ಮಗಳು ಯಾವುವು? ಎಂಬುದನ್ನು ಹೇಳಬೇಕು" (1-2). ಪರಾಶರರು ಹೇಳಿದರು: ಜಗತ್ತನ್ನು ಸೃಷ್ಟಿಸಬೇಕೆಂದು ಸತ್ಯಸಂಕಲ್ಪನಾದ ಬ್ರಹ್ಮನು ಇಚ್ಛಿಸಿದಾಗ, ಆತನ ಮುಖದಿಂದ ಸತ್ತ್ವಗುಣ ಪ್ರಧಾನರಾದ ಜನರು ಮೊದಲು ಹುಟ್ಟಿದರು. ಅನಂತರ ಬ್ರಹ್ಮನ ವಕ್ಷಸ್ಥಳದಿಂದ ರಜೋಗುಣಪ್ರಧಾನರಾದವರು ಜನಿಸಿದರು. ಆಮೇಲೆ ಅವನ ತೊಡೆಯಿಂದ ರಜೋಗುಣ ಮತ್ತು ತಮೋಗುಣಗಳು ಪ್ರಧಾನವಾಗಿರು

**ವಕ್ಷಸೋ ರಜಸೋದ್ರಿಕ್ತಾಸ್ತಥಾ ವೈ ಬ್ರಹ್ಮಣೋಽಭವನ್।**
**ರಜಸಾ ತಮಸಾ ಚೈವ ಸಮುದ್ರಿಕ್ತಾಸ್ತಥೋರುತಃ॥** 4

**ಪದ್ಭ್ಯಾಮನ್ಯಾಃ ಪ್ರಜಾ ಬ್ರಹ್ಮಾ ಸಸರ್ಜ ದ್ವಿಜಸತ್ತಮ।**
**ತಮಃಪ್ರಧಾನಾಸ್ತಾಃ ಸರ್ವಾಶ್ಚಾತುರ್ವರ್ಣ್ಯಮಿದಂ ತತಃ॥** 5

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ದ್ವಿಜಸತ್ತಮ।**
**ಪಾದೋರುವಕ್ಷಃಸ್ಥಲತೋ ಮುಖತಶ್ಚ ಸಮುದ್ಗತಾಃ॥** 6

**ಯಜ್ಞನಿಷ್ಪತ್ತಯೇ ಸರ್ವಮೇತದ್‌ಬ್ರಹ್ಮಾ ಚಕಾರ ವೈ।**
**ಚಾತುರ್ವರ್ಣ್ಯಂ ಮಹಾಭಾಗ ಯಜ್ಞಸಾಧನಮುತ್ತಮಮ್॥** 7

**ಯಜ್ಞೈರಾಪ್ಯಾಯಿತಾ ದೇವಾ ವೃಷ್ಟ್ಯುತ್ಸರ್ಗೇಣ ವೈ ಪ್ರಜಾಃ।**
**ಆಪ್ಯಾಯಯಂತೇ ಧರ್ಮಜ್ಞ ಯಜ್ಞಾಃ ಕಲ್ಯಾಣಹೇತವಃ॥** 8

**ನಿಷ್ಪಾದ್ಯಂತೇ ನರೈಸ್ತೈಸ್ತು ಸ್ವಧರ್ಮಾಭಿರತೈಸ್ಸದಾ।**
**ವಿಶುದ್ಧಾಚರಣೋಪೇತೈಃ ಸದ್ಭಿಃ ಸನ್ಮಾರ್ಗಗಾಮಿಭಿಃ॥** 9

---

ವವರು ಉತ್ಪನ್ನರಾದರು (3-4). ತರುವಾಯ ಬ್ರಹ್ಮನು ತನ್ನ ಪಾದಗಳಿಂದ ತಮಃ ಪ್ರಧಾನರಾದ ಪ್ರಜೆಗಳನ್ನು ಸೃಜಿಸಿದನು. ಇವರೆಲ್ಲರೂ ಚಾತುರ್ವರ್ಣ್ಯದವರೆನಿಸಿಕೊಂಡರು. ಮೈತ್ರೇಯ, ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ—ಎಂಬ ನಾಲ್ಕು ವರ್ಣದವರು ಬ್ರಹ್ಮನ ಮುಖ, ವಕ್ಷಸ್ಥಳ, ತೊಡೆ, ಪಾದಗಳಿಂದ ಕ್ರಮವಾಗಿ ಜನಿಸಿದರು (5-6). ಓ ಮಹಾಭಾಗ, ಯಜ್ಞದ ನಿಷ್ಪತ್ತಿಗಾಗಿ ಬ್ರಹ್ಮನು ಇದನ್ನೆಲ್ಲ ಮಾಡಿದನು. ಚಾತುರ್ವರ್ಣ್ಯವು ಶ್ರೇಷ್ಠವಾದ ಯಜ್ಞಸಾಧನವಾಗಿದೆ. ಯಜ್ಞದಿಂದ ಸಂತೃಪ್ತರಾದ ದೇವತೆಗಳು ಮಳೆಸುರಿಸಿ ಪ್ರಜೆಗಳನ್ನು ಆಪ್ಯಾಯನಗೊಳಿಸುತ್ತಾರೆ. ಧರ್ಮಜ್ಞ, ಯಜ್ಞಗಳೆಲ್ಲವೂ ಶ್ರೇಯಸ್ಕರವಾದವುಗಳು (7-8). ಸ್ವಧರ್ಮನಿರತರೂ ಶುದ್ಧವಾದ ಆಚಾರವುಳ್ಳವರೂ ಸನ್ಮಾರ್ಗಗಾಮಿಗಳೂ ಆದ ಸಜ್ಜನರಿಂದಲೇ ಯಜ್ಞಗಳು ನೆರವೇರುತ್ತವೆ. ಪ್ರಜೆಗಳು ಸ್ವರ್ಗ ಮೋಕ್ಷಗಳನ್ನು ಪಡೆಯುವುದು ಮನುಷ್ಯಜನ್ಮದಿಂದಲೇ. ಅಭಿಲಾಷಿತವಾದ

ಸ್ವರ್ಗಾಪವರ್ಗೌ ಮಾನುಷ್ಯಾತ್ ಪ್ರಾಪ್ನುವಂತಿ ನರಾ ಮುನೇ।
ಯಚ್ಚಾಭಿರುಚಿತಂ ಸ್ಥಾನಂ ತದ್ಯಾಂತಿ ಮನುಜಾ ದ್ವಿಜ॥ 10

ಪ್ರಜಾಸ್ತಾ ಬ್ರಹ್ಮಣಾ ಸೃಷ್ಟಾಶ್ಚಾತುರ್ವರ್ಣ್ಯವ್ಯವಸ್ಥಿತಾಃ।
ಸಮ್ಯಕ್ ಶ್ರದ್ಧಾಸದಾಚಾರಪ್ರವಣಾ ಮುನಿಸತ್ತಮ॥ 11

ಯಥೇಚ್ಛಾವಾಸನಿರತಾಃ ಸರ್ವಬಾಧಾವಿವರ್ಜಿತಾಃ।
ಶುದ್ಧಾಂತಃಕರಣಾಃ ಶುದ್ಧಾಃ ಕರ್ಮಾನುಷ್ಠಾನನಿರ್ಮಲಾಃ॥ 12

ಶುದ್ಧೇ ಚ ತಾಸಾಂ ಮನಸಿ ಶುದ್ಧೇಽಂತಃಸಂಸ್ಥಿತೇ ಹರೌ।
ಶುದ್ಧಜ್ಞಾನಂ ಪ್ರಪಶ್ಯಂತಿ ವಿಷ್ಣ್ವಾಖ್ಯಂ ಯೇನ ತತ್ಪದಮ್॥ 13

ತತಃ ಕಾಲಾತ್ಮಕೋ ಯೋಽಸೌ ಸ ಚಾಂಶಃ ಕಥಿತೋ ಹರೇಃ।
ಸ ಪಾತಯತ್ಯಘಂ ಘೋರಮಲ್ಪಮಲ್ಪಾಲ್ಪಸಾರವತ್॥ 14

---

ಬೇರೆ ಉತ್ತಮ ಸ್ಥಾನವನ್ನಾದರೂ ಮನುಷ್ಯರು (ಯಜ್ಞಾನುಷ್ಠಾನದ ಮೂಲಕ) ಪಡೆಯುತ್ತಾರೆ (9-10). ಹೇ ಮುನಿಸತ್ತಮ, ಬ್ರಹ್ಮನಿಂದ ಸೃಷ್ಟರಾದ ಆ ಪ್ರಜೆಗಳು ಚಾತುರ್ವರ್ಣ್ಯಪಾಲನೆಯಲ್ಲಿ ನಿರತರಾಗಿ, ಉತ್ತಮ ಶ್ರದ್ಧೆಯಿಂದ ಸದಾಚಾರದಲ್ಲಿ ಆಸಕ್ತರಾಗಿದ್ದರು. ಕರ್ಮಾನುಷ್ಠಾನದಿಂದ ನಿರ್ಮಲರಾದ ಅವರು ಪರಿಶುದ್ಧರೂ ಶುದ್ಧಾಂತಃಕರಣವುಳ್ಳವರೂ ಆದ್ದರಿಂದಲೇ ಸರ್ವಬಾಧೆಗಳಿಂದ ಮುಕ್ತರೂ ಆಗಿ ತಮಗೆ ತೋರಿದ ಸ್ಥಳದಲ್ಲಿ ವಾಸವಾಗಿದ್ದರು (11-12). ಅವರ ಮನಸ್ಸು ಶುದ್ಧವಾಗಿರಲು, ಶುದ್ಧವಾದ ಅಂತಃಕರಣದಲ್ಲಿ ಶ್ರೀಹರಿಯು ನೆಲೆಸಿದ್ದನು. ಆದ್ದರಿಂದ ಅವರಿಗೆ ಶುದ್ಧವಾದ ಪೂರ್ಣಜ್ಞಾನ ನೆಲೆಸಿತ್ತು. ಅದರಿಂದ ಅವರು ವಿಷ್ಣು ಎಂಬ ಪರಮಪದವನ್ನು ತಿಳಿಯಬಲ್ಲವರಾಗಿದ್ದರು (13). ಅನಂತರ (ಕೃತಯುಗ ಕಳೆದಮೇಲೆ), ಮೈತ್ರೇಯ, ವಿಷ್ಣುವಿನ ಅಂಶವಾದ ಕಾಲ ಎಂಬುದನ್ನು ಹೇಳಿದೆನಲ್ಲ, ಅದು ಅಲ್ಪಸಾರವೂ ಘೋರವೂ ಆದ 'ಪಾಪ'ವೆಂಬುದನ್ನು ಪ್ರವರ್ತಿಸಿತು. ಆಗ ಪ್ರಜೆಗಳಲ್ಲಿ ಅಜ್ಞಾನ ಮತ್ತು

**ಅಧರ್ಮಬೀಜಮುದ್ಭೂತಂ ತಮೋಲೋಭಸಮುದ್ಭವಮ್।**
**ಪ್ರಜಾಸು ತಾಸು ಮೈತ್ರೇಯ ರಾಗಾದಿಕಮಸಾಧಕಮ್॥** 15

**ತತಃ ಸಾ ಸಹಜಾ ಸಿದ್ಧಿಸ್ತಾಸಾಂ ನಾತೀವ ಜಾಯತೇ।**
**ರಸೋಲ್ಲಾಸಾದಯಶ್ಚಾನ್ಯಾಃ ಸಿದ್ಧಯೋಽಷ್ಟೌ ಭವಂತಿ ಯಾಃ॥** 16

**ತಾಸು ಕ್ಷೀಣಾಸ್ವಶೇಷಾಸು ವರ್ಧಮಾನೇ ಚ ಪಾತಕೇ।**
**ದ್ವಂದ್ವಾಭಿಭವದುಃಖಾರ್ತಾಸ್ತಾ ಭವಂತಿ ತತಃ ಪ್ರಜಾಃ॥** 17

---

ಲೋಭಗಳಿಂದ ಹುಟ್ಟಿದ್ದೂ ಪುರುಷಾರ್ಥಕ್ಕೆ ಘಾತಕವೂ ಆದ ರಾಗ ದ್ವೇಷಾದಿಗಳೆಂಬ ಅಧರ್ಮಬೀಜವು ಹುಟ್ಟಿತು! (14-15). ಅದರಿಂದಾಗಿ ಪ್ರಜೆಗಳಲ್ಲಿ ಸಹಜಸಿದ್ಧಿಯಾದ ವಿಷ್ಣುಪದಪ್ರಾಪ್ತಿಯೂ ರಸೋಲ್ಲಾಸವೇ ಮೊದಲಾದ ಉಳಿದ ಅಷ್ಟಸಿದ್ಧಿಗಳೂ ವಿಶೇಷವಾಗಿ ದೊರಕದೆ ಹೋದವು* (16). ಆ ಸಿದ್ಧಿಗಳೆಲ್ಲವೂ ಕ್ಷೀಣವಾದಾಗ, ಪಾಪಕರ್ಮವು ಹೆಚ್ಚುತ್ತಿರಲಾಗಿ, ಆ ಪ್ರಜೆಗಳು ಶೀತೋಷ್ಣಾದಿ ದ್ವಂದ್ವಗಳಿಗೆ ಸಿಕ್ಕಿ ದುಃಖಾರ್ತರಾದರು. ಆ ಸಮಯದಲ್ಲಿ ಜನರು (ತಮ್ಮ ರಕ್ಷಣೆಗಾಗಿ) ಮರುಭೂಮಿ, ಪರ್ವತ, ನೀರು—ಮೊದಲಾದ ಸಹಜ ಕೋಟೆ

* ಇವು ಅಷ್ಟಸಿದ್ಧಿಗಳು

1. ರಸೋಲ್ಲಾಸ (ಆಹಾರವಿಲ್ಲದ ಹಸಿವಿನ ನಿವಾರಣೆ)
2. ತೃಪ್ತಿ (ಭೋಗವಿಲ್ಲದಿದ್ದರೂ ತೃಪ್ತಿ)
3. ಧರ್ಮೋತ್ತಮ (ಧರ್ಮದಲ್ಲಿ ನಿಷ್ಠೆ)
4. ತುಲ್ಯತಾ (ಎಲ್ಲರಿಗೂ ಸಮಾನವಾದ ಆಯುಸ್ಸು ಮತ್ತು ರೂಪ)
5. ವಿಶೋಕಾ (ಶೋಕರಾಹಿತ್ಯ)
6. ತಪೋಧ್ಯಾನನಿಷ್ಠೆ (—ಇದರ ಅರ್ಥ ಸ್ಪಷ್ಟ)
7. ಕಾಮಚಾರಿತ್ವ (ಮನಸ್ಸು ಬಂದೆಡೆಗೆ ಕೂಡಲೆ ಹೋಗುವ ಶಕ್ತಿ)
8. ಯತ್ರಕ್ವಚನಶಾಯಿತಾ
(ಯಾವ ಸ್ಥಳದಲ್ಲಾದರೂ ಸಂತೋಷದಿಂದ ವಿಶ್ರಮಿಸಬಲ್ಲ ಮನೋಬಲ).

**ತತೋ ದುರ್ಗಾಣಿ ತಾಶ್ಚಕ್ರುರ್ಧಾನ್ವಂ ಪಾರ್ವತಮೌದಕಮ್ ।**
**ಕೃತ್ರಿಮಂ ಚ ತಥಾ ದುರ್ಗಂ ಪುರಖರ್ವಟಕಾದಿಕಮ್ ॥ 18**

**ಗೃಹಾಣಿ ಚ ಯಥಾನ್ಯಾಯಂ ತೇಷು ಚಕ್ರುಃ ಪುರಾದಿಷು ।**
**ಶೀತಾತಪಾದಿಬಾಧಾನಾಂ ಪ್ರಶಮಾಯ ಮಹಾಮತೇ ॥ 19**

**ಪ್ರತೀಕಾರಮಿಮಂ ಕೃತ್ವಾ ಶೀತಾದೇಸ್ತಾಃ ಪ್ರಜಾಃ ಪುನಃ ।**
**ವಾರ್ತೋಪಾಯಂ ತತಶ್ಚಕ್ರುರ್ಹಸ್ತಸಿದ್ಧಿಂ ಚ ಕರ್ಮಜಾಮ್ ॥ 20**

**ವ್ರೀಹಯಶ್ಚ ಯವಾಶ್ಚೈವ ಗೋಧೂಮಾಶ್ಚಾಣವಸ್ತಿಲಾಃ ।**
**ಪ್ರಿಯಂಗವೋ ಹ್ಯುದಾರಾಶ್ಚ ಕೋರದೂಷಾಃ ಸತೀನಕಾಃ ॥ 21**

**ಮಾಷಾ ಮುದ್ಗಾ ಮಸೂರಾಶ್ಚ ನಿಷ್ಪಾವಾಃ ಸಕುಲತ್ಥಕಾಃ ।**
**ಆಢಕ್ಯಶ್ಚಣಕಾಶ್ಚೈವ ಶಣಾಃ ಸಪ್ತದಶ ಸ್ಮೃತಾಃ ॥ 22**

**ಇತ್ಯೇತಾ ಓಷಧೀನಾಂ ತು ಗ್ರಾಮ್ಯಾನಾಂ ಜಾತಯೋ ಮುನೇ ।**
**ಓಷಧ್ಯೋ ಯಜ್ಞಿಯಾಶ್ಚೈವ ಗ್ರಾಮ್ಯಾರಣ್ಯಾಶ್ಚತುರ್ದಶ ॥ 23**

---

ಗಳಿಂದಲೂ ಸ್ವಯಂ ನಿರ್ಮಿತ ಕೋಟೆಗಳಿಂದಲೂ ಆವೃತವಾದ ನಗರ, ಹಳ್ಳಿ—ಮೊದಲಾದವನ್ನು ಮಾಡಿಕೊಂಡರು (17-18). ಹೇ ಪ್ರಾಜ್ಞ—ಮೈತ್ರೇಯ, ಅವರು ಚಳಿ, ಬಿಸಿಲು—ಮೊದಲಾದ ಬಾಧೆಗಳನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಪಟ್ಟಣ ಮತ್ತು ಹಳ್ಳಿಗಳಲ್ಲಿ ಕ್ರಮವಾಗಿ ಮನೆಗಳನ್ನು ಕಟ್ಟಿಕೊಂಡರು. ಹೀಗೆ ಶೈತ್ಯಾದಿಬಾಧೆಗಳಿಗೆ ಪರಿಹಾರವನ್ನು ಮಾಡಿಕೊಂಡ ಮೇಲೆ, ಆ ಪ್ರಜೆಗಳು ಜೀವನೋಪಾಯಕ್ಕಾಗಿ ಕೃಷಿ ಮುಂತಾದ್ದನ್ನೂ ಕೈಗಾರಿಕೆಯನ್ನೂ ಪ್ರಾರಂಭಿಸಿದರು (19-20). ಬತ್ತ, ಜವೆ (Barley), ಗೋದಿ, ಅಣು (Millet), ಎಳ್ಳು, ನವಣೆ, ಉದಾರ (ಜೋಳ), ಹಾರಕ, ಬಟಾಣಿ, ಉದ್ದು, ಹೆಸರು, ಮಸೂರ (Lentil), ಅವರೆ, ಹುರುಳಿ, ತೊಗರಿ, ಕಡಲೆ, ಶಣ (Crotolaria)—ಇವು ಹದಿನೇಳು ಗ್ರಾಮ್ಯ ಜಾತಿಗೆ ಸೇರಿದ ಬೇಳೆಗಳು. ಈ ಗ್ರಾಮ್ಯಗಳಲ್ಲಿ ಕೆಲವು ಮತ್ತು ವನ್ಯಗಳಲ್ಲಿ ಕೆಲವು ಸೇರಿ ಯಜ್ಞೋಪಯೋಗಿಯಾದ ಧಾನ್ಯಗಳು ಒಟ್ಟು ಹದಿನಾಲ್ಕು (21-23). ಅವು ಯಾವುವೆಂದರೆ: ಬತ್ತ, ಜವೆಧಾನ್ಯ, ಉದ್ದು, ಗೋದಿ,

ವ್ರೀಹಯಸ್ಸಯವಾ ಮಾಷಾ ಗೋಧೂಮಾಶ್ಚಾಣವಸ್ತಿಲಾಃ।
ಪ್ರಿಯಂಗುಸಪ್ತಮಾ ಹ್ಯೇತೇ ಅಷ್ಟಮಾಸ್ತು ಕುಲತ್ಥಕಾಃ॥ 24

ಶ್ಯಾಮಾಕಾಸ್ತ್ವಥ ನೀವಾರಾ ಜರ್ತಿಲಾಃ ಸಗವೇಧುಕಾಃ।
ತಥಾ ವೇಣುಯವಾಃ ಪ್ರೋಕ್ತಾಸ್ತಥಾ ಮರ್ಕಟಕಾ ಮುನೇ॥ 25

ಗ್ರಾಮ್ಯಾರಣ್ಯಾಃ ಸ್ಮೃತಾ ಹ್ಯೇತಾ ಓಷಧ್ಯಸ್ತು ಚತುರ್ದಶ।
ಯಜ್ಞನಿಷ್ಪತ್ತಯೇ ಯಜ್ಞಸ್ತಥಾಸಾಂ ಹೇತುರುತ್ತಮಃ॥ 26

ಏತಾಶ್ಚ ಸಹ ಯಜ್ಞೇನ ಪ್ರಜಾನಾಂ ಕಾರಣಂ ಪರಮ್।
ಪರಾವರವಿದಃ ಪ್ರಾಜ್ಞಾಸ್ತತೋ ಯಜ್ಞಾನ್ವಿತನ್ವತೇ॥ 27

ಅಹನ್ಯಹನ್ಯನುಷ್ಠಾನಂ ಯಜ್ಞಾನಾಂ ಮುನಿಸತ್ತಮ।
ಉಪಕಾರಕರಂ ಪುಂಸಾಂ ಕ್ರಿಯಮಾಣಾಘಶಾಂತಿದಮ್॥ 28

ಯೇಷಾಂ ತು ಕಾಲಸೃಷ್ಟೋಽಸೌ ಪಾಪಬಿಂದುರ್ಮಹಾಮುನೇ।
ಚೇತಃಸು ವವೃಧೇ ಚಕ್ರುಸ್ತೇ ನ ಯಜ್ಞೇಷು ಮಾನಸಮ್॥ 29

---

ಅಣು, ಎಳ್ಳು, ಏಳನೆಯದಾದ ನವಣೆ, ಎಂಟನೆಯದಾದ ಹುರುಳಿ, ಸಾಮೆ, ನೀವಾರ (ಒಂದು ಜಾತಿಯ ಕಾಡುಬತ್ತ), ಕಾಡು ಎಳ್ಳು, ಕಾಡುಗೋದಿ, ಬಿದಿರಿನ ಧಾನ್ಯ, ಮರ್ಕಟಕ ಎಂಬ ಕಾಡುಧಾನ್ಯ—ಈ ಹದಿನಾಲ್ಕು ಯಜ್ಞೋಪಯೋಗಿಗಳಾದ ಔಷಧಿಗಳು. ಯಜ್ಞವೇ ಇವುಗಳ ಉತ್ಪತ್ತಿಗೆ ಕಾರಣವೂ ಆಗಿದೆ (24-26). ಈ ಧಾನ್ಯಗಳೂ ಯಜ್ಞವೂ ಸಹ ಪ್ರಜೆಗಳ ಅಭಿವೃದ್ಧಿಗೆ ಕಾರಣವಾಗಿವೆ. ಅದ್ದರಿಂದಲೇ ಇಹಪರಗಳನ್ನು ತಿಳಿದ ಪ್ರಾಜ್ಞರು ಯಜ್ಞಗಳನ್ನು ಆಚರಿಸುತ್ತಾರೆ. ಮೈತ್ರೇಯ, ಪ್ರತಿದಿನವೂ ಯಜ್ಞಾನುಷ್ಠಾನವು ಜನರಿಗೆ ತುಂಬ ಉಪಕಾರಿಯಾದದ್ದು. ಅವರು ಮಾಡುವ ಪಾಪವನ್ನು ಪರಿಹರಿಸತಕ್ಕದ್ದು (27-28). ಆದರೆ ಯಾರ ಚಿತ್ತದಲ್ಲಿ ಕಾಲವಶದಿಂದ ಅಧರ್ಮಬೀಜವು ಬೆಳೆಯಿತೋ ಅವರು ಯಜ್ಞ ಗಳನ್ನಾಚರಿಸಲು ಮನಸ್ಸು ಮಾಡಲಿಲ್ಲ. ಯಜ್ಞವನ್ನು ವಿರೋಧಿಸಬೇಕೆಂದೇ ಈ ಜನರು ವೈದಿಕಮತವನ್ನೂ ವೇದವನ್ನೂ ಯಜ್ಞಾದಿಕರ್ಮಗಳನ್ನೂ

**ವೇದವಾದಾಂಸ್ತಥಾ ವೇದಾನ್ಯಜ್ಞಕರ್ಮಾದಿಕಂ ಚ ಯತ್।**
**ತತ್ಸರ್ವಂ ನಿಂದಯಾಮಾಸುರ್ಯಜ್ಞವ್ಯಾಸೇಧಕಾರಿಣಃ॥** 30

**ಪ್ರವೃತ್ತಿಮಾರ್ಗವ್ಯುಚ್ಛಿತ್ತಿಕಾರಿಣೋ ವೇದನಿಂದಕಾಃ।**
**ದುರಾತ್ಮನೋ ದುರಾಚಾರಾ ಬಭೂವುಃ ಕುಟಿಲಾಶಯಾಃ॥** 31

**ಸಂಸಿದ್ಧಾಯಾಂ ತು ವಾರ್ತಾಯಾಂ ಪ್ರಜಾಃ ಸೃಷ್ಟ್ವಾ ಪ್ರಜಾಪತಿಃ।**
**ಮರ್ಯಾದಾಂ ಸ್ಥಾಪಯಾಮಾಸ ಯಥಾಸ್ಥಾನಂ ಯಥಾಗುಣಮ್॥**

**ವರ್ಣಾನಾಮಾಶ್ರಮಾಣಾಂ ಚ ಧರ್ಮಾನ್ಧರ್ಮಭೃತಾಂ ವರ।**
**ಲೋಕಾಂಶ್ಚ ಸರ್ವವರ್ಣಾನಾಂ ಸಮ್ಯಗ್ಧರ್ಮಾನುಪಾಲಿನಾಮ್॥** 33

**ಪ್ರಾಜಾಪತ್ಯಂ ಬ್ರಾಹ್ಮಣಾನಾಂ ಸ್ಮೃತಂ ಸ್ಥಾನಂ ಕ್ರಿಯಾವತಾಮ್।**
**ಸ್ಥಾನಮೈಂದ್ರಂ ಕ್ಷತ್ರಿಯಾಣಾಂ ಸಂಗ್ರಾಮೇಷ್ವನಿವರ್ತಿನಾಮ್॥** 34

**ವೈಶ್ಯಾನಾಂ ಮಾರುತಂ ಸ್ಥಾನಂ ಸ್ವಧರ್ಮಮನುವರ್ತಿನಾಮ್।**
**ಗಾಂಧರ್ವಂ ಶೂದ್ರಜಾತೀನಾಂ ಪರಿಚರ್ಯಾನುವರ್ತಿನಾಮ್॥** 35

---

ನಿಂದಿಸಲು ಆರಂಭಿಸಿದರು (29-30). ದುರಾತ್ಮರೂ ದುರಾಚಾರನಿರತರೂ ಆದ ಇವರು ಕುಟಿಲಬುದ್ಧಿಯಿಂದ ವೇದವನ್ನು ನಿಂದಿಸುತ್ತ ಪ್ರವೃತ್ತಿಮಾರ್ಗವನ್ನು ತೊಡೆದು ಹಾಕಲು ಉದ್ಯೋಗಿಸಿದರು (31). ಹೀಗೆ ಕೃಷಿ ಮುಂತಾದ ಜೀವನೋಪಾಯವು ಸಿದ್ಧವಾಗಲಾಗಿ, ಈ ಪ್ರಜೆಗಳನ್ನು ಸೃಜಿಸಿದ ಬ್ರಹ್ಮನು, ಇವರ ಸ್ಥಾನ ಗುಣಗಳಿಗೆ ಅನುರೋಧವಾಗಿ ಒಂದು ವ್ಯವಸ್ಥೆಯನ್ನು ಗೊತ್ತುಮಾಡಿದನು. ವರ್ಣಗಳ ಮತ್ತು ಆಶ್ರಮಗಳ ಧರ್ಮಗಳನ್ನೂ ತಮ್ಮ ಧರ್ಮಗಳನ್ನೂ ಚೆನ್ನಾಗಿ ಪಾಲಿಸುವ ಎಲ್ಲ ವರ್ಣದವರಿಗೆ ತಕ್ಕ ಲೋಕಗಳನ್ನೂ ಗೊತ್ತುಮಾಡಿದನು (32-33). ಕ್ರಿಯಾಶೀಲರಾದ ಬ್ರಾಹ್ಮಣರಿಗೆ ಪಿತೃಲೋಕವನ್ನೂ ಯುದ್ಧದಲ್ಲಿ ಹಿಮ್ಮೆಟ್ಟದ ಕ್ಷತ್ರಿಯರಿಗೆ ಇಂದ್ರಲೋಕವನ್ನೂ ಸ್ವಧರ್ಮನಿಷ್ಠರಾದ ವೈಶ್ಯರಿಗೆ ವಾಯುಲೋಕವನ್ನೂ ಪರಿಚರ್ಯಾವೃತ್ತಿಯಲ್ಲಿರುವ ಶೂದ್ರರಿಗೆ ಗಂಧರ್ವಲೋಕವನ್ನೂ ಗೊತ್ತುಪಡಿಸಿದನು (34-35). ಊರ್ಧ್ವರೇತಸ್ಕರಾದ ಎಂಬತ್ತೆಂಟುಸಾವಿರ ಮುನಿ

**ಅಷ್ಟಾಶೀತಿಸಹಸ್ರಾಣಿ ಮುನೀನಾಮೂರ್ಧ್ವರೇತಸಾಮ್।**
**ಸ್ಮೃತಂ ತೇಷಾಂ ತು ಯತ್ಸ್ಥಾನಂ ತದೇವ ಗುರುವಾಸಿನಾಮ್॥**

**ಸಪ್ತರ್ಷೀಣಾಂ ತು ಯತ್ಸ್ಥಾನಂ ಸ್ಮೃತಂ ತದ್ವೈ ವನೌಕಸಾಮ್।**
**ಪ್ರಾಜಾಪತ್ಯಂ ಗೃಹಸ್ಥಾನಾಂ ನ್ಯಾಸಿನಾಂ ಬ್ರಹ್ಮಸಂಜ್ಞಿತಮ್॥ 37**

**ಯೋಗಿನಾಮಮೃತಂ ಸ್ಥಾನಂ ಸ್ವಾತ್ಮಸಂತೋಷಕಾರಿಣಾಮ್॥ 38**

**ಏಕಾಂತಿನಃ ಸದಾ ಬ್ರಹ್ಮ ಧ್ಯಾಯಿನೋ ಯೋಗಿನಶ್ಚ ಯೇ।**
**ತೇಷಾಂ ತು ಪರಮಂ ಸ್ಥಾನಂ ಯತ್ತತ್ಪಶ್ಯಂತಿ ಸೂರಯಃ॥ 39**

**ಗತ್ವಾ ಗತ್ವಾ ನಿವರ್ತಂತೇ ಚಂದ್ರಸೂರ್ಯಾದಯೋ ಗ್ರಹಾಃ।**
**ಅದ್ಯಾಪಿ ನ ನಿವರ್ತಂತೇ ದ್ವಾದಶಾಕ್ಷರಚಿಂತಕಾಃ॥ 40**

**ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವೌ।**
**ಅಸಿಪತ್ರವನಂ ಘೋರಂ ಕಾಲಸೂತ್ರಮವೀಚಿಕಮ್॥ 41**

---

ಗಳಿದ್ದಾರೆ. ಅವರಿಗೆ ಯಾವ ಸ್ಥಾನವೋ ಅದು ಗುರುಕುಲವಾಸಿಗಳಾದ ಬ್ರಹ್ಮಚಾರಿಗಳಿಗೆ ಲಭಿಸುತ್ತದೆ (36). ವಾನಪ್ರಸ್ಥಾಶ್ರಮದವರಿಗೆ ಸಪ್ತರ್ಷಿ ಲೋಕವು ಪ್ರಾಪ್ತವಾಗುತ್ತದೆ. ಗೃಹಸ್ಥರಿಗೆ ಪಿತೃಲೋಕ, ಸಂನ್ಯಾಸಿಗಳಿಗೆ ಬ್ರಹ್ಮ ಎಂಬುದಾವುದುಂಟೋ ಅದು (ಮೋಕ್ಷ) ದೊರೆಯುತ್ತದೆ. ಸದಾ ಬ್ರಹ್ಮಚಿಂತನದಲ್ಲಿಯೇ ನಿರತರಾದ ಯೋಗಿಗಳಿಗೂ ಅಮೃತ(ಮೋಕ್ಷ)ವೇ ಸ್ಥಾನ (37-38). ಏಕಾಂತದಲ್ಲಿದ್ದು ಸದಾ ಬ್ರಹ್ಮಚಿಂತನದಲ್ಲಿರತಕ್ಕ ಯೋಗಿಗಳಿಗೆ ಲಭ್ಯವಾಗುವ ಅಮೃತಸ್ಥಾನವೆಂಬುದು, ಕೇವಲ ಜ್ಞಾನಿಗಳಿಗೆ ಗಮ್ಯವಾದದ್ದು. ಚಂದ್ರಸೂರ್ಯಾದಿಗ್ರಹಗಳು ಮತ್ತೆ ಮತ್ತೆ ಲಯವಾಗಿ ಹುಟ್ಟಿಬರುತ್ತವೆ. ದ್ವಾದಶಾಕ್ಷರ* ಮಂತ್ರದ ಚಿಂತೆಯಲ್ಲಿ ನಿರತರಾದವರು ಮಾತ್ರ ಮತ್ತೆ ಹುಟ್ಟಿಬರುತ್ತಾರೆಂಬುದೇ ಇಲ್ಲ (39-40). ಇನ್ನು ಯಾರು ವೇದನಿಂದಕರೋ ಯಜ್ಞಕ್ಕೆ ವಿಘ್ನಕಾರಿಗಳೋ ಸ್ವಧರ್ಮತ್ಯಾಗಿಗಳೋ

---

*'ಓಂ ನಮೋ ಭಗವತೇ ವಾಸುದೇವಾಯ' ಇದು ದ್ವಾದಶಾಕ್ಷರ ಮಂತ್ರ.

**ವಿನಿಂದಕಾನಾಂ ವೇದಸ್ಯ ಯಜ್ಞವ್ಯಾಘಾತಕಾರಿಣಾಮ್ ।**
**ಸ್ಥಾನಮೇತತ್ಸಮಾಖ್ಯಾತಂ ಸ್ವಧರ್ಮತ್ಯಾಗಿನಶ್ಚ ಯೇ ॥** 42

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಷಷ್ಠೋಽಧ್ಯಾಯಃ

---

ಅವರ ಸ್ಥಾನ ಯಾವುದೆಂದರೆ—ತಾಮಿಸ್ರ, ಅಂಧತಾಮಿಸ್ರ, ಮಹಾ ರೌರವ, ರೌರವ, ಅಸಿಪತ್ರವನ, ಘೋರವಾದ ಕಾಲಸೂತ್ರ, ಅವೀಚಿಕ—ಎಂಬ ನರಕಗಳು (41-42).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಆರನೆಯ ಅಧ್ಯಾಯ ಮುಗಿಯಿತು.



## ಸಪ್ತಮೋಽಧ್ಯಾಯಃ

*ಶ್ರೀ ಪರಾಶರ ಉವಾಚ:*

**ತತೋಽಭಿಧ್ಯಾಯತಸ್ತಸ್ಯ ಜಜ್ಞಿರೇ ಮಾನಸಾಃ ಪ್ರಜಾಃ।**
**ತಚ್ಛರೀರಸಮುತ್ಪನ್ನೈಃ ಕಾರ್ಯೈಸ್ತೈಃ ಕರಣೈಃ ಸಹ॥ 1**

**ಕ್ಷೇತ್ರಜ್ಞಾಃ ಸಮವರ್ತಂತ ಗಾತ್ರೇಭ್ಯಸ್ತಸ್ಯ ಧೀಮತಃ।**
**ತೇ ಸರ್ವೇ ಸಮವರ್ತಂತ ಯೇ ಮಯಾ ಪ್ರಾಗುದಾಹೃತಾಃ॥ 2**

**ದೇವಾದ್ಯಾಃ ಸಾ ವರಾಂತಾಶ್ಚ ತ್ರೈಗುಣ್ಯವಿಷಯೇ ಸ್ಥಿತಾಃ।**
**ಏವಂಭೂತಾನಿ ಸೃಷ್ಟಾನಿ ಚರಾಣಿ ಸ್ಥಾವರಾಣಿ ಚ॥ 3**

**ಯದಾಸ್ಯ ತಾಃ ಪ್ರಜಾಃ ಸರ್ವಾ ನ ವ್ಯವರ್ಧಂತ ಧೀಮತಃ।**
**ಅಥಾನ್ಯಾನ್ಮಾನಸಾನ್ಪುತ್ರಾನ್ಸದೃಶಾನಾತ್ಮನೋಽಸೃಜತ್॥ 4**

---

## ಅಧ್ಯಾಯ 7

ಮರೀಚಿಯೇ ಮೊದಲಾದ ಪ್ರಜಾಪತಿಗಳ ಉತ್ಪತ್ತಿ.
ತಾಮಸಿಕ ಸೃಷ್ಟಿ. ಮನು ಮತ್ತು ಶತರೂಪಾ—ಇವರ ಸಂತತಿ.

ಪರಾಶರರು ಹೇಳಿದರು: ಬ್ರಹ್ಮನು (ಸೃಷ್ಟಿಯನ್ನು ಕುರಿತು) ಧ್ಯಾನ ಮಗ್ನನಾಗಿದ್ದಾಗ, ಆತನ ಶರೀರದಿಂದ ಹುಟ್ಟಿದ ಪಂಚಭೂತಗಳಿಂದಲೇ ನಿರ್ಮಿತವಾದ ಶರೀರಗಳಿಂದಲೂ ಇಂದ್ರಿಯಗಳಿಂದಲೂ ಕೂಡಿದ ಮಾನಸ ಪ್ರಜೆಗಳು ಜನಿಸಿದರು (1). ಧೀಮಂತನಾದ ಪ್ರಜಾಪತಿಯ ಗಾತ್ರಗಳಿಂದ ಕ್ಷೇತ್ರಜ್ಞರಾದ ಜೀವಿಗಳೆಲ್ಲರೂ ಹುಟ್ಟಿದರು. ನಾನು ಈ ಹಿಂದೆ ಹೇಳಿದಂತೆ ದೇವತೆಗಳಿಂದ ಹಿಡಿದು ಸ್ಥಾವರಾಂತಗಳಾದ ಸಕಲರೂ ತ್ರಿಗುಣಾತ್ಮಕರಾಗಿದ್ದಾರೆ. ಹೀಗೆ ಚರಾಚರಗಳ ಸೃಷ್ಟಿಯಾಯಿತು (2-3). ಹೀಗೆ ಜನಿಸಿದ ಪ್ರಜೆಗಳು (ಸಂತತಿಯನ್ನು ಪಡೆದು) ವೃದ್ಧಿ ಹೊಂದಲಿಲ್ಲ. ಆಗ ಬ್ರಹ್ಮನು ತನಗೆ ಸದೃಶರಾದ ಕೆಲವು ಮಾನಸ ಪುತ್ರರನ್ನು ಸೃಜಿಸಿದನು

**ಭೃಗುಂ ಪುಲಸ್ತ್ಯಂ ಪುಲಹಂ ಕ್ರತುಮಂಗಿರಸಂ ತಥಾ।**
**ಮರೀಚಿಂ ದಕ್ಷಮತ್ರಿಂ ಚ ವಸಿಷ್ಠಂ ಚೈವ ಮಾನಸಾನ್॥ 5**

**ನವ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ।**
**ಖ್ಯಾತಿಂ ಭೂತಿಂ ಚ ಸಂಭೂತಿಂ ಕ್ಷಮಾಂ ಪ್ರೀತಿಂ ತಥೈವ ಚ॥**

**ಸನ್ನತಿಂ ಚ ತಥೈವೋರ್ಜಾಮನಸೂಯಾಂ ತಥೈವ ಚ।**
**ಪ್ರಸೂತಿಂ ಚ ತತಃ ಸೃಷ್ಟ್ವಾ ದದೌ ತೇಷಾಂ ಮಹಾತ್ಮನಾಮ್॥**

**ಪತ್ನ್ಯೋ ಭವಧ್ವಮಿತ್ಯುಕ್ತ್ವಾ ತೇಷಾಮೇವ ತು ದತ್ತವಾನ್।**
**ಸನಂದನಾದಯೋ ಯೇ ಚ ಪೂರ್ವಸೃಷ್ಟಾಸ್ತು ವೇಧಸಾ॥ 8**

**ನ ತೇ ಲೋಕೇಷ್ವಸಂಜಂತ ನಿರಪೇಕ್ಷಾಃ ಪ್ರಜಾಸು ತೇ।**
**ಸರ್ವೇ ತೇಽಭ್ಯಾಗತಜ್ಞಾನಾ ವೀತರಾಗಾ ವಿಮತ್ಸರಾಃ॥ 9**

**ತೇಷ್ವೇವಂ ನಿರಪೇಕ್ಷೇಷು ಲೋಕಸೃಷ್ಟೌ ಮಹಾತ್ಮನಃ।**
**ಬ್ರಹ್ಮಣೋಽಭೂನ್ಮಹಾನ್ ಕ್ರೋಧಸ್ತ್ರೈಲೋಕ್ಯದಹನಕ್ಷಮಃ॥ 10**

---

(4). ಭೃಗು, ಪುಲಸ್ತ್ಯ, ಪುಲಹ, ಕ್ರತು, ಅಂಗಿರಸ್, ಮರೀಚಿ, ದಕ್ಷ, ಅತ್ರಿ, ವಸಿಷ್ಠ—ಇವರೇ ಆ ಮಾನಸ ಪುತ್ರರು. ಇವರು ಒಂಬತ್ತು ಮಂದಿ ನವಬ್ರಹ್ಮರೆಂದು ಪುರಾಣದಲ್ಲಿ ಪ್ರಸಿದ್ಧರಾಗಿದ್ದಾರೆ (5). ಆಮೇಲೆ ಬ್ರಹ್ಮನು ಖ್ಯಾತಿ, ಭೂತಿ, ಸಂಭೂತಿ, ಕ್ಷಮಾ, ಪ್ರೀತಿ, ಸಂನತಿ, ಊರ್ಜಾ, ಅನಸೂಯಾ, ಪ್ರಸೂತಿ—ಎಂಬ ಕನ್ಯೆಯರನ್ನು ಸೃಜಿಸಿ—'ನೀವು ಈ ನವಬ್ರಹ್ಮರಿಗೆ ಪತ್ನಿಯಾಗಿರಿ' ಎಂದು ಹೇಳಿ, ಭೃಗು ಮೊದಲಾದ ಆ ಮಹಾತ್ಮರಿಗೆ (ಕ್ರಮವಾಗಿ ಒಬ್ಬೊಬ್ಬರನ್ನು) ಕೊಟ್ಟನು (6-7). ಇದಕ್ಕೂ ಮೊದಲು ಬ್ರಹ್ಮನಿಂದ ಸೃಷ್ಟರಾದ ಸನಂದನಾದಿಗಳು ಸಂತಾನದಲ್ಲಿ ಅಪೇಕ್ಷೆಯಿಲ್ಲದವರಾಗಿ ಲೋಕವ್ಯವಹಾರದಲ್ಲಿ ತೊಡಗಲಿಲ್ಲ. ಅವರು ವಿರಕ್ತರಾಗಿ ಮಾತ್ಸರ್ಯಾದಿ ದೋಷಗಳಿಂದ ವಿಮುಕ್ತರೂ, ಜ್ಞಾನಿಗಳೂ ಆಗಿದ್ದರು (8-9). ಅವರು ಹೀಗೆ ಪ್ರಜಾಸೃಷ್ಟಿಯಲ್ಲಿ ನಿರಪೇಕ್ಷರಾಗಿರಲು, ಮಹಾತ್ಮನಾದ ಬ್ರಹ್ಮನಿಗೆ ಮೂರು ಲೋಕಗಳನ್ನು ಸುಟ್ಟು ಹಾಕುವಷ್ಟು ಮಹಾ ಕ್ರೋಧ ಉಂಟಾಯಿತು (10). ಎಲೈ ಮೈತ್ರೇಯ, ಬ್ರಹ್ಮನ ಆ

ತಸ್ಯ ಕ್ರೋಧಾತ್ಸಮುದ್ಭೂತಜ್ವಾಲಾಮಾಲಾತಿದೀಪಿತಮ್।
ಬ್ರಹ್ಮಣೋಽಭೂತ್ತದಾ ಸರ್ವಂ ತ್ರೈಲೋಕ್ಯಮಖಿಲಂ ಮುನೇ॥ 11

ಭ್ರುಕುಟೀಕುಟಿಲಾತ್ತಸ್ಯ ಲಲಾಟೋತ್ಕ್ರೋಧದೀಪಿತಾತ್।
ಸಮುತ್ಪನ್ನಸ್ತದಾ ರುದ್ರೋ ಮಧ್ಯಾಹ್ನಾರ್ಕಸಮಪ್ರಭಃ॥ 12

ಅರ್ಧನಾರೀನರವಪುಃ ಪ್ರಚಂಡೋಽತಿಶರೀರವಾನ್।
ವಿಭಜಾತ್ಮಾನಮಿತ್ಯುಕ್ತ್ವಾ ತಂ ಬ್ರಹ್ಮಾಂತರ್ದಧೇ ತತಃ॥ 13

ತಥೋಕ್ತೋಽಸೌ ದ್ವಿಧಾ ಸ್ತ್ರೀತ್ವಂ ಪುರುಷತ್ವಂ ತಥಾಕರೋತ್।
ಬಿಭೇದ ಪುರುಷತ್ವಂ ಚ ದಶಧಾ ಚೈಕಧಾ ಪುನಃ॥ 14

ಸೌಮ್ಯಾಸೌಮ್ಯೈಸ್ತದಾ ಶಾಂತಾಶಾಂತೈಃ ಸ್ತ್ರೀತ್ವಂ ಚ ಸ ಪ್ರಭುಃ।
ಬಿಭೇದ ಬಹುಧಾ ದೇವಃ ಸ್ವರೂಪೈರಸಿತೈಃ ಸಿತೈಃ॥ 15

---

ಕ್ರೋಧದಿಂದ ಸಮಸ್ತ ಲೋಕತ್ರಯವೂ ಜ್ವಾಲೆಗಳಿಂದ ಸಮಾವೃತವಾಗಿ ಉದ್ದೀಪಿತವಾಯಿತು. ಕೋಪದಿಂದ ಹುಬ್ಬುಗಂಟಿಕ್ಕಿದ ಆತನ ಲಲಾಟದಿಂದ ಮಧ್ಯಾಹ್ನದ ಸೂರ್ಯನಂತೆ ದೀಪ್ತನಾದ ರುದ್ರನು ಆವಿರ್ಭವಿಸಿದನು (11-12). ಆ ರುದ್ರನು ಉಗ್ರಸ್ವರೂಪನೂ ಮಹಾಶರೀರಿಯೂ ಆಗಿದ್ದನಲ್ಲದೆ, ಅವನ ಶರೀರದ ಅರ್ಧಭಾಗವು ಸ್ತ್ರೀರೂಪವುಳ್ಳದ್ದೂ ಇನ್ನೊಂದು ಭಾಗವು ಪುರುಷರೂಪವುಳ್ಳದ್ದೂ ಆಗಿತ್ತು. ಬ್ರಹ್ಮನು ಆತನನ್ನು ಉದ್ದೇಶಿಸಿ "ನಿನ್ನ ದೇಹ ವಿಭಾಗಿಸು" ಎಂದೂ ನುಡಿದು ಅಂತರ್ಹಿತನಾದನು (13). ಅದರಂತೆ ರುದ್ರನು ತನ್ನ ದೇಹವನ್ನು ಸ್ತ್ರೀ, ಪುರುಷ— ಎಂದು ಎರಡಾಗಿ ವಿಭಾಗಿಸಿದನಲ್ಲದೆ, ತನ್ನ ಪುರುಷದೇಹವನ್ನು ಮತ್ತೆ ಏಕಾದಶ ಭೇದಗಳಾಗಿ ವಿಭಾಗಿಸಿಕೊಂಡನು (14). ಅಲ್ಲದೆ ಪ್ರಭುವಾದ ಆ ರುದ್ರನು ತನ್ನ ಸ್ತ್ರೀ ದೇಹವನ್ನು ಸೌಮ್ಯ-ಕ್ರೂರ, ಶಾಂತ-ಅಶಾಂತ, ಶ್ಯಾಮ-ಗೌರ ಈ ರೀತಿಯಾದ ನಾನಾ ಸ್ವರೂಪಗಳನ್ನಾಗಿ ವಿಂಗಡಿಸಿದನು (15). ಅನಂತರ ಬ್ರಹ್ಮದೇವನು ಮೊದಲು ತನ್ನಿಂದ ಹುಟ್ಟಿದ ಮತ್ತು ತಾನೇ ಆಗಿದ್ದ ಸ್ವಾಯಂಭುವ ಮನುವನ್ನು ಪ್ರಜಾಪಾಲನೆಯ ಕರ್ತವ್ಯದಲ್ಲಿ

**ತತೋ ಬ್ರಹ್ಮಾತ್ಮಸಂಭೂತಂ ಪೂರ್ವಂ ಸ್ವಾಯಂಭುವಂ ಪ್ರಭುಃ।**
**ಆತ್ಮಾನಮೇವ ಕೃತವಾನ್ ಪ್ರಜಾಪಾಲ್ಯೇ ಮನುಂ ದ್ವಿಜ॥ 16**

**ಶತರೂಪಾಂ ಚ ತಾಂ ನಾರೀಂ ತಪೋನಿರ್ಧೂತಕಲ್ಮಷಾಮ್।**
**ಸ್ವಾಯಂಭುವೋ ಮನುರ್ದೇವಃ ಪತ್ನೀತ್ವೇ ಜಗೃಹೇ ಪ್ರಭುಃ॥ 17**

**ತಸ್ಮಾತ್ತು ಪುರುಷಾದ್ದೇವೀ ಶತರೂಪಾ ವ್ಯಜಾಯತ।**
**ಪ್ರಿಯವ್ರತೋತ್ತಾನಪಾದೌ ಪ್ರಸೂತ್ಯಾಕೂತಿಸಂಜ್ಞಿತಮ್॥ 18**

**ಕನ್ಯಾದ್ವಯಂ ಚ ಧರ್ಮಜ್ಞ ರೂಪೌದಾರ್ಯಗುಣಾನ್ವಿತಮ್।**
**ದದೌ ಪ್ರಸೂತಿಂ ದಕ್ಷಾಯ ಆಕೂತಿಂ ರುಚಯೇ ಪುರಾ॥ 19**

**ಪ್ರಜಾಪತಿಃ ಸ ಜಗ್ರಾಹ ತಯೋರ್ಜಜ್ಞೇ ಸದಕ್ಷಿಣಃ।**
**ಪುತ್ರೋ ಯಜ್ಞೋ ಮಹಾಭಾಗ ದಂಪತ್ಯೋರ್ಮಿಥುನಂ ತತಃ॥ 20**

**ಯಜ್ಞಸ್ಯ ದಕ್ಷಿಣಾಯಾಂ ತು ಪುತ್ರಾ ದ್ವಾದಶ ಜಜ್ಞಿರೇ।**
**ಯಾಮಾ ಇತಿ ಸಮಾಖ್ಯಾತಾ ದೇವಾಃ ಸ್ವಾಯಂಭುವೇ ಮನೌ॥ 21**

---

ನಿಯಮನಿಸಿದನು. ಸ್ವಾಯಂಭುವ ಮನುವಾದರೋ (ತನ್ನ ಜೊತೆಗೇ ಹುಟ್ಟಿದ) ತಪಶ್ಚರಣೆಯಿಂದ ನಿಷ್ಪಾಪಳಾದ ಶತರೂಪಾ ಎಂಬ ನಾರಿಯನ್ನು ಪತ್ನಿಯಾಗಿ ಸ್ವೀಕರಿಸಿದನು (16-17). ಶತರೂಪಾದೇವಿಯು ಆ ಪತಿಯಿಂದ ಪ್ರಿಯವ್ರತ, ಉತ್ತಾನಪಾದ—ಎಂಬ ಪುತ್ರರನ್ನೂ ರೂಪಾದಿ ಗುಣಾನ್ವಿತರಾದ ಪ್ರಸೂತಿ, ಆಕೂತಿ—ಎಂಬ ಇಬ್ಬರು ಪುತ್ರಿಯರನ್ನೂ ಪಡೆದಳು. ಅವರಲ್ಲಿ ಪ್ರಸೂತಿಯನ್ನು ದಕ್ಷಪ್ರಜಾಪತಿಗೂ ಆಕೂತಿಯನ್ನು ರುಚಿಯೆಂಬ ಪ್ರಜಾಪತಿಗೂ ಕೊಟ್ಟ ವಿವಾಹವಾಯಿತು (18-19). ಹೀಗೆ ರುಚಿಪ್ರಜಾಪತಿಯು ಆಕೂತಿಯನ್ನು ಮದುವೆಯಾಗಲಾಗಿ, ಆ ದಂಪತಿಗಳಿಗೆ ಯಜ್ಞ, ದಕ್ಷಿಣೆಯೆಂಬ ಪುತ್ರ-ಪುತ್ರಿಯರು ಜನಿಸಿದರು. ಅವರಿಬ್ಬರೂ ಮುಂದೆ ದಂಪತಿಗಳಾದರು (20). ಯಜ್ಞನಿಗೆ ದಕ್ಷಿಣೆಯಲ್ಲಿ ಹನ್ನೆರಡು ಪುತ್ರರು ಹುಟ್ಟಿದರು. ಸ್ವಾಯಂಭುವಮನ್ವಂತರದಲ್ಲಿ ಅವರಿಗೆ 'ಯಾಮ'ರು ಎಂಬ ಪ್ರಸಿದ್ಧಿ ಇತ್ತು. ದಕ್ಷನು ಪ್ರಸೂತಿಯಲ್ಲಿ ಇಪ್ಪತ್ತುನಾಲ್ಕು

**ಪ್ರಸೂತ್ಯಾಂ ಚ ತಥಾ ದಕ್ಷಶ್ಚತಸ್ರೋ ವಿಶಂತಿಸ್ತಥಾ।**
**ಸಸರ್ಜ ಕನ್ಯಾಸ್ತಾಸಾಂ ಚ ಸಮ್ಯಗ್ನಾಮಾನಿ ಮೇ ಶೃಣು॥ 22**

**ಶ್ರದ್ಧಾ ಲಕ್ಷ್ಮೀರ್ಧೃತಿಸ್ತುಷ್ಟಿರ್ಮೇಧಾ ಪುಷ್ಟಿಸ್ತಥಾ ಕ್ರಿಯಾ।**
**ಬುದ್ಧಿರ್ಲಜ್ಜಾ ವಪುಃ ಶಾಂತಿಃ ಸಿದ್ಧಿಃ ಕೀರ್ತಿಸ್ತ್ರಯೋದಶೀ॥ 23**

**ಪತ್ನ್ಯರ್ಥಂ ಪ್ರತಿಜಗ್ರಾಹ ಧರ್ಮೋ ದಾಕ್ಷಾಯಣೀಃ ಪ್ರಭುಃ।**
**ತಾಭ್ಯಃ ಶಿಷ್ಟಾಃ ಯವೀಯಸ್ಯ ಏಕಾದಶ ಸುಲೋಚನಾಃ॥ 24**

**ಖ್ಯಾತಿಃ ಸತ್ಯಥ ಸಂಭೂತಿಃ ಸ್ಮೃತಿಃ ಪ್ರೀತಿಃ ಕ್ಷಮಾ ತಥಾ।**
**ಸಂತತಿಶ್ಚಾನಸೂಯಾ ಚ ಊರ್ಜ್ಜಾ ಸ್ವಾಹಾ ಸ್ವಧಾ ತಥಾ॥ 25**

**ಭೃಗುರ್ಭವೋ ಮರೀಚಿಶ್ಚ ತಥಾ ಚೈವಾಂಗಿರಾ ಮುನಿಃ।**
**ಪುಲಸ್ತ್ಯಃ ಪುಲಹಶ್ಚೈವ ಕ್ರತುಶ್ಚರ್ಷಿವರಸ್ತಥಾ॥ 26**

**ಅತ್ರಿರ್ವಸಿಷ್ಠೋ ವಹ್ನಿಶ್ಚ ಪಿತರಶ್ಚ ಯಥಾಕ್ರಮಮ್।**
**ಖ್ಯಾತ್ಯಾದ್ಯಾ ಜಗೃಹುಃ ಕನ್ಯಾ ಮುನಯೋ ಮುನಿಸತ್ತಮ॥ 27**

**ಶ್ರದ್ಧಾಂ ಕಾಮಂ ಚಲಾ ದರ್ಪಂ ನಿಯಮಂ ಧೃತಿರಾತ್ಮಜಮ್।**
**ಸಂತೋಷಂ ಚ ತಥಾ ತುಷ್ಟಿರ್ಲೋಭಂ ಪುಷ್ಟಿರಸೂಯತ॥ 28**

---

ಮಂದಿ ಕನ್ಯೆಯರನ್ನು ಪಡೆದನು. ಅವರ ಹೆಸರುಗಳನ್ನು ಹೇಳುತ್ತೇನೆ, ಕೇಳು (21-22). ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಮೇಧಾ, ಪುಷ್ಟಿ, ಕ್ರಿಯಾ, ಬುದ್ಧಿ, ಲಜ್ಜಾ, ವಪು, ಶಾಂತಿ, ಸಿದ್ಧಿ ಮತ್ತು ಹದಿಮೂರನೆಯವಳು ಕೀರ್ತಿ. ಈ ದಕ್ಷಪುತ್ರಿಯರನ್ನು ಧರ್ಮನು ಪತ್ನಿಯರನ್ನಾಗಿ ಸ್ವೀಕರಿಸಿದನು. ಅವರಿಗೆ ತಂಗಿಯರಾದ ಹನ್ನೊಂದು ಮಂದಿ ಸುಂದರಿಯರು ಇವರು (ಇವರ ಹೆಸರು ಹೀಗಿದೆ) (23-24). ಖ್ಯಾತಿ, ಸತೀ, ಸಂಭೃತಿ, ಸ್ಮೃತಿ, ಪ್ರೀತಿ, ಕ್ಷಮಾ, ಸಂತತಿ, ಅನಸೂಯಾ, ಊರ್ಜಾ, ಸ್ವಾಹಾ, ಸ್ವಧಾ—ಎಂದು. ಇವರನ್ನು ಯಥಾಕ್ರಮವಾಗಿ ಭೃಗು, ಶಿವ, ಮರೀಚಿ, ಅಂಗಿರಸ್, ಪುಲಸ್ತ್ಯ, ಪುಲಹ, ಕ್ರತು, ಅತ್ರಿ, ವಸಿಷ್ಠ, ಅಗ್ನಿ ಮತ್ತು ಪಿತೃದೇವತೆಗಳು ಮದುವೆಯಾದರು (25-27). ಇವರಲ್ಲಿ ಶ್ರದ್ಧೆಯು ಕಾಮನನ್ನೂ ಚಲೆಯು

**ಮೇಧಾ ಶ್ರುತಂ ಕ್ರಿಯಾ ದಂಡಂ ನಯಂ ವಿನಯಮೇವ ಚ। 29**

**ಬೋಧಂ ಬುದ್ಧಿಸ್ತಥಾ ಲಜ್ಜಾ ವಿನಯಂ ವಪುರಾತ್ಮಜಮ್।**
**ವ್ಯವಸಾಯಂ ಪ್ರಜಜ್ಞೇ ವೈ ಕ್ಷೇಮಂ ಶಾಂತಿರಸೂಯತ॥ 30**

**ಸುಖಂ ಸಿದ್ಧಿರ್ಯಶಃ ಕೀರ್ತಿರಿತ್ಯೇತೇ ಧರ್ಮಸೂನವಃ।**
**ಕಾಮಾದ್ರತಿಃ ಸುತಂ ಹರ್ಷಂ ಧರ್ಮಪೌತ್ರಮಸೂಯತ॥ 31**

**ಹಿಂಸಾ ಭಾರ್ಯಾ ತ್ವಧರ್ಮಸ್ಯ ತತೋ ಜಜ್ಞೇ ತಥಾನೃತಮ್।**
**ಕನ್ಯಾ ಚ ನಿಕೃತಿಸ್ತಾಭ್ಯಾಂ ಭಯಂ ನರಕಮೇವ ಚ॥ 32**

**ಮಾಯಾ ಚ ವೇದನಾ ಚೈವ ಮಿಥುನಂ ತ್ವಿದಮೇತಯೋಃ।**
**ತಯೋರ್ಜಜ್ಞೇಽಥ ವೈ ಮಾಯಾ ಮೃತ್ಯುಂ ಭೂತಾಪಹಾರಿಣಮ್॥**

**ವೇದನಾ ಸ್ವಸುತಂ ಚಾಪಿ ದುಃಖಂ ಜಜ್ಞೇಽಥ ರೌರವಾತ್।**
**ಮೃತ್ಯೋರ್ವ್ಯಾಧಿಜರಾಶೋಕತೃಷ್ಣಾಕ್ರೋಧಾಶ್ಚ ಜಜ್ಞಿರೇ॥ 34**

---

ದರ್ಪನನ್ನೂ ಧೃತಿಯು ನಿಯಮನನ್ನೂ ತುಷ್ಟಿಯು ಸಂತೋಷನನ್ನೂ ಪುಷ್ಟಿಯು ಲೋಭನನ್ನೂ ಪುತ್ರರನ್ನಾಗಿ ಪಡೆದರು. ಮೇಧೆಗೆ ಶ್ರುತನೂ ಕ್ರಿಯೆಗೆ ದಂಡ, ನಯ, ವಿನಯ—ಎಂಬುವರೂ, ಬುದ್ಧಿಗೆ ಬೋಧನೂ ಲಜ್ಜೆಗೆ ವಿನಯನೂ ವಪುವಿಗೆ ವ್ಯವಸಾಯನೂ ಶಾಂತಿಗೆ ಕ್ಷೇಮನೂ ಪುತ್ರರಾಗಿ ಜನಿಸಿದರು (28-30). ಸಿದ್ಧಿಗೆ ಸುಖ ಎಂಬವನೂ ಕೀರ್ತಿಗೆ ಯಶ ಎಂಬವನೂ ಮಕ್ಕಳಾದರು. ಇವರೆಲ್ಲರೂ ಧರ್ಮನ ಪುತ್ರರು. ರತಿಯು (ಧರ್ಮಪುತ್ರನಾದ) ಕಾಮನಿಂದ ಹರ್ಷನೆಂಬ ಮಗನನ್ನು ಪಡೆದಳು. ಇವನು ಧರ್ಮನಿಗೆ ಮೊಮ್ಮಗ (31). ಅಧರ್ಮ ಎಂಬವನಿಗೆ ಹಿಂಸೆಯೆಂಬ ಭಾರ್ಯೆಯಿದ್ದಳು. ಅವಳಿಗೆ ಅನೃತನೆಂಬ ಮಗನೂ ನಿಕೃತಿಯೆಂಬ ಮಗಳೂ ಹುಟ್ಟಿದರು. ಅನೃತ ನಿಕೃತಿಗಳಿಂದ ಭಯ, ನರಕ—ಎಂಬ ಪುತ್ರರೂ ಮಾಯಾ, ವೇದನಾ—ಎಂಬ ಪುತ್ರಿಯರೂ ಹುಟ್ಟಿದರು. ಭಯನಿಗೆ ಮಾಯಾ ಮತ್ತು ನರಕನಿಗೆ ವೇದನಾ ಹೆಂಡತಿಯರಾದರು. ಅವರಲ್ಲಿ ಮಾಯೆಯು ಪ್ರಾಣಿಸಂಹಾರಕನಾದ ಮೃತ್ಯುವೆಂಬ ಮಗನನ್ನು ಪಡೆದಳು (32-33). ವೇದನೆಯು ರೌರವನೆಂಬ ಆ ನರಕನಿಂದ ದುಃಖ

**ದುಃಖೋತ್ತರಾಃ ಸ್ಮೃತಾ ಹ್ಯೇತೇ ಸರ್ವೇ ಚಾಧರ್ಮಲಕ್ಷಣಾಃ।**
**ನೈಷಾಂ ಪುತ್ರೋಽಸ್ತಿ ವೈ ಭಾರ್ಯಾ ತೇ ಸರ್ವೇ**
**ಹ್ಯೂರ್ಧ್ವರೇತಸಃ॥** 35

**ರೌದ್ರಾಣ್ಯೇತಾನಿ ರೂಪಾಣಿ ವಿಷ್ಣೋರ್ಮುನಿವರಾತ್ಮಜ।**
**ನಿತ್ಯಪ್ರಲಯಹೇತುತ್ವಂ ಜಗತೋಽಸ್ಯ ಪ್ರಯಾಂತಿ ವೈ॥** 36

**ದಕ್ಷೋ ಮರೀಚಿರತ್ರಿಶ್ಚ ಭೃಗ್ವಾದ್ಯಾಶ್ಚ ಪ್ರಜೇಶ್ವರಾಃ।**
**ಜಗತ್ಯತ್ರ ಮಹಾಭಾಗ ನಿತ್ಯಸರ್ಗಸ್ಯ ಹೇತವಃ॥** 37

**ಮನವೋ ಮನುಪುತ್ರಾಶ್ಚ ಭೂಪಾ ವೀರ್ಯಧರಾಶ್ಚ ಯೇ।**
**ಸನ್ಮಾರ್ಗನಿರತಾಃ ಶೂರಾಸ್ತೇ ಸರ್ವೇ ಸ್ಥಿತಿಕಾರಿಣಃ॥** 38

*ಶ್ರೀ ಮೈತ್ರೇಯ ಉವಾಚ:*

**ಯೇಯಂ ನಿತ್ಯಾ ಸ್ಥಿತಿರ್ಬ್ರಹ್ಮನ್ನಿತ್ಯಸರ್ಗಸ್ತಥೇರಿತಃ।**
**ನಿತ್ಯಾಭಾವಶ್ಚ ತೇಷಾಂ ವೈ ಸ್ವರೂಪಂ ಮಮ ಕಥ್ಯತಾಮ್॥** 39

---

ನನ್ನು ಹೆತ್ತಳು. ಮೃತ್ಯುವಿನಿಂದ ರೋಗ, ಮುಪ್ಪು, ಶೋಕ, ತೃಷ್ಣೆ, ಕ್ರೋಧ ಎಂಬುವರು ಹುಟ್ಟಿದರು. ಇವರೆಲ್ಲರೂ ಅಧರ್ಮಸ್ವರೂಪರಾಗಿ 'ದುಃಖೋತ್ತರ' ಎಂಬ ಹೆಸರನ್ನು ಪಡೆದರು. ಇವರಿಗೆ ಸಂತತಿಯಾಗಲಿಲ್ಲ. ಏಕೆಂದರೆ ಇವರೆಲ್ಲರೂ ಊರ್ಧ್ವರೇತಸ್ಕರಾದ ಬ್ರಹ್ಮಚಾರಿಗಳು! (34-35). ಹೇ ಮೈತ್ರೇಯ, ಇವರೆಲ್ಲರೂ ವಿಷ್ಣುವಿನ ಭಯಂಕರವಾದ ರೂಪಾಂತರ ಗಳು; ಜಗತ್ತಿನ ನಿತ್ಯಪ್ರಳಯಕ್ಕೆ ಕಾರಣಭೂತರು. ಆದರೆ ದಕ್ಷ, ಮರೀಚಿ, ಅತ್ರಿ, ಭೃಗು—ಮುಂತಾದ ಪ್ರಜಾಪತಿಗಳು ಜಗತ್ತಿನ ಸೃಷ್ಟಿಗೆ, ನಿತ್ಯಸರ್ಗಕ್ಕೆ ಕಾರಣಭೂತರು (36-37). ಮನುಗಳೂ ಮನುಪುತ್ರರಾದ ವೀರರೂ ಶೂರರೂ ಸನ್ಮಾರ್ಗಗಾಮಿಗಳೂ ಆದ ಭೂಪಾಲರು ಜಗತ್ತಿನ ನಿತ್ಯಸ್ಥಿತಿಗೆ ಕಾರಣರಾಗಿದ್ದಾರೆ (38). ಆಗ ಮೈತ್ರೇಯರು "ಬ್ರಾಹ್ಮಣಶ್ರೇಷ್ಠರೇ, ನೀವು ನಿತ್ಯಸ್ಥಿತಿ, ನಿತ್ಯಸರ್ಗ, ನಿತ್ಯಪ್ರಳಯ ಎಂದು ಹೇಳಿದಿರಲ್ಲ, ಅವುಗಳ ಸ್ವರೂಪವೇನು? ಹೇಳೋಣವಾಗಲಿ" ಎಂದರು (39). ಪರಾಶರರು

*ಶ್ರೀ ಪರಾಶರ ಉವಾಚ:*

**ಸರ್ಗಸ್ಥಿತಿವಿನಾಶಾಂಶ್ಚ ಭಗವಾನ್ಮಧುಸೂದನಃ।**
**ತೈಸ್ತೈ ರೂಪೈರಚಿಂತ್ಯಾತ್ಮಾ ಕರೋತ್ಯವ್ಯಾಹತೋ ವಿಭುಃ॥ 40**

**ನೈಮಿತ್ತಿಕಃ ಪ್ರಾಕೃತಿಕಸ್ತಥೈವಾತ್ಯಂತಿಕೋ ದ್ವಿಜ।**
**ನಿತ್ಯಶ್ಚ ಸರ್ವಭೂತಾನಾಂ ಪ್ರಲಯೋಽಯಂ ಚತುರ್ವಿಧಃ॥ 41**

**ಬ್ರಾಹ್ಮೋ ನೈಮಿತ್ತಿಕಸ್ತತ್ರ ಶೇತೇಽಯಂ ಜಗತೀಪತಿಃ।**
**ಪ್ರಯಾತಿ ಪ್ರಾಕೃತೇ ಚೈವ ಬ್ರಹ್ಮಾಂಡಂ ಪ್ರಕೃತೌ ಲಯಮ್॥ 42**

**ಜ್ಞಾನಾದಾತ್ಯಂತಿಕಃ ಪ್ರೋಕ್ತೋ ಯೋಗಿನಃ ಪರಮಾತ್ಮನಿ।**
**ನಿತ್ಯಃ ಸದೈವ ಭೂತಾನಾಂ ಯೋ ವಿನಾಶೋ ದಿವಾನಿಶಮ್॥ 43**

**ಪ್ರಸೂತಿಃ ಪ್ರಕೃತೇರ್ಯಾ ತು ಸಾ ಸೃಷ್ಟಿಃ ಪ್ರಾಕೃತಾ ಸ್ಮೃತಾ।**
**ದೈನಂದಿನೀ ತಥಾ ಪ್ರೋಕ್ತಾ ಯಾಂತರಪ್ರಲಯಾದನು॥ 44**

---

ಹೇಳಿದರು: ಯಾವಾತನ ಸ್ವರೂಪವನ್ನು ಅರಿಯಲು ಅಶಕ್ಯವೋ ಆ ಪ್ರಭುವಾದ ಭಗವಾನ್ ಮಧುಸೂದನನು ಅಡೆತಡೆಯಿಲ್ಲದೆ ವಿಭಿನ್ನರೂಪಗಳಿಂದ ಸೃಷ್ಟಿ ಸ್ಥಿತಿಲಯಗಳನ್ನು ನಡೆಸುತ್ತಿರುವನು. ಸಕಲಭೂತಗಳಿಗೂ ಆಗತಕ್ಕ ಪ್ರಳಯವು ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ, ನಿತ್ಯ—ಎಂದು ನಾಲ್ಕು ವಿಧ (40-41). ಅವುಗಳಲ್ಲಿ ನೈಮಿತ್ತಿಕ ಪ್ರಳಯವು ಬ್ರಾಹ್ಮವೆನಿಸುತ್ತದೆ. (ಕಲ್ಪಾಂತದಲ್ಲಿ) ಜಗದೀಶ್ವರನು ಶಯನಮಾಡಿದಾಗ ಇದು ಸಂಭವಿಸುತ್ತದೆ. ಪ್ರಾಕೃತ ಪ್ರಳಯದಲ್ಲಿ ಬ್ರಹ್ಮಾಂಡವು ಪ್ರಕೃತಿಯಲ್ಲಿ ಲೀನವಾಗುತ್ತದೆ. ಯೋಗಿಯು ಜ್ಞಾನಬಲದಿಂದ ಪರಮಾತ್ಮನಲ್ಲಿ ಸೇರಿಹೋಗುವುದು ಆತ್ಯಂತಿಕ ಪ್ರಳಯ. ಹುಟ್ಟಿದ ಪ್ರಾಣಿಗಳಿಗೆ ಹಗಲೂ ರಾತ್ರಿಯೂ ಆಗುತ್ತಿರುವ ವಿನಾಶವೇ ನಿತ್ಯಪ್ರಳಯ (42-43). ಆದಿಯಲ್ಲಿ ಪ್ರಕೃತಿಯಿಂದ ಉದ್ಭವಿಸುವ ಯಾವ ಸೃಷ್ಟಿಯುಂಟೋ ಅದು ಪ್ರಾಕೃತಸೃಷ್ಟಿಯೆಂದು ಸ್ಮೃತವಾಗಿದೆ. ಅವಾಂತರಪ್ರಳಯಗಳ ನಡುವೆ (ಬ್ರಹ್ಮನಿಂದ) ಆಗುವ ಸೃಷ್ಟಿಯು ದೈನಂದಿನಸೃಷ್ಟಿಯೆನಿಸುತ್ತದೆ. ಪ್ರತಿದಿನವೂ ಪ್ರಾಣಿಗಳು

ಭೂತಾನ್ಯನುದಿನಂ ಯತ್ರ ಜಾಯಂತೇ ಮುನಿಸತ್ತಮ।
ನಿತ್ಯಸರ್ಗೋಽ ಹಿ ಸ ಪ್ರೋಕ್ತಃ ಪುರಾಣಾರ್ಥವಿಚಕ್ಷಣೈಃ॥ 45

ಏವಂ ಸರ್ವಶರೀರೇಷು ಭಗವಾನ್ ಭೂತಭಾವನಃ।
ಸಂಸ್ಥಿತಃ ಕುರುತೇ ವಿಷ್ಣುರುತ್ಪತ್ತಿಸ್ಥಿತಿಸಂಯಮಾನ್॥ 46

ಸೃಷ್ಟಿಸ್ಥಿತಿವಿನಾಶಾನಾಂ ಶಕ್ತಯಃ ಸರ್ವದೇಹಿಷು।
ವೈಷ್ಣವ್ಯಃ ಪರಿವರ್ತಂತೇ ಮೈತ್ರೇಯಾಹರ್ನಿಶಂ ಸಮಾಃ॥ 47

ಗುಣತ್ರಯಮಯಂ ಹ್ಯೇತದ್ ಬ್ರಹ್ಮನ್ ಶಕ್ತಿತ್ರಯಂ ಮಹತ್।
ಯೋಽತಿಯಾತಿ ಸ ಯಾತ್ಯೇವ ಪರಂ ನಾವರ್ತತೇ ಪುನಃ॥ 48

ಇತಿ ಶ್ರೀ ವಿಷ್ಣುಪುರಾಣೇ ಪ್ರಥಮೇಽಂಶೇ ಸಪ್ತಮೋಽಧ್ಯಾಯಃ

---

ಹುಟ್ಟುತ್ತವೆಯೆಂಬುದೇನುಂಟು ಅದನ್ನು ನಿತ್ಯಸರ್ಗವೆಂದು ಪುರಾಣಾರ್ಥ ಕೋವಿದರು ಹೇಳಿದ್ದಾರೆ (44-45). ಸರ್ವರ ಶರೀರಗಳಲ್ಲಿಯೂ ನೆಲೆಸಿರುವ ಭೂತಭಾವನಾದ ಭಗವಾನ್ ವಿಷ್ಣುವು ಈ ರೀತಿಯಲ್ಲಿ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುತ್ತಿದ್ದಾನೆ. ಮೈತ್ರೇಯ, ಸೃಷ್ಟಿ ಸ್ಥಿತಿ ವಿನಾಶ ಗಳನ್ನು ಮಾಡುವ ವೈಷ್ಣವೀಶಕ್ತಿಗಳು ಸಕಲ ಪ್ರಾಣಿಗಳಲ್ಲಿಯೂ ಅಹೋರಾತ್ರವೂ ಸಮಾನವಾಗಿ ಸಂಚರಿಸುತ್ತಲೇ ಇವೆ (46-47). ಮಹತ್ತರವಾದ ಈ ಶಕ್ತಿತ್ರಯವು ತ್ರಿಗುಣಾತ್ಮಕವಾಗಿದೆ. ಯಾವನು ಈ ಗುಣತ್ರಯವನ್ನು ದಾಟಿಹೋಗುತ್ತಾನೋ ಅವನು ಪರಮಪದವನ್ನು ಸೇರಿಯೇ ಸೇರುತ್ತಾನೆ. ಮತ್ತೆ ಹಿಂದಿರುಗುವುದಿಲ್ಲ (ಮುಕ್ತನಾಗುತ್ತಾನೆ) (48).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮ ಅಂಶದಲ್ಲಿ
ಏಳನೆಯ ಅಧ್ಯಾಯ ಮುಗಿಯಿತು.



## ಅಷ್ಟಮೋಽಧ್ಯಾಯಃ

*ಶ್ರೀ ಪರಾಶರ ಉವಾಚ:*

**ಕಥಿತಸ್ತಾಮಸಃ ಸರ್ಗೋ ಬ್ರಹ್ಮಣಸ್ತೇ ಮಹಾಮುನೇ।**
**ರುದ್ರಸರ್ಗಂ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು॥** 1

**ಕಲ್ಪಾದವಾತ್ಮನಸ್ತುಲ್ಯಂ ಸುತಂ ಪ್ರಧ್ಯಾಯತಸ್ತತಃ।**
**ಪ್ರಾದುರಾಸೀತ್ಪ್ರಭೋರಂಕೇ ಕುಮಾರೋ ನೀಲಲೋಹಿತಃ॥** 2

**ರುರೋದ ಸುಸ್ವರಂ ಸೋಽಥ ಪ್ರಾದ್ರವದ್ ದ್ವಿಜಸತ್ತಮ।**
**ಕಿಂ ತ್ವಂ ರೋದಿಷಿ ತಂ ಬ್ರಹ್ಮಾ ರುದಂತಂ ಪ್ರತ್ಯುವಾಚ ಹ॥** 3

**ನಾಮ ದೇಹೀತಿ ತಂ ಸೋಽಥ ಪ್ರತ್ಯುವಾಚ ಪ್ರಜಾಪತಿಃ।**
**ರುದ್ರಸ್ತ್ವಂ ದೇವ ನಾಮ್ನಾಸಿ ಮಾರೋದೀರ್ಧೈರ್ಯಮಾವಹ॥** 4

---

## ಅಧ್ಯಾಯ 8

ರುದ್ರನ ಉತ್ಪತ್ತಿ. ವಿಷ್ಣು ಮತ್ತು ಲಕ್ಷ್ಮೀದೇವಿಯರ ವಿಶ್ವರೂಪತೆ.

ಪರಾಶರರು ಹೇಳಿದರು: ಎಲೈ ಮಹರ್ಷಿ, ಬ್ರಹ್ಮನಿಂದಾದ ತಾಮಸ ಸರ್ಗದ ವಿಷಯವನ್ನು ಹೇಳಿದ್ದೇನೆ. ಈಗ ರುದ್ರಸೃಷ್ಟಿಯನ್ನು ಹೇಳುತ್ತೇನೆ, ಕೇಳು (1). ಕಲ್ಪಾದಿಯಲ್ಲಿ ಬ್ರಹ್ಮದೇವನು ತನಗೆ ಸಮಾನನಾದ ಒಬ್ಬ ಪುತ್ರನನ್ನು ಪಡೆಯಬೇಕೆಂದು ಧ್ಯಾನಸ್ಥನಾಗಿರಲು, ಆತನ ತೊಡೆಯ ಮೇಲೆ ನೀಲಲೋಹಿತನಾದ (ಕಪ್ಪು, ಕೆಂಪು ಸಂಮಿಶ್ರ ಬಣ್ಣದ) ಒಬ್ಬ ಕುಮಾರನು ಆವಿರ್ಭವಿಸಿದನು (2). ಆ ಕುಮಾರನು ಗಟ್ಟಿಯಾಗಿ ರೋದಿಸುತ್ತಿದ್ದನಲ್ಲದೆ ಅತ್ತ ಇತ್ತ ಓಡತೊಡಗಿದನು. ರೋದಿಸುತ್ತಿದ್ದ ಆತನನ್ನು ಕುರಿತು ಬ್ರಹ್ಮನು "ನೀನು ಏಕೆ ಅಳುತ್ತೀಯೆ" ಎಂದು ಕೇಳಿದನು. ಅದಕ್ಕೆ ಕುಮಾರನು "ನನಗೆ ಒಂದು ಹೆಸರನ್ನಿಡು!" ಎಂದು ಹೇಳಲಾಗಿ ಪ್ರಜಾಪತಿಯು "ಹೇ ದೇವ, ನೀನು ರುದ್ರ. ಅಳಬೇಡ. ಧೈರ್ಯವನ್ನು ಹೊಂದು" ಎಂದನು (3-4). ಹೀಗೆ ಹೇಳಿದ ಮೇಲೂ ಆತನು ಏಳು ಸಲ

ಏವಮುಕ್ತಃ ಪುನಃ ಸೋಽಥ ಸಪ್ತಕೃತ್ವೋ ರುರೋದ ವೈ।
ತತೋಽನ್ಯಾನಿ ದದೌ ತಸ್ಮೈ ಸಪ್ತನಾಮಾನಿ ವೈ ಪ್ರಭುಃ॥ 5

ಸ್ಥಾನಾನಿ ಚೈಷಾಮಷ್ಟಾನಾಂ ಪತ್ನೀಃ ಪುತ್ರಾಂಶ್ಚ ಸ ಪ್ರಭುಃ।
ಭವಂ ಶರ್ವಮಥೇಶಾನಂ ತಥಾ ಪಶುಪತಿಂ ದ್ವಿಜ॥ 6

ಭೀಮಮುಗ್ರಂ ಮಹಾದೇವಮುವಾಚ ಸ ಪಿತಾಮಹಃ।
ಚಕ್ರೇ ನಾಮಾನ್ಯಥೈತಾನಿ ಸ್ಥಾನಾನ್ಯೇಷಾಂ ಚಕಾರ ಸಃ॥ 7

ಸೂರ್ಯೋ ಜಲಂ ಮಹೀ ವಾಯುರ್ವಹ್ನಿರಾಕಾಶಮೇವ ಚ।
ದೀಕ್ಷಿತೋ ಬ್ರಾಹ್ಮಣಃ ಸೋಮ ಇತ್ಯೇತಾಸ್ತನವಃ ಕ್ರಮಾತ್॥ 8

ಸುವರ್ಚಲಾ ತಥೈವೋಷಾ ವಿಕೇಶೀ ಚಾಪರಾ ಶಿವಾ।
ಸ್ವಾಹಾ ದಿಶಸ್ತಥಾ ದೀಕ್ಷಾ ರೋಹಿಣೀ ಚ ಯಥಾಕ್ರಮಮ್॥ 9

ಸೂರ್ಯಾದೀನಾಂ ದ್ವಿಜಶ್ರೇಷ್ಠ ರುದ್ರಾದ್ಯೈರ್ನಾಮಭಿಃ ಸಹ।
ಪತ್ನ್ಯಃ ಸ್ಮೃತಾ ಮಹಾಭಾಗ ತದಪತ್ಯಾನಿ ಮೇ ಶೃಣು॥ 10

---

ರೋದಿಸಿದನು. ಆಗ ಬ್ರಹ್ಮನು ಮತ್ತೆ ಏಳು ಸಲ ಏಳು ಹೆಸರುಗಳನ್ನಿಟ್ಟನು. (ಎಂಟು ಹೆಸರುಗಳಿಂದ) ಎಂಟು ವ್ಯಕ್ತಿಗಳಾದ ಇವರಿಗೆ ಬ್ರಹ್ಮನು ಸ್ಥಾನಗಳನ್ನೂ ಪತ್ನಿಯರನ್ನೂ ಪುತ್ರರನ್ನೂ ನೀಡಿದನು. ಇವರಿಗೆ (ರುದ್ರ ಎಂಬುದಲ್ಲದೆ) ಭವ, ಶರ್ವ, ಈಶಾನ, ಪಶುಪತಿ, ಭೀಮ, ಉಗ್ರ, ಮಹಾದೇವ—ಎಂಬ ಏಳು ಹೆಸರುಗಳನ್ನಿತ್ತು ಇವರಿಗೆ ಸ್ಥಾನಗಳನ್ನೂ ಪಿತಾಮಹನು ಗೊತ್ತುಮಾಡಿದನು (5-7). ಸೂರ್ಯ, ಜಲ, ಭೂಮಿ, ವಾಯು, ಅಗ್ನಿ, ಆಕಾಶ, ದೀಕ್ಷಿತನಾದ ಬ್ರಾಹ್ಮಣ ಮತ್ತು ಚಂದ್ರ, ಇವರೇ ಮೇಲೆ ಹೇಳಿದ ಅಷ್ಟವ್ಯಕ್ತಿಗಳಿಗೆ ಕ್ರಮವಾದ ಶರೀರಗಳು (8). ಸುವರ್ಚಲಾ, ಉಷಾ, ವಿಕೇಶೀ, ಶಿವಾ, ಸ್ವಾಹಾ, ದಿಕ್ಕು, ದೀಕ್ಷಾ, ರೋಹಿಣೀ—ಇವರು ಯಥಾಕ್ರಮವಾಗಿ ಪತ್ನಿಯರು. ಮೈತ್ರೇಯ, ರುದ್ರ ಮೊದಲಾದ ಎಂಟು ಹೆಸರುಗಳೊಡನೆ ಸೂರ್ಯ—ಮೊದಲಾದ ಸ್ಥಾನಗಳನ್ನೂ ಸುವರ್ಚಲಾ—ಮೊದಲಾದ ಪತ್ನಿಯರನ್ನೂ ಅನ್ವಯಿಸಿಕೊಳ್ಳಬೇಕು. ಅವರ ಮಕ್ಕಳು ಯಾರೆಂಬುದನ್ನು ಹೇಳುತ್ತೇನೆ ಕೇಳು (9-10).

ಏಷಾಂ ಸೂತಿಪ್ರಸೂತಿಭ್ಯಾಮಿದಮಾಪೂರಿತಂ ಜಗತ್।
ಶನೈಶ್ಚರಸ್ತಥಾ ಶುಕ್ರೋ ಲೋಹಿತಾಂಗೋ ಮನೋಜವಃ॥ 11

ಸ್ಕಂದಃ ಸರ್ಗೋಽಥ ಸಂತಾನೋ ಬುಧಶ್ಚಾನುಕ್ರಮಾತ್ಸುತಾಃ।
ಏವಂ ಪ್ರಕಾರೋ ರುದ್ರೋಽಸೌ ಸತೀಂ
ಭಾರ್ಯಾಮನಿಂದಿತಾಮ್॥ 12

ಉಪಯೇಮೇ ದುಹಿತರಂ ದಕ್ಷಸ್ಯೈವ ಪ್ರಜಾಪತೇಃ।
ದಕ್ಷಕೋಪಾಚ್ಚ ತತ್ಯಾಜ ಸಾ ಸತೀ ಸ್ವಕಲೇವರಮ್॥ 13

ಹಿಮವದ್‌ದುಹಿತಾ ಸಾಭೂನ್ಮೇನಾಯಾಂ ದ್ವಿಜಸತ್ತಮ।
ಉಪಯೇಮೇ ಪುನಶ್ಚೋಮಾಮನನ್ಯಾಂ ಭಗವಾನ್ ಹರಃ॥ 14

ದೇವೌ ಧಾತೃವಿಧಾತಾರೌ ಭೃಗೋಃ ಖ್ಯಾತಿರಸೂಯತ।
ಶ್ರಿಯಂ ಚ ದೇವದೇವಸ್ಯ ಪತ್ನೀ ನಾರಾಯಣಸ್ಯ ಯಾ॥ 15

---

ಇವರ ಮಕ್ಕಳು ಮೊಮ್ಮಕ್ಕಳಿಂದ ಈ ಜಗತ್ತು ತುಂಬಿಹೋಗಿದೆ. ಶನಿ, ಶುಕ್ರ, ಕುಜ, ಮನೋಜವ, ಸ್ಕಂದ, ಸರ್ಗ, ಸಂತಾನ, ಬುಧ—ಇವರು ರುದ್ರಾದಿಗಳ ಪುತ್ರರು. ಈ ಪ್ರಕಾರದಲ್ಲಿ ಆವಿರ್ಭವಿಸಿದ ರುದ್ರನು ಪ್ರಶಸ್ತ ಳಾದ ಸತೀ ಎಂಬುವಳನ್ನು ಪತ್ನಿಯಾಗಿ ಸ್ವೀಕರಿಸಿ ಮದುವೆಯಾದನು (11-12). ಅವಳು ದಕ್ಷಪ್ರಜಾಪತಿಯ ಮಗಳು. (ಒಂದಾನೊಂದು ಕಾರಣದಿಂದ) ದಕ್ಷನ ಮೇಲೆ ಕೋಪಗೊಂಡು ಸತಿಯು ತನ್ನ ದೇಹವನ್ನು ತ್ಯಜಿಸಿದಳು. ಅನಂತರ ಅವಳೇ ಹಿಮವಂತನ ಮಗಳಾಗಿ ಮೇನೆಯಲ್ಲಿ ಹುಟ್ಟಿದಳು. ಆಗ ಭಗವಾನ್ ಹರನು ಸತೀದೇವಿಗೆ ಅಭಿನ್ನಳಾದ ಉಮೆಯೆಂಬ ಆ ಕನ್ಯೆಯನ್ನು ವಿವಾಹವಾದನು (13-14). ಹಿಂದೆ ಹೇಳಿದ ಖ್ಯಾತಿಯು ಭೃಗುವಿನಿಂದ ಧಾತ, ವಿಧಾತ—ಎಂಬ ಇಬ್ಬರು ದೇವತೆ ಗಳನ್ನೂ, ದೇವದೇವನಾದ ನಾರಾಯಣನಿಗೆ ಪತ್ನಿಯಾದ ಲಕ್ಷ್ಮಿಯನ್ನೂ ಪ್ರಸವಿಸಿದಳು (15). ಆಗ ಮೈತ್ರೇಯರು "ಪರಾಶರ ಮುನಿಗಳೇ, ಅಮೃತಮಂಥನದ ಕಾಲದಲ್ಲಿ ಲಕ್ಷ್ಮಿಯು ಕ್ಷೀರಸಮುದ್ರದಿಂದ ಹುಟ್ಟಿದ

*ಶ್ರೀ ಮೈತ್ರೇಯ ಉವಾಚ:*

**ಕ್ಷೀರಾಬ್ಧೌ ಶ್ರೀಃ ಸಮುತ್ಪನ್ನಾ ಶ್ರೂಯತೇಽಮೃತಮಂಥನೇ।**
**ಭೃಗೋಃ ಖ್ಯಾತ್ಯಾಂ ಸಮುತ್ಪನ್ನೇತ್ಯೇತದಾಹ ಕಥಂ ಭವಾನ್॥ 16**

*ಶ್ರೀ ಪರಾಶರ ಉವಾಚ:*

**ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ।**
**ಯಥಾ ಸರ್ವಗತೋ ವಿಷ್ಣುಸ್ತಥೈವೇಯಂ ದ್ವಿಜೋತ್ತಮ॥ 17**

**ಅರ್ಥೋ ವಿಷ್ಣುರಿಯಂ ವಾಣೀ ನೀತಿರೇಷಾ ನಯೋ ಹರಿಃ।**
**ಬೋಧೋ ವಿಷ್ಣುರಿಯಂ ಬುದ್ಧಿರ್ಧರ್ಮೋಽಸೌ**
**ಸತ್ಕ್ರಿಯಾ ತ್ವಿಯಮ್॥ 18**

**ಸ್ರಷ್ಟಾ ವಿಷ್ಣುರಿಯಂ ಸೃಷ್ಟಿಃ ಶ್ರೀರ್ಭೂಮಿರ್ಭೂಧರೋ ಹರಿಃ।**
**ಸಂತೋಷೋ ಭಗವಾನ್ ಲಕ್ಷ್ಮೀಸ್ತುಷ್ಟಿರ್ಮೈತ್ರೇಯ ಶಾಶ್ವತೀ॥ 19**

**ಇಚ್ಛಾ ಶ್ರೀರ್ಭಗವಾನ್ಕಾಮೋ ಯಜ್ಞೋಽಸೌ ದಕ್ಷಿಣಾ ತ್ವಿಯಮ್।**
**ಆಜ್ಯಾಹುತಿರಸೌ ದೇವೀ ಪುರೋಡಾಶೋ ಜನಾರ್ದನಃ॥ 20**

---

ಳೆಂದು ಶ್ರುತವಾಗಿದೆ. ಅವಳು ಭೃಗುವಿನಿಂದ ಖ್ಯಾತಿಯಲ್ಲಿ ಹುಟ್ಟಿದಳೆಂದು ಹೇಳುತ್ತೀರಲ್ಲ, ಅದು ಹೇಗೆ? ಎಂದು ಪ್ರಶ್ನೆ ಮಾಡಿದರು (16). ಆಗ ಪರಾಶರರು ಹೀಗೆಂದರು: ಮೈತ್ರೇಯ, ಜಗನ್ಮಾತೆಯಾದ ಲಕ್ಷ್ಮಿಯು ನಿತ್ಯಳು (ಅವಳಿಗೆ ಜನನ ಮರಣಗಳಿಲ್ಲ). ಅವಳು ವಿಷ್ಣುವನ್ನಗಲದೆ ಯಾವಾಗಲೂ ಜೊತೆಯಲ್ಲಿಯೇ ಇರತಕ್ಕವಳು. ವಿಷ್ಣುವು ಹೇಗೆ ಸರ್ವ ವ್ಯಾಪಿಯೋ ಹಾಗೆಯೇ ಲಕ್ಷ್ಮಿಯೂ ಸರ್ವವ್ಯಾಪಕಳು (17). ವಿಷ್ಣುವು ಅರ್ಥ, ಲಕ್ಷ್ಮಿಯು ಶಬ್ದ. ಹರಿಯು ನಯವಾದರೆ ಇವಳು ನೀತಿಯಾಗಿ ದ್ದಾಳೆ. ಅವನು ಬೋಧ, ಇವಳು ಬುದ್ಧಿ. ಅವನು ಧರ್ಮ, ಇವಳು ಶುಭಕ್ರಿಯೆ (18). ಅವನು ಸೃಷ್ಟಿಕರ್ತ, ಇವಳು ಸೃಷ್ಟಿ. ಅವನು ಭೂಧರ, ಇವಳು ಭೂಮಿ. ಅವನು ಸಂತೋಷ, ಇವಳು ನಿತ್ಯಸಂತುಷ್ಟಿ. ಅವನು ಕಾಮ, ಇವಳು ಇಚ್ಛೆ. ಅವನು ಯಜ್ಞ, ಇವಳು ದಕ್ಷಿಣೆ. ಅವನು

**ಪತ್ನೀಶಾಲಾ ಮುನೇ ಲಕ್ಷ್ಮೀಃ ಪ್ರಾಗ್ವಂಶೋ ಮಧುಸೂದನಃ।**
**ಚಿತಿರ್ಲಕ್ಷ್ಮೀರ್ಹರಿರ್ಯೂಪ ಇಧ್ಮಾ ಶ್ರೀರ್ಭಗವಾನ್ ಕುಶಃ॥ 21**

**ಸಾಮಸ್ವರೂಪೀ ಭಗವಾನುದ್ಗೀತಿಃ ಕಮಲಾಲಯಾ।**
**ಸ್ವಾಹಾ ಲಕ್ಷ್ಮೀರ್ಜಗನ್ನಾಥೋ ವಾಸುದೇವೋ ಹುತಾಶನಃ॥ 22**

**ಶಂಕರೋ ಭಗವಾನ್ ಶೌರಿರ್ಗೌರೀ ಲಕ್ಷ್ಮೀರ್ದ್ವಿಜೋತ್ತಮ।**
**ಮೈತ್ರೇಯ ಕೇಶವಃ ಸೂರ್ಯಸ್ತತ್ಪ್ರಭಾ ಕಮಲಾಲಯಾ॥ 23**

**ವಿಷ್ಣುಃ ಪಿತೃಗಣಃ ಪದ್ಮಾ ಸ್ವಧಾ ಶಾಶ್ವತಪುಷ್ಟಿದಾ।**
**ದ್ಯೌಃ ಶ್ರೀಃ ಸರ್ವಾತ್ಮಕೋ ವಿಷ್ಣುರವಕಾಶೋಽತಿವಿಸ್ತರಃ॥ 24**

**ಶಶಾಂಕಃ ಶ್ರೀಧರಃ ಕಾಂತಿಃ ಶ್ರೀಸ್ತಥೈವಾನಪಾಯಿನೀ।**
**ಧೃತಿರ್ಲಕ್ಷ್ಮೀರ್ಜಗಚ್ಚೇಷ್ಟಾ ವಾಯುಃ ಸರ್ವತ್ರಗೋ ಹರಿಃ॥ 25**

**ಜಲಧಿರ್ದ್ವಿಜ ಗೋವಿಂದಸ್ತದ್ವೇಲಾ ಶ್ರೀರ್ಮಹಾಮುನೇ।**
**ಲಕ್ಷ್ಮೀಸ್ವರೂಪಮಿಂದ್ರಾಣೀ ದೇವೇಂದ್ರೋ ಮಧುಸೂದನಃ॥ 26**

---

ಪುರೋಡಾಶ, ಇವಳು ಆಜ್ಯಾಹುತಿ (19-20). ಹರಿಯು (ಯಜ್ಞದಲ್ಲಿ) ಯಜಮಾನಶಾಲೆಯಾದರೆ, ಇವಳು ಯಜಮಾನಪತ್ನೀಶಾಲೆಯಾಗಿದ್ದಾಳೆ. ಹರಿಯು ಯೂಪವಾದರೆ, ಲಕ್ಷ್ಮಿಯು ಚಿತಿಯಾಗಿದ್ದಾಳೆ. ಅವನು ದರ್ಭೆಯಾದರೆ ಇವಳು ಇಧ್ಮ(ಸೌದೆ) ಯಾಗಿದ್ದಾಳೆ. ಹರಿಯು ಸಾಮ, ಲಕ್ಷ್ಮಿಯು ಉದ್ಗೀತಿ. ವಿಷ್ಣು ಅಗ್ನಿಸ್ವರೂಪ, ಇವಳು ಸ್ವಾಹಾ ಸ್ವರೂಪ (21-22). ಹರಿಯು ಭಗವಾನ್ ಶಂಕರ, ಲಕ್ಷ್ಮಿಯು ಗೌರಿ. ಕೇಶವನು ಸೂರ್ಯ, ಲಕ್ಷ್ಮಿಯು ಸೂರ್ಯಪ್ರಭೆ. ವಿಷ್ಣುವೇ ಪಿತೃಗಣ, ಲಕ್ಷ್ಮಿಯೇ ಶಾಶ್ವತಪುಷ್ಟಿಯನ್ನೀಯುವ ಸ್ವಧಾ. ವಿಷ್ಣು ವಿಶಾಲವಾದ ಆಕಾಶ, ಲಕ್ಷ್ಮಿಯೇ ದ್ಯುಲೋಕ (23-24). ಹರಿಯು ಚಂದ್ರ, ಲಕ್ಷ್ಮಿಯು ಕಾಂತಿ. ಅವನು ಸರ್ವಗಾಮಿಯಾದ ವಾಯು, ಇವಳು ಜಗತ್ತಿನ ಕ್ರಿಯೆ ಮತ್ತು ಧಾರಣ ಶಕ್ತಿ. ಅವನು ಸಮುದ್ರ, ಇವಳು ಸಮುದ್ರತೀರ. ಮಧುಸೂದನನೇ ದೇವೇಂದ್ರ, ಲಕ್ಷ್ಮಿಯೇ ಶಚಿ. ಚಕ್ರಧರನಾದ ಹರಿಯೇ ಯಮ,

**ಯಮಶ್ಚಕ್ರಧರಃ ಸಾಕ್ಷಾದ್ ಧೂಮೋರ್ಣಾ ಕಮಲಾಲಯಾ।**
**ಋದ್ಧಿಃ ಶ್ರೀಧರೋ ದೇವಃ ಸ್ವಯಮೇವ ಧನೇಶ್ವರಃ॥ 27**

**ಗೌರೀ ಲಕ್ಷ್ಮೀರ್ಮಹಾಭಾಗಾ ಕೇಶವೋ ವರುಣಃ ಸ್ವಯಮ್।**
**ಶ್ರೀರ್ದೇವಸೇನಾ ವಿಪ್ರೇಂದ್ರ ದೇವಸೇನಾಪತಿರ್ಹರಿಃ॥ 28**

**ಅವಷ್ಟಂಭೋ ಗದಾಪಾಣಿಃ ಶಕ್ತಿರ್ಲಕ್ಷ್ಮೀರ್ದ್ವಿಜೋತ್ತಮ।**
**ಕಾಷ್ಠಾ ಲಕ್ಷ್ಮೀರ್ನಿಮೇಷೋಽಸೌ ಮುಹೂರ್ತೋಽಸೌ**
**ಕಲಾ ತ್ವಿಯಮ್॥ 29**

**ಜ್ಯೋತ್ಸ್ನಾ ಲಕ್ಷ್ಮೀಃ ಪ್ರದೀಪೋಽಸೌ ಸರ್ವಃ**
**ಸರ್ವೇಶ್ವರೋ ಹರಿಃ।**
**ಲತಾಭೂತಾ ಜಗನ್ಮಾತಾ ಶ್ರೀವಿಷ್ಣುರ್ದ್ರುಮಸಂಜ್ಞಿತಃ॥ 30**

**ವಿಭಾವರೀ ಶ್ರೀರ್ದಿವಸೋ ದೇವಶ್ಚಕ್ರಗದಾಧರಃ।**
**ವರಪ್ರದೋ ವರೋ ವಿಷ್ಣುರ್ವಧೂಃ ಪದ್ಮವನಾಲಯಾ॥ 31**

**ನದಸ್ವರೂಪೀ ಭಗವಾನ್ ಶ್ರೀರ್ನದೀರೂಪಸಂಸ್ಥಿತಾ।**
**ಧ್ವಜಶ್ಚ ಪುಂಡರೀಕಾಕ್ಷಃ ಪತಾಕಾ ಕಮಲಾಲಯಾ॥ 32**

---

ಲಕ್ಷ್ಮಿಯು ಯಮಪತ್ನಿಯಾದ ಧೂಮೋರ್ಣಾ. ಶ್ರೀಧರನೇ ಕುಬೇರ, ಲಕ್ಷ್ಮಿಯೇ ಸಂಪತ್ತು (25-27). ಕೇಶವನೇ ವರುಣ, ಲಕ್ಷ್ಮಿಯು (ವರುಣ ಪತ್ನಿಯಾದ) ಗೌರಿ. ಲಕ್ಷ್ಮಿಯು ದೇವಸೇನೆ, ಹರಿಯು ದೇವಸೇನಾಪತಿ ಯಾದ ಸ್ಕಂದ. ಗದಾಧರನು ಆಶ್ರಯ, ಇವಳು ಶಕ್ತಿ. ಅವಳು ಕಾಷ್ಠಾ (ಕಾಲ ವಿಭಾಗ), ಇವನು ನಿಮೇಷ. ಅವನು ಮುಹೂರ್ತ, ಇವಳು ಕಲಾ (ಕಾಲ ವಿಭಾಗ). ಲಕ್ಷ್ಮಿಯು ಬೆಳಕು, ಸರ್ವೇಶ್ವರನಾದ ಹರಿಯು ದೀಪ. ಜಗನ್ಮಾತೆಯಾದ ಲಕ್ಷ್ಮಿ ಲತೆ, ವಿಷ್ಣುವು ವೃಕ್ಷ (28-30). ಲಕ್ಷ್ಮಿಯೇ ರಾತ್ರಿ, ಗದಾಧರನು ಹಗಲು. ವರದನಾದ ಹರಿಯೇ ವರ, ಲಕ್ಷ್ಮಿಯೇ ವಧೂ. ಭಗವಂತನು ನದ, ಇವಳು ನದಿ. ಹರಿಯು ಧ್ವಜ, ಲಕ್ಷ್ಮಿಯು ಪತಾಕೆ. ಲಕ್ಷ್ಮಿಯೇ ತೃಷ್ಣೆ, ನಾರಾಯಣನೇ ಲೋಭ. ಲಕ್ಷ್ಮಿಯೇ ರತಿ,

**ತೃಷ್ಣಾ ಲಕ್ಷ್ಮೀರ್ಜಗನ್ನಾಥೋ ಲೋಭೋ ನಾರಾಯಣಃ ಪರಃ।**
**ರತೀ ರಾಗಶ್ಚ ಮೈತ್ರೇಯ ಲಕ್ಷ್ಮೀರ್ಗೋವಿಂದ ಏವ ಚ॥** 33

**ಕಿಂ ಚಾತಿಬಹುನೋಕ್ತೇನ ಸಂಕ್ಷೇಪೇಣೇದಮುಚ್ಯತೇ॥** 34

**ದೇವತಿರ್ಯಙ್ಮನುಷ್ಯಾದೌ ಪುನ್ನಾಮಾ ಭಗವಾನ್ ಹರಿಃ।**
**ಸ್ತ್ರೀನಾಮ್ನೀ ಶ್ರೀಶ್ಚ ವಿಜ್ಞೇಯಾ ನಾನಯೋರ್ವಿದ್ಯತೇ ಪರಮ್॥** 35

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಅಷ್ಟಮೋಽಧ್ಯಾಯಃ

---

ಗೋವಿಂದನೇ ಅನುರಾಗ (31-33). ಮೈತ್ರೇಯ, ಬಹಳ ಹೇಳುವುದರಿಂದೇನು? ಸಂಕ್ಷೇಪವಾಗಿ ಇಷ್ಟು ಹೇಳುತ್ತೇನೆ. ಏನೆಂದರೆ, ದೇವತಿರ್ಯಗ್‌ಜಂತು, ಮನುಷ್ಯ—ಮೊದಲಾದವರಲ್ಲಿ ಯಾವಯಾವದು ಪುರುಷನೆಂಬ ಅರ್ಥ ಉಳ್ಳದ್ದೋ ಅದೆಲ್ಲವೂ ಭಗವಾನ್ ವಿಷ್ಣುವೇ ಸರಿ. ಯಾವುದು ಸ್ತ್ರೀ ಎಂಬ ಅರ್ಥ ಉಳ್ಳದ್ದೋ ಅದೆಲ್ಲವೂ ಲಕ್ಷ್ಮೀದೇವಿಯೇ. ಒಟ್ಟಿನಲ್ಲಿ ಇವರಿಗಿಂತ ಬೇರೆಯಾದ ಯಾವ ವಸ್ತುವೂ ಇಲ್ಲ (34-35).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಎಂಟನೆಯ ಅಧ್ಯಾಯ ಮುಗಿಯಿತು.



## ನವಮೋಽಧ್ಯಾಯಃ

*ಶ್ರೀ ಪರಾಶರ ಉವಾಚ:*

**ಇದಂ ಚ ಶೃಣು ಮೈತ್ರೇಯ ಯತ್ಪೃಷ್ಟೋಽಹಮಿಹ ತ್ವಯಾ।**
**ಶ್ರೀಸಂಬಂಧಂ ಮಯಾಪ್ಯೇತತ್ ಶ್ರುತಮಾಸೀನ್ಮರೀಚಿತಃ॥ 1**

**ದುರ್ವಾಸಾಃ ಶಂಕರಸ್ಯಾಂಶಶ್ಚಚಾರ ಪೃಥಿವೀಮಿಮಾಮ್।**
**ಸ ದದರ್ಶ ಸ್ರಜಂ ದಿವ್ಯಾಮೃಷಿರ್ವಿದ್ಯಾಧರೀಕರೇ॥ 2**

**ಸಂತಾನಕಾನಾಮಖಿಲಂ ಯಸ್ಯಾ ಗಂಧೇನ ವಾಸಿತಮ್।**
**ಅತಿಸೇವ್ಯಮಭೂದ್ ಬ್ರಹ್ಮನ್ ತದ್ವನಂ ವನಚಾರಿಣಾಮ್॥ 3**

**ಉನ್ಮತ್ತವ್ರತಧೃಗ್ವಿಪ್ರಸ್ತಾಂ ದೃಷ್ಟ್ವಾ ಶೋಭನಾಂ ಸ್ರಜಮ್।**
**ತಾಂ ಯಯಾಚೇ ವರಾರೋಹಾಂ ವಿದ್ಯಾಧರವಧೂಂ ತತಃ॥ 4**

---

## ಅಧ್ಯಾಯ 9

ದುರ್ವಾಸರಿಂದ ಇಂದ್ರನಿಗೆ ಶಾಪ. ಬ್ರಹ್ಮನ ಸ್ತುತಿಯಿಂದ ಭಗವಂತನು ಪ್ರಸನ್ನನಾಗುವುದು. ದೇವಾಸುರರಿಂದ ಅಮೃತಮಂಥನ.

ಪರಾಶರರು ಹೇಳಿದರು: ಮೈತ್ರೇಯ, ಈಗ ನೀನು ಲಕ್ಷ್ಮೀದೇವಿಯ ಸಂಬಂಧವಾಗಿ ಪ್ರಶ್ನೆ ಮಾಡಿದೆಯಲ್ಲ , ಆ ಸಂಗತಿಯನ್ನು ನಾನು ಮರೀಚಿ ಮುನಿಗಳಿಂದ ಕೇಳಿದ್ದುಂಟು. ಅದನ್ನು ಹೇಳುತ್ತೇನೆ, ಕೇಳು (1). ಶಂಕರನ ಅಂಶವಾದ ದುರ್ವಾಸ ಮುನಿಗಳು ಒಮ್ಮೆ ಭೂಸಂಚಾರ ಮಾಡುತ್ತಿರುವಾಗ, ಒಬ್ಬ ವಿದ್ಯಾಧರಿಯ ಕೈಯಲ್ಲಿ ಒಂದು ದಿವ್ಯವಾದ ಪುಷ್ಪಮಾಲೆಯನ್ನು ಕಂಡರು. ಅದು ಸಂತಾನಕ ಪುಷ್ಪಗಳಿಂದ ನಿರ್ಮಿತವಾದದ್ದು. ಅದರ ಸುಗಂಧವು ವನವನ್ನೆಲ್ಲ ವ್ಯಾಪಿಸಿರಲಾಗಿ ಅರಣ್ಯವಾಸಿಗಳು ಆನಂದದಿಂದ ಸುಗಂಧವನ್ನು ಆಘ್ರಾಣಿಸುತ್ತಿದ್ದರು (2-3). ಉನ್ಮತ್ತ ವ್ರತದಲ್ಲಿದ್ದ ದುರ್ವಾಸರು ಆ ಮಾಲೆಯನ್ನು ಕಂಡು ಅದನ್ನು ಕೊಡಬೇಕೆಂದು

**ಯಾಚಿತಾ ತೇನ ತನ್ವಂಗೀ ಮಾಲಾಂ ವಿದ್ಯಾಧರಾಂಗನಾ।**
**ದದೌ ತಸ್ಮೈ ವಿಶಾಲಾಕ್ಷೀ ಸಾದರಂ ಪ್ರಣಿಪತ್ಯ ತಮ್॥ 5**

**ತಾಮಾದಾಯಾತ್ಮನೋ ಮೂರ್ಧ್ನಿ ಸ್ರಜಮುನ್ಮತ್ತರೂಪಧೃಕ್।**
**ಕೃತ್ವಾ ಸ ವಿಪ್ರೋ ಮೈತ್ರೇಯ ಪರಿಬಭ್ರಾಮ ಮೇದಿನೀಮ್॥ 6**

**ಸ ದದರ್ಶ ತಮಾಯಾಂತಮುನ್ಮತ್ತೈರಾವತೇ ಸ್ಥಿತಮ್।**
**ತ್ರೈಲೋಕ್ಯಾಧಿಪತಿಂ ದೇವಂ ಸಹ ದೇವೈಃ ಶಚೀಪತಿಮ್॥ 7**

**ತಾಮಾತ್ಮನಃ ಸ ಶಿರಸಃ ಸ್ರಜಮುನ್ಮತ್ತಷಟ್ಪದಾಮ್।**
**ಆದಾಯಾಮರರಾಜಾಯ ಚಿಕ್ಷೇಪೋನ್ಮತ್ತವನ್ಮುನಿಃ॥ 8**

**ಗೃಹೀತ್ವಾಮರರಾಜೇನ ಸ್ರಗೈರಾವತಮೂರ್ಧನಿ।**
**ನ್ಯಸ್ತಾ ರರಾಜ ಕೈಲಾಸಶಿಖರೇ ಜಾಹ್ನವೀ ಯಥಾ॥ 9**

**ಮದಾಂಧಕಾರಿತಾಕ್ಷೋಽಸೌ ಗಂಧಾಕೃಷ್ಟೇನ ವಾರಣಃ।**
**ಕರೇಣಾಘ್ರಾಯ ಚಿಕ್ಷೇಪ ತಾಂ ಸ್ರಜಂ ಧರಣೀತಲೇ॥ 10**

---

ವಿದ್ಯಾಧರಿಯನ್ನು ಬೇಡಿದರು. ಆಗ ಸುಂದರಿಯೂ ವಿಶಾಲಾಕ್ಷಿಯೂ ಆದ ವಿದ್ಯಾಧರಿಯು ಆದರದಿಂದ ಮುನಿಗಳಿಗೆ ವಂದಿಸಿ ಅದನ್ನು ಕೊಟ್ಟಳು (4-5). ಉನ್ಮತ್ತ ವೇಷದಲ್ಲಿದ್ದ ದುರ್ವಾಸರು ಆ ಮಾಲೆಯನ್ನು ಸ್ವೀಕರಿಸಿ ತಮ್ಮ ತಲೆಯ ಮೇಲಿಟ್ಟುಕೊಂಡು, ಮೈತ್ರೇಯ, ಭೂವಲಯದಲ್ಲಿ ಸುತ್ತಾಡುತ್ತಿದ್ದರು. ಹೀಗಿರುವಾಗ ಶಚೀಪತಿಯೂ ತ್ರಿಲೋಕೇಶ್ವರನೂ ಆದ ಇಂದ್ರನು ಮದಿಸಿದ ಐರಾವತದ ಮೇಲೆ ಕುಳಿತು ದೇವತೆಗಳೊಡನೆ ಬರುತ್ತಿರುವುದನ್ನು ಅವರು ನೋಡಿದರು (6-7). ಆಗ ದುರ್ವಾಸರು, ಪರಿಮಳಕ್ಕಾಗಿ ಮುತ್ತಿ ಮದವೇರಿದ ದುಂಬಿಗಳಿಂದ ಆವೃತವಾದ ಆ ಹೂಮಾಲೆಯನ್ನು ತಮ್ಮ ಶಿರಸ್ಸಿನಿಂದ ತೆಗೆದು, ಹುಚ್ಚನಂತೆ, ದೇವೇಂದ್ರನ ಕಡೆಗೆ ಎಸೆದರು (8). ದೇವೇಂದ್ರನು ಅದನ್ನು ಹಿಡಿದುಕೊಂಡು ಐರಾವತದ ತಲೆಯ ಮೇಲಿಡಲಾಗಿ, ಆ ಮಾಲೆಯು ಕೈಲಾಸ ಶಿಖರದ ಮೇಲಿರುವ ಗಂಗಾನದಿಯಂತೆ ಶೋಭಿಸಿತು. ಮದೋನ್ಮತ್ತವಾಗಿದ್ದ ಆ ಗಜವು ಪರಿಮಳದಿಂದ ಆಕರ್ಷಿತವಾಗಿ ಹೂಮಾಲೆಯನ್ನು ಸೊಂಡಲಿ

ತತಶ್ಚುಕ್ರೋಧ ಭಗವಾನ್ ದುರ್ವಾಸಾ ಮುನಿಸತ್ತಮಃ।
ಮೈತ್ರೇಯ ದೇವರಾಜಂ ತಂ ಕ್ರುದ್ಧಶ್ಚೈತದುವಾಚ ಹ॥ 11

*ದುರ್ವಾಸಾ ಉವಾಚ:*

ಐಶ್ವರ್ಯಮದದುಷ್ಟಾತ್ಮನ್ನತಿಸ್ತಬ್ಧೋಽಸಿ ವಾಸವ।
ಶ್ರಿಯೋ ಧಾಮ ಸ್ರಜಂ ಯಸ್ತ್ವಂ ಮದ್ದತ್ತಾಂ ನಾಭಿನಂದಸಿ॥ 12

ಪ್ರಸಾದ ಇತಿ ನೋಕ್ತಂ ತೇ ಪ್ರಣಿಪಾತಪುರಃ ಸರಮ್।
ಹರ್ಷೋತ್ಫುಲ್ಲಕಪೋಲೇನ ನ ಚಾಪಿ ಶಿರಸಾ ಧೃತಾ॥ 13

ಮಯಾ ದತ್ತಾಮಿಮಾಂ ಮಾಲಾಂ ಯಸ್ಮಾನ್ನ ಬಹು ಮನ್ಯಸೇ।
ತ್ರೈಲೋಕ್ಯಶ್ರೀರತೋ ಮೂಢ ವಿನಾಶಮುಪಯಾಸ್ಯತಿ॥ 14

ಮಾಂ ಮನ್ಯಸೇ ತ್ವಂ ಸದೃಶಂ ನೂನಂ ಶಕ್ರೇತರದ್ವಿಜೈಃ।
ಅತೋಽವಮಾನಮಸ್ಮಾಸು ಮಾನಿನಾ ಭವತಾ ಕೃತಮ್॥ 15

---

ನಿಂದೆಳೆದು ಮೂಸಿ ನೋಡಿ ನೆಲದ ಮೇಲೆ ಎಸೆಯಿತು (9-10). ಅದನ್ನು ನೋಡಿ ಭಗವಾನ್ ದುರ್ವಾಸಮುನಿಗಳಿಗೆ ಅತ್ಯಂತ ಕ್ರೋಧ ಉಂಟಾಯಿತು. ಅವರು ದೇವೇಂದ್ರನನ್ನು ನೋಡಿ "ಎಲೈ ವಾಸವ, ಐಶ್ವರ್ಯ ಮದದಿಂದ ನಿನ್ನ ಚಿತ್ತವು ದೂಷಿತವಾಗಿದೆ. ದುರಹಂಕಾರಿಯಾಗಿದ್ದೀಯೆ. ಲಕ್ಷ್ಮಿಗೆ ವಾಸಸ್ಥಾನವಾದದ್ದು ಈ ಪುಷ್ಪಮಾಲೆ. ನಾನು ಕೊಟ್ಟದ್ದು. ಇದನ್ನು ಅನಾದರದಿಂದ ನೋಡುತ್ತಿದ್ದೀಯೆ (11-12). ಆನಂದತುಂದಿಲನಾಗಿ ನಮಸ್ಕರಿಸಿ, ಕೃಪೆಯಿಂದ ಕೊಟ್ಟ 'ಪ್ರಸಾದ' ಎಂದೂ ನೀನು ಹೇಳಲಿಲ್ಲ, ಅದನ್ನು ಶಿರಸ್ಸಿನಲ್ಲಿಯೂ ಧರಿಸಲಿಲ್ಲ. ನಾನು ಕೊಟ್ಟ ಈ ಮಾಲೆಯನ್ನು ನೀನು ಅಭಿನಂದಿಸಲಿಲ್ಲವಾದ್ದರಿಂದ, ಎಲೈ ಮೂಢ, ಈ ನಿನ್ನ ತ್ರಿಲೋಕಾಧಿಪತ್ಯದ ಸಂಪತ್ತು ನಾಶವಾಗುವುದು! (13-14). ಎಲೈ ಇಂದ್ರ, ಇತರ ವಿಪ್ರರಂತೆ ಈತನೂ ಒಬ್ಬ ಸಾಮಾನ್ಯನೆಂದು ನನ್ನನ್ನು ಭಾವಿಸಿದ್ದೀಯೆ! ಆದ್ದರಿಂದ ಅಹಂಕಾರಿಯಾದ ನೀನು ನನಗೆ ಅವಮಾನವನ್ನು ಮಾಡಿದೆ! ನಾನಿತ್ತ ಹೂಮಾಲೆಯನ್ನು ನೆಲದ ಮೇಲೆ ಎಸೆಯುವಂತೆ

**ಮದ್ದತ್ತಾ ಭವತಾ ಯಸ್ಮಾತ್ ಕ್ಷಿಪ್ತಾ ಮಾಲಾ ಮಹೀತಲೇ।**
**ತಸ್ಮಾತ್ ಪ್ರಣಷ್ಟಲಕ್ಷ್ಮೀಕಂ ತ್ರೈಲೋಕ್ಯಂ ತೇ ಭವಿಷ್ಯತಿ॥** 16

**ಯಸ್ಯ ಸಂಜಾತಕೋಪಸ್ಯ ಭಯಮೇತಿ ಚರಾಚರಮ್।**
**ತಂ ತ್ವಂ ಮಾಮತಿಗರ್ವೇಣ ದೇವರಾಜಾವಮನ್ಯಸೇ॥** 17

*ಶ್ರೀ ಪರಾಶರ ಉವಾಚ:*

**ಮಹೇಂದ್ರೋ ವಾರಣಸ್ಕಂಧಾದವತೀರ್ಯ ತ್ವರಾನ್ವಿತಃ।**
**ಪ್ರಸಾದಯಾಮಾಸ ಮುನಿಂ ದುರ್ವಾಸಸಮಕಲ್ಮಷಮ್॥** 18

**ಪ್ರಸಾದ್ಯಮಾನಃ ಸ ತದಾ ಪ್ರಣಿಪಾತಪುರಃಸರಮ್।**
**ಇತ್ಯುವಾಚ ಸಹಸ್ರಾಕ್ಷಂ ದುರ್ವಾಸಾ ಮುನಿಸತ್ತಮಃ॥** 19

*ದುರ್ವಾಸಾ ಉವಾಚ:*

**ನಾಹಂ ಕೃಪಾಲುಹೃದಯೋ ನ ಚ ಮಾಂ ಭಜತೇ ಕ್ಷಮಾ।**
**ಅನ್ಯೇ ತೇ ಮುನಯಃ ಶಕ್ರ ದುರ್ವಾಸಸಮವೇಹಿ ಮಾಮ್॥** 20

---

ಮಾಡಿದೆಯಲ್ಲ, ಆದ್ದರಿಂದ ನಿನ್ನ ಈ ತ್ರಿಲೋಕದ ಸಂಪತ್ತು ನಾಶವಾಗುವುದು! ಯಾವಾತನಿಗೆ ಕೋಪ ಬಂದರೆ ಈ ಚರಾಚರ ಜಗತ್ತೇ ಭಯದಿಂದ ನಡುಗುವುದೋ ಅಂತಹ ನನ್ನನ್ನು ಅತಿ ಗರ್ವದಿಂದ ದೇವರಾಜ, ಅವಮಾನಗೊಳಿಸಿದ್ದೀಯೆ" ಎಂದರು (15-17). ಒಡನೆಯೇ ದೇವೇಂದ್ರನು ಐರಾವತದ ಹೆಗಲಿನಿಂದ ಕೆಳಗಿಳಿದು ಬಂದು ಶುದ್ಧಾತ್ಮರಾದ ದುರ್ವಾಸಮುನಿಗಳನ್ನು ಅನುನಯಗಳಿಂದ ಸಾಂತ್ವನಗೊಳಿಸಲು ಪ್ರಯತ್ನಿಸಿದನು. ಅವನು ಮುನಿಗಳಿಗೆ ಅಡ್ಡಬಿದ್ದು ಕ್ಷಮಿಸಬೇಕೆಂದು ಬೇಡಿಕೊಂಡಾಗ ದುರ್ವಾಸರು ಹೀಗೆಂದರು (18-19): "ಇಂದ್ರ, ನಾನು ಕೃಪಾಳುವಲ್ಲ. ಕ್ಷಮಿಸುವ ಗುಣ ನನ್ನ ಬಳಿ ಸುಳಿಯುವುದಿಲ್ಲ! ಕ್ಷಮಿಸುವ ಮುನಿಗಳೇ ಬೇರೆ. ನಾನು ದುರ್ವಾಸನೆಂದು ತಿಳಿ! ಗೌತಮಾದಿ ಮುನಿಗಳು ನಿನಗೆ ವ್ಯರ್ಥವಾಗಿ ಗರ್ವವನ್ನುಂಟುಮಾಡಿದ್ದಾರೆ. ಕ್ಷಮಿಸದೆ ಇರುವುದೇ

**ಗೌತಮಾದಿಭಿರನ್ಯೈಸ್ತ್ವಂ ಗರ್ವಮಾರೋಪಿತೋ ಮುಧಾ।**
**ಅಕ್ಷಾಂತಿಸಾರಸರ್ವಸ್ವಂ ದುರ್ವಾಸಸಮವೇಹಿ ಮಾಮ್॥ 21**

**ವಸಿಷ್ಠಾದ್ಯೈರ್ದಯಾಸಾರೈಸ್ತೋತ್ರಂ ಕುರ್ವದ್ಭಿರುಚ್ಚಕೈಃ।**
**ಗರ್ವಂ ಗತೋಽಸಿ ಯೇನೈವಂ ಮಾಮಪ್ಯದ್ಯಾವಮನ್ಯಸೇ॥ 22**

**ಜ್ವಲಜ್ಜಟಾಕಲಾಪಸ್ಯ ಭೃಕುಟೀಕುಟಿಲಂ ಮುಖಮ್।**
**ನಿರೀಕ್ಷ್ಯ ಕಸ್ತ್ರಿಭುವನೇ ಮಮ ಯೋ ನ ಗತೋ ಭಯಮ್॥ 23**

**ನಾಹಂ ಕ್ಷಮಿಷ್ಯೇ ಬಹುನಾ ಕಿಮುಕ್ತೇನ ಶತಕ್ರತೋ।**
**ವಿಡಂಬನಾಮಿಮಾಂ ಭೂಯಃ ಕರೋಷ್ಯನುನಯಾತ್ಮಿಕಾಮ್॥ 24**

*ಶ್ರೀ ಪರಾಶರ ಉವಾಚ:*

**ಇತ್ಯುಕ್ತ್ವಾ ಪ್ರಯಯೌ ವಿಪ್ರೋ ದೇವರಾಜೋಽಪಿ ತಂ ಪುನಃ।**
**ಆರುಹ್ಯೈರಾವತಂ ಬ್ರಹ್ಮನ್ ಪ್ರಯಯಾವಮರಾವತೀಮ್॥ 25**

**ತತಃ ಪ್ರಭೃತಿ ನಿಃಶ್ರೀಕಂ ಸಶಕ್ರಂ ಭುವನತ್ರಯಮ್।**
**ಮೈತ್ರೇಯಾಸೀದಪಧ್ವಸ್ತಂ ಸಂಕ್ಷೀಣೌಷಧಿವೀರುಧಮ್॥ 26**

---

ದುರ್ವಾಸನ ಸಾರಸರ್ವಸ್ವ ಎಂದು ತಿಳಿದುಕೊ! (20-21). ದಯಾಳುಗಳಾದ ವಸಿಷ್ಠಾದಿ ಮುನಿಗಳು ಗಟ್ಟಿಯಾಗಿ ಹೊಗಳಿ ನಿನ್ನನ್ನು ಗರ್ವದ ಅಟ್ಟಕ್ಕೆ ಏರಿಸಿದ್ದಾರೆ. ಆದ್ದರಿಂದಲೇ ನೀನು ನನ್ನನ್ನು ಹೀಗೆ ಅವಮಾನಗೊಳಿಸಿದೆ (22). ಬೆಂಕಿಯಂತೆ ಬೆಳಗುವ ನನ್ನ ಜಟಾಕಲಾಪವನ್ನೂ ಹುಬ್ಬುಗಂಟಿಕ್ಕಿದ ಮುಖವನ್ನೂ ನೋಡಿದಾಗ, ಹೆದರದಿರತಕ್ಕವನು ಮೂರು ಲೋಕಗಳಲ್ಲಿ ಯಾವನಿದ್ದಾನೆ? ಇಂದ್ರ, ನಾನು ಕ್ಷಮಿಸುವುದಿಲ್ಲ. ಹೆಚ್ಚು ಮಾತಾಡಿ ಏನು ಪ್ರಯೋಜನ? ಸಂತೈಸಲು ಯತ್ನಿಸುವ ನಿನ್ನ ಮಾತು, ಕ್ರಿಯೆಗಳೆಲ್ಲವೂ ಹಾಸ್ಯಾಸ್ಪದ!" ಎಂದು ಹೇಳಿ ದುರ್ವಾಸರು ಹೊರಟು ಹೋದರು. ಇತ್ತ ಇಂದ್ರನಾದರೋ ಮತ್ತೆ ಐರಾವತವನ್ನೇರಿ ಅಮರಾವತಿಗೆ ಹಿಂದಿರುಗಿದನು (23-25). ಅಲ್ಲಿಂದ ಮುಂದೆ, ಮೈತ್ರೇಯ, ಇಂದ್ರಸಹಿತವಾಗಿ ಮೂರು ಲೋಕಗಳೂ ಶೋಭಾಹೀನ

**ನ ಯಜ್ಞಾಃ ಸಮವರ್ತಂತ ನ ತಪಸ್ಯಂತಿ ತಾಪಸಾಃ।**
**ನ ಚ ದಾನಾದಿಧರ್ಮೇಷು ಮನಶ್ಚಕ್ರೇ ತದಾ ಜನಃ॥ 27**

**ನಿಃಸತ್ತ್ವಾಃ ಸಕಲಾ ಲೋಕಾ ಲೋಭಾದ್ಯುಪಹತೇಂದ್ರಿಯಾಃ।**
**ಸ್ವಲ್ಪೇಽಪಿ ಹಿ ಬಭೂವುಸ್ತೇ ಸಾಭಿಲಾಷಾ ದ್ವಿಜೋತ್ತಮ॥ 28**

**ಯತಃ ಸತ್ತ್ವಂ ತತೋ ಲಕ್ಷ್ಮೀಃ ಸತ್ತ್ವಂ ಭೂತ್ಯನುಸಾರಿ ಚ।**
**ನಿಃಶ್ರೀಕಾಣಾಂ ಕುತಃ ಸತ್ತ್ವಂ ವಿನಾ ತೇನ ಗುಣಾಃ ಕುತಃ॥ 29**

**ಬಲಶೌರ್ಯಾದ್ಯಭಾವಶ್ಚ ಪುರುಷಾಣಾಂ ಗುಣೈರ್ವಿನಾ।**
**ಲಂಘನೀಯಃ ಸಮಸ್ತಸ್ಯ ಬಲಶೌರ್ಯವಿವರ್ಜಿತಃ॥ 30**

**ಭವತ್ಯಪಧ್ವಸ್ತಮತಿರ್ಲಂಘಿತಃ ಪ್ರಥಿತಃ ಪುಮಾನ್॥ 31**

**ಏವಮತ್ಯಂತನಿಃಶ್ರೀಕೇ ತ್ರೈಲೋಕ್ಯೇ ಸತ್ತ್ವವರ್ಜಿತೇ।**
**ದೇವಾನ್ ಪ್ರತಿ ಬಲೋದ್ಯೋಗಂ ಚಕ್ರುರ್ದೈತೇಯದಾನವಾಃ॥ 32**

---

ವಾದವು. ಗಿಡಬಳ್ಳಿಗಳು ಫಲಪುಷ್ಪರಹಿತವಾಗಿ ಒಣಗಿದವು. ಯಜ್ಞಗಳು ನಡೆಯಲಿಲ್ಲ. ತಪಸ್ವಿಗಳು ತಪಸ್ಸುಮಾಡಲಿಲ್ಲ. ಜನರಿಗೆ ದಾನಾದಿ ಧರ್ಮಕಾರ್ಯಗಳಲ್ಲಿ ಮನಸ್ಸಾಗಲಿಲ್ಲ (26-27). ಸಕಲ ಪ್ರಜೆಗಳೂ ನಿಃಸತ್ತ್ವರಾದರು. ಲೋಭಾದಿಗಳಿಂದ ಇಂದ್ರಿಯಗಳು ವಿಕ್ಷಿಪ್ತವಾದವು. ತುಚ್ಛವಸ್ತುವಿನಲ್ಲಿಯೂ ಜನರಿಗೆ ಅಭಿಲಾಷೆ ಹೆಚ್ಚಿತು. ಸತ್ತ್ವವಿದ್ದರೆ ಸಮೃದ್ಧಿ; ಸತ್ತ್ವವು ಸಮೃದ್ಧಿಯ ಜೊತೆಗಿರುತ್ತದೆ. ಸಂಪದ್ರಹಿತರಿಗೆ ಸತ್ತ್ವವೆಲ್ಲಿಂದ ಬರಬೇಕು? ಸತ್ತ್ವೋತ್ಸಾಹಗಳಿಲ್ಲದೆ ಗುಣಗಳೆಲ್ಲಿಂದ ಬಂದಾವು? (28-29). ಗುಣಗಳಿಲ್ಲದೆ ಬಲಶೌರ್ಯಾದಿಗಳು ಬರುವುದಿಲ್ಲ. ಬಲಶೌರ್ಯಾದಿಗಳಿಲ್ಲದ ಪ್ರತಿಯೊಬ್ಬನೂ ಅವಮಾನಪಾತ್ರನಾಗುತ್ತಾನೆ. ಎಂತಹ ಪ್ರತಿಷ್ಠಿತನಾದರೂ ಅವಮಾನಕ್ಕೊಳಗಾದರೆ ಬುದ್ಧಿವಿಕಲನಾಗುತ್ತಾನೆ (30-31). ಹೀಗೆ ಸತ್ತ್ವಹೀನವಾದ ಲೋಕತ್ರಯವೂ ಸಂಪದ್ರಹಿತವಾಗಿ ಶೋಭಾಹೀನವಾಗಲು, ದೈತ್ಯದಾನವರು ದೇವತೆಗಳ ಮೇಲೆ ಆಕ್ರಮಣಮಾಡಲು ಸಿದ್ಧತೆ ಮಾಡಿದರು. ದೈತ್ಯರೂ ಸಹ ಸತ್ತ್ವ

**ಲೋಭಾಭಿಭೂತಾ ನಿಃಶ್ರೀಕಾ ದೈತ್ಯಾಃ ಸತ್ತ್ವವಿವರ್ಜಿತಾಃ।**
**ಶ್ರಿಯಾ ವಿಹೀನೈರ್ನಿಃಸತ್ತ್ವೈರ್ದೇವೈಶ್ಚಕ್ರುಸ್ತತೋ ರಣಮ್॥** 33

**ವಿಜಿತಾಸ್ತ್ರಿದಶಾ ದೈತ್ಯೈರಿಂದ್ರಾದ್ಯಾಃ ಶರಣಂ ಯಯುಃ।**
**ಪಿತಾಮಹಂ ಮಹಾಭಾಗಂ ಹುತಾಶನಪುರೋಗಮಾಃ॥** 34

**ಯಥಾವತ್ಕಥಿತೋ ದೇವೈರ್ಬ್ರಹ್ಮಾ ಪ್ರಾಹ ತತಃ ಸುರಾನ್।**
**ಪರಾವರೇಶಂ ಶರಣಂ ವ್ರಜಧ್ವಮಸುರಾರ್ದನಮ್॥** 35

**ಉತ್ಪತ್ತಿಸ್ಥಿತಿನಾಶಾನಾಮಹೇತುಂ ಹೇತುಮೀಶ್ವರಮ್।**
**ಪ್ರಜಾಪತಿಪತಿಂ ವಿಷ್ಣುಮನಂತಮಪರಾಜಿತಮ್॥** 36

**ಪ್ರಧಾನಪುಂಸೋರಜಯೋಃ ಕಾರಣಂ ಕಾರ್ಯಭೂತಯೋಃ।**
**ಪ್ರಣತಾರ್ತ್ತಿಹರಂ ವಿಷ್ಣುಂ ಸ ವಃ ಶ್ರೇಯೋ ವಿಧಾಸ್ಯತಿ॥** 37

---

ಹೀನರಾಗಿ ಶೋಭಾರಹಿತರಾಗಿದ್ದರೂ ಲೋಭಾವಿಷ್ಟರಾದ್ದರಿಂದ, ನಿಃಸತ್ತ್ವರೂ ಶೋಭಾಹೀನರೂ ಆದ ದೇವತೆಗಳೊಡನೆ ಯುದ್ಧಕ್ಕಿಳಿದರು (32-33). ಯುದ್ಧದಲ್ಲಿ ದೈತ್ಯರಿಂದ ಪರಾಜಿತರಾದ ಇಂದ್ರಾದಿ ದೇವತೆಗಳು ಅಗ್ನಿಯನ್ನು ಮುಂದಿಟ್ಟುಕೊಂಡು ಹೋಗಿ ಮಹಾತ್ಮನಾದ ಬ್ರಹ್ಮದೇವನನ್ನು ಶರಣು ಹೊಕ್ಕರು. ದೇವತೆಗಳು ಯಥಾವತ್ತಾಗಿ ನಡೆದ ವೃತ್ತಾಂತವನ್ನು ತಿಳಿಸಲಾಗಿ, ಬ್ರಹ್ಮನು ದೇವತೆಗಳನ್ನು ಕುರಿತು "ದೇವತೆಗಳೇ, ಸರ್ವೇಶ್ವರನೂ ಅಸುರಾರಿಯೂ ಆದ ವಿಷ್ಣುವಿಗೆ ಶರಣಾಗಿರಿ (34-35). ಆತನು ಜಗತ್ತಿನ ಉತ್ಪತ್ತಿಸ್ಥಿತಿನಾಶಗಳಿಗೆ ಸ್ವಯಂ ಕಾರಣರಹಿತನಾದ ಕಾರಣ. ಆ ಈಶ್ವರನು ಪ್ರಜಾಪತಿಗಳಿಗೆ ಪತಿಯೂ ಅನಂತನೂ ಅಜೇಯನೂ ಆಗಿದ್ದಾನೆ. ಜನ್ಮರಹಿತರಾದರೂ ಕಾರ್ಯರೂಪದಿಂದ ಪರಿಣತರಾದ ಪ್ರಕೃತಿಪುರುಷ(ಜೀವ)ರಿಗೆ ಆತನು ಕಾರಣ. ಶರಣಾಗತ ರಕ್ಷಕನಾದ ವಿಷ್ಣುವು ನಿಮಗೆ ಶ್ರೇಯಸ್ಸನ್ನುಂಟುಮಾಡುವನು" ಎಂದನು (36-37). ಲೋಕಪಿತಾಮಹನಾದ ಬ್ರಹ್ಮನು ಸಮಸ್ತ ದೇವತೆಗಳಿಗೂ ಹೀಗೆ ಹೇಳಿ, ಅವರನ್ನು ಕರೆದುಕೊಂಡು ಕ್ಷೀರಸಮುದ್ರದ ಉತ್ತರ ತೀರಕ್ಕೆ

*ಶ್ರೀ ಪರಾಶರ ಉವಾಚ:*

**ಏವಮುಕ್ತ್ವಾ ಸುರಾನ್ ಸರ್ವಾನ್ ಬ್ರಹ್ಮಾ ಲೋಕಪಿತಾಮಹಃ।**
**ಕ್ಷೀರೋದಸ್ಯೋತ್ತರಂ ತೀರಂ ತೈರೇವ ಸಹಿತೋ ಯಯೌ॥ 38**

**ಸ ಗತ್ವಾ ತ್ರಿದಶೈಃ ಸರ್ವೈಃ ಸಮವೇತಃ ಪಿತಾಮಹಃ।**
**ತುಷ್ಟಾವ ವಾಗ್ಭಿರಿಷ್ಟಾಭಿಃ ಪರಾವರಪತಿಂ ಹರಿಮ್॥ 39**

*ಬ್ರಹ್ಮೋವಾಚ:*

**ನಮಾಮಿ ಸರ್ವಂ ಸರ್ವೇಶಮನಂತಮಜಮವ್ಯಯಮ್।**
**ಲೋಕಧಾಮಧರಾಧಾರಮಪ್ರಕಾಶಮಭೇದಿನಮ್॥ 40**

**ನಾರಾಯಣಮಣೀಯಾಂಸಮಶೇಷಾಣಾಮಣೀಯಸಾಮ್।**
**ಸಮಸ್ತಾನಾಂ ಗರಿಷ್ಠಂ ಚ ಭೂರಾದೀನಾಂ ಗರೀಯಸಾಮ್॥ 41**

**ಯತ್ರ ಸರ್ವಂ ಯತಃ ಸರ್ವಮುತ್ಪನ್ನಂ ಮತ್ಪುರಃಸರಮ್।**
**ಸರ್ವಭೂತಶ್ಚ ಯೋ ದೇವಃ ಪರಾಣಾಮಪಿ ಯಃ ಪರಃ॥ 42**

**ಪರಃ ಪರಸ್ಮಾತ್ಪುರುಷಾತ್ ಪರಮಾತ್ಮಸ್ವರೂಪಧೃಕ್।**
**ಯೋಗಿಭಿಶ್ಚಿಂತ್ಯತೇ ಯೋಽಸೌ ಮುಕ್ತಿಹೇತೋರ್ಮುಮುಕ್ಷುಭಿಃ॥**

---

ಹೋದನು. ಅಲ್ಲಿ ಪಿತಾಮಹನು ದೇವತೆಗಳೊಡನೆ ಮಂಗಳ ವಚನಗಳಿಂದ ಸರ್ವೇಶ್ವರನಾದ ಶ್ರೀಹರಿಯನ್ನು ಈ ಪ್ರಕಾರವಾಗಿ ಸ್ತುತಿಸಿದನು (38-39): ಸರ್ವೇಶ್ವರನೂ ಅನಂತನೂ ಅಜನೂ ಅವ್ಯಯನೂ ಲೋಕವಿಶ್ರಾಂತಿಸ್ಥಾನವೂ ಪೃಥಿವಿಗೆ ಆಧಾರನೂ ಅಗೋಚರನೂ ಅಭೇದ್ಯನೂ ಆದ ವಿಶ್ವರೂಪನಿಗೆ ನಮಸ್ಕಾರ ಮಾಡುತ್ತೇನೆ. ಸಮಸ್ತ ಅಣುಗಳಿಗಿಂತ ಅಣುವಾದವನೂ ಭೂಮಿಯೇ ಮೊದಲಾದ ಸಕಲ ದೊಡ್ಡವಸ್ತುಗಳಿಗಿಂತ ದೊಡ್ಡವನೂ ಆದ ನಾರಾಯಣನಿಗೆ ನಮಸ್ಕಾರ ಮಾಡುತ್ತೇನೆ (40-41). ನಾನು ಮೊದಲ್ಗೊಂಡು ಸಮಸ್ತವೂ ಯಾರಲ್ಲಿ ನೆಲೆಸಿದೆಯೋ ಯಾರಿಂದ ಪ್ರಕಟವಾಯಿತೋ ಯಾವ ದೇವನು ಸರ್ವಭೂತಾತ್ಮನೂ ಪರಗಳಿಗಿಂತ ಪರನೂ ಆಗಿರುವನೋ ಆತನು ಪ್ರಸನ್ನನಾಗಲಿ (42). ಪರಪುರುಷನಿಗಿಂತ (ಪ್ರಧಾನಾದಿಗಳಿಗಿಂತ) ಪರನೂ ಪರಮಾತ್ಮಸ್ವರೂಪನೂ ಮುಮುಕ್ಷು

**ಸತ್ತ್ವಾದಯೋ ನ ಸಂತೀಶೇ ಯತ್ರ ಚ ಪ್ರಾಕೃತಾ ಗುಣಾಃ।**
**ಸ ಶುದ್ಧಃ ಸರ್ವಶುದ್ಧೇಭ್ಯಃ ಪುಮಾನಾದ್ಯಃ ಪ್ರಸೀದತು॥ 44**

**ಕಲಾಕಾಷ್ಠಾಮುಹೂರ್ತಾದಿಕಾಲಸೂತ್ರಸ್ಯ ಗೋಚರೇ।**
**ಯಸ್ಯ ಶಕ್ತಿರ್ನ ಶುದ್ಧಸ್ಯ ಸ ನೋ ವಿಷ್ಣುಃ ಪ್ರಸೀದತು॥ 45**

**ಪ್ರೋಚ್ಯತೇ ಪರಮೇಶೋ ಹಿ ಯಃ ಶುದ್ಧೋಽಪ್ಯುಪಚಾರತಃ।**
**ಪ್ರಸೀದತು ಸ ನೋ ವಿಷ್ಣುರಾತ್ಮಾ ಯಃ ಸರ್ವದೇಹಿನಾಮ್॥ 46**

**ಯಃ ಕಾರಣಂ ಚ ಕಾರ್ಯಂ ಚ ಕಾರಣಸ್ಯಾಪಿ ಕಾರಣಮ್।**
**ಕಾರ್ಯಸ್ಯಾಪಿ ಚ ಯಃ ಕಾರ್ಯಂ ಪ್ರಸೀದತು ಸ ನೋ ಹರಿಃ॥**

---

ಗಳಾದ ಯೋಗಿಗಳಿಂದ ಮುಕ್ತಿಗಾಗಿ ಧ್ಯಾನಿಸಲ್ಪಡತಕ್ಕವನೂ, ಯಾವ ಈಶ್ವರನಲ್ಲಿ ಪ್ರಕೃತಿ ಜನ್ಯಗಳಾದಿ ಸತ್ತ್ವಾದಿಗುಣಗಳಿಲ್ಲವೋ ಅಂತಹ ಶುದ್ಧರೆಲ್ಲರಿಗಿಂತ ಪರಿಶುದ್ಧನೂ ಆದ ಆದಿಪುರುಷನು ಪ್ರಸನ್ನನಾಗಲಿ (43-44). ಶುದ್ಧನಾದ ಯಾವಾತನ ವಿಭೂತಿಯು ಕಲಾಕಾಷ್ಠಾ ಮುಹೂರ್ತ—ಮುಂತಾದ ಕಾಲಗಣನೆಗೆ ಗೋಚರವಲ್ಲವೋ ಆ ವಿಷ್ಣುವು ನಮ್ಮಲ್ಲಿ ಪ್ರಸನ್ನನಾಗಲಿ. ಯಾವಾತನು (ಗುಣರಹಿತನಾಗಿ) ಶುದ್ಧ ನಾಗಿದ್ದರೂ, ಪರಮೇಶ್ವರನೆಂದು (ಸರ್ವನಿಯಾಮಕನೆಂದು) ಔಪಚಾರಿಕ ವಾಗಿ ಹೇಳಲ್ಪಡುತ್ತಾನೋ, ಅಂತಹ ಸರ್ವದೇಹಿಗಳಲ್ಲಿ ಆತ್ಮನಾಗಿರುವ ವಿಷ್ಣುವು ನಮ್ಮಲ್ಲಿ ಪ್ರಸನ್ನನಾಗಲಿ (45-46). ಕಾರಣನೂ ಕಾರ್ಯನೂ, ಕಾರಣಕ್ಕೆ ಕಾರಣನೂ ಕಾರ್ಯಕ್ಕೆ ಕಾರ್ಯನೂ* ಆದ ಹರಿಯು ನಮ್ಮಲ್ಲಿ

---

* ಪರಮಾತ್ಮನ ಶಕ್ತಿಯೇ ಪ್ರಕೃತಿ. ಅದಕ್ಕೆ ಪ್ರಧಾನ, ಅವ್ಯಕ್ತ—ಎಂದು ನಾಮಾಂತರಗಳು. ಶಕ್ತಿಗೂ ಶಕ್ತಿಮತ್ತಿಗೂ ಭೇದವಿಲ್ಲ. ಆದ್ದರಿಂದ ಪರಮಾತ್ಮನ ರೂಪಾಂತರವೇ ಪ್ರಕೃತಿಯೆನಿಸುತ್ತದೆ. ಇದರಿಂದ ಮಹತ್ತು, ಅಹಂಕಾರ ಮೊದಲಾದ ಪದಾರ್ಥಗಳು ಹುಟ್ಟಿದವೆಂದು ಹಿಂದೆ ಹೇಳಲಾಗಿದೆ. ಯಾವುದು ಕಾರಣವೋ ಅದು ಕಾರ್ಯವೂ ಆಗಬಹುದು. ಕಾರ್ಯವು ಕಾರಣವೂ ಆಗಬಹುದು. ಉದಾಹರಣೆಗೆ ಮಹತ್ತು: ಇದು ಪ್ರಕೃತಿಯ ಕಾರ್ಯ. ಮಹತ್ತಿನಿಂದ ಅಹಂಕಾರ ಹುಟ್ಟುವುದರಿಂದ ಅಹಂಕಾರಕ್ಕೆ ಮಹತ್ತು ಕಾರಣ. ಹೀಗೆ ಎಲ್ಲವೂ ಪರಮಾತ್ಮಸ್ವರೂಪವೇ ಆದ್ದರಿಂದ ಆತನು ಸಾಪೇಕ್ಷವಾಗಿ ಕಾರಣನೂ ಆಗುತ್ತಾನೆ, ಕಾರ್ಯನೂ ಆಗುತ್ತಾನೆ. ಇದನ್ನು ಮನಸ್ಸಿನಲ್ಲಿ ತಂದುಕೊಂಡರೆ ಈ ಎಲ್ಲ ಶ್ಲೋಕಾರ್ಥವು ಸುಲಭವಾಗುತ್ತದೆ.

**ಕಾರ್ಯಕಾರ್ಯಸ್ಯ ಯತ್ಕಾರ್ಯಂ ತತ್ಕಾರ್ಯಸ್ಯಾಪಿ ಯಃ ಸ್ವಯಮ್।**
**ತತ್ಕಾರ್ಯಕಾರ್ಯಭೂತೋ ಯಸ್ತತಶ್ಚ ಪ್ರಣತಾಃ ಸ್ಮ ತಮ್॥ 48**

**ಕಾರಣಂ ಕಾರಣಸ್ಯಾಪಿ ತಸ್ಯ ಕಾರಣಕಾರಣಮ್।**
**ತತ್ಕಾರಣಾನಾಂ ಹೇತುಂ ತಂ ಪ್ರಣತಾಃ ಸ್ಮ ಪರೇಶ್ವರಮ್॥ 49**

**ಭೋಕ್ತಾರಂ ಭೋಗ್ಯಭೂತಂ ಚ ಸ್ರಷ್ಟಾರಂ ಸೃಜ್ಯಮೇವ ಚ।**
**ಕಾರ್ಯಕರ್ತೃಸ್ವರೂಪಂ ತಂ ಪ್ರಣತಾಃ ಸ್ಮ ಪರಂ ಪದಮ್॥ 50**

**ವಿಶುದ್ಧಬೋಧವನ್ನಿತ್ಯಮಜಮಕ್ಷಯಮವ್ಯಯಮ್।**
**ಅವ್ಯಕ್ತಮವಿಕಾರಂ ಯತ್ತದ್ವಿಷ್ಣೋಃ ಪರಮಂ ಪದಮ್॥ 51**

**ನ ಸ್ಥೂಲಂ ನ ಚ ಸೂಕ್ಷ್ಮಂ ಯನ್ನ ವಿಶೇಷಣಗೋಚರಮ್।**
**ತತ್ಪದಂ ಪರಮಂ ವಿಷ್ಣೋಃ ಪ್ರಣಮಾಮಃ ಸದಾಮಲಮ್॥ 52**

---

ಪ್ರಸನ್ನನಾಗಲಿ. ಯಾವಾತನು ಕಾರ್ಯಕ್ಕೆ (ಮಹತ್ತತ್ತ್ವ) ಕಾರ್ಯವಾದುದಕ್ಕೂ (ಅಹಂಕಾರ) ಕಾರ್ಯನಾಗಿ (ತನ್ಮಾತ್ರಾಪಂಚಕ) ಇದ್ದಾನೋ ಅದರ ಕಾರ್ಯದ (ಭೂತಪಂಚಕ) ಕಾರ್ಯವೂ (ಬ್ರಹ್ಮಾಂಡ) ಸ್ವಯಂ ಆಗಿದ್ದಾನೋ ಅದರ ಕಾರ್ಯಕ್ಕೆ (ಬ್ರಹ್ಮದಕ್ಷಾದಿ) ಕಾರ್ಯನೂ (ಪ್ರಜಾಪತಿಗಳ ಪುತ್ರಪೌತ್ರಾದಿ) ಆಗಿದ್ದಾನೋ ಆತನಿಗೆ ನಾವು ವಂದಿಸುತ್ತೇವೆ (47-48). ಹಾಗೆಯೇ ಜಗತ್ಕಾರಣಕ್ಕೆ (ಬ್ರಹ್ಮಾದಿ) ಕಾರಣವಾದ (ಬ್ರಹ್ಮಾಂಡ) ವಸ್ತುವೂ ಅದರ ಕಾರಣದ (ಭೂತಪಂಚಕ) ಕಾರಣವೂ (ತನ್ಮಾತ್ರಪಂಚಕ) ಅದರ ಕಾರಣಗಳಿಗೆ (ಅಹಂಕಾರ-ಮಹತ್ತತ್ತ್ವ) ಕಾರಣನೂ (ಪ್ರಕೃತಿ) ಆದ ಪರಮಾತ್ಮನಿಗೆ ಶರಣಾಗಿದ್ದೇವೆ (49). ಭೋಕ್ತಾರನೂ ಭೋಗ್ಯವಸ್ತುವೂ ಸೃಷ್ಟಿಕರ್ತನೂ ಸೃಜ್ಯವಸ್ತುವೂ ಕರ್ತೃವೂ ಕರ್ಮವೂ ಆದ ಪರಮಪದಕ್ಕೆ ಶರಣಾಗಿದ್ದೇವೆ. ಯಾವುದು ವಿಶುದ್ಧಜ್ಞಾನವತ್ತಾಗಿದೆಯೋ ನಿತ್ಯ ಅಜ ಅಕ್ಷಯ ಅವ್ಯಯವಾಗಿದೆಯೋ ಅವ್ಯಕ್ತವೂ ವಿಕಾರರಹಿತವೂ ಆಗಿದೆಯೋ ಆ ವಿಷ್ಣುವಿನ ಪರಮಸ್ವರೂಪವನ್ನು ನಮಿಸುತ್ತೇವೆ (50-51). ಸ್ಥೂಲವಲ್ಲ, ಸೂಕ್ಷ್ಮವಲ್ಲ, ವಿಶೇಷಣಕ್ಕೆ ವಿಷಯವಲ್ಲ, ಸದಾ ನಿರ್ಮಲವಾದದ್ದು— ಅಂತಹ ವಿಷ್ಣುವಿನ ಪರಮಪದವನ್ನು ನಮಿಸುತ್ತೇವೆ. ಯಾವುದರ ಹತ್ತು

**ಯಸ್ಯಾಯುತಾಯುತಾಂಶಾಂಶೇ ವಿಶ್ವಶಕ್ತಿರಿಯಂ ಸ್ಥಿತಾ।**
**ಪರಬ್ರಹ್ಮಸ್ವರೂಪಂ ಯತ್ಪ್ರಣಮಾಮಸ್ತಮವ್ಯಯಮ್॥ 53**

**ಯದ್ಯೋಗಿನಃ ಸದೋದ್ಯುಕ್ತಾಃ ಪುಣ್ಯಪಾಪಕ್ಷಯೇಽಕ್ಷಯಮ್।**
**ಪಶ್ಯಂತಿ ಪ್ರಣವೇ ಚಿಂತ್ಯಂ ತದ್ವಿಷ್ಣೋಃ ಪರಮಂ ಪದಮ್॥ 54**

**ಯನ್ನ ದೇವಾ ನ ಮುನಯೋ ನ ಚಾಹಂ ನ ಚ ಶಂಕರಃ।**
**ಜಾನಂತಿ ಪರಮೇಶಸ್ಯ ತದ್ವಿಷ್ಣೋಃ ಪರಮಂ ಪದಮ್॥ 55**

**ಶಕ್ತಯೋ ಯಸ್ಯ ದೇವಸ್ಯ ಬ್ರಹ್ಮವಿಷ್ಣುಶಿವಾತ್ಮಿಕಾಃ।**
**ಭವಂತ್ಯಭೂತಪೂರ್ವಸ್ಯ ತದ್ವಿಷ್ಣೋಃ ಪರಮಂ ಪದಮ್॥ 56**

**ಸರ್ವೇಶ ಸರ್ವಭೂತಾತ್ಮನ್ ಸರ್ವ ಸರ್ವಾಶ್ರಯಾಚ್ಯುತ।**
**ಪ್ರಸೀದ ವಿಷ್ಣೋ ಭಕ್ತಾನಾಂ ವ್ರಜ ನೋ ದೃಷ್ಟಿಗೋಚರಮ್॥ 57**

*ಶ್ರೀ ಪರಾಶರ ಉವಾಚ:*

**ಇತ್ಯುದೀರಿತಮಾಕರ್ಣ್ಯ ಬ್ರಹ್ಮಣಸ್ತ್ರಿದಶಾಸ್ತತಃ।**
**ಪ್ರಣಮ್ಯೋಚುಃ ಪ್ರಸೀದೇತಿ ವ್ರಜ ನೋ ದೃಷ್ಟಿಗೋಚರಮ್॥ 58**

---

ಸಾವಿರದ ಅಂಶದ ಹತ್ತು ಸಾವಿರದ ಅಂಶದಲ್ಲಿ ಈ ಸಮಸ್ತ ವಿಶ್ವದ ಧಾರಣ ಶಕ್ತಿಯು ನಿಂತಿದೆಯೋ ಅಂತಹ ಅವ್ಯಯವಾದ ಪರಬ್ರಹ್ಮಸ್ವರೂಪವನ್ನು ನಮಿಸುತ್ತೇವೆ (52-53). ಸರ್ವದಾ ಯೋಗನಿರತರಾದ ಯೋಗಿಗಳು ಓಂಕಾರದ್ವಾರಾ ಚಿಂತನೀಯವಾದ ಯಾವ ಅವ್ಯಯ ವಸ್ತುವನ್ನು ತಮ್ಮ ಪುಣ್ಯ ಪಾಪಗಳು ಕ್ಷಯವಾದ ಮೇಲೆ ಸಾಕ್ಷಾತ್ಕರಿಸುವರೋ ಅಂತಹ ವಿಷ್ಣುವಿನ ಪರಮಪದವನ್ನು ನಮಿಸುತ್ತೇವೆ (54). ಯಾವುದನ್ನು ದೇವತೆಗಳಾಗಲಿ ಮುನಿಗಳಾಗಲಿ ನಾನಾಗಲಿ ಶಿವನಾಗಲಿ ತಿಳಿದಿಲ್ಲವೋ ಅದು ಪರಮೇಶ್ವರನಾದ ವಿಷ್ಣುವಿನ ಪರಮಸ್ವರೂಪವಾಗಿದೆ (55). ಅನಾದಿಯಾದ ಯಾವ ದೇವನ ಶಕ್ತಿಗಳು ಬ್ರಹ್ಮವಿಷ್ಣುಶಿವರೂಪಗಳಾಗಿವೆಯೋ ಅದು ವಿಷ್ಣುವಿನ ಪರಮಪದವಾಗಿದೆ. ಹೇ ಸರ್ವೇಶ್ವರ, ಸರ್ವಭೂತಾತ್ಮ, ಸರ್ವಾಶ್ರಯ, ಅಚ್ಯುತ, ವಿಷ್ಣೋ ಪ್ರಸನ್ನನಾಗು. ಭಕ್ತರಾದ ನಮ್ಮ ದೃಷ್ಟಿಗೆ ಗೋಚರನಾಗು" (56-57). ಈ ರೀತಿಯಾಗಿ ಬ್ರಹ್ಮನು ಸ್ತುತಿಸಿದ್ದನ್ನು ಕೇಳಿ

**ಯನ್ನಾಯಂ ಭಗವಾನ್ ಬ್ರಹ್ಮಾ ಜಾನಾತಿ ಪರಮಂ ಪದಮ್।**
**ತನ್ನತಾಃ ಸ್ಮ ಜಗದ್ಧಾಮ ತವ ಸರ್ವಗತಾಚ್ಯುತ॥** 59

**ಇತ್ಯಂತೇ ವಚಸಸ್ತೇಷಾಂ ದೇವಾನಾಂ ಬ್ರಹ್ಮಣಸ್ತಥಾ।**
**ಊಚುರ್ದೇವರ್ಷಯಸ್ಸರ್ವೇ ಬೃಹಸ್ಪತಿಪುರೋಗಮಾಃ॥** 60

**ಆದ್ಯೋ ಯಜ್ಞಪುಮಾನೀಡ್ಯಃ ಪೂರ್ವೇಷಾಂ ಯಶ್ಚ ಪೂರ್ವಜಃ।**
**ತನ್ನತಾಃ ಸ್ಮ ಜಗತ್ಸ್ರಷ್ಟುಃ ಸ್ರಷ್ಟಾರಮವಿಶೇಷಣಮ್॥** 61

**ಭಗವನ್ಭೂತಭವ್ಯೇಶ ಯಜ್ಞಮೂರ್ತಿಧರಾವ್ಯಯ।**
**ಪ್ರಸೀದ ಪ್ರಣತಾನಾಂ ತ್ವಂ ಸರ್ವೇಷಾಂ ದೇಹಿ ದರ್ಶನಮ್॥** 62

**ಏಷ ಬ್ರಹ್ಮಾ ಸಹಾಸ್ಮಾಭಿಃ ಸಹರುದ್ರೈಸ್ತ್ರಿಲೋಚನಃ।**
**ಸರ್ವಾದಿತ್ಯೈಃ ಸಮಂ ಪೂಷಾ ಪಾವಕೋಽಯಂ ಸಹಾಗ್ನಿಭಿಃ॥** 63

---

ದೇವತೆಗಳು ವಿಷ್ಣುವಿಗೆ ನಮಸ್ಕರಿಸಿ "ಸ್ವಾಮಿ, ಪ್ರಸನ್ನನಾಗು. ನಮ್ಮ ದೃಷ್ಟಿಗೆ ಗೋಚರನಾಗು. ಹೇ ಸರ್ವಗತ, ಅಚ್ಯುತ, ಜಗದಾಧಾರ, ಈ ಭಗವಾನ್ ಬ್ರಹ್ಮದೇವನೂ ಯಾವುದನ್ನು ತಿಳಿದಿಲ್ಲವೋ ಅಂತಹ ನಿನ್ನ ಪರಮಪದಕ್ಕೆ ಶರಣಾಗಿದ್ದೇವೆ" ಎಂದು ಸ್ತೋತ್ರ ಮಾಡಿದರು (58-59). ಹೀಗೆ ದೇವತೆಗಳೂ ಬ್ರಹ್ಮನೂ ಸ್ತೋತ್ರಮಾಡಿದ ಮೇಲೆ ಬೃಹಸ್ಪತಿಯೇ ಮೊದಲಾದ ದೇವರ್ಷಿಗಳು ಈ ರೀತಿ ಕೊಂಡಾಡಿದರು: "ಯಾವಾತನು ಆದ್ಯನೂ ಸ್ತೋತ್ರಾರ್ಹನಾದ ಯಜ್ಞಪುರುಷನೂ ಆಗಿದ್ದಾನೋ ಪೂರ್ವಜರಾದ ಪ್ರಜಾಪತಿ ಮೊದಲಾದವರಿಗೂ ಹಿಂದಿನವನಾಗಿದ್ದನೋ ಸೃಷ್ಟಿಕರ್ತನಾದ ಬ್ರಹ್ಮನನ್ನೂ ಸೃಷ್ಟಿಸಿದ್ದಾನೋ ಅಂತಹ ಗುಣಾತೀತವಾದ ಪರವಸ್ತುವಿಗೆ ತಲೆ ಬಾಗುತ್ತೇನೆ (60-61). ಹೇ ಭಗವನ್, ಹಿಂದಿದ್ದ ಮುಂದಿರುವ ಸರ್ವ ವಸ್ತುಗಳಿಗೂ ಈಶನೆ, ಯಜ್ಞಮೂರ್ತಿಧರ, ಅವ್ಯಯ, ಪ್ರಣತರಾದ ನಮ್ಮೆಲ್ಲರಿಗೂ ಪ್ರಸನ್ನನಾಗು. ದರ್ಶನವನ್ನು ಅನುಗ್ರಹಿಸು (62). ನಮ್ಮ ಜೊತೆಯಲ್ಲಿ ಬ್ರಹ್ಮದೇವನೂ ರುದ್ರರೊಡನೆ ಶಂಕರನೂ ಆದಿತ್ಯರೊಡನೆ ಪೂಷನೂ ಅಗ್ನಿಗಳೊಡನೆ ಪಾವಕನೂ ಆಗಮಿಸಿದ್ದಾರೆ. ಇವರು ಅಶ್ವಿನೀ ದೇವತೆಗಳು. ಇವರು ವಸುಗಳು. ಇವರು ಮರುತ್ತುಗಳು. ಅವರು

**ಅಶ್ವಿನೌ ವಸವಶ್ಚೇಮೇ ಸರ್ವೇ ಚೈತೇ ಮರುದ್ಗಣಾಃ।**
**ಸಾಧ್ಯಾ ವಿಶ್ವೇ ತಥಾ ದೇವಾ ದೇವೇಂದ್ರಶ್ಚಾಯಮೀಶ್ವರಃ॥ 64**

**ಪ್ರಣಾಮಪ್ರವಣಾ ನಾಥ ದೈತ್ಯಸೈನ್ಯೈಃ ಪರಾಜಿತಾಃ।**
**ಶರಣಂ ತ್ವಾಮನುಪ್ರಾಪ್ತಾಃ ಸಮಸ್ತಾ ದೇವತಾಗಣಾಃ॥ 65**

*ಶ್ರೀ ಪರಾಶರ ಉವಾಚ:*

**ಏವಂ ಸಂಸ್ತೂಯಮಾನಸ್ತು ಭಗವಾನ್ ಶಂಖಚಕ್ರಧೃಕ್।**
**ಜಗಾಮ ದರ್ಶನಂ ತೇಷಾಂ ಮೈತ್ರೇಯ ಪರಮೇಶ್ವರಃ॥ 66**

**ತಂ ದೃಷ್ಟ್ವಾ ತೇ ತದಾ ದೇವಾಃ ಶಂಖಚಕ್ರಗದಾಧರಮ್।**
**ಅಪೂರ್ವರೂಪಸಂಸ್ಥಾನಂ ತೇಜಸಾಂ ರಾಶಿಮೂರ್ಜಿತಮ್॥ 67**

**ಪ್ರಣಮ್ಯ ಪ್ರಣತಾಃ ಸರ್ವೇ ಸಂಕ್ಷೋಭಸ್ತಿಮಿತೇಕ್ಷಣಾಃ।**
**ತುಷ್ಟುವುಃ ಪುಂಡರೀಕಾಕ್ಷಂ ಪಿತಾಮಹಪುರೋಗಮಾಃ॥ 68**

*ದೇವಾ ಊಚುಃ*

**ನಮೋ ನಮೋಽವಿಶೇಷಸ್ತ್ವಂ ತ್ವಂ ಬ್ರಹ್ಮಾ ತ್ವಂ ಪಿನಾಕಧೃಕ್।**
**ಇಂದ್ರಸ್ತ್ವಮಗ್ನಿಃ ಪವನೋ ವರುಣಃ ಸವಿತಾ ಯಮಃ॥ 69**

---

ಸಾಧ್ಯರು. ಅವರು ವಿಶ್ವೇದೇವರು. ಈತನು ಪ್ರಭುವಾದ ದೇವೇಂದ್ರ (63-64). ಹೇ ಸ್ವಾಮಿ, ಸಮಸ್ತ ದೇವತಾಗಣಗಳೂ ದೈತ್ಯಸೈನ್ಯಗಳಿಂದ ಪರಾಜಿತರಾಗಿದ್ದಾರೆ. ನಿನಗೆ ವಿನಯದಿಂದ ನಮಸ್ಕರಿಸುತ್ತ ಶರಣಾಗತ ರಾಗಿದ್ದಾರೆ" ಎಂದರು (65). ಮೈತ್ರೇಯ, ಈ ರೀತಿಯಲ್ಲಿ ಅವರೆಲ್ಲರೂ ಸ್ತುತಿಸುತ್ತಿರಲಾಗಿ ಪರಮೇಶ್ವರನೂ ಶಂಖಚಕ್ರಧಾರಿಯೂ ಆದ ಭಗವಾನ್ ವಿಷ್ಣುವು ಅವರಿಗೆ ಕಾಣಿಸಿಕೊಂಡನು (66). ಶಂಖಚಕ್ರಗದಾಧರನೂ ಅಪೂರ್ವರೂಪ ಸಂಪತ್ತುಳ್ಳವನೂ ಶ್ರೇಷ್ಠನೂ ತೇಜೋರಾಶಿಯೂ ಆದ ಭಗವಂತನನ್ನು ನೋಡಿ ದೇವತೆಗಳೆಲ್ಲರೂ ತಲೆಬಾಗಿ ನಮಸ್ಕರಿಸಿದರು. ಬ್ರಹ್ಮಾದಿದೇವತೆಗಳೆಲ್ಲರೂ ಭಕ್ತಿಭಾವಾವೇಶದಿಂದ ನಿಶ್ಚಲನೇತ್ರರಾಗಿ ಪುಂಡರೀಕಾಕ್ಷನನ್ನು ನೋಡುತ್ತ ಸ್ತುತಿಸಿದರು (67-68): "ಸ್ವಾಮಿ, ನಮೋ ನಮಃ. ನಿರ್ವಿಶೇಷನಾದರೂ ನೀನು ಬ್ರಹ್ಮನಾಗಿದ್ದೀಯೆ, ಶಿವನಾಗಿದ್ದೀಯೆ,

**ವಸವೋ ಮರುತಃ ಸಾಧ್ಯಾ ವಿಶ್ವೇದೇವಗಣಾಃ ಭವಾನ್ ।**
**ಯೋಽಯಂ ತವಾಗ್ರತೋ ದೇವ ಸಮೀಪಂ ದೇವತಾಗಣಃ ।**
**ಸ ತ್ವಮೇವ ಜಗತ್ಸ್ರಷ್ಟಾ ಯತಃ ಸರ್ವಗತೋ ಭವಾನ್ ॥ 70**

**ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮೋಂಕಾರಃ ಪ್ರಜಾಪತಿಃ ।**
**ವಿದ್ಯಾ ವೇದ್ಯಂ ಚ ಸರ್ವಾತ್ಮಂಸ್ತ್ವನ್ಮಯಂ ಚಾಖಿಲಂ ಜಗತ್ ॥ 71**

**ತ್ವಾಮಾರ್ತಾಃ ಶರಣಂ ವಿಷ್ಣೋ ಪ್ರಯಾತಾ ದೈತ್ಯನಿರ್ಜಿತಾಃ ।**
**ವಯಂ ಪ್ರಸೀದ ಸರ್ವಾತ್ಮಂಸ್ತೇಜಸಾಪ್ಯಾಯಯಸ್ವ ನಃ ॥ 72**

**ತಾವದಾರ್ತಿಸ್ತಥಾ ವಾಂಛಾ ತಾವನ್ಮೋಹಸ್ತಥಾ ಸುಖಮ್ ।**
**ಯಾವನ್ನ ಯಾತಿ ಶರಣಂ ತ್ವಾಮಶೇಷಾಘನಾಶನಮ್ ॥ 73**

**ತ್ವಂ ಪ್ರಸಾದಂ ಪ್ರಸನ್ನಾತ್ಮನ್ ಪ್ರಪನ್ನಾನಾಂ ಕುರುಷ್ವ ನಃ ।**
**ತೇಜಸಾಂ ನಾಥ ಸರ್ವೇಷಾಂ ಸ್ವಶಕ್ತ್ಯಾಪ್ಯಾಯನಂ ಕುರು ॥ 74**

---

ಇಂದ್ರನಾಗಿದ್ದೀಯೆ. ಅಗ್ನಿ, ವಾಯು, ವರುಣ, ಸೂರ್ಯ, ಯಮರೂ ನೀನೆ. ವಸುಗಳೂ, ಮರುತ್ತುಗಳೂ, ಸಾಧ್ಯರೂ, ವಿಶ್ವೇದೇವಗಣಗಳೂ ನೀನೇ. ಹೇ ದೇವ, ನಿನ್ನೆದುರಿಗೆ ಸಮೀಪದಲ್ಲಿರುವ ದೇವತಾಗಣವೆಲ್ಲವೂ ಸೃಷ್ಟಿಕರ್ತನಾದ ನೀನೇ. ಏಕೆಂದರೆ, ನೀನು ಸರ್ವಗತನಾಗಿದ್ದೀಯೆ (69-70). ನೀನೇ ಯಜ್ಞ; ನೀನೇ ವಷಟ್ಕಾರ; ನೀನೇ ಓಂಕಾರವೂ ಪ್ರಜಾಪತಿಯೂ ಆಗಿದ್ದೀಯೆ. ವಿದ್ಯೆಯೂ ವೇದ್ಯವೂ ನೀನೇ. ಹೇ ಸರ್ವಾತ್ಮ, ನಿಖಿಲ ಜಗತ್ತು ನಿನ್ನ ಸ್ವರೂಪವೇ. ದೈತ್ಯರಿಂದ ಪರಾಜಿತರಾದ ನಾವು, ಹೇ ವಿಷ್ಣೋ, ಆರ್ತರಾಗಿ ನಿನಗೆ ಶರಣು ಬಂದಿದ್ದೇವೆ. ಪ್ರಸನ್ನನಾಗು. ನಿನ್ನ ತೇಜಸ್ಸಿನಿಂದ ನಾವು ಶಕ್ತಿಯುತರಾಗುವಂತೆ ಮಾಡು (71-72). ನಿನಗೆ ಶರಣಾಗದೇ ಇರುವವರೆಗೆ ಮಾತ್ರ ಯಾರಿಗಾದರೂ ದೈನ್ಯ, ಆಸೆ, ಮೋಹ, ಶೋಕಗಳು ಇರುತ್ತವೆ. ಓ ಪ್ರಸನ್ನಾತ್ಮ, ಪ್ರಪನ್ನರಾದ ನಮ್ಮ ವಿಷಯದಲ್ಲಿ ಪ್ರಸನ್ನನಾಗು. ಸರ್ವ ತೇಜಸ್ಸುಗಳಿಗೂ ಅಧಿನಾಥನೆ, ನಿನ್ನ ಶಕ್ತಿಯಿಂದ ನಮ್ಮನ್ನು ಆಪ್ಯಾಯನಗೊಳಿಸು" ಎಂದರು (73-74). ಈ

*ಶ್ರೀ ಪರಾಶರ ಉವಾಚ:*

**ಏವಂ ಸಂಸ್ತೂಯಮಾನಸ್ತು ಪ್ರಣತೈರಮರೈರ್ಹರಿಃ।**
**ಪ್ರಸನ್ನದೃಷ್ಟಿರ್ಭಗವಾನಿದಮಾಹ ಸ ವಿಶ್ವಕೃತ್॥** 75

**ತೇಜಸೋ ಭವತಾಂ ದೇವಾಃ ಕರಿಷ್ಯಾಮ್ಯುಪಬೃಂಹಣಮ್।**
**ವದಾಮ್ಯಹಂ ಯತ್ಕ್ರಿಯತಾಂ ಭವದ್ಭಿಸ್ತದಿದಂ ಸುರಾಃ॥** 76

**ಆನೀಯ ಸಹಿತಾ ದೈತ್ಯೈಃ ಕ್ಷೀರಾಬ್ಧೌ ಸಕಲೌಷಧೀಃ।**
**ಪ್ರಕ್ಷಿಪ್ಯಾತ್ರಾಮೃತಾರ್ಥಂ ತಾಃ ಸಕಲಾ ದೈತ್ಯದಾನವೈಃ॥** 77

**ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ಚ ವಾಸುಕಿಮ್।**
**ಮಥ್ಯತಾಮಮೃತಂ ದೇವಾಃ ಸಹಾಯೇ ಮಯ್ಯವಸ್ಥಿತೇ॥** 78

---

ಪ್ರಕಾರವಾಗಿ ಮರೆಹೊಕ್ಕ ದೇವತೆಗಳಿಂದ ಸಂಸ್ತುತನಾಗಿ, ವಿಶ್ವಕರ್ತನಾದ ಭಗವಾನ್ ಶ್ರೀ ಹರಿಯು ಅವರನ್ನು ಪ್ರಸನ್ನದೃಷ್ಟಿಯಿಂದ ನೋಡುತ್ತ ಹೀಗೆಂದನು (75): "ದೇವತೆಗಳೆ, ನಿಮ್ಮ ಶಕ್ತಿಯು ವರ್ಧಿಸುವಂತೆ ಮಾಡುವೆನು. ನಾನು ಹೇಳುವಂತೆ ಮಾಡಿರಿ. ನೀವು ದೈತ್ಯದಾನವರೊಡನೆ ಸೇರಿ ಸಕಲ ಮೂಲಿಕೆಗಳನ್ನು ತಂದು ಅಮೃತೋತ್ಪಾದನೆಗಾಗಿ ಅವನ್ನು ಕ್ಷೀರಸಮುದ್ರದೊಳಗೆ ಹಾಕಿರಿ (76-77). ಅನಂತರ ಮಂದರ ಪರ್ವತವನ್ನು ಕಡಗೋಲನ್ನಾಗಿಯೂ ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡು ಅಮೃತಕ್ಕಾಗಿ ಸಮುದ್ರವನ್ನು ಕಡೆಯಿರಿ. ನಾನು ಸಹಾಯಕನಾಗಿರುವೆನು (78). ನೀವು ದೈತ್ಯರೊಡನೆ ಸಾಮನೀತಿಯನ್ನವಲಂಬಿಸಿ, "ನೀವು ಈ ಕಾರ್ಯದಲ್ಲಿ ಸಹಾಯ ಮಾಡಿದರೆ ಸಮುದ್ರ ಮಂಥನದಿಂದ ದೊರೆಯುವ ಫಲದಲ್ಲಿ ಸಮಭಾಗಿಗಳಾಗುವಿರಿ" ಎಂದು* ಅವರಿಗೆ ಹೇಳಿರಿ. ಸಮುದ್ರವನ್ನು ಕಡೆಯುವಾಗ ಯಾವ ಅಮೃತವು

---

* 79 ನೆಯ ಶ್ಲೋಕದಲ್ಲಿ 'ವಾಚ್ಯಾ ಭವಿಷ್ಯಥ' ಎಂಬುದರ ಅರ್ಥ ಸ್ಪಷ್ಟವಾಗುವುದಿಲ್ಲ. 'ವಾಚ್ಯಾ' ಎಂಬುದು ಆರ್ಷಪ್ರಯೋಗವೆಂದೂ 'ವಕ್ತಾರಃ' ಎಂದಿರಬೇಕೆಂದೂ ಭಾವಿಸಿ ನಾವು ಅರ್ಥವನ್ನು ಬರೆದಿದ್ದೇವೆ. ಅಥವಾ "ಭವಿಷ್ಯಥ ಇತಿ ಯುಷ್ಮಾಭಿಃ ದೈತ್ಯಾಃ ವಾಚ್ಯಾಃ" ಎಂದು ಅನ್ವಯಿಸಿ ಅರ್ಥ ಹೇಳಬೇಕು.

**ಸಾಮಪೂರ್ವಂ ಚ ದೈತೇಯಾಸ್ತತ್ರ ಸಾಹಾಯ್ಯಕರ್ಮಣಿ।**
**ಸಾಮಾನ್ಯಫಲಭೋಕ್ತಾರೋ ಯೂಯಂ ವಾಚ್ಯ ಭವಿಷ್ಯಥ॥** 79

**ಮಥ್ಯಮಾನೇ ಚ ತತ್ರಾಬ್ಧೌ ಯತ್ಸಮುತ್ಪತ್ಸ್ಯತೇಽಮೃತಮ್।**
**ತತ್ಪಾನಾದ್ಬಲಿನೋ ಯೂಯಮಮರಾಶ್ಚ ಭವಿಷ್ಯಥ॥** 80

**ತಥಾ ಚಾಹಂ ಕರಿಷ್ಯಾಮಿ ತೇ ಯಥಾ ತ್ರಿದಶದ್ವಿಷಃ।**
**ನ ಪ್ರಾಪ್ಸ್ಯಂತ್ಯಮೃತಂ ದೇವಾಃ ಕೇವಲಂ ಕ್ಲೇಶಭಾಗಿನಃ॥** 81

*ಶ್ರೀ ಪರಾಶರ ಉವಾಚ:*

**ಇತ್ಯುಕ್ತಾ ದೇವದೇವೇನ ಸರ್ವ ಏವ ತದಾ ಸುರಾಃ।**
**ಸಂಧಾನಮಸುರೈಃ ಕೃತ್ವಾ ಯತ್ನವಂತೋಽಮೃತೇಽಭವನ್॥** 82

**ನಾನೌಷಧೀಃ ಸಮಾನೀಯ ದೇವದೈತೇಯದಾನವಾಃ।**
**ಕ್ಷಿಪ್ತ್ವಾ ಕ್ಷೀರಾಬ್ಧಿಪಯಸಿ ಶರದಭ್ರಾಮಲತ್ವಿಷಿ॥** 83

**ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ಚ ವಾಸುಕಿಮ್।**
**ತತೋ ಮಥಿತುಮಾರಬ್ಧಾ ಮೈತ್ರೇಯ ತರಸಾಮೃತಮ್॥** 84

---

ಲಭಿಸುವುದೋ ಅದನ್ನು ಕುಡಿಯುವುದರಿಂದ ನೀವು ಬಲಿಷ್ಠರೂ ಮರಣ ರಹಿತರೂ ಆಗುವಿರಿ (79-80). ದೇವತೆಗಳೆ, ದೇವವೈರಿಗಳಾದ ದೈತ್ಯರಿಗೆ ಅಮೃತವು ದೊರೆಯದಂತೆಯೂ ಕೇವಲ ಸಮುದ್ರಮಥನದ ಕ್ಲೇಶಕ್ಕೆ ಮಾತ್ರ ಅವರು ಭಾಗಿಗಳಾಗುವಂತೆಯೂ ನಾನು ಮಾಡುವೆನು" ಎಂದು ಹೇಳಿದನು (81). ಹೀಗೆ ದೇವದೇವನಿಂದ ಉಕ್ತರಾದ ದೇವತೆಗಳು ದೈತ್ಯರೊಡನೆ ಸಂಧಾನವನ್ನು ಮಾಡಿಕೊಂಡು ಅಮೃತೋತ್ಪಾದನೆಗಾಗಿ ಪ್ರಯತ್ನ ಮಾಡಿದರು. ದೇವತೆಗಳೂ ದೈತ್ಯದಾನವರೂ ಜೊತೆಗೂಡಿ ನಾನಾ ಬಗೆಯ ಮೂಲಿಕೆಗಳನ್ನು ತಂದು, ಶರತ್ಕಾಲದ ಮೋಡದಂತೆ ಶುಭ್ರವಾದ ಕ್ಷೀರಸಾಗರದ ಜಲದಲ್ಲಿ ಹಾಕಿದರು (82-83). ಮಂದರ ಗಿರಿಯನ್ನು ಮಂಥನ ದಂಡವಾಗಿಯೂ ವಾಸುಕಿಯನ್ನು ಹಗ್ಗವಾಗಿಯೂ ಮಾಡಿಕೊಂಡು, ಮೈತ್ರೇಯ, ಬಲವೆಲ್ಲವನ್ನೂ ಬಳಸಿ ಅಮೃತಕ್ಕಾಗಿ

**ವಿಬುಧಾಃ ಸಹಿತಾಃ ಸರ್ವೇ ಯತಃ ಪುಚ್ಛಂ ತತಃ ಕೃತಾಃ।**
**ಕೃಷ್ಣೇನ ವಾಸುಕೇರ್ದೈತ್ಯಾಃ ಪೂರ್ವಕಾಯೇ ನಿವೇಶಿತಾಃ॥ 85**

**ತೇ ತಸ್ಯ ಮುಖನಿಃಶ್ವಾಸವಹ್ನಿತಾಪಹತತ್ವಿಷಃ।**
**ನಿಸ್ತೇಜಸೋಽಸುರಾಃ ಸರ್ವೇ ಬಭೂವುರಮಿತೌಜಸಃ॥ 86**

**ತೇನೈವ ಮುಖನಿಃಶ್ವಾಸವಾಯುನಾಸ್ತಬಲಾಹಕೈಃ।**
**ಪುಚ್ಛಪ್ರದೇಶೇ ವರ್ಷದ್ಭಿಸ್ತದಾ ಚಾಪ್ಯಾಯಿತಾಃ ಸುರಾಃ॥ 87**

**ಕ್ಷೀರೋದಮಧ್ಯೇ ಭಗವಾನ್ ಕೂರ್ಮರೂಪೀ ಸ್ವಯಂ ಹರಿಃ।**
**ಮಂಥಾನಾದ್ರೇರಧಿಷ್ಠಾನಂ ಭ್ರಮತೋಽಭೂನ್ಮಹಾಮುನೇ॥ 88**

**ರೂಪೇಣಾನ್ಯೇನ ದೇವಾನಾಂ ಮಧ್ಯೇ ಚಕ್ರಗದಾಧರಃ।**
**ಚಕರ್ಷ ನಾಗರಾಜಾನಂ ದೈತ್ಯಮಧ್ಯೇಽಪರೇಣ ಚ॥ 89**

**ಉಪರ್ಯಾಕ್ರಾಂತವಾಂಚ್ಛೈಲಂ ಬೃಹದ್ರೂಪೇಣ ಕೇಶವಃ।**
**ತಥಾಪರೇಣ ಮೈತ್ರೇಯ ಯನ್ನ ದೃಷ್ಟಂ ಸುರಾಸುರೈಃ॥ 90**

---

ಕಡೆಯಲಾರಂಭಿಸಿದರು. ಎಲ್ಲ ದೇವತೆಗಳೂ ವಾಸುಕಿಯ ಬಾಲದ ಕಡೆಯಲ್ಲಿಯೂ ದೈತ್ಯರೆಲ್ಲರೂ ಅದರ ತಲೆಯ ಕಡೆಯಲ್ಲಿಯೂ ಇರುವಂತೆ ವಿಷ್ಣುವು ಯೋಜನೆ ಮಾಡಿದನು (84-85). ದೈತ್ಯರು ಬಲಿಷ್ಠರಾದರೂ ವಾಸುಕಿಯ ಉಸುರಿನ ಬೇಗೆಯ ತಾಪದಿಂದ ಕುಂದಿ ತೇಜೋಹೀನರಾದರು. ವಾಸುಕಿಯ ಅದೇ ಉಸಿರಿನ ರಭಸಕ್ಕೆ ತಳ್ಳಲ್ಪಟ್ಟ ಮೋಡಗಳು ಬಾಲದ ಕಡೆಗೆ ಹೋಗಿ ಮಳೆ ಸುರಿಸಲಾಗಿ ದೇವತೆಗಳಿಗೆ ಆಪ್ಯಾಯನವಾಯಿತು! (86-87). ಮಹಾಮುನಿ-ಮೈತ್ರೇಯ, ಕ್ಷೀರಸಾಗರದ ಮಧ್ಯದಲ್ಲಿ ಗಿರ್ರನೆ ತಿರುಗುತ್ತಿದ್ದ ಮಂದರಗಿರಿಯ ತಳದಲ್ಲಿ, ಭಗವಾನ್ ಹರಿಯು ಕೂರ್ಮರೂಪವನ್ನು ಧರಿಸಿ ಆಧಾರವಾದನು (88). ಆ ಚಕ್ರಗದಾಧರನು ಒಂದು ರೂಪದಿಂದ ದೇವತೆಗಳ ನಡುವೆಯೂ ಇನ್ನೊಂದು ರೂಪವನ್ನು ಧರಿಸಿ ದೈತ್ಯರ ನಡುವೆಯೂ ನಿಂತು ನಾಗರಾಜನಾದ ವಾಸುಕಿಯನ್ನೆಳೆದು ಸಮುದ್ರವನ್ನು ಕಡೆಯುತ್ತಿದ್ದನು (89). ಆ ಕೇಶವನು ಮತ್ತೊಂದು ಬೃಹದ್ರೂಪವನ್ನು ಧರಿಸಿ ಮಂದರ ಶಿಖರದ ಮೇಲೆ ನಿಂತು ಅದನ್ನು ಒತ್ತಿ

**ತೇಜಸಾ ನಾಗರಾಜಾನಂ ತಥಾಪ್ಯಾಯಿತವಾನ್ ಹರಿಃ।**
**ಅನ್ಯೇನ ತೇಜಸಾ ದೇವಾನುಪಬೃಂಹಿತವಾನ್ ಪ್ರಭುಃ॥** 91

**ಮಥ್ಯಮಾನೇ ತತಸ್ತಸ್ಮಿನ್ ಕ್ಷೀರಾಬ್ಧೌ ದೇವದಾನವೈಃ।**
**ಹವಿರ್ಧಾಮಾಭವತ್ಪೂರ್ವಂ ಸುರಭಿಃ ಸುರಪೂಜಿತಾ॥** 92

**ಜಗ್ಮುರ್ಮುದಂ ತತೋ ದೇವಾ ದಾನವಾಶ್ಚ ಮಹಾಮುನೇ।**
**ವ್ಯಾಕ್ಷಿಪ್ತಚೇತಸಶ್ಚೈವ ಬಭೂವುಃ ಸ್ತಿಮಿತೇಕ್ಷಣಾಃ॥** 93

**ಕಿಮೇತದಿತಿ ಸಿದ್ಧಾನಾಂ ದಿವಿ ಚಿಂತಯತಾಂ ತತಃ।**
**ಬಭೂವ ವಾರುಣೀ ದೇವೀ ಮದಾಘೂರ್ಣಿತಲೋಚನಾ॥** 94

**ಕೃತಾವರ್ತಾತ್ತತಸ್ತಸ್ಮಾತ್ ಕ್ಷೀರೋದಾದ್ವಾಸಯಂಜಗತ್।**
**ಗಂಧೇನ ಪಾರಿಜಾತೋಽಭೂದ್ದೇವಸ್ತ್ರೀ ನಂದನಸ್ತರುಃ॥** 95

**ರೂಪೌದಾರ್ಯಗುಣೋಪೇತಸ್ತಥಾ ಚಾಪ್ಸರಸಾಂ ಗಣಃ।**
**ಕ್ಷೀರೋದಧೇಃ ಸಮುತ್ಪನ್ನೋ ಮೈತ್ರೇಯ ಪರಮಾದ್ಭುತಃ॥** 96

---

ಹಿಡಿದಿದ್ದನು. ಅದು ಮಾತ್ರ ದೇವದಾನವರಿಗೆ ಗೋಚರಿಸುತ್ತಿರಲಿಲ್ಲ. ಶ್ರೀಹರಿಯು ತನ್ನ ತೇಜಸ್ಸಿನಿಂದ ವಾಸುಕಿಯನ್ನೂ ಇನ್ನೊಂದು ತೇಜಸ್ಸಿನಿಂದ ದೇವತೆಗಳನ್ನೂ ಆಪ್ಯಾಯನಗೊಳಿಸುತ್ತಿದ್ದನು (90-91). ಅನಂತರ ಕ್ಷೀರಸಾಗರವು ಮಥಿತವಾಗುತ್ತಿರಲಾಗಿ, ಯಜ್ಞಸಾಮಗ್ರಿಯಾದ ಹವಿಸ್ಸಿಗೆ ಆಶ್ರಯವೂ ಸುರಪೂಜಿತವೂ ಆದ ಕಾಮಧೇನು ಮೊದಲು ಆವಿರ್ಭವಿಸಿತು. ಮೈತ್ರೇಯ, ಅದರಿಂದ ದೇವತೆಗಳಿಗೂ ದೈತ್ಯರಿಗೂ ಹರ್ಷವಾಯಿತು. ಅವರ ಮನಸ್ಸು ಕ್ಷೋಭೆಗೊಂಡುದಲ್ಲದೆ ನೆಟ್ಟದೃಷ್ಟಿಯಿಂದ ನೋಡತೊಡಗಿದರು (92-93). ಇದೇನಿರಬಹುದೆಂದು ಗಗನದಲ್ಲಿ ಸಿದ್ಧಪುರುಷರು ಚಿಂತಿಸುತ್ತಿರುವಾಗ, ಮದಚಂಚಲನೇತ್ರೆಯಾದ ವಾರುಣೀದೇವಿ ಮೇಲೆದ್ದಳು! ಮತ್ತೆ ಕಡೆಯಲ್ಪಡುತ್ತಿದ್ದ ಕ್ಷೀರಸಮುದ್ರದಿಂದ ಪಾರಿಜಾತ ವೃಕ್ಷವು ಹುಟ್ಟಿತು. ದೇವಸ್ತ್ರೀಯರಿಗೆ ಪ್ರಿಯವಾದ ಆ ವೃಕ್ಷವು (ಹೂಗಳ) ಸುಗಂಧದಿಂದ ಜಗತ್ತನ್ನು ವ್ಯಾಪಿಸಿತು (94-95). ಆಮೇಲೆ, ಮೈತ್ರೇಯ, ರೂಪಲಾವಣ್ಯಾದಿ ಗುಣಗಳಿಂದ ಕೂಡಿದ ವಿಸ್ಮಯಕರವಾದ

ತತಃ ಶೀತಾಂಶುರಭವಂಜಗೃಹೇ ತಂ ಮಹೇಶ್ವರಃ।
ಜಗೃಹುಶ್ಚ ವಿಷಂ ನಾಗಾಃ ಕ್ಷೀರೋದಾಬ್ಧಿಸಮುತ್ಥಿತಮ್॥ 97

ತತೋ ಧನ್ವಂತರಿರ್ದೇವಃ ಶ್ವೇತಾಂಬರಧರಸ್ಸ್ವಯಮ್।
ಬಿಭ್ರತ್ಕಮಂಡಲುಂ ಪೂರ್ಣಮಮೃತಸ್ಯ ಸಮುತ್ಥಿತಃ॥ 98

ತತಃ ಸ್ವಸ್ಥಮನಸ್ಕಾಸ್ತೇ ಸರ್ವೇ ದೈತೇಯದಾನವಾಃ।
ಬಭೂವುರ್ಮುದಿತಾಃ ಸರ್ವೇ ಮೈತ್ರೇಯ ಮುನಿಭಿಃ ಸಹ॥ 99

ತತಃ ಸ್ಫುರತ್ಕಾಂತಿಮತೀ ವಿಕಾಸಿಕಮಲೇ ಸ್ಥಿತಾ।
ಶ್ರೀರ್ದೇವೀ ಪಯಸಸ್ತಸ್ಮಾದುದ್ಭೂತಾ ಧೃತಪಂಕಜಾ॥ 100

ತಾಂ ತುಷ್ಟುವುರ್ಮುದಾ ಯುಕ್ತಾಃ ಶ್ರೀಸೂಕ್ತೇನ ಮಹರ್ಷಯಃ।
ವಿಶ್ವಾವಸುಮುಖಾಸ್ತಸ್ಯಾ ಗಂಧರ್ವಾಃ ಪುರತೋ ಜಗುಃ॥ 101

---

ಅಪ್ಸರೆಯರ ಸಮೂಹವು ಉದ್ಭವಿಸಿತು. ಅನಂತರ ಚಂದ್ರನು ಹುಟ್ಟಲಾಗಿ ಅವನನ್ನು ಮಹೇಶ್ವರನು ಸ್ವೀಕರಿಸಿದನು. ಕ್ಷೀರಸಾಗರದಿಂದ ಹುಟ್ಟಿದ ವಿಷವನ್ನು ನಾಗಗಳು* ಸ್ವೀಕರಿಸಿದವು (96-97). ಅನಂತರ ಶ್ವೇತಾಂಬರ ಧಾರಿಯಾದ ಧನ್ವಂತರಿ ದೇವನು ಅಮೃತಪೂರ್ಣವಾದ ಕಮಂಡಲುವನ್ನು ತಾನೇ ಹಿಡಿದುಕೊಂಡು ಆವಿರ್ಭವಿಸಿದನು. ಮೈತ್ರೇಯ, ಆಗ ಮುನಿಗಳಿಂದ ಸಹಿತವಾಗಿ ಎಲ್ಲ ದೈತ್ಯದಾನವರ ಚಿತ್ತವು ಸಮಾಧಾನ ಹೊಂದಿತು. ಎಲ್ಲರೂ ಸಂತುಷ್ಟರಾದರು (98-99). ಅನಂತರ ಅರಳಿದ ಕಮಲದ ಮೇಲೆ ನಿಂತು, ಕೈಯಲ್ಲಿ ಕಮಲವೊಂದನ್ನು ಹಿಡಿದು, ಕಾಂತಿ ಯಿಂದ ಬೆಳಗುತ್ತ ಶ್ರೀದೇವಿಯು ಕ್ಷೀರಸಾಗರ ಜಲದಿಂದ ಆವಿರ್ಭವಿ ಸಿದಳು (100). ಮಹರ್ಷಿಗಳು ಸಂತುಷ್ಟರಾಗಿ ಶ್ರೀಸೂಕ್ತದಿಂದ ಅವಳನ್ನು ಸ್ತುತಿಸಿದರು. ವಿಶ್ವಾವಸು ಮೊದಲಾದ ಗಂಧರ್ವರು ಅವಳೆದುರಿಗೆ ಹಾಡಿ ದರು. ಘೃತಾಚೀ ಮೊದಲಾದ ಅಪ್ಸರ ಸ್ತ್ರೀಯರು ಶ್ರೀದೇವಿಯೆದುರಿಗೆ

---

* ಸಮುದ್ರದಿಂದ ಹುಟ್ಟಿದ ವಿಷವನ್ನು ಶಿವನು ಕುಡಿದನೆಂದೂ, ಕೆಳಗೆ ಬಿದ್ದ ಒಂದಂಶವನ್ನು ಸರ್ಪ, ಚೇಳು, ಕ್ರಿಮಿಕೀಟಾದಿಗಳೂ ವಿಷಲತೆಗಳೂ ಸ್ವೀಕರಿಸಿದವೆಂದು ಪುರಾಣಾಂತರ.

ಘೃತಾಚೀಪ್ರಮುಖಾಸ್ತತ್ರ ನನೃತುಶ್ಚಾಪ್ಸರೋಗಣಾಃ।
ಗಂಗಾದ್ಯಾಃ ಸರಿತಸ್ತೋಯೈಃ ಸ್ನಾನಾರ್ಥಮುಪತಸ್ಥಿರೇ॥ 102

ದಿಗ್ಗಜಾ ಹೇಮಪಾತ್ರಸ್ಥಮಾದಾಯ ವಿಮಲಂ ಜಲಮ್।
ಸ್ನಾಪಯಾಂಚಕ್ರಿರೇ ದೇವೀಂ ಸರ್ವಲೋಕಮಹೇಶ್ವರೀಮ್॥ 103

ಕ್ಷೀರೋದೋ ರೂಪಧೃಕ್ತಸ್ಯೈ ಮಾಲಾಮಮ್ಲಾನಪಂಕಜಾಮ್।
ದದೌ ವಿಭೂಷಣಾನ್ಯಂಗೇ ವಿಶ್ವಕರ್ಮಾ ಚಕಾರ ಹ॥ 104

ದಿವ್ಯಮಾಲ್ಯಾಂಬರಧರಾ ಸ್ನಾತಾ ಭೂಷಣಭೂಷಿತಾ।
ಪಶ್ಯತಾಂ ಸರ್ವದೇವಾನಾಂ ಯಯೌ ವಕ್ಷಃಸ್ಥಲಂ ಹರೇಃ॥ 105

ತಯಾ ವಿಲೋಕಿತಾ ದೇವಾ ಹರಿವಕ್ಷಃಸ್ಥಲಸ್ಥಯಾ।
ಲಕ್ಷ್ಮ್ಯಾ ಮೈತ್ರೇಯ ಸಹಸಾ ಪರಾಂ ನಿರ್ವೃತಿಮಾಗತಾಃ॥ 106

ಉದ್ವೇಗಂ ಪರಮಂ ಜಗ್ಮುರ್ದೈತ್ಯಾ ವಿಷ್ಣುಪರಾಙ್ಮುಖಾಃ।
ತ್ಯಕ್ತಾ ಲಕ್ಷ್ಮ್ಯಾ ಮಹಾಭಾಗ ವಿಪ್ರಚಿತ್ತಿಪುರೋಗಮಾಃ॥ 107

---

ನರ್ತನ ಮಾಡಿದರು. ಗಂಗಾದಿನದಿಗಳು ಸ್ನಾನಾರ್ಥವಾಗಿ ನೀರನ್ನು ತಂದು ಸೇವೆಗೆ ಸಿದ್ಧರಾದರು (101-102). ದಿಗ್ಗಜಗಳು ಸುವರ್ಣಪಾತ್ರೆಯಲ್ಲಿ ಆ ವಿಮಲಜಲವನ್ನು ತುಂಬಿಕೊಂಡು ಸರ್ವಲೋಕಮಹೇಶ್ವರಿಯಾದ ದೇವಿಗೆ ಅಭಿಷೇಕ ಮಾಡಿಸಿದವು. ಕ್ಷೀರಸಾಗರನು ಸ್ವರೂಪದಿಂದ ಪ್ರತ್ಯಕ್ಷನಾಗಿ ಎಂದೂ ಬಾಡದ ಪದ್ಮಮಾಲೆಯನ್ನು ಶ್ರೀದೇವಿಗೆ ಅರ್ಪಿಸಿದನು. ವಿಶ್ವಕರ್ಮನು ಅವಳಿಗೆ ದಿವ್ಯಾಭರಣಗಳನ್ನು ತೊಡಿಸಿದನು (103-104). ಶ್ರೀದೇವಿಯು ಸ್ನಾನಮಾಡಿ ದಿವ್ಯವಸ್ತ್ರಮಾಲ್ಯಗಳನ್ನು ಧರಿಸಿ ಅಲಂಕಾರಗಳಿಂದ ಭೂಷಿತಳಾಗಿ ಎಲ್ಲ ದೇವತೆಗಳೂ ನೋಡುತ್ತಿರುವಾಗಲೇ, ಶ್ರೀಹರಿಯ ವಕ್ಷಸ್ಥಳವನ್ನು ಅಡರಿದಳು! (105). ಅನಂತರ ಮೈತ್ರೇಯ, ಶ್ರೀಹರಿಯ ವಕ್ಷಸ್ಥಳದಲ್ಲಿದ್ದು ಲಕ್ಷ್ಮೀದೇವಿಯು ದೇವತೆಗಳನ್ನೊಮ್ಮೆ ಅವಲೋಕಿಸಿದಳು. ಅಷ್ಟುಮಾತ್ರದಿಂದ ದೇವತೆಗಳಿಗೆ ಪರಮಶಾಂತಿಯು ಲಭಿಸಿತು. ಆಗ ವಿಷ್ಣು ವಿರೋಧಿಗಳಾದ ವಿಪ್ರಚಿತ್ತಿ ಮೊದಲಾದ ದೈತ್ಯರು, ಲಕ್ಷ್ಮಿಯಿಂದ ಪರಿತ್ಯಕ್ತರಾದ ಕಾರಣ, ಬಹಳ ಉದ್ವಿಗ್ನರಾದರು (106-

**ತತಸ್ತೇ ಜಗೃಹುರ್ದೈತ್ಯಾ ಧನ್ವಂತರಿಕರಸ್ಥಿತಮ್।**
**ಕಮಂಡಲುಂ ಮಹಾವೀರ್ಯಾ ಯತ್ರಾಸ್ತೇಽಮೃತಮುತ್ತಮಮ್॥**

**ಮಾಯಯಾ ಮೋಹಯಿತ್ವಾ ತಾನ್ವಿಷ್ಣುಃ ಸ್ತ್ರೀರೂಪಸಂಸ್ಥಿತಃ।**
**ದಾನವೇಭ್ಯಸ್ತದಾದಾಯ ದೇವೇಭ್ಯಃ ಪ್ರದದೌ ಪ್ರಭುಃ॥** 109

**ತತಃ ಪಪುಃ ಸುರಗಣಾಃ ಶಕ್ರಾದ್ಯಾಸ್ತತ್ತದಾಮೃತಮ್।**
**ಉದ್ಯತಾಯುಧನಿಸ್ತ್ರಿಂಶಾ ದೈತ್ಯಾಸ್ತಾಂಶ್ಚ ಸಮಭ್ಯಯುಃ॥** 110

**ಪೀತೇಽಮೃತೇ ಚ ಬಲಿಭಿರ್ದೇವೈರ್ದೈತ್ಯಚಮೂಸ್ತದಾ।**
**ವಧ್ಯಮಾನಾ ದಿಶೋ ಭೇಜೇ ಪಾತಾಲಂ ಚ ವಿವೇಶ ವೈ॥** 111

**ತತೋ ದೇವಾ ಮುದಾ ಯುಕ್ತಾಃ ಶಂಖಚಕ್ರಗದಾಭೃತಮ್।**
**ಪ್ರಣಿಪತ್ಯ ಯಥಾಪೂರ್ವಮಾಶಾಸತ್ತತ್ತ್ರಿಮಿಷ್ಟಪಮ್॥** 112

**ತತಃ ಪ್ರಸನ್ನಭಾಃ ಸೂರ್ಯಃ ಪ್ರಯಯೌ ಸ್ವೇನ ವರ್ತ್ಮನಾ।**
**ಜ್ಯೋತೀಂಷಿ ಚ ಯಥಾಮಾರ್ಗಂ ಪ್ರಯಯುರ್ಮುನಿಸತ್ತಮ॥** 113

---

107). ಅನಂತರ ಮಹಾಶೂರರಾದ ಆ ದೈತ್ಯರು ಉತ್ತಮವಾದ ಅಮೃತ ವಿದ್ದ ಕಮಂಡಲುವನ್ನು ಧನ್ವಂತರಿಯ ಕೈಯಿಂದ ಕಿತ್ತುಕೊಂಡರು. ಆಗ ವಿಷ್ಣುವು ಸ್ತ್ರೀ (ಮೋಹಿನೀ) ರೂಪವನ್ನು ಧರಿಸಿ ಮಾಯೆಯಿಂದ ದೈತ್ಯರನ್ನು ಮೋಹಗೊಳಿಸಿ, ದಾನವರಿಂದ ಅಮೃತವನ್ನು ತೆಗೆದುಕೊಂಡು ಅದನ್ನು ದೇವತೆಗಳಿಗೆ ಕೊಟ್ಟನು (108-109). ಇಂದ್ರಾದಿ ದೇವತೆಗಳು ಅಮೃತ ವನ್ನು ಪಾನಮಾಡಿದರು. ಆಗ (ಕ್ರುದ್ಧರಾದ) ದೈತ್ಯರು ಖಡ್ಗಾದ್ಯಾಯುಧ ಗಳನ್ನು ಹಿರಿದು ದೇವತೆಗಳ ಮೇಲೆ ನುಗ್ಗಿದರು. ಅಮೃತವನ್ನು ಕುಡಿದದ್ದ ರಿಂದ ಬಲಾಢ್ಯರಾದ ದೇವತೆಗಳ ಹೊಡೆತಗಳಿಗೆ ಸಿಕ್ಕಿ ದೈತ್ಯಸೇನೆಯು ದಿಕ್ಕುದಿಕ್ಕಿಗೆ ಓಡುತ್ತಾ ಪಾತಾಳವನ್ನು ಹೊಕ್ಕಿತು (110-111). ಆಮೇಲೆ ದೇವತೆಗಳು ಸಂತುಷ್ಟರಾಗಿ ಶಂಖಚಕ್ರಗದಾಧಾರಿಯಾದ ವಿಷ್ಣುವಿಗೆ ನಮಸ್ಕರಿಸಿ, ಮೊದಲಿನಂತೆ ಸ್ವರ್ಗವನ್ನಾಳತೊಡಗಿದರು. ಆಮೇಲೆ, ಮೈತ್ರೇಯ, ಸೂರ್ಯನು ಪ್ರಖರತೇಜೋಯುಕ್ತನಾಗಿ ತನ್ನ ಮಾರ್ಗದಲ್ಲಿ ಸಂಚರಿಸತೊಡಗಿದನು. ಉಳಿದ ಗ್ರಹನಕ್ಷತ್ರಗಳೂ ತೇಜೋವಂತರಾಗಿ

**ಜಜ್ವಾಲ ಭಗವಾಂಶ್ಚೋಚ್ಚೈಶ್ಚಾರುದೀಪ್ತಿರ್ವಿಭಾವಸುಃ।**
**ಧರ್ಮೇ ಚ ಸರ್ವಭೂತಾನಾಂ ತದಾ ಮತಿರಜಾಯತ॥ 114**

**ತ್ರೈಲೋಕ್ಯಂ ಚ ಶ್ರಿಯಾ ಜುಷ್ಟಂ ಬಭೂವ ದ್ವಿಜಸತ್ತಮ।**
**ಶಕ್ರಶ್ಚ ತ್ರಿದಶಶ್ರೇಷ್ಠಃ ಪುನಃ ಶ್ರೀಮಾನಜಾಯತ॥ 115**

**ಸಿಂಹಾಸನಗತಃ ಶಕ್ರಸ್ಸಂಪ್ರಾಪ್ಯ ತ್ರಿದಿವಂ ಪುನಃ।**
**ದೇವರಾಜ್ಯೇ ಸ್ಥಿತೋ ದೇವೀಂ ತುಷ್ಟಾವಾಬ್ಜಕರಾಂ ತತಃ॥ 116**

*ಇಂದ್ರ ಉವಾಚ:*

**ನಮಸ್ಯೇ ಸರ್ವಲೋಕಾನಾಂ ಜನನೀಮಬ್ಜಸಂಭವಾಮ್।**
**ಶ್ರಿಯಮುನ್ನಿದ್ರಪದ್ಮಾಕ್ಷೀಂ ವಿಷ್ಣುವಕ್ಷಃಸ್ಥಲಸ್ಥಿತಾಮ್॥ 117**

**ಪದ್ಮಾಲಯಾಂ ಪದ್ಮಕರಾಂ ಪದ್ಮಪತ್ರನಿಭೇಕ್ಷಣಾಮ್।**
**ವಂದೇ ಪದ್ಮಮುಖೀಂ ದೇವೀಂ ಪದ್ಮನಾಭಪ್ರಿಯಾಮಹಮ್॥ 118**

---

ತಮ್ಮ ಮಾರ್ಗವನ್ನನುಸರಿಸಿದವು (112-113). ಭಗವಾನ್ ಅಗ್ನಿದೇವನು ತೇಜೋವಂತನಾಗಿ ಜ್ವಲಿಸಲಾರಂಭಿಸಿದನು. ಸಕಲ ಪ್ರಜೆಗಳಿಗೂ ಧರ್ಮದಲ್ಲಿ ಪ್ರವೃತ್ತಿಯುಂಟಾಯಿತು. ತ್ರಿಲೋಕವೂ ಲಕ್ಷ್ಮೀಯುಕ್ತವಾಗಿ ಸಮೃದ್ಧಿಯಿಂದ ವಿರಾಜಿಸಿತು. ದೇವೋತ್ತಮನಾದ ಇಂದ್ರನು ಸಮೃದ್ಧಿಯಿಂದ ಶೋಭಿಸಿದನು (114-115). ಆತನು ತನ್ನ ಸ್ವರ್ಗವನ್ನು ಸೇರಿ ಸಿಂಹಾಸನದಲ್ಲಿ ಮತ್ತೆ ಕುಳಿತನು. ಅನಂತರ ದೇವರಾಜ್ಯವನ್ನು ಪಡೆದ ಇಂದ್ರನು ಪದ್ಮಹಸ್ತಳಾದ ಲಕ್ಷ್ಮೀದೇವಿಯನ್ನು ಈ ರೀತಿಯಲ್ಲಿ ಸ್ತುತಿಸಿದನು (116): ಸರ್ವಲೋಕಗಳ ಜನನಿಯೂ ಪದ್ಮಸಂಭೂತಳೂ ಅರಳಿದ ಪದ್ಮದಂತೆ ನಯನವುಳ್ಳವಳೂ ವಿಷ್ಣುವಕ್ಷಸ್ಥಲಸ್ಥಿತೆಯೂ ಆದ ಶ್ರೀದೇವಿಯನ್ನು ವಂದಿಸುತ್ತೇನೆ. ಪದ್ಮಾಲಯಳೂ ಪದ್ಮಹಸ್ತೆಯೂ ಪದ್ಮದಳೇಕ್ಷಣೆಯೂ ಪದ್ಮಮುಖಿಯೂ ಪದ್ಮನಾಭನ ಪ್ರಿಯೆಯೂ ಆದ ದೇವಿಯನ್ನು ವಂದಿಸುತ್ತೇನೆ (117-118). ಹೇ ದೇವಿ, ನೀನೇ ಸಿದ್ಧಿ ಸ್ವಧಾ ಸ್ವಾಹಾ. ಲೋಕಪಾವನೆಯಾದ ನೀನೇ ಸುಧೆ. ಸಂಧ್ಯಾ ರಾತ್ರಿ ಪ್ರಭಾ ಸಮೃದ್ಧಿ

**ತ್ವಂ ಸಿದ್ಧಿಸ್ತ್ವಂ ಸ್ವಧಾ ಸ್ವಾಹಾ ಸುಧಾ ತ್ವಂ ಲೋಕಪಾವನೀ।**
**ಸಂಧ್ಯಾ ರಾತ್ರಿಃ ಪ್ರಭಾ ಭೂತಿರ್ಮೇಧಾ ಶ್ರದ್ಧಾ ಸರಸ್ವತೀ॥** 119

**ಯಜ್ಞವಿದ್ಯಾ ಮಹಾವಿದ್ಯಾ ಗುಹ್ಯವಿದ್ಯಾ ಚ ಶೋಭನೇ।**
**ಆತ್ಮವಿದ್ಯಾ ಚ ದೇವಿ ತ್ವಂ ವಿಮುಕ್ತಿಫಲದಾಯಿನೀ॥** 120

**ಆನ್ವೀಕ್ಷಿಕೀ ತ್ರಯೀ ವಾರ್ತಾ ದಂಡನೀತಿಸ್ತ್ವಮೇವ ಚ।**
**ಸೌಮ್ಯಾ ಸೌಮ್ಯೈರ್ಜಗದ್ರೂಪೈಸ್ತ್ವಯ್ಯೈತದ್ದೇವಿ ಪೂರಿತಮ್॥** 121

**ಕಾ ತ್ವನ್ಯಾ ತ್ವಾಮೃತೇ ದೇವಿ ಸರ್ವಯಜ್ಞಮಯಂ ವಪುಃ।**
**ಅಧ್ಯಾಸ್ತೇ ದೇವದೇವಸ್ಯ ಯೋಗಿಚಿಂತ್ಯಂ ಗದಾಭೃತಃ॥** 122

**ತ್ವಯಾ ದೇವಿ ಪರಿತ್ಯಕ್ತಂ ಸಕಲಂ ಭುವನತ್ರಯಮ್।**
**ವಿನಷ್ಟಪ್ರಾಯಮಭವತ್ತ್ವಯೇದಾನೀಂ ಸಮೇಧಿತಮ್॥** 123

**ದಾರಾಃ ಪುತ್ರಾಸ್ತಥಾಗಾರಸುಹೃದ್ಧಾನ್ಯಧನಾದಿಕಮ್।**
**ಭವತ್ಯೇತನ್ಮಹಾಭಾಗೇ ನಿತ್ಯಂ ತ್ವದ್ವೀಕ್ಷಣಾನ್ನೃಣಾಮ್॥** 124

---

ಮೇಧಾ ಶ್ರದ್ಧಾ ಸರಸ್ವತಿ ಎಲ್ಲವೂ ನೀನೇ (119). ಹೇ ಶೋಭನೆ, ಬ್ರಹ್ಮವಿದ್ಯಾ ಮಹಾವಿದ್ಯಾ ಗುಹ್ಯವಿದ್ಯೆಗಳು ನೀನೇ. ದೇವಿ, ಮೋಕ್ಷಫಲವನ್ನೀಯುವ ಆತ್ಮವಿದ್ಯೆಯೆಂದರೂ ನೀನೇ. ತರ್ಕಶಾಸ್ತ್ರ, ವೇದತ್ರಯೀ, ಶಿಲ್ಪವಾಣಿಜ್ಯಾದಿ ವಾರ್ತೆ, ದಂಡನೀತಿಗಳು ನೀನೇ. ಶಾಂತವಾದ ಮತ್ತು ಉಗ್ರವಾದ ನಿನ್ನ ರೂಪಗಳಿಂದ, ದೇವಿ, ಈ ಜಗತ್ತನ್ನು ನೀನು ವ್ಯಾಪಿಸಿದ್ದೀಯೆ (120-121). ದೇವಿ, ಗದಾಧರನಾದ ದೇವದೇವನ ಸರ್ವಯಜ್ಞಮಯವೂ ಯೋಗಿಜನಧ್ಯೇಯವೂ ಆದ ಶರೀರವನ್ನು ನೀನಲ್ಲದೆ ಇನ್ನು ಯಾರು ಆಶ್ರಯಿಸಿ ನಿಂತಾರು? ದೇವಿ, ಈ ಭುವನ ತ್ರಯವನ್ನು ನೀನು ಪರಿತ್ಯಜಿಸಿದ್ದರಿಂದ ಇದು ವಿನಷ್ಟವಾದಂತೆ ಆಗಿತ್ತು. ಈಗ ಇದನ್ನು ಮತ್ತೆ ಸಮೃದ್ಧಿಗೊಳಿಸಿದ್ದೀಯೆ (122-123). ಓ ಮಹಾ ಭಾಗ್ಯನಿಧಿಯೆ, ಮಡದಿ ಮಕ್ಕಳೂ ಮನೆ ಮಿತ್ರರೂ ಧನಧಾನ್ಯಗಳೂ ನಿನ್ನ ಕೃಪಾದೃಷ್ಟಿಯಿಂದಲೇ ಜನರಿಗೆ ಲಭಿಸುತ್ತವೆ. ದೇಹಾರೋಗ್ಯ, ಐಶ್ವರ್ಯ, ಶತ್ರುಜಯ, ಸೌಖ್ಯ

**ಶರೀರಾರೋಗ್ಯಮೈಶ್ವರ್ಯಮರಿಪಕ್ಷಕ್ಷಯಃ ಸುಖಮ್।**
**ದೇವಿ ತ್ವದ್‌ದೃಷ್ಟಿದೃಷ್ಟಾನಾಂ ಪುರುಷಾಣಾಂ ನ ದುರ್ಲಭಮ್॥**

**ತ್ವಂ ಮಾತಾ ಸರ್ವಲೋಕಾನಾಂ ದೇವದೇವೋ ಹರಿಃ ಪಿತಾ।**
**ತ್ವಯೈತದ್ವಿಷ್ಣುನಾ ಚಾಂಬ ಜಗದ್‌ವ್ಯಾಪ್ತಂ ಚರಾಚರಮ್॥** 126

**ಮಾ ನಃ ಕೋಶಂ ತಥಾ ಗೋಷ್ಠಂ ಮಾ ಗೃಹಂ ಮಾ ಪರಿಚ್ಛದಮ್।**
**ಮಾ ಶರೀರಂ ಕಲತ್ರಂ ಚ ತ್ಯಜೇಥಾಃ ಸರ್ವಪಾವನಿ॥** 127

**ಮಾ ಪುತ್ರಾನ್ಮಾ ಸುಹೃದ್ವರ್ಗಂ ಮಾ ಪಶೂನ್ಮಾ ವಿಭೂಷಣಮ್।**
**ತ್ಯಜೇಥಾ ಮಮ ದೇವಸ್ಯ ವಿಷ್ಣೋರ್ವಕ್ಷಃಸ್ಥಲಾಲಯೇ॥** 128

**ಸತ್ತ್ವೇನ ಸತ್ಯಶೌಚಾಭ್ಯಾಂ ತಥಾ ಶೀಲಾದಿಭಿರ್ಗುಣೈಃ।**
**ತ್ಯಜ್ಯಂತೇ ತೇ ನರಾಃ ಸದ್ಯಃ ಸಂತ್ಯಕ್ತಾ ಯೇ ತ್ವಯಾಮಲೇ॥** 129

---

—ಇವೆಲ್ಲವೂ, ಹೇ ದೇವಿ, ನಿನ್ನ ದೃಷ್ಟಿಪಾತ್ರರಾದ ಜನರಿಗೆ ಎಂದಿಗೂ ದುರ್ಲಭವಲ್ಲ (124-125). ಸರ್ವಲೋಕಗಳಿಗೂ ನೀನು ತಾಯಿ, ದೇವ ದೇವನಾದ ಶ್ರೀಹರಿಯು ತಂದೆ. ಅಮ್ಮ, ಚರಾಚರಾತ್ಮಕವಾದ ಈ ವಿಶ್ವವನ್ನು ನೀನೂ ವಿಷ್ಣುವೂ ವ್ಯಾಪಿಸಿದ್ದೀರಿ. ಓ ಸರ್ವಪಾವನೆ, ನಮ್ಮ ಕೋಶವನ್ನು ಕೊಟ್ಟಿಗೆಯನ್ನು ಮನೆಯನ್ನು ಭೋಗಸಾಮಗ್ರಿಯನ್ನು ಶರೀರ ವನ್ನು ಮಡದಿಯನ್ನು ಎಂದಿಗೂ ತ್ಯಜಿಸಬೇಡ (126-127). ವಿಷ್ಣುವಿನ ವಕ್ಷಃಸ್ಥಳದಲ್ಲಿ ನೆಲೆಸಿದ ಮಾತೆಯೆ, ನಮ್ಮ ಪುತ್ರರನ್ನು ಮಿತ್ರವರ್ಗವನ್ನು ಪಶುಗಳನ್ನು ಅಲಂಕಾರವಸ್ತುಗಳನ್ನು ಎಂದೂ ತ್ಯಜಿಸಿ ಹೋಗಬೇಡ. (128). ಹೇ ನಿರ್ಮಲೆ, ನೀನು ಯಾರನ್ನು ಪರಿತ್ಯಜಿಸುವೆಯೋ ಆ ಜನರನ್ನು ಸತ್ತ್ವ ಶೌಚಗಳೂ ಶೀಲಾದಿ ಸದ್ಗುಣಗಳೂ ಕೂಡಲೇ ತ್ಯಜಿಸಿ ಬಿಡುತ್ತವೆ! (129). ನೀನು ಅವಲೋಕಿಸಿದರೆ ಸಾಕು, ಒಡನೆಯೇ ನಿರ್ಗುಣರಾದ ಜನರಲ್ಲಿಯೂ ಶೀಲಾದಿ ಸದ್ಗುಣಗಳೂ ಕುಲೀನತೆ

**ತ್ವಯಾ ವಿಲೋಕಿತಾಃ ಸದ್ಯಃ ಶೀಲಾದ್ಯೈರಖಿಲೈರ್ಗುಣೈಃ।**
**ಕುಲೈಶ್ವರ್ಯೈಶ್ಚ ಯುಜ್ಯಂತೇ ಪುರುಷಾ ನಿರ್ಗುಣಾ ಅಪಿ॥ 130**

**ಸ ಶ್ಲಾಘ್ಯಃ ಸ ಗುಣೀ ಧನ್ಯಃ ಸ ಕುಲೀನಃ ಸ ಬುದ್ಧಿಮಾನ್।**
**ಸ ಶೂರಃ ಸ ಚ ವಿಕ್ರಾಂತೋ ಯಸ್ತ್ವಯಾ ದೇವಿ ವೀಕ್ಷಿತಃ॥ 131**

**ಸದ್ಯೋ ವೈಗುಣ್ಯಮಾಯಾಂತಿ ಶೀಲಾದ್ಯಾಃ ಸಕಲಾ ಗುಣಾಃ।**
**ಪರಾಙ್ಮುಖೀ ಜಗದ್ಧಾತ್ರೀ ಯಸ್ಯ ತ್ವಂ ವಿಷ್ಣುವಲ್ಲಭೇ॥ 132**

**ನ ತೇ ವರ್ಣಯಿತುಂ ಶಕ್ತಾ ಗುಣಾಂಜಿಹ್ವಾಪಿ ವೇಧಸಃ।**
**ಪ್ರಸೀದ ದೇವಿ ಪದ್ಮಾಕ್ಷಿ ಮಾಸ್ಮಾಂಸ್ತ್ಯಾಕ್ಷೀಃ ಕದಾಚನ॥ 133**

*ಶ್ರೀ ಪರಾಶರ ಉವಾಚ:*

**ಏವಂ ಶ್ರೀಃ ಸಂಸ್ತುತಾ ಸಮ್ಯಕ್ ಪ್ರಾಹ ದೇವೀ ಶತಕ್ರತುಮ್।**
**ಶೃಣ್ವತಾಂ ಸರ್ವದೇವಾನಾಂ ಸರ್ವಭೂತಸ್ಥಿತಾ ದ್ವಿಜ॥ 134**

---

ಐಶ್ವರ್ಯಗಳೂ ಬಂದು ಸೇರಿಕೊಳ್ಳುತ್ತವೆ. ಹೇ ದೇವಿ, ನಿನ್ನ ದೃಷ್ಟಿಗೆ ಯಾವನು ಪ್ರಾಪ್ತನಾಗುತ್ತಾನೋ ಅವನು ಪ್ರಶಂಸನೀಯ, ಗುಣಶಾಲಿ, ಧನ್ಯ, ಕುಲೀನ, ಬುದ್ಧಿವಂತ, ಆತನೇ ಶೂರ, ಪರಾಕ್ರಮಿ (130-131). ಓ ವಿಷ್ಣುವಲ್ಲಭೆ, ಜಗನ್ಮಾತೆಯಾದ ನೀನು ಯಾರ ವಿಷಯದಲ್ಲಿ ಪರಾಙ್ಮುಖಳಾಗುತ್ತೀಯೋ ಅವರ ಶೀಲಾದಿ ಸಕಲಗುಣಗಳೂ ಅವಗುಣ ಗಳಾಗಿ ಬಿಡುತ್ತವೆ. ನಿನ್ನ ಮಹಿಮೆಗಳನ್ನು ವರ್ಣಿಸಲು ಬ್ರಹ್ಮನ ನಾಲಗೆಯೂ ಕೂಡ ಸಮರ್ಥವಾಗಿಲ್ಲ. ಹೇ ತಾಯಿ, ಪದ್ಮಾಕ್ಷಿ, ಎಂದೆಂದೂ ನಮ್ಮನ್ನು ಕೈ ಬಿಡಬೇಡ" ಎಂದು ಸ್ತುತಿಸಿದನು (132-133). ಹೀಗೆ ಉತ್ತಮವಾಗಿ ಸ್ತುತಳಾಗಿ, ಸರ್ವಭೂತನಿವಾಸಿನಿಯಾದ ಶ್ರೀದೇವಿಯು ಸರ್ವದೇವತೆಗಳೆದುರಿಗೆ ಇಂದ್ರನನ್ನು ಕುರಿತು "ದೇವೇಂದ್ರ, ನಿನ್ನ ಈ ಸ್ತೋತ್ರದಿಂದ ಪರಿತುಷ್ಟಳಾಗಿದ್ದೇನೆ. ನಿನಗೆ

*ಶ್ರೀರುವಾಚ:*

**ಪರಿತುಷ್ಟಾಸ್ಮಿ ದೇವೇಶ ಸ್ತೋತ್ರೇಣಾನೇನ ತೇ ಹರೇ।**
**ವರಂ ವೃಣೀಷ್ವ ಯಸ್ತ್ವಿಷ್ಟೋ ವರದಾಹಂ ತವಾಗತಾ॥** 135

*ಇಂದ್ರ ಉವಾಚ:*

**ವರದಾ ಯದಿ ಮೇ ದೇವಿ ವರಾರ್ಹೋ ಯದಿ ವಾಪ್ಯಹಮ್।**
**ತ್ರೈಲೋಕ್ಯಂ ನ ತ್ವಯಾ ತ್ಯಾಜ್ಯಮೇಷ ಮೇಽಸ್ತು**
**ವರಃ ಪರಃ॥** 136

**ಸ್ತೋತ್ರೇಣ ಯಸ್ತಥೈತೇನ ತ್ವಾಂ ಸ್ತೋಷ್ಯತ್ಯಬ್ಧಿಸಂಭವೇ।**
**ಸ ತ್ವಯಾ ನ ಪರಿತ್ಯಾಜ್ಯೋ ದ್ವಿತೀಯೋಽಸ್ತು**
**ವರೋ ಮಮ॥** 137

*ಶ್ರೀರುವಾಚ:*

**ತ್ರೈಲೋಕ್ಯಂ ತ್ರಿದಶಶ್ರೇಷ್ಠ ನ ಸಂತ್ಯಕ್ಷ್ಯಾಮಿ ವಾಸವ।**
**ದತ್ತೋ ವರೋ ಮಯಾ ಯಸ್ತೇ ಸ್ತೋತ್ರಾರಾಧನತುಷ್ಟಯಾ॥**
138

---

ಬೇಕಾದ ವರವನ್ನು ಕೇಳಿಕೊ. ನಿನಗೆ ವರದಾನ ಮಾಡಲು ಬಂದಿದ್ದೇನೆ" ಎಂದಳು (134-135). ಆಗ ದೇವೇಂದ್ರನು "ದೇವಿ, ನೀನು ವರವನ್ನು ಕೊಡತಕ್ಕವಳಾದರೆ ಅಥವಾ ನಾನು ವರವನ್ನು ಪಡೆಯಲು ಅರ್ಹನಾದರೆ, ಈ ಲೋಕತ್ರಯವನ್ನು ನೀನು ತ್ಯಜಿಸಬಾರದು. ಇದೇ ನನಗೆ ಬೇಕಾದ ವರ. ಅಲ್ಲದೆ ನಾನು ಹೇಳಿದ ಈ ಸ್ತೋತ್ರವನ್ನು ಪಠಿಸಿ ಯಾರು ನಿನ್ನನ್ನು ಸ್ತುತಿಸುತ್ತಾರೋ, ಅವರನ್ನು ನೀನು ತ್ಯಜಿಸಬಾರದು. ಇದು ನನ್ನ ಎರಡನೆಯ ವರವಾಗಲಿ" ಎಂದು ನುಡಿದನು (136-137). ಆಗ ಶ್ರೀದೇವಿಯು "ವಾಸವ, ನಿನ್ನ ಬೇಡಿಕೆಯಂತೆ ಲೋಕತ್ರಯವನ್ನು ಬಿಟ್ಟು ನಾನು ಹೋಗುವುದಿಲ್ಲ. ಈ ವರವನ್ನು ನಿನಗೆ ಕೊಟ್ಟಿದ್ದೇನೆ. ನಿನ್ನ ಸ್ತೋತ್ರ

**ಯಶ್ಚ ಸಾಯಂ ತಥಾ ಪ್ರಾತಃ ಸ್ತೋತ್ರೇಣಾನೇನ ಮಾನವಃ।**
**ಮಾಂ ಸ್ತೋಷ್ಯತಿ ನ ತಸ್ಯಾಹಂ ಭವಿಷ್ಯಾಮಿ ಪರಾಙ್ಮುಖೀ॥ 139**

*ಶ್ರೀಪರಾಶರ ಉವಾಚ:*

**ಏವಂ ದದೌ ವರಂ ದೇವೀ ದೇವರಾಜಾಯ ವೈ ಪುರಾ।**
**ಮೈತ್ರೇಯ ಶ್ರೀರ್ಮಹಾಭಾಗಾ ಸ್ತೋತ್ರಾರಾಧನತೋಷಿತಾ॥ 140**

**ಭೃಗೋಃ ಖ್ಯಾತ್ಯಾಂ ಸಮುತ್ಪನ್ನಾ ಶ್ರೀಃ ಪೂರ್ವಮುದಧೇಃ ಪುನಃ।**
**ದೇವದಾನವಯತ್ನೇನ ಪ್ರಸೂತಾಮೃತಮಂಥನೇ॥ 141**

**ಏವಂ ಯದಾ ಜಗತ್ಸ್ವಾಮೀ ದೇವದೇವೋ ಜನಾರ್ದನಃ।**
**ಅವತಾರಂ ಕರೋತ್ಯೇಷಾ ತದಾ ಶ್ರೀಸ್ತತ್ಸಹಾಯಿನೀ॥ 142**

**ಪುನಶ್ಚ ಪದ್ಮಾದುತ್ಪನ್ನಾ ಆದಿತ್ಯೋಽಭೂದ್ಯದಾ ಹರಿಃ।**
**ಯದಾ ತು ಭಾರ್ಗವೋ ರಾಮಸ್ತದಾಭೂದ್ಧರಣೀ**
**ತ್ವಿಯಮ್॥ 143**

---

ದಿಂದ ಸಂಪ್ರೀತಳಾಗಿದ್ದೇನೆ. ಇನ್ನು ಯಾವ ಮಾನವನು ಈ ಸ್ತೋತ್ರದಿಂದ ನನ್ನನ್ನು ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಸ್ತುತಿಸುವನೋ ಆತನಿಗೆ ನಾನು ಪರಾಙ್ಮುಖಿಯಾಗುವುದಿಲ್ಲ. (ಅವನ ಅಭೀಷ್ಟವನ್ನು ನೆರವೇರಿಸುತ್ತೇನೆ)" ಎಂದು ಹೇಳಿದಳು (138-139). ಮೈತ್ರೇಯ, ಹೀಗೆ ಶ್ರೀದೇವಿಯು ದೇವರಾಜನಿಗೆ ವರವನ್ನು ಕೊಟ್ಟಿದ್ದಳು. ಇಂದ್ರನ ಸ್ತೋತ್ರರೂಪವಾದ ಆರಾಧನೆಯಿಂದ ಆ ಮಹಾಭಾಗ್ಯನಿಧಿಯು ಪ್ರಸನ್ನಳಾಗಿದ್ದಳು (140). ಹಿಂದೆ ಭೃಗುವಿನಿಂದ ಖ್ಯಾತಿಯಲ್ಲಿ ಜನಿಸಿದ ಲಕ್ಷ್ಮೀದೇವಿಯು ದೇವದಾನವರ ಯತ್ನದಿಂದ ನಡೆದ ಅಮೃತಮಂಥನ ಸಮಯದಲ್ಲಿ ಸಮುದ್ರದಿಂದ ಮತ್ತೆ ಆವಿರ್ಭವಿಸಿದಳು. ಜಗನ್ನಾಥನೂ ದೇವದೇವನೂ ಆದ ಜನಾರ್ದನನು ಯಾವಾಗ ಅವತಾರವನ್ನೆತ್ತುವನೋ ಆಗ ಲಕ್ಷ್ಮೀದೇವಿಯು ಅವನನ್ನಗಲದೆ ಜೊತೆಗಿರುವಳು (141-142). ಹರಿಯು

**ರಾಘವತ್ವೇಽಭವತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ।**
**ಅನ್ಯೇಷು ಚಾವತಾರೇಷು ವಿಷ್ಣೋರೇಷಾನಪಾಯಿನೀ॥ 144**

**ದೇವತ್ವೇ ದೇವದೇಹೇಯಂ ಮನುಷ್ಯತ್ವೇ ಚ ಮಾನುಷೀ।**
**ವಿಷ್ಣೋರ್ದೇಹಾನುರೂಪಾಂ ವೈ ಕರೋತ್ಯೇಷಾತ್ಮನಸ್ತನುಮ್॥**

**ಯಶ್ಚೈತಚ್ಛೃಣುಯಾಜ್ಜನ್ಮ ಲಕ್ಷ್ಮ್ಯಾ ಯಶ್ಚ ಪಠೇನ್ನರಃ।**
**ಶ್ರಿಯೋ ನ ವಿಚ್ಯುತಿಸ್ತಸ್ಯ ಗೃಹೇ ಯಾವತ್ಕುಲತ್ರಯಮ್॥ 146**

**ಪಠ್ಯತೇ ಯೇಷು ಚೈವೇಯಂ ಗೃಹೇಷು ಶ್ರೀಸ್ತುತಿರ್ಮುನೇ।**
**ಅಲಕ್ಷ್ಮೀಃ ಕಲಹಾಧಾರ ನ ತೇಷ್ವಾಸ್ತೇ ಕದಾಚನ॥ 147**

---

ಆದಿತ್ಯನಾದಾಗ* ಇವಳು ಪದ್ಮದಿಂದ ಉದಿಸಿದಳು(—ಪದ್ಮಾ ಎನಿಸಿದಳು). ಆತನು ಯಾವಾಗ ಭೃಗುವಂಶದಲ್ಲಿ ಪರಶುರಾಮನಾಗಿದ್ದನೋ ಆಗ ಲಕ್ಷ್ಮಿಯು ಧರಣಿಯಾಗಿದ್ದಳು. ಆತನು ಶ್ರೀರಾಮನಾದಾಗ ಇವಳು ಸೀತೆಯಾಗಿಯೂ, ಕೃಷ್ಣನಾದಾಗ ರುಕ್ಮಿಣಿಯಾಗಿಯೂ ಅವತರಿಸಿದ್ದಾಳೆ. ಹೀಗೆ ಇತರ ಅವತಾರಗಳಲ್ಲಿಯೂ ಶ್ರೀದೇವಿಯು ವಿಷ್ಣುವಿನ ಜೊತೆಗೆ ತಪ್ಪದೆ ಇದ್ದಳು (143-144). ಶ್ರೀಹರಿಯು ದೇವರೂಪನಾಗಿದ್ದಾಗ ಶ್ರೀಯು ದಿವ್ಯದೇಹಧಾರಿಣಿಯೂ ಮನುಷ್ಯನಾದಾಗ ಮನುಷ್ಯದೇಹ ಧಾರಿಣಿಯೂ ಆಗಿರುತ್ತಾಳೆ. ವಿಷ್ಣುವಿನ ದೇಹಕ್ಕೆ ಅನುರೂಪವಾಗಿ ಇವಳು ತನ್ನ ದೇಹವನ್ನು ಮಾರ್ಪಡಿಸಿಕೊಳ್ಳುತ್ತಾಳೆ (145). ಯಾವಾತನು ಲಕ್ಷ್ಮಿಯ ಈ ಜನ್ಮಪ್ರಕಾರವನ್ನು ಕೇಳುತ್ತಾನೋ ಯಾವಾತನು ಓದುತ್ತಾನೋ ಆತನ ಗೃಹದಲ್ಲಿ ಮೂರು ತಲೆ ಕಳೆಯುವವರೆಗೂ ಲಕ್ಷ್ಮಿಯ ಸ್ಥಿತಿಗೆ ಚ್ಯುತಿಯಿಲ್ಲ. ಮೈತ್ರೇಯ, ಯಾರ ಮನೆಗಳಲ್ಲಿ ಈ ಲಕ್ಷ್ಮೀಸ್ತುತಿಯು ಪಠಿತವಾಗುತ್ತದೆಯೋ ಅಲ್ಲಿ ಕಲಹನಿಮಿತ್ತವಾದ ಅಲಕ್ಷ್ಮಿಯು ಎಂದಿಗೂ ಇರುವುದಿಲ್ಲ (146-147). ಮೈತ್ರೇಯ, ನೀನೇನು ಪ್ರಶ್ನೆಮಾಡಿದೆಯೋ

---

* ಆದಿತ್ಯನೆಂದರೆ ಅದಿತಿಯ ಪುತ್ರನಾದ ವಾಮನ ಎಂದೂ ಹೇಳಬಹುದು.

**ಏತತ್ತೇ ಕಥಿತಂ ಬ್ರಹ್ಮನ್ ಯನ್ಮಾಂ ತ್ವಂ ಪರಿಪೃಚ್ಛಸಿ।**
**ಕ್ಷೀರಾಬ್ಧೌ ಶ್ರೀರ್ಯಥಾ ಜಾತಾ ಪೂರ್ವಂ ಭೃಗುಸುತಾ**
**ಸತೀ॥** 148

**ಇತಿ ಸಕಲವಿಭೂತ್ಯವಾಪ್ತಿ ಹೇತುಃ।**
**ಸ್ತುತಿರಿಯಮಿಂದ್ರಮುಖೋದ್ಗತಾ ಹಿ ಲಕ್ಷ್ಮ್ಯಾಃ।**
**ಅನುದಿನಮಿಹ ಪಠ್ಯತೇ ನೃಭಿರ್ಯೈ-**
**ರ್ವಸತಿ ನ ತೇಷು ಕದಾಚಿದಪ್ಯಲಕ್ಷ್ಮೀಃ॥** 149

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ನವಮೋಽಧ್ಯಾಯಃ

---

ಆದಕ್ಕೆ ಉತ್ತರವಾಗಿ, ಲಕ್ಷ್ಮಿಯು ಭೃಗುಪುತ್ರಿಯಾಗಿದ್ದರೂ ಕ್ಷೀರಸಾಗರದಲ್ಲಿ ಹೇಗೆ ಹುಟ್ಟಿದಳೆಂಬುದನ್ನು ಹೇಳಿದ್ದೇನೆ (148). ಸಕಲ ಸಮೃದ್ಧಿಗಳ ಪ್ರಾಪ್ತಿಗೆ ಕಾರಣವಾದ ಈ ಲಕ್ಷ್ಮೀಸ್ತುತಿಯು ಇಂದ್ರನ ಮುಖದಿಂದ ಹೊರ ಬಂದಿದೆ. ಯಾರು ಇದನ್ನು ಪ್ರತಿದಿನವೂ ಪಠಿಸುತ್ತಾರೋ ಅವರಲ್ಲಿ ಎಂದೆಂದಿಗೂ ಅಲಕ್ಷ್ಮಿಯು (ದಾರಿದ್ರ್ಯವು) ಇರುವುದಿಲ್ಲ (149).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಒಂಬತ್ತನೆಯ ಅಧ್ಯಾಯ ಮುಗಿಯಿತು.



## ದಶಮೋಽಧ್ಯಾಯಃ

*ಶ್ರೀ ಮೈತ್ರೇಯ ಉವಾಚ:*

**ಕಥಿತಂ ಮೇ ತ್ವಯಾ ಸರ್ವಂ ಯತ್ಪೃಷ್ಟೋಽಸಿ ಮಯಾ ಮುನೇ।**
**ಭೃಗುಸರ್ಗಾತ್ಪ್ರಭೃತ್ಯೇಷ ಸರ್ಗೋ ಮೇ ಕಥ್ಯತಾಂ ಪುನಃ॥ 1**

*ಶ್ರೀ ಪರಾಶರ ಉವಾಚ:*

**ಭೃಗೋಃ ಖ್ಯಾತ್ಯಾಂ ಸಮುತ್ಪನ್ನಾ ಲಕ್ಷ್ಮೀರ್ವಿಷ್ಣುಪರಿಗ್ರಹಃ।**
**ತಥಾ ಧಾತೃವಿಧಾತಾರೌ ಖ್ಯಾತ್ಯಾಂ ಜಾತೌ ಸುತೌ ಭೃಗೋಃ॥ 2**

**ಆಯತಿರ್ನಿಯತಿಶ್ಚೈವ ಮೇರೋಃ ಕನ್ಯೇ ಮಹಾತ್ಮನಃ।**
**ಭಾರ್ಯೇ ಧಾತೃವಿದಾತ್ರೋಸ್ತೇ ತಯೋರ್ಜಾತೌ ಸುತಾವುಭೌ॥ 3**

**ಪ್ರಾಣಶ್ಚೈವ ಮೃಕಂಡುಶ್ಚ ಮಾರ್ಕಂಡೇಯೋ ಮೃಕಂಡುತಃ।**
**ತತೋ ವೇದಶಿರಾ ಜಜ್ಞೇ ಪ್ರಾಣಸ್ಯಾಪಿ ಸುತಂ ಶೃಣು॥ 4**

---

## ಅಧ್ಯಾಯ 10

ಭೃಗು, ಅಗ್ನಿಗಳ ಮತ್ತು ಅಗ್ನಿಷ್ವಾತ್ತ—ಮೊದಲಾದ ಪಿತೃಗಳ ಸಂತತಿಯ ವರ್ಣನೆ

ಮೈತ್ರೇಯರು "ಮುನಿಗಳೆ, ನಾನು ಕೇಳಿದುದನ್ನೆಲ್ಲ ವಿವರಿಸಿದ್ದೀರಿ. ಭೃಗುವಿನ ಸಂತಾನದಿಂದ ಹಿಡಿದು ಮುಂದಾದ ಈ ಸೃಷ್ಟಿಯ ವಿವರವನ್ನು ತಿಳಿಸಿರಿ" ಎಂದರು (1). ಆಗ ಪರಾಶರರು ಹೇಳಿದರು: ಭೃಗುವಿಗೆ ಖ್ಯಾತಿಯಲ್ಲಿ ವಿಷ್ಣುಪತ್ನಿಯಾದ ಲಕ್ಷ್ಮಿ ಉತ್ಪನ್ನಳಾದಳು. ಹಾಗೆಯೇ ಧಾತೃ ವಿಧಾತೃ ಎಂಬವರು ಭೃಗುವಿನಿಂದ ಖ್ಯಾತಿಯಲ್ಲಿ ಹುಟ್ಟಿದ ಮಕ್ಕಳು. ಮಹಾತ್ಮನಾದ ಮೇರುವಿಗೆ ಪುತ್ರಿಯರಾದ ಆಯತಿ, ನಿಯತಿ—ಎಂಬುವರು ಕ್ರಮವಾಗಿ ಧಾತೃ ವಿಧಾತೃಗಳ ಮಡದಿಯರು (2-3). ಅವರಲ್ಲಿ ಧಾತೃವಿಗೆ ಪ್ರಾಣನೆಂದೂ ವಿಧಾತೃವಿಗೆ ಮೃಕಂಡು ಎಂದೂ ಹೆಸರುಳ್ಳ ಪುತ್ರರು ಜನಿಸಿದರು. ಮೃಕಂಡುವಿನಿಂದ ಮಾರ್ಕಂಡೇಯನೂ ಅವನಿಂದ ವೇದಶಿರನೂ ಹುಟ್ಟಿದರು. ಪ್ರಾಣನ ಸಂತಾನದ ವರ್ಣನೆಯನ್ನು ಕೇಳು

ಪ್ರಾಣಸ್ಯ ದ್ಯುತಿಮಾನ್ಪುತ್ರೋ ರಾಜವಾಂಶ್ಚ ತತೋಽಭವತ್ ।
ತತೋ ವಂಶೋ ಮಹಾಭಾಗ ವಿಸ್ತರಂ ಭಾರ್ಗವೋ ಗತಃ ॥ 5

ಪತ್ನೀ ಮರೀಚೇಃ ಸಂಭೂತಿಃ ಪೌರ್ಣಮಾಸಮಸೂಯತ ।
ವಿರಜಾಃ ಪರ್ವತಶ್ಚೈವ ತಸ್ಯ ಪುತ್ರೌ ಮಹಾತ್ಮನಃ ॥ 6

ವಂಶಸಂಕೀರ್ತನೇ ಪುತ್ರಾನ್ ವದಿಷ್ಯೇಽಹಂ ತತೋ ದ್ವಿಜ ।
ಸ್ಮೃತಿಶ್ಚಾಂಗಿರಸಃ ಪತ್ನೀ ಪ್ರಸೂತಾ ಕನ್ಯಕಾಸ್ತಥಾ ॥ 7

ಸಿನೀವಾಲೀ ಕೂಹೂಶ್ಚೈವ ರಾಕಾ ಚಾನುಮತಿಸ್ತಥಾ ।
ಅನಸೂಯಾ ತಥೈವಾತ್ರೇರ್ಜಜ್ಞೇ ನಿಷ್ಕಲ್ಮಷಾನ್ ಸುತಾನ್ ॥ 8

ಸೋಮಂ ದುರ್ವಾಸಸಂ ಚೈವ ದತ್ತಾತ್ರೇಯಂ ಚ ಯೋಗಿನಮ್ ।
ಪ್ರೀತ್ಯಾಂ ಪುಲಸ್ತ್ಯಭಾರ್ಯಾಯಾಂ ದತ್ತೋಲಿಸ್ತತ್ಸುತೋಽಭವತ್ ॥

ಪೂರ್ವಜನ್ಮನಿ ಯೋಽಗಸ್ತ್ಯಃ ಸ್ಮೃತಃ ಸ್ವಾಯಂಭುವೇಽಂತರೇ ।
ಕರ್ದಮಶ್ಚೋರ್ವರೀಯಾಂಶ್ಚ ಸಹಿಷ್ಣುಶ್ಚ ಸುತಾಸ್ತ್ರಯಃ ॥ 10

---

(4). ಪ್ರಾಣನಿಗೆ ದ್ಯುತಿಮಾನ್ ಎಂಬವನೂ ಅವನಿಗೆ ರಾಜವಾನ್ ಎಂಬವನೂ ಪುತ್ರರಾದರು. ಆಮೇಲೆ ರಾಜವಂತನಿಂದ ಭೃಗುವಂಶವು ತುಂಬ ಬೆಳೆಯಿತು. ಮರೀಚಿಯ ಪತ್ನಿಯಾದ ಸಂಭೂತಿಯು ಪೌರ್ಣಮಾಸನನ್ನು ಹಡೆದಳು. ಆ ಮಹಾತ್ಮನಿಗೆ ವಿರಜ, ಪರ್ವತ ಎಂಬ ಇಬ್ಬರು ಪುತ್ರರು ಜನಿಸಿದರು (5-6). ಮೈತ್ರೇಯ, ವಂಶಸಂಕೀರ್ತನೆಯೆಂದರೆ ಅವರವರ ಮಕ್ಕಳ ಹೆಸರುಗಳನ್ನು ಮಾತ್ರ ಹೇಳುತ್ತ ಹೋಗುತ್ತೇನೆ. ಅಂಗಿರಸನ ಪತ್ನಿಯಾದ ಸ್ಮೃತಿಯು ಸಿನೀವಾಲೀ, ಕುಹೂ, ರಾಕಾ, ಅನುಮತಿ—ಎಂಬ ಕನ್ಯೆಯರನ್ನು ಪ್ರಸವಿಸಿದಳು. ಹಾಗೆಯೇ ಅನಸೂಯೆಯು ಅತ್ರಿಯಿಂದ ನಿರ್ಮಲರಾದ ಪುತ್ರರನ್ನು ಪಡೆದಳು (7-8). ಅವರು ಯಾರೆಂದರೆ: ಚಂದ್ರ, ದುರ್ವಾಸ ಮತ್ತು ಯೋಗಿಯಾದ ದತ್ತಾತ್ರೇಯ. ಪುಲಸ್ತ್ಯನ ಭಾರ್ಯೆಯಾದ ಪ್ರೀತಿಯಲ್ಲಿ ದತ್ತೋಲಿಯೆಂಬ ಪುತ್ರನು ಹುಟ್ಟಿದನು. ಅವನು ಪೂರ್ವಜನ್ಮದ ಸ್ವಾಯಂಭುವಮನ್ವಂತರದಲ್ಲಿ ಅಗಸ್ತ್ಯನೆಂದು ಸ್ಮೃತನಾಗಿದ್ದನು. ಪುಲಹಪ್ರಜಾಪತಿಯ ಪತ್ನಿ

**ಕ್ಷಮಾ ತು ಸುಷುವೇ ಭಾರ್ಯಾ ಪುಲಹಸ್ಯ ಪ್ರಜಾಪತೇಃ।**
**ಕ್ರತೋಶ್ಚ ಸಂತತಿರ್ಭಾರ್ಯಾ ವಾಲಖಿಲ್ಯಾನಸೂಯತ॥** 11

**ಷಷ್ಟಿಪುತ್ರಸಹಸ್ರಾಣಿ ಮುನೀನಾಮೂರ್ಧ್ವರೇತಸಾಮ್।**
**ಅಂಗುಷ್ಠಪರ್ವಮಾತ್ರಾಣಾಂ ಜ್ವಲಾದ್ಭಾಸ್ಕರತೇಜಸಾಮ್॥** 12

**ಊರ್ಜಾಯಾಂ ತು ವಸಿಷ್ಠಸ್ಯ ಸಪ್ತಾಜಾಯಂತ ವೈ ಸುತಾಃ।**
**ರಜೋ ಗೋತ್ರೋರ್ಧ್ವಬಾಹುಶ್ಚ ಸವನಶ್ಚಾನಘಸ್ತಥಾ॥** 13

**ಸುತಪಾಃ ಶುಕ್ರ ಇತ್ಯೇತೇ ಸರ್ವೇ ಸಪ್ತರ್ಷಯೋಽಮಲಾಃ।**
**ಯೋಽಸಾವಗ್ನ್ಯಭಿಮಾನೀ ಸ್ಯಾದ್ ಬ್ರಹ್ಮಣಸ್ತನಯೋಽಗ್ರಜಃ॥** 14

**ತಸ್ಮಾತ್ಸ್ವಾಹಾ ಸುತಾಁಲ್ಲೇಭೇ ತ್ರೀನುದಾರೌಜಸೋ ದ್ವಿಜ।**
**ಪಾವಕಂ ಪವಮಾನಂ ತು ಶುಚಿಂ ಚಾಪಿ ಜಲಾಶಿನಮ್॥** 15

**ತೇಷಾಂ ತು ಸಂತತಾವನ್ಯೇ ಚತ್ವಾರಿಂಶಚ್ಚ ಪಂಚ ಚ।**
**ಕಥ್ಯಂತೇ ವಹ್ನಯಶ್ಚೈತೇ ಪಿತಾ ಪುತ್ರತ್ರಯಂ ಚ ಯತ್॥** 16

---

ಕ್ಷಮೆಯು ಕರ್ದಮ, ಉರ್ವರೀಯ, ಸಹಿಷ್ಣು—ಎಂಬ ಮೂವರು ಪುತ್ರರನ್ನು ಪಡೆದಳು. ಕ್ರತುವಿನ ಹೆಂಡತಿಯಾದ ಸಂತತಿಯು ವಾಲಖಿಲ್ಯರೆಂಬ ಪುತ್ರರನ್ನು ಹಡೆದಳು (9-11). ಅವರ ಸಂಖ್ಯೆ ಅರವತ್ತು ಸಾವಿರ, ಅವರೆಲ್ಲರೂ ಊರ್ಧ್ವರೇತಸ್ಕರಾದ ಮುನಿಗಳೂ ಅಂಗುಷ್ಠಮಾತ್ರದಷ್ಟು ಶರೀರ ಉಳ್ಳವರೂ ಸೂರ್ಯನಂತೆ ತೇಜಸ್ವಿಗಳೂ ಆಗಿದ್ದರು. ವಸಿಷ್ಠನಿಗೆ ಊರ್ಜೆಯಲ್ಲಿ ರಜ, ಗೋತ್ರ, ಊರ್ಧ್ವಬಾಹು, ಸವನ, ಅನಘ, ಸುತಪ, ಶುಕ್ರ—ಎಂಬ ಏಳು ಮಂದಿ ಪುತ್ರರು ಜನಿಸಿದರು (12-13). ನಿರ್ಮಲ ಸ್ವಭಾವದ ಇವರೆಲ್ಲರೂ ಮೂರನೆಯ ಮನ್ವಂತರದಲ್ಲಿ ಸಪ್ತರ್ಷಿಗಳಾದರು. ಮೈತ್ರೇಯ, ಬ್ರಹ್ಮನಿಗೆ ಅಗ್ನ್ಯಭಿಮಾನಿಯಾದ ಯಾವ ಜ್ಯೇಷ್ಠ ಪುತ್ರನಿದ್ದಾನೋ ಆತನಿಂದ ಸ್ವಾಹಾದೇವಿಯು ಪಾವಕ, ಪವಮಾನ, ಜಲಭಕ್ಷಕನಾದ ಶುಚಿ—ಎಂಬ ಮೂವರು ಓಜಸ್ವಿಗಳಾದ ಪುತ್ರರನ್ನು ಪ್ರಸವಿಸಿದಳು (14-15). ಈ ಮೂರು ಅಗ್ನಿಗಳ ಸಂತತಿಯಲ್ಲಿ (ಒಬ್ಬೊಬ್ಬರಿಗೆ ಹದಿನೈದರಂತೆ) ನಲವತ್ತೈದು ಅಗ್ನಿಗಳು ಉದಿಸಿದವು.

**ಏವಮೇಕೋನಪಂಚಾಶದ್ವಹ್ನಯಃ ಪರಿಕೀರ್ತಿತಾಃ।**
**ಪಿತರೋ ಬ್ರಹ್ಮಣಾ ಸೃಷ್ಟಾ ವ್ಯಾಖ್ಯಾತಾ ಯೇ ಮಯಾ ದ್ವಿಜ॥**

**ಅಗ್ನಿಷ್ವಾತ್ತಾ ಬರ್ಹಿಷದೋಽನಗ್ನಯಃ ಸಾಗ್ನಯಶ್ಚ ಯೇ।**
**ತೇಭ್ಯಃ ಸ್ವಧಾ ಸುತೇ ಜಜ್ಞೇ ಮೇನಾಂ ವೈ ಧಾರಿಣೀಂ ತಥಾ॥**

**ತೇ ಉಭೇ ಬ್ರಹ್ಮವಾದಿನ್ಯೌ ಯೋಗಿನ್ಯಾವಪ್ಯುಭೇ ದ್ವಿಜ।**
**ಉತ್ತಮಜ್ಞಾನಸಂಪನ್ನೇ ಸರ್ವೈಃ ಸಮುದಿತೈರ್ಗುಣೈಃ॥** 19

**ಇತ್ಯೇಷಾ ದಕ್ಷಕನ್ಯಾನಾಂ ಕಥಿತಾಪತ್ಯಸಂತತಿಃ।**
**ಶ್ರದ್ಧಾವಾನ್ ಸಂಸ್ಮರನ್ನೇತಾಮನಪತ್ಯೋ ನ ಜಾಯತೇ॥** 20

ಇತಿ ಶ್ರೀವಿಷ್ಣುಪುರಾಣೇ ಪ್ರಥಮಾಂಶೇ ದಶಮೋಽಧ್ಯಾಯಃ

---

ಹೀಗೆ ಮೂಲಭೂತ ತಂದೆಯಾದ ಅಗ್ನಿ, ಅವನ ಮಕ್ಕಳು ಮೂವರು, ಅವರ ಸಂತಾನ ನಲವತ್ತೈದು—ಹೀಗೆ ಒಟ್ಟಾಗಿ ನಲವತ್ತೊಂಬತ್ತು ಅಗ್ನಿಗಳೆಂದು ಪರಿಗಣಿಸಲ್ಪಟ್ಟಿದ್ದಾರೆ. ಬ್ರಹ್ಮನಿಂದ ಸೃಷ್ಟರಾದ ಪಿತೃಗಳ ವಿಷಯವನ್ನು ಹಿಂದೆ ಹೇಳಿದ್ದೇನೆ (16-17). ಅವರಲ್ಲಿ ಅಗ್ನಿಷ್ವಾತ್ತಾ ಮೊದಲಾದವರು ನಿರಗ್ನಿಗಳು. ಬರ್ಹಿಷದರೇ ಮೊದಲಾದವರು ಸಾಗ್ನಿಗಳು. ಆ ಪಿತೃದೇವತೆಗಳಿಂದ ಸ್ವಧೆಯು ಮೇನಾ, ಧಾರಿಣೀ—ಎಂಬ ಇಬ್ಬರು ಪುತ್ರಿಯರನ್ನು ಪಡೆದಳು. ಈ ಇಬ್ಬರೂ, ಮೈತ್ರೇಯ, ಉತ್ತಮ ಜ್ಞಾನಸಂಪನ್ನರೂ ಗುಣಾಢ್ಯರೂ ಆಗಿದ್ದರಲ್ಲದೆ ಬ್ರಹ್ಮವಾದಿನಿಯರೂ ಯೋಗಿನಿಯರೂ ಆಗಿದ್ದರು (18-19). ಈ ಪ್ರಕಾರ ದಕ್ಷಕನ್ಯೆಯರ ಸಂತಾನಪರಂಪರೆಯನ್ನು ಹೇಳಿದ್ದಾಯಿತು. ಯಾವಾತನು ಶ್ರದ್ಧಾವಂತನಾಗಿ ಈ ವೃತ್ತಾಂತವನ್ನು ಸ್ಮರಿಸಿಕೊಳ್ಳುತ್ತಿರುವನೋ ಆತನು ಸಂತತಿಹೀನನಾಗುವುದಿಲ್ಲ (20).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹತ್ತನೆಯ ಅಧ್ಯಾಯ ಮುಗಿಯಿತು.



## ಏಕಾದಶೋಽಧ್ಯಾಯಃ

*ಶ್ರೀ ಪರಾಶರ ಉವಾಚ:*

**ಪ್ರಿಯವ್ರತೋತ್ತಾನಪಾದೌ ಮನೋಃ ಸ್ವಾಯಂಭುವಸ್ಯ ತು।**
**ದ್ವೌ ಪುತ್ರೌ ತು ಮಹಾವೀರ್ಯೌ ಧರ್ಮಜ್ಞೌ ಕಥಿತೌ ತವ॥ 1**

**ತಯೋರುತ್ತಾನಪಾದಸ್ಯ ಸುರುಚ್ಯಾಮುತ್ತಮಃ ಸುತಃ।**
**ಅಭೀಷ್ಟಾಯಾಮಭೂದ್ಬ್ರಹ್ಮನ್ ಪಿತುರತ್ಯಂತವಲ್ಲಭಃ॥ 2**

**ಸುನೀತಿರ್ನಾಮ ಯಾ ರಾಜ್ಞಸ್ತಸ್ಯಾಸೀನ್ಮಹಿಷೀ ದ್ವಿಜ।**
**ಸ ನಾತಿಪ್ರೀತಿಮಾಂಸ್ತಸ್ಯಾಮಭೂದ್ಯಸ್ಯಾ ಧ್ರುವಃ ಸುತಃ॥ 3**

**ರಾಜಾಸನಸ್ಥಿತಸ್ಯಾಂಕಂ ಪಿತುರ್ಭ್ರಾತರಮಾಶ್ರಿತಮ್।**
**ದೃಷ್ಟ್ವೋತ್ತಮಂ ಧ್ರುವಶ್ಚಕ್ರೇ ತಮಾರೋಢುಂ ಮನೋರಥಮ್॥ 4**

---

## ಅಧ್ಯಾಯ 11

ಧ್ರುವನು ಸುರುಚಿಯ ಮಾತಿನಿಂದ ನೊಂದು ತಪಸ್ಸಿಗಾಗಿ ವನಕ್ಕೆ ಹೋಗುವುದು.
ದಾರಿಯಲ್ಲಿ ಮರೀಚಿ ಮೊದಲಾದ ಋಷಿಗಳ ದರ್ಶನ.

ಪರಾಶರ ಮುನಿಗಳು ಹೇಳಿದರು: ಮೈತ್ರೇಯ, ಸ್ವಾಯಂಭುವ ಮನುವಿಗೆ ಪ್ರಿಯವ್ರತ, ಉತ್ತಾನಪಾದ—ಎಂಬ ಇಬ್ಬರು ಪುತ್ರರೆಂದೂ ಅವರು ಮಹಾವೀರರೂ ಧರ್ಮಜ್ಞರೂ ಆಗಿದ್ದರೆಂದೂ ಹಿಂದೆ ಹೇಳಿದ್ದೇನೆ (1). ಅವರಲ್ಲಿ ಉತ್ತಾನಪಾದನಿಗೆ ಸುರುಚಿಯೆಂಬ ಪ್ರಿಯಳಾದ ಪತ್ನಿಯಲ್ಲಿ ಉತ್ತಮ ಎಂಬ ಮಗನು ಹುಟ್ಟಿದನು. ಅವನು ತಂದೆಗೆ ಅತ್ಯಂತ ಪ್ರೀತಿ ಪಾತ್ರನಾಗಿದ್ದನು. ಉತ್ತಾನಪಾದರಾಜನ ಪಟ್ಟದ ರಾಣಿಯಾದ ಸುನೀತಿಗೆ ಧ್ರುವನೆಂಬ ಮಗನಿದ್ದನು. ರಾಜನಿಗೆ ಸುನೀತಿಯಲ್ಲಿ ಅಷ್ಟೇನೂ ಪ್ರೀತಿಯಿರಲಿಲ್ಲ. (2-3). ಒಂದು ದಿನ ಧ್ರುವನು ಸಿಂಹಾಸನದಲ್ಲಿ ಕುಳಿತಿದ್ದ ತನ್ನ ತಂದೆಯ ತೊಡೆಯ ಮೇಲೆ ಸೋದರನಾದ ಉತ್ತಮನು ಕುಳಿತಿರುವು

**ಪ್ರತ್ಯಕ್ಷಂ ಭೂಪತಿಸ್ತಸ್ಯಾಃ ಸುರುಚ್ಯಾ ನಾಭ್ಯನಂದತ।**
**ಪ್ರಣಯೇನಾಗತಂ ಪುತ್ರಮುತ್ಸಂಗಾರೋಹಣೋತ್ಸುಕಮ್॥** 5

**ಸಪತ್ನೀತನಯಂ ದೃಷ್ಟ್ವಾ ತಮಂಕಾರೋಹಣೋತ್ಸುಕಮ್।**
**ಸ್ವಪುತ್ರಂ ಚ ತಥಾರೂಢಂ ಸುರುಚಿರ್ವಾಕ್ಯಮಬ್ರವೀತ್॥** 6

**ಕ್ರಿಯತೇ ಕಿಂ ವೃಥಾ ವತ್ಸ ಮಹಾನೇಷಮನೋರಥಃ।**
**ಅನ್ಯಸ್ತ್ರೀಗರ್ಭಜಾತೇನ ಹ್ಯಸಂಭೂಯ ಮಮೋದರೇ॥** 7

**ಉತ್ತಮೋತ್ತಮಮಪ್ರಾಪ್ಯಮವಿವೇಕೋ ಹಿ ವಾಂಛಸಿ।**
**ಸತ್ಯಂ ಸುತಸ್ತ್ವಮಪ್ಯಸ್ಯ ಕಿಂತು ನ ತ್ವಂ ಮಯಾ ಧೃತಃ॥** 8

**ಏತದ್ರಾಜಾಸನಂ ಸರ್ವಭೂಭೃತ್ಸಂಶ್ರಯಕೇತನಮ್।**
**ಯೋಗ್ಯಂ ಮಮೈವ ಪುತ್ರಸ್ಯ ಕಿಮಾತ್ಮಾ ಕ್ಲಿಶ್ಯತೇ ತ್ವಯಾ॥** 9

---

ದನ್ನು ನೋಡಿ, ತಾನೂ ತಂದೆಯ ತೊಡೆಯನ್ನೇರಬೇಕೆಂದು ಬಯಸಿದನು (4). ಎದುರಿಗೆ ಸುರುಚಿಯು ಇದ್ದುದರಿಂದ, ತನ್ನ ತೊಡೆಯನ್ನು ಪ್ರೀತಿಯಿಂದೇರಲು ಬಂದ ಮಗನನ್ನು ದೊರೆಯು ಮೆಚ್ಚಿಕೊಳ್ಳಲಿಲ್ಲ. ಸವತಿಯ ಮಗನು ರಾಜನ ತೊಡೆಯನ್ನೇರಲು ಉತ್ಸಾಹ ಪಡುತ್ತಿದ್ದುದನ್ನೂ ತನ್ನ ಮಗನಾದ ಉತ್ತಮನು ತಂದೆಯ ತೊಡೆಯ ಮೇಲೆ ಕುಳಿತಿರುವುದನ್ನೂ ನೋಡಿ ಸುರುಚಿಯು ಹೀಗೆಂದಳು (5-6): "ಮಗು, ವ್ಯರ್ಥವಾಗಿ ಏಕೆ ಇಷ್ಟು ದೊಡ್ಡ ಆಸೆಯನ್ನು ಇಟ್ಟುಕೊಂಡಿದ್ದೀಯೆ? (ನನ್ನ ಹೊಟ್ಟೆಯಲ್ಲಿ ಹುಟ್ಟದೆ) ಬೇರೊಬ್ಬ ಸ್ತ್ರೀಯ ಗರ್ಭದಲ್ಲಿ ಜನಿಸಿದ ನಿನಗೆ ಇದು ನಿಲುಕ ತಕ್ಕದ್ದಲ್ಲ. ತನಗೆ ದೊರೆಯದ ಉತ್ತಮೋತ್ತಮ ವಸ್ತುವನ್ನು ಅವಿವೇಕಿಯು ಮಾತ್ರ ಬಯಸುತ್ತಾನೆ. ನೀನೂ ಸಹ ಈ ರಾಜನ ಮಗನೇನೋ ಹೌದು. ಆದರೆ ನಾನು ನಿನ್ನನ್ನು ಗರ್ಭದಲ್ಲಿ ಧರಿಸಲಿಲ್ಲ! (7-8). ಈ ಸಿಂಹಾಸನವು ಸಮಸ್ತ ರಾಜಸಿಂಹಾಸನಗಳಲ್ಲಿ ಶ್ರೇಷ್ಠವಾದದ್ದು. ಇದು ನನ್ನ ಮಗನಿಗೆ ಮಾತ್ರ ಯೋಗ್ಯವಾಗಿದೆ! ಏಕೆ ಆಯಾಸಪಡುತ್ತೀಯೆ? ನನ್ನ ಮಗನಿಗೆ ಯೋಗ್ಯವಾಗಿರುವಂತಹ ಈ ಹೆಬ್ಬಯಕೆ ವ್ಯರ್ಥವಾಗಿ ನಿನಗೇಕೆ? ನೀನು

**ಉಚ್ಚೈರ್ಮನೋರಥಸ್ತೇಽಯಂ ಮತ್ಪುತ್ರಸ್ಯೇವ ಕಿಂ ವೃಥಾ।**
**ಸುನೀತ್ಯಾಮಾತ್ಮನೋ ಜನ್ಮ ಕಿಂ ತ್ವಯಾ ನಾವಗಮ್ಯತೇ॥** 10

*ಶ್ರೀ ಪರಾಶರ ಉವಾಚ:*

**ಉತ್ಸೃಜ್ಯ ಪಿತರಂ ಬಾಲಸ್ತಚ್ಛ್ರುತ್ವಾ ಮಾತೃಭಾಷಿತಮ್।**
**ಜಗಾಮ ಕುಪಿತೋ ಮಾತುರ್ನಿಜಾಯಾ ದ್ವಿಜ ಮಂದಿರಮ್॥** 11

**ತಂ ದೃಷ್ಟ್ವಾ ಕುಪಿತಂ ಪುತ್ರಮೀಷತ್ಪ್ರಸ್ಫುರಿತಾಧರಮ್।**
**ಸುನೀತಿರಂಕಮಾರೋಪ್ಯ ಮೈತ್ರೇಯೇದಮಭಾಷತ॥** 12

**ವತ್ಸ ಕಃ ಕೋಪಹೇತುಸ್ತೇ ಕಶ್ಚ ತ್ವಾಂ ನಾಭಿನಂದತಿ।**
**ಕೋಽವಜಾನಾತಿ ಪಿತರಂ ವತ್ಸ ಯಸ್ತೇಽಪರಾಧ್ಯತಿ॥** 13

*ಶ್ರೀ ಪರಾಶರ ಉವಾಚ:*

**ಇತ್ಯುಕ್ತಃ ಸಕಲಂ ಮಾತ್ರೇ ಕಥಯಾಮಾಸ ತದ್ಯಥಾ।**
**ಸುರುಚಿಃ ಪ್ರಾಹ ಭೂಪಾಲಪ್ರತ್ಯಕ್ಷಮತಿಗರ್ವಿತಾ॥** 14

---

ಸುನೀತಿಯಲ್ಲಿ ಹುಟ್ಟಿದವನೆಂಬುದು ನಿನಗೆ ಗೊತ್ತಿಲ್ಲವೆ!" ಎಂದಳು (9-10). ಮಲತಾಯಿಯ ಈ ಮಾತನ್ನು ಕೇಳಿ ಆ ಬಾಲಕನು ಕೋಪದಿಂದ ತಂದೆಯನ್ನು ತೊರೆದು, ತನ್ನನ್ನು ಹಡೆದ ತಾಯಿಯ ಮನೆಗೆ ತೆರಳಿದನು. ಮೈತ್ರೇಯ, ಧ್ರುವನ ತುಟಿ ಕೋಪದಿಂದ ಸ್ಫುರಿಸುತ್ತಿತ್ತು. ಅವನನ್ನು ನೋಡಿ ಸುನೀತಿಯು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು "ಮಗು, ನಿನಗೆ ಸಿಟ್ಟೇಕೆ ಬಂದಿದೆ? ಯಾರು ನಿನ್ನನ್ನು ಆದರಿಸಲಿಲ್ಲ? ನಿನಗೆ ತೊಂದರೆಕೊಟ್ಟು ನಿನ್ನ ತಂದೆಗೆ ಅವಮಾನ ಮಾಡತಕ್ಕವನಾದರೂ ಯಾರು?" ಎಂದು ಕೇಳಿದಳು (11-13). ಆಗ ಧ್ರುವನು ನಡೆದ ವೃತ್ತಾಂತವನ್ನೆಲ್ಲ ತಾಯಿಗೆ ತಿಳಿಸಿದನು. ರಾಜನೆದುರಿಗೇ ಸುರುಚಿಯು ಗರ್ವಿಷ್ಠಳಾಗಿ ಆಡಿದುದನ್ನು ನಿಟ್ಟುಸಿರುಬಿಡುತ್ತ ಮಗನು ಹೇಳಲಾಗಿ ಸುನೀತಿಯು ವಿಷಣ್ಣಳಾದಳು. ನಿಟ್ಟುಸಿರುಗಳಿಂದ ಕಳೆಗೆಟ್ಟ ಕಣ್ಣುಳ್ಳವಳಾಗಿ ದೈನ್ಯದಿಂದ

**ವಿನಿಃಶ್ವಸ್ಯೇತಿ ಕಥಿತೇ ತಸ್ಮಿನ್ಪುತ್ರೇಣ ದುರ್ಮನಾಃ।**
**ಶ್ವಾಸಕ್ಷಾಮೇಕ್ಷಣಾ ದೀನಾ ಸುನೀತಿರ್ವಾಕ್ಯಮಬ್ರವೀತ್॥ 15**

*ಸುನೀತಿರುವಾಚ:*

**ಸುರುಚಿಃ ಸತ್ಯಮಾಹೇದಂ ಮಂದಭಾಗ್ಯೋಽಸಿ ಪುತ್ರಕ।**
**ನ ಹಿ ಪುಣ್ಯವತಾಂ ವತ್ಸ ಸಪತ್ನೈರೇವಮುಚ್ಯತೇ॥ 16**

**ನೋದ್ವೇಗಸ್ತಾತ ಕರ್ತವ್ಯಃ ಕೃತಂ ಯದ್ಭವತಾ ಪುರಾ।**
**ತತ್ಕೋಽಪಹರ್ತುಂ ಶಕ್ನೋತಿ ದಾತುಂ ಕಶ್ಚಾಕೃತಂ ತ್ವಯಾ॥ 17**

**ತತ್ತ್ವಯಾ ನಾತ್ರ ಕರ್ತವ್ಯಂ ದುಃಖಂ ತದ್ವಾಕ್ಯಸಂಭವಮ್॥ 18**

**ರಾಜಾಸನಂ ರಾಜಚ್ಛತ್ರಂ ವರಾಶ್ವವರವಾರಣಾಃ।**
**ಯಸ್ಯ ಪುಣ್ಯಾಣಿ ತಸ್ಯೈತೇ ಮತ್ವೈತಚ್ಛಾಮ್ಯ ಪುತ್ರಕ॥ 19**

**ಅನ್ಯಜನ್ಮಕೃತೈಃ ಪುಣ್ಯೈಃ ಸುರುಚ್ಯಾಂ ಸರುಚಿರ್ನೃಪಃ।**
**ಭಾರ್ಯೇತಿ ಪ್ರೋಚ್ಯತೇ ಚಾನ್ಯಾ ಮದ್ವಿಧಾ ಪುಣ್ಯವರ್ಜಿತಾ॥ 20**

---

ಹೀಗೆಂದಳು (14-15): "ಮಗನೆ, ಸುರುಚಿ ಹೇಳಿದ್ದು ನಿಜವೇ ಹೌದು. ನೀನು ಭಾಗ್ಯಹೀನ. ವತ್ಸ, ಪುಣ್ಯವಂತರಿಗೆ ವೈರಿಗಳೂ ಇಂತಹ ಮಾತನ್ನಾಡುವುದಿಲ್ಲ. ನೀನು ಬೇಸರ ಪಡಬಾರದು. ಹಿಂದಿನ ಜನ್ಮದಲ್ಲಿ ಏನು ಮಾಡಿದ್ದೀಯೋ ಅದನ್ನು ಯಾರೂ ಕಿತ್ತುಕೊಳ್ಳಲಾರರು. ಮಾಡದೇ ಇದ್ದುದನ್ನು ಕೊಡಲೂ ಆರರು (16-17). ಅವಳ ಮಾತಿಗಾಗಿ ನೀನು ದುಃಖಿಸಬೇಡ. ರಾಜನ ಸಿಂಹಾಸನ, ರಾಜನ ಶ್ವೇತಚ್ಛತ್ರ, ಶ್ರೇಷ್ಠವಾದ ಆನೆ ಕುದುರೆಗಳು—ಇವೆಲ್ಲವೂ ಯಾರು ಪುಣ್ಯಮಾಡಿದ್ದಾರೋ ಅವರಿಗೆ ಲಭಿಸುತ್ತವೆ. ಮಗು, ಶಾಂತನಾಗು (18-19). ಅವಳು ಅನ್ಯಜನ್ಮಗಳಲ್ಲಿ ಮಾಡಿದ ಪುಣ್ಯಗಳಿಂದ ಮಹಾರಾಜನಿಗೆ ಸುರುಚಿಯಲ್ಲಿ ಬಹಳ ಪ್ರೀತಿ ಯುಂಟಾಗಿದೆ. ನನ್ನಂತಹ ಪುಣ್ಯಹೀನೆಗೆ 'ಭಾರ್ಯೆ' ಎಂದು ಮಾತ್ರ ಹೆಸರಿದೆ. ಹಾಗೆಯೇ ಪುಣ್ಯರಾಶಿಯುಳ್ಳ ಉತ್ತಮನು ಸುರುಚಿಗೆ ಮಗನಾಗಿ

**ಪುಣ್ಯೋಪಚಯಸಂಪನ್ನಸ್ತಸ್ಯಾಃ ಪುತ್ರಸ್ತಥೋತ್ತಮಃ।**
**ಮಮ ಪುತ್ರಸ್ತಥಾ ಜಾತಃ ಸ್ವಲ್ಪಪುಣ್ಯೋ ಧ್ರುವೋ ಭವಾನ್॥ 21**

**ತಥಾಪಿ ದುಃಖಂ ನ ಭವಾನ್ ಕರ್ತುಮರ್ಹತಿ ಪುತ್ರಕ।**
**ಯಸ್ಯ ಯಾವತ್ಸ ತೇನೈವ ಸ್ವೇನ ತುಷ್ಯತಿ ಮಾನವಃ॥ 22**

**ಯದಿ ತೇ ದುಃಖಮತ್ಯರ್ಥಂ ಸುರುಚ್ಯಾ ವಚಸಾಭವತ್।**
**ತತ್ಪುಣ್ಯೋಪಚಯೇ ಯತ್ನಂ ಕುರು ಸರ್ವಫಲಪ್ರದೇ॥ 23**

**ಸುಶೀಲೋ ಭವ ಧರ್ಮಾತ್ಮಾ ಮೈತ್ರಃ ಪ್ರಾಣಿಹಿತೇ ರತಃ।**
**ನಿಮ್ನಂ ಯಥಾಪಃ ಪ್ರವಣಾಃ ಪಾತ್ರಮಾಯಾಂತಿ ಸಂಪದಃ॥ 24**

*ಧ್ರುವ ಉವಾಚ:*

**ಅಂಬ ಯತ್ತ್ವಮಿದಂ ಪ್ರಾತ್ಥ ಪ್ರಶಮಾಯ ವಚೋ ಮಮ।**
**ನೈತದ್ದುರ್ವಚಸಾ ಭಿನ್ನೇ ಹೃದಯೇ ಮಮ ತಿಷ್ಠತಿ॥ 25**

---

ಹುಟ್ಟಿದ್ದಾನೆ. ಅಲ್ಪಪುಣ್ಯನಾದ ನೀನು ಧ್ರುವನೆಂಬ ಹೆಸರಿನಿಂದ ನನ್ನ ಮಗನಾಗಿ ಹುಟ್ಟಿದೆ (20-21). ಆದರೂ, ಮಗು, ನೀನು ದುಃಖಿಸಬೇಡ. ಯಾರಿಗೆ ಎಷ್ಟು ಲಭ್ಯವೋ ಅಷ್ಟರಿಂದಲೇ ಮನುಷ್ಯನು ತೃಪ್ತಿಪಡಬೇಕು. ಸುರುಚಿಯ ಮಾತಿನಿಂದ ನಿನಗೆ ತಡೆದುಕೊಳ್ಳಲಾರದಷ್ಟು ದುಃಖವಾಗಿದ್ದರೆ, ಸರ್ವಫಲವನ್ನೂ ನೀಡುವ ಪುಣ್ಯವನ್ನು ಸಂಗ್ರಹಿಸಲು ಯತ್ನಿಸು (22-23). ಸುಶೀಲನೂ ಧರ್ಮಾತ್ಮನೂ ಆಗಿರು. ಎಲ್ಲರನ್ನೂ ಸ್ನೇಹದೃಷ್ಟಿಯಿಂದ ನೋಡು. ಜೀವಿಗಳ ಹಿತದಲ್ಲಿ ನಿರತನಾಗಿರು. ನೀರು ಹೇಗೆ ತಗ್ಗಿಗೆ ಹರಿದು ಬರುತ್ತದೆಯೋ ಹಾಗೆ ಅರ್ಹನಾದ ಪಾತ್ರನ ಬಳಿಗೆ ಸಂಪತ್ತುಗಳು ಬಂದು ಸೇರುತ್ತವೆ" ಎಂದಳು (24). ಆಗ ಧ್ರುವನು "ಅಮ್ಮ, ನನ್ನನ್ನು ಸಂತೈಸಲು ಈ ಮಾತನ್ನಾಡುತ್ತಿದ್ದೀಯೆ. ಆಕೆಯ ದುರ್ವಾಕ್ಯದಿಂದ ಒಡೆದು ಹೋದ ನನ್ನ ಹೃದಯದಲ್ಲಿ ನಿನ್ನ ಮಾತು ನಿಲ್ಲುವುದಿಲ್ಲ! (25). ಆದ್ದರಿಂದ ನಾನು, ಸಮಸ್ತಜಗತ್ತುಗಳೂ ಪೂಜಿಸತಕ್ಕ ಸರ್ವೋತ್ತಮಗಳಲ್ಲಿ ಉತ್ತಮವಾದ ಸ್ಥಾನವನ್ನು ಪಡೆಯಲು ಪ್ರಯತ್ನಿಸುತ್ತೇನೆ. ಸುರುಚಿಯು

**ಸೋऽಹಂ ತಥಾ ಯತಿಷ್ಯಾಮಿ ಯಥಾ ಸರ್ವೋತ್ತಮೋತ್ತಮಮ್।**
**ಸ್ಥಾನಂ ಪ್ರಾಪ್ಸ್ಯಾಮ್ಯಶೇಷಾಣಾಂ ಜಗತಾಮಭಿಪೂಜಿತಮ್॥ 26**

**ಸುರುಚಿರ್ದಯಿತಾ ರಾಜ್ಞಸ್ತಸ್ಯಾ ಜಾತೋऽಸ್ಮಿ ನೋದರಾತ್।**
**ಪ್ರಭಾವಂ ಪಶ್ಯ ಮೇऽಂಬ ತ್ವಂ ವೃದ್ಧಸ್ಯಾಪಿ ತವೋದರೇ॥ 27**

**ಉತ್ತಮಃ ಸ ಮಮ ಭ್ರಾತಾ ಯೋ ಗರ್ಭೇಣ ಧೃತಸ್ತಯಾ।**
**ಸ ರಾಜಾಸನಮಾಪ್ನೋತು ಪಿತ್ರಾ ದತ್ತಂ ತಥಾಸ್ತು ತತ್॥ 28**

**ನಾನ್ಯದತ್ತಮಭೀಪ್ಸಾಮಿ ಸ್ಥಾನಮಂಬ ಸ್ವಕರ್ಮಣಾ।**
**ಇಚ್ಛಾಮಿ ತದಹಂ ಸ್ಥಾನಂ ಯನ್ನ ಪ್ರಾಪ ಪಿತಾ ಮಮ॥ 29**

*ಶ್ರೀ ಪರಾಶರ ಉವಾಚ:*

**ನಿರ್ಜಗಾಮ ಗೃಹಾನ್ಮಾತುರಿತ್ಯುಕ್ತ್ವಾ ಮಾತರಂ ಧ್ರುವಃ।**
**ಪುರಾಚ್ಚ ನಿರ್ಗಮ್ಯ ತತಸ್ತದ್ಬಾಹ್ಯೋऽಪವನಂ ಯಯೌ॥ 30**

**ಸ ದದರ್ಶ ಮುನೀಂಸ್ತತ್ರ ಸಪ್ತ ಪೂರ್ವಾಗತಾನ್ ಧ್ರುವಃ।**
**ಕೃಷ್ಣಾಜಿನೋತ್ತರೀಯೇಷು ವಿಷ್ಟರೇಷು ಸಮಾಸ್ಥಿತಾನ್॥ 31**

---

ಮಹಾರಾಜನಿಗೆ ಪ್ರೀತಿಪಾತ್ರಳಾದ ಮಡದಿ. ನಾನು ಅವಳ ಗರ್ಭದಿಂದ ಜನಿಸಲಿಲ್ಲ! ಅಮ್ಮ, ನಿನ್ನ ಗರ್ಭದಲ್ಲಿ ನಾನು ಬೆಳೆದಿದ್ದರೂ ನನ್ನ ಪ್ರಭಾವವೇನೆಂಬುದನ್ನು ನೋಡುತ್ತಿರು (26-27). ಉತ್ತಮನಿದ್ದಾನಲ್ಲ, ಅವಳ ಗರ್ಭದಲ್ಲಿ ಹುಟ್ಟಿದ ನನ್ನ ತಮ್ಮ, ಅವನಿಗೆ ನನ್ನ ತಂದೆ ಕೊಟ್ಟ ಸಿಂಹಾಸನವು ಲಭಿಸಲಿ. ಚಿಂತೆಯಿಲ್ಲ—ಹಾಗೆಯೇ ಆಗಲಿ. ಅಮ್ಮ, ಇನ್ನೊಬ್ಬನು ಕೊಟ್ಟದ್ದು ನನಗೆ ಬೇಡ! ನಾನು ದುಡಿದು ಸಂಪಾದಿಸಿದ ಸ್ಥಾನವನ್ನು ಮಾತ್ರ ನಾನು ಬಯಸುತ್ತೇನೆ. ನನ್ನ ತಂದೆಗೂ ದೊರಕಿಲ್ಲದ ಉತ್ತಮಸ್ಥಾನವನ್ನು ಪಡೆಯುತ್ತೇನೆ!" ಎಂದನು (28-29). ಹೀಗೆಂದು ತಾಯಿಗೆ ಹೇಳಿ, ಮೈತ್ರೇಯ, ಧ್ರುವನು ಮನೆಯಿಂದ ಹೊರಟೇ ಬಿಟ್ಟನು. ರಾಜಧಾನಿಯನ್ನೂ ದಾಟಿ ಹೊರಗೆ ಇದ್ದ ಉಪವನವನ್ನು ಸೇರಿದನು. ಅಲ್ಲಿಗೆ ಮೊದಲೇ ಬಂದು ಕೃಷ್ಣಾಜಿನಗಳನ್ನು ಹಾಸಿದ ಪೀಠಗಳಲ್ಲಿ ಕುಳಿತಿದ್ದ

**ಸ ರಾಜಪುತ್ರಸ್ತಾನ್ಸರ್ವಾನ್ ಪ್ರಣಿಪತ್ಯಾಭ್ಯಭಾಷತ।**
**ಪ್ರಶ್ರಯಾವನತಃ ಸಮ್ಯಗಭಿವಾದನಪೂರ್ವಕಮ್॥** 32

*ಧ್ರುವ ಉವಾಚ:*

**ಉತ್ತಾನಪಾದತನಯಂ ಮಾಂ ನಿಬೋಧತ ಸತ್ತಮಾಃ।**
**ಜಾತಂ ಸುನೀತ್ಯಾಂ ನಿರ್ವೇದಾದ್ಯುಷ್ಮಾಕಂ ಪ್ರಾಪ್ತಮಂತಿಕಮ್॥** 33

*ಋಷಯ ಊಚುಃ :*

**ಚತುಃಪಂಚಾಬ್ದಸಂಭೂತೋ ಬಾಲಸ್ತ್ವಂ ನೃಪನಂದನ।**
**ನಿರ್ವೇದಕಾರಣಂ ಕಿಂಚಿತ್ತವ ನಾದ್ಯಾಪಿ ವರ್ತತೇ॥** 34

**ನ ಚಿಂತ್ಯಂ ಭವತಃ ಕಿಂಚಿದ್ಧ್ರಿಯತೇ ಭೂಪತಿಃ ಪಿತಾ।**
**ನ ಚೈವೇಷ್ಟವಿಯೋಗಾದಿ ತವ ಪಶ್ಯಾಮ ಬಾಲಕ॥** 35

**ಶರೀರೇ ನ ಚ ತೇ ವ್ಯಾಧಿರಸ್ಮಾಭಿರುಪಲಕ್ಷ್ಯತೇ।**
**ನಿರ್ವೇದಃ ಕಿನ್ನಿಮಿತ್ತಸ್ತೇ ಕಥ್ಯತಾಂ ಯದಿ ವಿದ್ಯತೇ॥** 36

---

ಸಪ್ತರ್ಷಿಗಳನ್ನು ಧ್ರುವನು ಕಂಡನು (30-31). ಈ ರಾಜಪುತ್ರನು ಅವರ ಬಳಿಗೆ ವಿನಯದಿಂದ ಹೋಗಿ ತಲೆಬಾಗಿ ನಮಸ್ಕರಿಸಿ ಅಭಿವಾದನೆಮಾಡಿ "ಮಹಾತ್ಮರೇ, ನಾನು ಉತ್ತಾನಪಾದರಾಜನ ಮಗ. ಸುನೀತಿಯ ಗರ್ಭದಲ್ಲಿ ಜನಿಸಿದ್ದೇನೆ. ಬೇಸರ ಹುಟ್ಟಿ ತಮ್ಮ ಬಳಿಗೆ ಬಂದಿದ್ದೇನೆ" ಎಂದನು (32-33). ಆಗ ಋಷಿಗಳು "ರಾಜಪುತ್ರ, ನೀನು ಇನ್ನೂ ನಾಲ್ಕೈದು ವರ್ಷಗಳ ಬಾಲಕ. ಇಷ್ಟು ಬೇಗ ನಿನಗೆ ನಿರ್ವೇದವುಂಟಾಗಲು ಕಾರಣವೇನೂ ಇಲ್ಲ. ನಿನ್ನ ತಂದೆಯಾದ ಮಹಾರಾಜನು ಜೀವಂತನಾಗಿದ್ದಾನೆ. ನೀನು ಚಿಂತಿಸಬೇಕಾದ್ದೇನೂ ಇರುವುದಿಲ್ಲ. ವತ್ಸ, ನಿನಗೆ ಇಷ್ಟಬಂಧುವಿಯೋಗಾದಿಗಳೇನನ್ನೂ ನಾವು ಕಾಣೆವು (34-35). ಯಾವ ವ್ಯಾಧಿಯು ನಿನ್ನನ್ನು ಕಾಡಿಸುತ್ತಿರುವುದೂ ಗೋಚರಿಸುತ್ತಿಲ್ಲ. ನಿನ್ನ ನಿರ್ವೇದಕ್ಕೆ ಕಾರಣವಾದರೂ ಏನು? ಇದ್ದರೆ ಹೇಳು" ಎಂದರು. ಆಗ ಧ್ರುವನು ಸುರುಚಿಯಾಡಿದ ಮಾತನ್ನು ಅವರಿಗೆ ಹೇಳಿದನು. ಅದನ್ನು ಕೇಳಿ

*ಶ್ರೀ ಪರಾಶರ ಉವಾಚ:*

**ತತಃ ಸ ಕಥಯಾಮಾಸ ಸುರುಚ್ಯಾ ಯದುದಾಹೃತಮ್।**
**ತನ್ನಿಶಮ್ಯ ತತಃ ಪ್ರೋಚುರ್ಮುನಯಸ್ತೇ ಪರಸ್ಪರಮ್॥** 37

**ಅಹೋ ಕ್ಷಾತ್ರಂ ಪರಂ ತೇಜೋ ಬಾಲಸ್ಯಾಪಿ ಯದಕ್ಷಮಾ।**
**ಸಪತ್ನ್ಯಾ ಮಾತುರುಕ್ತಂ ಯದ್ಧೃದಯಾನ್ನಾಪಸರ್ಪತಿ॥** 38

**ಭೋ ಭೋ ಕ್ಷತ್ರಿಯದಾಯಾದ ನಿರ್ವೇದಾದ್ಯತ್ತ್ವಯಾಧುನಾ।**
**ಕರ್ತುಂ ವ್ಯವಸಿತಂ ತನ್ನಃ ಕಥ್ಯತಾಂ ಯದಿ ರೋಚತೇ॥** 39

**ಯಚ್ಚ ಕಾರ್ಯಂ ತವಾಸ್ಮಾಭಿಃ ಸಾಹಾಯ್ಯಮಮಿತದ್ಯುತೇ।**
**ತದುಚ್ಯತಾಂ ವಿವಕ್ಷುಸ್ತ್ವಮಸ್ಮಾಭಿರುಪಲಕ್ಷ್ಯಸೇ॥** 40

*ಧ್ರುವ ಉವಾಚ:*

**ನಾಹಮರ್ಥಮಭೀಪ್ಸಾಮಿ ನ ರಾಜ್ಯಂ ದ್ವಿಜಸತ್ತಮಾಃ।**
**ತತ್ಸ್ಥಾನಮೇಕಮಿಚ್ಛಾಮಿ ಭುಕ್ತಂ ನಾನ್ಯೇನ ಯತ್ಪುರಾ॥** 41

---

ಋಷಿಗಳು ತಮ್ಮಲ್ಲಿಯೇ ಹೀಗೆ ಮಾತಾಡಿಕೊಂಡರು (36-37): "ಆಹಾ! ಚಿಕ್ಕಹುಡುಗನಾದರೂ ಎಂತಹ ಕ್ಷಾತ್ರತೇಜಸ್ಸು ಈತನಿಗೆ! ಸೈರಣೆ ಇಲ್ಲ. ಮಲತಾಯಿಯಾಡಿದ ಮಾತು ಇವನ ಹೃದಯದಿಂದ ಇನ್ನೂ ಹೋಗಿಯೇ ಇಲ್ಲ!" ಎಂದು ಹೇಳಿಕೊಂಡು, ಧ್ರುವನನ್ನು ಕುರಿತು "ಅಪ್ಪಾ-ಕ್ಷತ್ರಿಯ ಬಾಲಕ, ನಿರ್ವೇದದಿಂದ ಈಗ ಏನು ಮಾಡಬೇಕೆಂದಿದ್ದೀಯೆ? ಇಷ್ಟ ವಾದರೆ ಹೇಳು (38-39). ಅಸಾಧಾರಣ ತೇಜಸ್ವಿ ನೀನು. ನಾವೇನಾದರೂ ಸಹಾಯ ಮಾಡುವಂತಿದ್ದರೆ ಹೇಳು. ಏನನ್ನೋ ಹೇಳುವ ಇಚ್ಛೆಯಿರು ವಂತೆ ಕಾಣಿಸುತ್ತೀಯೆ" ಎಂದರು (40). ಧ್ರುವನು "ಮುನಿಸತ್ತಮರೆ, ನನಗೆ ಐಶ್ವರ್ಯವಾಗಲಿ ಈ ರಾಜ್ಯವಾಗಲಿ ಬೇಕಾಗಿಲ್ಲ. ಹಿಂದೆ ಯಾರೂ ಅನುಭವಿಸದಿರುವಂತಹ ಶ್ರೇಷ್ಠ ಸ್ಥಾನವನ್ನು ನಾನು ಬಯಸುತ್ತಿದ್ದೇನೆ. ಈ ವಿಷಯದಲ್ಲಿ ಸಹಾಯವನ್ನು ಮಾಡಿರಿ. ಹೇಗೆ ಮಾಡಿದರೆ ಸರ್ವೋತ್ತಮ

**ಏತನ್ಮೇ ಕ್ರಿಯತಾಂ ಸಮ್ಯಕ್ಕಥ್ಯತಾಂ ಪ್ರಾಪ್ಯತೇ ಯಥಾ।**
**ಸ್ಥಾನಮಗ್ರ್ಯಂ ಸಮಸ್ತೇಭ್ಯಃ ಸ್ಥಾನೇಭ್ಯೋ ಮುನಿಸತ್ತಮಾಃ॥ 42**

*ಮರೀಚಿರುವಾಚ:*

**ಅನಾರಾಧಿತಗೋವಿಂದೈರ್ನರೈಃ ಸ್ಥಾನಂ ನೃಪಾತ್ಮಜ।**
**ನ ಹಿ ಸಂಪ್ರಾಪ್ಯತೇ ಶ್ರೇಷ್ಠಂ ತಸ್ಮಾದಾರಾಧಯಾಚ್ಯುತಮ್॥ 43**

*ಅತ್ರಿರುವಾಚ:*

**ಪರಃ ಪರಾಣಾಂ ಪುರುಷೋ ಯಸ್ಯ ತುಷ್ಟೋ ಜನಾರ್ದನಃ।**
**ಸ ಪ್ರಾಪ್ನೋತ್ಯಕ್ಷಯಂ ಸ್ಥಾನಮೇತತ್ಸತ್ಯಂ ಮಯೋದಿತಮ್॥ 44**

*ಅಂಗಿರಾ ಉವಾಚ:*

**ಯಸ್ಯಾಂತಃ ಸರ್ವಮೇವೇದಮಚ್ಯುತಸ್ಯಾವ್ಯಯಾತ್ಮನಃ।**
**ತಮಾರಾಧಯ ಗೋವಿಂದಂ ಸ್ಥಾನಮಗ್ರ್ಯಂ ಯದೀಚ್ಛಸಿ॥ 45**

---

ವಾದ ಶ್ರೇಷ್ಠಸ್ಥಾನವು ದೊರೆಯುತ್ತದೆಯೆಂಬುದನ್ನು ಹೇಳಬೇಕು" ಎಂದನು (41-42). ಆಗ ಮರೀಚಿಮುನಿಗಳು "ರಾಜಪುತ್ರ, ಅಚ್ಯುತನನ್ನು ಆರಾಧಿಸದೆ ಇರತಕ್ಕವರಿಗೆ ಸರ್ವೋತ್ತಮಸ್ಥಾನವು ದೊರೆಯುವುದಿಲ್ಲ. ಆದ್ದರಿಂದ ಅಚ್ಯುತನನ್ನು ಆರಾಧಿಸು" ಎಂದರು (43). ಅತ್ರಿಮುನಿಗಳು "ಪ್ರಕೃತಿಗಿಂತ ಆಚೆಗಿರುವ ಪರಮಪುರುಷನೇ ಅಚ್ಯುತ–ವಿಷ್ಣು. ಆತನು ಯಾರಿಗೆ ಸಂತುಷ್ಟನಾಗುವನೋ ಆತನಿಗೆ ಅಕ್ಷಯಸ್ಥಾನ ದೊರೆಯುತ್ತದೆ. ನಾನು ಹೇಳಿದ್ದು ಸತ್ಯ" ಎಂದರು (44). ಆಮೇಲೆ ಅಂಗಿರಮುನಿಗಳು "ಸರ್ವೋತ್ತಮಸ್ಥಾನವನ್ನು ಬಯಸುವುದಾದರೆ, ಅವ್ಯಯಾತ್ಮನಾದ ಯಾವ ಅಚ್ಯುತನಲ್ಲಿ ಈ ಸಮಸ್ತ ವಿಶ್ವವೂ ಅಡಗಿದೆಯೋ ಆ ಗೋವಿಂದನನ್ನು ಆರಾಧಿಸು" ಎಂದು ನುಡಿದರು (45). ಪುಲಸ್ತ್ಯಮಹರ್ಷಿಗಳು "ಪರಬ್ರಹ್ಮವೂ ಪರಮಧಾಮವೂ ಪರಮಾತ್ಮನೂ ಆದ ಶ್ರೀಹರಿಯನ್ನು ಭಜಿಸಿದವನು ಅತಿ ದುರ್ಲಭವಾದ ಮುಕ್ತಿಯನ್ನೂ ಸಹ ಪಡೆಯುತ್ತಾನೆ"

*ಪುಲಸ್ತ್ಯ ಉವಾಚ:*

**ಪರಂ ಬ್ರಹ್ಮ ಪರಂ ಧಾಮ ಯೋಽಸೌ ಬ್ರಹ್ಮ ತಥಾ ಪರಮ್।**
**ತಮಾರಾಧ್ಯ ಹರಿಂ ಯಾತಿ ಮುಕ್ತಿಮಪ್ಯತಿದುರ್ಲಭಾಮ್॥** 46

*ಪುಲಹ ಉವಾಚ:*

**ಐಂದ್ರಮಿಂದ್ರಃ ಪರಂ ಸ್ಥಾನಂ ಯಮಾರಾಧ್ಯ ಜಗತ್ಪತಿಮ್।**
**ಪ್ರಾಪ ಯಜ್ಞಪತಿಂ ವಿಷ್ಣುಂ ತಮಾರಾಧಯ ಸುವ್ರತ॥** 47

*ಕ್ರತುರುವಾಚ:*

**ಯೋ ಯಜ್ಞಪುರುಷೋ ಯಜ್ಞೋ ಯೋಗೇಶಃ ಪರಮಃ ಪುಮಾನ್।**
**ತಸ್ಮಿಂಸ್ತುಷ್ಟೇ ಯದಪ್ರಾಪ್ಯಂ ಕಿಂ ತದಸ್ತಿ ಜನಾರ್ದನೇ॥** 48

*ವಸಿಷ್ಠ ಉವಾಚ:*

**ಪ್ರಾಪ್ನೋಷ್ಯಾರಾಧಿತೇ ವಿಷ್ಣೌ ಮನಸಾ ಯದ್ಯದಿಚ್ಛಸಿ।**
**ತ್ರೈಲೋಕ್ಯಾಂತರ್ಗತಂ ಸ್ಥಾನಂ ಕಿಮು ವತ್ಸೋತ್ತಮೋತ್ತಮಮ್॥**

---

ಎಂದು ಹೇಳಿದರು (46). ಪುಲಹಮುನಿಗಳು "ಸಚ್ಚರಿತ್ರನಾದ ಬಾಲಕನೆ, ಯಾವ ಜಗದೀಶ್ವರನನ್ನು ಆರಾಧಿಸಿ ಇಂದ್ರನು ಶ್ರೇಷ್ಠವಾದ ಇಂದ್ರಪದವಿಯನ್ನು ಪಡೆದನೋ, ಅಂತಹ ಯಜ್ಞಪತಿಯಾದ ವಿಷ್ಣುವನ್ನರ್ಚಿಸು" ಎಂದು ತಿಳಿಸಿದರು (47). ಅನಂತರ ಕ್ರತುಮುನಿಗಳು "ಯಜ್ಞಪುರುಷನೂ ಯಜ್ಞವೂ ಯೋಗೇಶ್ವರನೂ ಪುರುಷೋತ್ತಮನೂ ಆದ ಜನಾರ್ದನನು ಸಂಪ್ರೀತನಾದರೆ, ದುರ್ಲಭವಾದ ವಸ್ತುವಾದರೂ ಯಾವುದಿದೆ?" ಎಂದರು (48). ಅನಂತರ ವಸಿಷ್ಠರು "ವತ್ಸ, ವಿಷ್ಣುವು ಸಂಪ್ರೀತನಾದಲ್ಲಿ ಈ ಮೂರು ಲೋಕಗಳಲ್ಲಿರುವ ಯಾವ ಯಾವ ಸ್ಥಾನವನ್ನು ನೀನು ಅಪೇಕ್ಷಿಸುತ್ತೀಯೋ ಅದೆಲ್ಲವೂ ದೊರೆಯುತ್ತದೆ. ಉತ್ತಮೋತ್ತಮಸ್ಥಾನವೆಂದರೆ ಇನ್ನೇನು?" ಎಂದು ನುಡಿದರು (49). ಆಗ ಧ್ರುವನು

*ಧ್ರುವ ಉವಾಚ:*

**ಆರಾಧ್ಯಃ ಕಥಿತೋ ದೇವೋ ಭವದ್ಭಿಃ ಪ್ರಣತಸ್ಯ ಮೇ।**
**ಮಯಾ ತತ್ಪರಿತೋಷಾಯ ಯಜ್ಜಪ್ತವ್ಯಂ ತದುಚ್ಯತಾಮ್॥** 50

**ಯಥಾ ಚಾರಾಧನಂ ತಸ್ಯ ಮಯಾ ಕಾರ್ಯಂ ಮಹಾತ್ಮನಃ।**
**ಪ್ರಸಾದಸುಮುಖಾಸ್ತನ್ಮೇ ಕಥಯಂತು ಮಹರ್ಷಯಃ॥** 51

*ಋಷಯ ಊಚುಃ :*

**ರಾಜಪುತ್ರ ಯಥಾ ವಿಷ್ಣೋರಾರಾಧನಪರೈರ್ನರೈಃ।**
**ಕಾರ್ಯಮಾರಾಧನಂ ತನ್ನೋ ಯಥಾವಚ್ಛ್ರೋತುಮರ್ಹಸಿ॥** 52

**ಬಾಹ್ಯಾರ್ಥಾದಖಿಲಾಚ್ಚಿತ್ತಂ ತ್ಯಾಜಯೇತ್ಪ್ರಥಮಂ ನರಃ।**
**ತಸ್ಮಿನ್ನೇವ ಜಗದ್ಧಾಮ್ನಿ ತತಃ ಕುರ್ವೀತ ನಿಶ್ಚಲಮ್॥** 53

**ಏವಮೇಕಾಗ್ರಚಿತ್ತೇನ ತನ್ಮಯೇನ ಧೃತಾತ್ಮನಾ।**
**ಜಪ್ತವ್ಯಂ ಯನ್ನಿಬೋಧೈತತ್ತನ್ನಃ ಪಾರ್ಥಿವನಂದನ॥** 54

---

"ಮಹರ್ಷಿಗಳೆ, ಶರಣಾಗಿ ಬಂದ ನನಗೆ ಆರಾಧಿಸಬೇಕಾದ ದೇವನನ್ನು ತಿಳಿಸಿಕೊಟ್ಟಿರಿ. ಆತನನ್ನು ಪರಿತೋಷಗೊಳಿಸಲು ಜಪಿಸಬೇಕಾದ ಮಂತ್ರ ಯಾವುದು? ಹೇಳಿರಿ. ಆ ಮಹಾತ್ಮನನ್ನು ಆರಾಧಿಸುವ ಬಗೆ ಯಾವುದು? ಓ ಮಹಾತ್ಮರೆ, ಪ್ರಸನ್ನರಾಗಿ ಈ ವಿಷಯವನ್ನು ತಿಳಿಸಿರಿ" ಎಂದು ಹೇಳಿದನು (50-51). ಆಗ ಋಷಿಗಳು ಹೇಳಿದರು: "ರಾಜಪುತ್ರ, ವಿಷ್ಣುವನ್ನಾರಾಧಿಸತಕ್ಕವರು ಹೇಗೆ ಆರಾಧಿಸಬೇಕೆಂಬುದನ್ನು ಹೇಳುತ್ತೇವೆ, ಕೇಳು. ಮನುಷ್ಯನು ಮೊದಲು ಬಾಹ್ಯ ವಿಷಯಗಳೆಲ್ಲವನ್ನೂ ಮನಸ್ಸು ತ್ಯಜಿಸುವಂತೆ ಮಾಡಿಕೊಳ್ಳಬೇಕು. ಜಗದ್ಧಾಮನಾದ ಆ ದೇವನಲ್ಲಿಯೇ ಮನಸ್ಸನ್ನು ನಿಶ್ಚಲವಾಗಿ ನಿಲ್ಲಿಸಬೇಕು (52-53). ಹೀಗೆ ಮನಸ್ಸನ್ನು ಜಯಿಸಿ ಏಕಾಗ್ರಚಿತ್ತತೆಯಿಂದ ತನ್ಮಯೀಭಾವವನ್ನು ಹೊಂದಿದವನು ಯಾವುದನ್ನು ಜಪಿಸಬೇಕೆಂದು ಹೇಳುತ್ತೇವೆ ಕೇಳು: "ಹಿರಣ್ಯಗರ್ಭಪುರುಷಪ್ರಧಾನಾವ್ಯಕ್ತರೂಪಿಣೇ ಓಂ ನಮೋ ವಾಸುದೇವಾಯ ಶುದ್ಧಜ್ಞಾನಸ್ವರೂಪಿಣೇ"

**ಹಿರಣ್ಯಗರ್ಭಪುರುಷಪ್ರಧಾನಾವ್ಯಕ್ತರೂಪಿಣೇ।**
**ಓಂ ನಮೋ ವಾಸುದೇವಾಯ ಶುದ್ಧಜ್ಞಾನಸ್ವರೂಪಿಣೇ॥ 55**

**ಏತಜ್ಜಜಾಪ ಭಗವಾನ್ ಜಪ್ಯಂ ಸ್ವಾಯಂಭುವೋ ಮನುಃ।**
**ಪಿತಾಮಹಸ್ತವ ಪುರಾ ತಸ್ಯ ತುಷ್ಟೋ ಜನಾರ್ದನಃ॥ 56**

**ದದೌ ಯಥಾಭಿಲಷಿತಾಂ ಸಿದ್ಧಿಂ ತ್ರೈಲೋಕ್ಯದುರ್ಲಭಾಮ್।**
**ತಥಾ ತ್ವಮಪಿ ಗೋವಿಂದಂ ತೋಷಯೈತತ್ಸದಾ ಜಪನ್॥ 57**

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಏಕಾದಶೋಽಧ್ಯಾಯಃ

---

ಎಂದು ಜಪಿಸುತ್ತಿರಬೇಕು* (ಹಿರಣ್ಯಗರ್ಭ, ಜೀವಾತ್ಮ, ಪ್ರಧಾನ, ಪಂಚತನಾತ್ರೆ—ಈ ರೂಪಗಳನ್ನು ತಳೆದಿರುವ, ಶುದ್ಧಜ್ಞಾನಸ್ವರೂಪನಾದ ವಾಸುದೇವನಿಗೆ ನಮಸ್ಕಾರ) (54-55). ನಿನ್ನ ಪಿತಾಮಹನಾದ ಭಗವಾನ್ ಸ್ವಾಯಂಭುವಮನುವು ಈ ಮಂತ್ರವನ್ನು ಹಿಂದೆ ಜಪಿಸಿದ್ದನು. ಸಂಪ್ರೀತ ನಾದ ಜನಾರ್ದನನು ಆತನ ಇಚ್ಛೆಯಂತೆ ತ್ರಿಲೋಕದುರ್ಲಭವಾದ ಸಿದ್ಧಿಯನ್ನು ಮನುವಿಗೆ ಕರುಣಿಸಿದನು. ಹಾಗೆಯೇ ನೀನು, ಸರ್ವದಾ ಈ ಮಂತ್ರವನ್ನು ಜಪಿಸುತ್ತ ಗೋವಿಂದನನ್ನು ಸಂತೋಷ ಪಡಿಸು" ಎಂದರು (56-57).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮ ಅಂಶದಲ್ಲಿ
ಹನ್ನೊಂದನೆಯ ಅಧ್ಯಾಯ ಮುಗಿಯಿತು.



---

* ಮುಂದೆ 12ನೇ ಅಧ್ಯಾಯದ 97ನೆಯ ಶ್ಲೋಕದಲ್ಲಿ 'ದ್ವಾದಶಾಕ್ಷರ ಮಾಹಾತ್ಮ್ಯಾತ್' ಎಂದು ಹೇಳಿರುವುದರಿಂದ 'ಓಂ ನಮೋ ಭಗವತೇ ವಾಸುದೇವಾಯ' ಎಂದು ಮಂತ್ರಾಕಾರವಿರಬಹುದು.

## ದ್ವಾದಶೋಽಧ್ಯಾಯಃ

ನಿಶಮ್ಯೈತದಶೇಷೇಣ ಮೈತ್ರೇಯ ನೃಪತೇಃ ಸುತಃ।
ನಿರ್ಜಗಾಮ ವನಾತ್ತಸ್ಮಾತ್ ಪ್ರಣಿಪತ್ಯ ಸ ತಾನೃಷೀನ್॥ 1

ಕೃತಕೃತ್ಯಮಿವಾತ್ಮಾನಂ ಮನ್ಯಮಾನಸ್ತತೋ ದ್ವಿಜ।
ಮಧುಸಂಜ್ಞಂ ಮಹಾಪುಣ್ಯಂ ಜಗಾಮ ಯಮುನಾತಟಮ್॥ 2

ಪುನಶ್ಚ ಮಧುಸಂಜ್ಞೇನ ದೈತ್ಯೇನಾಧಿಷ್ಠಿತಂ ಯತಃ।
ತತೋ ಮಧುವನಂ ನಾಮ್ನಾ ಖ್ಯಾತಮತ್ರ ಮಹೀತಲೇ॥ 3

ಹತ್ವಾ ಚ ಲವಣಂ ರಕ್ಷೋ ಮಧುಪುತ್ರಂ ಮಹಾಬಲಮ್।
ಶತ್ರುಘ್ನೋ ಮಧುರಾಂ ನಾಮ ಪುರೀಂ ಯತ್ರ ಚಕಾರ ವೈ॥ 4

ಯತ್ರ ವೈ ದೇವದೇವಸ್ಯ ಸಾನ್ನಿಧ್ಯಂ ಹರಿಮೇಧಸಃ।
ಸರ್ವಪಾಪಹರೇ ತಸ್ಮಿಂಸ್ತಪಸ್ತೀರ್ಥೇ ಚಕಾರ ಸಃ॥ 5

---

## ಅಧ್ಯಾಯ 12

ಧ್ರುವನ ತಪಸ್ಸಿಗೆ ಮೆಚ್ಚಿ ವಿಷ್ಣುವು ಪ್ರತ್ಯಕ್ಷನಾಗುವುದು.
ಧ್ರುವನಿಗೆ ಸರ್ವೋತ್ತಮವಾದ ಸ್ಥಾನವನ್ನು ನೀಡುವುದು.

ಪರಾಶರರು ಹೇಳಿದರು: ಮೈತ್ರೇಯ, ರಾಜಪುತ್ರನಾದ ಧ್ರುವನು ಇದೆಲ್ಲವನ್ನು ಕೇಳಿ ತಿಳಿದುಕೊಂಡು, ಆ ಋಷಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಉದ್ಯಾನವನದಿಂದ ಮುಂದಕ್ಕೆ ಹೊರಟನು (1). ತಾನು ಕೃತಕೃತ್ಯನಾದೆನೆಂದು ಭಾವಿಸಿ ಆತನು ಯಮುನಾ ತಟದಲ್ಲಿರುವ ಮಹಾಪುಣ್ಯಕರವಾದ ಮಧು ಎಂಬ ಹೆಸರಿನ ವನವನ್ನು ಸೇರಿದನು. ಹಿಂದೆ ಮಧು ಎಂಬ ದೈತ್ಯನು ವಾಸವಾಗಿದ್ದುದರಿಂದ ಅದು ಮಧುವನವೆಂದು ಭೂತಳದಲ್ಲಿ ಪ್ರಸಿದ್ಧವಾಯಿತು. ಅಲ್ಲಿಯೇ ಮಧುಪುತ್ರನೂ ಬಲಾಢ್ಯನೂ ಆದ ಲವಣಾಸುರನನ್ನು ಶತ್ರುಘ್ನನು ಸಂಹರಿಸಿ ಮಧುರೆಯೆಂಬ ನಗರವನ್ನು ಕಟ್ಟಿಸಿದ್ದಾನೆ (2-4). ದೇವದೇವನಾದ ಶ್ರೀಹರಿಯ ಸಾಂನಿಧ್ಯ ಅಲ್ಲಿ ಉಂಟು. ಸಕಲ

**ಮರೀಚಿ ಮುಖ್ಯೈರ್ಮುನಿಭಿರ್ಯಥೋದ್ದಿಷ್ಟಮಭೂತ್ತಥಾ।**
**ಆತ್ಮನ್ಯಶೇಷದೇವೇಶಂ ಸ್ಥಿತಂ ವಿಷ್ಣುಮಮನ್ಯತ॥ 6**

**ಅನನ್ಯಚೇತಸಸ್ತಸ್ಯ ಧ್ಯಾಯತೋ ಭಗವಾನ್ ಹರಿಃ।**
**ಸರ್ವಭೂತಗತೋ ವಿಪ್ರ ಸರ್ವಭಾವಗತೋಽಭವತ್॥ 7**

**ಮನಸ್ಯವಸ್ಥಿತೇ ತಸ್ಮಿನ್ ವಿಷ್ಣೌ ಮೈತ್ರೇಯ ಯೋಗಿನಃ।**
**ನ ಶಶಾಕ ಧರಾ ಭಾರಮುದ್ವೋಢುಂ ಭೂತಧಾರಿಣೀ॥ 8**

**ವಾಮಪಾದಸ್ಥಿತೇ ತಸ್ಮಿನ್ನನಾಮಾರ್ಧ್ವೇನ ಮೇದಿನೀ।**
**ದ್ವಿತೀಯಂ ಚ ನನಾಮಾರ್ಧಂ ಕ್ಷಿತೇರ್ದಕ್ಷಿಣತಃ ಸ್ಥಿತೇ॥ 9**

**ಪಾದಾಂಗುಷ್ಠೇನ ಸಂಪೀಡ್ಯ ಯದಾ ಸ ವಸುಧಾಂ ಸ್ಥಿತಃ।**
**ತದಾ ಸಮಸ್ತಾ ವಸುಧಾ ಚಚಾಲ ಸಹ ಪರ್ವತೈಃ॥ 10**

**ನದ್ಯೋ ನದಾಃ ಸಮುದ್ರಾಶ್ಚ ಸಂಕ್ಷೋಭಂ ಪರಮಂ ಯಯುಃ।**
**ತತ್ಕ್ಷೋಭಾದಮರಾಃ ಕ್ಷೋಭಂ ಪರಂ ಜಗ್ಮುರ್ಮಹಾಮುನೇ॥**

---

ಪಾಪಹಾರಿಯಾದ ಆ ತೀರ್ಥಕ್ಷೇತ್ರದಲ್ಲಿ ಧ್ರುವನು ತಪಸ್ಸು ಮಾಡಿದನು. ಮರೀಚಿಯೇ ಮೊದಲಾದ ಸಪ್ತರ್ಷಿಗಳು ಹೇಳಿದ ಪ್ರಕಾರ ಅವನು ತಪಸ್ಸಿನಲ್ಲಿ ನಿರತನಾದನು. ಸಕಲ ದೇವೇಶ್ವರನಾದ ವಿಷ್ಣುವು ತನ್ನ ಹೃದಯದಲ್ಲಿ ನೆಲೆಸಿದ್ದಾನೆಂದು ಭಾವಿಸಿದನು (5-6). ಏಕಾಗ್ರಚಿತ್ತದಿಂದ ಧ್ಯಾನ ಮಾಡುತ್ತಿದ್ದ ಧ್ರುವನ ಸಕಲ ಭಾವಗಳಲ್ಲಿಯೂ ಸಮಸ್ತ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವ ಭಗವಾನ್ ಶ್ರೀಹರಿಯು ನೆಲೆಸಿದನು. ಧ್ಯಾನ ನಿಷ್ಠನಾದ ಧ್ರುವನ ಚಿತ್ತದಲ್ಲಿ ಶ್ರೀಹರಿಯು ನೆಲಸಲಾಗಿ, ಮೈತ್ರೇಯ, ಭೂತಧಾರಿಣಿಯಾದ ಭೂದೇವಿಗೆ, ಅವನ ಭಾರವನ್ನು ಹೊರಲಾಗಲಿಲ್ಲ! (7-8). ಧ್ರುವನು ಎಡಗಾಲಿನ ಮೇಲೆ ನಿಂತು ತಪಸ್ಸನ್ನಾಚರಿಸುವಾಗ, ಭೂಮಿಯ ಅರ್ಧ ಭಾಗ ಕುಸಿಯಿತು! ಬಲಗಾಲಿನ ಮೇಲೆ ನಿಂತಿರಲಾಗಿ, ಭೂಮಿಯ ಇನ್ನೊಂದು ಅರ್ಧಭಾಗ ಕುಸಿಯಿತು! (9). ಯಾವಾಗ ಧ್ರುವನು ಕಾಲಿನ ಅಂಗುಷ್ಠವನ್ನು ನೆಲದ ಮೇಲೆ ಊರಿನಿಂತನೋ, ಆಗ ಸಮಸ್ತಭೂತಳವೂ ಪರ್ವತಸಹಿತವಾಗಿ ಅಲ್ಲಾಡಿತು! ನದನದಿಗಳೂ ಸಮುದ್ರಗಳೂ ಮೇರೆದಪ್ಪಿದವು. ಇದರಿಂದ, ಮೈತ್ರೇಯ, ದೇವತೆಗಳು

**ಯಾಮಾ ನಾಮ ತದಾ ದೇವ ಮೈತ್ರೇಯ ಪರಮಾಕುಲಾಃ।**
**ಇಂದ್ರೇಣ ಸಹ ಸಮ್ಮಂತ್ರ್ಯ ಧ್ಯಾನಭಂಗಂ ಪ್ರಚಕ್ರಮುಃ॥** 12

**ಕೂಷ್ಮಾಂಡಾ ವಿವಿಧೈ ರೂಪೈರ್ಮಹೇಂದ್ರೇಣ ಮಹಾಮುನೇ।**
**ಸಮಾಧಿಭಂಗಮತ್ಯಂತಮಾರಬ್ಧಾಃ ಕರ್ತುಮಾತುರಾಃ॥** 13

**ಸುನೀತಿರ್ನಾಮ ತನ್ಮಾತಾ ಸಾಸ್ರಾ ತತ್ಪುರತಃ ಸ್ಥಿತಾ।**
**ಪುತ್ರೇತಿ ಕರುಣಾಂ ವಾಚಮಾಹ ಮಾಯಾಮಯೀ ತದಾ॥** 14

**ಪುತ್ರಕಾಸ್ಮಾನ್ನಿವರ್ತಸ್ವ ಶರೀರಾತ್ಯಯದಾರುಣಾತ್।**
**ನಿರ್ಬಂಧತೋ ಮಯಾ ಲಬ್ಧೋ ಬಹುಭಿಸ್ತ್ವಂ ಮನೋರಥೈಃ॥** 15

**ದೀನಾಮೇಕಾಂ ಪರಿತ್ಯಕ್ತುಮನಾಥಾಂ ನ ತ್ವಮರ್ಹಸಿ।**
**ಸಪತ್ನೀವಚನಾದ್ವತ್ಸ ಅಗತೇಸ್ತ್ವಂ ಗತಿರ್ಮಮ॥** 16

---

ಗಾಬರಿಯಾದರು (10-11). ಆಗ ಯಾಮ ಎಂಬ ದೇವತೆಗಳು ತುಂಬ ವ್ಯಾಕುಲರಾಗಿ ದೇವೇಂದ್ರನೊಡನೆ ಸಮಾಲೋಚಿಸಿ, ಧ್ರುವನ ತಪಸ್ಸಿಗೆ ಭಂಗವನ್ನುಂಟುಮಾಡಲು ತೊಡಗಿದರು. ಉದ್ವಿಗ್ನರಾದ ಕೂಷ್ಮಾಂಡ ದೇವತೆಗಳು ಮಹೇಂದ್ರನೊಡಗೂಡಿ ನಾನಾ ಬಗೆಯ ರೂಪಗಳನ್ನು ಧರಿಸಿ ಧ್ರುವನ ಸಮಾಧಿಗೆ ಭಂಗವನ್ನು ತರಲು ಪ್ರಯತ್ನಿಸಿದರು (12-13). ಅವನ ತಾಯಿಯಾದ ಸುನೀತಿಯಂತೆ ರೂಪವನ್ನು ಧರಿಸಿದ ಮಾಯಾನಿರ್ಮಿತ ಸ್ತ್ರೀಯೊಬ್ಬಳು ಕಣ್ಣೀರು ಸುರಿಸುತ್ತ ಎದುರಿಗೆ ನಿಂತು ಕರುಣಾಜನಕವಾಗಿ "ಕಂದ, ಮಗು, ದೇಹಕ್ಕೆ ಇಷ್ಟು ಯಾತನೆಯನ್ನು ಕೊಡುವುದು ಬೇಡ, ನಿಲ್ಲಿಸು. ಹಲವು ಮನೋರಥಗಳನ್ನಿಟ್ಟುಕೊಂಡು ಬಹುಕಷ್ಟದಿಂದ ನಿನ್ನನ್ನು ಪಡೆದಿದ್ದೇನೆ (14-15). ದೀನೆಯಾಗಿ ಅನಾಥೆಯಾಗಿ ಏಕಾಕಿನಿಯಾಗಿರುವ ನನ್ನನ್ನು ತ್ಯಜಿಸುವುದು ನಿನಗೆ ಯುಕ್ತವಲ್ಲ. ಸವತಿಯ ಮಾತನ್ನು ಕೇಳಿ ಹೀಗೆ ಮಾಡುವುದು ಸರಿಯಲ್ಲ. ಮಗು, ಗತಿಹೀನಳಾದ ನನಗೆ ನೀನೇ ಗತಿ (16). ವತ್ಸ, ಐದು ವರ್ಷ ಎಳೆಯನಾದ ನೀನೆಲ್ಲಿ? ದಾರುಣವಾದ ಈ

**ಕ್ವ ಚ ತ್ವಂ ಪಂಚವರ್ಷೀಯಃ ಕ್ವ ಚೈತದ್ದಾರುಣಂ ತಪಃ।**
**ನಿವರ್ತತಾಂ ಮನಃ ಕಷ್ಟಾನ್ನಿಬಂಧಾತ್ ಫಲವರ್ಜಿತಾತ್॥** 17

**ಕಾಲಃ ಕ್ರೀಡನಕಾನಾಂತೇ ತದಂತೇಽಧ್ಯಯನಸ್ಯ ತೇ।**
**ತತಃ ಸಮಸ್ತಭೋಗಾನಾಂ ತದಂತೇ ಚೇಷ್ಯತೇ ತಪಃ॥** 18

**ಕಾಲಃ ಕ್ರೀಡನಕಾನಾಂ ಯಸ್ತವ ಬಾಲಸ್ಯ ಪುತ್ರಕ।**
**ತಸ್ಮಿಂಸ್ತ್ವಮಿಚ್ಛಸಿ ತಪಃ ಕಿಂ ನಾಶಾಯಾತ್ಮನೋ ರತಃ॥** 19

**ಮತ್ಪ್ರೀತಿಃ ಪರಮೋ ಧರ್ಮೋ ವಯೋಽವಸ್ಥಾಕ್ರಿಯಾಕ್ರಮಮ್।**
**ಅನುವರ್ತಸ್ವ ಮಾ ಮೋಹಾನ್ನಿವರ್ತ್ಯಾಸ್ಮಾದಧರ್ಮತಃ॥** 20

**ಪರಿತ್ಯಜತಿ ವತ್ಸಾದ್ಯ ಯದೇತನ್ನ ಭವಾಂಸ್ತಪಃ।**
**ತ್ಯಕ್ಷ್ಯಾಮ್ಯಹಮಿಹ ಪ್ರಾಣಾಂಸ್ತತೋ ವೈ ಪಶ್ಯತಸ್ತವ॥** 21

---

ತಪಸ್ಸೆಲ್ಲಿ? ಈ ಕಷ್ಟವೂ ಹಠವೂ ಬೇಡ. ಪ್ರಯೋಜನವಿಲ್ಲದ್ದು ಇದು. ನಿನ್ನ ಮನಸ್ಸು ಈ ತಪಸ್ಸಿನಿಂದ ನಿವೃತ್ತವಾಗಲಿ (17). ನಿನಗೀಗ ಆಟದ ಸಾಮಾನುಗಳೊಂದಿಗೆ ಆಡುವ ಕಾಲ. ಇದಾದ ಮೇಲೆ ವಿದ್ಯಾಭ್ಯಾಸ. ಆಮೇಲೆ ಸಕಲ ಭೋಗಗಳನ್ನೂ ಅನುಭವಿಸಿ, ಅನಂತರ ಮಾಡಬೇಕಾದ್ದು ತಪಸ್ಸು (18). ಮಗು, ಬಾಲಕನಾದ ನಿನಗೆ ಇದು ಆಟವಾಡುತ್ತಿರಬೇಕಾದ ಕಾಲ. ಈ ಸಮಯದಲ್ಲಿ ತಪಸ್ಸು ಮಾಡಲು ಬಯಸುತ್ತೀಯಲ್ಲ! ಏಕೆ ಹೀಗೆ ನಿನ್ನ ನಾಶವನ್ನು ಮಾಡಿಕೊಳ್ಳಲು ಹೊರಟಿದ್ದೀಯೆ? (19). ನನ್ನನ್ನು ಸಂತೋಷಪಡಿಸುವುದು ನಿನಗೆ ಶ್ರೇಷ್ಠವಾದ ಧರ್ಮ. ನಿನ್ನ ವಯಸ್ಸಿನ ಸ್ಥಿತಿಗೆ ತಕ್ಕ ಕೆಲಸದಲ್ಲಿ ನಿರತನಾಗಬೇಕು. ಅಜ್ಞಾನದಿಂದಾದ ಈ ತಪಸ್ಸು ಬೇಡ. ಇದು ಅಧರ್ಮ. ಇದನ್ನು ತೊರೆದು ಬಿಡು (20). ಮಗು, ನೀನು ಈ ತಪಶ್ಚರಣೆಯನ್ನು ನಿಲ್ಲಿಸದಿದ್ದರೆ, ಇದೋ, ನಿನ್ನ ಕಣ್ಣೆದುರಿಗೆ ನಾನು ಪ್ರಾಣವನ್ನು ಬಿಡುತ್ತೇನೆ!" ಎಂದಳು (21). ವಿಷ್ಣುವಿನ ಧ್ಯಾನದಲ್ಲಿ ಏಕಾಗ್ರಚಿತ್ತನಾಗಿದ್ದ ಧ್ರುವನು, ಈ ಪ್ರಕಾರ ಕಣ್ಣಲ್ಲಿ ನೀರು ತುಂಬಿಕೊಂಡು

*ಶ್ರೀ ಪರಾಶರ ಉವಾಚ:*

**ತಾಂ ಪ್ರಲಾಪವತೀಮೇವಂ ಬಾಷ್ಪಾಕುಲವಿಲೋಚನಾಮ್ ।**
**ಸಮಾಹಿತಮನಾ ವಿಷ್ಣೌ ಪಶ್ಯನ್ನಪಿ ನ ದೃಷ್ಟವಾನ್ ॥** 22

**ವತ್ಸ ವತ್ಸ ಸುಘೋರಾಣಿ ರಕ್ಷಾಂಸ್ಯೇತಾನಿ ಭೀಷಣೇ ।**
**ವನೇಽಭ್ಯುದ್ಯತಶಸ್ತ್ರಾಣಿ ಸಮಾಯಾಂತ್ಯಪಗಮ್ಯತಾಮ್ ॥** 23

**ಇತ್ಯುಕ್ತ್ವಾ ಪ್ರಯಯೌ ಸಾಥ ರಕ್ಷಾಂಸ್ಯಾವಿರ್ಬಭುಸ್ತತಃ ।**
**ಅಭ್ಯುದ್ಯತೋಗ್ರಶಸ್ತ್ರಾಣಿ ಜ್ವಾಲಾಮಾಲಾಕುಲೈರ್ಮುಖೈಃ ॥** 24

**ತತೋ ನಾದಾನತೀವೋಗ್ರಾನ್ ರಾಜಪುತ್ರಸ್ಯ ತೇ ಪುರಃ ।**
**ಮುಮುಚುರ್ದೀಪ್ತಶಸ್ತ್ರಾಣಿ ಭ್ರಾಮಯಂತೋ ನಿಶಾಚರಾಃ ॥** 25

**ಶಿವಾಶ್ಚ ಶತಶೋ ನೇದುಃ ಸಜ್ವಾಲಾಕವಲೈರ್ಮುಖೈಃ ।**
**ತ್ರಾಸಾಯ ತಸ್ಯ ಬಾಲಸ್ಯ ಯೋಗಯುಕ್ತಸ್ಯ ಸರ್ವದಾ ॥** 26

**ಹನ್ಯತಾಂ ಹನ್ಯತಾಮೇಷ ಛಿದ್ಯತಾಂ ಛಿದ್ಯತಾಮಯಮ್ ।**
**ಭಕ್ಷ್ಯತಾಂ ಭಕ್ಷ್ಯತಾಂ ಚಾಯಮಿತ್ಯೂಚುಸ್ತೇ ನಿಶಾಚರಾಃ ॥** 27

---

ಹಲುಬುತ್ತಿದ್ದ ಮಾಯಾ ಸುನೀತಿಯನ್ನು ಕಂಡರೂ ಕಾಣಲಿಲ್ಲ! (22). ಮತ್ತೆ ಅವಳು "ಮಗು, ಮಗು, ಘೋರವಾದ ಈ ಕಾಡಿನಲ್ಲಿ ಭಯಂಕರ ರಾದ ರಾಕ್ಷಸರು ಆಯುಧಗಳನ್ನು ಹಿರಿದು ಇತ್ತ ಬರುತ್ತಿದ್ದಾರೆ! ಓಡು, ಓಡು!" ಎಂದು ಹೇಳಿ ಹೊರಟುಹೋದಳು. ಅಷ್ಟರಲ್ಲಿ ಬೆಂಕಿಯ ಜ್ವಾಲೆ ಯನ್ನು ಹೊರಸೂಸುತ್ತಿದ್ದ ಮುಖಗಳುಳ್ಳ ರಾಕ್ಷಸರು ಉಗ್ರವಾದ ಆಯುಧ ಗಳನ್ನು ಹಿಡಿದು ಪ್ರಕಟವಾದರು (23-24). ರಾಜಪುತ್ರನೆದುರಿಗೆ ಬಂದು ಆ ನಿಶಾಚರರು ಭೀಕರವಾದ ಆಯುಧಗಳನ್ನು ಝಳಪಿಸುತ್ತಾ ಅತ್ಯುಗ್ರ ವಾಗಿ ಗರ್ಜಿಸಿದರು. ಅಗ್ನಿಜ್ವಾಲೆಗಳನ್ನು ಬಾಯಿಂದ ಕಕ್ಕುತ್ತಾ ನೂರಾರು ನರಿಗಳು ಊಳಿಟ್ಟವು. ಸದಾ ಯೋಗಯುಕ್ತನಾದ ಆ ಬಾಲಕನನ್ನು ಹೆದರಿಸುವುದಕ್ಕಾಗಿ ರಾಕ್ಷಸರು "ಇವನನ್ನು ಕೊಲ್ಲಿರಿ, ಕೊಲ್ಲಿರಿ! ಕತ್ತರಿಸಿರಿ, ಕತ್ತರಿಸಿರಿ! ತಿನ್ನಿರಿ, ತಿನ್ನಿರಿ!" ಎಂದು ಕೂಗಾಡಿದರು (25-26). ಸಿಂಹ, ಒಂಟೆ, ಮೊಸಳೆಗಳಂತೆ ಮುಖಗಳುಳ್ಳ ಆ ರಾಕ್ಷಸರು ಬಾಲಕನನ್ನು

**ತತೋ ನಾನಾವಿಧಾನ್ನಾದಾನ್ ಸಿಂಹೋಷ್ಟ್ರಮಕರಾನನಾಃ।**
**ತ್ರಾಸಾಯ ರಾಜಪುತ್ರಸ್ಯ ನೇದುಸ್ತೇ ರಜನೀಚರಾಃ॥** 28

**ರಕ್ಷಾಂಸಿ ತಾನಿ ತೇ ನಾದಾಃ ಶಿವಾಸ್ತಾನ್ಯಾಯುಧಾನಿ ಚ।**
**ಗೋವಿಂದಾಸಕ್ತಚಿತ್ತಸ್ಯ ಯಯುರ್ನೇಂದ್ರಿಯ ಗೋಚರಮ್॥** 29

**ಏಕಾಗ್ರಚೇತಾಃ ಸತತಂ ವಿಷ್ಣುಮೇವಾತ್ಮಸಂಶ್ರಯಮ್।**
**ದೃಷ್ಟವಾನ್ಪೃಥಿವೀನಾಥಪುತ್ರೋ ನಾನ್ಯಂ ಕಥಂಚನ॥** 30

**ತತಃ ಸರ್ವಾಸು ಮಾಯಾಸು ವಿಲೀನಾಸು ಪುನಃ ಸುರಾಃ।**
**ಸಂಕ್ಷೋಭಂ ಪರಮಂ ಜಗ್ಮುಸ್ತತ್ಪರಾಭವಶಂಕಿತಾಃ॥** 31

**ತೇ ಸಮೇತ್ಯ ಜಗದ್ಯೋನಿಮನಾದಿನಿಧನಂ ಹರಿಮ್।**
**ಶರಣ್ಯಂ ಶರಣಂ ಯಾತಾಸ್ತಪಸಾ ತಸ್ಯ ತಾಪಿತಾಃ॥** 32

*ದೇವಾ ಊಚುಃ :*

**ದೇವದೇವ ಜಗನ್ನಾಥ ಪರೇಶ ಪುರುಷೋತ್ತಮ।**
**ಧ್ರುವಸ್ಯ ತಪಸಾ ತಪ್ತಾಸ್ತ್ವಾಂ ವಯಂ ಶರಣಂ ಗತಾಃ॥** 33

---

ಹೆದರಿಸುವುದಕ್ಕಾಗಿ ಮತ್ತೆ ಮತ್ತೆ ಗರ್ಜಿಸಿದರು. ಆದರೆ ಗೋವಿಂದನಲ್ಲಿ ನೆಟ್ಟ ಚಿತ್ತವುಳ್ಳ ಧ್ರುವನಿಗೆ ಆ ರಾಕ್ಷಸರೂ ಕಾಣಿಸಲಿಲ್ಲ! ಗರ್ಜನೆಗಳೂ ಕೇಳಿಸಲಿಲ್ಲ! ನರಿಗಳಾಗಲಿ ಆಯುಧಗಳಾಗಲಿ ಗೋಚರಿಸಲಿಲ್ಲ! (28-29). ಆ ರಾಜಪುತ್ರನು ಏಕಾಗ್ರಚಿತ್ತನಾಗಿ, ತನ್ನ ಹೃದಯದಲ್ಲಿ ನೆಲೆಸಿದ್ದ ವಿಷ್ಣುವನ್ನೇ ಸತತವಾಗಿ ಧ್ಯಾನಿಸುತ್ತಿದ್ದನಲ್ಲದೆ, ಬೇರೆ ಏನನ್ನೂ ಗಮನಿಸಲಿಲ್ಲ. ಹೀಗೆ ಎಲ್ಲ ಮಾಯೆಗಳೂ ಮುಗಿದ ಮೇಲೆ, ಆ ಬಾಲಕನಿಂದ ಸೋಲಾಗುವುದೆಂಬ ಶಂಕೆಯಿಂದ ದೇವತೆಗಳು ಮತ್ತೆ ಚಿಂತಾಕುಲರಾದರು (30-31). ಧ್ರುವನು ಮಾಡುತ್ತಿದ್ದ ತಪಸ್ಸಿನ ಬೇಗೆಯಿಂದ ಕಂಗಾಲಾದ ದೇವತೆಗಳು ಜಗತ್ಕಾರಣನೂ ಆದ್ಯಂತರಹಿತನೂ ಶರಣ್ಯನೂ ಆದ ಶ್ರೀಹರಿಯ ಬಳಿಗೆ ಹೋಗಿ ಶರಣಾದರು (32). ಅವರು ಶ್ರೀಹರಿಯನ್ನು ಹೀಗೆ ಬೇಡಿಕೊಂಡರು. "ದೇವದೇವ, ಜಗನ್ನಾಥ, ಪರಮೇಶ್ವರ, ಪುರುಷೋತ್ತಮ, ಧ್ರುವನ ತಪಸ್ಸಿನಿಂದ ಬಳಲಿ ನಾವು ನಿನಗೆ ಶರಣಾ

**ದಿನೇ ದಿನೇ ಕಲಾಲೇಶೈಃ ಶಶಾಂಕಃ ಪೂರ್ಯತೇ ಯಥಾ।**
**ತಥಾಯಂ ತಪಸಾ ದೇವ ಪ್ರಯಾತ್ಯೃದ್ಧಿಮಹರ್ನಿಶಮ್॥ 34**

**ಔತ್ತಾನಪಾದಿತಪಸಾ ವಯಮಿತ್ಥಂ ಜನಾರ್ದನ।**
**ಭೀತಾಸ್ತ್ವಾಂ ಶರಣಂ ಯಾತಾಸ್ತಪಸಸ್ತಂ ನಿವರ್ತಯ॥ 35**

**ನ ವಿದ್ಮಃ ಕಿಂ ಸ ಶಕ್ರತ್ವಂ ಸೂರ್ಯತ್ವಂ ಕಿಮಭೀಪ್ಸತಿ।**
**ವಿತ್ತಪಾಂಬುಪಸೋಮಾನಾಂ ಸಾಭಿಲಾಷಃ ಪದೇಷು ಕಿಮ್॥ 36**

**ತದಸ್ಮಾಕಂ ಪ್ರಸೀದೇಶ ಹೃದಯಾಚ್ಛಲ್ಯಮುದ್ಧರ।**
**ಉತ್ತಾನಪಾದತನಯಂ ತಪಸಃ ಸನ್ನಿವರ್ತಯ॥ 37**

*ಶ್ರೀ ಭಗವಾನುವಾಚ:*

**ನೇಂದ್ರತ್ವಂ ನ ಚ ಸೂರ್ಯತ್ವಂ ನೈವಾಂಬುಪಧನೇಶತಾಮ್।**
**ಪ್ರಾರ್ಥಯತ್ಯೇಷ ಯಂ ಕಾಮಂ ತಂ ಕರೋಮ್ಯಖಿಲಂ ಸುರಾಃ॥ 38**

---

ಗಿದ್ದೇವೆ (33). (ಶುಕ್ಲಪಕ್ಷದಲ್ಲಿ) ದಿನದಿನವೂ ಚಂದ್ರನು ಕಲೆಗಳಿಂದ ಪೂರ್ಣನಾಗಿ ಹೇಗೆ ವರ್ಧಿಸುತ್ತ ಹೋಗುತ್ತಾನೋ, ಹಾಗೆ ಈತನು, ಓ ಪ್ರಭು, ಹಗಲು ರಾತ್ರಿಗಳೆನ್ನದೆ ತಪಸ್ಸಿನಿಂದ ವರ್ಧಿಸುತ್ತಲೇ ಇದ್ದಾನೆ. ಆದ್ದರಿಂದ, ಜನಾರ್ದನ, ನಾವು ಭೀತರಾಗಿ ನಿನಗೆ ಶರಣಾಗಿದ್ದೇವೆ. ಉತ್ತಾನಪಾದರಾಜನ ಮಗನು ತಪಸ್ಸಿನಿಂದ ನಿವೃತ್ತನಾಗುವಂತೆ ಮಾಡು (34-35). ಅವನೇನು ಇಂದ್ರಪದವಿಯನ್ನು ಬಯಸುತ್ತಿದ್ದಾನೋ ಸೂರ್ಯನಾಗಬೇಕೆಂದು ಇದ್ದಾನೋ ನಮಗೆ ತಿಳಿಯದು! ಅಥವಾ ಕುಬೇರನೋ ವರುಣನೋ ಚಂದ್ರನೋ ಆಗುವ ಅಭಿಲಾಷೆ ಇರಬಹುದೆ! ಆದ್ದರಿಂದ ಸ್ವಾಮಿ, ನಮ್ಮಲ್ಲಿ ಪ್ರಸನ್ನನಾಗು. (ಧ್ರುವನ ತಪಸ್ಸು ನಮಗೆ ಛರ್ಚಿಯಾಗಿದೆ.) ಈ ಛರ್ಚಿಯನ್ನು ನಮ್ಮ ಎದೆಯಿಂದ ಕಿತ್ತುಹಾಕು. ಈ ಉತ್ತಾನಪಾದಪುತ್ರನನ್ನು ತಪಸ್ಸಿನಿಂದ ನಿವೃತ್ತಿಗೊಳಿಸು" ಎಂದರು (36-37). ಆಗ ಭಗವಂತನು "ಎಲೈ ದೇವತೆಗಳೆ, ಈತನು ಇಂದ್ರತ್ವವನ್ನಾಗಲಿ ಸೂರ್ಯತ್ವವನ್ನಾಗಲಿ ಬಯಸುತ್ತಿಲ್ಲ. ವರುಣನೋ ಕುಬೇರನೋ ಆಗಬೇಕೆಂದೂ ಇಚ್ಛಿಸುತ್ತಿಲ್ಲ. ಅವನ ಕಾಮನೆ ನನಗೆ ಗೊತ್ತು, ಅದನ್ನು

**ಯಾತ ದೇವಾ ಯಥಾಕಾಮಂ ಸ್ವಸ್ಥಾನಂ ವಿಗತಜ್ವರಾಃ।**
**ನಿವರ್ತಯಾಮ್ಯಹಂ ಬಾಲಂ ತಪಸ್ಯಾಸಕ್ತಮಾನಸಮ್॥ 39**

*ಶ್ರೀ ಪರಾಶರ ಉವಾಚ:*

**ಇತ್ಯುಕ್ತಾ ದೇವದೇವೇನ ಪ್ರಣಮ್ಯ ತ್ರಿದಶಾಸ್ತತಃ।**
**ಪ್ರಯಯುಃ ಸ್ವಾನಿ ಧಿಷ್ಣ್ಯಾನಿ ಶತಕ್ರತುಪುರೋಗಮಾಃ॥ 40**

**ಭಗವಾನಪಿ ಸರ್ವಾತ್ಮಾ ತನ್ಮಯತ್ವೇನ ತೋಷಿತಃ।**
**ಗತ್ವಾ ಧ್ರುವಮುವಾಚೇದಂ ಚತುರ್ಭುಜವಪುರ್ಹರಿಃ॥ 41**

*ಶ್ರೀ ಭಗವಾನುವಾಚ:*

**ಔತ್ತಾನಪಾದೇ ಭದ್ರಂ ತೇ ತಪಸಾ ಪರಿತೋಷಿತಃ।**
**ವರದೋಽಹಮನುಪ್ರಾಪ್ತೋ ವರಂ ವರಯ ಸುವ್ರತ॥ 42**

**ಬಾಹ್ಯಾರ್ಥನಿರಪೇಕ್ಷಂ ತೇ ಮಯಿ ಚಿತ್ತಂ ಯದಾಹಿತಮ್।**
**ತುಷ್ಟೋಽಹಂ ಭವತಸ್ತೇನ ತದ್ವೃಣೀಷ್ವ ವರಂ ಪರಮ್॥ 43**

---

ಪೂರ್ಣವಾಗಿ ನೆರವೇರಿಸುವೆನು (38). ದೇವತೆಗಳೆ, ನೀವು ನಿಶ್ಚಿಂತರಾಗಿ ನಿಮ್ಮ ನಿಮ್ಮ ಸ್ಥಳಗಳಿಗೆ ಇಚ್ಛಾನುಸಾರ ಹೊರಟುಹೋಗತಕ್ಕದ್ದು. ತಪಸ್ಸಿನಲ್ಲಿ ದೃಢಚಿತ್ತನಾಗಿರುವ ಆ ಬಾಲಕನನ್ನು ತಪಸ್ಸಿನಿಂದ ನಿವೃತ್ತಿಗೊಳಿಸುತ್ತೇನೆ" ಎಂದು ಹೇಳಿದನು (39). ದೇವದೇವನು ಈ ರೀತಿ ನುಡಿಯಲಾಗಿ ಇಂದ್ರಾದಿ ದೇವತೆಗಳು ಆತನಿಗೆ ವಂದಿಸಿ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಇತ್ತ ಸರ್ವಾತ್ಮನಾದ ಭಗವಂತನು ಧ್ರುವನ ತನ್ಮಯತೆಗೆ ಸಂಪ್ರೀತನಾಗಿ, ಧ್ರುವನ ಬಳಿ ಚತುರ್ಭುಜಾಕೃತಿಯಿಂದ ಪ್ರತ್ಯಕ್ಷನಾಗಿ ಇಂತೆಂದನು (40-41): "ಉತ್ತಾನಪಾದತನಯ, ನಿನಗೆ ಶುಭವಾಗಲಿ! ನಿನ್ನ ತಪಸ್ಸಿಗೆ ಮೆಚ್ಚಿ ನಾನು ವರವನ್ನು ನೀಡಲು ಬಂದಿದ್ದೇನೆ. ಸುವ್ರತ, ವರವನ್ನು ಕೇಳಿಕೊ. ಬಾಹ್ಯವಸ್ತುಗಳನ್ನು ನೀನು ತುಚ್ಛೀಕರಿಸಿ ನನ್ನಲ್ಲಿ ದೃಢವಾದ ಚಿತ್ತವನ್ನು ನಿಲ್ಲಿಸಿದ್ದೀಯೆ. ಆದರಿಂದ ನಾನು ಸಂತುಷ್ಟನಾಗಿದ್ದೇನೆ. ಬೇಕಾದ ವರವನ್ನು ಕೇಳಿಕೊ" ಎಂದನು (42-43). ದೇವದೇವನ ಈ ನುಡಿಯನ್ನು ಕೇಳಿ ಬಾಲಕನು ಕಣ್ತೆರೆದನು.

*ಶ್ರೀ ಪರಾಶರ ಉವಾಚ:*

**ಶ್ರುತ್ವೇತ್ಥಂ ಗದಿತಂ ತಸ್ಯ ದೇವದೇವಸ್ಯ ಬಾಲಕಃ।**
**ಉನ್ಮೀಲಿತಾಕ್ಷೋ ದದೃಶೇ ಧ್ಯಾನದೃಷ್ಟಂ ಹರಿಂ ಪುರಃ॥ 44**

**ಶಂಖಚಕ್ರಗದಾಶಾರ್ಙ್ಗವರಾಸಿಧರಮಚ್ಯುತಮ್।**
**ಕಿರೀಟಿನಂ ಸಮಾಲೋಕ್ಯ ಜಗಾಮ ಶಿರಸಾ ಮಹೀಮ್॥ 45**

**ರೋಮಾಂಚಿತಾಂಗಃ ಸಹಸಾ ಸಾಧ್ವಸಂ ಪರಮಂ ಗತಃ।**
**ಸ್ತವಾಯ ದೇವದೇವಸ್ಯ ಸ ಚಕ್ರೇ ಮಾನಸಂ ಧ್ರುವಃ॥ 46**

**ಕಿಂ ವದಾಮಿ ಸ್ತುತಾವಸ್ಯ ಕೇನೋಕ್ತೇನಾಸ್ಯ ಸಂಸ್ತುತಿಃ।**
**ಇತ್ಯಾಕುಲಮತಿರ್ದೇವಂ ತಮೇವ ಶರಣಂ ಯಯೌ॥ 47**

*ಧ್ರುವ ಉವಾಚ:*

**ಭಗವಾನ್ ಯದಿ ಮೇ ತೋಷಂ ತಪಸಾ ಪರಮಂ ಗತಃ।**
**ಸ್ತೋತುಂ ತದಹಮಿಚ್ಛಾಮಿ ವರಮೇನಂ ಪ್ರಯಚ್ಛ ಮೇ॥ 48**

---

ಧ್ಯಾನದೃಷ್ಟಿಗೆ ಗೋಚರನಾದ ಶ್ರೀಹರಿಯು ಎದುರಿಗೆ ನಿಂತಿರುವುದನ್ನು ಕಂಡನು. ಶಂಖ, ಚಕ್ರ, ಗದೆ, ಶಾರ್ಙ್ಗಧನುಸ್ಸು, ಖಡ್ಗಗಳನ್ನು ಹಿಡಿದ ಕಿರೀಟಧಾರಿಯಾದ ಅಚ್ಯುತನನ್ನು ಅವಲೋಕಿಸಿ, ತಲೆಬಾಗಿ ನೆಲಮುಟ್ಟಿ ನಮಸ್ಕರಿಸಿದನು (44-45). ಅವನ ಅಂಗಗಳೆಲ್ಲವೂ ರೋಮಾಂಚ ಗೊಂಡವು. ಇದಕ್ಕಿದ್ದಂತೆ ಒಂದು ರೀತಿಯ ಭಯ ಆವರಿಸಿತು. ದೇವದೇವನನ್ನು ಸ್ತುತಿಸಬೇಕೆಂದು ಧ್ರುವನಿಗೆ ಮನಸ್ಸಾಯಿತು. ಆದರೆ "ಈತನನ್ನು ಸ್ತುತಿಸುವುದಕ್ಕೆ ಏನು ಹೇಳಲಿ? ಏನು ಹೇಳಿದರೆ ಭಗವಂತ ನಿಗೆ ಸರಿಯಾದ ಸ್ತುತಿಯಾದೀತು?" ಎಂದು ವ್ಯಾಕುಲನಾಗಿ ಮತ್ತೆ ಭಗವಂತನಿಗೆ ಶರಣಾದನು (46-47). "ಓ ಸ್ವಾಮಿ, ನನ್ನ ತಪಸ್ಸಿನಿಂದ ನಿನಗೆ ಪರಮ ಸಂತೋಷವಾಗಿದ್ದರೆ, ನಿನ್ನ ಸ್ತೋತ್ರ ಮಾಡಲು ಬಯಸುತ್ತೇನೆ. ಆದ್ದರಿಂದ ಈ ವರವನ್ನು ಅನುಗ್ರಹಿಸು. ವೇದಜ್ಞರಾದ ಬ್ರಹ್ಮಾದಿಗಳಿಗೂ ಯಾವಾತನು ಅಜ್ಞೇಯನಾಗಿರುವನೋ ಅಂತಹ

**ಬ್ರಹ್ಮಾದ್ಯೈರ್ಯಸ್ಯ ವೇದಜ್ಞೈರ್ಜ್ಞಾಯತೇ ಯಸ್ಯ ನೋ ಗತಿಃ।**
**ತಂ ತ್ವಾಂ ಕಥಮಹಂ ದೇವ ಸ್ತೋತುಂ ಶಕ್ನೋಮಿ ಬಾಲಕಃ॥ 49**

**ತ್ವದ್ಭಕ್ತಿಪ್ರವಣಂ ಹ್ಯೇತತ್ಪರಮೇಶ್ವರ ಮೇ ಮನಃ।**
**ಸ್ತೋತುಂ ಪ್ರವೃತ್ತಂ ತ್ವತ್ಪಾದೌ ತತ್ರ ಪ್ರಜ್ಞಾಂ ಪ್ರಯಚ್ಛ ಮೇ॥ 50**

*ಶ್ರೀಪರಾಶರ ಉವಾಚ:*

**ಶಂಖಪ್ರಾಂತೇನ ಗೋವಿಂದಸ್ತಂ ಪಸ್ಪರ್ಶ ಕೃತಾಂಜಲಿಮ್।**
**ಉತ್ತಾನಪಾದತನಯಂ ದ್ವಿಜವರ್ಯ ಜಗತ್ಪತಿಃ॥ 51**

**ಅಥ ಪ್ರಸನ್ನವದನಃ ಸ ಕ್ಷಣಾನ್ನೃಪನಂದನಃ।**
**ತುಷ್ಟಾವ ಪ್ರಣತೋ ಭೂತ್ವಾ ಭೂತಧಾತಾರಮಚ್ಯುತಮ್॥ 52**

*ಧ್ರುವ ಉವಾಚ:*

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವಚ।**
**ಭೂತಾದಿರಾದಿಪ್ರಕೃತಿರ್ಯಸ್ಯ ರೂಪಂ ನತೋಽಸ್ಮಿ ತಮ್॥ 53**

---

ನಿನ್ನನ್ನು, ಹೇ ದೇವ, ಬಾಲಕನಾದ ನಾನು ಕೀರ್ತಿಸುವುದೆಂತು? ಹೇ ಪರಮೇಶ್ವರ, ನಿನ್ನ ಭಕ್ತಿಯಲ್ಲಿ ಮುಳುಗಿದ ನನ್ನ ಮನಸ್ಸು ನಿನ್ನ ಪಾದ ಗಳನ್ನು ಸ್ತುತಿಸುವುದಕ್ಕೆ ಪ್ರವೃತ್ತವಾಗಿದೆ. ಅದಕ್ಕೆ ಬೇಕಾದ ಪ್ರಜ್ಞಾಶಕ್ತಿಯನ್ನು ದಯಪಾಲಿಸು" ಎಂದು ನುಡಿದನು (49-50). ಹೀಗೆ ನುಡಿದು ಕೃತಾಂಜಲಿಯಾಗಿ ನಿಂತಿದ್ದ ಧ್ರುವನನ್ನು, ಮೈತ್ರೇಯ, ಜಗದೀಶ್ವರನಾದ ಗೋವಿಂದನು ಶಂಖದ ತುದಿಯಿಂದ ಸ್ಪರ್ಶಿಸಿದನು. ಒಡನೆಯೇ ಧ್ರುವನು ಪ್ರಸನ್ನವದನನಾಗಿ ನಮಸ್ಕರಿಸಿ ಸರ್ವಭೂತಗಳಿಗೆ ಆಧಾರನಾದ ಅಚ್ಯುತ ನನ್ನು ಈ ಪ್ರಕಾರ ಸ್ತುತಿಸಲಾರಂಭಿಸಿದನು (51-52). "ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ, ಮೂಲಪ್ರಕೃತಿ— ಇವೆಲ್ಲವೂ ಯಾವಾತನ ರೂಪವೋ ಆ ಭಗವಂತನನ್ನು ನಮಸ್ಕರಿಸುತ್ತೇನೆ. ಯಾವಾತನು ಶುದ್ಧನೂ ಸೂಕ್ಷ್ಮನೂ ಸರ್ವವ್ಯಾಪಿಯೂ ಪ್ರಕೃತಿಗಿಂತ ಆಚೆಗೆ ಇರತಕ್ಕವನೂ ಆಗಿದ್ದಾನೋ, ಪುರುಷನು (ಜೀವಾತ್ಮನು) ಯಾರ

**ಶುದ್ಧಃ ಸೂಕ್ಷ್ಮೋಽಖಿಲವ್ಯಾಪೀ ಪ್ರಧಾನಾತ್ಪರತಃಪುಮಾನ್।**
**ಯಸ್ಯ ರೂಪಂ ನಮಸ್ತಸ್ಮೈ ಪುರುಷಾಯ ಗುಣಾಶಿನೇ॥ 54**

**ಭೂರಾದೀನಾಂ ಸಮಸ್ತಾನಾಂ ಗಂಧಾದೀನಾಂ ಚ ಶಾಶ್ವತಃ।**
**ಬುದ್ಧ್ಯಾದೀನಾಂ ಪ್ರಧಾನಸ್ಯ ಪುರುಷಸ್ಯ ಚ ಯಃ ಪರಃ॥ 55**

**ತಂ ಬ್ರಹ್ಮಭೂತಮಾತ್ಮಾನಮಶೇಷಜಗತಃ ಪತಿಮ್।**
**ಪ್ರಪದ್ಯೇ ಶರಣಂ ಶುದ್ಧಂ ತ್ವದ್ರೂಪಂ ಪರಮೇಶ್ವರ॥ 56**

**ಬೃಹತ್ತ್ವಾದ್ ಬೃಂಹಣತ್ವಾಚ್ಚ ಯದ್ರೂಪಂ ಬ್ರಹ್ಮಸಂಜ್ಞಿತಮ್।**
**ತಸ್ಮೈ ನಮಸ್ತೇ ಸರ್ವಾತ್ಮನ್ ಯೋಗಿಚಿಂತ್ಯಾವಿಕಾರಿಣೇ॥ 57**

**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್।**
**ಸರ್ವವ್ಯಾಪೀ ಭುವಃ ಸ್ಪರ್ಶಾದತ್ಯತಿಷ್ಠದ್ದಶಾಂಗುಲಮ್॥ 58**

---

ಇನ್ನೊಂದು ರೂಪವೋ ಅಂತಹ ನಿರ್ಗುಣನಾದ ಪರಮಾತ್ಮನಿಗೆ ನಮಸ್ಕಾರ (53-54). ಹೇ ಪರಮೇಶ್ವರ, ಪೃಥಿವೀ ಮೊದಲಾದ ಭೂತಗಳಿಗೂ ಗಂಧವೇ ಮೊದಲಾದ ಅವುಗಳ ಗುಣಗಳಿಗೂ ಬುದ್ಧಿ ಮೊದಲಾದ ಅಂತಃಕರಣ-ಇಂದ್ರಿಯಗಳಿಗೂ ಪ್ರಕೃತಿಗೂ ಪುರುಷನಿಗೂ (ಜೀವ) ಪರನೂ ಶಾಶ್ವತನೂ ಪರಬ್ರಹ್ಮವೂ ಆತ್ಮನೂ ಸಕಲಜಗದೀಶನೂ ಶುದ್ಧನೂ ಆದ ನಿನಗೆ ಶರಣಾಗತನಾಗಿದ್ದೇನೆ (55-56). ಬೃಹತ್ (ದೊಡ್ಡದು) ಆದ್ದರಿಂದಲೂ ಬೃಂಹಣ (ವರ್ಧನಶೀಲ) ವಾದ್ದರಿಂದಲೂ ಯಾವುದು ಬ್ರಹ್ಮವೆನಿಸಿದೆಯೋ ಅಂತಹ ನಿನಗೆ, ಯೋಗಿಧ್ಯೇಯನೂ ಅವಿಕಾರಿಯೂ ಆದ ನಿನಗೆ, ಓ ಸರ್ವಾತ್ಮನೇ, ನಮಸ್ಕಾರ (57). ನೀನು ಸಾವಿರ ಶಿರಸ್ಸುಗಳುಳ್ಳ ಪುರುಷನಾಗಿದ್ದೀಯೆ. ನಿನಗೆ ಸಾವಿರ ಕಣ್ಣುಗಳು; ಸಾವಿರ ಪಾದಗಳು; ಸರ್ವವ್ಯಾಪಿಯಾದ ನೀನು ಬ್ರಹ್ಮಾಂಡದ ಸ್ಪರ್ಶವನ್ನೂ ಮೀರಿ ಹತ್ತು ಅಂಗುಲ ಆಚೆಗೆ ವ್ಯಾಪಿಸಿದ್ದೀಯೆ* (58). ಹಿಂದೆ ಇದ್ದದ್ದು

---

* ಇಲ್ಲಿ ಪುರುಷಸೂಕ್ತದ ಅರ್ಥ ಪ್ರಸ್ತುತವಾಗಿದೆ. ಸಾವಿರ ತಲೆ, ಸಾವಿರ ಕಣ್ಣುಗಳು—ಮೊದಲಾದವುಗಳ ಅಭಿಪ್ರಾಯ ಭಗವಂತನು ಸರ್ವವ್ಯಾಪಿ, ಸರ್ವಜ್ಞ—ಎಂದೇ. ಆತನ ವ್ಯಾಪ್ತಿಗೆ ಮೇರೆಯಿಲ್ಲ—ಎಂಬುದನ್ನು 'ಅತ್ಯತಿಷ್ಠದ್ದಶಾಂಗುಲಂ' ಎಂಬುದು ಸೂಚಿಸುತ್ತದೆ.

**ಯದ್‌ಭೂತಂ ಯಚ್ಚ ವೈ ಭವ್ಯಂ ಪುರುಷೋತ್ತಮ ತದ್ಭವಾನ್।**
**ತ್ವತ್ತೋ ವಿರಾಟ್ ಸ್ವರಾಟ್ ಸಮ್ರಾಟ್‌ತ್ವತ್ತಶ್ಚಾಪ್ಯಧಿಪೂರುಷಃ॥** 59

**ಅತ್ಯರಿಚ್ಯತ ಸೋಽಧಶ್ಚ ತಿರ್ಯಗೂರ್ಧ್ವಂ ಚ ವೈ ಭುವಃ।**
**ತ್ವತ್ತೋ ವಿಶ್ವಮಿದಂ ಜಾತಂ ತ್ವತ್ತೋ ಭೂತಭವಿಷ್ಯತೀ॥** 60

**ತ್ವದ್‌ರೂಪಧಾರರಿಣಶ್ಚಾಂತರ್ಭೂತಂ ಸರ್ವಮಿದಂ ಜಗತ್।**
**ತ್ವತ್ತೋ ಯಜ್ಞಃ ಸರ್ವಹುತಃ ಪೃಷದಾಜ್ಯಂ ಪಶುರ್ದ್ವಿಧಾ॥** 61

**ತ್ವತ್ತಃ ಋಚೋಽಥ ಸಾಮಾನಿ ತ್ವತ್ತಶ್ಛಂದಾಂಸಿ ಜಜ್ಞಿರೇ।**
**ತ್ವತ್ತೋ ಯಜೂಂಷ್ಯಜಾಯಂತ ತ್ವತ್ತೋಽಶ್ವಾಶ್ಚೈಕತೋ ದತಃ॥**

**ಗಾವಸ್ತ್ವತ್ತಃ ಸಮುದ್ಭೂತಾಸ್ತ್ವತ್ತೋಽಜಾ ಅವಯೋ ಮೃಗಾಃ।**
**ತ್ವನ್ಮುಖಾದ್ ಬ್ರಾಹ್ಮಣಾಸ್ತ್ವತ್ತೋ ಬಾಹೋಃ ಕ್ಷತ್ರಮಜಾಯತ॥** 63

---

ಮುಂದೆ ಇರತಕ್ಕದ್ದು, ಪುರುಷೋತ್ತಮ, ಎಲ್ಲವೂ ನೀನೇ, *ವಿರಾಟ್, ಸ್ವರಾಟ್, ಸಮ್ರಾಟ್, ಸೃಷ್ಟಿಕರ್ತನಾದ ಬ್ರಹ್ಮ—ಎಲ್ಲವೂ ನಿನ್ನಿಂದಲೇ. ಭೂಮಂಡಲದ ಕೆಳಗೆ ಮೇಲೆ ಸುತ್ತಲೂ ನೀನೇ ವ್ಯಾಪಿಸಿದ್ದೀಯೆ. ಈ ವಿಶ್ವವು ನಿನ್ನಿಂದ ಹುಟ್ಟಿದೆ. ಭೂತ ಭವಿಷ್ಯತ್ತುಗಳೆಲ್ಲ ನಿನ್ನಿಂದಲೇ (59-60). ಈ ಜಗತ್ತೆಲ್ಲವೂ ನಿನ್ನ ಸ್ವರೂಪವಾದ ವಿಶ್ವದೊಳಗೇ ಇದೆ. ಸರ್ವ ಹವಿಸ್ಸುಗಳನ್ನೂ ಹವನ ಮಾಡತಕ್ಕ ಯಜ್ಞವೂ, ಪೃಷದಾಜ್ಯವೂ (ದಧಿ ಮತ್ತು ಘೃತ), ಎರಡು ಪ್ರಕಾರದ (ಗ್ರಾಮ್ಯ ಮತ್ತು ವನ್ಯ) ಪಶುವೂ ನಿನ್ನಿಂದಲೇ ಉದ್ಭವಿಸಿದೆ (61). ಋಕ್ಕು, ಸಾಮ ಮತ್ತು ಗಾಯತ್ರೀ ಮೊದಲಾದ ಛಂದಸ್ಸುಗಳೂ ನಿನ್ನಂದ ಹುಟ್ಟಿವೆ. ಯಜುರ್ವೇದವೂ ನಿನ್ನಿಂದಲೇ. ಅಶ್ವಗಳೂ, ಒಂದು ಸಾಲಿನ ಹಲ್ಲುಗಳುಳ್ಳ (ಎಮ್ಮೆ ಮೊದಲಾದ) ಪ್ರಾಣಿಗಳೂ ನಿನ್ನಿಂದ ಜನಿಸಿವೆ (62). ಹಸು, ಮೇಕೆ, ಕುರಿ, ಜಿಂಕೆ—ಎಲ್ಲವೂ ನಿನ್ನಿಂದ ಹುಟ್ಟಿವೆ. ನಿನ್ನ ಮುಖದಿಂದ ಬ್ರಾಹ್ಮಣರೂ ಬಾಹುವಿನಿಂದ ಕ್ಷತ್ರಿಯರೂ ತೊಡೆಯಿಂದ ವೈಶ್ಯರೂ ಪಾದಗಳಿಂದ

---

* ವಿರಾಟ್, ಸ್ವರಾಟ್, ಸಮ್ರಾಟ್—ಇವು ಬ್ರಹ್ಮಾಂಡದ ಅಂತರ್ಭೇದಗಳು. ಅಥವಾ ವಿರಾಟ್-ಬ್ರಹ್ಮಾಂಡ, ಸ್ವರಾಟ್-ಬ್ರಹ್ಮ, ಸಮ್ರಾಟ್-ಮನು.

**ವೈಶ್ಯಾಸ್ತವೋರುಜಾಃ ಶೂದ್ರಾಸ್ತವ ಪದ್ಭ್ಯಾಂ ಸಮುದ್ಗತಾಃ।**
**ಅಕ್ಷ್ಣೋಃ ಸೂರ್ಯೋಽನಿಲಃ ಪ್ರಾಣಾಚ್ಚಂದ್ರಮಾ ಮನಸಸ್ತವ॥ 64**

**ಪ್ರಾಣೋಽಂತಃ ಸುಷಿರಾಜ್ಜಾತೋ ಮುಖಾದಗ್ನಿರಜಾಯತ।**
**ನಾಭಿತೋ ಗಗನಂ ದ್ಯೌಶ್ಚ ಶಿರಸಃ ಸಮವರ್ತತ।**
**ದಿಶಃ ಶ್ರೋತ್ರಾತ್ ಕ್ಷಿತಿಃ ಪದ್ಭ್ಯಾಂ ತ್ವತ್ತಃ ಸರ್ವಮಭೂದಿದಮ್॥**

**ನ್ಯಗ್ರೋಧಃ ಸುಮಹಾನಲ್ಪೇ ಯಥಾ ಬೀಜೇ ವ್ಯವಸ್ಥಿತಃ।**
**ಸಂಯಮೇ ವಿಶ್ವಮಖಿಲಂ ಬೀಜಭೂತೇ ತಥಾ ತ್ವಯಿ॥ 66**

**ಬೀಜಾದಂಕುರಸಂಭೂತೋ ನ್ಯಗ್ರೋಧಸ್ತು ಸಮುತ್ಥಿತಃ।**
**ವಿಸ್ತಾರಂ ಚ ಯಥಾ ಯಾತಿ ತ್ವತ್ತಃ ಸೃಷ್ಟೌ ತಥಾ ಜಗತ್॥ 67**

**ಯಥಾ ಹಿ ಕದಲೀ ನಾನ್ಯಾ ತ್ವಕ್‌ಪತ್ರಾದಪಿ ದೃಶ್ಯತೇ।**
**ಏವಂ ವಿಶ್ವಸ್ಯ ನಾನ್ಯಸ್ತ್ವಂ ತ್ವತ್ಸ್ಥಾಯೀಶ್ವರ ದೃಶ್ಯತೇ॥ 68**

---

ಶೂದ್ರರೂ ಜನಿಸಿದರು. ಕಣ್ಣಿಂದ ಸೂರ್ಯನೂ ಪ್ರಾಣದಿಂದ ವಾಯುವೂ ಮನಸ್ಸಿನಿಂದ ಚಂದ್ರನೂ ಉದ್ಭವಿಸಿದರು (63-64). ನಾಸಾರಂಧ್ರದಿಂದ ಪ್ರಾಣವೂ ಮುಖದಿಂದ ಅಗ್ನಿಯೂ ನಾಭಿಯಿಂದ ಗಗನವೂ ಶಿರಸ್ಸಿನಿಂದ ಸ್ವರ್ಗಲೋಕವೂ ಹುಟ್ಟಿವೆ. ಕಿವಿಯಿಂದ ದಿಕ್ಕುಗಳೂ ಪಾದಗಳಿಂದ ಭೂಮಿಯೂ ಉದ್ಭವಿಸಿದವು. ಸರ್ವವೂ ನಿನ್ನಿಂದಲೇ ಹುಟ್ಟಿದ್ದು (65). ಚಿಕ್ಕದಾದ ಆಲದ ಬೀಜದಲ್ಲಿ ಮಹತ್ತರವಾದ ಆಲದ ಮರವು ಹೇಗೆ ನೆಲೆಸಿರುವುದೋ ಹಾಗೆ ಪ್ರಳಯಕಾಲದಲ್ಲಿ ಅಖಿಲ ವಿಶ್ವವೂ ಬೀಜ ಸ್ವರೂಪನಾದ ನಿನ್ನಲ್ಲಿ ನೆಲೆಸಿರುತ್ತದೆ. ಬೀಜದಿಂದ ಮೊಳಕೆಯಾಗಿ ಆಲದ ಮರವು ಹೇಗೆ ಬೆಳೆಯುವುದೋ ಹಾಗೆ ಸೃಷ್ಟಿಕಾಲದಲ್ಲಿ ಜಗತ್ತು ವಿಸ್ತಾರ ಗೊಳ್ಳುತ್ತದೆ (66-67). ಹೇ ಈಶ, ಬಾಳೆಯ ಮರವು ಸಿಪ್ಪೆ ಎಲೆಗಳಿಂದ ಹೇಗೆ ಬೇರೆಯಾಗಿಲ್ಲವೋ, ಹಾಗೆ ವಿಶ್ವಕ್ಕಿಂತ ನೀನು ಬೇರೆಯಾಗಿಲ್ಲ. ಇದೆಲ್ಲವೂ ನಿನ್ನಲ್ಲಿ ನೆಲೆಸಿದೆ (68). ನಿನ್ನಲ್ಲಿ ಹ್ಲಾದಿನಿಯೆಂಬ (ನಿರಂತರ ಆನಂದಮಯವಾದ) ಜ್ಞಾನವೂ ಮತ್ತು ಸಂಧಿನಿಯೆಂಬ (ವಿಚ್ಛೇದರಹಿತ

**ಹ್ಲಾದಿನೀ ಸಂಧಿನೀ ಸಂವಿತ್ತ್ವಯ್ಯೇಕಾ ಸರ್ವಸಂಸ್ಥಿತೌ।**
**ಹ್ಲಾದತಾಪಕರೀ ಮಿಶ್ರಾ ತ್ವಯಿ ನೋ ಗುಣವರ್ಜಿತೇ॥ 69**

**ಪೃಥಗ್ಭೂತೈಕಭೂತಾಯ ಭೂತಭೂತಾಯ ತೇ ನಮಃ।**
**ಪ್ರಭೂತಭೂತಭೂತಾಯ ತುಭ್ಯಂ ಭೂತಾತ್ಮನೇ ನಮಃ॥ 70**

**ವ್ಯಕ್ತಂ ಪ್ರಧಾನಪುರುಷೌ ವಿರಾಟ್ ಸಮ್ರಾಟ್ ಸ್ವರಾಟ್ ತಥಾ।**
**ವಿಭಾವ್ಯತೇಽಂತಃಕರಣೇ ಪುರುಷೇಷ್ವಕ್ಷಯೋ ಭವಾನ್॥ 71**

**ಸರ್ವಸ್ಮಿನ್ಸರ್ವಭೂತಸ್ತ್ವಂ ಸರ್ವಃ ಸರ್ವಸ್ವರೂಪಧೃತ್।**
**ಸರ್ವಂ ತ್ವತ್ತಸ್ತತಶ್ಚತ್ವಂ ನಮಃ ಸರ್ವಾತ್ಮನೇಽಸ್ತು ತೇ॥ 72**

**ಸರ್ವಾತ್ಮಕೋಽಸಿ ಸರ್ವೇಶ ಸರ್ವಭೂತಸ್ಥಿತೋ ಯತಃ।**
**ಕಥಯಾಮಿ ತತಃ ಕಿಂ ತೇ ಸರ್ವಂ ವೇತ್ಸಿ ಹೃದಿ ಸ್ಥಿತಮ್॥ 73**

---

ವಾದ) ಜ್ಞಾನವೂ ಅಭಿನ್ನರೂಪದಿಂದ ಇದೆ. ಆದರೆ ಆನಂದವನ್ನಾಗಲಿ ದುಃಖವನ್ನಾಗಲಿ ಕೊಡುವ ಅಥವಾ ಅವೆರಡನ್ನೂ ಕೊಡುವ ಸಂಮಿಶ್ರ ವಾದ ಜ್ಞಾನವು ನಿನ್ನಲ್ಲಿಲ್ಲ. ಏಕೆಂದರೆ, ನೀನು ನಿರ್ಗುಣನಾಗಿದ್ದೀಯೆ (69). ನೀನು (ಕಾರ್ಯದೃಷ್ಟಿಯಿಂದ) ವಿಭಿನ್ನರೂಪನೂ (ಕಾರಣದೃಷ್ಟಿಯಿಂದ) ಏಕರೂಪನೂ ಆಗಿದ್ದೀಯೆ. ಪಂಚಭೂತಗಳಿಗೆ ಕಾರಣವಾದ ಸೂಕ್ಷ್ಮ ಭೂತವೂ ಆಗಿದ್ದೀಯೆ. ನಿನಗೆ ನಮಸ್ಕಾರ. ನಾನಾ ಬಗೆಯ ಜೀವರೂಪ ನಾಗಿದ್ದೀಯೆ. ಎಲ್ಲ ಪ್ರಾಣಿಗಳ ಅಂತರಾತ್ಮನಾಗಿದ್ದೀಯೆ. ನಿನಗೆ ನಮಸ್ಕಾರ (70). (ಯೋಗಿಗಳ) ಅಂತಃಕರಣದಲ್ಲಿ ನೀನು ವ್ಯಕ್ತ, ಪ್ರಕೃತಿ, ಬ್ರಹ್ಮ, ವಿರಾಟ್, ಸಮ್ರಾಟ್, ಸ್ವರಾಟ್ ಆಗಿ ಕಾಣಿಸಿಕೊಳ್ಳುತ್ತೀಯೆ. (ಕ್ಷಯಿಸಿ ಹೋಗುವ) ಜನರಲ್ಲಿ ಅಕ್ಷಯನಾಗಿರತಕ್ಕವನು ನೀನು (71). ಆಕಾಶಾದಿ ಸಮಸ್ತ ವಸ್ತುಗಳಲ್ಲಿಯೂ ಮೂಲರೂಪನಾಗಿರತಕ್ಕವನು. ನೀನು ಸರ್ವನೂ ಆಗಿ ಸರ್ವರೂಪಗಳನ್ನೂ ಧರಿಸಿದ್ದೀಯೆ. ನಿನ್ನಿಂದ ಸರ್ವವೂ ಆಗಿದೆ. ಸರ್ವದಿಂದಲೂ ಉಳಿಯತಕ್ಕವನು ನೀನು. ಸರ್ವಾತ್ಮನಾದ ನಿನಗೆ ನಮಸ್ಕಾರ (72). ಸರ್ವಭೂತಗಳಲ್ಲಿಯೂ ಇರುವುದರಿಂದ ಓ ಸರ್ವೇಶ್ವರ, ಸರ್ವಾತ್ಮಕನಾಗಿದ್ದೀಯೆ. ಹೀಗಿರುವಾಗ ನಿನಗೆ ನಾನು

**ಸರ್ವಾತ್ಮನ್ ಸರ್ವಭೂತೇಶ ಸರ್ವಸತ್ತ್ವಸಮುದ್ಭವ।**
**ಸರ್ವಭೂತೋ ಭವಾನ್ವೇತ್ತಿ ಸರ್ವಸತ್ತ್ವಮನೋರಥಮ್॥ 74**

**ಯೋ ಮೇ ಮನೋರಥೋ ನಾಥ ಸಫಲಃ ಸ ತ್ವಯಾ ಕೃತಃ।**
**ತಪಶ್ಚ ತಪ್ತಂ ಸಫಲಂ ಯದ್ದೃಷ್ಟೋಽಸಿ ಜಗತ್ಪತೇ॥ 75**

*ಶ್ರೀಭಗವಾನುವಾಚ:*

**ತಪಸಸ್ತತ್ಫಲಂ ಪ್ರಾಪ್ತಂ ಯದ್ದೃಷ್ಟೋಽಹಂ ತ್ವಯಾ ಧ್ರುವ।**
**ಮದ್ದರ್ಶನಂ ಹಿ ವಿಫಲಂ ರಾಜಪುತ್ರ ನ ಜಾಯತೇ॥ 76**

**ವರಂ ವರಯ ತಸ್ಮಾತ್ತ್ವಂ ಯಥಾಭಿಮತಮಾತ್ಮನಃ।**
**ಸರ್ವಂ ಸಂಪದ್ಯತೇ ಪುಂಸಾಂ ಮಯಿ ದೃಷ್ಟಿಪಥಂ ಗತೇ॥ 77**

*ಧ್ರುವ ಉವಾಚ:*

**ಭಗವಾನ್ ಭೂತಭವ್ಯೇಶ ಸರ್ವಸ್ಯಾಸ್ತೇ ಭವಾನ್ ಹೃದಿ।**
**ಕಿಮಜ್ಞಾತಂ ತವ ಬ್ರಹ್ಮನ್ ಮನಸಾ ಯನ್ಮಯೇಕ್ಷಿತಮ್॥ 78**

---

ಹೇಳತಕ್ಕದ್ದೇನಿದೆ? ನನ್ನ ಹೃದಯದಲ್ಲಿರುವುದನ್ನು ನೀನು ಬಲ್ಲೆ (73). ಹೇ ಸರ್ವಾತ್ಮ, ಸರ್ವಭೂತೇಶ್ವರ, ಸರ್ವವಸ್ತುಗಳಿಗೆ ಕಾರಣ, ಸರ್ವಸ್ವರೂಪನಾದ ನೀನು ಸರ್ವಪ್ರಾಣಿಗಳ ಮನೋರಥವನ್ನು ತಿಳಿದೇ ಇರುತ್ತೀಯೆ. ಹೇ ಸ್ವಾಮಿ, ನಿನ್ನ ದರ್ಶನಮಾತ್ರದಿಂದ ನನ್ನ ಮನೋರಥವು ಸಫಲವಾಯಿತು. ಹೇ ಜಗನ್ನಾಥ, ತಪಸ್ಸು ಮಾಡಿದುದಕ್ಕೆ ಫಲ ದೊರೆಯಿತು" ಎಂದನು (74-75). ಆಗ ಭಗವಂತನು "ರಾಜಪುತ್ರ-ಧ್ರುವ, ತಪಸ್ಸಿಗೆ ನನ್ನ ದರ್ಶನವು ಫಲವಾಯಿತು. (ಆದರೆ ನನ್ನ ದರ್ಶನಕ್ಕೆ ಇನ್ನೊಂದು ಫಲ ಬೇಕು!) ನನ್ನ ದರ್ಶನವು ವಿಫಲವಾಗುವುದಿಲ್ಲ. ಆದ್ದರಿಂದ ನಿನಗೆ ಇಷ್ಟವಾದ ವರವನ್ನು ಕೇಳಿಕೊ. ನನ್ನ ದರ್ಶನವಾದಮೇಲೆ ಜನರಿಗೆ ಸರ್ವೇಷ್ಟವೂ ಸಿದ್ಧಿಸುತ್ತದೆ" ಎಂದು ನುಡಿದನು (76-77). ಧ್ರುವನು ಹೇಳಿದನು: "ಹೇ ಭಗವನ್, ಭೂತಭವಿಷ್ಯತ್ತುಗಳ ಈಶ್ವರ, ಸರ್ವರ ಹೃದಯದಲ್ಲಿ ಇರುವ ನಿನಗೆ, ಹೇ ಬ್ರಹ್ಮನ್, ನನ್ನ ಮನಸ್ಸಿಗೆ

**ತಥಾಪಿ ತುಭ್ಯಂ ದೇವೇಶ ಕಥಯಿಷ್ಯಾಮಿ ಯನ್ಮಯಾ।**
**ಪ್ರಾರ್ಥ್ಯತೇ ದುರ್ವಿನೀತೇನ ಹೃದಯೇನಾತಿದುರ್ಲಭಮ್॥ 79**

**ಕಿಂ ವಾ ಸರ್ವಜಗತ್ಸ್ರಷ್ಟುಃ ಪ್ರಸನ್ನೇ ತ್ವಯಿ ದುರ್ಲಭಮ್।**
**ತ್ವತ್ಪ್ರಸಾದಫಲಂ ಭುಂಕ್ತೇ ತ್ರೈಲೋಕ್ಯಂ ಮಘವಾನಪಿ॥ 80**

**ನೈತದ್ರಾಜಾಸನಂ ಯೋಗ್ಯಮಜಾತಸ್ಯ ಮಮೋದರಾತ್।**
**ಇತಿ ಗರ್ವಾದವೋಚನ್ಮಾಂ ಸಪತ್ನೀಮಾತುರುಚ್ಚಕೈಃ॥ 81**

**ಆಧಾರಭೂತಂ ಜಗತಃ ಸರ್ವೇಷಾಮುತ್ತಮೋತ್ತಮಮ್।**
**ಪ್ರಾರ್ಥಯಾಮಿ ಪ್ರಭೋ ಸ್ಥಾನಂ ತ್ವತ್ಪ್ರಸಾದಾದತೋಽವ್ಯಯಮ್॥**

*ಶ್ರೀಭಗವಾನುವಾಚ:*

**ಯತ್ತ್ವಯಾ ಪ್ರಾರ್ಥ್ಯತೇ ಸ್ಥಾನಮೇತತ್ಪ್ರಾಪ್ಸ್ಯತಿ ವೈ ಭವಾನ್।**
**ತ್ವಯಾಹಂ ತೋಷಿತಃ ಪೂರ್ವಮನ್ಯಜನ್ಮನಿ ಬಾಲಕ॥ 83**

---

ಬೇಕಾದದ್ದು ತಿಳಿಯದೆ ಇದ್ದೀತೆ? ಆದರೂ, ದೇವೇಶ್ವರ, ದುರ್ವಿನೀತವಾದ ನನ್ನ ಹೃದಯವು ಅತಿ ದುರ್ಲಭವಾದ ಯಾವುದನ್ನು ಬಯಸುತ್ತದೆಯೋ ಅದನ್ನು ಹೇಳುತ್ತೇನೆ (78-79). ಸರ್ವಜಗತ್ತನ್ನೂ ಸೃಷ್ಟಿಮಾಡಿರುವ ನೀನು ಪ್ರಸನ್ನನಾದ ಮೇಲೆ ದುರ್ಲಭವಾದರೂ ಯಾವುದಿರುತ್ತದೆ? ದೇವೇಂದ್ರನೂ ಸಹ ನಿನ್ನ ಅನುಗ್ರಹದ ಫಲವಾಗಿ ತ್ರಿಲೋಕಗಳನ್ನೇ ಆಳುತ್ತಿದ್ದಾನೆ (80). ನನ್ನ ಮಲತಾಯಿಯು ನನ್ನ ಹೊಟ್ಟೆಯಲ್ಲಿ ಹುಟ್ಟದಿರುವ ನಿನಗೆ ಈ ರಾಜಪೀಠವು ಯೋಗ್ಯವಾದ್ದಲ್ಲ" ಎಂದು ಗರ್ವದಿಂದ ಗಟ್ಟಿಯಾಗಿ ನನ್ನನ್ನು ಗದರಿಸಿ ಹೇಳಿದಳು. ಆದ್ದರಿಂದ, ಸ್ವಾಮಿ, ಜಗತ್ತಿಗೆ ಆಧಾರಭೂತನಾದ ನಿನ್ನಲ್ಲಿ ಬೇಡಿಕೊಳ್ಳುತ್ತೇನೆ—ಅವ್ಯಯವೂ ಸರ್ವೋತ್ತಮೋತ್ತಮವೂ ಆದ ಸ್ಥಾನವು ನಿನ್ನ ಅನುಗ್ರಹದಿಂದ ಲಭಿಸಲಿ" (81-82). ಭಗವಂತನು ಹೇಳಿದನು: "ಬಾಲಕ, ನೀನು ಬಯಸಿದ ಸ್ಥಾನವು ನಿನಗೆ ಲಭಿಸುತ್ತದೆ. ಹಿಂದಿನ ಜನ್ಮದಲ್ಲಿ ನನ್ನನ್ನು ಆರಾಧಿಸಿ ಸಂತೋಷಪಡಿಸಿದ್ದೀಯೆ. ಹಿಂದೆ ನೀನು ಬ್ರಾಹ್ಮಣನಾಗಿದ್ದೆ. ಏಕಾಗ್ರ

**ತ್ವಮಾಸೀರ್ಬ್ರಾಹ್ಮಣಃ ಪೂರ್ವಂ ಮಯ್ಯೇಕಾಗ್ರಮತಿಃ ಸದಾ।**
**ಮಾತಾಪಿತ್ರೋಶ್ಚ ಶುಶ್ರೂಷುರ್ನಿಜಧರ್ಮಾನುಪಾಲಕಃ॥ 84**

**ಕಾಲೇನ ಗಚ್ಛತಾ ಮಿತ್ರಂ ರಾಜಪುತ್ರಸ್ತವಾಭವತ್।**
**ಯೌವನೇಽಖಿಲಭೋಗಾಢ್ಯೋ ದರ್ಶನೀಯೋಜ್ಜ್ವಲಾಕೃತಿಃ॥ 85**

**ತತ್ಸಂಗಾತ್ತಸ್ಯ ತಾಮೃದ್ಧಿಮವಲೋಕ್ಯಾತಿದುರ್ಲಭಾಮ್।**
**ಭವೇಯಂ ರಾಜಪುತ್ರೋಽಹಮಿತಿ ವಾಂಛಾ ತ್ವಯಾ ಕೃತಾ॥ 86**

**ತತೋ ಯಥಾಭಿಲಷಿತಾ ಪ್ರಾಪ್ತಾ ತೇ ರಾಜಪುತ್ರತಾ।**
**ಉತ್ತಾನಪಾದಸ್ಯ ಗೃಹೇ ಜಾತೋಽಸಿ ಧ್ರುವ ದುರ್ಲಭೇ॥ 87**

**ಅನ್ಯೇಷಾಂ ದುರ್ಲಭಂ ಸ್ಥಾನಂ ಕುಲೇ ಸ್ವಾಯಂಭುವಸ್ಯ ಯತ್।**
**ತಸ್ಯೈತದಪರಂ ಬಾಲ ಯೇನಾಹಂ ಪರಿತೋಷಿತಃ॥ 88**

**ಮಾಮಾರಾಧ್ಯ ನರೋ ಮುಕ್ತಿಮವಾಪ್ನೋತ್ಯವಿಲಂಬಿತಾಮ್।**
**ಮಯ್ಯರ್ಪಿತಮನಾ ಬಾಲ ಕಿಮು ಸ್ವರ್ಗಾದಿಕಂ ಪದಮ್॥ 89**

---

ಚಿತ್ತದಿಂದ ನನ್ನನ್ನು ಧ್ಯಾನಿಸುತ್ತಿದ್ದೆ. ತಂದೆತಾಯಿಗಳ ಸೇವೆ ಮಾಡುತ್ತ ಸ್ವಧರ್ಮವನ್ನು ಪಾಲಿಸುತ್ತಿದ್ದೆ (83-84). ಹೀಗಿರಲು ಸ್ವಲ್ಪಕಾಲವಾದ ಮೇಲೆ ಒಬ್ಬ ರಾಜಪುತ್ರನು ನಿನಗೆ ಮಿತ್ರನಾದನು. ತಾರುಣ್ಯದಲ್ಲಿದ್ದ ಆತನು ಸಕಲ ಭೋಗಗಳನ್ನು ಅನುಭವಿಸುತ್ತ ಸುಂದರನೂ ತೇಜಸ್ವಿಯೂ ಆಗಿದ್ದನು (85). ಅವನ ಸಖ್ಯದಿಂದ ಅವನಿಗಿದ್ದ ಅತಿ ದುರ್ಲಭವಾದ ಸಂಪತ್ತನ್ನು ನೋಡಿ, 'ನಾನೂ ರಾಜಪುತ್ರನಾಗಬೇಕು'—ಎಂಬ ಆಸೆ ನಿನ್ನಲ್ಲಿ ಮೊಳೆಯಿತು. ಅನಂತರ ನಿನ್ನ ಅಭಿಲಾಷೆಯಂತೆ (ಈ ಜನ್ಮದಲ್ಲಿ) ರಾಜಪುತ್ರನಾಗುವ ಯೋಗ ಒದಗಿತು. ದುರ್ಲಭವಾದ ಉತ್ತಾನಪಾದ ರಾಜನ ಗೃಹದಲ್ಲಿ, ಧ್ರುವ, ನೀನು ಹುಟ್ಟಿದೆ (86-87). ಏಕೆಂದರೆ, ಸ್ವಾಯಂಭುವಮನುವಿನ ವಂಶದಲ್ಲಿ ಜನಿಸುವುದು ಅನ್ಯರಿಗೆ ಲಭಿಸತಕ್ಕದ್ದಲ್ಲ. ಅಲ್ಲದೆ, ಬಾಲಕ, ನನ್ನನ್ನು ನೀನು ಸಂತೋಷಪಡಿಸಿದೆಯೆಂಬುದು ಇನ್ನೊಂದು ವಿಶೇಷ (88). ನನ್ನಲ್ಲಿ ಚಿತ್ತವನ್ನರ್ಪಿಸಿ ಆರಾಧಿಸಿದವನು ಶೀಘ್ರದಲ್ಲಿ ಮೋಕ್ಷವನ್ನು ಪಡೆಯುತ್ತಾನೆ. ಬಾಲಕ, ಸ್ವರ್ಗಾದಿಗಳನ್ನು

ತ್ರೈಲೋಕ್ಯಾದಧಿಕೇ ಸ್ಥಾನೇ ಸರ್ವತಾರಾಗ್ರಹಾಶ್ರಯಃ।
ಭವಿಷ್ಯತಿ ನ ಸಂದೇಹೋ ಮತ್ಪ್ರಸಾದಾದ್ಭವಾನ್ ಧ್ರುವ॥ 90

ಸೂರ್ಯಾತ್ಸೋಮಾತ್ತಥಾ ಭೌಮಾತ್ ಸೋಮಪುತ್ರಾದ್
ಬೃಹಸ್ಪತೇಃ।
ಸಿತಾರ್ಕತನಯಾದೀನಾಂ ಸರ್ವರ್ಕ್ಷಾಣಾಂ ತಥಾ ಧ್ರುವ॥ 91

ಸಪ್ತರ್ಷೀಣಾಮಶೇಷಾಣಾಂ ಯೇ ಚ ವೈಮಾನಿಕಾಃ ಸುರಾಃ।
ಸರ್ವೇಷಾಮುಪರಿ ಸ್ಥಾನಂ ತವ ದತ್ತಂ ಮಯಾ ಧ್ರುವ॥ 92

ಕೇಚಿಚ್ಚತುರ್ಯುಗಂ ಯಾವತ್ ಕೇಚಿನ್ಮನ್ವಂತರಂ ಸುರಾಃ।
ತಿಷ್ಠಂತಿ ಭವತೋ ದತ್ತಾ ಮಯಾ ವೈ ಕಲ್ಪಸಂಸ್ಥಿತಿಃ॥ 93

ಸುನೀತಿರಪಿ ತೇ ಮಾತಾ ತ್ವದಾಸನ್ನಾತಿನಿರ್ಮಲಾ।
ವಿಮಾನೇ ತಾರಕಾ ಭೂತ್ವಾ ತಾವತ್ಕಾಲಂ ನಿವತ್ಸ್ಯತಿ॥ 94

ಯೇ ಚ ತ್ವಾಂ ಮಾನವಾಃ ಪ್ರಾತಃ ಸಾಯಂ ಚ ಸುಸಮಾಹಿತಾಃ।
ಕೀರ್ತಯಿಷ್ಯಂತಿ ತೇಷಾಂ ಚ ಮಹತ್ಪುಣ್ಯಂ ಭವಿಷ್ಯತಿ॥ 95

---

ಪಡೆಯುತ್ತಾನೆಂದು ಹೇಳಬೇಕಾದ್ದೇನಿದೆ? ತ್ರಿಲೋಕಗಳಿಗೂ ಅಧಿಕವಾದ ಸ್ಥಾನದಲ್ಲಿ ನೀನು ನನ್ನ ಅನುಗ್ರಹದಿಂದ ಸಮಸ್ತ ಗ್ರಹನಕ್ಷತ್ರಗಳಿಗೆ ಆಶ್ರಯ ದಾತನಾಗುವೆ, ಧ್ರುವ, ಸಂದೇಹವಿಲ್ಲ (89-90). ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ—ಮುಂತಾದ ಗ್ರಹನಕ್ಷತ್ರಗಳಿಗೂ ಮೇಲೆ, ಎಲ್ಲ ಸಪ್ತರ್ಷಿಗಳಿಗೂ ಮೇಲೆ, ವಿಮಾನ ಸಂಚಾರಿಗಳಾದ ಸಮಸ್ತ ದೇವತೆಗಳಿಗೂ ಮೇಲೆ ನಿನಗೆ ಸ್ಥಾನವನ್ನು ನಾನು ಕೊಟ್ಟಿದ್ದೇನೆ (91-92). ದೇವತೆಗಳಲ್ಲಿ ಕೆಲವರು ನಾಲ್ಕೂ ಯುಗಗಳವರೆಗೂ, ಕೆಲವರು ಒಂದು ಮನ್ವಂತರದವರೆಗೂ ಇರುತ್ತಾರೆ. ನೀನು ಒಂದು ಕಲ್ಪದವರೆಗೆ ಜೀವಿಸಿರುತ್ತೀಯೆ. ಶುದ್ಧಾತ್ಮಳಾದ ನಿನ್ನ ತಾಯಿ ಸುನೀತಿಯೂ ಸಹ ಒಂದು ತಾರೆಯಾಗಿ ಅಲ್ಲಿಯವರೆಗೂ ನಿನ್ನ ಬಳಿ ವಿಮಾನದಲ್ಲಿ ನೆಲೆಸಿರುವಳು (93-94). ಮತ್ತು ಯಾವ ಮಾನವರು ಪ್ರಾತಃಕಾಲ ಸಾಯಂಕಾಲಗಳಲ್ಲಿ ಶ್ರದ್ಧೆಯಿಂದ ನಿನ್ನ ಗುಣಕೀರ್ತನೆ ಮಾಡುವರೋ ಅವರಿಗೂ ಮಹಾಪುಣ್ಯ

*ಶ್ರೀಪರಾಶರ ಉವಾಚ:*

**ಏವಂ ಪೂರ್ವಂ ಜಗನ್ನಾಥಾದ್ದೇವದೇವಾಜ್ಜನಾರ್ದನಾತ್ ।**
**ವರಂ ಪ್ರಾಪ್ಯ ಧ್ರುವಃ ಸ್ಥಾನಮಧ್ಯಾಸ್ತೇ ಸ ಮಹಾಮತೇ ॥ 96**

**ಸ್ವಯಂ ಶುಶ್ರೂಷಣಾದ್ಧರ್ಮ್ಯಾನ್ಮಾತಾಪಿತ್ರೋಶ್ಚ ವೈ ತಥಾ ।**
**ದ್ವಾದಶಾಕ್ಷರಮಾಹಾತ್ಮ್ಯಾತ್ತಪಸಶ್ಚ ಪ್ರಭಾವತಃ ॥ 97**

**ತಸ್ಯಾಭಿಮಾನಮೃದ್ಧಿಂ ಚ ಮಹಿಮಾನಂ ನಿರೀಕ್ಷ್ಯ ಹಿ ।**
**ದೇವಾಸುರಾಣಾಮಾಚಾರ್ಯಃ ಶ್ಲೋಕಮತ್ರೋಶನಾ ಜಗೌ ॥ 98**

**ಅಹೋಽಸ್ಯ ತಪಸೋ ವೀರ್ಯಮಹೋಽಸ್ಯ ತಪಸಃ ಫಲಮ್ ।**
**ಯದೇನಂ ಪುರತಃ ಕೃತ್ವಾ ಧ್ರುವಂ ಸಪ್ತರ್ಷಯಃ ಸ್ಥಿತಾಃ ॥ 99**

**ಧ್ರುವಸ್ಯ ಜನನೀ ಚೇಯಂ ಸುನೀತಿರ್ನಾಮ ಸೂನೃತಾ ।**
**ಅಸ್ಯಾಶ್ಚ ಮಹಿಮಾನಂ ಕಃ ಶಕ್ತೋ ವರ್ಣಯಿತುಂ ಭುವಿ ॥ 100**

---

ಬರುವುದು" ಎಂದನು (95). ಮೈತ್ರೇಯ, ಹೀಗೆ ಜಗನ್ನಾಥನೂ ದೇವ ದೇವನೂ ಆದ ಜನಾರ್ದನನಿಂದ ವರವನ್ನು ಪಡೆದು ಧ್ರುವನು ಸರ್ವೋನ್ನತ ಸ್ಥಾನವನ್ನು ಅಡರಿದ್ದಾನೆ. ಧರ್ಮಮಾರ್ಗವನ್ನು ಅವಲಂಬಿಸಿದ್ದರಿಂದ, ತಂದೆತಾಯಿಗಳನ್ನು ಸೇವಿಸಿದ್ದರಿಂದ, ದ್ವಾದಶಾಕ್ಷರಮಂತ್ರದ* ಮಾಹಾತ್ಮ್ಯದಿಂದ, ತಪಸ್ಸಿನ ಪ್ರಭಾವದಿಂದ, ಧ್ರುವನಿಗೆ ಲಭಿಸಿದ ಗೌರವವನ್ನೂ ಸಂಪತ್ತನ್ನೂ ಮಹಿಮೆಯನ್ನೂ ವೀಕ್ಷಿಸಿ, ದೇವಾಸುರರಿಗೆ ಆಚಾರ್ಯನಾದ ಶುಕ್ರನು§ ಈ ಶ್ಲೋಕವನ್ನು ಉದ್ಗರಿಸಿದನು (96-98). "ಆಹಾ! ಈ ಧ್ರುವನ ತಪಸ್ಸಿನ ಮಹಿಮೆ! ಆಹಾ! ಇವನ ತಪಸ್ಸಿನ ಫಲ! ಸಪ್ತರ್ಷಿಗಳೂ ಇವನನ್ನು ಮುಂದಿಟ್ಟುಕೊಂಡು ನಿಂತಿರುವರಲ್ಲ! ಧ್ರುವನ ಜನನಿಯಾದ ಸುನೀತಿಯು ಸತ್ಯವೂ ಪ್ರಿಯವೂ ಆದ ಸೂನೃತವಾಣಿಯನ್ನಾಡಿದವಳು. ಇವಳ ಮಹಿಮೆಯನ್ನು ವರ್ಣಿಸಲು ಈ ಭೂಮಂಡಲ

---

* "ಓಂ ನಮೋ ಭಗವತೇ ವಾಸುದೇವಾಯ" ಎಂಬುದು ಮಂತ್ರ.

§ ಒಬ್ಬನೇ ಬೃಹಸ್ಪತಿಯಾಗಿ ದೇವತೆಗಳಿಗೂ ಶುಕ್ರನಾಗಿ ಅಸುರರಿಗೂ ಆಚಾರ್ಯನಾಗಿದ್ದಾನೆಂದು ಮಹಾಭಾರತದಲ್ಲಿದೆ. ಆದಿ 66-43 ಮತ್ತು ನೀಲಕಂಠರ ವ್ಯಾಖ್ಯಾನ.

**ತ್ರೈಲೋಕ್ಯಾಶ್ರಯತಾಂ ಪ್ರಾಪ್ತಂ ಪರಂ ಸ್ಥಾನಂ ಸ್ಥಿರಾಯತಿ।**
**ಸ್ಥಾನಂ ಪ್ರಾಪ್ತಾ ಪರಂ ಧೃತ್ವಾ ಯಾ ಕುಕ್ಷಿವಿವರೇ ಧ್ರುವಮ್॥ 101**

**ಯಶ್ಚೈತತ್ ಕೀರ್ತಯೇನ್ನಿತ್ಯಂ ಧ್ರುವಸ್ಯಾರೋಹಣಂ ದಿವಿ।**
**ಸರ್ವಪಾಪವಿನಿರ್ಮುಕ್ತಃ ಸ್ವರ್ಗಲೋಕೇ ಮಹೀಯತೇ॥ 102**

**ಸ್ಥಾನಭ್ರಂಶಂ ನ ಚಾಪ್ನೋತಿ ದಿವಿ ವಾ ಯದಿ ವಾ ಭುವಿ।**
**ಸರ್ವಕಲ್ಯಾಣಸಂಯುಕ್ತೋ ದೀರ್ಘಕಾಲಂ ಸ ಜೀವತಿ॥ 103**

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ದ್ವಾದಶೋಽಧ್ಯಾಯಃ

---

ದಲ್ಲಿ ಯಾರಿಗೆ ಶಕ್ತಿಯುಂಟು! (99-100). ಇವಳು ಧ್ರುವನನ್ನು ಗರ್ಭದಲ್ಲಿ ಧರಿಸಿ ಪರಮೋತ್ತವಾದ ಸ್ಥಾನವನ್ನು ಪಡೆದಳು. ತ್ರಿಲೋಕಗಳಿಗೆ ಆಶ್ರಯವಾದ ಈ ಸ್ಥಾನವು ಸ್ಥಿರವಾಗಿ ನಿಲ್ಲತಕ್ಕದ್ದಾಗಿದೆ" (101). ಧ್ರುವನು ದ್ಯುಲೋಕವನ್ನೇರಿದ ಈ ಚರಿತೆಯನ್ನು ಯಾವಾತನು ನಿತ್ಯವೂ ಕೀರ್ತಿಸುತ್ತಾನೋ ಅವನು ಸರ್ವಪಾಪಗಳಿಂದಲೂ ನಿರ್ಮುಕ್ತನಾಗಿ ಸ್ವರ್ಗಲೋಕದಲ್ಲಿ ಪೂಜಿತನಾಗುವನು (102). ಅವನು ಸ್ವರ್ಗದಲ್ಲಿರಲಿ ಅಥವಾ ಭೂಮಿಯಲ್ಲಿರಲಿ, ಅವನಿಗೆ ಸ್ಥಾನಭ್ರಂಶವಾಗುವುದಿಲ್ಲ. ಸಕಲ ಶ್ರೇಯಸ್ಸುಗಳಿಗೂ ಭಾಜನನಾಗಿ ದೀರ್ಘಕಾಲದವರೆಗೆ ಜೀವಿಸುತ್ತಾನೆ (103).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹನ್ನೆರಡನೆಯ ಅಧ್ಯಾಯ ಮುಗಿಯಿತು.



## ತ್ರಯೋದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಧ್ರುವಾಚ್ಛಿಷ್ಟಿಂ ಚ ಭವ್ಯಂ ಚ ಭವ್ಯಾಚ್ಛಂಭುರ್ವ್ಯಜಾಯತ।**
**ಶಿಷ್ಟೇರಾಧತ್ತ ಸುಚ್ಛಾಯಾ ಪಂಚಪುತ್ರಾನಕಲ್ಮಷಾನ್॥ 1**

**ರಿಪುಂ ರಿಪುಂಜಯಂ ವಿಪ್ರಂ ವೃಕಲಂ ವೃಕತೇಜಸಮ್।**
**ರಿಪೋರಾಧತ್ತ ಬೃಹತೀ ಚಾಕ್ಷುಷಂ ಸರ್ವತೇಜಸಮ್॥ 2**

**ಅಜೀಜನತ್ಪುಷ್ಕರಿಣ್ಯಾಂ ವಾರುಣ್ಯಾಂ ಚಾಕ್ಷುಷೋ ಮನುಮ್।**
**ಪ್ರಜಾಪತೇರಾತ್ಮಜಾಯಾಂ ವೀರಣಸ್ಯ ಮಹಾತ್ಮನಃ॥ 3**

**ಮನೋರಾಜಾಯಂತ ದಶ ನಡ್ವಲಾಯಾಂ ಮಹೌಜಸಃ।**
**ಕನ್ಯಾಯಾಂ ತಪತಾಂ ಶ್ರೇಷ್ಠ ವೈರಾಜಸ್ಯ ಪ್ರಜಾಪತೇಃ॥ 4**

---

## ಅಧ್ಯಾಯ 13

ಧ್ರುವನ ವಂಶ. ವೇನ ಮತ್ತು ಪೃಥು—ಇವರ ಚರಿತ್ರೆ.

ಧ್ರುವನಿಗೆ ಶಿಷ್ಟಿ, ಭವ್ಯ—ಎಂಬ ಇಬ್ಬರು ಪುತ್ರರು ಜನಿಸಿದರು. ಭವ್ಯನಿಂದ ಶಂಭು ಎಂಬುವನು ಹುಟ್ಟಿದನು. ಶಿಷ್ಟಿಯ ಪತ್ನಿಯಾದ ಸುಚ್ಛಾಯೆಯು ಪುಣ್ಯಾತ್ಮರಾದ ಐವರು ಮಕ್ಕಳನ್ನು ಹಡೆದಳು (1). ರಿಪು, ರಿಪುಂಜಯ, ವಿಪ್ರ, ವೃಕಲ, ವೃಕತೇಜಸ್ಸು—ಎಂದು ಅವರ ಹೆಸರು. ರಿಪುವಿನ ಮಡದಿ ಬೃಹತಿಯು ಮಹಾತೇಜಸ್ವಿಯಾದ ಚಾಕ್ಷುಷನೆಂಬ ಮಗನಿಗೆ ಜನ್ಮವಿತ್ತಳು. ಚಾಕ್ಷುಷನ ಪತ್ನಿ ಪುಷ್ಕರಿಣಿ. ಅವಳು ವರುಣನ ಕುಲದಲ್ಲಿ ಹುಟ್ಟಿದವಳು. ಮಹಾತ್ಮನಾದ ವೀರಣಪ್ರಜಾಪತಿಯ ಮಗಳು. ಆ ಪುಷ್ಕರಣಿಯು ಚಾಕ್ಷುಷನಿಂದ ಮನುವೆಂಬ ಪುತ್ರನನ್ನು ಪಡೆದಳು (2-3). ಮೈತ್ರೇಯ, ವೈರಾಜಪ್ರಜಾಪತಿಯ ಮಗಳಾದ ನಡ್ವಲೆಯೆಂಬ ಪುತ್ರಿಯಲ್ಲಿ ಮನುವಿಗೆ ಮಹಾತೇಜಸ್ವಿಗಳಾದ ಹತ್ತು ಮಂದಿ ಪುತ್ರರು

**ಕುರು ಪುರುಃ ಶತದ್ಯುಮ್ನಸ್ತಪಸ್ವೀ ಸತ್ಯವಾನ್ ಶುಚಿಃ।**
**ಅಗ್ನಿಷ್ಟೋಮೋಽತಿರಾತ್ರಶ್ಚ ಸುದ್ಯುಮ್ನಶ್ಚೇತಿ ತೇ ನವ॥ 5**

**ಅಭಿಮನ್ಯುಶ್ಚ ದಶಮೋ ನಡ್ವಲಾಯಾಂ ಮಹೌಜಸಃ।**
**ಕುರೋರಜನಯತ್ಪುತ್ರಾನ್ ಷಡಾಗ್ನೇಯೀ ಮಹಾಪ್ರಭಾನ್॥ 6**

**ಅಂಗಂ ಸುಮನಸಂ ಖ್ಯಾತಿಂ ಕ್ರತುಮಂಗಿರಸಂ ಶಿಬಿಮ್।**
**ಅಂಗಾತ್ಸುನೀಥಾಪತ್ಯಂ ವೈ ವೇನಮೇಕಮಜಾಯತ॥ 7**

**ಪ್ರಜಾರ್ಥಮೃಷಯಸ್ತಸ್ಯ ಮಮಂಥುರ್ದಕ್ಷಿಣಂ ಕರಮ್।**
**ವೇನಸ್ಯ ಪಾಣೌ ಮಥಿತೇ ಸಂಬಭೂವ ಮಹಾಮುನೇ॥ 8**

**ವೈನ್ಯೋ ನಾಮ ಮಹೀಪಾಲೋ ಯಃ ಪೃಥುಃ ಪರಿಕೀರ್ತಿತಃ।**
**ಯೇನ ದುಗ್ಧಾ ಮಹೀ ಪೂರ್ವಂ ಪ್ರಜಾನಾಂ ಹಿತಕಾರಣಾತ್॥ 9**

*ಶ್ರೀಮೈತ್ರೇಯ ಉವಾಚ:*
**ಕಿಮರ್ಥಂ ಮಥಿತಃ ಪಾಣಿರ್ವೇನಸ್ಯ ಪರಮರ್ಷಿಭಿಃ।**
**ಯತ್ರ ಜಜ್ಞೇ ಮಹಾವೀರ್ಯಃ ಸ ಪೃಥುರ್ಮುನಿಸತ್ತಮ॥ 10**

---

ಜನಿಸಿದರು. ಕುರು, ಪುರು, ಶತದ್ಯುಮ್ನ, ತಪಸ್ವಿ, ಸತ್ಯವಂತ, ಶುಚಿ, ಅಗ್ನಿಷ್ಟೋಮ, ಅತಿರಾತ್ರ, ಸುದ್ಯುಮ್ನ—ಎಂಬ ಒಂಬತ್ತು ಜನರು (4-5). ಮತ್ತು ನಡ್ವಲೆಯಲ್ಲಿ ಹುಟ್ಟಿದ ಹತ್ತನೆಯವನು ಅಭಿಮನ್ಯು. ಇವರಲ್ಲಿ ಕುರುವಿನಿಂದ ಆಗ್ನೇಯಿಯು ಪ್ರಭಾವಶಾಲಿಗಳಾದ ಆರು ಮಂದಿ ಪುತ್ರರನ್ನು ಹೆತ್ತಳು. ಅಂಗ, ಸುಮನಸ್ಸು, ಖ್ಯಾತಿ, ಕ್ರತು, ಅಂಗಿರಸ್ಸು, ಶಿಬಿ—ಎಂಬಿವರೇ ಅವರು. ಅಂಗನಿಂದ ಸುನೀಥೆಯು ವೇನ ಎಂಬ ಒಬ್ಬ ಮಗನನ್ನು ಪಡೆದಳು (6-7). ಋಷಿಗಳು ಸಂತಾನಾರ್ಥವಾಗಿ ವೇನನ ಬಲಗೈಯನ್ನು ಕಡೆದರು. ಹೀಗೆ ಅವನ ಕೈಯನ್ನು ಮಥಿಸಲಾಗಿ, ಮೈತ್ರೇಯ, ವೈನ್ಯನೆಂಬ ಮಹೀಪತಿಯು ಜನಿಸಿದನು. ಅವನು ಪೃಥು ಎಂದು ಪ್ರಸಿದ್ಧನಾದನು. ಆತನು ಪ್ರಜೆಗಳ ಹಿತಕ್ಕಾಗಿ ಪೃಥಿವಿಯನ್ನು ದೋಹನ ಮಾಡಿದನು (8-9). ಆಗ ಮೈತ್ರೇಯರು "ಮುನಿಶ್ರೇಷ್ಠರೇ, ವೇನನ ಕೈಯನ್ನು ಋಷಿಗಳು ಮಥಿಸಬೇಕಾಗಿ ಬಂದದ್ದೇಕೆ? ಆದರಿಂದ

*ಶ್ರೀಪರಾಶರ ಉವಾಚ:*

**ಸುನೀಥಾ ನಾಮ ಯಾ ಕನ್ಯಾ ಮೃತ್ಯೋಃ ಪ್ರಥಮತೋಽಭವತ್।**
**ಅಂಗಸ್ಯ ಭಾರ್ಯಾ ಸಾ ದತ್ತಾ ತಸ್ಯಾಂ ವೇನೋ ವ್ಯಜಾಯತ॥**

**ಸ ಮಾತಾಮಹದೋಷೇಣ ತೇನ ಮೃತ್ಯೋಃ ಸುತಾತ್ಮಜಃ।**
**ನಿಸರ್ಗಾದೇಷ ಮೈತ್ರೇಯ ದುಷ್ಟ ಏವ ವ್ಯಜಾಯತ॥** 12

**ಅಭಿಷಿಕ್ತೋ ಯದಾ ರಾಜ್ಯೇ ಸ ವೇನಃ ಪರಮರ್ಷಿಭಿಃ।**
**ಘೋಷಯಾಮಾಸ ಸ ತದಾ ಪೃಥಿವ್ಯಾಂ ಪೃಥಿವೀಪತಿಃ॥** 13

**ನ ಯಷ್ಟವ್ಯಂ ನ ದಾತವ್ಯಂ ನ ಹೋತವ್ಯಂ ಕಥಂಚನ।**
**ಭೋಕ್ತಾ ಯಜ್ಞಸ್ಯ ಕಸ್ತ್ವನ್ಯೋ ಹ್ಯಹಂ ಯಜ್ಞಪತಿಃ ಪ್ರಭುಃ॥** 14

**ತತಸ್ತಮೃಷಯಃ ಪೂರ್ವಂ ಸಂಪೂಜ್ಯ ಪೃಥಿವೀಪತಿಮ್।**
**ಊಚುಃ ಸಾಮಕಲಂ ವಾಕ್ಯಂ ಮೈತ್ರೇಯ ಸಮುಪಸ್ಥಿತಾಃ॥** 15

---

ಮಹಾವೀರನಾದ ಪೃಥು ಜನಿಸಿದನಲ್ಲವೆ?" ಎಂದು ಕೇಳಿದರು. ಅದಕ್ಕೆ ಪರಾಶರರು ಹೇಳಿದರು: "ಮೈತ್ರೇಯ, ಸುನೀಥಾ ಎಂಬುವಳು ಮೃತ್ಯುವಿನ ಪ್ರಥಮ ಪುತ್ರಿ. ಅವಳನ್ನು ಅಂಗನಿಗೆ ಮಡದಿಯಾಗಿ ಮದುವೆ ಮಾಡಿಕೊಡಲಾಗಿತ್ತು. ಅವಳಲ್ಲಿ ವೇನನು ಹುಟ್ಟಿದನು (10-12). ಮೃತ್ಯುವಿನ ಮಗಳ ಮಗನಾದ ಆತನು ಮಾತಾಮಹನ ದೋಷದಿಂದ ಸ್ವಭಾವದಲ್ಲಿ ದುಷ್ಟನಾಗಿಯೇ ಹುಟ್ಟಿದನು. ಮಹರ್ಷಿಗಳು ಸೇರಿ ಆತನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಲಾಗಿ, ಆ ರಾಜನು ಒಂದು ಘೋಷಣೆಯನ್ನು ಹೊರಡಿಸಿದನು(13): "ಯಾರೂ ಯಜ್ಞ ಮಾಡಬಾರದು! ದಾನವನ್ನು ಕೊಡಬಾರದು! ಎಂದಿಗೂ ಹವನ ಮಾಡತಕ್ಕದ್ದಲ್ಲ! ಯಜ್ಞಕ್ಕೆ ಭೋಕ್ತೃವಾದವನು ನಾನಲ್ಲದೆ ಬೇರೆ ಯಾರಿದ್ದಾರೆ? ಪ್ರಭುವಾದ ನಾನೇ ಯಜ್ಞಪತಿ!" ಎಂದು (14). ಆಗ, ಮೈತ್ರೇಯ, ಋಷಿಗಳೆಲ್ಲರೂ ಸೇರಿ ವೇನನ ಬಳಿಗೆ ಬಂದು ಆ ಭೂಪಾಲನಿಗೆ ಯೋಗ್ಯವಾದ ಗೌರವವನ್ನು ಸಲ್ಲಿಸಿ, ಸಾಮಪೂರ್ವಕವಾಗಿ ಹೇಳಿದರು: "ಮಹಾರಾಜ, ನಿನ್ನ ರಾಜ್ಯ

*ಋಷಯ ಊಚುಃ :*

**ಭೋ ಭೋ ರಾಜನ್ ಶೃಣುಷ್ವ ತ್ವಂ ಯದ್ವದಾಮ ಮಹೀಪತೇ।**
**ರಾಜ್ಯದೇಹೋಪಕಾರಾಯ ಪ್ರಜಾನಾಂ ಚ ಹಿತಂ ಪರಮ್॥** 16

**ದೀರ್ಘಸತ್ರೇಣ ದೇವೇಶಂ ಸರ್ವಯಜ್ಞೇಶ್ವರಂ ಹರಿಮ್।**
**ಪೂಜಯಿಷ್ಯಾಮ ಭದ್ರಂ ತೇ ತಸ್ಯಾಂಶಸ್ತೇ ಭವಿಷ್ಯತಿ॥** 17

**ಯಜ್ಞೇನ ಯಜ್ಞಪುರುಷೋ ವಿಷ್ಣುಃ ಸಂಪ್ರೀಣಿತೋ ನೃಪ।**
**ಅಸ್ಮಾಭಿರ್ಭವತಃ ಕಾಮಾನ್ ಸರ್ವಾನೇವ ಪ್ರದಾಸ್ಯತಿ॥** 18

**ಯಜ್ಞೈರ್ಯಜ್ಞೇಶ್ವರೋ ಯೇಷಾಂ ರಾಷ್ಟ್ರೇ ಸಂಪೂಜ್ಯತೇ ಹರಿಃ।**
**ತೇಷಾಂ ಸರ್ವೇಪ್ಸಿತಾವಾಪ್ತಿಂ ದದಾತಿ ನೃಪ ಭೂಭೃತಾಮ್॥** 19

*ವೇನ ಉವಾಚ:*

**ಮತ್ತಃಕೋಽಭ್ಯಧಿಕೋಽನ್ಯೋಽಸ್ತಿ ಕಶ್ಚಾರಾಧ್ಯೋ ಮಮಾಪರಃ।**
**ಕೋಽಯಂ ಹರಿರಿತಿ ಖ್ಯಾತೋ ಯೋ ವೋ**
**ಯಜ್ಞೇಶ್ವರೋ ಮತಃ॥** 20

---

ಮತ್ತು ಶರೀರಕ್ಕೆ ಉಪಕಾರವಾಗಲೆಂದೂ, ಪ್ರಜೆಗಳಿಗೆ ಹಿತವಾಗಲೆಂದೂ ಒಂದು ಮಾತನ್ನು ಹೇಳುತ್ತೇವೆ, ಆಲಿಸು (15-16). ದೇವದೇವನೂ ಸರ್ವಯಜ್ಞಗಳ ಅಧಿಪತಿಯೂ ಆದ ಶ್ರೀಹರಿಯನ್ನುದ್ದೇಶಿಸಿ ದೀರ್ಘಸತ್ರ ವೆಂಬ ಯಾಗದಿಂದ ಪೂಜಿಸೋಣ. ನಿನಗೆ ಒಳ್ಳೆಯದಾಗುವುದು. ಯಜ್ಞ ಫಲದ ಒಂದು ಅಂಶ ನಿನಗೆ ಸೇರುತ್ತದೆ (17). ಮಹಾರಾಜ, ಯಜ್ಞ ಪುರುಷನಾದ ವಿಷ್ಣುವು ನಮ್ಮಿಂದ ಯಜ್ಞದ ಮೂಲಕ ಸಂಪ್ರೀತನಾಗಿ, ನಿನ್ನ ಇಷ್ಟಾರ್ಥಗಳೆಲ್ಲವನ್ನೂ ಕೈಗೂಡಿಸುವನು. ಯಜ್ಞೇಶ್ವರನಾದ ಶ್ರೀಹರಿಯು ಯಾವ ರಾಷ್ಟ್ರದಲ್ಲಿ ಯಜ್ಞಗಳಿಂದ ಪೂಜಿತನಾಗುತ್ತಾನೋ, ಅಲ್ಲಿ ರಾಜರ ಸರ್ವಕಾಮನೆಗಳನ್ನೂ ಆತನು ನೆರವೇರಿಸುತ್ತಾನೆ" ಎಂದರು (18-19). ಆಗ ವೇನನು "ನನಗಿಂತಲೂ ದೊಡ್ಡವನು ಯಾವನಿದ್ದಾನೆ? ನನ್ನಿಂದ ಪೂಜಿತನಾಗಬೇಕಾದವನು ಯಾರವನು? ಯಜ್ಞೇಶ್ವರ–ಹರಿ ಎಂದು ಹೇಳುತ್ತೀರಲ್ಲ , ಯಾರವನು? (20). ಬ್ರಹ್ಮ, ವಿಷ್ಣು, ಶಿವ, ಇಂದ್ರ,

**ಬ್ರಹ್ಮಾ ಜನಾರ್ದನಃ ಶಂಭುರಿಂದ್ರೋ ವಾಯುರ್ಯಮೋ ರವಿಃ।**
**ಹುತಭುಗ್ವರುಣೋ ಧಾತಾ ಪೂಷಾ ಭೂಮಿರ್ನಿಶಾಕರಃ॥ 21**

**ಏತೇ ಚಾನ್ಯೇ ಚ ಯೇ ದೇವಾಃ ಶಾಪಾನುಗ್ರಹಕಾರಿಣಃ।**
**ನೃಪಸ್ಯೈತೇ ಶರೀರಸ್ಥಾಃ ಸರ್ವದೇವಮಯೋ ನೃಪಃ॥ 22**

**ಏವಂ ಜ್ಞಾತ್ವಾ ಮಯಾಽಜ್ಞಪ್ತಂ ಯದ್ಯಥಾ ಕ್ರಿಯತಾಂ ತಥಾ।**
**ನ ದಾತವ್ಯಂ ನ ಯಷ್ಟವ್ಯಂ ನ ಹೋತವ್ಯಂ ಚ ಭೋ ದ್ವಿಜಾಃ॥**

**ಭರ್ತೃಶುಶ್ರೂಷಣಂ ಧರ್ಮೋ ಯಥಾ ಸ್ತ್ರೀಣಾಂ ಪರೋ ಮತಃ।**
**ಮಮಾಜ್ಞಾಪಾಲನಂ ಧರ್ಮೋ ಭವತಾಂ ಚ ತಥಾ ದ್ವಿಜಾಃ॥ 24**

*ಋಷಯ ಊಚುಃ :*

**ದೇಹ್ಯನುಜ್ಞಾಂ ಮಹಾರಾಜ ಮಾ ಧರ್ಮೋ ಯಾತು ಸಂಕ್ಷಯಮ್।**
**ಹವಿಷಾಂ ಪರಿಣಾಮೋಽಯಂ ಯದೇತದಖಿಲಂ ಜಗತ್॥ 25**

---

ವಾಯು, ಯಮ, ಸೂರ್ಯ, ಅಗ್ನಿ, ವರುಣ, ಧಾತ, ಪೂಷ, ಭೂಮಿ, ಚಂದ್ರ—ಇವರೇ ಮೊದಲಾದ ಶಾಪಾನುಗ್ರಹಕಾರಿಗಳಾದ ದೇವತೆಗಳೆಲ್ಲರೂ ರಾಜನ ಶರೀರದಲ್ಲಿಯೇ ಇರುತ್ತಾರೆ. ರಾಜನೆಂದರೆ ಸರ್ವದೇವಾತ್ಮಕ! (21-22). ಇದನ್ನು ತಿಳಿದೇ ನಾನು ಆಜ್ಞೆಯನ್ನು ಹೊರಡಿಸಿದ್ದು. ಆಜ್ಞೆಯ ಪ್ರಕಾರ ನಡೆದುಕೊಳ್ಳತಕ್ಕದ್ದು. ಎಲೈ ದ್ವಿಜರೆ, ದಾನಮಾಡಬೇಕಾಗಿಲ್ಲ, ಯಾಗ ಮಾಡಬೇಕಾಗಿಲ್ಲ, ಹವನವನ್ನು ಮಾಡಕೂಡದು. ಗಂಡನ ಶುಶ್ರೂಷೆ ಮಾಡಬೇಕಾದದ್ದು ಹೇಗೆ ಸ್ತ್ರೀಯರಿಗೆ ಧರ್ಮವೋ, ಹಾಗೆ ರಾಜನಾದ ನನ್ನ ಆಜ್ಞೆಯನ್ನು ಪಾಲಿಸಬೇಕಾದದ್ದು ನಿಮಗೆ ಧರ್ಮ" ಎಂದನು (23-24). ಆಗ ಋಷಿಗಳು "ಮಹಾರಾಜ, ಯಾಗಾದಿಕಾರ್ಯಗಳನ್ನಾಚರಿಸಲು ಅನುಜ್ಞೆಯನ್ನು ಕೊಡು. ಧರ್ಮವು ಕ್ಷೀಣವಾಗುವುದು ಬೇಡ. ಈ ಜಗತ್ತೆಲ್ಲವೂ (ದೇವತೆಗಳಿಗೆ ಅರ್ಪಿಸುವ) ಹವಿಸ್ಸುಗಳ ಪರಿಣಾಮವಾಗಿದೆ" ಎಂದರು (25). ಹೀಗೆ ಮತ್ತೆ ಮತ್ತೆ ಆ

*ಶ್ರೀಪರಾಶರ ಉವಾಚ:*

**ಇತಿ ವಿಜ್ಞಾಪ್ಯಮಾನೋಽಪಿ ಸ ವೇನಃ ಪರಮರ್ಷಿಭಿಃ।**
**ಯದಾ ದದಾತಿ ನಾನುಜ್ಞಾಂ ಪ್ರೋಕ್ತಃ ಪ್ರೋಕ್ತಃ ಪುನಃ ಪುನಃ॥ 26**

**ತತಸ್ತೇ ಮುನಯಃ ಸರ್ವೇ ಕೋಪಾಮರ್ಷಸಮನ್ವಿತಾಃ।**
**ಹನ್ಯತಾಂ ಹನ್ಯತಾಂ ಪಾಪ ಇತ್ಯೂಚುಸ್ತೇ ಪರಸ್ಪರಮ್॥ 27**

**ಯೋ ಯಜ್ಞಪುರುಷಂ ವಿಷ್ಣುಮನಾದಿನಿಧನಂ ಪ್ರಭುಮ್।**
**ವಿನಿಂದತ್ಯಧಮಾಚಾರೋ ನ ಸ ಯೋಗ್ಯೋ ಭುವಃ ಪತಿಃ॥ 28**

**ಇತ್ಯುಕ್ತ್ವಾ ಮಂತ್ರಪೂತೈಸ್ತೈಃ ಕುಶೈರ್ಮುನಿಗಣಾ ನೃಪಮ್।**
**ನಿಜಘ್ನುರ್ನಿಹತಂ ಪೂರ್ವಂ ಭಗವನ್ನಿಂದನಾದಿನಾ॥ 29**

**ಯತಶ್ಚ ಮುನಯೋ ರೇಣುಂ ದದೃಶುಃ ಸರ್ವತೋ ದ್ವಿಜ।**
**ಕಿಮೇತದಿತಿ ಚಾಸನ್ನಾನ್ ಪಪ್ರಚ್ಛುಸ್ತೇ ಜನಾಂಸ್ತದಾ॥ 30**

**ಆಖ್ಯಾತಂ ಚ ಜನೈಸ್ತೇಷಾಂ ಚೋರೀಭೂತೈರರಾಜಕೇ।**
**ರಾಷ್ಟ್ರೇ ತು ಲೋಕೈರಾರಬ್ಧಂ ಪರಸ್ವಾದಾನಮಾತುರೈಃ॥ 31**

---

ಮಹರ್ಷಿಗಳು ವಿಜ್ಞಾಪಿಸಿಕೊಂಡರೂ ವೇನನು ಅನುಜ್ಞೆಯನ್ನು ನೀಡದೆ ಧಿಕ್ಕರಿಸುತ್ತಲೇ ಹೋದನು. ಆಗ ಮುನಿಗಳು ತಾಳ್ಮೆಗೆಟ್ಟು ಸಂಕ್ರುದ್ಧರಾಗಿ "ಈ ಪಾಪಿಯನ್ನು ಕೊಲ್ಲಬೇಕು, ಕೊಲ್ಲಬೇಕು" ಎಂದು ಪರಸ್ಪರ ಹೇಳಿಕೊಂಡರು (26-27). "ಆದ್ಯಂತರಹಿತನೂ ಪ್ರಭುವೂ ಯಜ್ಞಪುರುಷನೂ ಆದ ವಿಷ್ಣುವನ್ನು ಈ ಅಧಮನು ನಿಂದಿಸುತ್ತಿದ್ದಾನಲ್ಲ , ಇವನು ರಾಜ್ಯವನ್ನು ಪಾಲಿಸುವುದಕ್ಕೆ ಅರ್ಹನಲ್ಲ" ಎನ್ನುತ್ತ ಆ ಋಷಿಗಳು ಮಂತ್ರಪೂತವಾದ ದರ್ಭೆಗಳಿಂದ ಹೊಡೆಯಲಾಗಿ ವೇನನು ಸತ್ತುಹೋದನು. ಭಗವಂತನನ್ನು ನಿಂದಿಸುವುದೇ ಮೊದಲಾದ ಅಪಚಾರದಿಂದ ಅವನು ಮೊದಲೇ ಮೃತಪ್ರಾಯನಾಗಿದ್ದನು (28-29). ಅದಾದ ಮೇಲೆ, ಮೈತ್ರೇಯ, ಎಲ್ಲೆಡೆಯೂ ಧೂಳಿ ಏಳುತ್ತಿರುವುದನ್ನು ಮುನಿಗಳು ನೋಡಿದರು. ಆಗ ಮುನಿಗಳು ಇದೇನೆಂದು ಸಮೀಪದಲ್ಲಿದ್ದ ಜನರನ್ನು ಕೇಳಲಾಗಿ, ಅವರು

**ತೇಷಾಮುದೀರ್ಣವೇಗಾನಾಂ ಚೋರಾಣಾಂ ಮುನಿಸತ್ತಮಾಃ ।**
**ಸುಮಹಾನ್ ದೃಶ್ಯತೇ ರೇಣುಃ ಪರವಿತ್ತಾಪಹಾರಿಣಾಮ್ ॥ 32**

**ತತಃ ಸಮ್ಮಂತ್ರ್ಯ ತೇ ಸರ್ವೇ ಮುನಯಸ್ತಸ್ಯ ಭೂಭೃತಃ ।**
**ಮಮಂಥುರೂರುಂ ಪುತ್ರಾರ್ಥಮನಪತ್ಯಸ್ಯ ಯತ್ನತಃ ॥ 33**

**ಮಥ್ಯಮಾನಾತ್ಸಮುತ್ತಸ್ಥೌ ತಸ್ಯೋರೋಃ ಪುರುಷಃ ಕಿಲ ।**
**ದಗ್ಧಸ್ಥೂಣಾಪ್ರತೀಕಾಶಃ ಖರ್ವಾಟಾಸ್ಯೋಽತಿಹ್ರಸ್ವಕಃ ॥ 34**

**ಕಿಂ ಕರೋಮೀತಿ ತಾನ್ ಸರ್ವಾನ್ ಸ ವಿಪ್ರಾನಾಹ ಚಾತುರಃ ।**
**ನಿಷೀದೇತಿ ತಮೂಚುಸ್ತೇ ನಿಷಾದಸ್ತೇನ ಸೋಽಭವತ್ ॥ 35**

**ತತಸ್ತತ್ಸಂಭವಾ ಜಾತಾ ವಿಂಧ್ಯಶೈಲನಿವಾಸಿನಃ ।**
**ನಿಷಾದಾ ಮುನಿಶಾರ್ದೂಲ ಪಾಪಕರ್ಮೋಪಲಕ್ಷಣಾಃ ॥ 36**

---

"ಮುನಿಗಳೇ, ಅರಾಜಕವಾದ ಈ ರಾಷ್ಟ್ರದಲ್ಲಿ ಕಷ್ಟಕ್ಕೆ ಸಿಕ್ಕಿರುವ ಜನರು ಕಳ್ಳತನಕ್ಕೆ ಇಳಿದಿದ್ದಾರೆ. ಪರದ್ರವ್ಯವನ್ನು ಅಪಹರಿಸುವುದಕ್ಕಾಗಿ ಈ ಜನರು ಧಾಂಧಲೆ ಎಬ್ಬಿಸಿರುವುದರಿಂದ ಧೂಳಿಯು ಹರಡಿದೆ" ಎಂದರು (30-32). ಆಗ ಮುನಿಗಳೆಲ್ಲರೂ ಸಮಾಲೋಚಿಸಿ ಸಂತಾನಾರ್ಥವಾಗಿ ವೇನ ರಾಜನ ತೊಡೆಯನ್ನು ಮಥಿಸಿದರು. ಏಕೆಂದರೆ ವೇನನಿಗೆ ಮಕ್ಕಳಿರಲಿಲ್ಲ. ಋಷಿಗಳು ಯತ್ನಪೂರ್ವಕವಾಗಿ ರಾಜನ ತೊಡೆಯನ್ನು ಮಥಿಸುತ್ತಿರುವಾಗ ವೇನನ ತೊಡೆಯಿಂದ ಒಬ್ಬ ಪುರುಷನು ಆವಿರ್ಭವಿಸಿದನು! ಅವನು ಸುಟ್ಟುಹೋದ ಮರದ ಕೊರಡಿನಂತೆ (ಕಪ್ಪಾಗಿ) ಇದ್ದು, ರೋಮವಿಲ್ಲದ ವಿಕೃತಾಸ್ಯನೂ ಕುಳ್ಳನೂ ಆಗಿದ್ದನು (33-34). ಆತನು ಆತುರನಾಗಿ "ಏನು ಮಾಡಲಿ" ಎಂದು ಆ ವಿಪ್ರರನ್ನು ಕೇಳಲಾಗಿ, ಅವರು "ನಿಷೀದ—ಕುಳಿತುಕೊ" ಎಂದರು. ಅದರಿಂದ ಅವನು ನಿಷಾದನೆನಿಸಿದನು. ಅನಂತರ ಆತನಿಂದ ಹುಟ್ಟಿದವರು ವಿಂಧ್ಯಶೈಲ ನಿವಾಸಿಗಳೂ ಪಾಪಕರ್ಮಿಗಳೂ ಆಗಿ ನಿಷಾದರಾದರು* (35-36). ಈ ರೀತಿಯಾಗಿ ಆ ನಿಷಾದನ ಮೂಲಕ

* ನಿಷಾದರು—ಬೇಟೆಯಿಂದ ಜೀವಿಸುವ ಅರಣ್ಯವಾಸಿಗಳ ಒಂದು ಪಂಗಡ.

**ತೇನ ದ್ವಾರೇಣ ತತ್ಪಾಪಂ ನಿಷ್ಕ್ರಾಂತಂ ತಸ್ಯ ಭೂಪತೇಃ।**
**ನಿಷಾದಾಸ್ತೇ ತತೋ ಜಾತಾ ವೇನಕಲ್ಮಷನಾಶನಾಃ॥** 37

**ತಸ್ಯೈವ ದಕ್ಷಿಣಂ ಹಸ್ತಂ ಮಮಂಥುಸ್ತೇ ತತೋ ದ್ವಿಜಾಃ॥** 38

**ಮಥ್ಯಮಾನೇ ಚ ತತ್ರಾಭೂತ್ ಪೃಥುರ್ವೈನ್ಯಃ ಪ್ರತಾಪವಾನ್।**
**ದೀಪ್ಯಮಾನಃ ಸ್ವವಪುಷಾ ಸಾಕ್ಷಾದಗ್ನಿರಿವ ಜ್ವಲನ್॥** 39

**ಆದ್ಯಮಾಜಗವಂ ನಾಮ ಖಾತ್ಪಪಾತ ತತೋ ಧನುಃ।**
**ಶರಾಶ್ಚ ದಿವ್ಯಾ ನಭಸಃ ಕವಚಂ ಚ ಪಪಾತ ಹ॥** 40

**ತಸ್ಮಿನ್ ಜಾತೇ ತು ಭೂತಾನಿ ಸಂಪ್ರಹೃಷ್ಟಾನಿ ಸರ್ವಶಃ।**
**ಸತ್ಪುತ್ರೇಣೈವ ಜಾತೇನ ವೇನೋಽಪಿ ತ್ರಿದಿವಂ ಯಯೌ॥** 41

**ಪುನ್ನಾಮ್ನೋ ನರಕಾತ್ ತ್ರಾತಃ ಸುತೇನ ಸುಮಹಾತ್ಮನಾ।**
**ತಂ ಸಮುದ್ರಾಶ್ಚ ನದ್ಯಶ್ಚ ರತ್ನಾನ್ಯಾದಾಯ ಸರ್ವಶಃ॥** 42

---

ರಾಜನ ಪಾಪವೆಲ್ಲವೂ ಹೊರಟುಹೋಯಿತು. ನಿಷಾದರು ವೇನನ ಪಾಪ ಕರ್ಮವನ್ನು ನಾಶಮಾಡತಕ್ಕವರಾದರು. ಆಮೇಲೆ ಮುನಿಗಳು ವೇನನ ಬಲಗೈಯನ್ನು ಮಥಿಸಿದರು (37-38). ಹೀಗೆ ದಕ್ಷಿಣ ಹಸ್ತವನ್ನು ಮಥಿಸುತ್ತಿರಲಾಗಿ ಪೃಥುವೆಂಬ ಪ್ರತಾಪಶಾಲಿಯಾದ ವೇನಪುತ್ರನು ಆವಿರ್ಭವಿಸಿದನು. ಅವನು ದೇಹದಿಂದ ಅತ್ಯಂತ ತೇಜಸ್ವಿಯಾಗಿ ಸಾಕ್ಷಾದಗ್ನಿಯಂತೆ ಪ್ರಕಾಶಿಸುತ್ತಿದ್ದನು (39). ಆಗಲೇ ಆಜಗವವೆಂಬ (ಶಿವನ) ಧನುಸ್ಸು ಗಗನದಿಂದ ಮೊದಲು ಬಿದ್ದಿತು. ದಿವ್ಯಾಸ್ತ್ರಗಳೂ ಕವಚವೂ ಆಕಾಶದಿಂದ ಉದುರಿದವು. ಪೃಥುವು ಜನಿಸಿದಾಗ ಎಲ್ಲೆಲ್ಲಿಯೂ ಸಕಲ ಪ್ರಾಣಿಗಳಿಗೂ ಹರ್ಷವುಂಟಾಯಿತು. ಸತ್ಪುತ್ರನನ್ನು ಪಡೆದಿದ್ದರಿಂದಲೇ ವೇನನೂ ಸ್ವರ್ಗವನ್ನಡರಿದನು (40-41). ಮಹಾತ್ಮನಾದ ಆ ಪುತ್ರನಿಂದ ವೇನನು ಪುತ್ ಎಂಬ ನರಕದಿಂದ ತ್ರಾತನಾದನು*. ಪೃಥುವಿನ ಪಟ್ಟಾಭಿಷೇಕಕ್ಕಾಗಿ

---

* ಪುತ್ ಎಂಬ ನರಕದಿಂದ, ತ್ರಾಯತೇ—ರಕ್ಷಿಸುತ್ತಾನೆ, ಆದ್ದರಿಂದ ಪುತ್ರ, ಎಂದು ಶಬ್ದದ ವ್ಯುತ್ಪತ್ತಿ.

**ತೋಯಾನಿ ಚಾಭಿಷೇಕಾರ್ಥಂ ಸರ್ವಾಣ್ಯೇವೋಪತಸ್ಥಿರೇ।**
**ಪಿತಾಮಹಶ್ಚ ಭಗವಾನ್ ದೇವೈರಾಂಗಿರಸೈಃ ಸಹ॥** 43

**ಸ್ಥಾವರಾಣಿ ಚ ಭೂತಾನಿ ಜಂಗಮಾನಿ ಚ ಸರ್ವಶಃ।**
**ಸಮಾಗಮ್ಯ ತದಾ ವೈನ್ಯಮಭ್ಯಷಿಂಚನ್ನರಾಧಿಪಮ್॥** 44

**ಹಸ್ತೇ ತು ದಕ್ಷಿಣೇ ಚಕ್ರಂ ದೃಷ್ಟ್ವಾ ತಸ್ಯ ಪಿತಾಮಹಃ।**
**ವಿಷ್ಣೋರಂಶಂ ಪೃಥುಂ ಮತ್ವಾ ಪರಿತೋಷಂ ಪರಂ ಯಯೌ॥** 45

**ವಿಷ್ಣುಚಕ್ರಂ ಕರೇ ಚಿಹ್ನಂ ಸರ್ವೇಷಾಂ ಚಕ್ರವರ್ತಿನಾಮ್।**
**ಭವತ್ಯವ್ಯಾಹತೋ ಯಸ್ಯ ಪ್ರಭಾವಸ್ತ್ರಿದಶೈರಪಿ॥** 46

**ಮಹತಾ ರಾಜರಾಜ್ಯೇನ ಪೃಥುರ್ವೈನ್ಯಃ ಪ್ರತಾಪವಾನ್।**
**ಸೋಽಭಿಷಿಕ್ತೋ ಮಹಾತೇಜಾ ವಿಧಿವದ್ಧರ್ಮಕೋವಿದೈಃ॥** 47

---

ಸಮುದ್ರಗಳು ರತ್ನಗಳನ್ನೂ, ನದಿಗಳು ಜಲವನ್ನೂ ತೆಗೆದುಕೊಂಡು ಬಂದವು. ಭಗವಾನ್ ಪಿತಾಮಹನು ಆಂಗೀರಸ ದೇವಗಣಗಳೊಡನೆ ಉಪಸ್ಥಿತನಾದನು (42-43). ಸಕಲ ಸ್ಥಾವರ ಜಂಗಮಗಳೂ ಬಂದು ವೈನ್ಯನನ್ನು (ಪೃಥುವನ್ನು) ನರಾಧಿಪತಿಯೆಂದು ಅಭಿಷೇಕ ಮಾಡಿದವು. ಬ್ರಹ್ಮದೇವನು ಪೃಥುವಿನ ಬಲಗೈಯಲ್ಲಿ ಚಕ್ರಚಿಹ್ನೆಯನ್ನು ನೋಡಿ, ಆತನು ವಿಷ್ಣುವಿನ ಅಂಶವೆಂದು ಬಹಳ ಆನಂದಿಸಿದನು (44-45). ಸಮಸ್ತ ಚಕ್ರವರ್ತಿಗಳಲ್ಲಿಯೂ ಯಾವಾತನ ಹಸ್ತದಲ್ಲಿ ವಿಷ್ಣುಚಕ್ರದ ಚಿಹ್ನೆ ಇರುತ್ತದೆಯೋ ಆತನ ಪ್ರಭಾವವನ್ನು ದೇವತೆಗಳೂ ತಡೆಯಲಾರರು. ವೇನಪುತ್ರನಾದ ಪೃಥುವು ಪ್ರತಾಪಶಾಲಿಯೂ ಮಹಾತೇಜಸ್ವಿಯೂ ಆಗಿದ್ದನು. ಧಾರ್ಮಿಕ ಕಾರ್ಯಗಳಲ್ಲಿ ನಿಷ್ಣಾತರಾದವರು ಆತನಿಗೆ ಮಹತ್ತರವಾದ ಚಕ್ರವರ್ತಿ ಪದವಿಯೊಡನೆ ವಿಧಿವತ್ತಾಗಿ ಪಟ್ಟಾಭಿಷೇಕ ಮಾಡಿದರು (46-47). ತನ್ನ ತಂದೆಯಿಂದ ಅಪರಂಜಿತ(ಅಪ್ರಸನ್ನ)ರಾದ ಪ್ರಜೆಗಳನ್ನು ಈತನು ಅನುರಂಜಿಸಿದನು. ಪ್ರಜೆಗಳಿಗೆ ಅನುರಾಗವನ್ನುಂಟು

**ಪಿತ್ರಾಪರಂಜಿತಾಸ್ತಸ್ಯ ಪ್ರಜಾಸ್ತೇನಾನುರಂಜಿತಾಃ।**
**ಅನುರಾಗಾತ್ತತಸ್ತಸ್ಯ ನಾಮ ರಾಜೇತ್ಯಜಾಯತ॥** 48

**ಆಪಸ್ತಸ್ತಂಭಿರೇ ಚಾಸ್ಯ ಸಮುದ್ರಮಭಿಯಾಸ್ಯತಃ।**
**ಪರ್ವತಾಶ್ಚ ದದುರ್ಮಾರ್ಗಂ ಧ್ವಜಭಂಗಶ್ಚ ನಾಭವತ್॥** 49

**ಅಕೃಷ್ಟಪಚ್ಯಾ ಪೃಥಿವೀ ಸಿಧ್ಯಂತ್ಯನ್ನಾನಿ ಚಿಂತಯಾ।**
**ಸರ್ವಕಾಮದುಘಾ ಗಾವಃ ಪುಟಕೇ ಪುಟಕೇ ಮಧು॥** 50

**ತಸ್ಯ ವೈ ಜಾತಮಾತ್ರಸ್ಯ ಯಜ್ಞೇ ಪೈತಾಮಹೇ ಶುಭೇ।**
**ಸೂತಃ ಸೂತ್ಯಾಂ ಸಮುತ್ಪನ್ನಃ ಸೌತ್ಯೇಽಹನಿ ಮಹಾಮತಿಃ॥** 51

**ತಸ್ಮಿನ್ನೇವ ಮಹಾಯಜ್ಞೇ ಜಜ್ಞೇ ಪ್ರಾಜ್ಞೋಽಥ ಮಾಗಧಃ।**
**ಪ್ರೋಕ್ತೌ ತದಾ ಮುನಿವರೈಸ್ತಾವುಭೌ ಸೂತಮಾಗಧೌ॥** 52

---

ಮಾಡಿದ್ದರಿಂದ ಪೃಥುವಿಗೆ ರಾಜ ಎಂಬ ಹೆಸರು ಅನ್ವರ್ಥವಾಯಿತು* (48). ಆತನು ಸಮುದ್ರದಲ್ಲಿ ಪ್ರಯಾಣ ಮಾಡಲು ಹೊರಟರೆ ನೀರು ಗಟ್ಟಿಯಾಗಿ ಸ್ಥಿರವಾಗುತ್ತಿತ್ತು! ಪರ್ವತಗಳು ದಾರಿ ಬಿಡುತ್ತಿದ್ದವು! ಅವನ ಧ್ವಜಕ್ಕೆ ಭಂಗವಾಗಲೇ ಇಲ್ಲ. ಕೃಷಿಮಾಡದೆಯೇ ಭೂಮಿಯು ಫಲವ ತ್ತಾಗಿತ್ತು. ಧ್ಯಾನಿಸಿಕೊಂಡರೆ ಸಾಕು, ಆಹಾರ ಒದಗುತ್ತಿತ್ತು. ಹಸುಗಳು ಯಥೇಷ್ಟವಾಗಿ ಹಾಲು ಕೊಡುತ್ತಿದ್ದವು. ಒಂದೊಂದು ಜೇನುಗೂಡಿ ನಲ್ಲಿಯೂ ಜೇನು ತುಂಬಿತ್ತು (49-50). ಆತನು ಹುಟ್ಟಿದಾಗಲೇ ಮಹಾ ಪ್ರಾಜ್ಞನಾದ ಬ್ರಹ್ಮನು ಶುಭಕರವಾದ ಯಜ್ಞವನ್ನು ನಡೆಸಿದ್ದನು. ಆಗ ಸೋಮಾಭಿಷವದ ದಿನ ಸೋಮವನ್ನು ಹಿಂಡುವ ಸೂತಿಯಲ್ಲಿ (ಸ್ಥಳ ವಿಶೇಷ) ಸೂತನು ಹುಟ್ಟಿದನು. ಅದೇ ಮಹಾಯಜ್ಞದಲ್ಲಿ ಪ್ರಾಜ್ಞನಾದ ಮಾಗಧನೂ ಹುಟ್ಟಿದನು. ಆಗ ಮುನಿಗಳು ಅವರಿಬ್ಬರನ್ನು 'ಸೂತ ಮಾಗಧ'ರೆಂದು ಕರೆದರು (51-52). ಅವರು ಸೂತಮಾಗಧರನ್ನು ಕುರಿತು

---

* 'ರಾಜಾ ಪ್ರಕೃತಿರಂಜನಾತ್'—ಕಾಳಿದಾಸನ ರಘುವಂಶ.

**ಸ್ತೂಯತಾಮೇಷ ನೃಪತಿಃ ಪೃಥುರ್ವೈನ್ಯಃ ಪ್ರತಾಪವಾನ್ ।**
**ಕರ್ಮೈತದನುರೂಪಂ ವಾಂ ಪಾತ್ರಂ ಸ್ತೋತ್ರಸ್ಯ ಚಾಪರಮ್ ॥ 53**

**ತತಸ್ತಾವೂಚತುರ್ವಿಪ್ರಾನ್ ಸರ್ವಾನೇವ ಕೃತಾಂಜಲೀ ।**
**ಅದ್ಯ ಜಾತಸ್ಯ ನೋ ಕರ್ಮ ಜ್ಞಾಯತೇಽಸ್ಯ ಮಹೀಪತೇಃ ॥ 54**

**ಗುಣಾ ನ ಚಾಸ್ಯ ಜ್ಞಾಯಂತೇ ನ ಚಾಸ್ಯ ಪ್ರಥಿತಂ ಯಶಃ ।**
**ಸ್ತೋತ್ರಂ ಕಿಮಾಶ್ರಯಂ ತ್ವಸ್ಯ ಕಾರ್ಯಮಸ್ಮಾಭಿರುಚ್ಯತಾಮ್ ॥ 55**

*ಋಷಯ ಊಚುಃ :*

**ಕರಿಷ್ಯತ್ಯೇಷ ಯತ್ಕರ್ಮ ಚಕ್ರವರ್ತೀ ಮಹಾಬಲಃ ।**
**ಗುಣಾ ಭವಿಷ್ಯಾ ಯೇ ಚಾಸ್ಯ ತೈರಯಂ ಸ್ತೂಯತಾಂ ನೃಪಃ ॥ 56**

*ಶ್ರೀಪರಾಶರ ಉವಾಚ:*

**ತತಃ ಸ ನೃಪತಿಸ್ತೋಷಂ ತಚ್ಛ್ರುತ್ವಾ ಪರಮಂ ಯಯೌ ।**
**ಸದ್ಗುಣೈಃ ಶ್ಲಾಘ್ಯತಾಮೇತಿ ತಸ್ಮಾಲ್ಲಭ್ಯಾ ಗುಣಾ ಮಮ ॥ 57**

---

"ಪ್ರತಾಪಶಾಲಿಯೂ ವೇನಪುತ್ರನೂ ಆದ ಈ ಪೃಥುಮಹಾರಾಜನನ್ನು ಸ್ತುತಿಸಿರಿ. ನಿಮಗೆ ಇದು ಅನುರೂಪವಾದ ಕೆಲಸ. ಅಲ್ಲದೆ ಈತನು ಸ್ತುತಿಗೆ ಪಾತ್ರನಾಗಿದ್ದಾನೆ" ಎಂದರು (53). ಆಗ ಸೂತಮಾಗಧರು ಕೃತಾಂಜಲಿಗಳಾಗಿ ಆ ವಿಪ್ರರನ್ನು ಕುರಿತು "ಪೃಥುವು ಈಗ ತಾನೇ ಹುಟ್ಟಿದ್ದಾನೆ. ಈತನ ಯಾವ ಕಾರ್ಯವಾಗಲಿ ಗುಣಗಳಾಗಲಿ ನಮಗೆ ಗೊತ್ತಿಲ್ಲ. ಇವನ ಕೀರ್ತಿಯೂ ಹರಡಿಲ್ಲ. ನಾವು ಯಾವುದನ್ನಿಟ್ಟುಕೊಂಡು ಸ್ತೋತ್ರ ಮಾಡೋಣ? ನೀವೇ ಹೇಳಿರಿ!" ಎಂದರು (54-55). ಅದಕ್ಕೆ ಋಷಿಗಳು "ಈತನು ಬಲಾಢ್ಯನಾದ ಚಕ್ರವರ್ತಿಯಾಗಿ ಯಾವ ಕಾರ್ಯವನ್ನೆಸಗುವನೋ ಯಾವ ಸದ್ಗುಣಗಳು ಇವನಲ್ಲಿ ನೆಲಸುವವೋ ಅವನ್ನು ಭಾವಿಸಿಕೊಂಡು ಇವನನ್ನು ಸ್ತುತಿಸಿರಿ!" ಎಂದು ಹೇಳಿದರು (56). ಆ ಮಾತನ್ನು ಕೇಳಿ ಪೃಥುವಿಗೆ ಪರಮ ಸಂತೋಷವಾಯಿತು. "ಮನುಷ್ಯನು ಸದ್ಗುಣಗಳಿಂದ ಪ್ರಶಂಸೆಗೆ ಪಾತ್ರನಾಗುತ್ತಾನೆ. ಆದ್ದರಿಂದ ಆ ಗುಣಗಳನ್ನು ನಾನು

**ತಸ್ಮಾದ್ಯದದ್ಯ ಸ್ತೋತ್ರೇಣ ಗುಣನಿರ್ವರ್ಣನಂ ತ್ವಿಮೌ।**
**ಕರಿಷ್ಯೇತೇ ಕರಿಷ್ಯಾಮಿ ತದೇವಾಹಂ ಸಮಾಹಿತಃ॥ 58**

**ಯದಿಮೌ ವರ್ಜನೀಯಂ ಚ ಕಿಂಚಿದತ್ರ ವದಿಷ್ಯತಃ।**
**ತದಹಂ ವರ್ಜಯಿಷ್ಯಾಮೀತ್ಯೇವಂ ಚಕ್ರೇ ಮತಿಂ ನೃಪಃ॥ 59**

**ಅಥ ತೌ ಚಕ್ರತುಃ ಸ್ತೋತ್ರಂ ಪೃಥೋರ್ವೈನ್ಯಸ್ಯ ಧೀಮತಃ।**
**ಭವಿಷ್ಯೈಃ ಕರ್ಮಭಿಃ ಸಮ್ಯಕ್ ಸುಸ್ವರೌ ಸೂತಮಾಗಧೌ॥ 60**

**ಸತ್ಯವಾಗ್ದಾನಶೀಲೋಽಯಂ ಸತ್ಯಸಂಧೋ ನರೇಶ್ವರಃ।**
**ಹ್ರೀಮಾನ್ಮೈತ್ರಃ ಕ್ಷಮಾಶೀಲೋ ವಿಕ್ರಾಂತೋ ದುಷ್ಟಶಾಸನಃ॥ 61**

**ಧರ್ಮಜ್ಞಶ್ಚ ಕೃತಜ್ಞಶ್ಚ ದಯಾವಾನ್ ಪ್ರಿಯಭಾಷಕಃ।**
**ಮಾನ್ಯಾನ್ಮಾನಯಿತಾ ಯಜ್ವಾ ಬ್ರಹ್ಮಣ್ಯಃ ಸಾಧುಸಮ್ಮತಃ॥ 62**

---

ಪಡೆಯಲೇ ಬೇಕು. ಆ ಕಾರಣದಿಂದ ಈಗ ಈ ಸೂತಮಾಗಧರು ಯಾವ ಯಾವ ಗುಣಗಳು ನನ್ನಲ್ಲಿವೆಯೆಂದು ಸ್ತೋತ್ರದ ಮೂಲಕ ವರ್ಣಿಸುತ್ತಾರೋ, ಅದೇರೀತಿಯಲ್ಲಿ ನಾನು ಎಚ್ಚರಿಕೆಯಿಂದ ಮಾಡಿ ನಡೆಸುವೆನು (57-58). ಯಾವುದು ಪರಿತ್ಯಾಜ್ಯವೆಂದು ಇವರು ಹೇಳುವರೋ ಅದನ್ನು ಪರಿತ್ಯಜಿಸುವೆನು" ಎಂದು ಪೃಥುವು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು. ಅನಂತರ ಸೂತಮಾಗಧರು ಧೀಮಂತನಾದ ಪೃಥುವಿನ ಭವಿಷ್ಯತ್ಕಾರ್ಯಗಳನ್ನು ಭಾವಿಸಿಕೊಂಡು, ಸುಸ್ವರದಿಂದ ಸೊಗಸಾಗಿ ಸ್ತುತಿಮಾಡಿದರು (59-60). "ಈ ನರೇಶ್ವರನು ಸತ್ಯವಾದಿ, ದಾನಶೀಲ, ಸತ್ಯಮಾರ್ಗದಲ್ಲಿ ನಡೆಯತಕ್ಕವನು. ಈತನು ಲಜ್ಜಾಶೀಲ, ಸ್ನೇಹಸ್ವಭಾವದವನು, ವೀರ ಮತ್ತು ದುಷ್ಟರನ್ನು ನಿಗ್ರಹಿಸತಕ್ಕವನು. ಧರ್ಮಜ್ಞ, ಕೃತಜ್ಞ, ದಯಾವಂತ, ಪ್ರಿಯಭಾಷಿ. ಈ ರಾಜನು ಪೂಜ್ಯರನ್ನು ಪೂಜಿಸತಕ್ಕವನು. ಯಾಗಕರ್ತಾ, ಬ್ರಾಹ್ಮಣರಿಗೆ ಹಿತಕಾರಿ, ಸಜ್ಜನರ ಗೌರವಕ್ಕೆ ಪಾತ್ರನಾದವನು (61-62). ರಾಜ್ಯ ಸಂಬಂಧಿ ವ್ಯವಹಾರಗಳನ್ನು ನಡೆಸುವಾಗ ಇವನು ಶತ್ರುಗಳನ್ನೂ ಮಿತ್ರರನ್ನೂ ಪಕ್ಷಪಾತವಿಲ್ಲದೆ ನೋಡುತ್ತಾನೆ." ಈ ರೀತಿಯಲ್ಲಿ ಸೂತಮಾಗಧರು ಹೊಗಳಿದಾಗ ಪೃಥುವು

**ಸಮಃ ಶತ್ರೌ ಚ ಮಿತ್ರೇ ಚ ವ್ಯವಹಾರಸ್ಥಿತೌ ನೃಪಃ।**
**ಸೂತೇನೋಕ್ತಾನ್ ಗುಣಾನಿತ್ಥಂ ಸ ತದಾ ಮಾಗಧೇನ ಚ॥ 63**

**ಚಕಾರ ಹೃದಿ ತಾದೃಕ್ ಚ ಕರ್ಮಣಾ ಕೃತವಾನಸೌ।**
**ತತಸ್ತು ಪೃಥಿವೀಪಾಲಃ ಪಾಲಯನ್ ಪೃಥಿವೀಮಿಮಾಮ್॥ 64**

**ಇಯಾಜ ವಿವಿಧೈರ್ಯಜ್ಞೈರ್ಮಹದ್ಭಿರ್ಭೂರಿದಕ್ಷಿಣೈಃ।**
**ತಂ ಪ್ರಜಾಃ ಪೃಥಿವೀನಾಥಮುಪತಸ್ಥುಃ ಕ್ಷುಧಾರ್ದಿತಾಃ॥ 65**

**ಓಷಧೀಷು ಪ್ರಣಷ್ಟಾಸು ತಸ್ಮಿನ್ಕಾಲೇ ಹ್ಯರಾಜಕೇ।**
**ತಮೂಚುಸ್ತೇ ನತಾಃ ಪೃಷ್ಟಾಸ್ತತ್ರಾಗಮನಕಾರಣಮ್॥ 66**

*ಪ್ರಜಾ ಊಚುಃ :*

**ಅರಾಜಕೇ ನೃಪಶ್ರೇಷ್ಠ ಧರಿತ್ರ್ಯಾ ಸಕಲೌಷಧೀಃ।**
**ಗ್ರಸ್ತಾ ಸ್ತತಃ ಕ್ಷಯಂ ಯಾಂತಿ ಪ್ರಜಾಃ ಸರ್ವಾಃ ಪ್ರಜೇಶ್ವರ॥ 67**

**ತ್ವನ್ನೋ ವೃತ್ತಿಪ್ರದೋ ಧಾತ್ರಾ ಪ್ರಜಾಪಾಲೋ ನಿರೂಪಿತಃ।**
**ದೇಹಿ ನಃ ಕ್ಷುತ್ಪರೀತಾನಾಂ ಪ್ರಜಾನಾಂ ಜೀವನೌಷಧೀಃ॥ 68**

---

ಅದನ್ನು ಮನಸ್ಸಿನಲ್ಲಿಟ್ಟುಕೊಂಡು, ಮುಂದೆ ಕೃತಿಯಲ್ಲಿಯೂ ಆ ಗುಣಗಳನ್ನು ಪಾಲಿಸಿದನು. ಭೂಪಾಲನಾಗಿ ಈ ಪೃಥಿವಿಯನ್ನು ಪಾಲಿಸಿದನು (63-64). ಭೂರಿದಕ್ಷಿಣೆಗಳನ್ನಿತ್ತು ನಾನಾ ಬಗೆಯ ಮಹಾಯಜ್ಞಗಳನ್ನು ನಡೆಸಿದನು! (ಅವನು ಪಟ್ಟಾಭಿಷಿಕ್ತನಾಗುವುದಕ್ಕೆ ಮೊದಲು) ಅರಾಜಕವಾಗಿದ್ದ ರಾಷ್ಟ್ರದಲ್ಲಿ ಸಸ್ಯಸಂಪತ್ತು ನಾಶವಾಗಿತ್ತು. ಹಸಿವಿನಿಂದ ಬಳಲುತ್ತಿದ್ದ ಪ್ರಜೆಗಳು ಆತನ ಬಳಿಗೆ ಬಂದು ನಮಸ್ಕರಿಸಲಾಗಿ, ಬಂದ ಕಾರಣವೇನೆಂದು ರಾಜನು ಪ್ರಶ್ನೆ ಮಾಡಿದನು. ಪ್ರಜೆಗಳು ಹೀಗೆಂದರು (65-66): ಮಹಾರಾಜ, ರಾಷ್ಟ್ರವು ಅರಾಜಕವಾದ್ದರಿಂದ ಭೂಮಿಯ ಸಮಸ್ತ ಸಸ್ಯಸಂಪತ್ತುಗಳನ್ನೂ ನುಂಗಿಬಿಟ್ಟಿದೆ! ಆದ್ದರಿಂದ ಸಮಸ್ತ ಪ್ರಜೆಗಳೂ ಕ್ಷೀಣಿಸುತ್ತಿದ್ದಾರೆ. ನೀನು ನಮಗೆ ಜೀವನದಾತನಾದ ನೃಪತಿಯೆಂದು ಬ್ರಹ್ಮದೇವನು ಗೊತ್ತುಪಡಿಸಿದ್ದಾನೆ. ನಿನ್ನ ಪ್ರಜೆಗಳಾದ ನಾವು ಹಸಿವಿನಿಂದ ಸಂಕಟಪಡುತ್ತಿದ್ದೇವೆ. ಜೀವನಕ್ಕೆ ಬೇಕಾದ ಸಸ್ಯಸಂಪತ್ತನ್ನು ನಮಗೆ ಒದಗಿಸಿಕೊಡು"

*ಶ್ರೀಪರಾಶರ ಉವಾಚ:*

**ತತಸ್ತು ನೃಪತಿರ್ದಿವ್ಯಮಾದಾಯಾಜಗವಂ ಧನುಃ।**
**ಶರಾಂಶ್ಚ ದಿವ್ಯಾನ್ಕುಪಿತಃ ಸೋಽನ್ವಧಾವದ್ವಸುಂಧರಾಮ್॥** 69

**ತತೋ ನನಾಶ ತ್ವರಿತಾ ಗೌರ್ಭೂತ್ವಾ ಚ ವಸುಂಧರಾ।**
**ಸಾ ಲೋಕಾನ್ಬ್ರಹ್ಮಲೋಕಾದೀನ್ ಸಂತ್ರಾಸಾದಗಮನ್ಮಹೀ॥** 70

**ಯತ್ರ ಯತ್ರ ಯಯೌ ದೇವೀ ಸಾ ತದಾ ಭೂತಧಾರಿಣೀ।**
**ತತ್ರ ತತ್ರ ತು ಸಾ ವೈನ್ಯಂ ದದೃಶೇಽಭ್ಯುದ್ಯತಾಯುಧಮ್॥** 71

**ತತಸ್ತಂ ಪ್ರಾಹ ವಸುಧಾ ಪೃಥುಂ ಪೃಥುಪರಾಕ್ರಮಮ್।**
**ಪ್ರವೇಪಮಾನಾ ತದ್ಬಾಣಪರಿತ್ರಾಣಪರಾಯಣಾ॥** 72

*ಪೃಥಿವ್ಯುವಾಚ:*

**ಸ್ತ್ರೀವಧೇ ತ್ವಂ ಮಹಾಪಾಪಂ ಕಿಂ ನರೇಂದ್ರ ನ ಪಶ್ಯಸಿ।**
**ಯೇನ ಮಾಂ ಹಂತುಮತ್ಯರ್ಥಂ ಪ್ರಕರೋಷಿ**
**ನೃಪೋದ್ಯಮಮ್॥** 73

---

ಎಂದರು (67-68). ಆಗ ಪೃಥು ರಾಜನು ಕೃದ್ಧನಾಗಿ ದಿವ್ಯವಾದ ಆಜಗವಧನುಸ್ಸನ್ನೂ ದಿವ್ಯಾಸ್ತ್ರಗಳನ್ನೂ ಹಿಡಿದುಕೊಂಡು ಭೂದೇವಿಯನ್ನು ಅಟ್ಟಿಸಿಕೊಂಡು ಹೋದನು. ಒಡನೆಯೇ ಭೂದೇವಿಯು ತನ್ನ ರೂಪವನ್ನು ಮರೆಸಿ ಗೋ ರೂಪವನ್ನು ಧರಿಸಿಕೊಂಡು ಭಯದಿಂದ ಬ್ರಹ್ಮಲೋಕಾದಿ ವಿಭಿನ್ನ ಲೋಕಗಳಿಗೆ ಓಡತೊಡಗಿದಳು (69-70). ಎಲ್ಲಿ ಎಲ್ಲಿಗೆ ಭೂತಧಾರಿಣಿಯಾದ ಭೂದೇವಿಯು ಓಡಿಹೋದಳೋ ಅಲ್ಲಲ್ಲಿಗೆ ಪೃಥು ರಾಜನೂ ಆಯುಧಧಾರಿಯಾಗಿ ಬೆನ್ನಟ್ಟಿರುವುದನ್ನು ಕಂಡಳು. ವಸುಧೆಯು ಮಹಾಪರಾಕ್ರಮಿಯಾದ ಪೃಥುವನ್ನು ಕುರಿತು, ಆತನ ಬಾಣಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ನಡುಗುತ್ತ "ಮಹಾರಾಜ, ನನ್ನನ್ನು ಕೊಲ್ಲಬೇಕೆಂದು ದೃಢನಿಶ್ಚಯದಿಂದ ಯತ್ನಿಸುತ್ತಿರುವೆಯಲ್ಲ, ಸ್ತ್ರೀ ವಧೆಯಿಂದ ಮಹಾಪಾಪ ಬರುವುದೆಂದು ನೀನು ಗಮನಿಸುವುದಿಲ್ಲವೆ?" ಎಂದಳು (71-73). ಅದಕ್ಕೆ ಪೃಥುರಾಜನು "ಅನರ್ಥಕಾರಿಯಾದ ಒಬ್ಬ

*ಪೃಥುರುವಾಚ:*

**ಏಕಸ್ಮಿನ್ ಯತ್ರ ನಿಧನಂ ಪ್ರಾಪಿತೇ ದುಷ್ಟಕಾರಿಣಿ।**
**ಬಹೂನಾಂ ಭವತಿ ಕ್ಷೇಮಂ ತಸ್ಯ ಪುಣ್ಯಪ್ರದೋ ವಧಃ॥ 74**

*ಪೃಥಿವ್ಯುವಾಚ:*

**ಪ್ರಜಾನಾಮುಪಕಾರಾಯ ಯದಿ ಮಾಂ ತ್ವಂ ಹನಿಷ್ಯಸಿ।**
**ಆಧಾರಃ ಕಃ ಪ್ರಜಾನಾಂ ತೇ ನೃಪಶ್ರೇಷ್ಠ ಭವಿಷ್ಯತಿ॥ 75**

*ಪೃಥುರುವಾಚ:*

**ತ್ವಾಂ ಹತ್ವಾ ವಸುಧೇ ಬಾಣೈರ್ಮಚ್ಛಾಸನಪರಾಙ್ಮುಖೀಮ್।**
**ಆತ್ಮಯೋಗಬಲೇನೇಮಾ ಧಾರಯಿಷ್ಯಾಮ್ಯಹಂ ಪ್ರಜಾಃ॥ 76**

*ಶ್ರೀಪರಾಶರ ಉವಾಚ:*

**ತತಃ ಪ್ರಣಮ್ಯ ವಸುಧಾ ತಂ ಭೂಯಃ ಪ್ರಾಹ ಪಾರ್ಥಿವಮ್।**
**ಪ್ರವೇಪಿತಾಂಗೀ ಪರಮಂ ಸಾಧ್ವಸಂ ಸಮುಪಾಗತಾ॥ 77**

---

ರನ್ನು ವಧಿಸಿದಾಗ, ಬಹುಜನರಿಗೆ ಕ್ಷೇಮವಾಗುವುದಾದರೆ ಆ ವಧೆಯಿಂದ ಪುಣ್ಯವೇ ಬರುತ್ತದೆ" ಎಂದನು (74). ಭೂದೇವಿಯು "ನೃಪಶ್ರೇಷ್ಠ, ಪ್ರಜೆಗಳ ಉಪಕಾರಕ್ಕಾಗಿ ನೀನು ನನ್ನನ್ನು ಕೊಂದರೆ, ಆಗ ಪ್ರಜೆಗಳಿಗೆ ನಿಲ್ಲಲು ಆಧಾರವು ಯಾವುದು?" ಎಂದು ಕೇಳಿದಳು. ಅದಕ್ಕೆ ಪೃಥುರಾಜನು "ವಸುಧೆ, ನನ್ನ ಆಜ್ಞೆಯನ್ನು ಉಲ್ಲಂಘಿಸುತ್ತಿರುವ ನಿನ್ನನ್ನು ಬಾಣಗಳಿಂದ ಸಂಹರಿಸಿ, ನನ್ನ ಯೋಗಬಲದಿಂದಲೇ ಈ ಪ್ರಜೆಗಳಿಗೆ ಆಧಾರವನ್ನಿತ್ತು ಧರಿಸುವೆನು" ಎಂದು ಹೇಳಿದನು (75-76). ಆಗ ಭೂದೇವಿಯು ಅತ್ಯಂತ ಭಯವಿಹ್ವಲಳಾಗಿ ನಡುಗುತ್ತ ಭೂಪಾಲನಿಗೆ ನಮಸ್ಕರಿಸಿ ಇಂತೆಂದಳು: "ಎಲ್ಲ ಆರಂಭಗಳೂ ಉಪಾಯದಿಂದ ಯತ್ನಿಸಿದರೆ ಸುಗಮವಾಗಿ ಸಿದ್ಧಿಸುತ್ತವೆ. ಆದ್ದರಿಂದ ನಿನಗೊಂದು ಉಪಾಯಮಾರ್ಗವನ್ನು ಹೇಳುತ್ತೇನೆ, ಒಪ್ಪಿಗೆಯಾದರೆ ಮಾಡಬಹುದು

*ಪೃಥಿವ್ಯುವಾಚ:*

**ಉಪಾಯತಃ ಸಮಾರಬ್ಧಾಃ ಸರ್ವೇ ಸಿದ್ಧ್ಯಂತ್ಯುಪಕ್ರಮಾಃ।**
**ತಸ್ಮಾದ್ವದಾಮ್ಯುಪಾಯಂ ತೇ ತಂ ಕುರುಷ್ವ ಯದೀಚ್ಛಸಿ॥** 78

**ಸಮಸ್ತಾ ಯಾ ಮಯಾ ಜೀರ್ಣಾ ನರನಾಥ ಮಹೌಷಧೀಃ।**
**ಯದೀಚ್ಛಸಿ ಪ್ರದಾಸ್ಯಾಮಿ ತಾಃ ಕ್ಷೀರಪರಿಣಾಮಿನೀಃ॥** 79

**ತಸ್ಮಾತ್ಪ್ರಜಾಹಿತಾರ್ಥಾಯ ಮಮ ಧರ್ಮಭೃತಾಂ ವರ।**
**ತಂ ತು ವತ್ಸಂ ಕುರುಷ್ವ ತ್ವಂ ಕ್ಷರೇಯಂ ಯೇನ ವತ್ಸಲಾ॥** 80

**ಸಮಾಂ ಚ ಕುರು ಸರ್ವತ್ರ ಯೇನ ಕ್ಷೀರಂ ಸಮಂತತಃ।**
**ವರೌಷಧೀಬೀಜಭೂತಂ ಬೀಜಂ ಸರ್ವತ್ರ ಭಾವಯೇ॥** 81

*ಶ್ರೀಪರಾಶರ ಉವಾಚ:*

**ತತ ಉತ್ಸಾರಯಾಮಾಸ ಶೈಲಾನ್ ಶತಸಹಸ್ರಶಃ।**
**ಧನುಷ್ಕೋಟ್ಯಾ ತದಾ ವೈನ್ಯಸ್ತೇನ ಶೈಲಾ ವಿವರ್ಧಿತಾಃ॥** 82

**ನ ಹಿ ಪೂರ್ವವಿಸರ್ಗೇ ವೈ ವಿಷಮೇ ಪೃಥಿವೀತಲೇ।**
**ಪ್ರವಿಭಾಗಃ ಪುರಾಣಾಂ ವಾ ಗ್ರಾಮಾಣಾಂ ವಾ ಪುರಾಭವತ್॥** 83

---

(77-78). ನಾನು ಯಾವ ಸಸ್ಯಸಂಪತ್ತುಗಳನ್ನು ಜೀರ್ಣಿಸಿಕೊಂಡಿದ್ದೇನೋ ಅದೆಲ್ಲವನ್ನೂ, ನಿನಗೆ ಒಪ್ಪಿಗೆಯಾದರೆ, ಹಾಲಿನ ರೂಪದಲ್ಲಿ ಕೊಟ್ಟುಬಿಡುತ್ತೇನೆ. ಓ ಧರ್ಮಾತ್ಮಾ-ನರೇಂದ್ರ, ಆದ್ದರಿಂದ ಪ್ರಜೆಗಳ ಹಿತಕ್ಕಾಗಿ ನನಗೆ ಯೋಗ್ಯವಾದ ಒಂದು ಕರುವನ್ನು ಗೊತ್ತು ಮಾಡು. ನಾನು ಅಕ್ಕರೆಯಿಂದ ಹಾಲನ್ನು ಕ್ಷರಿಸುವೆನು (79-80). ಅಲ್ಲದೆ ನೆಲವೆಲ್ಲವನ್ನೂ ಸಮತಳವನ್ನಾಗಿ ಮಾಡು. ಉತ್ತಮ ಸಸ್ಯಸಂಪತ್ತಿಗೆ ಬೀಜರೂಪವಾಗಿರುವ ಹಾಲು ಎಲ್ಲೆಡೆಯೂ ಹರಿಯುವಂತೆ ನಾನು ನೋಡಿಕೊಳ್ಳುವೆನು" ಎಂದಳು (81). ಆಗ ವೈನ್ಯನು ತನ್ನ ಧನುಸ್ಸಿನ ಅಗ್ರಭಾಗದಿಂದ ಎಲ್ಲೆಲ್ಲಿಯೂ ಹರಡಿದ್ದ ನೂರಾರು ಸಾವಿರಾರು ಬೆಟ್ಟಗಳನ್ನು ಬೇರೆ ಬೇರೆ ಕಡೆಗೆ ತಳ್ಳಿದನು. ಅದಕ್ಕೆ ಮೊದಲು ಭೂತಳವು ಏರು ತಗ್ಗುಗಳಿಂದ ತುಂಬಿದ್ದ ಪ್ರಯುಕ್ತ ಪಟ್ಟಣ, ಹಳ್ಳಿಯೆಂದು ಸರಿಯಾದ ವಿಭಾಗವಿರಲಿಲ್ಲ (82-83).

**ನ ಸಸ್ಯಾನಿ ನ ಗೋರಕ್ಷ್ಯಂ ನ ಕೃಷಿರ್ನ ವಣಿಕ್‌ಪಥಃ।**
**ವೈನ್ಯಾತ್ಪ್ರಭೃತಿ ಮೈತ್ರೇಯ ಸರ್ವಸ್ಯೈತಸ್ಯ ಸಂಭವಃ॥ 84**

**ಯತ್ರಯತ್ರ ಸಮಂ ತ್ವಸ್ಯಾ ಭೂಮೇರಾಸೀದ್‌ದ್ವಿಜೋತ್ತಮ।**
**ತತ್ರ ತತ್ರ ಪ್ರಜಾಃ ಸರ್ವಾ ನಿವಾಸಂ ಸಮರೋಚಯನ್॥ 85**

**ಆಹಾರಃ ಫಲಮೂಲಾನಿ ಪ್ರಜಾನಾಮಭವತ್ತದಾ।**
**ಕೃಚ್ಛ್ರೇಣ ಮಹತಾ ಸೋಽಪಿ ಪ್ರಣಷ್ಟಾಸ್ವೋಷಧೀಷು ವೈ॥ 86**

**ಸ ಕಲ್ಪಯಿತ್ವಾ ವತ್ಸಂ ತು ಮನುಂ ಸ್ವಾಯಂಭುವಂ ಪ್ರಭುಮ್।**
**ಸ್ವಪಾಣೌ ಪೃಥಿವೀನಾಥೋ ದುದೋಹ ಪೃಥಿವೀಂ ಪೃಥುಃ॥ 87**

**ಸಸ್ಯಜಾತಾನಿ ಸರ್ವಾಣಿ ಪ್ರಜಾನಾಂ ಹಿತಕಾಮ್ಯಯಾ।**
**ತೇನಾನ್ನೇನ ಪ್ರಜಾಸ್ತಾತ ವರ್ತಂತೇಽದ್ಯಾಪಿ ನಿತ್ಯಶಃ॥ 88**

**ಪ್ರಾಣಪ್ರದಾತಾ ಸ ಪೃಥುರ್ಯಸ್ಮಾದ್ಭೂಮೇರಭೂತ್ ಪಿತಾ।**
**ತತಸ್ತು ಪೃಥಿವೀಸಂಜ್ಞಾಮವಾಪಾಖಿಲಧಾರಿಣೀ॥ 89**

---

ಆ ಸಮಯದಲ್ಲಿ, ಮೈತ್ರೇಯ, ಸಸ್ಯ ಸಂಪತ್ತು ಗೋರಕ್ಷಣೆ ಕೃಷಿ ವಾಣಿಜ್ಯ ಮಾರ್ಗ—ಇವುಗಳ ಸರಿಯಾದ ವ್ಯವಸ್ಥೆ ಇರಲಿಲ್ಲ. ವೈನ್ಯನಿಂದ ಮೊದಲ್ಗೊಂಡು ಇವೆಲ್ಲವೂ ವ್ಯವಸ್ಥಿತವಾದವು (84). ಎಲ್ಲೆಲ್ಲಿ ಭೂಮಿಯು ಸಮತಳವಾಯಿತೋ ಅಲ್ಲಲ್ಲಿ ವಾಸಮಾಡಲು ಪ್ರಜೆಗಳು ಅಪೇಕ್ಷಿಸಿದರು. ಆಗ ಪ್ರಜೆಗಳ ಆಹಾರವು ಕೇವಲ ಫಲಮೂಲಗಳಾಗಿದ್ದವು. ಸಸ್ಯಸಂಪತ್ತು ನಷ್ಟವಾದ ಮೇಲೆ ಅದೂ ಸಹ ದುರ್ಲಭವಾಗಿತ್ತು (85-86). ಅನಂತರ ಪೃಥುರಾಜನು ಸ್ವಾಯಂಭುವಮನುವನ್ನು ಕರುವನ್ನಾಗಿ ಮಾಡಿಕೊಂಡು, ತನ್ನ ಕೈಯಲ್ಲಿ ಗೋರೂಪಿಣಿಯಾದ ಭೂದೇವಿಯಿಂದ ಹಾಲನ್ನು ಕರೆದನು. ಪ್ರಜೆಗಳ ಹಿತಕ್ಕಾಗಿ (ಹಾಲಿನ ರೂಪದಲ್ಲಿದ್ದ) ಸಮಸ್ತ ಸಂಪತ್ತನ್ನೂ ಹೊರ ಗೆಡವಿದನು. ಈಗಲೂ ಸಹ ಜನರು ಅದನ್ನೇ ಆಹಾರವಾಗಿ ಬಳಸುತ್ತಿದ್ದಾರೆ (87-88). ಪ್ರಾಣದಾನಮಾಡಿ ಪೃಥುವು ತಂದೆಯಾದ್ದರಿಂದ ಭೂಮಿಗೆ ಪೃಥಿವಿಯೆಂದು ಹೆಸರಾಯಿತು. ಅನಂತರ ದೇವತೆಗಳು, ಮುನಿಗಳು, ದೈತ್ಯರು, ರಾಕ್ಷಸರು, ಪರ್ವತಗಳು, ಗಂಧರ್ವರು, ಉರಗರು, ಯಕ್ಷರು,

**ತತಶ್ಚ ದೇವೈರ್ಮುನಿಭಿರ್ದೈತ್ಯೈರಕ್ಷೋಭಿರದ್ರಿಭಿಃ।**
**ಗಂಧರ್ವೈರುರಗೈರ್ಯಕ್ಷೈಃ ಪಿತೃಭಿಸ್ತರುಭಿಸ್ತಥಾ॥** 90

**ತತ್ತತ್ಪಾತ್ರಮುಪಾದಾಯ ತತ್ತದ್‌ದುಗ್ಧಂ ಮುನೇ ಪಯಃ।**
**ವತ್ಸದೋಗ್ಧೃವಿಶೇಷಾಶ್ಚ ತೇಷಾಂ ತದ್ಯೋನಯೋಽಭವನ್॥** 91

**ಸೈಷಾ ಧಾತ್ರೀ ವಿಧಾತ್ರೀ ಚ ಧಾರಿಣೀ ಪೋಷಣೀ ತಥಾ।**
**ಸರ್ವಸ್ಯ ತು ತತಃ ಪೃಥ್ವೀ ವಿಷ್ಣುಪಾದತಲೋದ್ಭವಾ॥** 92

**ಏವಂಪ್ರಭಾವಸ್ಯ ಪೃಥುಃ ಪುತ್ರೋ ವೇನಸ್ಯ ವೀರ್ಯವಾನ್।**
**ಜಜ್ಞೇ ಮಹೀಪತಿಃ ಪೂರ್ವೋ ರಾಜಾಭೂಜ್ಜನರಂಜನಾತ್॥** 93

**ಯ ಇದಂ ಜನ್ಮ ವೈನಸ್ಯ ಪೃಥೋಸ್ಸಂಕೀರ್ತ್ತಯೇನ್ನರಃ।**
**ನ ತಸ್ಯ ದುಷ್ಕೃತಂ ಕಿಂಚಿತ್ ಫಲದಾಯಿ ಪ್ರಜಾಯತೇ॥** 94

---

ಪಿತೃದೇವತೆಗಳು, ವೃಕ್ಷಗಳು ಬೇರೆ ಬೇರೆಯ ಪಾತ್ರೆಗಳನ್ನು ಹಿಡಿದು ತಮಗೆ ಬೇಕಾದ ಬಗೆಯ ಹಾಲನ್ನು ಕರೆದುಕೊಂಡರು. ಆಗ ಕರುಗಳು ಮತ್ತು ಹಾಲು ಕರೆಯತಕ್ಕವರು ಅವರವರಿಗೆ ಅವರವರ* ಸಜಾತೀಯ ರಾಗಿದ್ದರು (89-91). ಹೀಗೆ ವಿಷ್ಣುಪಾದತಲದಿಂದ ಹುಟ್ಟಿದ ಪೃಥ್ವಿಯು ಸಮಸ್ತ ಜಗತ್ತಿಗೆ ತಾಯಿಯೂ ನಿರ್ಮಾಪಕಳೂ ಧಾರಿಣಿಯೂ ಪೋಷಿಣಿಯೂ ಆಗಿದ್ದಾಳೆ. ಇಂತಹ ಪ್ರಭಾವಶಾಲಿಯೂ ವೀರನೂ ಆದ ಪೃಥುವು ವೇನನ ಪುತ್ರನಾಗಿ ಜನಿಸಿದ್ದನು. ಆ ಮಹೀಪತಿಯು ಜನರಂಜನೆ ಮಾಡಿದ್ದರಿಂದ ಅನ್ವರ್ಥವಾಗಿ ರಾಜನೆನಿಸಿದ್ದನು (92-93). ವೇನಪುತ್ರ ನಾದ ಪೃಥುವಿನ ಈ ಜನ್ಮವೃತ್ತಾಂತವನ್ನು ಯಾವ ಮನುಷ್ಯನು ಕೀರ್ತಿ ಸುವನೋ ಆತನ ಯಾವ ಪಾಪಕೃತ್ಯವೂ ಕೆಟ್ಟ ಫಲವನ್ನು ಕೊಡುವುದಿಲ್ಲ.

---

* ಉದಾ: ಪರ್ವತಗಳು ರತ್ನಗಳನ್ನೂ, ಮಹೌಷಧಿಗಳನ್ನೂ ಕರೆದುಕೊಂಡುವು. ಆಗ ಮೇರು ಹಾಲುಕರೆಯತಕ್ಕವನಾಗಿದ್ದ. ಹಿಮವಂತನು ಕರುವಾಗಿದ್ದ. ನೋಡಿ— ಯಂ ಸರ್ವಶೈಲಾಃ ಪರಿಕಲ್ಪ್ಯ ವತ್ಸಂ (ಕು. ಸಂ. 1-2).

**ದುಃಸ್ವಪ್ನೋಪಶಮಂ ನೃಣಾಂ ಶೃಣ್ವತಾಮೇತದುತ್ತಮಮ್।**
**ಪೃಥೋರ್ಜನ್ಮ ಪ್ರಭಾವಶ್ಚ ಕರೋತಿ ಸತತಂ ನೃಣಾಮ್॥ 95**

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ತ್ರಯೋದಶೋಽಧ್ಯಾಯಃ

---

ಈ ಪುಣ್ಯಚರಿತ್ರೆಯನ್ನು ಕೇಳತಕ್ಕವರಿಗೆ ಬೀಳುವ ಕೆಟ್ಟ ಕನಸುಗಳನ್ನು, ಪೃಥುವಿನ ಜನ್ಮವೃತ್ತಾಂತವೂ ಪ್ರಭಾವವೂ ಶಮನಮಾಡುತ್ತವೆ (94-95).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹದಿಮೂರನೆಯ ಅಧ್ಯಾಯ ಮುಗಿಯಿತು.



## ಚತುರ್ದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಪೃಥೋಃ ಪುತ್ರೌ ತು ಧರ್ಮಜ್ಞೌ ಜಜ್ಞಾತೇಽಂತರ್ಧಿವಾದಿನೌ।**
**ಶಿಖಂಡಿನೀ ಹವಿರ್ಧಾನಮಂತರ್ಧಾನಾದ್ವ್ಯಜಾಯತ॥ 1**

**ಹವಿರ್ಧಾನಾತ್ ಷಡಾಗ್ನೇಯೀ ಧಿಷಣಾಜನಯತ್ಸುತಾನ್।**
**ಪ್ರಾಚೀನಬರ್ಹಿಷಂ ಶುಕ್ರಂ ಗಯಂ ಕೃಷ್ಣಂ ವ್ರಜಾಜಿನೌ॥ 2**

**ಪ್ರಾಚೀನಬರ್ಹಿರ್ಭಗವಾನ್ ಮಹಾನಾಸೀತ್ಪ್ರಜಾಪತಿಃ।**
**ಹವಿರ್ಧಾನಾನ್ಮಹಾಭಾಗ ಯೇನ ಸಂವರ್ಧಿತಾಃ ಪ್ರಜಾಃ॥ 3**

**ಪ್ರಾಚೀನಾಗ್ರಾಃ ಕುಶಾಸ್ತಸ್ಯ ಪೃಥಿವ್ಯಾಂ ವಿಶ್ರುತಾ ಮುನೇ।**
**ಪ್ರಾಚೀನಬರ್ಹಿರಭವತ್ ಖ್ಯಾತೋ ಭುವಿ ಮಹಾಬಲಃ॥ 4**

---

## ಅಧ್ಯಾಯ 14

ಪ್ರಾಚೀನಬರ್ಹಿಯ ಜನ್ಮ. ಪ್ರಚೇತಸರು ಭಗವಂತನನ್ನು ಆರಾಧಿಸಿದ್ದು.

ಪರಾಶರರು ಹೇಳಿದರು: ಮೈತ್ರೇಯ, ಪೃಥುರಾಜನಿಗೆ ಅಂತರ್ಧಾನ, ವಾದಿ–ಎಂಬ ಧರ್ಮಜ್ಞರಾದ ಇಬ್ಬರು ಪುತ್ರರು ಜನಿಸಿದರು. ಅಂತರ್ಧಾನನಿಂದ ಅವನ ಪತ್ನಿಯಾದ ಶಿಖಂಡಿನಿಯು ಹವಿರ್ಧಾನನೆಂಬ ಮಗನನ್ನು ಪಡೆದಳು (1). ಅಗ್ನಿಕುಲೋತ್ಪನ್ನಳಾದ ಧಿಷಣೆಯು ಹವಿರ್ಧಾನನಿಂದ ಆರು ಮಂದಿ ಮಕ್ಕಳನ್ನು ಹೆತ್ತಳು. ಪ್ರಾಚೀನಬರ್ಹಿ, ಶುಕ್ರ, ಗಯ, ಕೃಷ್ಣ, ವ್ರಜ ಮತ್ತು ಅಜಿನ ಎಂದು ಅವರ ಹೆಸರು. ಅವರಲ್ಲಿ ಪ್ರಾಚೀನ ಬರ್ಹಿಯು ವಿಖ್ಯಾತನಾದ ಭಗವಾನ್ ಪ್ರಜಾಪತಿಯಾದನು. ಆತನಿಂದ ಪ್ರಜೆಗಳ ಸಂಖ್ಯೆ ಬೆಳೆಯಿತು (2-3). ಆತನ ಕಾಲದಲ್ಲಿ ಎಲ್ಲೆಲ್ಲಿಯೂ (ಯಜ್ಞಗಳು ನಡೆದಿದ್ದರಿಂದ) ದರ್ಭೆಗಳು ಪ್ರಾಚೀನಾಗ್ರವಾಗಿ ಪೃಥಿವಿಯಲ್ಲಿ ಹರಡಿದ್ದವು. ಆದ್ದರಿಂದ ಆತನಿಗೆ ಪ್ರಾಚೀನಬರ್ಹಿಯೆಂದೇ ಖ್ಯಾತಿ

**ಸಮುದ್ರತನಯಾಯಾಂ ತು ಕೃತದಾರೋ ಮಹೀಪತಿಃ।**
**ಮಹತಸ್ತಪಸಃ ಪಾರೇ ಸವರ್ಣಾಯಾಂ ಮಹಾಮತೇ॥** 5

**ಸವರ್ಣಾಧತ್ತ ಸಾಮುದ್ರೀ ದಶ ಪ್ರಾಚೀನಬರ್ಹಿಷಃ।**
**ಸರ್ವೇ ಪ್ರಚೇತಸೋ ನಾಮ ಧನುರ್ವೇದಸ್ಯ ಪಾರಗಾಃ॥** 6

**ಅಪೃಥಗ್ಧರ್ಮಚರಣಾಸ್ತೇಽತಪ್ಯಂತ ಮಹತ್ತಪಃ।**
**ದಶವರ್ಷಸಹಸ್ರಾಣಿ ಸಮುದ್ರಸಲಿಲೇಶಯಾಃ॥** 7

*ಶ್ರೀಮೈತ್ರೇಯ ಉವಾಚ:*

**ಯದರ್ಥಂ ತೇ ಮಹಾತ್ಮಾನಸ್ತಪಸ್ತೇಪುರ್ಮಹಾಮುನೇ।**
**ಪ್ರಚೇತಸಃ ಸಮುದ್ರಾಂಭಸ್ಯೇತದಾಖ್ಯಾತುಮರ್ಹಸಿ॥** 8

*ಶ್ರೀಪರಾಶರ ಉವಾಚ:*

**ಪಿತ್ರಾ ಪ್ರಚೇತಸಃ ಪ್ರೋಕ್ತಾಃ ಪ್ರಜಾರ್ಥಮಮಿತಾತ್ಮನಾ।**
**ಪ್ರಜಾಪತಿನಿಯುಕ್ತೇನ ಬಹುಮಾನಪುರಸ್ಸರಮ್॥** 9

---

ಯುಂಟಾಯಿತು. ಆತನು ತುಂಬ ಬಲಾಢ್ಯನಾಗಿದ್ದನು (4). ಆ ನೃಪಾಲನು ಮಹತ್ತರವಾದ ತಪಸ್ಸನ್ನು ಮಾಡಿದ ಮೇಲೆ ಸಮುದ್ರಕನ್ಯೆಯಾದ ಸವರ್ಣಾ ಎಂಬವಳನ್ನು ವಿವಾಹವಾದನು. ಸವರ್ಣೆಯು ಪ್ರಾಚೀನಬರ್ಹಿ ಯಿಂದ ಹತ್ತುಮಂದಿ ಪುತ್ರರನ್ನು ಪಡೆದಳು. ಅವರೆಲ್ಲರೂ ಪ್ರಚೇತಸ ರೆಂದು ವಿಖ್ಯಾತರಾಗಿದ್ದರಲ್ಲದೆ ಧನುರ್ವೇದದಲ್ಲಿ ಪಾರಂಗತರಾಗಿದ್ದರು (5-6). ಅವರು ಒಂದೇ ಬಗೆಯ ಧರ್ಮಾಚರಣೆಯಲ್ಲಿ ನಿರತರಾಗಿ ಸಮುದ್ರಜಲದಲ್ಲಿ ಮಲಗಿ ಹತ್ತು ಸಾವಿರ ವರ್ಷಗಳ ವರೆಗೆ ಕಠೋರವಾದ ತಪಸ್ಸನ್ನಾಚರಿಸಿದರು (7). ಆಗ ಮೈತ್ರೇಯರು "ಮಹರ್ಷಿಗಳೆ, ಮಹಾತ್ಮ ರಾದ ಪ್ರಚೇತಸರು ಸಮುದ್ರಜಲದಲ್ಲಿ ತಪಸ್ಸು ಮಾಡಿದ್ದೇಕೆ? ಅದನ್ನು ದಯವಿಟ್ಟು ಹೇಳಿರಿ" ಎಂದರು (8). ಅದಕ್ಕೆ ಪರಾಶರರು ಹೇಳಿದರು: ಮೈತ್ರೇಯ, ಸಂತಾನೋತ್ಪತ್ತಿಗಾಗಿ ಬ್ರಹ್ಮನಿಂದ ಪ್ರೇರಿತನಾದ ತಂದೆ ಪ್ರಾಚೀನಬರ್ಹಿಯು ಪ್ರಚೇತಸರನ್ನು ಕುರಿತು ಸಂಮಾನಪೂರ್ವಕವಾಗಿ

*ಪ್ರಾಚೀನಬರ್ಹಿರುವಾಚ:*

**ಬ್ರಹ್ಮಣಾ ದೇವದೇವೇನ ಸಮಾದಿಷ್ಟೋಽಸ್ಮ್ಯಹಂ ಸುತಾಃ।**
**ಪ್ರಜಾಃ ಸಂವರ್ಧನೀಯಾಸ್ತೇ ಮಯಾಚೋಕ್ತಂ ತಥೇತಿ ತತ್॥ 10**

**ತನ್ಮಮ ಪ್ರೀತಯೇ ಪುತ್ರಾಃ ಪ್ರಜಾವೃದ್ಧಿಮತಂದ್ರಿತಾಃ।**
**ಕುರುಧ್ವಂ ಮಾನನೀಯಾ ವಃ ಸಮ್ಯಗಾಜ್ಞಾ ಪ್ರಜಾಪತೇಃ॥ 11**

*ಶ್ರೀಪರಾಶರ ಉವಾಚ:*

**ತತಸ್ತೇ ತತ್ಪಿತುಃ ಶ್ರುತ್ವಾ ವಚನಂ ನೃಪನಂದನಾಃ।**
**ತಥೇತ್ಯುಕ್ತ್ವಾ ಚ ತಂ ಭೂಯಃ ಪಪ್ರಚ್ಛುಃ ಪಿತರಂ ಮುನೇ॥ 12**

*ಪ್ರಚೇತಸ ಊಚುಃ :*

**ಯೇನ ತಾತ ಪ್ರಜಾವೃದ್ಧೌ ಸಮರ್ಥಾಃ ಕರ್ಮಣಾ ವಯಮ್।**
**ಭವೇಮ ತತ್ ಸಮಸ್ತಂ ನಃ ಕರ್ಮ ವ್ಯಾಖ್ಯಾತುಮರ್ಹಸಿ॥ 13**

*ಪಿತೋವಾಚ:*

**ಆರಾಧ್ಯ ವರದಂ ವಿಷ್ಣುಮಿಷ್ಟಪ್ರಾಪ್ತಿಮಸಂಶಯಮ್।**
**ಸಮೇತಿ ನಾನ್ಯಥಾ ಮರ್ತ್ಯಃ ಕಿಮನ್ಯತ್ಕಥಯಾಮಿ ವಃ॥ 14**

---

"ಪುತ್ರರೆ, ದೇವದೇವನಾದ ಬ್ರಹ್ಮನು ಪ್ರಜೆಗಳ ಸಂಖ್ಯೆಯನ್ನು ಬೆಳೆಸಬೇಕೆಂದು ನನಗೆ ಆದೇಶವನ್ನಿತ್ತನು. ಹಾಗೆಯೇ ಆಗಲೆಂದು ನಾನು ಒಪ್ಪಿಕೊಂಡಿದ್ದೇನೆ (9-10). ಆದ್ದರಿಂದ, ಮಕ್ಕಳೆ, ನನ್ನ ಸಂತೋಷಕ್ಕಾಗಿ ನೀವು ಆಲಸ್ಯವಿಲ್ಲದೆ ಪ್ರಜಾಸಂಖ್ಯೆಯನ್ನು ಬೆಳೆಸುವುದರಲ್ಲಿ ತೊಡಗಿರಿ. ಬ್ರಹ್ಮದೇವನ ಆಜ್ಞೆಯನ್ನು ನೀವು ಗೌರವಿಸಬೇಕು" ಎಂದನು (11). ತಂದೆಯ ಮಾತನ್ನು ಕೇಳಿ ರಾಜಪುತ್ರರು ಆಗಲೆಂದೊಪ್ಪಿಕೊಂಡು ಮತ್ತೆ ಆತನನ್ನು ಕುರಿತು "ತಂದೆಯೆ, ಯಾವ ವಿಧಾನದಿಂದ ನಾವು ಪ್ರಜಾಸಂಖ್ಯೆಯನ್ನು ವರ್ಧಿಸಲು ಸಮರ್ಥರಾದೇವು, ಅದನ್ನು ವಿವರಿಸಬೇಕು" ಎಂದರು (12-13). ಅವರಿಗೆ ತಂದೆ ಪ್ರಾಚೀನಬರ್ಹಿಯು ಹೇಳಿದ್ದೇನೆಂದರೆ: "ವರದನಾದ ವಿಷ್ಣುವನ್ನು ಆರಾಧಿಸಿದರೆ ಮನುಷ್ಯನು ಇಷ್ಟವಾದ್ದನ್ನು ನಿಃಸಂಶಯ

**ತಸ್ಮಾತ್ಪ್ರಜಾವಿವೃದ್ಧ್ಯರ್ಥಂ ಸರ್ವಭೂತಪ್ರಭುಂ ಹರಿಮ್।**
**ಆರಾಧಯತ ಗೋವಿಂದಂ ಯದಿ ಸಿದ್ಧಿಮಭೀಪ್ಸಥ॥** 15

**ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚಾನ್ವಿಚ್ಛತಾಂ ಸದಾ।**
**ಆರಾಧನೀಯೋ ಭಗವಾನನಾದಿಪುರುಷೋತ್ತಮಃ॥** 16

**ಯಸ್ಮಿನ್ನಾರಾಧಿತೇ ಸರ್ಗಂ ಚಕಾರಾದೌ ಪ್ರಜಾಪತಿಃ।**
**ತಮಾರಾಧ್ಯಾಚ್ಯುತಂ ವೃದ್ಧಿಃ ಪ್ರಜಾನಾಂ ವೋ ಭವಿಷ್ಯತಿ॥** 17

*ಶ್ರೀಪರಾಶರ ಉವಾಚ:*

**ಇತ್ಯೇವಮುಕ್ತಾಸ್ತೇ ಪಿತ್ರಾ ಪುತ್ರಾಃ ಪ್ರಚೇತಸೋ ದಶ।**
**ಮಗ್ನಾಃ ಪಯೋಧಿಸಲಿಲೇ ತಪಸ್ತೇಪುಃ ಸಮಾಹಿತಾಃ॥** 18

**ದಶವರ್ಷಸಹಸ್ರಾಣಿ ನ್ಯಸ್ತಚಿತ್ತಾ ಜಗತ್ಪತೌ।**
**ನಾರಾಯಣೇ ಮುನಿಶ್ರೇಷ್ಠ ಸರ್ವಲೋಕಪರಾಯಣೇ॥** 19

---

ವಾಗಿ ಪಡೆಯುತ್ತಾನೆ. ಬೇರೆ ಮಾರ್ಗವಿಲ್ಲ. ನಿಮಗೆ ಇನ್ನೇನು ಹೇಳಲಿ? ಆದ್ದರಿಂದ ಪ್ರಜಾ ವೃದ್ಧಿಗಾಗಿ, ಕಾರ್ಯಸಿದ್ಧಿಯಾಗಬೇಕೆಂದಿದ್ದರೆ, ಸರ್ವ ಭೂತೇಶ್ವರನಾದ ಶ್ರೀಹರಿ ಗೋವಿಂದನನ್ನು ಆರಾಧಿಸಿರಿ (14-15). ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಬಯಸತಕ್ಕವರು ಅನಾದಿ ಪುರುಷೋತ್ತಮನಾದ ಭಗವಂತನನ್ನು ಆರಾಧಿಸಬೇಕು. ಬ್ರಹ್ಮನು ಆತನನ್ನು ಉಪಾಸನೆ ಮಾಡಿದ್ದರಿಂದ ಜಗತ್ತನ್ನು ಸೃಷ್ಟಿಮಾಡಲು ಸಾಧ್ಯ ವಾಯಿತು. ಆದ್ದರಿಂದ ಅಚ್ಯುತನ ಉಪಾಸನೆಯನ್ನು ಮಾಡಿರಿ. ನಿಮಗೆ ಸಂತಾನವೃದ್ಧಿಯಾಗುವುದು" ಎಂದನು (16-17). ಈ ಪ್ರಕಾರ ತಂದೆಯು ಹೇಳಲಾಗಿ ಪ್ರಚೇತಸರು ಸಮುದ್ರಜಲದಲ್ಲಿ ಮುಳುಗಿ ಏಕಾಗ್ರತೆಯಿಂದ ತಪಸ್ಸಿನಲ್ಲಿ ನಿರತರಾದರು. ಮೈತ್ರೇಯ, ಅವರು ಜಲದಲ್ಲಿದ್ದು ಜಗದೀ ಶ್ವರನೂ ಸರ್ವಲೋಕಗಳಿಗೆ ಪರಮಗತಿಯೂ ಆದ ಶ್ರೀಮನ್ನಾರಾಯಣ ನಲ್ಲಿ ಚಿತ್ತವನ್ನು ನಿಲ್ಲಿಸಿ ಹತ್ತುಸಾವಿರ ವರ್ಷಗಳ ಕಾಲ ತಪಸ್ಸು

**ತತ್ರೈವಾವಸ್ಥಿತಾ ದೇವಮೇಕಾಗ್ರಮನಸೋ ಹರಿಮ್।**
**ತುಷ್ಟುವುರ್ಯಸ್ಸ್ತುತಃ ಕಾಮಾನ್ ಸ್ತೋತುರಿಷ್ಟಾನ್ಪ್ರಯಚ್ಛತಿ॥ 20**

*ಶ್ರೀಮೈತ್ರೇಯ ಉವಾಚ:*

**ಸ್ತವಂ ಪ್ರಚೇತಸೋ ವಿಷ್ಣೋಃ ಸಮುದ್ರಾಂಭಸಿ ಸಂಸ್ಥಿತಾಃ।**
**ಚಕ್ರುಸ್ತನ್ಮೇ ಮುನಿಶ್ರೇಷ್ಠ ಸುಪುಣ್ಯಂ ವಕ್ತುಮರ್ಹಸಿ॥ 21**

*ಶ್ರೀಪರಾಶರ ಉವಾಚ:*

**ಶೃಣು ಮೈತ್ರೇಯ ಗೋವಿಂದಂ ಯಥಾಪೂರ್ವಂ ಪ್ರಚೇತಸಃ।**
**ತುಷ್ಟುವುಸ್ತನ್ಮಯೀಭೂತಾಃ ಸಮುದ್ರಸಲಿಲೇಶಯಾಃ॥ 22**

*ಪ್ರಚೇತಸ ಊಚುಃ :*

**ನತಾಃ ಸ್ಮ ಸರ್ವವಚಸಾಂ ಪ್ರತಿಷ್ಠಾ ಯತ್ರ ಶಾಶ್ವತೀ।**
**ತಮಾದ್ಯಂತಮಶೇಷಸ್ಯ ಜಗತಃ ಪರಮಂ ಪ್ರಭುಮ್॥ 23**

**ಜ್ಯೋತಿರಾದ್ಯಮನೌಪಮ್ಯಮಣ್ವನಂತಮಪಾರವತ್।**
**ಯೋನಿಭೂತಮಶೇಷಸ್ಯ ಸ್ಥಾವರಸ್ಯ ಚರಸ್ಯ ಚ॥ 24**

---

ಮಾಡಿದರು. ಶ್ರೀಹರಿಯನ್ನು ಏಕಾಗ್ರಚಿತ್ತದಿಂದ ಸ್ತುತಿಸುತ್ತಿದ್ದರು. ಹಾಗೆ ಸ್ತುತನಾದರೆ ಶ್ರೀಹರಿಯು ಇಷ್ಟಾರ್ಥಗಳನ್ನು ಸಲ್ಲಿಸುತ್ತಾನೆ (18-20). ಆಗ ಮೈತ್ರೇಯರು "ಮುನಿಶ್ರೇಷ್ಠರೆ, ಪ್ರಚೇತಸರು ಸಮುದ್ರಜಲದಲ್ಲಿ ಶ್ರೀಹರಿಯನ್ನು ಯಾವ ಪ್ರಕಾರ ಸ್ತುತಿಸುತ್ತಿದ್ದರು? ಪುಣ್ಯಪ್ರದವಾದ ಆ ಸ್ತುತಿಯನ್ನು ನನಗೆ ತಿಳಿಸಬೇಕು" ಎಂದು ಕೇಳಿದರು (21). ಅದಕ್ಕೆ ಪರಾಶರರು ಹೇಳಿದರು: ಮೈತ್ರೇಯ, ಪ್ರಚೇತಸರು ಸಮುದ್ರಜಲದಲ್ಲಿದ್ದುಕೊಂಡು ತನ್ಮಯೀಭೂತರಾಗಿ ಗೋವಿಂದನನ್ನು ಸ್ತುತಿಸಿದ್ದನ್ನು ಹೇಳುತ್ತೇನೆ, ಕೇಳು: "ಸಮಸ್ತ ವಾಙ್ಮಯವೂ ಯಾರಲ್ಲಿ ಕೊನೆಗೊಂಡು ಶಾಶ್ವತವಾಗಿ ನಿಲ್ಲುವುದೋ ಅಂತಹ ಪರಮಪ್ರಭುವೂ ಜಗತ್ತೆಲ್ಲಕ್ಕೆ ಆದ್ಯಂತವೂ ಆಗಿರುವ ಭಗವಂತನಿಗೆ ನಾವು ನಮಸ್ಕರಿಸುತ್ತೇವೆ (22-23). ಆದಿಜ್ಯೋತಿ, ಉಪಮಾನರಹಿತ, ಅಣು, ಅನಂತ, ಅಪಾರ ಮತ್ತು ಸಮಸ್ತಸ್ಥಾವರ ಜಂಗಮಗಳಿಗೆ ಕಾರಣವಾದದ್ದು ಯಾವುದೋ ಅದಕ್ಕೆ ನಮಸ್ಕರಿಸುತ್ತೇವೆ.

**ಯಸ್ಯಾಹಃ ಪ್ರಥಮಂ ರೂಪಮರೂಪಸ್ಯ ತಥಾ ನಿಶಾ।**
**ಸಂಧ್ಯಾ ಚ ಪರಮೇಶಸ್ಯ ತಸ್ಮೈ ಕಾಲಾತ್ಮನೇ ನಮಃ॥ 25**

**ಭುಜ್ಯತೇಽನುದಿನಂ ದೇವೈಃ ಪಿತೃಭಿಶ್ಚ ಸುಧಾತ್ಮಕಃ।**
**ಜೀವಭೂತಃ ಸಮಸ್ತಸ್ಯ ತಸ್ಮೈ ಸೋಮಾತ್ಮನೇ ನಮಃ॥ 26**

**ಯಸ್ತಮಾಂಸ್ಯತ್ತಿ ತೀವ್ರಾತ್ಮಾ ಪ್ರಭಾಭಿರ್ಭಾಸಯನ್ನಭಃ।**
**ಧರ್ಮಶೀತಾಂಭಸಾಂ ಯೋನಿಸ್ತಸ್ಮೈ ಸೂರ್ಯಾತ್ಮನೇ ನಮಃ॥ 27**

**ಕಾಠಿನ್ಯವಾನ್ ಯೋ ಬಿಭರ್ತಿ ಜಗದೇತದಶೇಷತಃ।**
**ಶಬ್ದಾದಿಸಂಶ್ರಯೋ ವ್ಯಾಪೀ ತಸ್ಮೈ ಭೂಮ್ಯಾತ್ಮನೇ ನಮಃ॥ 28**

**ಯದ್ಯೋನಿಭೂತಂ ಜಗತೋ ಬೀಜಂ ಯತ್ಸರ್ವದೇಹಿನಾಮ್।**
**ತತ್ತೋಯರೂಪಮೀಶಸ್ಯ ನಮಾಮೋ ಹರಿಮೇಧಸಃ॥ 29**

---

ರೂಪರಹಿತನಾದ ಯಾವ ಪರಮೇಶ್ವರನಿಗೆ ಹಗಲು, ರಾತ್ರಿ ಮತ್ತು ಸಂಧ್ಯಾ—ಇವು ಮೊದಲನೆಯ ರೂಪವಾದವೋ ಆ ಕಾಲಾತ್ಮನಿಗೆ ನಮಸ್ಕಾರ (24-25). ಯಾವಾತನು ಅಮೃತಸ್ವರೂಪನಾಗಿ ಪ್ರತಿದಿನ ದೇವತೆಗಳಿಂದಲೂ ಪಿತೃಗಳಿಂದಲೂ ಭುಜಿಸಲ್ಪಡುತ್ತಲಿರುವನೋ ಸಮಸ್ತ ಪ್ರಾಣಿಗಳ ಜೀವರೂಪನಾಗಿರವನೋ ಅಂತಹ ಸೋಮಾತ್ಮನೇ ನಮಃ (26). ಯಾವಾತನು ತೀವ್ರರೂಪನಾಗಿ ಪ್ರಭೆಯಿಂದ ಗಗನವನ್ನು ಬೆಳಗುತ್ತ ಕತ್ತಲನ್ನು ನುಂಗಿಹಾಕುವನೋ, ಸೆಕೆ, ಚಳಿ ನೀರು—ಇವುಗಳಿಗೆ ಕಾರಣನೋ ಅಂತಹ ಸೂರ್ಯಾತ್ಮನೇ ನಮಃ (27). ಯಾವಾತನು ಕಾಠಿಣ್ಯಗುಣವುಳ್ಳವನಾಗಿ ಈ ಜಗತ್ತನ್ನು ಧರಿಸಿದ್ದಾನೋ, ಶಬ್ದಾದಿ (ಶಬ್ದ, ಸ್ಪರ್ಶ, ರೂಪ, ರಸ, ಗಂಧ) ಪಂಚಗುಣಗಳಿಗೆ ಆಶ್ರಯನಾಗಿದ್ದಾನೋ ಅಂತಹ ಭೂಮ್ಯಾತ್ಮನೇ ನಮಃ (28). ಯಾವುದು ಜಗತ್ತಿಗೆ ಕಾರಣವೂ ಸರ್ವದೇಹಧಾರಿಗಳಿಗೆ ಬೀಜವೂ ಆಗಿದೆಯೋ ಅಂತಹ ಪರಮೇಶ್ವರ ಶ್ರೀಹರಿಯ ಜಲರೂಪಕ್ಕೆ ನಮಸ್ಕರಿಸುತ್ತೇವೆ. ಯಾವುದು ಸರ್ವದೇವತೆ

ಯೋ ಮುಖಂ ಸರ್ವದೇವಾನಾಂ ಹವ್ಯಭುಕ್ಕವ್ಯಭುಕ್ ತಥಾ।
ಪಿತೄಣಾಂ ಚ ನಮಸ್ತಸ್ಮೈ ವಿಷ್ಣವೇ ಪಾವಕಾತ್ಮನೇ॥ 30

ಪಂಚಧಾವಸ್ಥಿತೋ ದೇಹೇ ಯಶ್ಚೇಷ್ಟಾಂ ಕುರುತೇಽನಿಶಮ್।
ಆಕಾಶಯೋನಿರ್ಭಗವಾಂಸ್ತಸ್ಮೈ ವಾಯ್ವಾತ್ಮನೇ ನಮಃ॥ 31

ಅವಕಾಶಮಶೇಷಾಣಾಂ ಭೂತಾನಾಂ ಯಃ ಪ್ರಯಚ್ಛತಿ।
ಅನಂತಮೂರ್ತಿಮಾನ್ ಶುದ್ಧಸ್ತಸ್ಮೈ ವ್ಯೋಮಾತ್ಮನೇ ನಮಃ॥ 32

ಸಮಸ್ತೇಂದ್ರಿಯಸರ್ಗಸ್ಯ ಯಃ ಸದಾ ಸ್ಥಾನಮುತ್ತಮಮ್।
ತಸ್ಮೈ ಶಬ್ದಾದಿರೂಪಾಯ ನಮಃ ಕೃಷ್ಣಾಯ ವೇಧಸೇ॥ 33

ಗೃಹ್ಣಾತಿ ವಿಷಯಾನ್ನಿತ್ಯಮಿಂದ್ರಿಯಾತ್ಮಾ ಕ್ಷರಾಕ್ಷರಃ।
ಯಸ್ತಸ್ಮೈ ಜ್ಞಾನಮೂಲಾಯ ನತಾಃ ಸ್ಮ ಹರಿಮೇಧಸೇ॥ 34

ಗೃಹೀತಾನೀಂದ್ರಿಯೈರರ್ಥಾನಾತ್ಮನೇ ಯಃ ಪ್ರಯಚ್ಛತಿ।
ಅಂತಃಕರಣರೂಪಾಯ ತಸ್ಮೈ ವಿಶ್ವಾತ್ಮನೇ ನಮಃ॥ 35

---

ಗಳಿಗೂ ಪಿತೃಗಳಿಗೂ ಮುಖವೆನಿಸಿ ಹವ್ಯಕವ್ಯಗಳನ್ನು ಭುಜಿಸುತ್ತದೆಯೋ ಅಂತಹ ಅಗ್ನಿಯ ರೂಪದಲ್ಲಿರುವ ವಿಷ್ಣುವಿಗೆ ನಮಸ್ಕಾರ (29-30). ಯಾವಾತನು ದೇಹದಲ್ಲಿ ಐದು ರೂಪಗಳಿಂದ (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ) ಇದ್ದು ಸದಾ ಕಾರ್ಯನಿರತನಾಗಿರುವನೋ ಆಕಾಶ ದಿಂದ ಹುಟ್ಟಿದ ವಾಯುರೂಪನಾಗಿರುವ ಆತನಿಗೆ ನಮಸ್ಕಾರ (31). ಅಶೇಷಭೂತಗಳಿಗೂ ಅವಕಾಶವನ್ನಿತ್ತು ಅನಂತಮೂರ್ತಿಯೂ ಶುದ್ಧನೂ ಆದ ವ್ಯೋಮಾತ್ಮನಿಗೆ ನಮಸ್ಕಾರ. ಸಕಲೇಂದ್ರಿಯಗಳ ನಿರ್ಮಾಣಕ್ಕೂ ಉತ್ತಮ ಸ್ಥಾನವಾಗಿ ಶಬ್ದಾದಿ ಪಂಚತನ್ಮಾತ್ರೆಗಳ ರೂಪದಲ್ಲಿರುವ ವಿಧಾತೃ ವಾದ ಶ್ರೀಕೃಷ್ಣನಿಗೆ ನಮಸ್ಕಾರ (32-33). ಯಾರು ಇಂದ್ರಿಯಸ್ವರೂಪನಾಗಿ ಸದಾ ಶಬ್ದಾದಿ ವಿಷಯಗಳನ್ನು ಗ್ರಹಿಸುತ್ತಾನೋ, ಕ್ಷರ-ಅಕ್ಷರಗಳೆರಡೂ ಆಗಿದ್ದಾನೋ ಅಂತ ಜ್ಞಾನಕಾರಣನಾದ ಶ್ರೀಹರಿಗೆ ನಮಸ್ಕಾರ (34). ಇಂದ್ರಿಯಗಳಿಂದ ಗೃಹೀತಗಳಾದ ವಿಷಯಗಳನ್ನು ಯಾವುದು ಜೀವಾತ್ಮನ ಬಳಿಗೆ ಸಾಗಿಸುವುದೋ ಅಂತಹ ಅಂತಃಕರಣರೂಪನಾದ ವಿಶ್ವಾತ್ಮನಿಗೆ

**ಯಸ್ಮಿನ್ನನಂತೇ ಸಕಲಂ ವಿಶ್ವಂ ಯಸ್ಮಾತ್ತಥೋದ್ಗತಮ್।**
**ಲಯಸ್ಥಾನಂ ಚ ಯಸ್ತಸ್ಮೈ ನಮಃ ಪ್ರಕೃತಿಧರ್ಮಿಣೇ॥** 36

**ಶುದ್ಧಃ ಸಁಲಕ್ಷ್ಯತೇ ಭ್ರಾಂತ್ಯಾ ಗುಣವಾನಿವ ಯೋಽಗುಣಃ।**
**ತಮಾತ್ಮರೂಪಿಣಂ ದೇವಂ ನತಾಃ ಸ್ಮ ಪುರುಷೋತ್ತಮಮ್॥** 37

**ಅವಿಕಾರಮಜಂ ಶುದ್ಧಂ ನಿರ್ಗುಣಂ ಯನ್ನಿರಂಜನಮ್।**
**ನತಾಃ ಸ್ಮ ತತ್ಪರಂ ಬ್ರಹ್ಮ ವಿಷ್ಣೋರ್ಯತ್ಪರಮಂ ಪದಮ್॥** 38

**ಅದೀರ್ಘಹ್ರಸ್ವಮಸ್ಥೂಲಮನಣ್ವಶ್ಯಾಮಲೋಹಿತಮ್।**
**ಅಸ್ನೇಹಚ್ಛಾಯಮತನುಮಸಕ್ತಮಶರೀರಿಣಮ್॥** 39

**ಅನಾಕಾಶಮಸಂಸ್ಪರ್ಶಮಗಂಧಮರಸಂ ಚ ಯತ್।**
**ಅಚಕ್ಷುಃ ಶ್ರೋತ್ರಮಚಲಮವಾಕ್‌ಪಾಣಿಮಮಾನಸಮ್॥** 40

**ಅನಾಮಗೋತ್ರಮಸುಖಮತೇಜಸ್ಕಮಹೇತುಕಮ್।**
**ಅಭಯಂ ಭ್ರಾಂತಿರಹಿತಮನಿದ್ರಮಜರಾಮರಮ್॥** 41

---

ನಮಸ್ಕಾರ (35). ಯಾವ ಅನಂತನಲ್ಲಿ ಸಕಲ ವಿಶ್ವವೂ ನಿಂತಿದೆಯೋ ಯಾರಿಂದ ಹುಟ್ಟಿ ಲಯವಾಗುತ್ತದೆಯೋ ಅಂತಹ ವಿಶ್ವವಾಗಿ ಪ್ರಕೃತಿ ರೂಪದಲ್ಲಿರುವ ಪರಮಾತ್ಮನಿಗೆ ನಮಸ್ಕಾರ (36). ಯಾರು ಶುದ್ಧನೂ ಗುಣರಹಿತನೂ ಆಗಿದ್ದರೂ ಭ್ರಾಂತಿಯಿಂದ ಗುಣವುಳ್ಳವನೋ ಎಂಬಂತೆ ಕಂಡುಬರುತ್ತಾನೋ ಅಂತಹ ಆತ್ಮರೂಪನಾದ ದೇವಪುರುಷೋತ್ತಮನಿಗೆ ಶರಣಾಗಿದ್ದೇವೆ (37). ವಿಕಾರರಹಿತವೂ ಅಜವೂ ಶುದ್ಧವೂ ನಿರ್ಗುಣವೂ ನಿರಂಜನವೂ ಆದ ವಿಷ್ಣುವಿನ ಪರಮಸ್ವರೂಪವಾದ ಪರಬ್ರಹ್ಮಕ್ಕೆ ಶರಣಾಗಿದ್ದೇವೆ (38). ದೀರ್ಘವಲ್ಲ, ಹ್ರಸ್ವವಲ್ಲ, ಸ್ಥೂಲವಲ್ಲ, ಸೂಕ್ಷ್ಮ ವಲ್ಲ, ಕಪ್ಪಲ್ಲ, ಕೆಂಪಲ್ಲ, ದ್ರವವಲ್ಲ, ನೆರಳಲ್ಲ, ಸಂಗವುಳ್ಳದ್ದಲ್ಲ, ಶರೀರವುಳ್ಳದ್ದಲ್ಲ (39), ಮತ್ತು ಆಕಾಶಗುಣವಾದ ಶಬ್ದ ಮತ್ತು ಸ್ಪರ್ಶ, ಗಂಧ, ರಸಗಳಿಂದ ರಹಿತವಾದದ್ದು, ಕಣ್ಣು ಕಿವಿಗಳಿಲ್ಲದ್ದು, ಚಲನಕ್ರಿಯೆ ಯಿಲ್ಲದ್ದು. ವಾಕ್‌ಪಾಣಿರಹಿತವಾದದ್ದು, ಮನಸ್ಸಿಲ್ಲದ್ದು (40), ಮತ್ತು ನಾಮಗೋತ್ರರಹಿತವಾದದ್ದು, (ಇಂದ್ರಿಯ)ಸುಖವಿಲ್ಲದ್ದು, ಹೊಳಪಿಲ್ಲದ್ದು,

**ಅರಜೋಽಶಬ್ದಮಮೃತಮಪ್ಲುತಂ ಯದಸಂವೃತಮ್ ।**
**ಪೂರ್ವಾಪರೇ ನ ವೈ ಯಸ್ಮಿಂಸ್ತದ್ವಿಷ್ಣೋಃ ಪರಮಂ ಪದಮ್ ॥ 42**

**ಪರಮೇಶತ್ವಗುಣವತ್ ಸರ್ವಭೂತಮಸಂಶ್ರಯಮ್ ।**
**ನತಾಃ ಸ್ಮ ತತ್ಪದಂ ವಿಷ್ಣೋರ್ಜಿಹ್ವಾದೃಗ್ಗೋಚರಂ ನ ಯತ್ ॥ 43**

*ಶ್ರೀಪರಾಶರ ಉವಾಚ:*

**ಏವಂ ಪ್ರಚೇತಸೋ ವಿಷ್ಣುಂ ಸ್ತುವಂತಸ್ತತ್ಸಮಾಧಯಃ ।**
**ದಶವರ್ಷಸಹಸ್ರಾಣಿ ತಪಶ್ಚೇರುರ್ಮಹಾರ್ಣವೇ ॥ 44**

**ತತಃ ಪ್ರಸನ್ನೋ ಭಗವಾಂಸ್ತೇಷಾಮಂತರ್ಜಲೇ ಹರಿಃ ।**
**ದದೌ ದರ್ಶನಮುನ್ನಿದ್ರನೀಲೋತ್ಪಲದಲಚ್ಛವಿಃ ॥ 45**

**ಪತತ್ತ್ರಿರಾಜಮಾರೂಢಮವಲೋಕ್ಯ ಪ್ರಚೇತಸಃ ।**
**ಪ್ರಣಿಪೇತುಃ ಶಿರೋಭಿಸ್ತಂ ಭಕ್ತಿಭಾರಾವನಾಮಿತೈಃ ॥ 46**

---

ಕಾರಣಶೂನ್ಯವಾದದ್ದು , ಅಭಯ, ಭ್ರಾಂತಿರಹಿತ, ಅನಿದ್ರ, ಅಜರ, ಅಮರ (41), ಮತ್ತು ಕಲ್ಮಷವಿಲ್ಲದ್ದು , ಶಬ್ದಗೋಚರವಲ್ಲದ್ದು , ಅಮೃತ, ಪರಿಣಾಮರಹಿತ, ಅನಾಚ್ಛಾದಿತ, ಪೂರ್ವ-ಅಪರಗಳೆಂದು ದೇಶಕಾಲ ಪರಿಚ್ಛೇದವಿಲ್ಲದ್ದು , ವಿಷ್ಣುವಿನ ಪರಮಸ್ವರೂಪವಾದದ್ದು (42), ಮತ್ತು ಪರಮೇಶ್ವರಸ್ವರೂಪವಾದದ್ದು , ಸರ್ವವೂ ಅನಾಧಾರವೂ ಆದದ್ದು, ವಾಗ್‌ದೃಷ್ಟಿಗಳಿಗೆ ಅಗೋಚರವಾದದ್ದು—ಇಂತಹ ವಿಷ್ಣುವಿನ ಪರಮ ಪದಕ್ಕೆ ನಮಸ್ಕಾರ ಮಾಡುತ್ತೇವೆ" (43). ಈ ಪ್ರಕಾರವಾಗಿ ಸ್ತುತಿಸುತ್ತ ವಿಷ್ಣುವಿನಲ್ಲಿ ಏಕಾಗ್ರಮನಸ್ಕರಾಗಿ ಪ್ರಚೇತಸರು ಮಹಾಸಾಗರಜಲದಲ್ಲಿ ಹತ್ತುಸಾವಿರ ವರ್ಷಗಳ ಕಾಲ ತಪಸ್ಸು ಮಾಡಿದರು (44). ಅನಂತರ ಭಗವಾನ್ ಶ್ರೀಹರಿಯು ಪ್ರಸನ್ನನಾಗಿ, ಅರಳಿದ ನೀಲೋತ್ಪಲದ ದಳದಂತೆ ಶ್ಯಾಮಕಾಂತಿಯುಳ್ಳವನಾಗಿ ನೀರಿನ ನಡುವೆ ಅವರಿಗೆ ದರ್ಶನವನ್ನಿತ್ತನು. ಪಕ್ಷಿರಾಜನಾದ ಗರುಡನನ್ನೇರಿದ್ದ ಆತನನ್ನು ನೋಡಿ ಪ್ರಚೇತಸರು ಭಕ್ತಿಭಾರದಿಂದ ಬಗ್ಗಿದ ಶಿರಸ್ಸುಗಳಿಂದ ಪ್ರಣಾಮಮಾಡಿದರು (45-46).

**ತತಸ್ತಾನಾಹ ಭಗವಾನ್ ಪ್ರೀಯತಾಮೀಪ್ಸಿತೋ ವರಃ।**
**ಪ್ರಸಾದಸುಮುಖೋಽಹಂ ವೋ ವರದಃ ಸಮುಪಸ್ಥಿತಃ॥** 47

**ತತಸ್ತಮೂಚುರ್ವರದಂ ಪ್ರಣಿಪತ್ಯ ಪ್ರಚೇತಸಃ।**
**ಯಥಾ ಪಿತ್ರಾ ಸಮಾದಿಷ್ಟಂ ಪ್ರಜಾನಾಂ ವೃದ್ಧಿಕಾರಣಮ್॥** 48

**ಸ ಚಾಪಿ ದೇವಸ್ತಂ ದತ್ತ್ವಾ ಯಥಾಭಿಲಷಿತಂ ವರಮ್।**
**ಅಂತರ್ಧಾನಂ ಜಗಾಮಾಶು ತೇ ಚ ನಿಶ್ಚಕ್ರಮುರ್ಜಲಾತ್॥** 49

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಚತುರ್ದಶೋಽಧ್ಯಾಯಃ

---

ಆಗ ಭಗವಂತನು ಅವರನ್ನು ಕುರಿತು "ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ. ನಾನು ಪ್ರಸನ್ನನಾಗಿ ನಿಮಗೆ ವರವನ್ನು ಕೊಡುವುದಕ್ಕೆ ಬಂದಿದ್ದೇನೆ" ಎಂದು ನುಡಿದನು (47). ಪ್ರಚೇತಸರು ವರದನಾದ ವಿಷ್ಣುವಿಗೆ ನಮಸ್ಕರಿಸಿ, ತಮ್ಮ ತಂದೆಯ ಆದೇಶವನ್ನನುಸರಿಸಿ ಪ್ರಜಾವೃದ್ಧಿಗೆ ಬೇಕಾದ ಅರ್ಹತೆಯನ್ನು ಕೊಡಬೇಕೆಂದು ಕೇಳಿಕೊಂಡರು. ಸ್ವಾಮಿಯು ಅವರಿಗೆ ಅಭೀಷ್ಟವಾದ ವರವನ್ನಿತ್ತು ಅಂತರ್ಧಾನ ಹೊಂದಿದನು. ಪ್ರಚೇತಸರು ಸಮುದ್ರಜಲದಿಂದ ಈಚೆಗೆ ಬಂದರು (48-49).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ತಪಶ್ಚರತ್ಸು ಪೃಥಿವೀಂ ಪ್ರಚೇತಃಸು ಮಹೀರುಹಾಃ।**
**ಅರಕ್ಷ್ಯಮಾಣಾಮವಬ್ರುರ್ಬಭೂವಾಥ ಪ್ರಜಾಕ್ಷಯಃ॥** 1

**ನಾಶಕನ್ಮರುತೋ ವಾತುಂ ವೃತಂ ಖಮಭವದ್‌ದ್ರುಮೈಃ।**
**ದಶವರ್ಷಸಹಸ್ರಾಣಿ ನ ಶೇಕುಶ್ಚೇಷ್ಟಿತುಂ ಪ್ರಜಾಃ॥** 2

**ತಾನ್ ದೃಷ್ಟ್ವಾ ಜಲನಿಷ್ಕ್ರಾಂತಾಃ ಸರ್ವೇ ಕ್ರುದ್ಧಾಃ ಪ್ರಚೇತಸಃ।**
**ಮುಖೇಭ್ಯೋ ವಾಯುಮಗ್ನಿಂ ಚ ತೇಽಸೃಜನ್ ಜಾತಮನ್ಯವಃ॥** 3

**ಉನ್ಮೂಲಾನಥ ತಾನ್ ವೃಕ್ಷಾನ್ ಕೃತ್ವಾ ವಾಯುರಶೋಷಯತ್।**
**ತಾನಗ್ನಿರದಹದ್ ಘೋರಸ್ತತ್ರಾಭೂದ್ ಧ್ರುಮಸಂಕ್ಷಯಃ॥** 4

---

## ಅಧ್ಯಾಯ 15

ಕಂಡುಮುನಿ ಮತ್ತು ಪ್ರಮ್ಲೋಚಾ ಎಂಬ ಅಪ್ಸರೆಯ ವೃತ್ತಾಂತ. ಮಾರಿಷಾ ಎಂಬ ಕನ್ಯೆಯ ಜನನ. ಅವಳನ್ನು ಪ್ರಚೇತಸರು ಮದುವೆಯಾಗುವುದು. ದಕ್ಷಪ್ರಜಾಪತಿಯ ಉತ್ಪತ್ತಿ. ದಕ್ಷಪುತ್ರಿಯರ ವಂಶದ ವರ್ಣನೆ.

ಪರಾಶರರು ಹೇಳಿದರು: ಪ್ರಚೇತಸರು ತಪಸ್ಸಿನಲ್ಲಿ ಮಗ್ನರಾಗಿರುವಾಗ ಭೂಮಿಗೆ ರಕ್ಷಣೆಯಿಲ್ಲದೆ ಹೋದದ್ದರಿಂದ ಎಲ್ಲೆಲ್ಲಿಯೂ ಮರಗಳು ಬೆಳೆದು ಆವರಿಸಿದವು. ಬಹು ಮಂದಿ ಪ್ರಜೆಗಳು ನಶಿಸಿದರು (1). ಎಲ್ಲೆಲ್ಲಿಯೂ ಮರಗಳು ಆಕಾಶವನ್ನು ವ್ಯಾಪಿಸಿಕೊಂಡವು. ಗಾಳಿಗೆ ಸರಿಯಾಗಿ ಬೀಸಲಾಗಲಿಲ್ಲ. ಹಾಗೆ ಹತ್ತು ಸಾವಿರ ವರ್ಷಗಳ ಕಾಲ ನಡೆದದ್ದರಿಂದ ಪ್ರಜೆಗಳು ನಿಶ್ಚೇಷ್ಟರಾದರು. ಪ್ರಚೇತಸರು ಸಮುದ್ರಜಲದಿಂದ ಹೊರಗೆ ಬಂದು, (ಆ ಪರಿಯಲ್ಲಿ ವ್ಯಾಪಿಸಿಕೊಂಡಿದ್ದ) ವೃಕ್ಷಗಳನ್ನು ನೋಡಿ ಕ್ರುದ್ಧರಾದರು. ಅವರ ಮುಖದಿಂದ ವಾಯುವೂ ಅಗ್ನಿಯೂ ಹೊಮ್ಮಿದವು

**ದ್ರುಮಕ್ಷಯಮಥೋ ದೃಷ್ಟ್ವಾ ಕಿಂಚಿಚ್ಛಿಷ್ಟೇಷು ಶಾಖಿಷು ।**
**ಉಪಗಮ್ಯಾಬ್ರವೀದೇತಾನ್ ರಾಜಾ ಸೋಮಃ ಪ್ರಜಾಪತೀನ್ ॥ 5**

**ಕೋಪಂ ಯಚ್ಛತ ರಾಜಾನಃ ಶೃಣುಧ್ವಂ ಚ ವಚೋ ಮಮ ।**
**ಸಂಧಾನಂ ವಃ ಕರಿಷ್ಯಾಮಿ ಸಹ ಕ್ಷಿತಿರುಹೈರಹಮ್ ॥ 6**

**ರತ್ನಭೂತಾ ಚ ಕನ್ಯೇಯಂ ವಾರ್ಕ್ಷೇಯೀ ವರವರ್ಣಿನೀ ।**
**ಭವಿಷ್ಯಜ್ಜಾನತಾ ಪೂರ್ವಂ ಮಯಾ ಗೋಭಿರ್ವಿವರ್ಧಿತಾ ॥ 7**

**ಮಾರಿಷಾ ನಾಮ ನಾಮ್ನೈಷಾ ವೃಕ್ಷಾಣಾಮಿತಿ ನಿರ್ಮಿತಾ ।**
**ಭಾರ್ಯಾ ವೋಽಸ್ತು ಮಹಾಭಾಗಾ ಧ್ರುವಂ ವಂಶವಿವರ್ಧಿನೀ ॥**

**ಯುಷ್ಮಾಕಂ ತೇಜಸೋಽರ್ಧೇನ ಮಮ ಚಾರ್ಧೇನ ತೇಜಸಃ ।**
**ಅಸ್ಯಾಮುತ್ಪತ್ಸ್ಯತೇ ವಿದ್ವಾನ್ ದಕ್ಷೋ ನಾಮ ಪ್ರಜಾಪತಿಃ ॥ 9**

---

(2-3). ವಾಯುವು ವೃಕ್ಷಗಳನ್ನು ಉರುಳಿಸಿ ಒಣಗಿಸಿತು. ಅಗ್ನಿ ಅವುಗಳನ್ನು ಸುಟ್ಟುಹಾಕಿತು. ಹೀಗೆ ಘೋರವಾದ ವೃಕ್ಷ ನಾಶವಾಯಿತು. ಆ ಪ್ರಕಾರ ದಲ್ಲಿ ವೃಕ್ಷನಾಶವಾಗಿ ಕೆಲವೇ ಮರಗಳು ಉಳಿದಿರಲಾಗಿ, ಓಷಧಿರಾಜ ನಾದ ಸೋಮನು ಬಂದು ಆ ಪ್ರಜಾಪತಿಗಳನ್ನು ಕುರಿತು ಇಂತೆಂದನು (4-5). "ಎಲೈ ರಾಜರೆ, ಕೋಪವನ್ನು ನಿಯಂತ್ರಿಸಿರಿ. ನನ್ನ ಮಾತನ್ನು ಕೇಳಿರಿ. ವೃಕ್ಷಗಳಿಗೂ ನಿಮಗೂ ನಾನು ಸಂಧಾನವನ್ನೇರ್ಪಡಿಸುತ್ತೇನೆ. (ಬಳಿಯಲ್ಲಿದ್ದ ಕನ್ಯೆಯನ್ನು ತೋರಿಸಿ) ಇವಳು ವೃಕ್ಷಗಳಿಂದ ಉತ್ಪನ್ನಳಾದ ಕನ್ಯಾರತ್ನ. ಮುಂದಾಗುವುದನ್ನು ತಿಳಿದ ನಾನು ಈ ಸುಂದರಿಯನ್ನು ನನ್ನ (ಅಮೃತಮಯ) ಕಿರಣಗಳಿಂದ ಸಂರಕ್ಷಿಸಿದ್ದೇನೆ (6-7). ವೃಕ್ಷಗಳಿಂದ ಉತ್ಪನ್ನಳಾದ ಇವಳ ಹೆಸರು ಮಾರಿಷಾ. ಈ ಮಹಾಭಾಗೆಯು ನಿಮಗೆ ಪತ್ನಿಯಾಗಲಿ. ನಿಶ್ಚಯವಾಗಿಯೂ ಇವಳು ನಿಮ್ಮ ವಂಶವನ್ನು ಬೆಳಸುವವಳು. ನಿಮ್ಮ ಅರ್ಧ ತೇಜಸ್ಸು ಮತ್ತು ನನ್ನ ಅರ್ಧ ತೇಜಸ್ಸು—ಇವು ಗಳಿಂದ ಈ ಮಾರಿಷೆಯಲ್ಲಿ ವಿದ್ವಾಂಸನಾದ ದಕ್ಷನೆಂಬ ಪ್ರಜಾಪತಿಯು ಹುಟ್ಟುವನು (8-9). ನನ್ನ ಮತ್ತು ನಿಮ್ಮ ತೇಜೋಭಾಗಗಳಿಂದ ಕೂಡಿದ

**ಮಮ ಚಾಂಶೇನ ಸಂಯುಕ್ತೋ ಯುಷ್ಮತ್ತೇಜೋಮಯೇನ ವೈ।**
**ತೇಜಸಾಗ್ನಿಸಮೋ ಭೂಯಃ ಪ್ರಜಾಃ ಸಂವರ್ಧಯಿಷ್ಯತಿ॥ 10**

**ಕಂಡುರ್ನಾಮ ಮುನಿಃ ಪೂರ್ವಮಾಸೀದ್ವೇದವಿದಾಂ ವರಃ।**
**ಸುರಮ್ಯೇ ಗೋಮತೀತೀರೇ ಸ ತೇಪೇ ಪರಮಂ ತಪಃ॥ 11**

**ತತ್ಕ್ಷೋಭಾಯ ಸುರೇಂದ್ರೇಣ ಪ್ರಮ್ಲೋಚಾಖ್ಯಾ ವರಾಪ್ಸರಾಃ।**
**ಪ್ರಯುಕ್ತಾ ಕ್ಷೋಭಯಾಮಾಸ ತಮೃಷಿಂ ಸಾ ಶುಚಿಸ್ಮಿತಾ॥ 12**

**ಕ್ಷೋಭಿತಃ ಸ ತಯಾ ಸಾರ್ಧಂ ವರ್ಷಾಣಾಮಧಿಕಂ ಶತಮ್।**
**ಅತಿಷ್ಠನ್ಮಂದರದ್ರೋಣ್ಯಾಂ ವಿಷಯಾಸಕ್ತಮಾನಸಃ॥ 13**

**ತಂ ಸಾ ಪ್ರಾಹ ಮಹಾಭಾಗ ಗಂತುಮಿಚ್ಛಾಮ್ಯಹಂ ದಿವಮ್।**
**ಪ್ರಸಾದಸುಮುಖೋ ಬ್ರಹ್ಮನ್ನನುಜ್ಞಾಂ ದಾತುಮರ್ಹಸಿ॥ 14**

**ತಯೈವಮುಕ್ತಃ ಸ ಮುನಿಸ್ತಸ್ಯಾಮಾಸಕ್ತಮಾನಸಃ।**
**ದಿನಾನಿ ಕತಿಚಿದ್ಭದ್ರೇ ಸ್ಥೀಯತಾಮಿತ್ಯಭಾಷತ॥ 15**

---

ಆತನು ಅಗ್ನಿಸಮಾನ ತೇಜಸ್ವಿಯಾಗಿ ಪ್ರಜಾಸಂತತಿಯನ್ನು ವಿಶೇಷವಾಗಿ ಬೆಳಸುವನು (10). ಹಿಂದೆ ಕಂಡು ಎಂಬ ಮುನಿಯೊಬ್ಬನಿದ್ದನು. ಅವನು ವೇದವಿದರಲ್ಲಿ ಅಗ್ರಗಣ್ಯ. ರಮ್ಯವಾದ ಗೋಮತೀ ತೀರದಲ್ಲಿ ಆತನು ಕಠೋರವಾದ ತಪಸ್ಸಿನಲ್ಲಿ ತೊಡಗಿದ್ದನು. ಆ ತಪಸ್ಸನ್ನು ಕೆಡಿಸಬೇಕೆಂದು ದೇವೇಂದ್ರನು ಪ್ರಮ್ಲೋಚೆಯೆಂಬ ಸುಂದರಿಯಾದ ಅಪ್ಸರೆಯನ್ನು ಕಳಿಸಿದನು. ಆ ಶುಚಿಸ್ಮಿತೆಯು ಕಂಡುಮುನಿಯನ್ನು ಕ್ಷೋಭೆಗೊಳಿಸಿದಳು (11-12). ಕ್ಷೋಭೆಗೊಂಡ ಕಂಡುಮುನಿಯು ವಿಷಯಸುಖದಲ್ಲಿ ಆಸಕ್ತನಾಗಿ, ಮಂದರಾಚಲದ ಒಂದು ಕಂದರದಲ್ಲಿ ಆ ಅಪ್ಸರೆಯೊಡನಿದ್ದನು. ನೂರು ವರ್ಷಗಳಿಗಿಂತಲೂ ಹೆಚ್ಚಾದ ಕಾಲ ಕಳೆಯಿತು (13). ಒಂದು ದಿನ ಪ್ರಮ್ಲೋಚೆಯು ಕಂಡುವನ್ನು ಕುರಿತು "ಓ ಮಹಾತ್ಮ-ಬ್ರಾಹ್ಮಣ, ನಾನು ಸ್ವರ್ಗಕ್ಕೆ ಹಿಂದಿರುಗಲು ಬಯಸುತ್ತೇನೆ. ನೀನು ಪ್ರಸನ್ನನಾಗಿ ನನಗೆ ಅನುಮತಿಯನ್ನು ಕೊಡಬೇಕು" ಎಂದಳು (14). ಹೀಗೆನ್ನಲು ಮುನಿಯು ಅವಳಲ್ಲಿ ಆಸಕ್ತಚಿತ್ತನಾಗಿ "ಭದ್ರೆ, ಇನ್ನೂ ಕೆಲವು ದಿನಗಳವರೆಗೆ ಇರು"

**ಏವಮುಕ್ತಾ ತತಸ್ತೇನ ಸಾಗ್ರಂ ವರ್ಷಶತಂ ಪುನಃ।**
**ಬುಭುಜೇ ವಿಷಯಾಂಸ್ತನ್ವೀ ತೇನ ಸಾಕಂ ಮಹಾತ್ಮನಾ॥ 16**

**ಅನುಜ್ಞಾಂ ದೇಹಿ ಭಗವನ್ ವ್ರಜಾಮಿ ತ್ರಿದಶಾಲಯಮ್।**
**ಉಕ್ತಸ್ತಥೇತಿ ಸ ಪುನಃ ಸ್ಥೀಯತಾಮಿತ್ಯಭಾಷತ॥ 17**

**ಪುನರ್ಗತೇ ವರ್ಷಶತೇ ಸಾಧಿಕೇ ಸಾ ಶುಭಾನನಾ।**
**ಯಾಮೀತ್ಯಾಹ ದಿವಂ ಬ್ರಹ್ಮನ್ ಪ್ರಣಯಸ್ಮಿತಶೋಭನಮ್॥ 18**

**ಉಕ್ತಸ್ತಯ್ಯೈವಂ ಸ ಮುನಿರುಪಗುಹ್ಯಾಯತೇಕ್ಷಣಾಮ್।**
**ಇಹಾಸ್ಯತಾಂ ಕ್ಷಣಂ ಸುಭ್ರು ಚಿರಕಾಲಂ ಗಮಿಷ್ಯಸಿ॥ 19**

**ಸಾ ಕ್ರೀಡಮಾನಾ ಸುಶ್ರೋಣೀ ಸಹ ತೇನರ್ಷಿಣಾ ಪುನಃ।**
**ಶತದ್ವಯಂ ಕಿಂಚಿದೂನಂ ವರ್ಷಾಣಾಮನ್ವತಿಷ್ಠತ॥ 20**

**ಗಮನಾಯ ಮಹಾಭಾಗ ದೇವರಾಜನಿವೇಶನಮ್।**
**ಪ್ರೋಕ್ತಃ ಪ್ರೋಕ್ತಸ್ತಯಾ ತನ್ವ್ಯಾ ಸ್ಥೀಯತಾಮಿತ್ಯಭಾಷತ॥ 21**

---

ಎಂದನು. ಹೀಗೆ ಹೇಳಿದ್ದರಿಂದ ಆ ಸುಂದರಿಯು ಆ ಮಹಾತ್ಮನೊಡನೆ ವಿಷಯಸುಖವನ್ನನುಭವಿಸುತ್ತ ಮತ್ತೆ ನೂರು ವರ್ಷಗಳಿಗಿಂತಲೂ ಹೆಚ್ಚಾಗಿ ಅಲ್ಲಿದ್ದಳು (15-16). ಅನಂತರ ಪ್ರಮ್ಲೋಚೆಯು "ಭಗವನ್, ಅನುಜ್ಞೆಯನ್ನು ನೀಡು. ದೇವಲೋಕಕ್ಕೆ ಹೋಗುವೆನು" ಎನ್ನಲಾಗಿ ಮತ್ತೆ ಆತನು 'ಇರು' ಎಂದೇ ಹೇಳಿದನು. ಪುನಃ ನೂರಾರು ವರ್ಷಗಳು ಕಳೆಯಲಾಗಿ ಆ ಸುಮುಖಿಯು "ಇನ್ನು ದೇವಲೋಕಕ್ಕೆ ಹೋಗುವೆನು" ಎಂದು ಪ್ರಣಯದಿಂದ ಮುಗುಳ್ನಗೆ ಬೀರುತ್ತ ನುಡಿದಳು (17-18). ಹೀಗೆ ನುಡಿಯಲಾಗಿ ಮುನಿಯು ಆ ವಿಶಾಲಾಕ್ಷಿಯನ್ನು ಅಪ್ಪಿಕೊಂಡು "ಸುಭ್ರು, ಕ್ಷಣಕಾಲ ಇರು. ಹೋದರೆ ಬಹಳ ದಿನ ಹೋಗಿಯೇ ಬಿಡುತ್ತೀಯೆ!" ಎಂದನು. ತರುವಾಯ ಆ ಸುಶ್ರೋಣಿಯು ಋಷಿಯೊಡನೆ ಕ್ರೀಡಿಸುತ್ತ ಮತ್ತೆ ಇನ್ನೂರು ವರ್ಷಗಳಿಗಿಂತ ಸ್ವಲ್ಪ ಕಡಿಮೆಯಾಗಿ ಆತನೊಡನಿದ್ದಳು (19-20). ಮೈತ್ರೇಯ, ದೇವೇಂದ್ರನಿದ್ದ ಸ್ಥಳಕ್ಕೆ ಹೋಗಬೇಕೆಂದು ಆ ಸುಂದರಿಯು ಪುನಃ ಪುನಃ ಹೇಳಿದರೂ ಆ ಮುನಿಯು ಇನ್ನೂ ಇರು

**ತಸ್ಯ ಶಾಪಭಯಾದ್ಭೀತಾ ದಾಕ್ಷಿಣ್ಯೇನ ಚ ದಕ್ಷಿಣಾ।**
**ಪ್ರೋಕ್ತಾ ಪ್ರಣಯಭಂಗಾರ್ತಿವೇದಿನೀ ನ ಜಹೌ ಮುನಿಮ್॥ 22**

**ತಯಾ ಚ ರಮತಸ್ತಸ್ಯ ಪರಮರ್ಷೇರಹರ್ನಿಶಮ್।**
**ನವಂ ನವಮಭೂತ್ ಪ್ರೇಮ ಮನ್ಮಥಾವಿಷ್ಟಚೇತಸಃ॥ 23**

**ಏಕದಾ ತು ತ್ವರಾಯುಕ್ತೋ ನಿಶ್ಚಕ್ರಾಮೋಟಜಾನ್ಮುನಿಃ।**
**ನಿಷ್ಕ್ರಾಮಂತಂ ಚ ಕುತ್ರೇತಿ ಗಮ್ಯತೇ ಪ್ರಾಹ ಸಾ ಶುಭಾ॥ 24**

**ಇತ್ಯುಕ್ತಃ ಸ ತಯಾ ಪ್ರಾಹ ಪರಿವೃತ್ತಮಹಃ ಶುಭೇ।**
**ಸಂಧ್ಯೋಪಾಸ್ತಿಂ ಕರಿಷ್ಯಾಮಿ ಕ್ರಿಯಾಲೋಪೋಽನ್ಯಥಾ ಭವೇತ್॥**

**ತತಃ ಪ್ರಹಸ್ಯ ಸುದತೀ ತಂ ಸಾ ಪ್ರಾಹ ಮಹಾಮುನಿಮ್।**
**ಕಿಮದ್ಯ ಸರ್ವಧರ್ಮಜ್ಞ ಪರಿವೃತ್ತಮಹಸ್ತವ॥ 26**

---

ಎಂದೇ ಹೇಳುತ್ತಿದ್ದನು. ಪ್ರಣಯಭಂಗದಿಂದಾಗುವ ವೇದನೆಯನ್ನು ಬಲ್ಲ ದಕ್ಷಿಣಾ*ನಾಯಿಕೆಯಾದ ಪ್ರಮ್ಲೋಚೆಯು ತನ್ನ ದಾಕ್ಷಿಣ್ಯಸ್ವಭಾವದಿಂದಲೂ ಋಷಿಯು ಶಾಪವಿತ್ತಾನೆಂದು ಭೀತಳಾಗಿಯೂ ಆತನ್ನು ಬಿಟ್ಟು ಹೋಗಲಿಲ್ಲ (21-22). ಆ ಮಹರ್ಷಿಯು ಆಕೆಯೊಡನೆ ರಮಿಸುತ್ತ ಮನ್ಮಥಾವಿಷ್ಟಚಿತ್ತ ನಾಗಿರಲು, ನಿತ್ಯನೂತನವಾಗಿ ಪ್ರೇಮವು ವರ್ಧಿಸುತ್ತಿತ್ತು. ಒಂದು ದಿನ ಆ ಮುನಿಯು ತ್ವರಾಮುಕ್ತನಾಗಿ ಆಶ್ರಮದಿಂದ ಹೊರಟನು. ಹಾಗೆ ಹೊರಡು ತ್ತಿದ್ದ ಅವನನ್ನು ನೋಡಿ ಆ ಶುಭಾಂಗಿಯು "ಎಲ್ಲಿಗೆ?" ಎಂದು ಕೇಳಿದಳು (23-24). ಆದಕ್ಕೆ ಮುನಿಯು "ಶೋಭನೆ, ಹಗಲು ಕಳೆಯಿತು. ಸಂಧ್ಯಾ ವಂದನೆಯನ್ನು ಮಾಡುವೆನು. ಇಲ್ಲದಿದ್ದರೆ ಕ್ರಿಯಾಲೋಪವಾದೀತು" ಎಂದನು. ಆಗ ಆ ಸುಂದರಿಯು ಗಟ್ಟಿಯಾಗಿ ನಕ್ಕು ಆ ಮಹರ್ಷಿಯನ್ನು

---

* ದಕ್ಷಿಣಾನಾಯಿಕೆಯ ಲಕ್ಷಣ ಇದು—

ಯಾ ಗೌರವಂ ಭಯಂ ಪ್ರೇಮಸದ್ಭಾವಂ ಪೂರ್ವನಾಯಕೇ।
ನ ಮುಂಚತ್ಯನ್ಯಸಕ್ತಾಪಿ ಸಾ ಜ್ಞೇಯಾ ದಕ್ಷಿಣಾ ಬುಧೈಃ॥

"ಯಾವಳು ಅನ್ಯಾಸಕ್ತಳಾಗಿದ್ದರೂ ಮೊದಲನೆಯವನಲ್ಲಿ ಗೌರವ, ಭಯ, ಪ್ರೇಮ, ಸೌಜನ್ಯಗಳನ್ನು ತ್ಯಜಿಸುವುದಿಲ್ಲವೋ—ಅವಳು ದಕ್ಷಿಣಾನಾಯಿಕೆಯೆನಿಸುತ್ತಾಳೆ".

**ಬಹೂನಾಂ ವಿಪ್ರ ವರ್ಷಾಣಾಂ ಪರಿವೃತ್ತಮಹಸ್ತವ।**
**ಗತಮೇತನ್ನ ಕುರುತೇ ವಿಸ್ಮಯಂ ಕಸ್ಯ ಕಥ್ಯತಾಮ್॥ 27**

*ಮುನಿರುವಾಚ:*

**ಪ್ರಾತಸ್ತ್ವಮಾಗತಾ ಭದ್ರೇ ನದೀತೀರಮಿದಂ ಶುಭಮ್।**
**ಮಯಾ ದೃಷ್ಟಾಸಿ ತನ್ವಂಗಿ ಪ್ರವಿಷ್ಟಾಸಿ ಮಮಾಶ್ರಮಮ್॥ 28**

**ಇಯಂ ಚ ವರ್ತತೇ ಸಂಧ್ಯಾ ಪರಿಣಾಮಮಹರ್ಗತಮ್।**
**ಉಪಹಾಸಃ ಕಿಮರ್ಥೋಽಯಂ ಸದ್ಭಾವಃ ಕಥ್ಯತಾಂ ಮಮ॥ 29**

*ಪ್ರಮ್ಲೋಚೋವಾಚ:*

**ಪ್ರತ್ಯೂಷಸ್ಯಾಗತಾ ಬ್ರಹ್ಮನ್ ಸತ್ಯಮೇತನ್ನ ತನ್ಮೃಷಾ।**
**ನನ್ವಸ್ಯ ತಸ್ಯ ಕಾಲಸ್ಯ ಗತಾನ್ಯಬ್ದಶತಾನಿ ತೇ॥ 30**

*ಸೋಮ ಉವಾಚ:*

**ತತಸ್ಸಸಾಧ್ವಸೋ ವಿಪ್ರಸ್ತಾಂ ಪಪ್ರಚ್ಛಾಯತೇಕ್ಷಣಾಮ್।**
**ಕಥ್ಯತಾಂ ಭೀರು ಕಃ ಕಾಲಸ್ತ್ವಯಾ ಮೇ ರಮತಃ ಸಹ॥ 31**

---

ಕುರಿತು "ಹೇ ಸರ್ವಧರ್ಮಜ್ಞ, ನಿನಗೆ ಈಗ ಹಗಲು ಕಳೆಯಿತೆ? ಎಷ್ಟೋ ವರ್ಷಗಳಿಂದ ಎಷ್ಟೋ ಹಗಲು ಕಳೆದುಹೋಗಿದೆ! ಇದು ಯಾರಿಗೆ ವಿಸ್ಮಯವನ್ನು ಉಂಟುಮಾಡದೆ ಇದ್ದೀತು, ಹೇಳು!" ಎಂದಳು (25-27). ಕಂಡುಮುನಿಯು "ಭದ್ರೆ, ನೀನು ಇಂದು ಪ್ರಾತಃಕಾಲದಲ್ಲಿ ಪವಿತ್ರವಾದ ಈ ನದೀತೀರಕ್ಕೆ ಬಂದೆ. ನಿನ್ನನ್ನು ನಾನು ನೋಡಿದೆ. ಆಮೇಲೆ, ತನ್ವಂಗಿ, ನನ್ನ ಆಶ್ರಮದೊಳಗೆ ಬಂದಿದ್ದೀಯೆ. ಈಗ ಹಗಲು ಕಳೆದು ಸಂಧ್ಯಾಕಾಲ ಬಂದಿತು. ಏಕೆ ಹಾಸ್ಯಮಾಡುತ್ತೀಯೆ? ಸತ್ಯವನ್ನು ಹೇಳು" ಎಂದು ನುಡಿದನು (28-29). ಪ್ರಮ್ಲೋಚೆಯು "ಬ್ರಾಹ್ಮಣ, ನಾನು ಪ್ರಾತಃಕಾಲ ದಲ್ಲಿ ಬಂದದ್ದು ಹೌದು. ಆದರೆ ಆ ಕಾಲದಿಂದ ಇಲ್ಲಿಯವರೆಗೆ ಎಷ್ಟೋ ನೂರು ವರ್ಷಗಳು ಸಂದುಹೋದವು!" ಎಂದಳು. ಆಗ ಭೀತನಾದ ಆ ವಿಪ್ರನು "ಭೀರು, ನಿನ್ನೊಡನೆ ರಮಿಸುತ್ತ ನಿಜವಾಗಿ ಎಷ್ಟು ಕಾಲ ಸಂದು

*ಪ್ರಮ್ಲೋಚೋವಾಚ:*

**ಸಪ್ತೋತ್ತರಾಣ್ಯತೀತಾನಿ ನವವರ್ಷಶತಾನಿ ತೇ।**
**ಮಾಸಾಶ್ಚ ಷಟ್‌ತಥೈವಾನ್ಯತ್ಸಮತೀತಂ ದಿನತ್ರಯಮ್॥** 32

*ಋಷಿರುವಾಚ:*

**ಸತ್ಯಂ ಭೀರು ವದಸ್ಯೇತತ್ ಪರಿಹಾಸೋಽಥ ವಾ ಶುಭೇ।**
**ದಿನಮೇಕಮಹಂ ಮನ್ಯೇ ತ್ವಯಾ ಸಾರ್ಧಮಿಹಾಸಿತಮ್॥** 33

*ಪ್ರಮ್ಲೋಚೋವಾಚ:*

**ವದಿಷ್ಯಾಮ್ಯನೃತಂ ಬ್ರಹ್ಮನ್ ಕಥಮತ್ರ ತವಾಂತಿಕೇ।**
**ವಿಶೇಷೇಣಾದ್ಯ ಭವತಾ ಪೃಷ್ಟಾ ಮಾರ್ಗಾನುವರ್ತಿನೀ॥** 34

*ಸೋಮ ಉವಾಚ:*

**ನಿಶಮ್ಯ ತದ್ವಚಃ ಸತ್ಯಂ ಸ ಮುನಿರ್ನೃಪನಂದನಾಃ।**
**ಧಿಗ್‌ಧಿಙ್‌ಮಾಮಿತ್ಯತೀವೇತ್ಥಂ ನಿನಿಂದಾತ್ಮಾನಮಾತ್ಮನಾ॥** 35

---

ಹೋಯಿತು, ಹೇಳು" ಎಂದು ಕೇಳಿದನು (30-31). ಪ್ರಮ್ಲೋಚೆಯು "ಇಲ್ಲಿಯವರೆಗೆ ಸರಿಯಾಗಿ ಒಂಭೈನೂರು ಏಳು ವರ್ಷ, ಆರು ತಿಂಗಳು, ಮೂರು ದಿನ ಕಳೆದಿದೆ!" ಎಂದಳು. ಆಗ ಋಷಿಯು "ಶುಭಾಂಗಿ, ಸತ್ಯವನ್ನು ಹೇಳುತ್ತಿದ್ದೀಯೋ ಅಥವಾ ಹಾಸ್ಯಮಾಡುತ್ತಿದ್ದೀಯೋ? ನಿನ್ನೊಡನೆ ನಾನು ಒಂದು ದಿನ ಮಾತ್ರ ಇದ್ದೆನೆಂದು ತೋರುತ್ತದೆಯಲ್ಲ!" ಎಂದು ನುಡಿಯಲು, ಪ್ರಮ್ಲೋಚೆಯು "ಬ್ರಾಹ್ಮಣ, ನಿನ್ನೆದುರಿಗೆ ನಾನು ಹೇಗೆ ತಾನೇ ಸುಳ್ಳು ಹೇಳಿಯೇನು? ವಿಶೇಷವಾಗಿ ನೀನು ಧರ್ಮಮಾರ್ಗದಲ್ಲಿ ತೊಡಗುತ್ತಿರುವಾಗ ಸುಳ್ಳು ಹೇಳುತ್ತೇನೆಯೆ?" ಎಂದು ಹೇಳಿದಳು (32-34). ಹೇ ರಾಜಪುತ್ರರಾದ ಪ್ರಚೇತಸರೇ, ಮುನಿಯು ಅವಳ ಸತ್ಯವಾದ ನುಡಿಯನ್ನು ಕೇಳಿ 'ಅಯ್ಯೋ! ನನಗೆ ಧಿಕ್ಕಾರ! ಧಿಕ್ಕಾರ!' ಎಂದು ತನ್ನನ್ನು ತಾನೇ ಹಳಿದುಕೊಂಡನು (35). "ನನ್ನ ತಪಶ್ಚರ್ಯೆಗಳೆಲ್ಲವೂ

*ಮುನಿರುವಾಚ:*

**ತಪಾಂಸಿ ಮಮ ನಷ್ಟಾನಿ ಹತಂ ಬ್ರಹ್ಮವಿದಾಂ ಧನಮ್।**
**ಹತೋ ವಿವೇಕಃ ಕೇನಾಪಿ ಯೋಷಿನ್ಮೋಹಾಯ ನಿರ್ಮಿತಾ॥ 36**

**ಊರ್ಮಿಷಟ್ಕಾತಿಗಂ ಬ್ರಹ್ಮ ಜ್ಞೇಯಮಾತ್ಮಜಯೇನ ಮೇ।**
**ಮತಿರೇಷಾ ಹೃತಾ ಯೇನ ಧಿಕ್ ತಂ ಕಾಮಂ ಮಹಾಗ್ರಹಮ್॥**

**ವ್ರತಾನಿ ವೇದವೇದ್ಯಾಪ್ತಿಕಾರಣಾನ್ಯಖಿಲಾನಿ ಚ।**
**ನರಕಗ್ರಾಮಮಾರ್ಗೇಣ ಸಂಗೇನಾಪಹೃತಾನಿ ಮೇ॥ 38**

**ವಿನಿಂದ್ಯೇತ್ಥಂ ಸ ಧರ್ಮಜ್ಞಃ ಸ್ವಯಮಾತ್ಮಾನಮಾತ್ಮನಾ।**
**ತಾಮಪ್ಸರಸಮಾಸೀನಾಮಿದಂ ವಚನಮಬ್ರವೀತ್॥ 39**

**ಗಚ್ಛ ಪಾಪೇ ಯಥಾಕಾಮಂ ಯತ್ಕಾರ್ಯಂ ತತ್ಕೃತಂ ತ್ವಯಾ।**
**ದೇವರಾಜಸ್ಯ ಮತ್ಕ್ಷೋಭಂ ಕುರ್ವಂತ್ಯಾ ಭಾವಚೇಷ್ಟಿತೈಃ॥ 40**

---

ಹಾಳಾದವು! ಬ್ರಹ್ಮವಿದರ ಧನ ಲೂಟಿಯಾಯಿತು! ವಿವೇಕ ಸತ್ತು ಹೋಯಿತು! ನನ್ನನ್ನು ಮೋಹಗೊಳಿಸುವುದಕ್ಕಾಗಿಯೇ ಯಾವನೋ ಈ ಸ್ತ್ರೀಯನ್ನು ನಿರ್ಮಿಸಿದ್ದಾನೆ! (36). ನಾನು ಮನಸ್ಸನ್ನು ನಿಗ್ರಹಿಸಿ ಆರು* ಊರ್ಮಿಗಳ ಆಚೆಗಿರುವ ಪರಬ್ರಹ್ಮವನ್ನು ಅರಿಯಬೇಕೆಂದಿದ್ದೆ. ನನ್ನ ಬುದ್ಧಿಯನ್ನು ಕೆಡಿಸಿದವನು ಕಾಮನೆಂಬ ಮಹಾಗ್ರಹ! ಅವನಿಗೆ ಧಿಕ್ಕಾರ! (37). ನರಕರಾಶಿಗೆ ಮಾರ್ಗವಾದ ಈ ಸ್ತ್ರೀಸಂಗದಿಂದ, ವೇದವೇದ್ಯವಾದ ಪರಬ್ರಹ್ಮಪ್ರಾಪ್ತಿಗೆ ಸಾಧನಗಳಾದ ನನ್ನ ವ್ರತಗಳೆಲ್ಲವೂ ಹಾಳಾದವು!" ಈ ಪ್ರಕಾರವಾಗಿ ಆ ಧರ್ಮಜ್ಞನು ತನ್ನನ್ನು ತಾನೇ ನಿಂದಿಸಿಕೊಂಡು, ಅಲ್ಲಿ ಕುಳಿತಿದ್ದ ಅಪ್ಸರೆಯನ್ನು ನೋಡಿ ಹೀಗೆಂದನು (38-39). "ಹೋಗು ಪಾಪಿಷ್ಠೆ! ಮನಸ್ಸು ಬಂದೆಡೆಗೆ ತೊಲಗು! ಏನು ಮಾಡಬೇಕೆಂದಿದ್ದೆಯೋ ಅದನ್ನು ಮಾಡಿ ಮುಗಿಸಿದ್ದೀಯೆ! ನನಗೆ ಕ್ಷೋಭವನ್ನು ಮಾಡಬೇಕೆಂಬ ಇಂದ್ರನ ಕಾರ್ಯವನ್ನು ನಿನ್ನ ವೈಯಾರಗಳಿಂದ ಮಾಡಿಬಿಟ್ಟಿದ್ದೀಯೆ (40).

---

* ಹಸಿವು, ಬಾಯಾರಿಕೆ, ಲೋಭ, ಮೋಹ, ಮುಪ್ಪು, ಮರಣ—ಇವು ಆರು ಊರ್ಮಿಗಳು.

**ನ ತ್ವಾಂ ಕರೋಮ್ಯಹಂ ಭಸ್ಮ ಕ್ರೋಧತೀವ್ರೇಣ ವಹ್ನಿನಾ।**
**ಸತಾಂ ಸಪ್ತಪದಂ ಮೈತ್ರಮುಷಿತೋಽಹಂ ತ್ವಯಾ ಸಹ॥ 41**

**ಅಥವಾ ತವ ಕೋ ದೋಷಃ ಕಿಂ ವಾ ಕುಪ್ಯಾಮ್ಯಹಂ ತವ।**
**ಮಮೈವ ದೋಷೋ ನಿತರಾಂ ಯೇನಾಹಮಜಿತೇಂದ್ರಿಯಃ॥ 42**

**ಯಯಾ ಶಕ್ರಪ್ರಿಯಾರ್ಥಿನ್ಯಾ ಕೃತೋ ಮೇ ತಪಸೋ ವ್ಯಯಃ।**
**ತ್ವಯಾ ಧಿಕ್ತ್ವಾಂ ಮಹಾಮೋಹಮಂಜೂಷಾಂ**
**ಸುಜುಗುಪ್ಸಿತಾಮ್॥ 43**

*ಸೋಮ ಉವಾಚ:*

**ಯಾವದಿತ್ಥಂ ಸ ವಿಪ್ರರ್ಷಿಸ್ತಾಂ ಬ್ರವೀತಿ ಸುಮಧ್ಯಮಾಮ್।**
**ತಾವದ್ಗಲತ್ಸ್ವೇದಜಲಾ ಸಾ ಬಭೂವಾತಿವೇಪಥುಃ॥ 44**

**ಪ್ರವೇಪಮಾನಾಂ ಸತತಂ ಸ್ವಿನ್ನಗಾತ್ರಲತಾಂ ಸತೀಮ್।**
**ಗಚ್ಛ ಗಚ್ಛೇತಿ ಸಕ್ರೋಧಮುವಾಚ ಮುನಿಸತ್ತಮಃ॥ 45**

---

ಕ್ರೋಧಾಗ್ನಿಯಿಂದ ನಿನ್ನನ್ನು ಸುಟ್ಟು ಬೂದಿಮಾಡದೆ ಉಳಿಸುತ್ತೇನೆ. ಏಕೆಂದರೆ, ಸಪ್ತಪದ—ಎಂದರೆ ಏಳು ಹೆಜ್ಜೆ ಜೊತೆಗೆ ಹೋದರೆ ಸಾಕು, ಅದು ಸ್ನೇಹವೆಂದು ಸಜ್ಜನರು ತಿಳಿಯುತ್ತಾರೆ. ನಿನ್ನೊಡನೆ ಇಷ್ಟು ದಿನ ವಾಸಮಾಡಿದ್ದೇನೆ (41). ಅಥವಾ ನಿನ್ನ ತಪ್ಪಾದರೂ ಏನು? ನಿನ್ನ ಮೇಲೆ ಏಕೆ ಸಿಟ್ಟಾಗಲಿ? ಇಂದ್ರಿಯವನ್ನು ಜಯಿಸಲಾರದೆ ಹೋದದ್ದು ನನ್ನದೇ ದೊಡ್ಡ ತಪ್ಪು. ಆದರೆ ದೇವೇಂದ್ರನಿಗೆ ಪ್ರಿಯವನ್ನು ಮಾಡಬೇಕೆಂದು ಬಯಸಿ ಯಾವ ನೀನು ನನ್ನ ತಪಸ್ಸಿನ ವ್ಯಯಮಾಡಿದೆಯೋ ಅಂತಹ ನಿನಗೆ ಧಿಕ್ಕಾರವಿರಲಿ! ಜುಗುಪ್ಸನೀಯವಾದ ಮಹಾಮೋಹದ ಪೆಠಾರಿ (ಪೆಟ್ಟಿಗೆ) ನೀನು!" ಎಂದು ಮೂದಲಿಸಿದನು (42-43). ಈ ಪ್ರಕಾರ ಬ್ರಹ್ಮರ್ಷಿಯು ಹೇಳುತ್ತಿರಲಾಗಿ ಅಪ್ಸರೆಯ ಮೈಯಿಂದ ಬೆವರು ನೀರು ಹರಿಯಿತು. ಅವಳು ಗಡಗಡನೆ ನಡುಗಿದಳು. ಗಾತ್ರದಿಂದ ಬೆವರು ಹರಿದು ನಡುಗುತ್ತಿದ್ದ ಪ್ರಮ್ಲೋಚೆಯನ್ನು ನೋಡಿ ಮುನಿಸತ್ತಮನು ಕೋಪದಿಂದ 'ತೊಲಗು ತೊಲಗು!' ಎಂದು ಅಬ್ಬರಿಸಿದನು (44-45). ಹೀಗೆ

**ಸಾ ತು ನಿರ್ಭರ್ತ್ಸಿತಾ ತೇನ ವಿನಿಷ್ಕ್ರಮ್ಯ ತದಾಶ್ರಮಾತ್।**
**ಆಕಾಶಗಾಮಿನೀ ಸ್ವೇದಂ ಮಮಾರ್ಜ ತರುಪಲ್ಲವೈಃ॥ 46**

**ನಿರ್ಮಾರ್ಜಮಾನಾ ಗಾತ್ರಾಣಿ ಗಲತ್ಸ್ವೇದಜಲಾನಿ ವೈ।**
**ವೃಕ್ಷಾದ್ವೃಕ್ಷಂ ಯಯೌ ಬಾಲಾ ತದಗ್ರಾರುಣಪಲ್ಲವೈಃ॥ 47**

**ಋಷಿಣಾ ಯಸ್ತದಾ ಗರ್ಭಸ್ತಸ್ಯಾ ದೇಹೇ ಸಮಾಹಿತಃ।**
**ನಿರ್ಜಗಾಮ ಸ ರೋಮಾಂಚಸ್ವೇದರೂಪೀ ತದಂಗತಃ॥ 48**

**ತಂ ವೃಕ್ಷಾ ಜಗೃಹುರ್ಗರ್ಭಮೇಕಂ ಚಕ್ರೇ ತು ಮಾರುತಃ।**
**ಮಯಾ ಚಾಪ್ಯಾಯಿತೋ ಗೋಭಿಃ ಸ ತದಾ ವವೃಧೇ ಶನೈಃ॥**

**ವೃಕ್ಷಾಗ್ರಗರ್ಭಸಂಭೂತಾ ಮಾರಿಷಾಖ್ಯಾ ವರಾನನಾ।**
**ತಾಂ ಪ್ರದಾಸ್ಯಂತಿ ವೋ ವೃಕ್ಷಾಃ ಕೋಪ ಏಷ ಪ್ರಶಾಮ್ಯತಾಮ್॥**

**ಕಂಡೋರಪತ್ಯಮೇವಂ ಸಾ ವೃಕ್ಷೇಭ್ಯಶ್ಚ ಸಮುದ್ಗತಾ।**
**ಮಮಾಪತ್ಯಂ ತಥಾ ವಾಯೋಃ ಪ್ರಮ್ಲೋಚಾತನಯಾ ಚ ಸಾ॥ 51**

---

ಗದರಿಸಲ್ಪಟ್ಟ ಅಪ್ಸರೆಯು ಮುನಿಯ ಆಶ್ರಮದಿಂದ ಹೊರಬಂದು ಆಕಾಶವನ್ನಡರಿ ಮರದ ಚಿಗುರೆಲೆಗಳಿಂದ ಬೆವರು ನೀರನ್ನು ಒರಸಿಕೊಂಡಳು. ಆ ಬಾಲೆಯು ಸುರಿಯುತ್ತಿದ್ದ ಬೆವರನ್ನು ಮರಗಳ ಕೆಂಪು ಚಿಗುರೆಲೆಗಳಿಂದ ಒರಸಿಕೊಳ್ಳುತ್ತ ಮರದಿಂದ ಮರಕ್ಕೆ ಚಲಿಸುತ್ತ ಹೋದಳು (46-47). ಅವಳ ದೇಹದಲ್ಲಿ ಋಷಿಯು ಯಾವ ಗರ್ಭವನ್ನಿರಿಸಿದ್ದನೋ ಅದು ಅವಳ ದೇಹದಿಂದ ರೋಮಾಂಚದ ಸ್ವೇದರೂಪದಲ್ಲಿ ಹೊರಬಂದಿತು. ಆ ಗರ್ಭವನ್ನು ವೃಕ್ಷಗಳು ಸ್ವೀಕರಿಸಿದವು. ವಾಯುವು ಅವೆಲ್ಲವನ್ನೂ ಒಂದುಗೂಡಿಸಿದನು. ನಾನು (ಸೋಮ) ಅದನ್ನು ಕಿರಣಗಳಿಂದ ಪೋಷಿಸಲಾಗಿ ಗರ್ಭವು ಮೆಲ್ಲಮೆಲ್ಲಗೆ ಬೆಳೆಯಿತು (48-49). ಆ ಗರ್ಭವೇ ಮಾರಿಷಾ ಎಂಬ ಹೆಸರಿನ ಈ ಸುಂದರಿ. ವೃಕ್ಷಾಗ್ರದಲ್ಲಿ ಸೇರಿದ ಗರ್ಭಾಂಶಗಳಿಂದ ಇವಳು ಹುಟ್ಟಿದಳು. ವೃಕ್ಷಗಳು ಈ ಕನ್ಯೆಯನ್ನು ನಿಮಗೆ ಕೊಡುತ್ತವೆ. ಆದ್ದರಿಂದ ಈ ಕೋಪವು ಶಾಂತವಾಗಲಿ (50). ವಾಸ್ತವದಲ್ಲಿ ಇವಳು ಕಂಡುವಿನ ಮಗಳು. ವೃಕ್ಷಗಳಿಂದ ಉತ್ಪನ್ನಳಾದಳು. ನನಗೂ ಮಗಳು, ವಾಯುವಿಗೂ

**ಸ ಚಾಪಿ ಭಗವಾನ್ ಕಂಡುಃ ಕ್ಷೀಣೇ ತಪಸಿ ಸತ್ತಮಃ।**
**ಪುರುಷೋತ್ತಮಮಾಖ್ಯಾತಂ ವಿಷ್ಣೋರಾಯತನಂ ಯಯೌ॥ 52**

**ತತ್ರೈಕಾಗ್ರಮತಿರ್ಭೂತ್ವಾ ಚಕಾರಾರಾಧನಂ ಹರೇಃ।**
**ಬ್ರಹ್ಮಪಾರಮಯಂ ಕುರ್ವಂಜಪಮೇಕಾಗ್ರಮಾನಸಃ।**
**ಊರ್ಧ್ವಬಾಹುರ್ಮಹಾಯೋಗೀ ಸ್ಥಿತ್ವಾಸೌ ಭೂಪನಂದನಾಃ॥ 53**

*ಪ್ರಚೇತಸ ಊಚುಃ :*

**ಬ್ರಹ್ಮಪಾರಂ ಮುನೇಃ ಶ್ರೋತುಮಿಚ್ಛಾಮಃ ಪರಮಂ ಸ್ತವಮ್।**
**ಜಪತಾ ಕಂಡುನಾ ದೇವೋ ಯೇನಾರಾಧ್ಯತ ಕೇಶವಃ॥ 54**

*ಸೋಮ ಉವಾಚ:*

**ಪಾರಂ ಪರಂ ವಿಷ್ಣುರಪಾರಪಾರಃ**
**ಪರಃ ಪರೇಭ್ಯಃ ಪರಮಾರ್ಥರೂಪೀ।**
**ಸ ಬ್ರಹ್ಮಪಾರಃ ಪರಪಾರಭೂತಃ**
**ಪರಃ ಪರಾಣಾಮಪಿ ಪಾರಪಾರಃ॥ 55**

---

ಮಗಳು. ಪ್ರಮ್ಲೋಚೆಯ ಪುತ್ರಿಯೂ ಹೌದು (51). ಅತ್ತಲಾಗಿ ಭಗವಾನ್ ಕಂಡು ಮುನಿಯು, ತನ್ನ ತಪಸ್ಸು ಈ ರೀತಿ ಕ್ಷೀಣವಾದ ಮೇಲೆ, ಪುರುಷೋತ್ತಮ ಎಂಬ ವಿಷ್ಣುಕ್ಷೇತ್ರಕ್ಕೆ ಹೋದನು. ಅಲ್ಲಿ ಏಕಾಗ್ರಚಿತ್ತದಿಂದ ಶ್ರೀಹರಿಯನ್ನು ಆರಾಧಿಸಿದನು. ಎಲೈ ಪ್ರಚೇತಸರೆ, ಆ ಮಹಾಯೋಗಿಯು ಊರ್ಧ್ವಬಾಹುವಾಗಿ ನಿಂತು ಏಕಾಗ್ರತೆಯಿಂದ 'ಬ್ರಹ್ಮಪಾರ'ವೆಂಬ ಸ್ತೋತ್ರವನ್ನು ಜಪಿಸತೊಡಗಿದನು (52-53). ಆಗ ಪ್ರಚೇತಸರು ಸೋಮನನ್ನು ಕುರಿತು "ಕಂಡು ಮುನಿಯು ಬ್ರಹ್ಮಪಾರವೆಂಬ ಪರಮಸ್ತೋತ್ರವನ್ನು ಜಪಿಸುತ್ತ ಕೇಶವನನ್ನು ಆರಾಧಿಸಿದನಷ್ಟೆ. ಮುನಿಯು ಜಪಿಸುತ್ತಿದ್ದ ಆ ಸ್ತೋತ್ರವನ್ನು ಕೇಳಲು ಇಚ್ಛಿಸುತ್ತೇವೆ" ಎಂದರು (54). ಆಗ ಸೋಮನು ಹೇಳಿದನು "ವಿಷ್ಣುವು ಸಂಸಾರಮಾರ್ಗದ ಅಂತಿಮ ಅವಧಿ. ಆತನ ಪಾರವನ್ನು ಕಾಣುವುದು ಕಠಿಣವಾದದ್ದು. ಸತ್ಯಸ್ವರೂಪನಾದ ಆತನು ಆಕಾಶಾದಿ ಪರವಸ್ತುಗಳಿಗಿಂತ ಪರದಲ್ಲಿದ್ದಾನೆ. ಬ್ರಹ್ಮಜ್ಞಾನದ ಸಾರ.

**ಸ ಕಾರಣಂ ಕಾರಣತಸ್ತತೋಽಪಿ**
**ತಸ್ಯಾಪಿ ಹೇತುಃ ಪರಹೇತುಹೇತುಃ।**
**ಕಾರ್ಯೇಷು ಚೈವಂ ಸಹ ಕರ್ಮಕರ್ತೃ-**
**ರೂಪೈರಶೇಷೈರವತೀಹ ಸರ್ವಮ್॥ 56**

**ಬ್ರಹ್ಮ ಪ್ರಭುರ್ಬ್ರಹ್ಮ ಸ ಸರ್ವಭೂತೋ।**
**ಬ್ರಹ್ಮ ಪ್ರಜಾನಾಂ ಪತಿರಚ್ಯುತೋಽಸೌ।**
**ಬ್ರಹ್ಮಾವ್ಯಯಂ ನಿತ್ಯಮಜಂ ಸ ವಿಷ್ಣು-**
**ರಪಕ್ಷಯಾದ್ಯೈರಖಿಲೈರಸಂಗಿ॥ 57**

**ಬ್ರಹ್ಮಾಕ್ಷರಮಜಂ ನಿತ್ಯಂ ಯಥಾಸೌ ಪುರುಷೋತ್ತಮಃ।**
**ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ॥**

---

ತಪೋನಿಷ್ಠರಾದ ಪರಸ್ವರೂಪರಿಗೆ ಪ್ರಾಪ್ಯನಾದವನು. ಇಂದ್ರಿಯ ಗೋಚರವಸ್ತುಗಳಿಗಿಂತ ಪರದಲ್ಲಿರತಕ್ಕವನು. ಪಾರವನ್ನು ಹುಡುಕತಕ್ಕವರಿಗೆ ಪಾರವನ್ನು ಕಾಣಿಸತಕ್ಕವನು (55). ಸೃಷ್ಟಿಗೆ ಕಾರಣವಾದ ಪಂಚಭೂತಗಳೂ ವಿಷ್ಣುವೇ. ಅವುಗಳಿಗೆ ಕಾರಣವಾದ ಪಂಚತನ್ಮಾತ್ರೆಗಳೂ ಆತನೇ. ಅವುಗಳಿಗೆ ಕಾರಣವಾದ ಅಹಂಕಾರ ತತ್ತ್ವವೂ ವಿಷ್ಣು. ಅದಕ್ಕೆ ಕಾರಣವಾದ ಮಹತ್ತತ್ತ್ವವೂ ಅವನೇ. ಮಹತ್ತತ್ತ್ವಕ್ಕೆ ಕಾರಣವಾದ ಪ್ರಧಾನವೂ, ಅದಕ್ಕೆ ಕಾರಣವಾದ ಪರಮಪುರುಷನೂ ವಿಷ್ಣು. ಹೀಗೆ ಸಮಸ್ತ ಕಾರ್ಯವಸ್ತುಗಳಲ್ಲಿ ಕರ್ತೃವೂ ಕರ್ಮವೂ ಆಗಿ ಈ ವಿಶ್ವವನ್ನು ಪಾಲಿಸುತ್ತಿದ್ದಾನೆ (56). ಆತನೇ ಸ್ವಾಮಿಯಾದ ಬ್ರಹ್ಮ. ಆತನೇ ಸಕಲವಸ್ತುರೂಪನಾದ ಬ್ರಹ್ಮ. ಪ್ರಾಣಿಗಳನ್ನು ಪಾಲಿಸುವ ಬ್ರಹ್ಮ ಆತನೇ. ಅವನೇ ಚ್ಯುತಿಯಿಲ್ಲದವನು. ಓಂಕಾರವೆಂಬ ಅಕ್ಷರಬ್ರಹ್ಮ ಅವನು. ಆತನು ನಿತ್ಯ; ಅಜ. ಅಪಕ್ಷಯಾದಿ* ಸಕಲ ಭಾವವಿಕಾರಗಳ ಸ್ಪರ್ಶವಿಲ್ಲದ ಬ್ರಹ್ಮವೇ ವಿಷ್ಣು (57). ಪುರುಷೋತ್ತಮನಾದ ವಿಷ್ಣು ಅಕ್ಷರವೂ ನಿತ್ಯವೂ ಅಜನೂ

---

* ಅಸ್ತಿ, ಜಾಯತೇ, ವರ್ಧತೇ, ವಿಪರಿಣಮತೇ, ಅಪಕ್ಷೀಯತೇ, ನಶ್ಯತಿ— ಇವು ಷಡ್ಭಾವ ವಿಕಾರಗಳು.

**ಏತದ್‌ಬ್ರಹ್ಮಪರಾಖ್ಯಂ ವೈ ಸಂಸ್ತವಂ ಪರಮಂ ಜಪನ್।**
**ಅವಾಪ ಪರಮಾಂ ಸಿದ್ಧಿಂ ಸ ತಮಾರಾಧ್ಯ ಕೇಶವಮ್॥ 59**

**ಇಯಂ ಚ ಮಾರಿಷಾ ಪೂರ್ವಮಾಸೀದ್ಯಾ ತಾಂ ಬ್ರವೀಮಿ ವಃ।**
**ಕಾರ್ಯಗೌರವಮೇತಸ್ಯಾಃ ಕಥನೇ ಫಲದಾಯಿ ವಃ॥ 60**

**ಅಪುತ್ರಾ ಪ್ರಾಗಿಯಂ ವಿಷ್ಣುಂ ಮೃತೇ ಭರ್ತರಿ ಸತ್ತಮಾಃ।**
**ಭೂಪಪತ್ನೀ ಮಹಾಭಾಗಾ ತೋಷಯಾಮಾಸ ಭಕ್ತಿತಃ॥ 61**

**ಆರಾಧಿತಸ್ತಯಾ ವಿಷ್ಣುಃ ಪ್ರಾಹ ಪ್ರತ್ಯಕ್ಷತಾಂ ಗತಃ।**
**ವರಂ ವೃಣೀಷ್ವೇತಿ ಶುಭೇ ಸಾ ಚ ಪ್ರಾಹಾತ್ಮವಾಂಛಿತಮ್॥ 62**

**ಭಗವನ್ ಬಾಲವೈಧವ್ಯಾದ್ವೃಥಾ ಜನ್ಮಾಹಮೀದೃಶೀ।**
**ಮಂದಭಾಗ್ಯಾ ಸಮುದ್ಭೂತಾ ವಿಫಲಾ ಚ ಜಗತ್ಪತೇ॥ 63**

---

ಆದ ಬ್ರಹ್ಮವಾಗಿದ್ದಾನೆ. ಆದ್ದರಿಂದ ನನ್ನಲ್ಲಿರುವ ರಾಗಾದಿ ಸಮಸ್ತ ದೋಷಗಳೂ ಲಯವಾಗಲಿ (58). ಬ್ರಹ್ಮಪರ(-ಪಾರ)ವೆಂಬ ಈ ಪವಿತ್ರ ಮಂತ್ರವನ್ನು ಜಪಿಸುತ್ತ ಆ ಕಂಡುಮುನಿಯು ಕೇಶವನನ್ನು ಆರಾಧಿಸಿ ಪರಮಸಿದ್ಧಿಯನ್ನೈದಿದನು (59). ಎಲೈ ಪ್ರಚೇತಸರೆ, ಈ ಮಾರಿಷೆಯು ಪೂರ್ವಜನ್ಮದಲ್ಲಿ ಏನಾಗಿದ್ದಳೆಂಬುದನ್ನು ನಿಮಗೆ ಹೇಳುವೆನು. ಆದರಿಂದ ನಿಮ್ಮ ಈ ಗುರುತರವಾದ ಕಾರ್ಯವು ಫಲಕಾರಿಯಾಗುತ್ತದೆ (60). ಇವಳು ಪೂರ್ವಜನ್ಮದಲ್ಲಿ ಒಬ್ಬ ರಾಜನ ಪತ್ನಿಯಾಗಿದ್ದಳು. ಮಕ್ಕಳಿಲ್ಲದಿರುವಾಗ ಇವಳ ಪತಿ ಮೃತನಾದನು. ಆಗ ಈ ಪುಣ್ಯಾತ್ಮಳು ಭಕ್ತಿಯಿಂದ ವಿಷ್ಣುವನ್ನು ಆರಾಧಿಸಿ ಸಂತೋಷಪಡಿಸಿದಳು (61). ವಿಷ್ಣುವು ಪ್ರತ್ಯಕ್ಷನಾಗಿ ಇವಳನ್ನು ಕುರಿತು "ಸೌಮ್ಯೆ, ವರವನ್ನು ಕೇಳಿಕೊ" ಎಂದು ಹೇಳಲು, ಇವಳು ತನ್ನ ಅಭಿಲಾಷೆಯನ್ನು ಹೇಳಿಕೊಂಡಳು: "ಹೇ ಭಗವನ್, ನಾನು ಬಾಲವಿಧವೆಯಾದ್ದರಿಂದ ಈ ರೀತಿ ಜನ್ಮ ವ್ಯರ್ಥವಾಯಿತು. ಜಗದೀಶ್ವರ, ಮಂದಭಾಗ್ಯಳಾದ ನಾನು ಪುತ್ರಹೀನೆಯಾಗಿಬಿಟ್ಟೆನು (62-63). ಮುಂದಿನ

**ಭವಂತು ಪತಯಃ ಶ್ಲಾಘ್ಯಾ ಮಮ ಜನ್ಮನಿ ಜನ್ಮನಿ।**
**ತ್ವತ್ಪ್ರಸಾದಾತ್ತಥಾ ಪುತ್ರಃ ಪ್ರಜಾಪತಿಸಮೋಽಸ್ತು ಮೇ॥ 64**

**ಕುಲಂ ಶೀಲಂ ವಯಃ ಸತ್ಯಂ ದಾಕ್ಷಿಣ್ಯಂ ಕ್ಷಿಪ್ರಕಾರಿತಾ।**
**ಅವಿಸಂವಾದಿತಾ ಸತ್ತ್ವಂ ವೃದ್ಧಸೇವಾ ಕೃತಜ್ಞತಾ॥ 65**

**ರೂಪಸಂಪತ್ಸಮಾಯುಕ್ತಾ ಸರ್ವಸ್ಯ ಪ್ರಿಯದರ್ಶನಾ।**
**ಅಯೋನಿಜಾ ಚ ಜಾಯೇಯಂ ತ್ವತ್ಪ್ರಸಾದಾದಧೋಕ್ಷಜ॥ 66**

*ಸೋಮ ಉವಾಚ:*

**ತಯೈವಮುಕ್ತೋ ದೇವೇಶೋ ಹೃಷೀಕೇಶ ಉವಾಚ ತಾಮ್।**
**ಪ್ರಣಾಮನಮ್ರಾಮುತ್ಥಾಪ್ಯ ವರದಃ ಪರಮೇಶ್ವರಃ॥ 67**

*ಶ್ರೀಭಗವಾನುವಾಚ:*

**ಭವಿಷ್ಯಂತಿ ಮಹಾವೀರ್ಯಾ ಏಕಸ್ಮಿನ್ನೇವ ಜನ್ಮನಿ।**
**ಪ್ರಖ್ಯಾತೋದಾರಕರ್ಮಾಣೋ ಭವತ್ಯಾಃ ಪತಯೋ ದಶ॥ 68**

---

ಜನ್ಮಜನ್ಮದಲ್ಲಿಯೂ ನನಗೆ ಪ್ರಶಂಸನೀಯರಾದ ಪತಿಗಳು ದೊರಕಲಿ. ನಿನ್ನ ಅನುಗ್ರಹದಿಂದ ಪ್ರಜಾಪತಿಸಮನಾದ ಪುತ್ರನು ನನಗೆ ಲಭಿಸಲಿ (64). ಕುಲ, ಶೀಲ, ಆಯುಸ್ಸು, ಸತ್ಯ, ದಾಕ್ಷಿಣ್ಯ, ಶೀಘ್ರಕಾರಿತೆ, ಯಾವ ವಿವಾದಕ್ಕೂ ಒಳಗಾಗದಿರುವಿಕೆ, ಸತ್ತ್ವಗುಣ, ವೃದ್ಧಸೇವೆ, ಕೃತಜ್ಞತೆ—ಈ ಎಲ್ಲ ಗುಣಗಳು ನನಗೆ ಪ್ರಾಪ್ತವಾಗಲಿ. ನಿನ್ನ ಪ್ರಸಾದದಿಂದ, ಸ್ವಾಮಿ, ನಾನು ರೂಪಸಂಪತ್ತಿನಿಂದ ಕೂಡಿದವಳೂ ಸರ್ವರಿಗೆ ಪ್ರಿಯದರ್ಶನೆಯೂ ಅಯೋನಿಜೆಯೂ ಆಗಿ ಹುಟ್ಟುವಂತಾಗಲಿ" ಎಂದಳು (65-66). ಹೀಗೆ ಹೇಳಿ ಆ ರಾಜಪತ್ನಿಯು ನಮಸ್ಕರಿಸಲಾಗಿ ಅವಳನ್ನೆತ್ತಿ, ದೇವೇಶ್ವರನೂ ಪರಮೇಶ್ವರನೂ ವರದನೂ ಆದ ವಿಷ್ಣುವು "ಸೌಮ್ಯೆ, ನಿನಗೆ ಒಂದೇ ಜನ್ಮದಲ್ಲಿ ಮಹಾವೀರರೂ ಪ್ರಖ್ಯಾತರೂ ಉದಾರಿಗಳೂ ಆದ ಹತ್ತು ಮಂದಿ ಗಂಡಂದಿರು ದೊರಕುವರು (67-68). ಮಹಾವೀರ್ಯವುಳ್ಳವನೂ ಬಲಪರಾಕ್ರಮಯುಕ್ತನೂ ಪ್ರಜಾಪತಿಗೆ ಇರಬೇಕಾದ ಗುಣಗಳಿಂದ

**ಪುತ್ರಂಚ ಸುಮಹಾವೀರ್ಯಂ ಮಹಾಬಲಪರಾಕ್ರಮಮ್ ।**
**ಪ್ರಜಾಪತಿಗುಣೈರ್ಯುಕ್ತಂ ತ್ವಮವಾಪ್ಸ್ಯಸಿ ಶೋಭನೇ ॥** 69

**ವಂಶಾನಾಂ ತಸ್ಯ ಕರ್ತೃತ್ವಂ ಜಗತ್ಯಸ್ಮಿನ್ ಭವಿಷ್ಯತಿ ।**
**ತ್ರೈಲೋಕ್ಯಮಖಿಲಾ ಸೂತಿಸ್ತಸ್ಯ ಚಾಪೂರಯಿಷ್ಯತಿ ॥** 70

**ತ್ವಂ ಚಾಪ್ಯಯೋನಿಜಾ ಸಾಧ್ವೀ ರೂಪೌದಾರ್ಯಗುಣಾನ್ವಿತಾ ।**
**ಮನಃಪ್ರೀತಿಕರೀ ನೄಣಾಂ ಮತ್ಪ್ರಸಾದಾದ್ಭವಿಷ್ಯಸಿ ॥** 71

**ಇತ್ಯುಕ್ತ್ವಾಂತರ್ದಧೇ ದೇವಸ್ತಾಂ ವಿಶಾಲವಿಲೋಚನಾಮ್ ।**
**ಸಾ ಚೇಯಂ ಮಾರಿಷಾ ಜಾತಾ ಯುಷ್ಮತ್ಪತ್ನೀ ನೃಪಾತ್ಮಜಾಃ ॥** 72

*ಶ್ರೀಪರಾಶರ ಉವಾಚ:*

**ತತಃ ಸೋಮಸ್ಯ ವಚನಾಜ್ಜಗೃಹುಸ್ತೇ ಪ್ರಚೇತಸಃ ।**
**ಸಂಹೃತ್ಯ ಕೋಪಂ ವೃಕ್ಷೇಭ್ಯಃ ಪತ್ನೀಧರ್ಮೇಣ ಮಾರಿಷಾಮ್ ॥** 73

**ದಶಭ್ಯಸ್ತು ಪ್ರಚೇತೋಭ್ಯೋ ಮಾರಿಷಾಯಾಂ ಪ್ರಜಾಪತಿಃ ।**
**ಜಜ್ಞೇ ದಕ್ಷೋ ಮಹಾಭಾಗೋ ಯಃ ಪೂರ್ವಂ**
**ಬ್ರಹ್ಮಣೋಽಭವತ್ ॥** 74

---

ಸಂಯುಕ್ತನೂ ಆದ ಪುತ್ರನನ್ನು ಪಡೆಯುವೆ. ಆ ಪುತ್ರನು ಹಲವಾರು ವಂಶಗಳ ಕರ್ತೃವಾಗುವನು. ಆತನ ಎಲ್ಲ ಸಂತತಿಯೂ ಮೂರು ಲೋಕಗಳನ್ನೂ ತುಂಬುವುದು (69-70). ನೀನೂ ಸಹ ನನ್ನ ಅನುಗ್ರಹದಿಂದ ಅಯೋನಿಜೆಯಾಗಿ ಹುಟ್ಟುವೆ. ಸಾಧ್ವಿಯಾಗಿ, ರೂಪ ಔದಾರ್ಯಾದಿಗುಣಗಳಿಂದ ಸಮನ್ವಿತಳಾಗಿ ಜನರಿಗೆ ಪ್ರಿಯದರ್ಶನೆಯಾಗುವೆ" ಎಂದು ಆ ವಿಶಾಲಾಕ್ಷಿಗೆ ಹೇಳಿ ಸ್ವಾಮಿಯು ಅಂತರ್ಧಾನ ಹೊಂದಿದನು. ಅವಳೇ ಈ ಮಾರಿಷೆಯಾಗಿ ಹುಟ್ಟಿದ್ದಾಳೆ. ಎಲೈ ರಾಜಪುತ್ರರೇ, ಇವಳು ನಿಮ್ಮ ಪತ್ನಿಯಾಗಲಿ" ಎಂದು ಸೋಮನು ಹೇಳಿದನು (71-72). ಮೈತ್ರೇಯ, ಅನಂತರ ಪ್ರಚೇತಸರು ಸೋಮನ ಮಾತಿನಂತೆ ವೃಕ್ಷಗಳಲ್ಲಿ ಕೋಪವನ್ನು ತ್ಯಜಿಸಿ, ಮಾರಿಷೆಯನ್ನು ವಿಧಿಪೂರ್ವಕವಾಗಿ ಪತ್ನಿಯೆಂದು ಸ್ವೀಕರಿಸಿದರು (73). ಹತ್ತು ಮಂದಿ ಪ್ರಚೇತಸರಿಂದ ಮಾರಿಷೆಯಲ್ಲಿ ದಕ್ಷನೆಂಬ

**ಸ ತು ದಕ್ಷೋ ಮಹಾಭಾಗಸ್ಸೃಷ್ಟ್ಯರ್ಥಂ ಸುಮಹಾಮತೇ।**
**ಪುತ್ರಾನುತ್ಪಾದಯಾಮಾಸ ಪ್ರಜಾಸೃಷ್ಟ್ಯರ್ಥಮಾತ್ಮನಃ॥ 75**

**ಅವರಾಂಶ್ಚ ವರಾಂಶ್ಚೈವ ದ್ವಿಪದೋಽಥ ಚತುಷ್ಪದಾನ್।**
**ಆದೇಶಂ ಬ್ರಹ್ಮಣಃ ಕುರ್ವನ್ ಸೃಷ್ಟ್ಯರ್ಥಂ ಸಮುಪಸ್ಥಿತಃ॥ 76**

**ಸ ಸೃಷ್ಟ್ವಾ ಮನಸಾ ದಕ್ಷಃ ಪಶ್ಚಾದಸೃಜತ ಸ್ತ್ರಿಯಃ।**
**ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ॥ 77**

**ಕಾಲಸ್ಯ ನಯನೇ ಯುಕ್ತಾಃ ಸಪ್ತವಿಂಶತಿಮಿಂದವೇ।**
**ತಾಸು ದೇವಾಸ್ತಥಾ ದೈತ್ಯಾ ನಾಗಾ ಗಾವಸ್ತಥಾ ಖಗಾಃ॥ 78**

**ಗಂಧರ್ವಾಪ್ಸರಸಶ್ಚೈವ ದಾನವಾದ್ಯಾಶ್ಚ ಜಜ್ಞಿರೇ।**
**ತತಃ ಪ್ರಭೃತಿ ಮೈತ್ರೇಯ ಪ್ರಜಾ ಮೈಥುನಸಂಭವಾಃ॥ 79**

---

ಮಹಾಭಾಗನು ಪ್ರಜಾಪತಿಯಾಗಿ ಜನಿಸಿದನು. ಅವನು ಹಿಂದೆ ಬ್ರಹ್ಮನಿಂದ ಜನ್ಮತಾಳಿದ್ದನು (74). ಮಹಾಭಾಗನಾದ ದಕ್ಷಪ್ರಜಾಪತಿಯು ಪ್ರಜಾಸೃಷ್ಟಿಯನ್ನು ಬೆಳೆಸಬೇಕೆಂದು ಸಂಕಲ್ಪಿಸಿ, ಬ್ರಹ್ಮನ ಆದೇಶದಂತೆ ಉದ್ಯುಕ್ತನಾಗಿ ನೀಚೋಚ್ಚಗಳೂ ದ್ವಿಪದ ಚತುಷ್ಪದಗಳೂ ಆದ ಪ್ರಾಣಿಗಳನ್ನು ಸಂತಾನವಾಗಿ ಪಡೆದನು (75-76). ಇವೆಲ್ಲವನ್ನೂ ದಕ್ಷನು ಮನಸ್ಸಿನಿಂದಲೇ ಸೃಷ್ಟಿಸಿ ಆಮೇಲೆ ಸ್ತ್ರೀಯರನ್ನು ಸೃಷ್ಟಿಸಿದನು. ಆ ಸ್ತ್ರೀಯರಲ್ಲಿ ಹತ್ತು ಜನರನ್ನು ಧರ್ಮನಿಗೂ ಹದಿಮೂರು ಕನ್ಯಕೆಯರನ್ನು ಕಶ್ಯಪನಿಗೂ ಕಾಲಪರಿವರ್ತನೆಯಲ್ಲಿ ನಿಯುಕ್ತರಾದ (ಅಶ್ವಿನಿ ಮೊದಲಾದ) ಇಪ್ಪತ್ತೇಳು ಪುತ್ರಿಯರನ್ನು ಚಂದ್ರನಿಗೂ ಮದುವೆ ಮಾಡಿಕೊಟ್ಟನು. ಆ ವಿವಿಧ ಸ್ತ್ರೀಯರಲ್ಲಿ ದೇವತೆಗಳೂ, ದೈತ್ಯರೂ, ನಾಗರೂ, ಗೋವುಗಳೂ, ಪಕ್ಷಿಗಳೂ ಜನಿಸಿದವು (77-78). ಮತ್ತು ಗಂಧರ್ವರೂ ಅಪ್ಸರೆಯರೂ ದಾನವಾದಿಗಳೂ ಹುಟ್ಟಿದರು. ಅಲ್ಲಿಂದ, ಎಂದರೆ ದಕ್ಷನಿಂದ ಮುಂದೆ, ಮೈತ್ರೇಯ, ಪ್ರಜೆಗಳೆಲ್ಲರೂ ಸ್ತ್ರೀಪುರುಷ ಸಂಯೋಗದಿಂದ ಹುಟ್ಟುತ್ತಿದ್ದಾರೆ. ಅದಕ್ಕೆ ಮೊದಲು ತಪೋವಿಶೇಷಗಳಿಂದ ಸಿದ್ಧಪುರುಷರಾದ ಪ್ರಾಚೀನರಿಗೆ

**ಸಂಕಲ್ಪಾದ್ದರ್ಶನಾತ್ ಸ್ಪರ್ಶಾತ್ ಪೂರ್ವೇಷಾಮಭವನ್ ಪ್ರಜಾಃ।**
**ತಪೋವಿಶೇಷೈಃ ಸಿದ್ಧಾನಾಂ ತದಾತ್ಯಂತತಪಸ್ವಿನಾಮ್॥ 80**

*ಶ್ರೀಮೈತ್ರೇಯ ಉವಾಚ:*

**ಅಂಗುಷ್ಠಾದ್ದಕ್ಷಿಣಾದ್ದಕ್ಷಃ ಪೂರ್ವಂ ಜಾತೋ ಮಯಾ ಶ್ರುತಃ।**
**ಕಥಂ ಪ್ರಾಚೇತಸೋ ಭೂಯಃ ಸಮುತ್ಪನ್ನೋ ಮಹಾಮುನೇ॥**

**ಏಷ ಮೇ ಸಂಶಯೋ ಬ್ರಹ್ಮನ್ ಸುಮಹಾನ್ ಹೃದಿ ವರ್ತತೇ।**
**ತದ್ದೌಹಿತ್ರಶ್ಚ ಸೋಮಸ್ಯ ಪುನಃ ಶ್ವಶುರತಾಂ ಗತಃ॥ 82**

*ಶ್ರೀಪರಾಶರ ಉವಾಚ:*

**ಉತ್ಪತ್ತಿಶ್ಚ ನಿರೋಧಶ್ಚ ನಿತ್ಯೋ ಭೂತೇಷು ಸರ್ವದಾ।**
**ಋಷಯೋಽತ್ರ ನ ಮುಹ್ಯಂತಿ ಯೇ ಚಾನ್ಯೇ ದಿವ್ಯಚಕ್ಷುಷಃ॥ 83**

**ಯುಗೇ ಯುಗೇ ಭವಂತ್ಯೇತೇ ದಕ್ಷಾದ್ಯಾ ಮುನಿಸತ್ತಮ।**
**ಪುನಶ್ಚೈವಂ ನಿರುದ್ಧ್ಯಂತೇ ವಿದ್ವಾಂಸ್ತತ್ರ ನ ಮುಹ್ಯತಿ॥ 84**

---

ಸಂಕಲ್ಪ, ದರ್ಶನ, ಸ್ಪರ್ಶನಗಳಿಂದಲೂ ಪ್ರಜೆಗಳು ಹುಟ್ಟುತ್ತಿದ್ದರು (79-80). ಆಗ ಮೈತ್ರೇಯರು ಕೇಳಿದರು: "ಮಹರ್ಷಿಗಳೆ, ಬ್ರಹ್ಮನ ಬಲ ಅಂಗುಷ್ಠದಿಂದ ದಕ್ಷನು ಹುಟ್ಟಿದನೆಂದು ಹಿಂದೆ ಕೇಳಿದ್ದೇನೆ. ಹೀಗಿರುವಾಗ ಆತನು ಪ್ರಚೇತಸರಿಂದ ಹುಟ್ಟಿದನೆಂಬುದು ಹೇಗೆ? ಅಲ್ಲದೆ ಒಂದು ದೊಡ್ಡ ಸಂಶಯವು ನನ್ನ ಹೃದಯದಲ್ಲಿ ಉಳಿದಿದೆ. ಏನೆಂದರೆ, ದಕ್ಷನು ಸೋಮನ (ಚಂದ್ರನ) ಮಗಳಾದ ಮಾರಿಷೆಯ ಮಗನಾಗಿದ್ದರೂ ಮತ್ತೆ ಸೋಮನಿಗೆ ಮಾವನಾದದ್ದು ಹೇಗೆ?" ಎಂದನು (81-82). ಅದಕ್ಕೆ ಪರಾಶರರು ಹೇಳಿದರು: "ಮೈತ್ರೇಯ, ಪ್ರಾಣಿಗಳಿಗೆ ಹುಟ್ಟು ಸಾವು ಇವು ನಿರಂತರ ವಾಗಿ ನಡೆಯುತ್ತಲೇ ಇರುತ್ತವೆ. ಋಷಿಗಳೂ ದಿವ್ಯದೃಷ್ಟಿಗಳುಳ್ಳ ಅನ್ಯರೂ ಈ ವಿಷಯದಲ್ಲಿ ಭ್ರಾಂತರಾಗುವುದಿಲ್ಲ (83). ಪ್ರತಿ ಯುಗದಲ್ಲಿಯೂ ದಕ್ಷ ಮೊದಲಾದವರು ಹುಟ್ಟುತ್ತಲೇ ಇದ್ದಾರೆ. ಮತ್ತೆ ಲಯವಾಗುತ್ತಿದ್ದಾರೆ.

**ಕಾನಿಷ್ಠ್ಯಂ ಜ್ಯೈಷ್ಠ್ಯಮಪ್ಯೇಷಾಂ ಪೂರ್ವಂ ನಾಭೂದ್ದ್ವಿಜೋತ್ತಮ।**
**ತಪ ಏವ ಗರೀಯೋಽಭೂತ್ ಪ್ರಭಾವಶ್ಚೈವ ಕಾರಣಮ್॥** 85

*ಶ್ರೀಮೈತ್ರೇಯ ಉವಾಚ:*

**ದೇವಾನಾಂ ದಾನವಾನಾಂ ಚ ಗಂಧರ್ವೋರಗರಕ್ಷಸಾಮ್।**
**ಉತ್ಪತ್ತಿಂ ವಿಸ್ತರೇಣೇಹ ಮಮ ಬ್ರಹ್ಮನ್ ಪ್ರಕೀರ್ತಯ॥** 86

*ಶ್ರೀಪರಾಶರ ಉವಾಚ:*

**ಪ್ರಜಾಃ ಸೃಜೇತಿ ವ್ಯಾದಿಷ್ಟಃ ಪೂರ್ವಂ ದಕ್ಷಃ ಸ್ವಯಂಭುವಾ।**
**ಯಥಾ ಸಸರ್ಜ ಭೂತಾನಿ ತಥಾ ಶೃಣು ಮಹಾಮುನೇ॥** 87

**ಮಾನಸಾನ್ಯೇವ ಭೂತಾನಿ ಪೂರ್ವಂ ದಕ್ಷೋಽಸೃಜತ್ತದಾ।**
**ದೇವಾನೃಷೀನ್ ಸಗಂಧರ್ವಾನಸುರಾನ್ ಪನ್ನಗಾಂಸ್ತಥಾ॥** 88

---

ವಿದ್ವಾಂಸನು ಈ ವಿಷಯದಲ್ಲಿ ಮೋಹಗೊಳ್ಳುವುದಿಲ್ಲ* (84). ಮೈತ್ರೇಯ, ಅವರಿಗೆ, ಕನಿಷ್ಠ, ಜ್ಯೇಷ್ಠ ಎಂಬ ಯಾವ ವ್ಯವಸ್ಥೆಯೂ ಇರಲಿಲ್ಲ. ತಪಸ್ಸು, ಮಹಿಮೆ ಇವು ಮಾತ್ರ ಜ್ಯೇಷ್ಠತೆಗೆ ಕಾರಣವಾಗಿದ್ದವು" ಎಂದರು (85). ಈಗ ಮೈತ್ರೇಯರು "ಬ್ರಾಹ್ಮಣೋತ್ತಮರೆ, ದೇವ ದಾನವ ಗಂಧರ್ವ ಉರಗ ರಾಕ್ಷಸರ ಉತ್ಪತ್ತಿಯನ್ನು ನನಗೆ ವಿಸ್ತಾರವಾಗಿ ಹೇಳಿರಿ" ಎಂದರು (86). ಪರಾಶರರು ಹೇಳಿದರು: ಪ್ರಜೆಗಳನ್ನು ಸೃಜಿಸೆಂದು ಬ್ರಹ್ಮನಿಂದ ಆಜ್ಞಪ್ತನಾದ ದಕ್ಷಪ್ರಜಾಪತಿಯು ಪ್ರಾಣಿಗಳನ್ನು ಹೇಗೆ ಸೃಜಿಸಿದನೆಂಬು ದನ್ನು ಹೇಳುತ್ತೇನೆ, ಕೇಳು. ದಕ್ಷನು ಮೊದಲು ದೇವ, ಋಷಿ, ಗಂಧರ್ವ, ಅಸುರ, ಪನ್ನಗ ಮೊದಲಾದವರನ್ನು ತನ್ನ ಮನಸ್ಸಿನಿಂದಲೇ ಸೃಷ್ಟಿಸಿದನು

---

* ಪ್ರತಿಯೊಂದು ಮನ್ವಂತರದಲ್ಲಿಯೂ ಋಷಿಗಳೇ ಮೊದಲಾದ ಕಾರಣ ಪುರುಷರು ಅದೇ ಹೆಸರಿನಿಂದ ಮತ್ತೆ ಮತ್ತೆ ಹುಟ್ಟುತ್ತಾರೆ. ಮೂಲವೂ ಮಾತ್ರ ಬೇರೆಯಾಗಬಹುದು. ದಕ್ಷನು ಒಂದು ಮನ್ವಂತರದಲ್ಲಿ ಬ್ರಹ್ಮನಿಂದಲೂ ಇನ್ನೊಂದು ಸಲ ಪ್ರಚೇತಸರಿಂದಲೂ ಜನಿಸಿದನು. ಹಾಗೆಯೇ ಸೋಮನು ಒಮ್ಮೆ ಅತ್ರಿಗೆ ಮಗನಾಗಿ ಹುಟ್ಟಿ, ಇನ್ನೊಮ್ಮೆ ಕ್ಷೀರಸಮುದ್ರದಿಂದ ಹುಟ್ಟಿದನು. ಹೀಗೆಯೇ ವಸಿಷ್ಠಾದಿ ಗಳು—ಎಂದು ತಿಳಿಯಬೇಕು.

ಯದಾಸ್ಯ ಸೃಜಮಾನಸ್ಯ ನ ವ್ಯವರ್ಧಂತ ತಾಃ ಪ್ರಜಾಃ।
ತತಃ ಸಂಚಿಂತ್ಯ ಸ ಪುನಃ ಸೃಷ್ಟಿಹೇತೋಃ ಪ್ರಜಾಪತಿಃ॥ 89

ಮೈಥುನೇನೈವ ಧರ್ಮೇಣ ಸಿಸೃಕ್ಷುರ್ವಿವಿಧಾಃ ಪ್ರಜಾಃ।
ಅಸಿಕ್ನೀಮಾವಹತ್ಕನ್ಯಾಂ ವೀರಣಸ್ಯ ಪ್ರಜಾಪತೇಃ।
ಸುತಾಂ ಸುತಪಸಾ ಯುಕ್ತಾಂ ಮಹತೀಂ ಲೋಕಧಾರಿಣೀಮ್॥

ಅಥ ಪುತ್ರ ಸಹಸ್ರಾಣಿ ವೈರುಣ್ಯಾಂ ಪಂಚ ವೀರ್ಯವಾನ್।
ಅಸಿಕ್ನ್ಯಾಂ ಜನಯಾಮಾಸ ಸರ್ಗಹೇತೋಃ ಪ್ರಜಾಪತಿಃ॥ 91

ತಾನ್ ದೃಷ್ಟ್ವಾ ನಾರದೋ ವಿಪ್ರ ಸಂವಿವರ್ಧಯಿಷೂನ್ ಪ್ರಜಾಃ।
ಸಂಗಮ್ಯ ಪ್ರಿಯಸಂವಾದೋ ದೇವರ್ಷಿರಿದಮಬ್ರವೀತ್॥ 92

ಹೇ ಹರ್ಯಶ್ವಾ ಮಹಾವೀರ್ಯಾಃ ಪ್ರಜಾ ಯೂಯಂ ಕರಿಷ್ಯಥ।
ಈದೃಶೋ ದೃಶ್ಯತೇ ಯತ್ನೋ ಭವತಾಂ ಶ್ರೂಯತಾಮಿದಮ್॥

ಬಾಲಿಶಾ ಬತ ಯೂಯಂ ವೈ ನಾಸ್ಯಾ ಜಾನೀತ ವೈ ಭುವಃ।
ಅಂತರೂರ್ಧ್ವಮದಶ್ಚೈವ ಕಥಂ ಸೃಕ್ಷ್ಯಥ ವೈ ಪ್ರಜಾಃ॥ 94

---

(87-88). ಹೀಗೆ ಸೃಜಿಸುತ್ತಿದ್ದರೂ ಅವರ ಸಂಖ್ಯೆ ಬೆಳೆಯಲಿಲ್ಲ. ಆಗ ದಕ್ಷ ಪ್ರಜಾಪತಿಯು ತುಂಬ ಆಲೋಚಿಸಿ, ಮೈಥುನಧರ್ಮದಿಂದ ಪ್ರಜೆಗಳನ್ನು ಸೃಜಿಸಬೇಕೆಂದು ನಿಶ್ಚಯಿಸಿದನು. ಆಮೇಲೆ ವೀರಣಪ್ರಜಾಪತಿಯ ಮಗಳಾದ ಅಸಿಕ್ನೀ ಎಂಬ ಕನ್ಯೆಯನ್ನು ಮದುವೆಯಾದನು. ಅವಳು ಮಹಾತಪಸ್ವಿನಿಯೂ ಲೋಕಧಾರಣ ಸಮರ್ಥಳೂ ಆಗಿದ್ದಳು (89-90). ದಕ್ಷಪ್ರಜಾಪತಿಯು ಅಸಿಕ್ನಿಯಲ್ಲಿ ಸೃಷ್ಟಿಯನ್ನು ಬೆಳೆಸಬೇಕೆಂಬ ಉದ್ದೇಶ ದಿಂದ ಐದು ಸಾವಿರ ಪುತ್ರರನ್ನು ಉತ್ಪಾದಿಸಿದನು. ಆ ಪುತ್ರರೂ ಪ್ರಜೆ ಗಳನ್ನು ವರ್ಧಿಸಬೇಕೆಂಬ ಇಚ್ಛೆಯುಳ್ಳವರಾದರು. ಆಗ ಪ್ರಿಯವಾದಿಯಾದ ದೇವರ್ಷಿ ನಾರದನು ಅವರನ್ನು ಕಂಡು "ಎಲೈ ಹರ್ಯಶ್ವರೇ, ಮಹಾವೀರ ರಾದ ನೀವು ಪ್ರಜೆಗಳನ್ನು ಉತ್ಪಾದಿಸಬೇಕೆಂದಿದ್ದೀರಷ್ಟೆ. ನನ್ನ ಮಾತನ್ನು ಕೇಳಿರಿ. ಈ ಭೂಮಂಡಲದ ಒಳಗೆ, ಮೇಲೆ, ಕೆಳಗೆ ಏನಿದೆಯೆಂಬುದು ಸಹ ನಿಮಗೆ ಗೊತ್ತಿಲ್ಲ. ಅಜ್ಞರಾದ ನೀವು ಪ್ರಜೆಗಳನ್ನು ಹೇಗೆ ನಿರ್ಮಿಸ

**ಊರ್ಧ್ವಂ ತಿರ್ಯಗದಶ್ಚೈವ ಯದಾಪ್ರತಿಹತಾ ಗತಿಃ।**
**ತದಾ ಕಸ್ಮಾದ್ಭುವೋ ನಾಂತಂ ಸರ್ವೇ ದ್ರಕ್ಷ್ಯಥ ಬಾಲಿಶಾಃ॥ 95**

**ತೇ ತು ತದ್ವಚನಂ ಶ್ರುತ್ವಾ ಪ್ರಯಾತಾಃ ಸರ್ವತೋ ದಿಶಮ್।**
**ಅದ್ಯಾಪಿ ನೋ ನಿವರ್ತಂತೇ ಸಮುದ್ರೇಭ್ಯ ಇವಾಪಗಾಃ॥ 96**

**ಹರ್ಯಶ್ವೇಷ್ವಥ ನಷ್ಟೇಷು ದಕ್ಷಃ ಪ್ರಾಚೇತಸಃ ಪುನಃ।**
**ವೈರುಣ್ಯಾಮಥ ಪುತ್ರಾಣಾಂ ಸಹಸ್ರಮಸೃಜತ್ ಪ್ರಭುಃ॥ 97**

**ವಿವರ್ಧಯಿಷವಸ್ತೇ ತು ಶಬಲಾಶ್ವಾಃ ಪ್ರಜಾಃ ಪುನಃ।**
**ಪೂರ್ವೋಕ್ತಂ ವಚನಂ ಬ್ರಹ್ಮನ್ ನಾರದೇನೈವ ನೋದಿತಾಃ॥ 98**

**ಅನ್ಯೋಽನ್ಯಮೂಚುಸ್ತೇ ಸರ್ವೇ ಸಮ್ಯಗಾಹ ಮಹಾಮುನಿಃ।**
**ಭ್ರಾತೄಣಾಂ ಪದವೀ ಚೈವ ಗಂತವ್ಯಾ ನಾತ್ರ ಸಂಶಯಃ॥ 99**

---

ಬಲ್ಲಿರಿ? (91-94). ಭೂಮಿಯ ಮೇಲೆ ಅಡ್ಡ ಕೆಳಗೆ—ಎಲ್ಲೆಡೆಯೂ ಸಂಚರಿಸಲು ನಿಮಗೆ ಅಪ್ರತಿಹತವಾದ ಗತಿಸಾಮರ್ಥ್ಯವಿರುವಾಗ ಈ ವಿಶ್ವದ ತುದಿಯಲ್ಲಿ ಏನಿದೆಯೆಂದು ಏಕೆ ಹೋಗಿ ನೋಡಿಕೊಂಡು ಬರಬಾರದು? ಎಂತಹ ಮೂಢರು ನೀವು!" ಎಂದು ಹೇಳಿದನು (95). ಆಗ ದಕ್ಷಪುತ್ರರಾದ ಹರ್ಯಶ್ವರು ನಾರದನ ಮಾತನ್ನು ಕೇಳಿ (ವಿಶ್ವದ ತುದಿಯನ್ನು ನೋಡಬೇಕೆಂದು) ಬೇರೆ ಬೇರೆ ದಿಕ್ಕುಗಳಿಗೆ ಹೋದರು! ಹೋದವರು ಇದುವರೆಗೂ ಹಿಂದಕ್ಕೆ ಬರಲಿಲ್ಲ! ನದಿಗಳು ಸಮುದ್ರಗಳಿಗೆ ಹೋಗಿ ಸೇರಿದಂತಾಯಿತು! (96). ಹೀಗೆ ಹರ್ಯಶ್ವರು ಕಾಣದಂತಾಗಲು ಪ್ರಭುವಾದ ದಕ್ಷನು ವೀರಣಪುತ್ರಿಯಾದ ಅಸಿಕ್ನಿಯಲ್ಲಿ ಮತ್ತೆ ಒಂದು ಸಾವಿರ ಪುತ್ರರನ್ನು ಉತ್ಪಾದಿಸಿದನು. ಶಬಲಾಶ್ವರೆಂಬ ಆ ಪುತ್ರರು ಪ್ರಜಾಸಂಖ್ಯೆಯನ್ನು ಬೆಳೆಸಬೇಕೆಂದಿದ್ದರು. ಅಷ್ಟರಲ್ಲಿ ನಾರದನು ಮತ್ತೆ ಬಂದು, ಮೈತ್ರೇಯ, ಹಿಂದೆ ಹರ್ಯಶ್ವರಿಗೆ ಹೇಳಿದ ಮಾತನ್ನೇ ನುಡಿದು ದಿಕ್ಕುದಿಕ್ಕುಗಳಿಗೆ ಹೋಗುವಂತೆ ಪ್ರೇರಿಸಿದನು! (97-98). ಆಗ ಶಬಲಾಶ್ವರು ತಮ್ಮ ತಮ್ಮಲ್ಲಿ "ಈ ಮಹರ್ಷಿಯು ಹೇಳುವುದು ಸರಿಯಾಗಿದೆ. ನಮ್ಮ ಸೋದರರು ಹೋದ ದಾರಿಯನ್ನು ಹಿಡಿದು ಅವರನ್ನು ಅನ್ವೇಷಿಸುವುದು

ಜ್ಞಾತ್ವಾ ಪ್ರಮಾಣಂ ಪೃಥ್ವ್ಯಾಶ್ಚ ಪ್ರಜಾಸ್ರಕ್ಷ್ಯಾಮಹೇ ತತಃ।
ತೇऽಪಿ ತೇನೈವ ಮಾರ್ಗೇಣ ಪ್ರಯಾತಾಃ ಸರ್ವತೋಮುಖಮ್।
ಅದ್ಯಾಪಿ ನ ನಿವರ್ತಂತೇ ಸಮುದ್ರೇಭ್ಯ ಇವಾಪಗಾಃ॥ 100

ತತಃ ಪ್ರಭೃತಿ ವೈ ಭ್ರಾತಾ ಭ್ರಾತುರನ್ವೇಷಣೇ ದ್ವಿಜ।
ಪ್ರಯಾತೋ ನಶ್ಯತಿ ತಥಾ ತನ್ನ ಕಾರ್ಯಂ ವಿಜಾನತಾ॥ 101

ತಾಂಶ್ಚಾಪಿ ನಷ್ಟಾನ್ ವಿಜ್ಞಾಯ ಪುತ್ರಾನ್ ದಕ್ಷಃ ಪ್ರಜಾಪತಿಃ।
ಕ್ರೋಧಂ ಚಕ್ರೇ ಮಹಾಭಾಗೋ ನಾರದಂ ಸ ಶಶಾಪ ಚ॥ 102

ಸರ್ಗಕಾಮಸ್ತತೋ ವಿದ್ವಾನ್ ಸ ಮೈತ್ರೇಯ ಪ್ರಜಾಪತಿಃ।
ಷಷ್ಟಿಂ ದಕ್ಷೋऽಸೃಜತ್ಕನ್ಯಾ ವೈರುಣ್ಯಾಮಿತಿ ನಃ ಶ್ರುತಮ್॥ 103

ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ।
ಸಪ್ತವಿಂಶತಿ ಸೋಮಾಯ ಚತಸ್ರೋऽರಿಷ್ಟನೇಮಿನೇ॥ 104

---

ಯುಕ್ತವಾಗಿದೆ. ಸಂದೇಹವಿಲ್ಲ. ಪೃಥ್ವಿಯ ಪ್ರಮಾಣವೆಷ್ಟಿದೆಯೆಂದು ಗೊತ್ತುಮಾಡಿ, ಅನಂತರ ಪ್ರಜೆಗಳನ್ನು ಉತ್ಪಾದಿಸೋಣ" ಎಂದು ಕೊಂಡರು. ಅವರೂ ಸಹ ಅದೇ ದಾರಿಯನ್ನು ಹಿಡಿದು ಎಲ್ಲ ದಿಕ್ಕುಗಳಿಗೂ ಹೋದರು. ಇದುವರೆಗೂ ಹಿಂದಕ್ಕೆ ಬರಲಿಲ್ಲ! ಸಮುದ್ರಗಳನ್ನು ಸೇರಿದ ನದಿಗಳಂತಾದರು! (99-100). ಅಲ್ಲಿಂದ ಮೊದಲು, ಮೈತ್ರೇಯ, ಸೋದರನು ಸೋದರನ ಅನ್ವೇಷಣೆಗೆ ಹೋದರೆ ನಾಶವಾಗುತ್ತಾನೆಂದು ಪ್ರಸಿದ್ಧಿಯಾಯಿತು! ಆದ್ದರಿಂದ ಆ ಕೆಲಸವನ್ನು ಬುದ್ಧಿಶಾಲಿಯು ಮಾಡ ಬಾರದು (101). ಆ ಪುತ್ರರೂ ನಷ್ಟರಾದರೆಂಬುದನ್ನು ತಿಳಿದ ದಕ್ಷ ಪ್ರಜಾಪತಿಯು ಕ್ರುದ್ಧನಾಗಿ ನಾರದನನ್ನು (ನೀನು ಒಂದು ಕಡೆ ನಿಲ್ಲದೆ ಸದಾ ಅಲೆಯುತ್ತಿರು ಎಂದು) ಶಪಿಸಿದನು. ಆಮೇಲೆ ಪ್ರಾಜ್ಞನಾದ ದಕ್ಷನು ಸೃಷ್ಟಿಯನ್ನು ಬೆಳೆಸಬೇಕೆಂಬ ಉದ್ದೇಶದಿಂದ ಮಾರಿಷೆಯಲ್ಲಿ ಅರವತ್ತು ಮಂದಿ ಹೆಣ್ಣು ಮಕ್ಕಳನ್ನು ಪಡೆದನೆಂದು ನಾವು ಕೇಳಿದ್ದೇವೆ (102-103). ಅವರಲ್ಲಿ ಹತ್ತು ಮಂದಿ ಕನ್ಯೆಯರನ್ನು ಧರ್ಮನಿಗೂ ಹದಿಮೂರು ಕನ್ಯೆಯ ರನ್ನು ಕಶ್ಯಪನಿಗೂ ಇಪ್ಪತ್ತೇಳು ಜನರನ್ನು ಚಂದ್ರನಿಗೂ ನಾಲ್ವರನ್ನು ಅರಿಷ್ಟ

**ದ್ವೇ ಚೈವ ಬಹುಪುತ್ರಾಯ ದ್ವೇ ಚೈವಾಂಗಿರಸೇ ತಥಾ।**
**ದ್ವೇ ಕೃಶಾಶ್ವಾಯ ವಿದುಷೇ ತಾಸಾಂ ನಾಮಾನಿ ಮೇ ಶೃಣು॥ 105**

**ಅರುಂಧತೀ ವಸುರ್ಯಾಮಿರ್ಲಂಬಾ ಭಾನುರ್ಮರುತ್ವತೀ।**
**ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾ ಚ ತಾದೃಶೀ॥ 106**

**ಧರ್ಮಪತ್ನ್ಯೋ ದಶ ತ್ವೇತಾಸ್ತಾಸ್ವಪತ್ಯಾನಿ ಮೇ ಶೃಣು।**
**ವಿಶ್ವೇದೇವಾಸ್ತು ವಿಶ್ವಾಯಾಃ ಸಾಧ್ಯಾ ಸಾಧ್ಯಾನಜಾಯತ॥ 107**

**ಮರುತ್ವತ್ಯಾಂ ಮರುತ್ವಂತೋ ವಸೋಶ್ಚ ವಸವಃ ಸ್ಮೃತಾಃ।**
**ಭಾನೋಽಸ್ತು ಭಾನವಃ ಪುತ್ರಾಃ ಮುಹೂರ್ತಾಯಾಂ**
**ಮೌಹೂರ್ತಜಾಃ॥ 108**

---

ನೇಮಿಗೂ ಇಬ್ಬರನ್ನು ಬಹುಪುತ್ರನೆಂಬುವನಿಗೂ ಇಬ್ಬರನ್ನು ಅಂಗಿರಸ್ಸಿಗೂ ಇಬ್ಬರನ್ನು ಕೃಶಾಶ್ವನೆಂಬ ವಿದ್ವಾಂಸನಿಗೂ ಕೊಟ್ಟು ಮದುವೆ ಮಾಡಿದನು. ಆ ಕನ್ಯೆಯರ ಹೆಸರನ್ನು ಕೇಳು (104-105): ಅರುಂಧತಿ*, ವಸು, ಯಾಮಿ, ಲಂಬಾ, ಭಾನು, ಮರುತ್ವತೀ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ ಮತ್ತು ವಿಶ್ವಾ. ಈ ಹತ್ತು ಮಂದಿ ಧರ್ಮನ ಪತ್ನಿಯರು. ಈಗ ಅವರ ಮಕ್ಕಳ ಹೆಸರನ್ನು ಕೇಳು. ವಿಶ್ವೆಯು ವಿಶ್ವೇದೇವ**ರನ್ನು ಸಾಧ್ಯೆಯು ಸಾಧ್ಯ§ರನ್ನು ಹಡೆದರು (106-107). ಮರುತ್ವತಿಯಲ್ಲಿ ಮರುತ್ವಂತರೂ (ಮರುತ್ತುಗಳು), ವಸುವಿನಿಂದ (ಅಷ್ಟ) ವಸುಗಳೂ ಭಾನುವಿನಿಂದ ಭಾನುಗಳೂ (ದ್ವಾದಶಾದಿತ್ಯರು), ಮುಹೂರ್ತೆಯಲ್ಲಿ ಮುಹೂರ್ತಾಧಿದೇವತೆಗಳೂ ಜನಿಸಿದರು (108). ಲಂಬೆಯಿಂದ ಹುಟ್ಟಿದವನು ಘೋಷ (ಗಗನದ ಒಂದು ಪ್ರಕಾಶವಿಶೇಷ). ಯಾಮಿಯಿಂದ ಜನಿಸಿದವಳು ನಾಗವೀಥಿಕಾ (ಕ್ಷೀರಪಥ). ಪೃಥಿವೀ ವಿಷಯಕವಾದ

---

* ಇವಳು ವಸಿಷ್ಠರ ಪತ್ನಿಯಾದ ಅರುಂಧತಿಯಲ್ಲ. ಈ ಹೆಸರಿಗೆ ಬದಲಾಗಿ ಭಾಗವತದಲ್ಲಿ ಕಕುದ್ ಎಂದು ಹೇಳಿದೆ.

** ವಿಶ್ವೇದೇವರು ಶ್ರಾದ್ಧದೇವತೆಗಳು. ಇವರ ಸಂಖ್ಯೆ ಹತ್ತು ಎಂದು ವಾಯು ಪುರಾಣವೂ ಹನ್ನೆರಡು ಎಂದು ಮತ್ಸ್ಯಪುರಾಣವೂ ಹೇಳುತ್ತವೆ.

§ ಸಾಧ್ಯರು ಮಂತ್ರಶರೀರಿಗಳೆಂದು ವಾಯುಪುರಾಣ.

**ಲಂಬಾಯಾಶ್ಚೈವ ಘೋಷೋಽಥ ನಾಗವೀಥೀ ತು ಯಾಮಿಜಾ।**
**ಪೃಥಿವೀವಿಷಯಂ ಸರ್ವಮರುಂಧತ್ಯಾಮಜಾಯತ।**
**ಸಂಕಲ್ಪಾಯಾಸ್ತು ಸರ್ವಾತ್ಮಾ ಜಜ್ಞೇ ಸಂಕಲ್ಪ ಏವ ಹಿ॥ 109**

**ಯೇ ತ್ವನೇಕವಸುಪ್ರಾಣದೇವಾ ಜ್ಯೋತಿಃ ಪುರೋಗಮಾಃ।**
**ವಸವೋಽಷ್ಟೌ ಸಮಾಖ್ಯಾತಾಸ್ತೇಷಾಂ ವಕ್ಷ್ಯಾಮಿ ವಿಸ್ತರಮ್॥ 110**

**ಆಪೋ ಧ್ರುವಶ್ಚ ಸೋಮಶ್ಚ ಧರ್ಮಶ್ಚೈವಾನಿಲೋಽನಲಃ।**
**ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋ ನಾಮಭಿಃ ಸ್ಮೃತಾಃ॥ 111**

**ಆಪಸ್ಯ ಪುತ್ರೋ ವೈತಂಡಃ ಶ್ರಮಃ ಶಾಂತೋ ಧ್ವನಿಸ್ತಥಾ।**
**ಧ್ರುವಸ್ಯ ಪುತ್ರೋ ಭಗವಾನ್ ಕಾಲೋ ಲೋಕಪ್ರಕಾಲನಃ॥ 112**

**ಸೋಮಸ್ಯ ಭಗವಾನ್ ವರ್ಚಾ ವರ್ಚಸ್ವೀ ಯೇನ ಜಾಯತೇ।**
**ಧರ್ಮಸ್ಯ ಪುತ್ರೋ ದ್ರವಿಣೋ ಹುತಹವ್ಯವಹಸ್ತಥಾ॥ 113**

**ಮನೋಹರಾಯಾಂ ಶಿಶಿರಃ ಪ್ರಾಣೋಽಥ ವರುಣಸ್ತಥಾ।**
**ಅನಿಲಸ್ಯ ಶಿವಾ ಭಾರ್ಯಾ ತಸ್ಯಾಃ ಪುತ್ರೋ ಮನೋಜವಃ॥ 114**

---

ಪ್ರಾಣಿಯೆಲ್ಲವೂ ಅರುಂಧತಿಯಲ್ಲಿ ಜನಿಸಿತು. ಸಂಕಲ್ಪೆಯಿಂದ ಸರ್ವಾತ್ಮಕನಾದ ಸಂಕಲ್ಪನೇ ಜನಿಸಿದನು (109). ಜ್ಯೋತಿಯಿಂದ ಸಮೇತರಾಗಿ ತೇಜಸ್ಸು ಮತ್ತು ಬಲಕ್ಕೆ ಅಧಿದೇವತೆಗಳಾದ ಅಷ್ಟವಸುಗಳಿದ್ದಾರಷ್ಟೇ, ಅವರ ವಿಷಯವಾದ ವಿಸ್ತಾರವನ್ನು ಹೇಳುವೆನು. ಆಪ, ಧ್ರುವ, ಸೋಮ, ಧರ್ಮ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ ಎಂದು ಈ ವಸುಗಳು ಪ್ರಸಿದ್ಧರಾಗಿದ್ದಾರೆ (111-112). ವೈತಂಡ, ಶ್ರಮ, ಶಾಂತ, ಧ್ವನಿ—ಎಂಬುವರು ಆಪನ ಮಕ್ಕಳು. ಲೋಕವನ್ನೇ ಕಬಳಿಸತಕ್ಕ ಭಗವಾನ್ ಕಾಲನು ಧ್ರುವನೆಂಬ ವಸುವಿನ ಮಗ. ವರ್ಚಸ್ ಎಂಬುವನು ಸೋಮನ ಮಗ. ಈತನಿಂದ ಮಾನವನು ವರ್ಚಸ್ವಿಯಾಗುತ್ತಾನೆ. ಧರ್ಮನ ಮಡದಿಯಾದ ಮನೋಹರೆಯಲ್ಲಿ ಹುಟ್ಟಿದ ಮಕ್ಕಳು ದ್ರವಿಣ, ಹುತಹವ್ಯವಹ, ಶಿಶಿರ, ಪ್ರಾಣ ಮತ್ತು ವರುಣ. ಅನಿಲನ ಹೆಂಡತಿ ಶಿವಾ. ಅವಳ ಮಗ ಮನೋಜವ (113-114). ಮತ್ತು ಅವಿಜ್ಞಾತಗತಿ

**ಅವಿಜ್ಞಾತಗತಿಶ್ಚೈವ ದ್ವೌ ಪುತ್ರಾವನಿಲಸ್ಯ ತು।**
**ಅಗ್ನಿಪುತ್ರಃ ಕುಮಾರಸ್ತು ಶರಸ್ತಂಬೇ ವ್ಯಜಾಯತ॥** 115

**ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠಜಾಃ।**
**ಅಪತ್ಯಂ ಕೃತ್ತಿಕಾನಾಂ ತು ಕಾರ್ತ್ತಿಕೇಯ ಇತಿ ಸ್ಮೃತಃ॥** 116

**ಪ್ರತ್ಯೂಷಸ್ಯ ವಿದುಃ ಪುತ್ರಮೃಷಿಂ ನಾಮ್ನಾಥ ದೇವಲಮ್।**
**ದ್ವೌ ಪುತ್ರೌ ದೇವಲಸ್ಯಾಪಿ ಕ್ಷಮಾವಂತೌ ಮನೀಷಿಣೌ॥** 117

**ಬೃಹಸ್ಪತೇಽಸ್ತು ಭಗಿನೀ ವರಸ್ತ್ರೀ ಬ್ರಹ್ಮಚಾರಿಣೀ।**
**ಯೋಗಸಿದ್ಧಾ ಜಗತ್ಕೃತ್ಸ್ನಮಸಕ್ತಾ ವಿಚರತ್ಯುತ॥** 118

**ಪ್ರಭಾಸಸ್ಯ ತು ಸಾ ಭಾರ್ಯಾ ವಸೂನಾಮಷ್ಟಮಸ್ಯ ತು।**
**ವಿಶ್ವಕರ್ಮಾ ಮಹಾಭಾಗಸ್ತಸ್ಯಾಂ ಜಜ್ಞೇ ಪ್ರಜಾಪತಿಃ॥** 119

---

ಎಂಬವನೂ ಸೇರಿ ಅನಿಲನಿಗೆ ಇಬ್ಬರು ಪುತ್ರರು. ಅನಲ(ಅಗ್ನಿ)ಪುತ್ರನಾದ ಕುಮಾರನು ಮೆದೆಹುಲ್ಲುಗಳ ಮಧ್ಯದಲ್ಲಿ ಹುಟ್ಟಿದನು. ಶಾಖ, ವಿಶಾಖ, ನೈಗಮೇಯ ಎಂಬವರು ಕುಮಾರನ ಅನಂತರ ಹುಟ್ಟಿದ ತಮ್ಮಂದಿರು. ಕೃತ್ತಿಕೆಯರಲ್ಲಿ ಹುಟ್ಟಿದ ಅಗ್ನಿಪುತ್ರನು ಕಾರ್ತಿಕೇಯ* (115-116). ಪ್ರತ್ಯೂಷನ ಪುತ್ರನನ್ನು ದೇವಲಋುಷಿಯೆನ್ನುತ್ತಾರೆ. ದೇವಲನಿಗೆ ಕ್ಷಮಾಶೀಲರೂ ವಿದ್ವಾಂಸರೂ ಆದ ಇಬ್ಬರು ಮಕ್ಕಳಾದರು (117). ಬೃಹಸ್ಪತಿಯ ಸೋದರಿಯಾದ ವರಸ್ತ್ರೀ ಎಂಬುವಳು ಬ್ರಹ್ಮಚಾರಿಣಿಯೂ ಯೋಗಿನಿಯೂ ಆಗಿ ಅನಾಸಕ್ತಭಾವದಿಂದ ಜಗತ್ತಿನಲ್ಲಿ ಸಂಚರಿಸಿ ಕೊಂಡಿದ್ದಳು. ಕೊನೆಯಲ್ಲಿ ಅವಳು ಎಂಟನೆಯ ವಸುವಾದ ಪ್ರಭಾಸನ ಭಾರ್ಯೆಯಾದಳು. ಅವಳಲ್ಲಿ ವಿಶ್ವಕರ್ಮನೆಂಬ ಮಹಾತ್ಮನಾದ ಪ್ರಜಾಪತಿಯು ಜನಿಸಿದನು. ಅವನು ಸಾವಿರಾರು ಬಗೆಯ ಶಿಲ್ಪಗಳಿಗೆ ಕರ್ತನು. ದೇವತೆಗಳ ಬಡಗಿ. ಶಿಲ್ಪಶಾಸ್ತ್ರಜ್ಞರಲ್ಲಿ ಶ್ರೇಷ್ಠನಾದ ಆತನು ಸಕಲ

---

* "ಕೃತ್ತಿಕೆಯರ ಸಾಕುಮಗನಾದ್ದರಿಂದ ಕುಮಾರನಿಗೆ ಕಾರ್ತಿಕೇಯನೆಂಬ ಹೆಸರು ಬಂದಿತು" ಎಂದೂ ಅರ್ಥಮಾಡಲು ಸಾಧ್ಯವಿದೆ.

**ಕರ್ತಾ ಶಿಲ್ಪಸಹಸ್ರಾಣಾಂ ತ್ರಿದಶಾನಾಂ ಚ ವರ್ದ್ಧಕೀ।**
**ಭೂಷಣಾನಾಂ ಚ ಸರ್ವೇಷಾಂ ಕರ್ತಾ ಶಿಲ್ಪವತಾಂ ವರಃ॥ 120**

**ಯಃ ಸರ್ವೇಷಾಂ ವಿಮಾನಾನಿ ದೇವತಾನಾಂ ಚಕಾರ ಹ।**
**ಮನುಷ್ಯಾಶ್ಚೋಪಜೀವಂತಿ ಯಸ್ಯ ಶಿಲ್ಪಂ ಮಹಾತ್ಮನಃ॥ 121**

**ತಸ್ಯ ಪುತ್ರಾಸ್ತು ಚತ್ವಾರಸ್ತೇಷಾಂ ನಾಮಾನಿ ಮೇ ಶೃಣು।**
**ಅಜೈಕಪಾದಹಿರ್ಬುಧ್ನ್ಯಸ್ತ್ವಷ್ಟಾ ರುದ್ರಶ್ಚ ವೀರ್ಯವಾನ್॥ 122**

**ತ್ವಷ್ಟುಶ್ಚಾಪ್ಯಾತ್ಮಜಃ ಪುತ್ರೋ ವಿಶ್ವರೂಪೋ ಮಹಾತಪಾಃ।**
**ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚಾಪರಾಜಿತಃ॥ 123**

**ವೃಷಾಕಪಿಶ್ಚ ಶಂಭುಶ್ಚ ಕಪರ್ದೀ ರೈವತಃ ಸ್ಮೃತಃ।**
**ಮೃಗವ್ಯಾಧಶ್ಚ ಶರ್ವಶ್ಚ ಕಪಾಲೀ ಚ ಮಹಾಮುನೇ॥ 124**

**ಏಕಾದಶೈತೇ ಕಥಿತಾ ರುದ್ರಾಸ್ತ್ರಿಭುವನೇಶ್ವರಾಃ।**
**ಶತಂ ತ್ವೇಕಂ ಸಮಾಖ್ಯಾತಂ ರುದ್ರಾಣಾಮಮಿತೌಜಸಾಮ್॥ 125**

---

ಆಭರಣಗಳ ನಿರ್ಮಾಪಕನೆನಿಸಿದ್ದಾನೆ (118-120). ವಿಶ್ವಕರ್ಮನು ಸಮಸ್ತ ದೇವತೆಗಳ ವಿಮಾನಗಳನ್ನು ನಿರ್ಮಿಸಿದನು. ಆ ಮಹಾತ್ಮನ ಶಿಲ್ಪ ಶಾಸ್ತ್ರವನ್ನೇ ಮನುಷ್ಯರು ಉಪಯೋಗಿಸಿಕೊಳ್ಳುತ್ತಿದ್ದಾರೆ (121). ಆತನಿಗೆ ನಾಲ್ವರು ಮಕ್ಕಳು. ಅವರ ಹೆಸರನ್ನು ಕೇಳು: ಅಜೈಕಪಾತ್, ಅಹಿರ್ಬುಧ್ನ್ಯ, ತ್ವಷ್ಟೃ, ವೀರನಾದ ರುದ್ರ—ಎಂದು. ಅವರಲ್ಲಿ ತ್ವಷ್ಟೃವಿಗೆ ತಪಸ್ವಿಯಾದ ವಿಶ್ವರೂಪನು ಮಗನಾದನು (122). ಮೂರು ಲೋಕ ಗಳಿಗೂ ಒಡೆಯರಾದ ಹನ್ನೊಂದು ಮಂದಿ ರುದ್ರರಿದ್ದಾರೆ. ಹರ, ಬಹುರೂಪ, ತ್ರ್ಯಂಬಕ, ಅಪರಾಜಿತ, ವೃಷಾಕಪಿ, ಶಂಭು, ಕಪರ್ದಿ, ರೈವತ, ಮೃಗವ್ಯಾಧ, ಶರ್ವ, ಕಪಾಲಿ—ಇವರು ಏಕಾದಶರುದ್ರರು. ಮಹಾತೇಜಸ್ವಿಗಳಾದ ನೂರು ಮಂದಿ ರುದ್ರರಿದ್ದಾರೆಂದು ಪ್ರಖ್ಯಾತಿ* ಇದೆ (123-125). ಇನ್ನು ಕಶ್ಯಪನ ಪತ್ನಿಯರ ಹೆಸರನ್ನು ಕೇಳು: ಅದಿತಿ, ದಿತಿ,

---

* ವಿಶ್ವಕರ್ಮನ ಮಗ ರುದ್ರ ಎಂದು ಹಿಂದೆ ಹೇಳಿದೆ. ಇವರೆಲ್ಲರೂ ಸೇರಿ ರುದ್ರಗಣವೇ ವಿಶ್ವಕರ್ಮನಿಂದ ಹುಟ್ಟಿತು—ಎಂದು ತಿಳಿಯಬೇಕು.

**ಕಶ್ಯಪಸ್ಯ ತು ಭಾರ್ಯಾ ಯಾಸ್ತಾಸಾಂ ನಾಮಾನಿ ಮೇ ಶೃಣು।**
**ಅದಿತಿರ್ದಿತಿರ್ದನುಶ್ಚೈವಾರಿಷ್ಟಾ ಚ ಸುರಸಾ ಖಸಾ॥** 126

**ಸುರಭಿರ್ವಿನತಾ ಚೈವ ತಾಮ್ರಾ ಕ್ರೋಧವಶಾ ಇರಾ।**
**ಕದ್ರುರ್ಮುನಿಶ್ಚ ಧರ್ಮಜ್ಞ ತದಪತ್ಯಾನಿ ಮೇ ಶೃಣು॥** 127

**ಪೂರ್ವಮನ್ವಂತರೇ ಶ್ರೇಷ್ಠಾ ದ್ವಾದಶಾಸನ್ಸುರೋತ್ತಮಾಃ।**
**ತುಷಿತಾ ನಾಮ ತೇಽನ್ಯೋಽನ್ಯಮೂಚುರ್ವೈವಸ್ವತೇಽಂತರೇ॥**

**ಉಪಸ್ಥಿತೇಽತಿಯಶಸಶ್ಚಾಕ್ಷುಷಸ್ಯಾಂತರೇ ಮನೋಃ।**
**ಸಮವಾಯೀಕೃತಾಃ ಸರ್ವೇ ಸಮಾಗಮ್ಯ ಪರಸ್ಪರಮ್॥** 129

**ಆಗಚ್ಛತ ದ್ರುತಂ ದೇವಾ ಅದಿತಿಂ ಸಂಪ್ರವಿಶ್ಯ ವೈ।**
**ಮನ್ವಂತರೇ ಪ್ರಸೂಯಾಮಸ್ತನ್ನಃ ಶ್ರೇಯೋ ಭವೇದಿತಿ॥** 130

**ಏವಮುಕ್ತ್ವಾ ತು ತೇ ಸರ್ವೇ ಚಾಕ್ಷುಷಸ್ಯಾಂತರೇ ಮನೋಃ।**
**ಮಾರೀಚಾತ್ಕಶ್ಯಪಾಜ್ಜಾತಾ ಅದಿತ್ಯಾ ದಕ್ಷಕನ್ಯಯಾ॥** 131

**ತತ್ರ ವಿಷ್ಣುಶ್ಚ ಶಕ್ರಶ್ಚ ಜಜ್ಞಾತೇ ಪುನರೇವ ಹಿ।**
**ಅರ್ಯಮಾ ಚೈವ ಧಾತಾ ಚ ತ್ವಷ್ಟಾ ಪೂಷಾ ತಥೈವ ಚ॥** 132

---

ದನು, ಅರಿಷ್ಟಾ, ಸುರಸಾ, ಖಸಾ, ಸುರಭಿ, ವಿನತಾ, ತಾಮ್ರಾ, ಕ್ರೋಧವಶಾ, ಇರಾ, ಕದ್ರು ಮತ್ತು ಮುನಿ ಎಂದು. ಅವರ ಸಂತತಿಯನ್ನು ಕೇಳು: (126-127). ಹಿಂದಿನ (ಚಾಕ್ಷುಷ) ಮನ್ವಂತರದಲ್ಲಿ ತುಷಿತರೆಂಬ ಶ್ರೇಷ್ಠರಾದ ದೇವತೆಗಳಿದ್ದರು. ಮುಂದೆ ವೈವಸ್ವತ ಮನ್ವಂತರವು ಸಮೀಪಿಸಲಾಗಿ ಆ ಕೀರ್ತಿಶಾಲಿಗಳೆಲ್ಲರೂ ಒಟ್ಟಾಗಿ ಸೇರಿ "ಬನ್ನಿರಿ. ನಾವು ಆ ವೈವಸ್ವತ ಮನ್ವಂತರದಲ್ಲಿ ಅದಿತಿಯ ಗರ್ಭವನ್ನು ಪ್ರವೇಶಿಸಿ ಹುಟ್ಟೋಣ. ಅದರಿಂದ ನಮಗೆ ಶ್ರೇಯಸ್ಸಾಗುತ್ತದೆ" ಎಂದು ತಮ್ಮೊಳಗೆ ಮಾತಾಡಿಕೊಂಡರು (128-130). ಹೀಗೆ ಅವರು ಚಾಕ್ಷುಷ ಮನ್ವಂತರದಲ್ಲಿ ಮಾತಾಡಿಕೊಂಡು ಮುಂದೆ ಮರೀಚಿಪುತ್ರನಾದ ಕಶ್ಯಪನಿಂದ ದಕ್ಷಕನ್ಯೆಯಾದ ಅದಿತಿಯಲ್ಲಿ ಜನಿಸಿದರು (131). ಅತಿ ತೇಜಸ್ವಿಗಳಾದ ಅವರು ವಿಷ್ಣು, ಇಂದ್ರ, ಅರ್ಯಮಾ, ಧಾತೃ, ತ್ವಷ್ಟೃ, ಪೂಷಾ, ವಿವಸ್ವಂತ, ಸವಿತಾ, ಮಿತ್ರ,

**ವಿವಸ್ವಾನ್ ಸವಿತಾ ಚೈವ ಮಿತ್ರೋ ವರುಣ ಏವ ಚ।**
**ಅಂಶುರ್ಭಗಶ್ಚಾತಿತೇಜಾ ಆದಿತ್ಯಾ ದ್ವಾದಶ ಸ್ಮೃತಾಃ॥** 133

**ಚಾಕ್ಷುಷಸ್ಯಾಂತರೇ ಪೂರ್ವಮಾಸನ್ ಯೇ ತುಷಿತಾಃ ಸುರಾಃ।**
**ವೈವಸ್ವತೇಽಂತರೇ ತೇ ವೈ ಆದಿತ್ಯಾ ದ್ವಾದಶ ಸ್ಮೃತಾಃ॥** 134

**ಯಾಃ ಸಪ್ತವಿಂಶತಿಃ ಪ್ರೋಕ್ತಾಃ ಸೋಮಪತ್ನ್ಯೋಽಥ ಸುವ್ರತಾಃ।**
**ಸರ್ವಾ ನಕ್ಷತ್ರಯೋಗಿನ್ಯಸ್ತನ್ನಾಮ್ನ್ಯಶ್ಚೈವ ತಾಃ ಸ್ಮೃತಾಃ॥** 135

**ತಾಸಾಮಪತ್ಯಾನ್ಯಭವನ್ ದೀಪ್ತಾನ್ಯಮಿತತೇಜಸಾಮ್।**
**ಅರಿಷ್ಟನೇಮಿಪತ್ನೀನಾಮಪತ್ಯಾನೀಹ ಷೋಡಶ॥** 136

**ಬಹುಪುತ್ರಸ್ಯ ವಿದುಷಶ್ಚತಸ್ರೋ ವಿದ್ಯುತಃ ಸ್ಮೃತಾಃ।**
**ಪ್ರತ್ಯಂಗಿರಸಜಾಃ ಶ್ರೇಷ್ಠಾ ಋಚೋ ಬ್ರಹ್ಮರ್ಷಿಸತ್ಕೃತಾಃ॥** 137

---

ವರುಣ, ಅಂಶು, ಭಗ—ಎಂದು ದ್ವಾದಶಾದಿತ್ಯರಾಗಿ ವಿಖ್ಯಾತರಾದರು. (132-134). ಚಂದ್ರನಿಗೆ ಸುಶೀಲೆಯರಾದ ಇಪ್ಪತ್ತೇಳು ಪತ್ನಿಯರೆಂದು ಹೇಳಲಾಯಿತಷ್ಟೆ. ಅವರೆಲ್ಲರೂ ನಕ್ಷತ್ರಾಧಿದೇವತೆಗಳಾಗಿ (ಅಶ್ವಿನೀ ಮೊದಲಾದ) ನಕ್ಷತ್ರಗಳ ಹೆಸರಿನಿಂದಲೇ ಪ್ರಸಿದ್ಧರಾಗಿದ್ದಾರೆ (135). ತೇಜಸ್ವಿನಿಯರಾದ ಅವರಿಗೆ ತೇಜಸ್ವಿಗಳಾದ ಹಲವು ಮಕ್ಕಳು ಜನಿಸಿದರು. ಅರಿಷ್ಟನೇಮಿಯ* ಪತ್ನಿಯರಿಗೆ ಹದಿನಾರು ಮಂದಿ ಮಕ್ಕಳಾದರು. ವಿದ್ವಾಂಸನಾದ ಬಹುಪುತ್ರನಿಗೆ (ಕಪಿಲಾ, ಅತಿಲೋಹಿತಾ, ಪೀತಾ, ಸಿತಾ ಎಂಬ) ನಾಲ್ವರು ವಿದ್ಯುತ್ತುಗಳು ಪುತ್ರಿಯರು. ಋಕ್ಕುಗಳಿಗೆ ಅಭಿಮಾನಿಗಳೂ ಬ್ರಹ್ಮರ್ಷಿಗಳಿಂದ ಪೂಜಿತರೂ ಆದ ದೇವತೆಗಳು ಅಂಗಿರಸ್ಸಿನ ಮಕ್ಕಳು (136-137). ಕೃಶಾಶ್ವನೆಂಬ ದೇವರ್ಷಿಗೆ ದೇವಾಯುಧಗಳೆಂಬವರು (ನೂರು) ಪುತ್ರರು. ಇವರೆಲ್ಲರೂ ಸಾವಿರ ಯುಗಗಳಿಗೆ ಒಮ್ಮೆ

---

* ಈತನ ವಿಷಯವಾಗಿ ವಿವರ ತಿಳಿಯದು. ಮಹಾಭಾರತದಲ್ಲಿ ಕಶ್ಯಪನಿಗೆ ಅರಿಷ್ಟನೇಮಿಯೆಂದು ಮತ್ತೊಂದು ಹೆಸರಿತ್ತೆಂದು ಹೇಳಿದೆ.

**ಕೃಶಾಶ್ವಸ್ಯ ತು ದೇವರ್ಷೇ ದೇವಪ್ರಹರಣಾಃ ಸ್ಮೃತಾಃ।**
**ಏತೇ ಯುಗಸಹಸ್ರಾಂತೇ ಜಾಯಂತೇ ಪುನರೇವ ಹಿ॥ 138**

**ಸರ್ವೇ ದೇವಗಣಾಸ್ತಾತ ತ್ರಯಸ್ತ್ರಿಂಶತ್ತು ಛಂದಜಾಃ।**
**ತೇಷಾಮಪೀಹ ಸತತಂ ನಿರೋಧೋತ್ಪತ್ತಿರುಚ್ಯತೇ॥ 139**

**ಯಥಾ ಸೂರ್ಯಸ್ಯ ಮೈತ್ರೇಯ ಉದಯಾಸ್ತಮಯಾವಿಹ।**
**ಏವಂ ದೇವನಿಕಾಯಾಸ್ತೇ ಸಂಭವಂತಿ ಯುಗೇ ಯುಗೇ॥ 140**

**ದಿತ್ಯಾ ಪುತ್ರದ್ವಯಂ ಜಜ್ಞೇ ಕಶ್ಯಪಾದಿತಿ ನಃ ಶ್ರುತಮ್।**
**ಹಿರಣ್ಯಕಶಿಪುಶ್ಚೈವ ಹಿರಣ್ಯಾಕ್ಷಶ್ಚ ದುರ್ಜಯಃ॥ 141**

**ಸಿಂಹಿಕಾ ಚಾಭವತ್ಕನ್ಯಾ ವಿಪ್ರಚಿತ್ತೇಃ ಪರಿಗ್ರಹಃ।**
**ಹಿರಣ್ಯಕಶಿಪೋಃ ಪುತ್ರಾಶ್ಚತ್ವಾರಃ ಪ್ರಥಿತೌಜಸಃ॥ 142**

**ಅನುಹ್ಲಾದಶ್ಚ ಹ್ಲಾದಶ್ಚ ಪ್ರಹ್ಲಾದಶ್ಚೈವ ಬುದ್ಧಿಮಾನ್।**
**ಸಂಹ್ಲಾದಶ್ಚ ಮಹಾವೀರ್ಯಾ ದೈತ್ಯವಂಶವಿವರ್ಧನಾಃ॥ 143**

---

ಮತ್ತೆ ಹುಟ್ಟುತ್ತಾರೆ (138). ಅಲ್ಲದೆ ಇವರೆಲ್ಲರೂ ದೇವಗಣಗಳಿಗೆ ಸೇರಿದವರು. ಈ ದೇವಗಣಗಳಲ್ಲಿ ಮೂವತ್ತು ಮೂರು ದೇವತೆ*ಗಳು ವೇದೋಕ್ತರಾದವರು. ಆ ದೇವಗಣಗಳಿಗೂ ಸಹ ಲಯ-ಉತ್ಪತ್ತಿಗಳನ್ನು ಇಲ್ಲಿ ಹೇಳಲಾಗುತ್ತಿದೆ, ಹೇಗೆ ಸೂರ್ಯನಿಗೆ ಈ ಲೋಕದಲ್ಲಿ ಉದಯ ಅಸ್ತಮಗಳನ್ನು ಹೇಳಲಾಗುತ್ತಿದೆಯೋ ಹಾಗೆಯೇ ಇದು. ಮೈತ್ರೇಯ, ಈ ಪ್ರಕಾರದಲ್ಲಿ ದೇವಗಣಗಳು ಯುಗಯುಗದಲ್ಲಿಯೂ ಹುಟ್ಟುತ್ತಾರೆ (139-140). ಕಶ್ಯಪನಿಂದ ದಿತಿಯಲ್ಲಿ ವೀರರಾದ ಹಿರಣ್ಯಕಶಿಪು, ಹಿರಣ್ಯಾಕ್ಷ ರೆಂಬ ಇಬ್ಬರು ಪುತ್ರರು ಜನಿಸಿದರೆಂದು ನಾವು ಕೇಳಿದ್ದೇವೆ, ಮತ್ತು ದಿತಿಯಲ್ಲಿ ಸಿಂಹಿಕಾ ಎಂಬ ಮಗಳು ಜನಿಸಿ ವಿಪ್ರಚಿತ್ತಿಯ ಹೆಂಡತಿ ಯಾದಳು. ಹಿರಣ್ಯಕಶಿಪುವಿಗೆ ವಿಖ್ಯಾತಪೌರುಷರಾದ ನಾಲ್ವರು ಮಕ್ಕಳಿದ್ದರು (141-142). ಅನುಹ್ಲಾದ, ಹ್ಲಾದ, ಬುದ್ಧಿಶಾಲಿಯಾದ

---

* ಅಷ್ಟವಸುಗಳು, ದ್ವಾದಶಾದಿತ್ಯರು, ಏಕಾದಶರುದ್ರರು, ಪ್ರಜಾಪತಿ ಮತ್ತು ವಷಟ್ಕಾರ.

**ತೇಷಾಂ ಮಧ್ಯೇ ಮಹಾಭಾಗ ಸರ್ವತ್ರ ಸಮದೃಗ್ವಶೀ।**
**ಪ್ರಹ್ಲಾದಃ ಪರಮಾಂ ಭಕ್ತಿಂ ಯ ಉವಾಹ ಜನಾರ್ದನೇ॥ 144**

**ದೈತ್ಯೇಂದ್ರದೀಪಿತೋ ವಹ್ನಿಃ ಸರ್ವಾಂಗೋಪಚಿತೋ ದ್ವಿಜ।**
**ನ ದದಾಹ ಚ ಯಂ ವಿಪ್ರ ವಾಸುದೇವೇ ಹೃದಿ ಸ್ಥಿತೇ॥ 145**

**ಮಹಾರ್ಣವಾಂತಃ ಸಲಿಲೇ ಸ್ಥಿತಸ್ಯ ಚಲತೋ ಮಹೀ।**
**ಚಚಾಲ ಸಕಲಾ ಯಸ್ಯ ಪಾಶಬದ್ಧಸ್ಯ ಧೀಮತಃ॥ 146**

**ನ ಭಿನ್ನಂ ವಿವಿಧೈಃ ಶಸ್ತ್ರೈರ್ಯಸ್ಯ ದೈತ್ಯೇಂದ್ರಪಾತಿತೈಃ।**
**ಶರೀರಮದ್ರಿಕಠಿನಂ ಸರ್ವತ್ರಾಚ್ಯುತ ಚೇತಸಃ॥ 147**

**ವಿಷಾನಲೋಜ್ಜ್ವಲಮುಖಾ ಯಸ್ಯ ದೈತ್ಯಪ್ರಚೋದಿತಾಃ।**
**ನಾಂತಾಯ ಸರ್ಪಪತಯೋ ಬಭೂವುರುರುತೇಜಸಃ॥ 148**

---

ಪ್ರಹ್ಲಾದ, ಸಂಹ್ಲಾದ—ಎಂಬ ಅವರು ಮಹಾವೀರರೂ ದೈತ್ಯವಂಶವನ್ನು ಬೆಳೆಸತಕ್ಕವರೂ ಆದರು. ಅವರಲ್ಲಿ ಮೈತ್ರೇಯ, ಪ್ರಹ್ಲಾದನು ಸಮದರ್ಶಿಯೂ ಜಿತೇಂದ್ರಿಯನೂ ಆಗಿದ್ದನಲ್ಲದೆ, ಜನಾರ್ದನನಲ್ಲಿ ಪರಮಭಕ್ತಿಯುಳ್ಳವನಾಗಿದ್ದನು (143-144). ದೈತ್ಯರಾಜನಾದ ಹಿರಣ್ಯ ಕಶಿಪು, ಮೈತ್ರೇಯ, ಪ್ರಹ್ಲಾದನ ಸರ್ವಾಂಗಗಳನ್ನು ವ್ಯಾಪಿಸುವಂತೆ ಬೆಂಕಿ ಯನ್ನು ಹೊತ್ತಿಸಿದರೂ ಆತನ ಹೃದಯದಲ್ಲಿ ವಾಸುದೇವನು ನೆಲೆಸಿದ್ದ ರಿಂದ ಆತನನ್ನು ಬೆಂಕಿಯು ಸುಡಲಿಲ್ಲ (145). ಧೀಮಂತನಾದ ಆತನನ್ನು ಹಗ್ಗದಲ್ಲಿ ಕಟ್ಟಿ ಮಹಾಸಾಗರದ ಜಲದಲ್ಲಿ ಎಸೆದಾಗ, ಆತನು ಚಲಿಸು ತ್ತಿದ್ದರೆ ಭೂಮಂಡಲವೇ ಚಲಿಸತೊಡಗಿತು. ಎಲ್ಲೆಡೆಯೂ ವಿಷ್ಣುವನ್ನೇ ಚಿತ್ತದಲ್ಲಿ ಕಾಣುತ್ತಿದ್ದ ಪ್ರಹ್ಲಾದನ ಶರೀರವು ಪರ್ವತದಂತೆ ಕಠಿನವಾದ್ದ ರಿಂದ, ದೈತ್ಯೇಂದ್ರನು ಚಲಾಯಿಸಿದ ವಿವಿಧ ಶಸ್ತ್ರಗಳು ಆತನನ್ನು ಛಿನ್ನಭಿನ್ನ ವಾಗಿ ಮಾಡಲಾರದೆ ಹೋದವು (146-147). ಹಿರಣ್ಯಕಶಿಪುವಿನಿಂದ ಪ್ರೇರಿತಗಳಾದ ಪ್ರಬಲಸರ್ಪಗಳು ಬಾಯಿಂದ ವಿಷಾಗ್ನಿಯನ್ನು ಉಗುಳು ತ್ತಿದ್ದರೂ ತೇಜಸ್ವಿಯಾದ ಪ್ರಹ್ಲಾದನನ್ನು ಕೊಲ್ಲಲಾರದೆ ಹೋದವು. ಬೆಟ್ಟಗಳನ್ನು ದೇಹದ ಮೇಲೆ ತಳ್ಳಿದರೂ ಆತನು ಪುರುಷೋತ್ತಮನನ್ನು

**ಶೈಲೈರಾಕ್ರಾಂತದೇಹೋಽಪಿ ಯಃ ಸ್ಮರನ್ ಪುರುಷೋತ್ತಮಮ್ ।**
**ತತ್ಯಾಜ ನಾತ್ಮನಃ ಪ್ರಾಣಾನ್ ವಿಷ್ಣುಸ್ಮರಣದಂಶಿತಃ ॥ 149**

**ಪತಂತಮುಚ್ಚಾದವನಿರ್ಯಮುಪೇತ್ಯ ಮಹಾಮತಿಮ್ ।**
**ದಧಾರ ದೈತ್ಯಪತಿನಾ ಕ್ಷಿಪ್ತಂ ಸ್ವರ್ಗನಿವಾಸಿನಾ ॥ 150**

**ಯಸ್ಯ ಸಂಶೋಷಕೋ ವಾಯುರ್ದೇಹೇ ದೈತ್ಯೇಂದ್ರಯೋಜಿತಃ ।**
**ಅವಾಪ ಸಂಕ್ಷಯಂ ಸದ್ಯಶ್ಚಿತ್ತಸ್ಥೇ ಮಧುಸೂದನೇ ॥ 151**

**ವಿಷಾಣಭಂಗಮುನ್ಮತ್ತಾ ಮದಹಾನಿಂ ಚ ದಿಗ್ಗಜಾಃ ।**
**ಯಸ್ಯ ವಕ್ಷಃಸ್ಥಲೇ ಪ್ರಾಪ್ತಾ ದೈತ್ಯೇಂದ್ರಪರಿಣಾಮಿತಾಃ ॥ 152**

**ಯಸ್ಯ ಚೋತ್ಪಾದಿತಾ ಕೃತ್ಯಾ ದೈತ್ಯರಾಜಪುರೋಹಿತೈಃ ।**
**ಬಭೂವ ನಾಂತಾಯ ಪುರಾ ಗೋವಿಂದಾಸಕ್ತಚೇತಸಃ ॥ 153**

**ಶಂಬರಸ್ಯ ಚ ಮಾಯಾನಾಂ ಸಹಸ್ರಮತಿಮಾಯಿನಃ ।**
**ಯಸ್ಮಿನ್ ಪ್ರಯುಕ್ತಂ ಚಕ್ರೇಣ ಕೃಷ್ಣಸ್ಯ ವಿತಥೀಕೃತಮ್ ॥ 154**

---

ಧ್ಯಾನಿಸುತ್ತ, ವಿಷ್ಣುಸ್ಮರಣೆಯೇ ಕವಚವಾದ್ದರಿಂದ ಪ್ರಾಣವನ್ನು ಬಿಡಲಿಲ್ಲ (148-149). ದೈತ್ಯರಾಜನು ಸ್ವರ್ಗದಲ್ಲಿ ನಿಂತು ತಳ್ಳಲಾಗಿ ಎತ್ತರದಿಂದ ಕೆಳಗೆ ಬೀಳುತ್ತಿದ್ದ ಮಹಾಪ್ರಾಜ್ಞನಾದ ಪ್ರಹ್ಲಾದನನ್ನು ಭೂದೇವಿಯೇ ಸ್ವತಃ ಹೋಗಿ ಹಿಡಿದುಕೊಂಡಳು (150). ಆತನ ದೇಹವನ್ನು ಒಣಗಿಸಿಬಿಡಬೇಕೆಂದು ದೈತ್ಯರಾಜನಿಂದ ಪ್ರೇರಿತವಾದ ವಾಯುವು, ಮಧುಸೂದನನನ್ನು ಧ್ಯಾನಿಸುತ್ತಿದ್ದ ಪ್ರಹ್ಲಾದನ ದೇಹದಲ್ಲಿ ತಾನೇ ಒಣಗಿಹೋಯಿತು! ದೈತ್ಯೇಂದ್ರನು ನುಗ್ಗಿಸಿದ ಮದಿಸಿದ ದಿಗ್ಗಜಗಳು ಆತನ ಎದೆಯನ್ನು ತಿವಿದು ತಮ್ಮ ದಂತಗಳನ್ನೆ ಮುರಿದುಕೊಂಡು ಮದಹೀನವಾದವು! (151-152). ದೈತ್ಯರಾಜನ ಪುರೋಹಿತರು ಅಭಿಚಾರದಿಂದ ನಿರ್ಮಿಸಿದ ಕೃತ್ಯೆಯು ಗೋವಿಂದಭಕ್ತನಾದ ಪ್ರಹ್ಲಾದನನ್ನು ವಧಿಸಲು ಸಮರ್ಥವಾಗಲಿಲ್ಲ. ಅತ್ಯಂತಮಾಯಾವಿಯಾದ ಶಂಬರನು ಸಾವಿರಾರು ಮಾಯೆಗಳನ್ನು ಆತನ ಮೇಲೆ ಪ್ರಯೋಗಿಸಲು, ವಿಷ್ಣುವಿನ ಚಕ್ರದಿಂದ ಎಲ್ಲವೂ ನಿರ್ನಾಮವಾದವು (153-154). ದೈತ್ಯರಾಜನ ಅಡಿಗೆಯವರು ಹಾಲಾಹಲ

**ದೈತ್ಯೇಂದ್ರಸೂದೋಪಹೃತಂ ಯಸ್ಯ ಹಾಲಾಹಲಂ ವಿಷಮ್।**
**ಜರಯಾಮಾಸ ಮತಿಮಾನವಿಕಾರಮಮತ್ಸರೀ॥** 155

**ಸಮಚೇತಾ ಜಗತ್ಯಸ್ಮಿನ್ ಯಃ ಸರ್ವೇಷ್ವೇವ ಜಂತುಷು।**
**ಯಥಾತ್ಮನಿ ತಥಾನ್ಯೇಷಾಂ ಪರಂ ಮೈತ್ರಗುಣಾನ್ವಿತಃ॥** 156

**ಧರ್ಮಾತ್ಮಾ ಸತ್ಯಶೌರ್ಯಾದಿಗುಣಾನಾಮಾಕರಃ ಪರಃ।**
**ಉಪಮಾನಮಶೇಷಾಣಾಂ ಸಾಧೂನಾಂ ಯಃ ಸದಾಭವತ್॥** 157

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಪಂಚದಶೋಽಧ್ಯಾಯಃ

---

ವಿಷವನ್ನು ಪ್ರಹ್ಲಾದನಿಗೆ ಕೊಟ್ಟರು. ಆ ಬುದ್ಧಿಶಾಲಿಯು ಯಾವ ದ್ವೇಷವೂ ಇಲ್ಲದೆ ನಿರ್ವಿಕಾರಭಾವದಿಂದ ಕುಡಿದು ಜೀರ್ಣಸಿಕೊಂಡನು (155). ಪ್ರಹ್ಲಾದನು ಈ ಜಗತ್ತಿನಲ್ಲಿರುವ ಸಕಲ ಜಂತುಗಳಲ್ಲಿಯೂ ಸಮಚಿತ್ತನಾಗಿದ್ದು, ತನ್ನ ವಿಷಯದಲ್ಲಿ ಹೇಗೋ ಹಾಗೆ ಅನ್ಯರನ್ನು ಕಾಣುತ್ತ ಮೈತ್ರಭಾವದಿಂದ ಇದ್ದನು. ಅವನು ಧರ್ಮಾತ್ಮನೂ ಸತ್ಯಶೌರ್ಯಾದಿ ಸಕಲ ಸದ್ಗುಣಗಳ ಗಣಿಯೂ ಆಗಿ ಸಮಸ್ತ ಸಜ್ಜನರಿಗೆ ಆದರ್ಶಭೂತನಾಗಿದ್ದನು (156-157).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹದಿನೈದನೆಯ ಅಧ್ಯಾಯ ಮುಗಿಯಿತು.



## ಷೋಡಶೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಕಥಿತೋ ಭವತಾ ವಂಶೋ ಮಾನವಾನಾಂ ಮಹಾತ್ಮನಾಮ್।**
**ಕಾರಣಂ ಚಾಸ್ಯ ಜಗತೋ ವಿಷ್ಣುರೇವ ಸನಾತನಃ॥** 1

**ಯತ್ತ್ವೇತದ್ ಭಗವಾನಾಹ ಪ್ರಹ್ಲಾದಂ ದೈತ್ಯಸತ್ತಮಮ್।**
**ದದಾಹ ನಾಗ್ನಿರ್ನಾಸ್ತ್ರೈಶ್ಚ ಕ್ಷುಣ್ಣಸ್ತತ್ಯಾಜ ಜೀವಿತಮ್॥** 2

**ಜಗಾಮ ವಸುಧಾ ಕ್ಷೋಭಂ ಯತ್ರಾಬ್ಧಿಸಲಿಲೇ ಸ್ಥಿತೇ।**
**ಪಾಶೈರ್ಬದ್ಧೇ ವಿಚಲತಿ ವಿಕ್ಷಿಪ್ತಾಂಗೈಃ ಸಮಾಹತಾ॥** 3

**ಶೈಲೈರಾಕ್ರಾಂತದೇಹೋಽಪಿ ನ ಮಮಾರ ಚ ಯಃ ಪುರಾ।**
**ತ್ವಯಾ ಚಾತೀವ ಮಾಹಾತ್ಮ್ಯಂ ಕಥಿತಂ ಯಸ್ಯ ಧೀಮತಃ॥** 4

---

## ಅಧ್ಯಾಯ 16

ಪ್ರಹ್ಲಾದನ ಚರಿತೆಯನ್ನು ಹೇಳಬೇಕೆಂದು ಮೈತ್ರೇಯರ ಪ್ರಶ್ನೆ

ಮೈತ್ರೇಯರು ಹೇಳಿದರು: "ಮಹರ್ಷಿಗಳೇ, ಮಹಾತ್ಮರಾದ ಮನು ಪುತ್ರರ ವಂಶವನ್ನೂ ಈ ಜಗತ್ತಿಗೆ ಸನಾತನನಾದ ವಿಷ್ಣುವೇ ಕಾರಣನೆಂಬು ದನ್ನೂ ಹೇಳಿದಿರಿ. ಆದರೆ ಪ್ರಹ್ಲಾದನು ದೈತ್ಯರಲ್ಲಿ ಶ್ರೇಷ್ಠನೆಂದು ಹೇಳಿದಿರಿ. ಅವನನ್ನು ಅಗ್ನಿಯು ಸುಡಲಿಲ್ಲ; ಅಸ್ತ್ರಗಳಿಂದ ಹೊಡೆದರೂ ಜೀವಿತವನ್ನು ತ್ಯಜಿಸಲಿಲ್ಲ (1-2); ಹಗ್ಗಗಳಿಂದ ಕಟ್ಟಿ ಸಮುದ್ರಜಲದಲ್ಲಿ ಹಾಕಿದಾಗ, ಆತನು ಚಲಿಸುತ್ತಿರಲು ಅವನ ಅಂಗಗಳು ತಾಕಿದ್ದರಿಂದ ಭೂಮಿಯೇ ಕ್ಷುಬ್ಧವಾಗಿ ಚಲಿಸತೊಡಗಿತು (3); ಬೆಟ್ಟಗಳನ್ನು ಆತನ ದೇಹದ ಮೇಲೆ ತಳ್ಳಿದರೂ ಸಾಯಲಿಲ್ಲ—ಹೀಗೆ ಧೀಮಂತನಾದ ಪ್ರಹ್ಲಾದನ ಮಹಿಮೆ ಯನ್ನು ನೀವು ವಿಶೇಷವಾಗಿ ಬಣ್ಣಿಸಿದಿರಿ. ವಿಷ್ಣುಭಕ್ತನಾದ ಆ ತೇಜಸ್ವಿಯ

**ತಸ್ಯ ಪ್ರಭಾವಮತುಲಂ ವಿಷ್ಣೋರ್ಭಕ್ತಿಮತೋ ಮುನೇ।**
**ಶ್ರೋತುಮಿಚ್ಛಾಮಿ ಯಸ್ಯೈತಚ್ಚರಿತಂ ದೀಪ್ತತೇಜಸಃ॥** 5

**ಕಿನ್ನಿಮಿತ್ತಮಸೌ ಶಸ್ತ್ರೈರ್ವಿಕ್ಷಿಪ್ತೋ ದಿತಿಜೈರ್ಮುನೇ।**
**ಕಿಮರ್ಥಂ ಚಾಬ್ಧಿಸಲಿಲೇ ವಿಕ್ಷಿಪ್ತೋ ಧರ್ಮತತ್ಪರಃ॥** 6

**ಆಕ್ರಾಂತಃ ಪರ್ವತೈಃ ಕಸ್ಮಾದ್ದಷ್ಟಶ್ಚೈವ ಮಹೋರಗೈಃ।**
**ಕ್ಷಿಪ್ತಃ ಕಿಮದ್ರಿಶಿಖರಾತ್ಕಿಂ ವಾ ಪಾವಕಸಂಚಯೇ॥** 7

**ದಿಗ್ದಂತಿನಾಂ ದಂತಭೂಮಿಂ ಸ ಚ ಕಸ್ಮಾನ್ನಿರೂಪಿತಃ।**
**ಸಂಶೋಷಕೋಽನಿಲಶ್ಚಾಸ್ಯ ಪ್ರಯುಕ್ತಃ ಕಿಂ ಮಹಾಸುರೈಃ॥** 8

**ಕೃತ್ಯಾಂ ಚ ದೈತ್ಯಗುರವೋ ಯುಯುಜುಸ್ತತ್ರ ಕಿಂ ಮುನೇ।**
**ಶಂಬರಶ್ಚಾಪಿ ಮಾಯಾನಾಂ ಸಹಸ್ರಂ ಕಿಂ ಪ್ರಯುಕ್ತವಾನ್॥** 9

**ಹಾಲಾಹಲಂ ವಿಷಮಹೋ ದೈತ್ಯಸೂದೈರ್ಮಹಾತ್ಮನಃ।**
**ಕಸ್ಮಾದ್ದತ್ತಂ ವಿನಾಶಾಯ ಯಜ್ಜೀರ್ಣಂ ತೇನ ಧೀಮತಾ॥** 10

---

ಅಸಾಧಾರಣವಾದ ಮಹಿಮೆಯನ್ನೂ ಚರಿತೆಯನ್ನೂ ವಿಸ್ತಾರವಾಗಿ ಕೇಳಬೇಕೆಂದಿದ್ದೇನೆ (4-5). ದೈತ್ಯರು ಅವನನ್ನು ಆಯುಧಗಳಿಂದ ಹೊಡೆದದ್ದೇಕೆ? ಆ ಧರ್ಮಶೀಲನನ್ನು ಸಮುದ್ರಜಲದಲ್ಲಿ ಎಸೆದದ್ದೇಕೆ? ಪರ್ವತಗಳನ್ನು ಅವನ ಮೇಲೆ ತಳ್ಳಿದ್ದು, ಘೋರ ಸರ್ಪಗಳಿಂದ ಕಚ್ಚಿಸಿದ್ದು, ಪರ್ವತ ಶಿಖರದಿಂದ ಉರುಳಿಸಿದ್ದು, ಬೆಂಕಿಯಲ್ಲಿ ಬೀಳಿಸಿದ್ದು—ಇದೆಲ್ಲ ಯಾವ ಕಾರಣದಿಂದ? (6-7). ದಿಗ್ಗಜಗಳ ದಾಡೆಗಳಿಂದ ಅವನನ್ನು ತಿವಿಸಿದ್ದೇಕೆ? ಒಣಗಿಸಬೇಕೆಂದು ವಾಯುವನ್ನು ಪ್ರೇರಿಸಿದ್ದೇಕೆ? ದೈತ್ಯ ಪುರೋಹಿತರು ಕೃತ್ಯೆಯನ್ನು ಯಾವ ಕಾರಣದಿಂದ ಪ್ರಯೋಗಿಸಿದರು? ಶಂಬರನೂ ಸಹ ಸಾವಿರಾರು ಮಾಯಾಶಕ್ತಿಗಳನ್ನು ಏಕೆ ಬಳಸಿದನು? (8-9). ಹಿರಣ್ಯಕಶಿಪುವಿನ ಅಡಿಗೆಯವರು ಆ ಮಹಾತ್ಮನಿಗೆ, ಅಯ್ಯೊ! ಸಾಯಲೆಂದು ಹಾಲಾಹಲವಿಷವನ್ನೇಕೆ ಕುಡಿಸಿದರು? ಅದನ್ನೂ ಸಹ ಪ್ರಹ್ಲಾದನು ಜೀರ್ಣಿಸಿಕೊಂಡುಬಿಟ್ಟನಲ್ಲ! (10). ಓ ಮಹಾತ್ಮರೆ, ಮಹಾತ್ಮ

**ಏತತ್ಸರ್ವಂ ಮಹಾಭಾಗ ಪ್ರಹ್ಲಾದಸ್ಯ ಮಹಾತ್ಮನಃ।**
**ಚರಿತಂ ಶ್ರೋತುಮಿಚ್ಛಾಮಿ ಮಹಾಮಾಹಾತ್ಮ್ಯಸೂಚಕಮ್॥ 11**

**ನ ಹಿ ಕೌತೂಹಲಂ ತತ್ರ ಯದ್ದೈತ್ಯೈರ್ನ ಹತೋ ಹಿ ಸಃ।**
**ಅನನ್ಯಮನಸೋ ವಿಷ್ಣೌ ಕಃ ಸಮರ್ಥೋ ನಿಪಾತನೇ॥ 12**

**ತಸ್ಮಿನ್ ಧರ್ಮಪರೇ ನಿತ್ಯಂ ಕೇಶವಾರಾಧನೋದ್ಯತೇ।**
**ಸ್ವವಂಶಪ್ರಭವೈರ್ದೈತ್ಯೈಃ ಕೃತೋ ದ್ವೇಷೋಽತಿದುಷ್ಕರಃ॥ 13**

**ಧರ್ಮಾತ್ಮನಿ ಮಹಾಭಾಗೇ ವಿಷ್ಣುಭಕ್ತೇ ವಿಮತ್ಸರೇ।**
**ದೈತೇಯೈಃ ಪ್ರಹೃತಂ ಕಸ್ಮಾತ್ತನ್ಮಮಾಖ್ಯಾತುಮರ್ಹಸಿ॥ 14**

**ಪ್ರಹರಂತಿ ಮಹಾತ್ಮಾನೋ ವಿಪಕ್ಷಾ ಅಪಿ ನೇದೃಶೇ।**
**ಗುಣೈಸ್ಸಮನ್ವಿತೇ ಸಾಧೌ ಕಿಂ ಪುನರ್ಯಃ ಸ್ವಪಕ್ಷಜಃ॥ 15**

---

ನಾದ ಪ್ರಹ್ಲಾದನ ಈ ಎಲ್ಲ ಚರಿತೆಯನ್ನೂ ಕೇಳಲಿಚ್ಛಿಸುತ್ತೇನೆ. ಇದು ಆತನ ಮಹಾಮಹಿಮೆಯನ್ನು ಸೂಚಿಸುತ್ತದೆ. ದೈತ್ಯರಿಂದ ಆತನನ್ನು ವಧಿಸಲಾಗಲಿಲ್ಲ ಎಂಬುದೇನೂ ನನಗೆ ಆಶ್ಚರ್ಯವಾಗಿ ಕಾಣಿಸುವುದಿಲ್ಲ. ವಿಷ್ಣುವಿನ ಅನನ್ಯ ಭಕ್ತನನ್ನು ಯಾರಿಂದ ವಧಿಸಲು ಸಾಧ್ಯ? (11-12). ಆದರೆ ಸದಾ ಧರ್ಮಶೀಲನೂ ವಿಷ್ಣುವಿನ ಆರಾಧನೆಯಲ್ಲಿ ತತ್ಪರನೂ ಆದವನಲ್ಲಿ ಅವನ ವಂಶೀಯರೇ ಆದ ದೈತ್ಯರು ಅಷ್ಟು ದ್ವೇಷವನ್ನು ತೋರಿಸಿದರಲ್ಲ, ಅದು ಮಾತ್ರ ಯಾರೂ ಮಾಡತಕ್ಕದ್ದಲ್ಲ (13). ಧರ್ಮಾತ್ಮನೂ ಮಹಾಭಾಗನೂ ದ್ವೇಷರಹಿತನೂ ಆದ ವಿಷ್ಣುಭಕ್ತನಿಗೆ ದೈತ್ಯರು ಆದೇಕೆ ಅಷ್ಟು ಕಷ್ಟವನ್ನಿತ್ತರು? ಅದನ್ನು ನನಗೆ ಹೇಳೋಣವಾಗ ಬೇಕು (14). ಈ ರೀತಿಯಲ್ಲಿ ಗುಣಶಾಲಿಯೂ ಸಾಧುವೂ ಆದವನಿಗೆ, ಮಹಾಜನರು ಶತ್ರುಗಳಾದರೂ ಸಹ ಪೀಡೆಯನ್ನು ಕೊಡುವುದಿಲ್ಲ. ಹೀಗಿರುವಾಗ ಸ್ವಪಕ್ಷದವರೇ ಪೀಡಿಸುವುದಿಲ್ಲವೆಂದು ಹೇಳಬೇಕಾದ್ದಿಲ್ಲ (15). ಆದ್ದರಿಂದ ಮುನಿಶ್ರೇಷ್ಠರೇ, ಇದೆಲ್ಲವನ್ನೂ ವಿಸ್ತಾರವಾಗಿ ನಿರೂಪಿಸ

**ತದೇತತ್ ಕಥ್ಯತಾಂ ಸರ್ವಂ ವಿಸ್ತರಾನ್ಮುನಿಪುಂಗವ।**
**ದೈತ್ಯೇಶ್ವರಸ್ಯ ಚರಿತಂ ಶ್ರೋತುಮಿಚ್ಛಾಮ್ಯಶೇಷತಃ॥ 16**

**ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಷೋಡಶೋಽಧ್ಯಾಯಃ**

---

ಬೇಕು. ಈ ದೈತ್ಯರಾಜನ ಚರಿತೆಯನ್ನು ಪೂರ್ಣವಾಗಿ ಕೇಳಬೇಕೆಂದು ಅಪೇಕ್ಷಿಸುತ್ತೇನೆ" (16).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹದಿನಾರನೆಯ ಅಧ್ಯಾಯ ಮುಗಿಯಿತು.



## ಸಪ್ತದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಮೈತ್ರೇಯ ಶ್ರೂಯತಾಂ ಸಮ್ಯಕ್ ಚರಿತಂ ತಸ್ಯ ಧೀಮತಃ।**
**ಪ್ರಹ್ಲಾದಸ್ಯ ಸದೋದಾರಚರಿತಸ್ಯ ಮಹಾತ್ಮನಃ॥** 1

**ದಿತೇಃ ಪುತ್ರೋ ಮಹಾವೀರ್ಯೋ ಹಿರಣ್ಯಕಶಿಪುಃ ಪುರಾ।**
**ತ್ರೈಲೋಕ್ಯಂ ವಶಮಾನಿನ್ಯೇ ಬ್ರಹ್ಮಣೋ ವರದರ್ಪಿತಃ॥** 2

**ಇಂದ್ರತ್ವಮಕರೋದ್ದೈತ್ಯಃ ಸ ಚಾಸೀತ್ ಸವಿತಾ ಸ್ವಯಮ್।**
**ವಾಯುರಗ್ನಿರಪಾಂ ನಾಥಃ ಸೋಮಶ್ಚಾಭೂನ್ಮಹಾಸುರಃ॥** 3

**ಧನಾನಾಮಧಿಪಃ ಸೋಽಭೂತ್ ಸ ಏವಾಸೀತ್ ಸ್ವಯಂ ಯಮಃ।**
**ಯಜ್ಞಭಾಗಾನಶೇಷಾಂಸ್ತು ಸ ಸ್ವಯಂ ಬುಭುಜೇಽಸುರಃ॥** 4

---

### ಅಧ್ಯಾಯ 17

ಹಿರಣ್ಯಕಶಿಪುವಿನ ದಿಗ್ವಿಜಯ. ಪ್ರಹ್ಲಾದನ ವಿಷ್ಣುಭಕ್ತಿಯನ್ನರಿತು ಹಿರಣ್ಯಕಶಿಪು ಕೋಪದಿಂದ ಅವನನ್ನು ಕೊಲ್ಲಿಸಲು ಪ್ರಯತ್ನಿಸುವುದು. ಪ್ರಹ್ಲಾದನಿಂದ ದೈತ್ಯ ಬಾಲಕರಿಗೆ ಹಿತೋಪದೇಶ.

ಪರಾಶರರು ಹೇಳಿದರು: ಮೈತ್ರೇಯ, ಧೀಮಂತನೂ ಉದಾರ ಶೀಲನೂ ಮಹಾತ್ಮನೂ ಆದ ಆ ಪ್ರಹ್ಲಾದನ ಚರಿತ್ರೆಯನ್ನು ಸರಿಯಾಗಿ ಆಲಿಸು. ದಿತಿಯ ಪುತ್ರನಾದ ಹಿರಣ್ಯಕಶಿಪು ಮಹಾವೀರ. ಆತನು ಹಿಂದೆ ಬ್ರಹ್ಮನ ವರದಿಂದ ದೃಪ್ತನಾಗಿ ತ್ರೈಲೋಕ್ಯವನ್ನು ವಶಪಡಿಸಿಕೊಂಡನು (1-2). ಆ ಮಹಾಸುರನು ದೇವೇಂದ್ರಪದವಿಯನ್ನು ಸ್ವಾಧೀನಮಾಡಿ ಕೊಂಡು ತಾನೇ ಸೂರ್ಯನೂ ವಾಯುವೂ ಅಗ್ನಿಯೂ ವರುಣನೂ ಚಂದ್ರನೂ ಆಗಿಬಿಟ್ಟನು! ತಾನೇ ಕುಬೇರನೂ ಸ್ವಯಂ ಯಮನೂ ಆಗಿಬಿಟ್ಟ ನಲ್ಲದೆ, ಯಜ್ಞಭಾಗಗಳನ್ನೆಲ್ಲ ತಾನೇ ಭುಂಜಿಸುತ್ತಿದ್ದನು (3-4). ದೇವತೆ

**ದೇವಾಃ ಸ್ವರ್ಗಂ ಪರಿತ್ಯಜ್ಯ ತತ್ತ್ರಾಸಾನ್ಮುನಿಸತ್ತಮ।**
**ವಿಚೇರುರವನೌ ಸರ್ವೇ ಬಿಭ್ರಾಣಾ ಮಾನುಷೀಂ ತನುಮ್॥ 5**

**ಜಿತ್ವಾ ತ್ರಿಭುವನಂ ಸರ್ವಂ ತ್ರೈಲೋಕ್ಯೈಶ್ವರ್ಯದರ್ಪಿತಃ।**
**ಉಪಗೀಯಮಾನೋ ಗಂಧರ್ವೈರ್ಬುಭುಜೇ**
**ವಿಷಯಾನ್ ಪ್ರಿಯಾನ್॥ 6**

**ಪಾನಾಸಕ್ತಂ ಮಹಾತ್ಮಾನಂ ಹಿರಣ್ಯಕಶಿಪುಂ ತದಾ।**
**ಉಪಾಸಾಂಚಕ್ರಿರೇ ಸರ್ವೇ ಸಿದ್ಧಗಂಧರ್ವಪನ್ನಗಾಃ॥ 7**

**ಅವಾದಯನ್ ಜಗುಶ್ಚಾನ್ಯೇ ಜಯಶಬ್ದಂ ತಥಾಪರೇ।**
**ದೈತ್ಯರಾಜಸ್ಯ ಪುರತಶ್ಚಕ್ರುಃ ಸಿದ್ಧಾ ಮುದಾನ್ವಿತಾಃ॥ 8**

**ತತ್ರ ಪ್ರನೃತ್ತಾಪ್ಸರಸಿ ಸ್ಫಾಟಿಕಾಭ್ರಮಯೇಽಸುರಃ।**
**ಪಪೌ ಪಾನಂ ಮುದಾ ಯುಕ್ತಃ ಪ್ರಸಾದೇ ಸುಮನೋಹರೇ॥ 9**

**ತಸ್ಯ ಪುತ್ರೋ ಮಹಾಭಾಗಃ ಪ್ರಹ್ಲಾದೋ ನಾಮ ನಾಮತಃ।**
**ಪಪಾಠ ಬಾಲಪಾಠ್ಯಾನಿ ಗುರುಗೇಹಂಗತೋಽರ್ಭಕಃ॥ 10**

---

ಗಳು ಅವನ ಉಪಟಳವನ್ನು ತಾಳಲಾರದೆ ಹೆದರಿ ಸ್ವರ್ಗವನ್ನು ತ್ಯಜಿಸಿ ಭೂಲೋಕದಲ್ಲಿ ಮನುಷ್ಯವೇಷದಿಂದ ಸಂಚರಿಸುತ್ತಿದ್ದರು! ಹಿರಣ್ಯಕಶಿಪು ಮೂರು ಲೋಕಗಳನ್ನು ಗೆದ್ದು ತ್ರೈಲೋಕ್ಯಾಧಿಪತ್ಯದಿಂದ ಸೊಕ್ಕಿ, ಗಂಧರ್ವರಿಂದ ಸ್ತುತಿಸಲ್ಪಡುತ್ತ ತನಗೆ ಇಷ್ಟವಾದ ವಿಷಯಸುಖಗಳನ್ನು ಅನುಭವಿಸುತ್ತಿದ್ದನು (5-6). ಪಾನಾಸಕ್ತನಾಗಿದ್ದ ಆ ಮಹಾತ್ಮ ಹಿರಣ್ಯಕಶಿಪುವನ್ನು ಎಲ್ಲ ಸಿದ್ಧಗಂಧರ್ವಪನ್ನಗರೂ ಸೇವಿಸಿಕೊಂಡಿದ್ದರು. ಆ ದೈತ್ಯರಾಜನೆದುರಿಗೆ ಸಿದ್ಧರು ಸಂತೋಷದಿಂದಲೇ ವಾದ್ಯಗಳನ್ನು ನುಡಿಸುತ್ತ ಹಾಡುತ್ತ 'ಜಯ ಜಯ' ಎಂದು ಘೋಷಿಸುತ್ತ ಇದ್ದರು (7-8). ಸ್ಫಟಿಕಮಯವಾದ ಮನೋಹರಪ್ರಾಸಾದದಲ್ಲಿ ಅಪ್ಸರೆಯರು ನೃತ್ಯಮಾಡುತ್ತಿರುವಾಗ ಈ ದೈತ್ಯನು ಮದ್ಯವನ್ನು ಕುಡಿಯುತ್ತ ನಲಿಯುತ್ತಿದ್ದನು. ಅವನ ಪುತ್ರನೂ ಮಹಾತ್ಮನೂ ಆದ ಪ್ರಹ್ಲಾದನೆಂಬ ಬಾಲಕನು ಗುರುವಿನ ಮನೆಗೆ ಹೋಗಿ ಬಾಲ್ಯಪಾಠಗಳನ್ನು ಕಲಿಯುತ್ತಿದ್ದನು (9-10). ಒಂದು ಸಲ ತಂದೆಯಾದ

**ಏಕದಾ ತು ಸ ಧರ್ಮಾತ್ಮಾ ಜಗಾಮ ಗುರುಣಾ ಸಹ।**
**ಪಾನಾಸಕ್ತಸ್ಯ ಪುರತಃ ಪಿತುರ್ದೈತ್ಯಪತೇಸ್ತದಾ॥** 11

**ಪಾದಪ್ರಣಾಮಾವನತಂ ತಮುತ್ಥಾಪ್ಯ ಪಿತಾ ಸುತಮ್।**
**ಹಿರಣ್ಯಕಶಿಪುಃ ಪ್ರಾಹ ಪ್ರಹ್ಲಾದಮಮಿತೌಜಸಮ್॥** 12

*ಹಿರಣ್ಯಕಶಿಪುರುವಾಚ:*

**ಪಠ್ಯತಾಂ ಭವತಾ ವತ್ಸ ಸಾರಭೂತಂ ಸುಭಾಷಿತಮ್।**
**ಕಾಲೇನೈತಾವತಾ ಯತ್ತೇ ಸದೋದ್ಯುಕ್ತೇನ ಶಿಕ್ಷಿತಮ್॥** 13

*ಪ್ರಹ್ಲಾದ ಉವಾಚ:*

**ಶ್ರೂಯತಾಂ ತಾತ ವಕ್ಷ್ಯಾಮಿ ಸಾರಭೂತಂ ತವಾಜ್ಞಯಾ।**
**ಸಮಾಹಿತಮನಾ ಭೂತ್ವಾ ಯನ್ಮೇ ಚೇತಸ್ಯವಸ್ಥಿತಮ್॥** 14

**ಅನಾದಿಮಧ್ಯಾಂತಮಜಮವೃದ್ಧಿಕ್ಷಯಮಚ್ಯುತಮ್।**
**ಪ್ರಣತೋಽಸ್ಮಿ ಮಹಾತ್ಮಾನಂ ಸರ್ವಕಾರಣಕಾರಣಮ್॥** 15

---

ದೈತ್ಯರಾಜನು ಪಾನಾಸಕ್ತನಾಗಿದ್ದಾಗ, ಆ ಬಾಲಕನು ತನ್ನ ಗುರುವಿನೊಡನೆ ಅಲ್ಲಿಗೆ ಬಂದನು. ಅವನು ತಂದೆಯ ಪಾದಗಳಿಗೆ ನಮಸ್ಕರಿಸಲಾಗಿ, ಹಿರಣ್ಯಕಶಿಪು ಮಗನಾದ ತೇಜಸ್ವಿ ಪ್ರಹ್ಲಾದನನ್ನು ಎತ್ತಿ "ಮಗು, ನೀನು ಸದಾ ಕಲಿಯುತ್ತ ಇದ್ದೀಯೆ. ಇಷ್ಟು ದಿನಗಳಲ್ಲಿ ನೀನು ಕಲಿತಿರುವ ಸಾರಭೂತವಾದ ಒಂದು ಸುಭಾಷಿತವನ್ನು ಹೇಳು" ಎಂದು ಕೇಳಿದನು (11-13). ಆಗ ಪ್ರಹ್ಲಾದನು "ಅಪ್ಪ, ನನ್ನ ಮನಸ್ಸಿನಲ್ಲಿರುವ ಸಾರಭೂತ ವಾದ ವಿಚಾರವನ್ನು ನಿನ್ನ ಆಜ್ಞೆಯಂತೆ ಎಚ್ಚರಿಕೆಯಿಂದ ಹೇಳುವೆನು. ಏನೆಂದರೆ, 'ಆದಿಮಧ್ಯಾಂತಶೂನ್ಯನೂ ಅಜನೂ ವೃದ್ಧಿಕ್ಷಯರಹಿತನೂ ಸರ್ವಕಾರಣಗಳಿಗೆ ಕಾರಣನೂ ಮಹಾತ್ಮನೂ ಆದ ವಿಷ್ಣುವಿಗೆ ನಮಸ್ಕರಿ ಸುತ್ತೇನೆ' " ಎಂದನು (14-15). ಈ ಮಾತನ್ನು ಕೇಳಿದೊಡನೆ ಹಿರಣ್ಯ ಕಶಿಪುವಿನ ಕಣ್ಣುಗಳು ಕೋಪದಿಂದ ಕೆಂಪಾದವು. ತುಟಿಗಳು ಅದುರಿದವು.

*ಶ್ರೀಪರಾಶರ ಉವಾಚ:*

**ಏತನ್ನಿಶಮ್ಯ ದೈತ್ಯೇಂದ್ರಃ ಸಕೋಪೋ ರಕ್ತಲೋಚನಃ।**
**ವಿಲೋಕ್ಯ ತದ್ಗುರುಂ ಪ್ರಾಹ ಸ್ಫುರಿತಾಧರಪಲ್ಲವಃ॥** 16

*ಹಿರಣ್ಯಕಶಿಪುರುವಾಚ:*

**ಬ್ರಹ್ಮಬಂಧೋ ಕಿಮೇತತ್ತೇ ವಿಪಕ್ಷಸ್ತುತಿಸಂಹಿತಮ್।**
**ಅಸಾರಂ ಗ್ರಾಹಿತೋ ಬಾಲೋ ಮಾಮವಜ್ಞಾಯ ದುರ್ಮತೇ॥**

*ಗುರುರುವಾಚ:*

**ದೈತ್ಯೇಶ್ವರ ನ ಕೋಪಸ್ಯ ವಶಮಾಗಂತುಮರ್ಹಸಿ।**
**ಮಮೋಪದೇಶಜನಿತಂ ನಾಯಂ ವದತಿ ತೇ ಸುತಃ॥** 18

*ಹಿರಣ್ಯಕಶಿಪುರುವಾಚ:*

**ಅನುಶಿಷ್ಟೋಽಸಿ ಕೇನೇದೃಗ್ವತ್ಸ ಪ್ರಹ್ಲಾದ ಕಥ್ಯತಾಮ್।**
**ಮಯೋಪದಿಷ್ಟಂ ನೇತ್ಯೇಷ ಪ್ರಬ್ರವೀತಿ ಗುರುಸ್ತವ॥** 19

---

ಅವನು ಪ್ರಹ್ಲಾದನ ಗುರುವನ್ನು ನೋಡಿ "ಏ ಬ್ರಾಹ್ಮಣಾಧಮ! ಏನಿದು? ನನ್ನನ್ನು ಅಲಕ್ಷಿಸಿ ನಿಃಸಾರವಾದ ವೈರಿಯ ಸ್ತುತಿಯನ್ನು ಈ ಹುಡುಗನಿಗೆ ಕಲಿಸಿದ್ದೀಯಾ? ದುರ್ಬುದ್ಧಿಯವನೆ!" ಎಂದು ಗದರಿಸಿದನು (16-17). ಅದಕ್ಕೆ ಗುರುವು "ದೈತ್ಯೇಶ್ವರ, ಕೋಪಿಸಿಕೊಳ್ಳಬಾರದು. ನಾನು ಕಲಿಸಿದ್ದನ್ನು ನಿನ್ನ ಮಗನು ಹೇಳುತ್ತಿಲ್ಲ" ಎಂದನು. ಆಗ ಹಿರಣ್ಯಕಶಿಪು "ವತ್ಸ-ಪ್ರಹ್ಲಾದ, ಈ ರೀತಿ ನಿನಗೆ ಹೇಳಿಕೊಟ್ಟವನು ಯಾರು? ಹೇಳು. ತಾನು ಕಲಿಸಿದ್ದನ್ನು ಹೇಳುತ್ತಿಲ್ಲವೆಂದು ನಿನ್ನ ಉಪಾಧ್ಯಾಯನು ಹೇಳುತ್ತಿದ್ದಾನೆ" ಎಂದನು (18-19). (ಅನಂತರ ಪ್ರಹ್ಲಾದನಿಗೂ ಹಿರಣ್ಯಕಶಿಪುವಿಗೂ ಹೀಗೆ ಸಂವಾದ ನಡೆಯಿತು) ಪ್ರಹ್ಲಾದ: ಹೃದಯದಲ್ಲಿ ನೆಲೆಸಿರುವ ವಿಷ್ಣುವು ಸಮಸ್ತ ಜಗತ್ತನ್ನೂ ನಿಯಮಿಸುತ್ತಾನೆ. ಆ ಪರಮಾತ್ಮನ ಹೊರತಾಗಿ,

*ಪ್ರಹ್ಲಾದ ಉವಾಚ:*

**ಶಾಸ್ತಾ ವಿಷ್ಣುರಶೇಷಸ್ಯ ಜಗತೋ ಯೋ ಹೃದಿ ಸ್ಥಿತಃ।**
**ತಮೃತೇ ಪರಮಾತ್ಮಾನಂ ತಾತ ಕಃ ಕೇನ ಶಾಸ್ಯತೇ॥** 20

*ಹಿರಣ್ಯಕಶಿಪುರುವಾಚ:*

**ಕೋಽಯಂ ವಿಷ್ಣುಃ ಸುದುರ್ಬುದ್ಧೇ ಯಂ ಬ್ರವೀಷಿ ಪುನಃ ಪುನಃ।**
**ಜಗತಾಮೀಶ್ವರಸ್ಯೇಹ ಪುರತಃ ಪ್ರಸಭಂ ಮಮ॥** 21

*ಪ್ರಹ್ಲಾದ ಉವಾಚ:*

**ನ ಶಬ್ದಗೋಚರಂ ಯಸ್ಯ ಯೋಗಿಧ್ಯೇಯಂ ಪರಂ ಪದಮ್।**
**ಯತೋ ಯಶ್ಚ ಸ್ವಯಂ ವಿಶ್ವಂ ಸ ವಿಷ್ಣುಃ ಪರಮೇಶ್ವರಃ॥** 22

*ಹಿರಣ್ಯಕಶಿಪುರುವಾಚ:*

**ಪರಮೇಶ್ವರಸಂಜ್ಞೋಽಜ್ಞ ಕಿಮನ್ಯೋ ಮಯ್ಯವಸ್ಥಿತೇ।**
**ತಥಾಪಿ ಮರ್ತುಕಾಮಸ್ತ್ವಂ ಪ್ರಬ್ರವೀಷಿ ಪುನಃ ಪುನಃ॥** 23

---

ತಂದೆಯೆ, ಯಾರು ಯಾರಿಗೆ ಉಪದೇಶಿಸಲು ಸಾಧ್ಯ? (20). ಹಿರಣ್ಯಕಶಿಪು: ಎಲಾ ದುರ್ಬುದ್ಧಿ! ವಿಷ್ಣುವೆನ್ನತಕ್ಕವನು ಯಾವನವನು? ಜಗತ್ತನ್ನು ನಿಯಮಿಸತಕ್ಕವನು ನಾನು. ನನ್ನೆದುರಿಗೇ ನಿಃಶಂಕೆಯಿಂದ ಮತ್ತೆ ಮತ್ತೆ ಹಾಗೆ ಹೇಳುತ್ತೀಯಾ? (21). ಪ್ರಹ್ಲಾದ: ಯೋಗಿಗಳು ಧ್ಯಾನಿಸತಕ್ಕ ಯಾವಾತನ ಪರಮಪದವು ಶಬ್ದಗಳಿಗೆ ಗೋಚರವಲ್ಲವೋ, ಯಾರಿಂದ ಈ ವಿಶ್ವ ಹುಟ್ಟಿದೆಯೋ, ಯಾವಾತನೇ ಸ್ವಯಂ ವಿಶ್ವವಾಗಿದ್ದಾನೋ ಆ ವಿಷ್ಣುವೇ ಪರಮೇಶ್ವರ (22). ಹಿರಣ್ಯಕಶಿಪು: ಎಲೈ ದಡ್ಡ! ನಾನಿರುವಾಗ ಪರಮೇಶ್ವರನೆಂಬ ಹೆಸರು ಬೇರೆ ಯಾರಿಗೆ ಇದ್ದೀತು? ಆದರೂ ನೀನು ಸಾಯಬೇಕೆಂದು ಈ ರೀತಿ ಪುನಃ ಪುನಃ ಹೇಳುತ್ತಿದ್ದೀಯೆ! (23). ಪ್ರಹ್ಲಾದ: ತಂದೆಯೆ, ಪರಬ್ರಹ್ಮನಾದ ವಿಷ್ಣುವು ನನಗೆ ಮಾತ್ರವಲ್ಲ, ಪ್ರಜೆಗಳಿಗೆ ಮಾತ್ರವಲ್ಲ, ನಿನಗೂ ಸಹ ಕರ್ತನೂ ನಿಯಾಮಕನೂ

*ಪ್ರಹ್ಲಾದ ಉವಾಚ:*

**ನ ಕೇವಲಂ ತಾತ ಮಮ ಪ್ರಜಾನಾಂ**
**ಸ ಬ್ರಹ್ಮಭೂತೋ ಭವತಶ್ಚ ವಿಷ್ಣುಃ।**
**ಧಾತಾ ವಿಧಾತಾ ಪರಮೇಶ್ವರಶ್ಚ।**
**ಪ್ರಸೀದ ಕೋಪಂ ಕುರುಷೇ ಕಿಮರ್ಥಮ್॥** 24

*ಹಿರಣ್ಯಕಶಿಪುರುವಾಚ:*

**ಹಿವಿಷ್ಟಃ ಕೋಽಸ್ಯ ಹೃದಯೇ ದುರ್ಬುದ್ಧೇರತಿಪಾಪಕೃತ್।**
**ಯೇನೇದೃಶಾನ್ಯಸಾಧೂನಿ ವದತ್ಯಾವಿಷ್ಟಮಾನಸಃ॥** 25

*ಪ್ರಹ್ಲಾದ ಉವಾಚ:*

**ನ ಕೇವಲಂ ಮದ್ಧೃದಯಂ ಸ ವಿಷ್ಣು-**
**ರಾಕ್ರಮ್ಯ ಲೋಕಾನಖಿಲಾನವಸ್ಥಿತಃ।**
**ಸ ಮಾಂ ತ್ವದಾದೀಂಶ್ಚ ಪಿತಸ್ಸಮಸ್ತಾನ್**
**ಸಮಸ್ತಚೇಷ್ಟಾಸು ಯುನಕ್ತಿ ಸರ್ವಗಃ॥** 26

---

ಪರಮೇಶ್ವರನೂ ಆಗಿದ್ದಾನೆ. ಏಕೆ ಸಿಟ್ಟಾಗುವೆ? ಪ್ರಸನ್ನನಾಗು (24). ಹಿರಣ್ಯಕಶಿಪು: ಈ ದುರ್ಬುದ್ಧಿಯ ಹೃದಯದಲ್ಲಿ ಯಾವ ಪಾಪಿಷ್ಠನು ಹೊಕ್ಕು ಕುಳಿತಿರಬಹುದು! ಯಾವಾತನಿಂದ ಆವಿಷ್ಟಚಿತ್ತನಾಗಿ ಈ ಬಗೆಯ ಕೆಟ್ಟ ಮಾತುಗಳನ್ನಾಡುತ್ತಿದ್ದಾನೆ? (25). ಪ್ರಹ್ಲಾದ: ನನ್ನ ಹೃದಯವನ್ನು ಮಾತ್ರವಲ್ಲ, ಸಮಸ್ತ ಪ್ರಾಣಿಗಳ ಹೃದಯವನ್ನೂ ವಿಷ್ಣುವು ಪ್ರವೇಶಿಸಿ ನೆಲೆಸಿದ್ದಾನೆ. ಓ ತಂದೆಯೇ, ಸರ್ವವ್ಯಾಪಿಯಾದ ಆತನು ನಿನ್ನಿಂದ ಹಿಡಿದು ಸಕಲರನ್ನೂ ಸಕಲ ಕ್ರಿಯೆಗಳಲ್ಲಿಯೂ ಪ್ರೇರಿಸುತ್ತಾನೆ (26). ಆಗ ಹಿರಣ್ಯ ಕಶಿಪು ತನ್ನ ಸೇವಕರನ್ನು ನೋಡಿ "ಆ ಪಾಪಿಯನ್ನು ಹೊರಗೆ ದಬ್ಬಿರಿ! ಗುರುವಿನ ಮನೆಯಲ್ಲಿ ಇವನಿಗೆ ತಕ್ಕ ಬುದ್ಧಿಯನ್ನು ಕಲಿಸತಕ್ಕದ್ದು. ನನ್ನ ವೈರಿಯನ್ನು ಹೊಗಳುವಂತೆ ಪ್ರೇರಿಸಿದ ದುಷ್ಟನು ಯಾವನು?" ಎಂದನು

*ಹಿರಣ್ಯಕಶಿಪುರುವಾಚ:*

**ನಿಷ್ಕಾಸ್ಯತಾಮಯಂ ಪಾಪಃ ಶಾಸ್ಯತಾಂ ಚ ಗುರೋರ್ಗೃಹೇ।**
**ಯೋಜಿತೋ ದುರ್ಮತಿಃ ಕೇನ ವಿಪಕ್ಷವಿಷಯಸ್ತುತೌ॥** 27

*ಶ್ರೀಪರಾಶರ ಉವಾಚ:*

**ಇತ್ಯುಕ್ತೋಽಸೌ ತದಾ ದೈತ್ಯೈರ್ನೀತೋ ಗುರುಗೃಹಂ ಪುನಃ।**
**ಜಗ್ರಾಹ ವಿದ್ಯಾಮನಿಶಂ ಗುರುಶುಶ್ರೂಷಣೋದ್ಯತಃ॥** 28

**ಕಾಲೇಽತೀತೇಽತಿಮಹತಿ ಪ್ರಹ್ಲಾದಮಸುರೇಶ್ವರಃ।**
**ಸಮಾಹೂಯಾಬ್ರವೀದ್ಗಾಥಾ ಕಾಚಿತ್ಪುತ್ರಕ ಗೀಯತಾಮ್॥** 29

*ಪ್ರಹ್ಲಾದ ಉವಾಚ:*

**ಯತಃ ಪ್ರಧಾನಪುರುಷೌ ಯತಶ್ಚೈತಚ್ಚರಾಚರಮ್।**
**ಕಾರಣಂ ಸಕಲಸ್ಯಾಸ್ಯ ಸ ನೋ ವಿಷ್ಣುಃ ಪ್ರಸೀದತು॥** 30

*ಹಿರಣ್ಯಕಶಿಪುರುವಾಚ:*

**ದುರಾತ್ಮಾ ವಧ್ಯತಾಮೇಷ ನಾನೇನಾರ್ಥೋಽಸ್ತಿ ಜೀವಿತಾ।**
**ಸ್ವಪಕ್ಷಹಾನಿಕರ್ತೃತ್ವಾತ್ ಯಃ ಕುಲಾಂಗಾರತಾಂ ಗತಃ॥** 31

---

(27). ದೈತ್ಯರು ಪ್ರಹ್ಲಾದನನ್ನು ಮತ್ತೆ ಉಪಾಧ್ಯಾಯಗೃಹಕ್ಕೆ ಕರೆದೊಯ್ದರು. ಪ್ರಹ್ಲಾದನು ಗುರುಶುಶ್ರೂಷೆಮಾಡುತ್ತ ವಿದ್ಯೆಯನ್ನು ಕಲಿಯುತ್ತಿದ್ದನು. ಹೀಗೆ ಬಹಳ ಕಾಲ ಕಳೆದ ಮೇಲೆ ದೈತ್ಯೇಶ್ವರನು ಪ್ರಹ್ಲಾದನನ್ನು ಕರೆಸಿ "ಪುತ್ರಕ, ಒಂದು ಸುಭಾಷಿತವನ್ನು ಹೇಳು" ಎಂದನು (28-29). ಪ್ರಹ್ಲಾದನು "ಯಾರಿಂದ ಪ್ರಕೃತಿಯೂ ಜೀವಾತ್ಮನೂ ಹುಟ್ಟಿದ್ದಾರೋ, ಯಾರಿಂದ ಈ ಚರಾಚರಜಗತ್ತು ನಿರ್ಮಿತವಾಗಿದೆಯೋ ಸಮಸ್ತಕ್ಕೂ ಕಾರಣವಾದ ಆ ವಿಷ್ಣುವು ನಮ್ಮಲ್ಲಿ ಪ್ರಸನ್ನನಾಗಲಿ!" ಎಂದನು (30). ಹಿರಣ್ಯಕಶಿಪು ದೈತ್ಯರನ್ನು ನೋಡಿ "ಈ ದುರಾತ್ಮನನ್ನು ಕೊಂದುಹಾಕಿರಿ. ಇವನು ಬದುಕಿ ಏನೂ ಪ್ರಯೋಜನವಿಲ್ಲ. ತನ್ನವರಿಗೇ ಹಾನಿಮಾಡುತ್ತಾನಾದ್ದರಿಂದ ಅವನು ಕುಲಕ್ಕೆ ಅಂಗಾರನೇ ಸರಿ!" ಎಂದು ಅಜ್ಞಾಪಿಸಿದನು (31). ಅವನ ಆಜ್ಞೆಯನ್ನನುಸರಿಸಿ ಸಾವಿರಾರು ದೈತ್ಯರು ದೊಡ್ಡ ಆಯುಧ

*ಶ್ರೀಪರಾಶರ ಉವಾಚ:*

**ಇತ್ಯಾಜ್ಞಪ್ತಾಸ್ತತಸ್ತೇನ ಪ್ರಗೃಹೀತಮಹಾಯುಧಾಃ।**
**ಉದ್ಯತಾಸ್ತಸ್ಯ ನಾಶಾಯ ದೈತ್ಯಾಃ ಶತಸಹಸ್ರಶಃ॥ 32**

*ಪ್ರಹ್ಲಾದ ಉವಾಚ:*

**ವಿಷ್ಣುಃ ಶಸ್ತ್ರೇಷು ಯುಷ್ಮಾಸು ಮಯಿ ಚಾಸೌ ವ್ಯವಸ್ಥಿತಃ।**
**ದೈತೇಯಾಸ್ತೇನ ಸತ್ಯೇನ ಮಾಕ್ರಮಂತ್ವಾಯುಧಾನಿ ಮೇ॥ 33**

*ಶ್ರೀಪರಾಶರ ಉವಾಚ:*

**ತತಸ್ತೈಶ್ಶತಶೋ ದೈತ್ಯೈಃ ಶಸ್ತ್ರೌಘೈರಾಹತೋಽಪಿ ಸನ್।**
**ನಾವಾಪ ವೇದನಾಮಲ್ಪಾಮಭೂಚ್ಚೈವ ಪುನರ್ನವಃ॥ 34**

*ಹಿರಣ್ಯಕಶಿಪುರುವಾಚ:*

**ದುರ್ಬುದ್ಧೇ ವಿನಿವರ್ತಸ್ವ ವೈರಿಪಕ್ಷಸ್ತವಾದತಃ।**
**ಅಭಯಂ ತೇ ಪ್ರಯಚ್ಛಾಮಿ ಮಾತಿಮೂಢಮತಿರ್ಭವ॥ 35**

---

ಗಳನ್ನು ಹಿಡಿದು ಪ್ರಹ್ಲಾದನನ್ನು ವಧಿಸಲು ಸಜ್ಜಾದರು. ಪ್ರಹ್ಲಾದನು "ದೈತೇಯರೆ, ನಿಮ್ಮ ಆಯುಧಗಳಲ್ಲಿ ನಿಮ್ಮಲ್ಲಿ ನನ್ನಲ್ಲಿಯೂ ಆ ವಿಷ್ಣುವು ನೆಲೆಸಿದ್ದಾನೆ. ಈ ಸತ್ಯಬಲದಿಂದ ಆಯುಧಗಳು ನನ್ನ ಮೇಲೆ ಯಾವ ಪ್ರಭಾವವನ್ನೂ ಬೀರದಂತಾಗಲಿ" ಎಂದನು (32-33). ಆಮೇಲೆ ದೈತೇಯರು ಆಯುಧಗಳಿಂದ ನೂರಾರು ಬಾರಿ ಹೊಡೆದರೂ ಅವನಿಗೆ ಸ್ವಲ್ಪವೂ ವೇದನೆಯಾಗಲಿಲ್ಲ! ಮತ್ತಷ್ಟು ನೂತನ ಬಲಸಂಪನ್ನನೇ ಆದನು! ಆಗ ಹಿರಣ್ಯಕಶಿಪು "ಎಲೈ ದುರ್ಬುದ್ಧಿಯವನೆ, ವೈರಿಪಕ್ಷದ ಸ್ತುತಿಯನ್ನು ಬಿಡು. ನಿನಗೆ ಅಭಯವನ್ನೀಯುವೆನು. ಅತ್ಯಂತ ಮೂಢನಾಗಬೇಡ" ಎಂದನು (34-35). ಪ್ರಹ್ಲಾದನು "ಸಕಲ ಭಯಗಳನ್ನೂ ನಿವಾರಿಸುವ ಅನಂತನು ನನ್ನ ಮನಸ್ಸಿನಲ್ಲಿ ನೆಲೆಸಿರುವಾಗ ಭಯವಾದರೂ ಎಲ್ಲಿರುತ್ತದೆ? ತಂದೆಯೆ, ಅವನನ್ನು ಸ್ಮರಿಸುತ್ತಿದ್ದರೆ ಹುಟ್ಟು, ಮುಪ್ಪು, ಸಾವುಗಳ ಎಲ್ಲ

*ಪ್ರಹ್ಲಾದ ಉವಾಚ:*

**ಭಯಂ ಭಯಾನಾಮಪಹಾರಿಣಿ ಸ್ಥಿತೇ**
**ಮನಸ್ಯನಂತೇ ಮಮ ಕುತ್ರ ತಿಷ್ಠತಿ।**
**ಯಸ್ಮಿನ್ ಸ್ಮೃತೇ ಜನ್ಮಜರಾಂತಕಾದಿ-**
**ಭಯಾನಿ ಸರ್ವಾಣ್ಯಪಯಾಂತಿ ತಾತ॥** 36

*ಹಿರಣ್ಯಕಶಿಪುರುವಾಚ:*

**ಭೋ ಭೋಃ ಸರ್ಪಾ ದುರಾಚಾರಮೇನಮತ್ಯಂತದುರ್ಮತಿಮ್।**
**ವಿಷಜ್ವಾಲಾಕುಲೈರ್ವಕ್ತ್ರೈಃ ಸದ್ಯೋ ನಯತ ಸಂಕ್ಷಯಮ್॥** 37

*ಶ್ರೀಪರಾಶರ ಉವಾಚ:*

**ಇತ್ಯುಕ್ತಾಸ್ತೇ ತತಃ ಸರ್ಪಾಃ ಕುಹಕಾಸ್ತಕ್ಷಕಾದಯಃ।**
**ಅದಶಂತ ಸಮಸ್ತೇಷು ಗಾತ್ರೇಷ್ವತಿವಿಷೋಲ್ಬಣಾಃ॥** 38

**ಸ ತ್ವಾಸಕ್ತಮತಿಃ ಕೃಷ್ಣೇ ದಶ್ಯಮಾನೋ ಮಹೋರಗೈಃ।**
**ನ ವಿವೇದಾತ್ಮನೋ ಗಾತ್ರಂ ತತ್ ಸ್ಮೃತ್ಯಾಹ್ಲಾದಸುಸ್ಥಿತಃ॥** 39

---

ಭಯಗಳೂ ಹೊರಟುಹೋಗುತ್ತವೆ" ಎಂದು ಹೇಳಿದನು (36). ಹಿರಣ್ಯಕಶಿಪು "ಎಲೈ ಸರ್ಪಗಳೇ, ಅತ್ಯಂತ ದುರ್ಬುದ್ಧಿಯೂ ದುರಾಚಾರನೂ ಆದ ಈತನನ್ನು ಘೋರವಿಷಜ್ವಾಲೆಗಳಿಂದ ತುಂಬಿದ ಬಾಯಿಗಳಿಂದ ಕಚ್ಚಿ ಕೊಂದುಹಾಕಿರಿ" ಎಂದು ಆದೇಶವನ್ನಿತ್ತನು (37). ಹೀಗೆ ಆದೇಶವನ್ನಿತ್ತೊಡನೆ ಘೋರವಿಷಗಳಿಂದ ಭೀಕರರೂ ಕ್ರೂರಿಗಳೂ ಆದ ತಕ್ಷಕಾದಿ ಸರ್ಪಗಳು ಪ್ರಹ್ಲಾದನ ಎಲ್ಲ ಅವಯವಗಳನ್ನೂ ಕಚ್ಚಿದವು. ಪ್ರಹ್ಲಾದನಾದರೋ ಆ ಮಹಾಸರ್ಪಗಳು ಕಚ್ಚುತ್ತಿರುವಾಗ ಶ್ರೀಕೃಷ್ಣನನ್ನು ಏಕಾಗ್ರಚಿತ್ತದಿಂದ ಧ್ಯಾನಿಸುತ್ತ ಆತನ ಸ್ಮರಣೆಯ ಆನಂದದಲ್ಲಿ ಸ್ವಸ್ಥನಾಗಿದ್ದನು. ತನ್ನ ದೇಹವನ್ನು ಗಮನಿಸಲೇ ಇಲ್ಲ (38-39). ಸರ್ಪಗಳು ಹಿರಣ್ಯಕಶಿಪುವನ್ನು ಕುರಿತು "ದೈತ್ಯೇಶ್ವರ, ನಮ್ಮ ಹಲ್ಲುಗಳು ಮುರಿದುಹೋದವು! (ಶಿರಸ್ಸಿನ) ಮಣಿಗಳು ಹೊರಗೆ ಸಿಡಿಯುತ್ತಿವೆ. ಹೆಡೆಗಳಿಗೆ ಪೀಡೆ

*ಸರ್ಪಾ ಊಚುಃ :*

**ದಂಷ್ಟ್ರಾ ವಿಶೀರ್ಣಾ ಮಣಯಃ ಸ್ಫುಟಂತಿ**
**ಫಣೇಷು ತಾಪೋ ಹೃದಯೇಷು ಕಂಪಃ।**
**ನಾಸ್ಯತ್ವಚಃ ಸ್ವಲ್ಪಮಪೀಹ ಭಿನ್ನಂ**
**ಪ್ರಶಾಧಿ ದೈತ್ಯೇಶ್ವರ ಕಾರ್ಯಮನ್ಯತ್॥** 40

*ಹಿರಣ್ಯಕಶಿಪುರುವಾಚ:*

**ಹೇ ದಿಗ್ಗಜಾಃ ಸಂಕಟದಂತಮಿಶ್ರಾ**
**ಘ್ನತೈನಮಸ್ಮದ್ರಿಪುಪಕ್ಷಭಿನ್ನಮ್।**
**ತಜ್ಜೋವಿನಾಶಾಯ ಭವಂತಿ ತಸ್ಯ**
**ಯಥಾರಣೇಃ ಪ್ರಜ್ವಲಿತೋ ಹುತಾಶಃ॥** 41

*ಶ್ರೀಪರಾಶರ ಉವಾಚ:*

**ತತಃ ಸ ದಿಗ್ಗಜೈರ್ಬಾಲೋ ಭೂಭೃಚ್ಛಿಖರಸನ್ನಿಭೈಃ।**
**ಪಾತಿತೋ ಧರಣೀಪೃಷ್ಠೇ ವಿಷಾಣೈರ್ವಾವಪೀಡಿತಃ॥** 42

**ಸ್ಮರತಸ್ತಸ್ಯ ಗೋವಿಂದಮಿಭದಂತಾಃ ಸಹಸ್ರಶಃ।**
**ಶೀರ್ಣಾ ವಕ್ಷಃಸ್ಥಲಂ ಪ್ರಾಪ್ಯ ಸ ಪ್ರಾಹ ಪಿತರಂ ತತಃ॥** 43

---

ಯಾಗುತ್ತಿದೆ. ಎದೆ ನಡುಗುತ್ತಿದೆ. ಇವನ ಚರ್ಮದ ಚೂರನ್ನೂ ಗಾಯಗೊಳಿಸಲಾಗಲಿಲ್ಲ. ಬೇರೆ ಯಾವುದಾದರೂ ಕಾರ್ಯವನ್ನು ನಮಗೆ ಆಜ್ಞಾಪಿಸು!" ಎಂದು ನುಡಿದವು (40). ಹಿರಣ್ಯಕಶಿಪು "ಎಲೈ ದಿಗ್ಗಜಗಳೆ, ವೈರಿಪಕ್ಷವನ್ನವಲಂಬಿಸಿ ನನಗೆ ವಿಮುಖನಾಗಿರುವ ಈ ಹುಡುಗನನ್ನು ದಟ್ಟವಾದ ಕೋರೆದಾಡೆಗಳಿಂದ ಯುಕ್ತರಾಗಿ ತಿವಿಯಿರಿ! ಅರಣಿಯಿಂದ ಹುಟ್ಟಿದ ಬೆಂಕಿಯಂತೆ ಆ ಸಂಘರ್ಷದಿಂದ ಹುಟ್ಟಿದ ಬೆಂಕಿಯು ಇವನನ್ನು ಸುಟ್ಟು ನಾಶಪಡಿಸಲಿ!" ಎಂದನು (41). ಪರ್ವತಶಿಖರಗಳಂತಿದ್ದ ದಿಗ್ಗಜಗಳು ದಂತಗಳಿಂದ ತಿವಿದು ಆ ಬಾಲಕನನ್ನು ನೆಲದ ಮೇಲುರುಳಿಸಿದವು. ಗೋವಿಂದನನ್ನು ಧ್ಯಾನಿಸುತ್ತಿದ್ದ ಆ ಬಾಲಕನ ಎದೆಗೆ ಸಾವಿರಾರು ಬಾರಿ ತಿವಿದು, ಆ ದಂತಗಳು ಮುರಿದು ಹೋದವು! ಪ್ರಹ್ಲಾದನು ತಂದೆಯನ್ನು

**ದಂತಾ ಗಜಾನಾಂ ಕುಲಿಶಾಗ್ರನಿಷ್ಠುರಾಃ।**
**ಶೀರ್ಣಾ ಯದೇತೇ ನ ಬಲಂ ಮಮೈತತ್।**
**ಮಹಾವಿಪತ್ತಾಪವಿನಾಶನೋಽಯಂ**
**ಜನಾರ್ದನಾನುಸ್ಮರಣಾನುಭಾವಃ॥** 44

*ಹಿರಣ್ಯಕಶಿಪುರುವಾಚ:*

**ಜ್ವಾಲ್ಯತಾಮಸುರಾ ವಹ್ನಿರಪಸರ್ಪತ ದಿಗ್ಗಜಾಃ।**
**ವಾಯೋ ಸಮೇಧಯಾಗ್ನಿ ತ್ವಂ ದಹ್ಯತಾಮೇಷ ಪಾಪಕೃತ್॥** 45

*ಶ್ರೀಪರಾಶರ ಉವಾಚ:*

**ಮಹಾಕಾಷ್ಠಚಯಸ್ಥಂ ತಮಸುರೇಂದ್ರಸುತಂ ತತಃ।**
**ಪ್ರಜ್ವಾಲ್ಯ ದಾನವಾ ವಹ್ನಿಂ ದದಹುಃ ಸ್ವಾಮಿನೋದಿತಾಃ॥** 46

*ಪ್ರಹ್ಲಾದ ಉವಾಚ:*

**ತಾತೈಷ ವಹ್ನಿಃ ಪವನೇರಿತೋಽಪಿ**
**ನ ಮಾಂ ದಹತ್ಯತ್ರ ಸಮಂತತೋಽಹಮ್।**
**ಪಶ್ಯಾಮಿ ಪದ್ಮಾಸ್ತರಣಾಸ್ತೃತಾನಿ**
**ಶೀತಾನಿ ಸರ್ವಾಣಿ ದಿಶಾಂ ಮುಖಾನಿ॥** 47

---

ಕುರಿತು ಹೀಗೆಂದನು (42-43). "ಅಪ್ಪ, ವಜ್ರಾಯುಧದ ತುದಿಯಂತೆ ಕಠೋರವಾಗಿದ್ದ ಆನೆಗಳ ದಂತಗಳು ಮುರಿದುಹೋದವಲ್ಲ, ಇದು ನನ್ನ ಬಲವಲ್ಲ. ಮಹಾವಿಪತ್ತುಗಳನ್ನು ನೀಗಿಸತಕ್ಕ ಜನಾರ್ದನನ ಮಹಿಮೆ ಇದು" (44). ಆಗ ಹಿರಣ್ಯಕಶಿಪು "ದಿಗ್ಗಜಗಳೆ, ಅತ್ತ ಸರಿಯಿರಿ. ಅಸುರರೆ, ಬೆಂಕಿಯನ್ನು ಹೊತ್ತಿಸಿರಿ. ಎಲೈ ವಾಯು, ಬೆಂಕಿಯನ್ನು ಧಗ ಧಗಿಸುವಂತೆ ಮಾಡು. ಈ ಪಾಪಿ ಸುಟ್ಟುಹೋಗಲಿ" ಎಂದು ಅಬ್ಬರಿಸಿದನು (45). ಒಡನೆಯೇ ಒಡೆಯನ ಅಪ್ಪಣೆಯಂತೆ ಅಸುರರು ದೊಡ್ಡ ದೊಡ್ಡ ಸೌದೆಗಳನ್ನು ರಾಶಿಮಾಡಿ, ಪ್ರಹ್ಲಾದನನ್ನು ಅದರಲ್ಲಿರಿಸಿ ಬೆಂಕಿಹಚ್ಚಿ ಸುಡಲು ಯತ್ನಿಸಿದರು. ಪ್ರಹ್ಲಾದನು "ಓ ತಂದೆಯೇ, ಗಾಳಿ ಈ ರೀತಿ ಬೀಸಿದರೂ ಬೆಂಕಿ ನನ್ನನ್ನು ಸುಡುತ್ತಿಲ್ಲ. ಸುತ್ತಲೂ ಎಲ್ಲ ದಿಕ್ಕುಗಳೂ

*ಶ್ರೀಪರಾಶರ ಉವಾಚ:*

**ಅಥ ದೈತ್ಯೇಶ್ವರಂ ಪ್ರೋಚುರ್ಭಾರ್ಗವಸ್ಯಾತ್ಮಜಾ ದ್ವಿಜಾಃ।**
**ಪುರೋಹಿತಾ ಮಹಾತ್ಮಾನಃ ಸಾಮ್ನಾ ಸಂಸ್ತೂಯ ವಾಗ್ಮಿನಃ॥ 48**

*ಪುರೋಹಿತಾ ಊಚುಃ :*

**ರಾಜನ್ ನಿಯಮ್ಯತಾಂ ಕೋಪೋ ಬಾಲೇಽಪಿ ತನಯೇ ನಿಜೇ।**
**ಕೋಪೋ ದೇವನಿಕಾಯೇಷು ತೇಷು ತೇ ಸಫಲೋ ಯತಃ॥ 49**

**ತಥಾತಥೈನಂ ಬಾಲಂ ತೇ ಶಾಸಿತಾರೋ ವಯಂ ನೃಪ।**
**ಯಥಾ ವಿಪಕ್ಷನಾಶಾಯ ವಿನೀತಸ್ತೇ ಭವಿಷ್ಯತಿ॥ 50**

**ಬಾಲತ್ವಂ ಸರ್ವದೋಷಾಣಾಂ ದೈತ್ಯರಾಜಾಸ್ಪದಂ ಯತಃ।**
**ತತೋಽತ್ರ ಕೋಪಮತ್ಯರ್ಥಂ ಯೋಕ್ತುಮರ್ಹಸಿ ನಾರ್ಭಕೇ॥ 51**

**ನ ತ್ಯಕ್ಷ್ಯತಿ ಹರೇಃ ಪಕ್ಷಮಸ್ಮಾಕಂ ವಚನಾದ್ಯದಿ।**
**ತತಃ ಕೃತ್ಯಾಂ ವಧಾಯಾಸ್ಯ ಕರಿಷ್ಯಾಮೋಽನಿವರ್ತಿನೀಮ್॥ 52**

---

ತಾವರೆ ಎಲೆಗಳಿಂದ ಕವಿದಂತೆ ತಣ್ಣಗಿವೆ!" ಎಂದನು (46-47). ಅನಂತರ ಶುಕ್ರನ ಪುತ್ರರೂ ಮಹಾತ್ಮರೂ ವಾಗ್ಮಿಗಳೂ ಆದ ಪುರೋಹಿತರು ಸಾಮೋಪಾಯದಿಂದ ದೈತ್ಯೇಶ್ವರನನ್ನು ಹೊಗಳಿ ಹೀಗೆಂದರು: "ಮಹಾರಾಜ, ಇವನು ಬಾಲಕ; ನಿನ್ನ ಮಗ. ಕೋಪವನ್ನು ತಡೆದುಕೊ. ಈ ಕೋಪವು ದೇವತೆಗಳ ಮೇಲಿರಲಿ. ಅಲ್ಲಿ ಅದು ಸಫಲವಾಗುತ್ತದೆ (48-49). ನಾವು ಈ ಹುಡುಗನಿಗೆ ಬುದ್ಧಿ ಹೇಳಿ ಹದಕ್ಕೆ ತರುತ್ತೇವೆ. ಅವನು ನಿನ್ನ ಶತ್ರುನಾಶಕ್ಕೆ ಕಾರಣನಾಗಿ ನಿನಗೆ ವಿನೀತನಾಗಿರುವಂತೆ ಮಾಡುತ್ತೇವೆ. ದೈತ್ಯರಾಜ, ಹುಡುಗತನವೇ ಇಂತಹದು. ಎಲ್ಲ ದೋಷಗಳೂ ಸೇರಿಕೊಂಡುಬಿಡುತ್ತವೆ. ಆದ್ದರಿಂದ ಈ ಹುಡುಗನ ಮೇಲೆ ವಿಶೇಷವಾದ ಕೋಪವನ್ನು ಮೆರೆಸುವುದು ಸರಿಯಲ್ಲ (50-51). ನಮ್ಮ ಉಪದೇಶಕ್ಕೂ ಬಗ್ಗದೆ ಇವನು ವಿಷ್ಣುವಿನ ಪಕ್ಷವನ್ನು ತ್ಯಜಿಸದೇ ಹೋದರೆ, ಆಗ ನಾವು (ಅಭಿಚಾರದಿಂದ) ಕೃತ್ಯೆಯನ್ನು ಸೃಷ್ಟಿಸುತ್ತೇವೆ. ಅವಳು ಸುಮ್ಮನೆ ಹಿಂದಿರುಗಿ

*ಶ್ರೀಪರಾಶರ ಉವಾಚ:*

**ಏವಮಭ್ಯರ್ಥಿತಸ್ತೈಸ್ತು ದೈತ್ಯರಾಜಃ ಪುರೋಹಿತೈಃ।**
**ದೈತ್ಯೈರ್ನಿಷ್ಕಾಸಯಾಮಾಸ ಪುತ್ರಂ ಪಾವಕಸಂಚಯಾತ್॥** 53

**ತತೋ ಗುರುಗೃಹೇ ಬಾಲಃ ಸ ವಸನ್ ಬಾಲದಾನವಾನ್।**
**ಅಧ್ಯಾಪಯಾಮಾಸ ಮುಹುರುಪದೇಶಾಂತರೇ ಗುರೋಃ॥** 54

*ಪ್ರಹ್ಲಾದ ಉವಾಚ:*

**ಶ್ರೂಯತಾಂ ಪರಮಾರ್ಥೋ ಮೇ ದೈತೇಯಾ ದಿತಿಜಾತ್ಮಜಾಃ।**
**ನ ಚಾನ್ಯಥೈತನ್ಮಂತವ್ಯಂ ನಾತ್ರ ಲೋಭಾದಿಕಾರಣಮ್॥** 55

**ಜನ್ಮ ಬಾಲ್ಯಂ ತತಃ ಸರ್ವೋ ಜಂತುಃ ಪ್ರಾಪ್ನೋತಿ ಯೌವನಮ್।**
**ಅವ್ಯಾಹತೈವ ಭವತಿ ತತೋಽನುದಿವಸಂ ಜರಾ॥** 56

**ತತಶ್ಚ ಮೃತ್ಯುಮಭ್ಯೇತಿ ಜಂತುರ್ದೈತ್ಯೇಶ್ವರಾತ್ಮಜಾಃ।**
**ಪ್ರತ್ಯಕ್ಷಂ ದೃಶ್ಯತೇ ಚೈತದಸ್ಮಾಕಂ ಭವತಾಂ ತಥಾ॥** 57

---

ಬರತಕ್ಕವಳಲ್ಲ" ಎಂದರು (52). ಹೀಗೆ ಪುರೋಹಿತರಿಂದ ಅಭ್ಯರ್ಥಿತನಾದ ಹಿರಣ್ಯಕಶಿಪು ದೈತ್ಯರಿಗೆ ಹೇಳಿ ಪುತ್ರನನ್ನು ಅಗ್ನಿರಾಶಿಯಿಂದ ಈಚೆಗೆ ಹೊರಡಿಸಿದನು. ಆಮೇಲೆ ಬಾಲಕನು ಗುರುಗಳ ಗೃಹದಲ್ಲಿ ವಾಸ ಮಾಡುತ್ತ, ವಿದ್ಯಾಭ್ಯಾಸದ ನಡುವೆ ಅವಕಾಶ ಸಿಕ್ಕಿದಾಗಲೆಲ್ಲ ದೈತ್ಯ ಬಾಲಕರಿಗೆ ಈ ಪ್ರಕಾರ ಉಪದೇಶಿಸುತ್ತಿದ್ದನು (53-54). "ಎಲೈ ದೈತ್ಯಬಾಲಕರೆ, ಪರಮಾರ್ಥವೇನೆಂಬುದನ್ನು ಹೇಳುವೆನು, ಕೇಳಿರಿ. ನೀವು ಅನ್ಯಥಾ ಭಾವಿಸಬಾರದು. ನನ್ನ ಹೇಳಿಕೆಗೆ ಲೋಭ—ಮೊದಲಾದದ್ದು ಕಾರಣವಲ್ಲ (55). ಜೀವಿಗೆ ಹುಟ್ಟು, ಬಾಲ್ಯ, ಆಮೇಲೆ ಯೌವನ ಬರುತ್ತದೆ. ಹೀಗೆ ದಿನಗಳು ಕಳೆದಂತೆ ಮುಪ್ಪು ತಪ್ಪದೆ ಬರುತ್ತದೆ. ಕಡೆಗೆ, ದೈತ್ಯತನಯರೆ, ಜೀವಿಯು ಸಾವನ್ನು ಅಪ್ಪುತ್ತಾನೆ. ಇದು ನಮಗೂ ನಿಮಗೂ ಪ್ರತ್ಯಕ್ಷವಾಗಿ ಕಂಡುಬರುತ್ತಿದೆ (56-57). ಸತ್ತವನಿಗೆ ಮತ್ತೆ

**ಮೃತಸ್ಯ ಚ ಪುನರ್ಜನ್ಮ ಭವತ್ಯೇತಚ್ಚ ನಾನ್ಯಥಾ।**
**ಆಗಮೋಽಯಂ ತಥಾ ಯಚ್ಚ ನೋಪಾದಾನಂ ವಿನೋದ್ಭವಃ॥ 58**

**ಗರ್ಭವಾಸಾದಿಯಾವತ್ತು ಪುನರ್ಜನ್ಮೋಪಪಾದನಮ್।**
**ಸಮಸ್ತಾವಸ್ಥಕಂ ತಾವದ್‌ದುಃಖಮೇವಾವಗಮ್ಯತಾಮ್॥ 59**

**ಕ್ಷುತ್ತೃಷ್ಣೋಪಶಮಂ ತದ್ವತ್ ಶೀತಾದ್ಯುಪಶಮಂ ಸುಖಮ್।**
**ಮನ್ಯತೇ ಬಾಲಬುದ್ಧಿತ್ವಾದ್‌ದುಃಖಮೇವ ಹಿ ತತ್ಪುನಃ॥ 60**

**ಅತ್ಯಂತಸ್ತಿಮಿತಾಂಗಾನಾಂ ವ್ಯಾಯಾಮೇನ ಸುಖೈಷಿಣಾಮ್।**
**ಭ್ರಾಂತಿಜ್ಞಾನಾವೃತಾಕ್ಷಾಣಾಂ ದುಃಖಮೇವ ಸುಖಾಯತೇ॥ 61**

**ಕ್ವ ಶರೀರಮಶೇಷಾಣಾಂ ಶ್ಲೇಷ್ಮಾದೀನಾಂ ಮಹಾಚಯಃ।**
**ಕ್ವ ಕಾಂತಿಶೋಭಾಸೌಂದರ್ಯರಮಣೀಯಾದಯೋ ಗುಣಾಃ॥ 62**

---

ಪುನರ್ಜನ್ಮವು ಇದ್ದೇ ಇದೆ. ಇದು ತಪ್ಪತಕ್ಕದ್ದಲ್ಲ. ಹೀಗೆಂದು ಶಾಸ್ತ್ರವು ಹೇಳುತ್ತದೆ. ಅಲ್ಲದೆ ಉಪಾದಾನಕಾರಣವಿಲ್ಲದೆ ಜನ್ಮವಿಲ್ಲ*. ಪುನರ್ಜನ್ಮವಾಗಬೇಕಾದರೆ ಗರ್ಭವಾಸಾದಿ ವಿಭಿನ್ನ ಅವಸ್ಥೆಗಳು ಒದಗುತ್ತವೆ. ಅವೆಲ್ಲವೂ ದುಃಖಕರವೆಂದು ತಿಳಿಯಿರಿ (58-59). ಹಸಿವು ಬಾಯಾರಿಕೆಗಳ ಉಪಶಾಂತಿಯನ್ನೂ ಹಾಗೆಯೇ ಶೀತ ಮುಂತಾದ ಬಾಧೆಗಳ ಶಮನವನ್ನೂ ಸುಖವೆಂದು ಮನುಷ್ಯನು ತಿಳಿದುಕೊಂಡಿರುವುದು ದಡ್ಡತನದಿಂದ. ಅದೆಲ್ಲವೂ ದುಃಖವೇ ಅಲ್ಲವೆ? (60). ಕೈ ಕಾಲು ಮುಂತಾದ ಅಂಗಾಂಗಗಳು ಹಿಡಿದುಕೊಂಡವರಿಗೆ ವ್ಯಾಯಾಮದಿಂದ ಸುಖವೆನಿಸುತ್ತದೆ! ಭ್ರಾಂತಿಯಿಂದ ಕಣ್ಣು ಕುರುಡಾದವರಿಗೆ ದುಃಖವೇ ಸುಖವಾಗಿ ತೋರುತ್ತದೆ. ಶ್ಲೇಷ್ಮಾದಿಸಮಸ್ತಕಶ್ಮಲಗಳಿಗೂ ಗಣಿಯಾಗಿರುವ ಶರೀರವೆಲ್ಲಿ? ಕಾಂತಿ, ಶೋಭೆ, ಸೌಂದರ್ಯ, ರಮಣೀಯತೆ—ಮೊದಲಾದ ಗುಣಗಳೆಲ್ಲಿ? (ಜುಗುಪ್ಸಿತವಾದ ಶರೀರದಲ್ಲಿ ಕಾಂತಿ—ಮೊದಲಾದ ಗುಣಗಳನ್ನು ಮನುಷ್ಯನು ಕಾಣುತ್ತಿರುವುದು ಭ್ರಮೆಯಲ್ಲದೆ ಇನ್ನೇನು?) (61-62).

---

* ಶುಭಾಶುಭಕರ್ಮವೇ ಜನ್ಮಕ್ಕೆ ಕಾರಣ. ಹಿಂದಿನ ಕರ್ಮದಿಂದ ಈ ಜನ್ಮ ಬಂದಿದೆ. ಈ ಜನ್ಮದಲ್ಲಿ ಮಾಡಿದ ಕರ್ಮದ ಫಲವಾಗಿ ಮುಂದಿನ ಜನ್ಮ ಬಂದೇ ಬರಬೇಕು—ಎಂದು ಅಭಿಪ್ರಾಯ.

**ಮಾಂಸಾಸೃಕ್ಪೂಯವಿಣ್ಮೂತ್ರಸ್ನಾಯುಮಜ್ಜಾಸ್ಥಿಸಂಹತೌ।**
**ದೇಹೇ ಚೇತ್ಪ್ರೀತಿಮಾನ್ ಮೂಢೋ ಭವಿತಾ ನರಕೇಽಪ್ಯಸೌ॥ 63**

**ಅಗ್ನೇಃ ಶೀತೇನ ತೋಯಸ್ಯ ತೃಷಾ ಭಕ್ತಸ್ಯ ಚ ಕ್ಷುಧಾ।**
**ಕ್ರಿಯತೇ ಸುಖಕರ್ತೃತ್ವಂ ತದ್ವಿಲೋಮಸ್ಯ ಚೇತರೈಃ॥ 64**

**ಕರೋತಿ ಹೇ ದೈತ್ಯಸುತಾ ಯಾವನ್ಮಾತ್ರಂ ಪರಿಗ್ರಹಮ್।**
**ತಾವನ್ಮಾತ್ರಂ ಸ ಏವಾಸ್ಯ ದುಃಖಂ ಚೇತಸಿ ಯಚ್ಛತಿ॥ 65**

**ಯಾವತಃ ಕುರುತೇ ಜಂತುಃ ಸಂಬಂಧಾನ್ಮನಸಃ ಪ್ರಿಯಾನ್।**
**ತಾವಂತೋಽಸ್ಯ ನಿಖನ್ಯಂತೇ ಹೃದಯೇ ಶೋಕಶಂಕವಃ॥ 66**

**ಯದ್ಯದ್ಗೃಹೇ ತನ್ಮನಸಿ ಯತ್ರ ತತ್ರಾವತಿಷ್ಠತಃ।**
**ನಾಶದಾಹೋಪಕರಣಂ ತಸ್ಯ ತತ್ರೈವ ತಿಷ್ಠತಿ॥ 67**

---

ಮಾಂಸ, ರಕ್ತ, ಕೀವು, ಮಲ, ಮೂತ್ರ, ನರ, ಕೊಬ್ಬು, ಮೂಳೆ—ಇವುಗಳ ಸಮುದಾಯವಾದ ದೇಹವನ್ನೂ ಪ್ರೀತಿಸುವುದಾದರೆ, ಆ ಮೂಢನು ನರಕವನ್ನೂ ಪ್ರೀತಿಸಬಹುದು! (63). ಚಳಿಯಾದಾಗ ಬೆಂಕಿಯೂ ಬಾಯಾರಿಕೆಯಾದಾಗ ನೀರು ಹಸಿವಾದಾಗ ಅನ್ನವೂ ಸುಖಕಾರಿ ಎನಿಸುತ್ತದೆ. ವಿರುದ್ಧವಸ್ತುವಿಗೆ ವಿರುದ್ಧವಸ್ತು ಸುಖಕಾರಿ.* ದೈತೇಯತನಯರೆ, ನಾವು ಎಷ್ಟೆಷ್ಟು ವಿಷಯಸಾಮಗ್ರಿಯನ್ನು ಸಂಗ್ರಹಿಸುತ್ತೇವೋ ಅಷ್ಟಷ್ಟು ಅದು ದುಃಖವನ್ನು ಮನಸ್ಸಿಗೆ ತಂದೊಡ್ಡುತ್ತದೆ (64-65). ಜೀವಿಯು ಮನಸ್ಸಿಗೆ ಪ್ರಿಯವಾದ ವಸ್ತುಗಳಲ್ಲಿ ಎಷ್ಟು ಸಂಬಂಧಗಳನ್ನು ಇಡುತ್ತಾನೋ, ಅಷ್ಟು ದುಃಖದ ಮುಳ್ಳುಗಳು ಹೃದಯದಲ್ಲಿ ನೆಟ್ಟುಹೋಗುತ್ತವೆ (66). ಗೃಹದಲ್ಲಿ ಯಾವ ಯಾವ ಸಾಮಗ್ರಿ ಇದೆಯೋ ಅದೆಲ್ಲವೂ

---

*ಚಳಿಯಾದಾಗ ಬೆಂಕಿ ಸುಖಕರ. ಬೆಂಕಿಯಿಂದ ಸೆಕೆಯಾದಾಗ ಚಳಿ ಸುಖಕರ. ಹೀಗೆ ವಿರುದ್ಧವಸ್ತುವಿನಿಂದ ಬಾಧೆ ಪರಿಹಾರವಾದರೆ ಅದು ಸುಖಕರವೆಂದು ಮನುಷ್ಯನು ತಿಳಿದಿದ್ದಾನೆ. ವಸ್ತುತಃ ಯಾವುದೂ ಸುಖಕರವಲ್ಲ. ಕಷ್ಟದ ಪರಿಹಾರವೇ ಸುಖವೆಂದು ಮನುಷ್ಯನು ಭ್ರಮಿಸಿದ್ದಾನೆ. 'ಪ್ರತೀಕಾರಂ ವ್ಯಾಧೇಃಸುಖಮಿತಿ ವಿಪರ್ಯಸ್ಯತಿ ಜನಃ'—ವೈರಾಗ್ಯಶತಕ.

**ಜನ್ಮನ್ಯತ್ರ ಮಹದ್‌ದುಃಖಂ ಮ್ರಿಯಮಾಣಸ್ಯ ಚಾಪಿ ತತ್।**
**ಯಾತನಾಸು ಯಮಸ್ಯೋಗ್ರಂ ಗರ್ಭಸಂಕ್ರಮಣೇಷು ಚ॥ 68**

**ಗರ್ಭೇಷು ಸುಖಲೇಶೋಽಪಿ ಭವದ್ಭಿರನುಮೀಯತೇ।**
**ಯದಿತತ್ಕಥ್ಯತಾಮೇವಂ ಸರ್ವಂ ದುಃಖಮಯಂ ಜಗತ್॥ 69**

**ತದೇವಮತಿದುಃಖಾನಾಮಾಸ್ಪದೇಽತ್ರ ಭವಾರ್ಣವೇ।**
**ಭವತಾಂ ಕಥ್ಯತೇ ಸತ್ಯಂ ವಿಷ್ಣುರೇಕಃ ಪರಾಯಣಃ॥ 70**

**ಮಾ ಜಾನೀತ ವಯಂ ಬಾಲಾ ದೇಹೀ ದೇಹೇಷು ಶಾಶ್ವತಃ।**
**ಜರಾಯೌವನಜನ್ಮಾದ್ಯಾ ಧರ್ಮಾ ದೇಹಸ್ಯ ನಾತ್ಮನಃ॥ 71**

**ಬಾಲೋಽಹಂ ತಾವದಿಚ್ಛಾತೋ ಯತಿಷ್ಯೇ ಶ್ರೇಯಸೇ ಯುವಾ।**
**ಯುವಾಹಂ ವಾರ್ಧಕೇ ಪ್ರಾಪ್ತೇ ಕರಿಷ್ಯಾಮ್ಯಾತ್ಮನೋಹಿತಮ್॥ 72**

---

ಮನಸ್ಸಿನಲ್ಲಿ ನೆಲೆಸಿರುತ್ತದೆ. ಆತನು ಎಲ್ಲಿಯೇ ಹೋಗಿರಲಿ, ಆ ಸಾಮಗ್ರಿಗಳು ನಾಶವಾದಾವು—ಸುಟ್ಟುಹೋದಾವು ಎಂಬ ಆತಂಕವು ಮನಸ್ಸಿನಲ್ಲಿ ಜೊತೆಗೇ ಇರುತ್ತದೆ (67). ಹೀಗೆ ಬಾಳಿನಲ್ಲಿ, ಸಾಯುವಾಗ, ಸತ್ತಮೇಲೆ ಯಮನ ನರಕದಲ್ಲಿ, ಮತ್ತೆ ಗರ್ಭಪ್ರವೇಶದಲ್ಲಿ ಸದಾ ದುಃಖಗಳ ಪರಂಪರೆಯೇ ಇದೆ. ಗರ್ಭವಾಸದಲ್ಲಿ ಸುಖದ ಲೇಶವನ್ನಾದರೂ ನೀವು ಊಹಿಸಬಲ್ಲಿರಾ? ಬಲ್ಲಿರಾದರೆ ಹೇಳಿರಿ! ಆದ್ದರಿಂದ ಜಗತ್ತು ದುಃಖಮಯವಾದದ್ದು (68-69). ಆದಕಾರಣ ಅತ್ಯಂತ ದುಃಖಗಳಿಗೆ ಆಸ್ಪದವಾದ ಈ ಸಂಸಾರಸಮುದ್ರದಲ್ಲಿ ಸತ್ಯವಾದ ಗತಿ ಯಾವುದೆಂದು ನಿಮಗೆ ಹೇಳುತ್ತೇನೆ. ಏನೆಂದರೆ, ವಿಷ್ಣುವೊಬ್ಬನೇ ಗತಿ (70). 'ನಾವು ಇನ್ನೂ ಬಾಲಕರು' ಎಂದು ತಿಳಿದು ಉಪೇಕ್ಷಿಸಬೇಡಿರಿ. ದೇಹಗಳಲ್ಲಿರುವ ಆತ್ಮನೊಬ್ಬನು ಶಾಶ್ವತ. ಮುಪ್ಪು, ಯೌವನ, ಜನನ—ಮೊದಲಾದ ಧರ್ಮಗಳು ದೇಹಕ್ಕೇ ಹೊರತು ಆತ್ಮನಿಗಲ್ಲ (71). ಪುರುಷನು ತಪ್ಪಾಗಿ ಆಲೋಚಿಸುತ್ತಾನೆ: 'ಈಗ ನಾನು ಬಾಲಕ. ಯಥೇಚ್ಛೆಯಾಗಿ ಇರುವೆನು. ಯುವಕನಾದಾಗ ಪರಮಾರ್ಥಶ್ರೇಯಸ್ಸಿಗೆ ಯತ್ನಿಸುವೆನು.' ಯುವಕನಾದಮೇಲೆ 'ನಾನು ಯುವಕ. ವಯಸ್ಸಾದ ಮೇಲೆ ಆತ್ಮಹಿತಕ್ಕಾಗಿ ಕೆಲಸ ಮಾಡು

**ವೃದ್ಧೋऽಹಂ ಮಮ ಕಾರ್ಯಾಣಿ ಸಮಸ್ತಾನಿ ನ ಗೋಚರೇ।**
**ಕಿಂ ಕರಿಷ್ಯಾಮಿ ಮಂದಾತ್ಮಾ ಸಮರ್ಥೇನ ನ ಯತ್ಕೃತಮ್॥ 73**

**ಏವಂ ದುರಾಶಯಾ ಕ್ಷಿಪ್ತಮಾನಸಃ ಪುರುಷಃ ಸದಾ।**
**ಶ್ರೇಯಸೋऽಭಿಮುಖಂ ಯಾತಿ ನ ಕದಾಚಿತ್ ಪಿಪಾಸಿತಃ॥ 74**

**ಬಾಲ್ಯೇ ಕ್ರೀಡನಕಾಸಕ್ತಾ ಯೌವನೇ ವಿಷಯೋನ್ಮುಖಾಃ।**
**ಅಜ್ಞಾ ನಯಂತ್ಯಶಕ್ತ್ಯಾ ಚ ವಾರ್ಧಕಂ ಸಮುಪಸ್ಥಿತಮ್॥ 75**

**ತಸ್ಮಾದ್‌ಬಾಲ್ಯೇ ವಿವೇಕಾತ್ಮಾ ಯತೇತ ಶ್ರೇಯಸೇ ಸದಾ।**
**ಬಾಲ್ಯಯೌವನವೃದ್ಧಾದ್ಯೈರ್ದೇಹಭಾವೈರಸಂಯುತಃ॥ 76**

**ತದೇತದ್ವೋ ಮಯಾಖ್ಯಾತಂ ಯದಿ ಜಾನೀತ ನಾನೃತಮ್।**
**ತದಸ್ಮತ್ ಪ್ರೀತಯೇ ವಿಷ್ಣುಃ ಸ್ಮರ್ಯತಾಂ ಬಂಧಮುಕ್ತಿದಃ॥ 77**

---

ವೆನು.' ವಯಸ್ಸಾದ ಮೇಲೆ 'ನಾನು ಮುದುಕ. ಸಮಸ್ತ ಕಾರ್ಯಗಳೂ ನನಗೆ ಅಸಾಧ್ಯ. ನಾನು ಮಂದಬುದ್ಧಿಯವನೇ ಸರಿ. ಸಾಮರ್ಥ್ಯವಿದ್ದಾಗ ಏನನ್ನೂ ಸಾಧಿಸಲಿಲ್ಲ. ಈಗ ಏನು ಮಾಡಬಲ್ಲೆ?' ಎಂದು (72-73). ಹೀಗೆ ತಪ್ಪು ತಿಳಿವಳಿಕೆಯಿಂದ ಮನುಷ್ಯನು ವಿಕ್ಷಿಪ್ತಚಿತ್ತನಾಗಿರುತ್ತಾನೆ. ನಿಜವಾದ ಅಭಿಲಾಷೆಯಿಂದ ಶ್ರೇಯಸ್ಸಿಗೆ ಅಭಿಮುಖನಾಗಿ ಎಂದಿಗೂ ಹೋಗುವುದೇ ಇಲ್ಲ (74). ಬಾಲ್ಯದಲ್ಲಿ ಆಟದ ಸಾಮಾನುಗಳ ಮೇಲೆ ಆಸಕ್ತರು. ಯೌವನದಲ್ಲಿ ವಿಷಯಸುಖಾಪೇಕ್ಷಿಗಳು. ಈ ಮೂಢರು ಕೈಲಾಗುವುದಿಲ್ಲವೆಂದು ಮುಪ್ಪನ್ನು ಕಳೆದುಬಿಡುತ್ತಾರೆ (75). ಆದ್ದರಿಂದ ವಿವೇಕಿಯಾದವನು ಹುಡುಗನಾಗಿದ್ದಾಗಲೇ ಶ್ರೇಯಸ್ಸಿಗಾಗಿ ಪ್ರಯತ್ನಿಸಬೇಕು. ಬಾಲ್ಯ, ಯೌವನ, ವಾರ್ಧಕ್ಯ ಎಂಬ ದೇಹಧರ್ಮಗಳನ್ನು ಮನಸ್ಸಿನಿಂದ ತೊರೆಯಬೇಕು. ಈಗ ನಾನು ಹೇಳಿದ್ದು ಸತ್ಯ, ಸುಳ್ಳಲ್ಲ—ಎಂದು ನೀವು ಭಾವಿಸುವುದಾದರೆ, ಸಂಸಾರಬಂಧದಿಂದ ಮೋಕ್ಷವನ್ನು ಕರುಣಿಸುವ ವಿಷ್ಣುವನ್ನು ಧ್ಯಾನಮಾಡಿರಿ! ಅದರಿಂದ ನನಗೆ ಸಂತೋಷವಾಗುವುದು (76-77). ಧ್ಯಾನಮಾಡುವುದಕ್ಕೆ ಆಯಾಸವಾದರೂ ಏನಿದೆ?

**ಪ್ರಯಾಸಃ ಸ್ಮರಣೇ ಕೋಽಸ್ಯ ಸ್ಮೃತೋ ಯಚ್ಛತಿ ಶೋಭನಮ್।**
**ಪಾಪಕ್ಷಯಶ್ಚ ಭವತಿ ಸ್ಮರತಾಂ ತಮಹರ್ನಿಶಮ್॥** 78

**ಸರ್ವಭೂತಸ್ಥಿತೇ ತಸ್ಮಿನ್ ಮತಿರ್ಮೈತ್ರೀ ದಿವಾನಿಶಮ್।**
**ಭವತಾಂ ಜಾಯತಾಮೇವಂ ಸರ್ವಕ್ಲೇಶಾನ್ ಪ್ರಹಾಸ್ಯಥ॥** 79

**ತಾಪತ್ರಯೇಣಾಭಿಹತಂ ಯದೇತದಖಿಲಂ ಜಗತ್।**
**ತದಾ ಶೋಚ್ಯೇಷು ಭೂತೇಷು ದ್ವೇಷಂ ಪ್ರಾಜ್ಞಃ ಕರೋತಿ ಕಃ॥**

**ಅಥ ಭದ್ರಾಣಿ ಭೂತಾನಿ ಹೀನಶಕ್ತಿರಹಂ ಪರಮ್।**
**ಮುದಂ ತದಾಪಿ ಕುರ್ವೀತ ಹಾನಿರ್ದ್ವೇಷಫಲಂ ಯತಃ॥** 81

**ಬದ್ಧವೈರಾಣಿ ಭೂತಾನಿ ದ್ವೇಷಂ ಕುರ್ವಂತಿ ಚೇತ್ತತಃ।**
**ಸುಶೋಚ್ಯಾನ್ಯತಿಮೋಹೇನ ವ್ಯಾಪ್ತಾನೀತಿ ಮನೀಷಿಣಾಮ್॥** 82

**ಏತೇ ಭಿನ್ನದೃಶಾಂ ದೈತ್ಯಾ ವಿಕಲ್ಪಾಃ ಕಥಿತಾ ಮಯಾ।**
**ಕೃತ್ವಾಭ್ಯುಪಗಮಂ ತತ್ರ ಸಂಕ್ಷೇಪಃ ಶ್ರೂಯತಾಂ ಮಮ॥** 83

---

ಧ್ಯಾನಿಸಿದರೆ ಆತನು ಒಳ್ಳೆಯದನ್ನು ಮಾಡುತ್ತಾನೆ. ಹಗಲು ರಾತ್ರಿ ಆತನನ್ನು ಸ್ಮರಿಸುತ್ತಿದ್ದರೆ ಸಂಚಿತವಾದ ಪಾಪವೂ ಕ್ಷಯಿಸುತ್ತದೆ (78). ಸರ್ವಭೂತಗಳಲ್ಲಿಯೂ ನೆಲೆಸಿರುವ ವಿಷ್ಣುವಿನಲ್ಲಿ ನಿಮಗೆ ಹಗಲು ರಾತ್ರಿಗಳಲ್ಲಿ ಸದಾ ಭಕ್ತಿಯೂ ಸ್ನೇಹವೂ ನೆಲೆಸಿರಲಿ. ಅದರಿಂದ ಸಮಸ್ತಕಷ್ಟಗಳಿಂದಲೂ ಪಾರಾಗುತ್ತೀರಿ. ಸಮಸ್ತಜಗತ್ತೂ ತಾಪತ್ರಯಗಳಿಂದ ಮೊದಲೇ ಹತವಾಗಿದೆ. ಹೀಗೆ ಶೋಚನೀಯರಾದ ಜೀವಿಗಳ ವಿಷಯದಲ್ಲಿ ಮತ್ತೆ ದ್ವೇಷವನ್ನು ಯಾವ ಪ್ರಾಜ್ಞನು ತಳೆದಾನು? (79-80). ಒಂದು ವೇಳೆ ಜೀವಿಗಳೆಲ್ಲರೂ ಸುಖವಾಗಿದ್ದಾರೆ, ನಾನು ಮಾತ್ರ ಶಕ್ತಿಹೀನ ಎಂದು ಭಾವಿಸುವುದಾದರೂ ಅವರ ವಿಷಯದಲ್ಲಿ ಸಂತೋಷದಿಂದಲೇ ಇರಬೇಕು. ಏಕೆಂದರೆ, ದ್ವೇಷದಿಂದ ಕೆಡಕು ಮಾತ್ರ ಸಂಭವಿಸುತ್ತದೆ (81). ಜನರು ಬದ್ಧವೈರಿಗಳಾಗಿ ದ್ವೇಷವನ್ನು ಮಾಡುತ್ತಿರುವುದಾದರೆ, ಪ್ರಾಜ್ಞರ ದೃಷ್ಟಿಯಲ್ಲಿ ಅವರು ಅತ್ಯಂತ ಶೋಚನೀಯರು; ಅಜ್ಞಾನಮೋಹಿತರು (82). ದೈತ್ಯರೆ, ಇದುವರೆಗೆ ನಾನು ಹೇಳಿದವುಗಳೆಲ್ಲವೂ ಭೇದದೃಷ್ಟಿಯುಳ್ಳವರ ಅಭಿಪ್ರಾಯಗಳು. ಅವನ್ನು ಒಪ್ಪತಕ್ಕದ್ದೇ ಸರಿ. ಆದರೆ

**ವಿಸ್ತಾರಃ ಸರ್ವಭೂತಸ್ಯ ವಿಷ್ಣೋಃ ಸರ್ವಮಿದಂ ಜಗತ್।**
**ದ್ರಷ್ಟವ್ಯಮಾತ್ಮವತ್ತಸ್ಮಾದಭೇದೇನ ವಿಚಕ್ಷಣೈಃ॥ 84**

**ಸಮುತ್ಸೃಜ್ಯಾಸುರಂ ಭಾವಂ ತಸ್ಮಾದ್ಯೂಯಂ ತಥಾ ವಯಮ್।**
**ತಥಾ ಯತ್ನಂ ಕರಿಷ್ಯಾಮೋ ಯಥಾ ಪ್ರಾಪ್ಸ್ಯಾಮ ನಿರ್ವೃತಿಮ್॥**

**ಯಾ ನಾಗ್ನಿನಾ ಚ ಚಾರ್ಕೇಣ ನೇಂದುನಾ ಚ ನ ವಾಯುನಾ।**
**ಪರ್ಜನ್ಯವರುಣಾಭ್ಯಾಂ ವಾ ನ ಸಿದ್ಧೈರ್ನ ಚ ರಾಕ್ಷಸೈಃ॥ 86**

**ನ ಯಕ್ಷೈರ್ನ ಚ ದೈತ್ಯೇಂದ್ರೈರ್ನೋರಗೈರ್ನ ಚ ಕಿನ್ನರೈಃ।**
**ನ ಮನುಷ್ಯೈರ್ನ ಪಶುಭಿರ್ದೋಷೈರ್ನೈವಾತ್ಮಸಂಭವೈಃ॥ 87**

**ಜ್ವರಾಕ್ಷಿರೋಗಾತೀಸಾರಪ್ಲೀಹಗುಲ್ಮಾದಿಕೈಸ್ತಥಾ।**
**ದ್ವೇಷೇರ್ಷ್ಯಾಮತ್ಸರಾದ್ಯೈರ್ವಾ ರಾಗಲೋಭಾದಿಭಿಃ ಕ್ಷಯಮ್॥ 88**

---

ಸಾರವೇನೆಂಬುದನ್ನು ಹೇಳುತ್ತೇನೆ ಕೇಳಿರಿ (83). ಈ ಸಮಸ್ತ ವಿಶ್ವವೂ ಸರ್ವಭೂತನಾದ ವಿಷ್ಣುವಿನ ವಿಕಾಸ. ಆದ್ದರಿಂದ ಪಂಡಿತರಾದವರು ಅಭೇದದೃಷ್ಟಿಯಿಂದ ಇದೆಲ್ಲವೂ ತನ್ನಂತೆಯೇ ಎಂದು ತಿಳಿಯಬೇಕು (84). ಆಸುರಭಾವವನ್ನು ತ್ಯಜಿಸಿ ನೀವು ನಾನು—ಎಲ್ಲರೂ ಪರಮಶಾಂತಿ ಸುಖವನ್ನು ಪಡೆಯಲು ಬೇಕಾದ ಪ್ರಯತ್ನವನ್ನು ಮಾಡೋಣ (85). ಆ ಸುಖವನ್ನು ವಿನಾಶಗೊಳಿಸಲು ಅಗ್ನಿಗೂ ಸಾಧ್ಯವಿಲ್ಲ, ಸೂರ್ಯನಿಗೂ ಸಾಧ್ಯವಿಲ್ಲ. ಚಂದ್ರ, ವಾಯು, ಪರ್ಜನ್ಯ, ವರುಣ, ಸಿದ್ಧ, ರಾಕ್ಷಸರಿಗೂ ಅಳವಲ್ಲ. ಆ ಸುಖವನ್ನು ಭಗ್ನಗೊಳಿಸಲು ಯಕ್ಷರಾಗಲಿ, ದೈತ್ಯೇಂದ್ರರಾಗಲಿ, ಉರಗರಾಗಲಿ, ಕಿನ್ನರರಾಗಲಿ ಸಮರ್ಥರಲ್ಲ. ಮನುಷ್ಯರಿಂದಲೂ ಪಶುಗಳಿಂದಲೂ ಹೇಗೂ ಆಗದು. ದೇಹದಲ್ಲಿ ಹುಟ್ಟುವ ದೋಷಗಳೂ ಆ ಸುಖವನ್ನು ಕೆಡಿಸಲಾರವು (86-87). ಜ್ವರ, ನೇತ್ರರೋಗ, ಅತಿಸಾರ, ಪ್ಲೀಹ (Spleen), ಗುಲ್ಮ (liver)—ಮುಂತಾದ ದೈಹಿಕ ರೋಗಗಳಿಂದಾಗಲಿ, ದ್ವೇಷ, ಈರ್ಷ್ಯೆ, ಮಾತ್ಸರ್ಯ, ರಾಗ, ಲೋಭ ಮುಂತಾದ ಮಾನಸದೋಷಗಳಿಂದಾಗಲಿ ಆ ಪರಮಶಾಂತಿಸುಖಕ್ಕೆ ಚ್ಯುತಿಯಿಲ್ಲ (88). ಇನ್ನು ಬೇರೆ ಯಾವುದರಿಂದಲೂ ಭಂಗವಿಲ್ಲ. ಆ ಶಾಂತಿಸುಖವು ನಿತ್ಯವೂ

**ಸಾ ಚಾನ್ಯೈರ್ನೀಯತೇ ಕೈಶ್ಚಿನ್ನಿತ್ಯಾ ಯಾತ್ಯಂತನಿರ್ಮಲಾ।**
**ತಾಮಾಪ್ನೋತ್ಯಮಲೇ ನ್ಯಸ್ಯ ಕೇಶವೇ ಹೃದಯಂ ನರಃ॥** 89

**ಅಸಾರಸಂಸಾರವಿವರ್ತನೇಷು**
**ಮಾ ಯಾತ ತೋಷಂ ಪ್ರಸಭಂ ಬ್ರವೀಮಿ।**
**ಸರ್ವತ್ರ ದೈತ್ಯಾಸ್ಸಮತಾಮುಪೇತ**
**ಸಮತ್ವಮಾರಾಧನಮಚ್ಯುತಸ್ಯ॥** 90

**ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ**
**ಧರ್ಮಾರ್ಥಕಾಮೈರಲಮಲ್ಪಕಾಸ್ತೇ।**
**ಸಮಾಶ್ರಿತಾದ್ ಬ್ರಹ್ಮತರೋರನಂತಾನ್**
**ನಿಃಸಂಶಯಂ ಪ್ರಾಪ್ಸ್ಯಥ ವೈ ಮಹತ್ಫಲಮ್॥** 91

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಸಪ್ತದಶೋಽಧ್ಯಾಯಃ

---

ಅತ್ಯಂತ ನಿರ್ಮಲವೂ ಆದದ್ದು. ಮಾನವನು ನಿರ್ಮಲನಾದ ಕೇಶವನಲ್ಲಿ ಚಿತ್ತವನ್ನಿರಿಸಿದರೆ ಸಾಕು, ಅದು ಲಭ್ಯವಾಗುವುದು (89). ನಿಃಸಾರವಾದ ಸಂಸಾರದ ಪರಿಣಾಮಗಳಲ್ಲಿ ಸಂತೋಷವನ್ನು ಅರಸಿಕೊಂಡು ಹೋಗಬೇಡಿರಿ. ಈ ಮಾತನ್ನು ನಿಃಶಂಕೆಯಿಂದ ಹೇಳುತ್ತಿದ್ದೇನೆ. ಹೇ ದೈತ್ಯಬಾಲಕರೆ, ಸರ್ವವಸ್ತುಗಳಲ್ಲಿ ಸಮದೃಷ್ಟಿಯನ್ನಿಡಿರಿ. ಸಮತೆಯೆಂಬುದು ಅಚ್ಯುತನ ಆರಾಧನೆ (90). ಆತನು ಪ್ರಸನ್ನನಾದರೆ ದುರ್ಲಭವಾದದ್ದು ಯಾವುದಿದೆ? ಧರ್ಮಾರ್ಥಕಾಮಗಳ ವಿಚಾರ ಬೇಡ, ಅವು ಅಲ್ಪವಾದವುಗಳು. ಅನಂತವಾದ ಬ್ರಹ್ಮವೃಕ್ಷವನ್ನಾಶ್ರಯಿಸಿದರೆ ನಿಃಸಂಶಯವಾಗಿ (ಮೋಕ್ಷವೆಂಬ) ಮಹಾಫಲವನ್ನು ಪಡೆಯುವಿರಿ" ಎಂದನು (91).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹದಿನೇಳನೆಯ ಅಧ್ಯಾಯ ಮುಗಿಯಿತು.



## ಅಷ್ಟಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ತಸ್ಯೈತಾಂ ದಾನವಾಶ್ಚೇಷ್ಟಾಂ ದೃಷ್ಟ್ವಾ ದೈತ್ಯಪತೇರ್ಭಯಾತ್।**
**ಆಚಚಕ್ಷುಃ ಸ ಚೋವಾಚ ಸೂದಾನಾಹೂಯ ಸತ್ವರಃ॥ 1**

*ಹಿರಣ್ಯಕಶಿಪುರುವಾಚ:*

**ಹೇ ಸೂದಾ ಮಮ ಪುತ್ರೋಽಸಾವನ್ಯೇಷಾಮಪಿ ದುರ್ಮತಿಃ।**
**ಕುಮಾರ್ಗದೇಶಿಕೋ ದುಷ್ಟೋ ಹನ್ಯತಾಮವಿಲಂಬಿತಮ್॥ 2**

**ಹಾಲಾಹಲಂ ವಿಷಂ ತಸ್ಯ ಸರ್ವಭಕ್ಷೇಷು ದೀಯತಾಮ್।**
**ಅವಿಜ್ಞಾತಮಸೌ ಪಾಪೋ ಹನ್ಯತಾಂ ಮಾ ವಿಚಾರ್ಯತಾಮ್॥ 3**

---

## ಅಧ್ಯಾಯ 18

ಪ್ರಹ್ಲಾದನನ್ನು ಕೊಲ್ಲುವುದಕ್ಕಾಗಿ ಹಿರಣ್ಯಕಶಿಪು ವಿಷಶಸ್ತ್ರಾಗ್ನಿ ಮೊದಲಾದವನ್ನು ಪ್ರಯೋಗಿಸುವುದು. ಪ್ರಹ್ಲಾದನಿಂದ ಭಗವಂತನ ಸ್ತುತಿ.

ಪರಾಶರರು ಹೇಳಿದರು: ಪ್ರಹ್ಲಾದನು ಮಾಡುತ್ತಿದ್ದ ಈ ಕೆಲಸವನ್ನು ನೋಡಿ ದಾನವರು ಹಿರಣ್ಯಕಶಿಪುವಿಗೆ ಹೆದರಿಕೊಂಡು ಆತನ ಬಳಿ ಎಲ್ಲ ವೃತ್ತಾಂತವನ್ನೂ ನಿವೇದಿಸಿದರು. ಕೂಡಲೇ ಹಿರಣ್ಯಕಶಿಪು ತನ್ನ ಅಡಿಗೆಯವರನ್ನು ಕರೆಸಿ ಹೀಗೆಂದನು (1). "ಎಲೈ ಪಾಚಕರೆ, ನನ್ನ ಪುತ್ರನು ಸ್ವತಃ ದುರ್ಬುದ್ಧಿಯಾಗಿರುವುದಲ್ಲದೆ ಅನ್ಯರಿಗೂ ಸಹ ಕೆಟ್ಟದಾರಿಯನ್ನು ಹೇಳಿಕೊಡುತ್ತಿದ್ದಾನೆ! ಈ ದುಷ್ಟನನ್ನು ತಡಮಾಡದೆ ಕೊಂದುಹಾಕಿರಿ. ಅವನ ಎಲ್ಲ ಆಹಾರಗಳಲ್ಲಿಯೂ ಗೊತ್ತಾಗದಂತೆ ಹಾಲಹಲವಿಷವನ್ನು ಸೇರಿಸಿ ಆ ಪಾಪಿಯನ್ನು ಸಾಯಿಸಿರಿ. ಹಿಂದೆ ಮುಂದೆ ನೋಡಬೇಕಾದ್ದಿಲ್ಲ" ಎಂದು ಆಜ್ಞಾಪಿಸಿದನು (2-3). ಪಾಚಕರು ಮಹಾತ್ಮನಾದ ಪ್ರಹ್ಲಾದನಿಗೆ

*ಶ್ರೀಪರಾಶರ ಉವಾಚ:*

**ತೇ ತಥೈವ ತತಶ್ಚಕ್ರುಃ ಪ್ರಹ್ಲಾದಾಯ ಮಹಾತ್ಮನೇ।**
**ವಿಷದಾನಂ ಯಥಾಜ್ಞಪ್ತಂ ಪಿತ್ರಾ ತಸ್ಯ ಮಹಾತ್ಮನಃ॥** 4

**ಹಾಲಾಹಲಂ ವಿಷಂ ಘೋರಮನಂತೋಚ್ಚಾರಣೇನ ಸಃ।**
**ಅಭಿಮಂತ್ರ್ಯ ಸಹಾನ್ನೇವ ಮೈತ್ರೇಯ ಬುಭುಜೇ ತದಾ॥** 5

**ಅವಿಕಾರಂ ಸ ತದ್‌ಭುಕ್ತ್ವಾ ಪ್ರಹ್ಲಾದಃ ಸ್ವಸ್ಥಮಾನಸಃ।**
**ಅನಂತಖ್ಯಾತಿನಿರ್ವೀರ್ಯಂ ಜರಯಾಮಾಸ ತದ್ವಿಷಮ್॥** 6

**ತತಃ ಸೂದಾ ಭಯತ್ರಸ್ತಾ ಜೀರ್ಣಂ ದೃಷ್ಟ್ವಾ ಮಹದ್ವಿಷಮ್।**
**ದೈತ್ಯೇಶ್ವರಮುಪಾಗಮ್ಯ ಪ್ರಣಿಪತ್ಯೇದಮಬ್ರುವನ್॥** 7

*ಸೂದಾ ಊಚುಃ :*

**ದೈತ್ಯರಾಜ ವಿಷಂ ದತ್ತಮಸ್ಮಾಭಿರತಿಭೀಷಣಮ್।**
**ಜೀರ್ಣಂ ತೇನ ಸಹಾನ್ನೇನ ಪ್ರಹ್ಲಾದೇನ ಸುತೇನ ತೇ॥** 8

---

ಅವನ ತಂದೆಯ ಆಜ್ಞೆಯ ಪ್ರಕಾರ ವಿಷವನ್ನು ಪ್ರಯೋಗಿಸಿದರು. ಪ್ರಹ್ಲಾದನಾದರೋ ಭಗವಂತನ ನಾಮೋಚ್ಚಾರಣಮಂತ್ರದಿಂದ ಅಭಿಮಂತ್ರಿಸಿ ಅನ್ನದೊಡನೆ ಘೋರವಾದ ಹಾಲಾಹಲವಿಷವನ್ನು ಭಕ್ಷಿಸಿದನು (4-5). ಭಗವನ್ನಾಮೋಚ್ಚಾರಣದ ಪ್ರಭಾವದಿಂದ ನಿರ್ವೀರ್ಯವಾದ ವಿಷವನ್ನು ತಿಂದ ಪ್ರಹ್ಲಾದನು ಯಾವ ವಿಕಾರವೂ ಇಲ್ಲದೆ ಸ್ವಸ್ಥಚಿತ್ತನಾಗಿಯೇ ಆ ವಿಷವನ್ನು ಅರಗಿಸಿಕೊಂಡನು (6). ಘೋರವಿಷವು ಜೀರ್ಣವಾದದನ್ನು ಕಂಡು ಭೀತರಾದ ಪಾಚಕರು ದೈತ್ಯೇಶ್ವರನ ಬಳಿಗೆ ಹೋಗಿ ನಮಸ್ಕರಿಸಿ "ಮಹಾರಾಜ, ಅತಿಭೀಕರವಾದ ವಿಷವನ್ನು ಆಹಾರದಲ್ಲಿ ಸೇರಿಸಿ ಕೊಟ್ಟೆವು. ನಿನ್ನ ಮಗ ಪ್ರಹ್ಲಾದನು ಅದನ್ನು ಜೀರ್ಣಿಸಿಕೊಂಡು ಬಿಟ್ಟಿದ್ದಾನೆ" ಎಂದು ಬಿನ್ನಯಿಸಿದರು (7-8). ಆಗ ಹಿರಣ್ಯಕಶಿಪು "ಎಲೈ ಪುರೋಹಿತರೆ, ಬೇಗ ಬೇಗ ಆಗಲಿ. ಅವನ ವಿನಾಶಕ್ಕಾಗಿ ಕೃತ್ಯೆಯನ್ನು ಉತ್ಪಾದಿಸಿರಿ.

*ಹಿರಣ್ಯಕಶಿಪುರುವಾಚ:*

**ತ್ವರ್ಯತಾಂ ತ್ವರ್ಯತಾಂ ಹೇ ಹೇ ಸದ್ಯೋ ದೈತ್ಯಪುರೋಹಿತಾಃ।**
**ಕೃತ್ಯಾಂ ತಸ್ಯ ವಿನಾಶಾಯ ಉತ್ಪಾದಯತ ಮಾ ಚಿರಮ್॥ 9**

*ಶ್ರೀಪರಾಶರ ಉವಾಚ:*

**ಸಕಾಶಮಾಗಮ್ಯ ತತಃ ಪ್ರಹ್ಲಾದಸ್ಯ ಪುರೋಹಿತಾಃ।**
**ಸಾಮಪೂರ್ವಮಥೋಚುಸ್ತೇ ಪ್ರಹ್ಲಾದಂ ವಿನಯಾನ್ವಿತಮ್॥ 10**

**ಜಾತಸ್ತ್ರೈಲೋಕ್ಯವಿಖ್ಯಾತ ಆಯುಷ್ಮನ್ ಬ್ರಹ್ಮಣಃ ಕುಲೇ।**
**ದೈತ್ಯರಾಜಸ್ಯ ತನಯೋ ಹಿರಣ್ಯಕಶಿಪೋರ್ಭವಾನ್॥ 11**

**ಕಿಂ ದೇವೈಃ ಕಿಮನಂತೇನ ಕಿಮನ್ಯೇನ ತವಾಶ್ರಯಃ।**
**ಪಿತಾ ತೇ ಸರ್ವಲೋಕಾನಾಂ ತ್ವಂ ತಥೈವ ಭವಿಷ್ಯಸಿ॥ 12**

**ತಸ್ಮಾತ್ಪರಿತ್ಯಜೈನಾಂ ತ್ವಂ ವಿಪಕ್ಷಸ್ತವಸಂಹಿತಾಮ್।**
**ಶ್ಲಾಘ್ಯಃ ಪಿತಾ ಸಮಸ್ತಾನಾಂ ಗುರೂಣಾಂ ಪರಮೋ ಗುರುಃ॥ 13**

---

ತಡಮಾಡಬೇಡಿ" ಎಂದು ತಿಳಿಸಿದನು (9). ಅನಂತರ ಪುರೋಹಿತರು ಪ್ರಹ್ಲಾದನ ಸಮೀಪಕ್ಕೆ ಹೋಗಿ ವಿನಯಶೀಲನಾದ ಅವನನ್ನು ಕುರಿತು ಸಾಮೋಪಾಯದಿಂದ "ಆಯುಷ್ಮನ್, ಮೂರು ಲೋಕಗಳಲ್ಲಿಯೂ ವಿಖ್ಯಾತವಾದ ಬ್ರಹ್ಮನ ವಂಶದಲ್ಲಿ ನೀನು ಹುಟ್ಟಿದ್ದೀಯೆ. ದೈತ್ಯರಾಜನಾದ ಹಿರಣ್ಯಕಶಿಪುವಿನ ತನಯನಾಗಿದ್ದೀಯೆ. ದೇವತೆಗಳಿಂದಾಗಲಿ ವಿಷ್ಣುವಿನಿಂದಾಗಲಿ ಇನ್ನೊಬ್ಬನಿಂದಾಗಲಿ ನಿನಗೆ ಆಗಬೇಕಾದ್ದೇನು? ಸರ್ವಲೋಕಗಳಿಗೂ ನಿನ್ನ ತಂದೆ ಆಶ್ರಯನಾಗಿದ್ದಾನೆ. ನೀನೂ ಮುಂದೆ ತಂದೆಯಂತೆಯೇ ಆಗುವೆ (10-12). ಆದ್ದರಿಂದ ವೈರಿಯನ್ನು ಸ್ತುತಿಮಾಡುವ ಈ ಕ್ರಮವನ್ನು ತ್ಯಜಿಸು. ಶ್ಲಾಘನೀಯನಾದ ತಂದೆ ಇದ್ದಾನೆ. ಅವನು ನಿನಗೆ ಸಮಸ್ತ ಗುರುಗಳಿಗೂ ಗುರುವಾದವನು" ಎಂದು ತಿಳಿಸಿದರು (13). ಪ್ರಹ್ಲಾದನು ಹೇಳಿದನು: "ಮಹಾಶಯರೆ, ಇದು ಹೌದು. ಮರೀಚಿಯ ಈ ಮಹಾವಂಶವು ಮೂರು ಲೋಕಗಳಲ್ಲಿಯೂ ಪ್ರಶಂಸನೀಯವಾದದ್ದು

*ಪ್ರಹ್ಲಾದ ಉವಾಚ:*

**ಏವಮೇತನ್ಮಹಾಭಾಗಾಃ ಶ್ಲಾಘ್ಯಮೇತನ್ಮಹಾಕುಲಮ್।**
**ಮರೀಚೇಃ ಸಕಲೇಽಪ್ಯಸ್ಮಿನ್ ತ್ರೈಲೋಕ್ಯೇ ನಾನ್ಯಥಾ ವದೇತ್॥ 14**

**ಪಿತಾ ಚ ಮಮ ಸರ್ವಸ್ಮಿಂಜಗತ್ಯುತ್ಕೃಷ್ಟಚೇಷ್ಟಿತಃ।**
**ಏತದಪ್ಯವಗಚ್ಛಾಮಿ ಸತ್ಯಮತ್ರಾಪಿ ನಾನೃತಮ್॥ 15**

**ಗುರೂಣಾಮಪಿ ಸರ್ವೇಷಾಂ ಪಿತಾ ಪರಮಕೋ ಗುರುಃ।**
**ಯದುಕ್ತಂ ಭ್ರಾಂತಿಸ್ತತ್ರಾಪಿ ಸ್ವಲ್ಪಾಪಿ ಹಿ ನ ವಿದ್ಯತೇ॥ 16**

**ಪಿತಾ ಗುರುರ್ನ ಸಂದೇಹಃ ಪೂಜನೀಯಃ ಪ್ರಯತ್ನತಃ।**
**ತತ್ರಾಪಿ ನಾಪರಾಧ್ಯಾಮೀತ್ಯೇವಂ ಮನಸಿ ಮೇ ಸ್ಥಿತಮ್॥ 17**

**ಯತ್ತ್ವೇತತ್ಕಿಮನಂತೇನೇತ್ಯುಕ್ತಂ ಯುಷ್ಮಾಭಿರೀದೃಶಮ್।**
**ಕೋ ಬ್ರವೀತಿ ಯಥಾನ್ಯಾಯ್ಯಂ ಕಿಂ ತು**
**ನೈತದ್ವಚೋಽರ್ಥವತ್॥ 18**

---

ದಿಟ. ಈ ವಿಷಯದಲ್ಲಿ ಯಾವನೂ ಬೇರೆ ಹೇಳಲಾರ (14). ಈ ಜಗತ್ತಿನಲ್ಲಿ ನನ್ನ ತಂದೆ ಮಹಾಪರಾಕ್ರಮಿಯೂ ಹೌದು. ಇದು ನನಗೆ ಗೊತ್ತಿದೆ. ಇದೂ ಸತ್ಯವೇ ಸರಿ, ಹುಸಿಯಲ್ಲ. ತಂದೆಯು ಸಮಸ್ತ ಗುರುಗಳಿಗೂ ಶ್ರೇಷ್ಠನಾದ ಪರಮಗುರುವೆಂದು ಹೇಳಿದಿರಷ್ಟೆ. ಆ ವಿಷಯ ದಲ್ಲಿಯೂ ನನಗೆ ಲೇಶವಾದರೂ ಸಂದೇಹವಿಲ್ಲ (15-16). ತಂದೆಯು ಗುರು ಹೌದು. ಸಂಶಯವಿಲ್ಲ. ಆತನನ್ನು ಎಲ್ಲ ವಿಧದಿಂದಲೂ ಗೌರವಿಸ ಬೇಕು. ಆ ವಿಷಯದಲ್ಲಿ ನಾನೇನೂ ತಪ್ಪುಮಾಡುತ್ತಿಲ್ಲವೆಂದು ನನ್ನ ಮನಸ್ಸಿನಲ್ಲಿ ನಂಬಿಕೆ ಇದೆ (17). ಆದರೆ ವಿಷ್ಣುವಿನಿಂದ ಏನು ಪ್ರಯೋಜನ —ಎಂದು ನೀವು ಹೇಳಿದಿರಲ್ಲ, ಇದು ನ್ಯಾಯವಾದ ನುಡಿಯೆಂದು ಯಾವನು ಹೇಳಿಯಾನು? ಇದು ಅರ್ಥವತ್ತಾದ ನುಡಿಯಲ್ಲ" ಎಂದನು (18). ಪ್ರಹ್ಲಾದನು ಹೀಗೆ ನುಡಿದು ಪುರೋಹಿತರೆಂಬ ಗೌರವಬುದ್ಧಿ ಯಿಂದ ನಿಯಂತ್ರಿತನಾಗಿ ಮೌನವನ್ನು ತಳೆದನು. ಆಮೇಲೆ ನಕ್ಕು ಮತ್ತೆ ಹೇಳಿದನು: "ವಿಷ್ಣುವಿನಿಂದ ಏನು ಪ್ರಯೋಜನ! ಚೆನ್ನಾಗಿದೆ! ಗುರುಗಳೆ

**ಇತ್ಯುಕ್ತ್ವಾ ಸೋಽಭವನ್ಮೌನೀ ತೇಷಾಂ ಗೌರವಯಂತ್ರಿತಃ।**
**ಪ್ರಹಸ್ಯ ಚ ಪುನಃ ಪ್ರಾಹ ಕಿಮನಂತೇನ ಸಾಧ್ವಿತಿ॥** 19

**ಸಾಧು ಭೋ ಕಿಮನಂತೇನ ಸಾಧು ಭೋ ಗುರವೋ ಮಮ।**
**ಶ್ರೂಯತಾಂ ಯದನಂತೇನ ಯದಿ ಖೇದಂ ನ ಯಾಸ್ಯಥ॥** 20

**ಧರ್ಮಾರ್ಥಕಾಮಮೋಕ್ಷಾಶ್ಚ ಪುರುಷಾರ್ಥ ಉದಾಹೃತಾಃ।**
**ಚತುಷ್ಟಯಮಿದಂ ಯಸ್ಮಾತ್ತಸ್ಮಾತ್ಕಿಂ ಕಿಮಿದಂ ವಚಃ॥** 21

**ಮರೀಚಿಮಿಶ್ರೈರ್ದಕ್ಷಾದ್ಯೈಸ್ತಥೈವಾನ್ಯೈರನಂತತಃ।**
**ಧರ್ಮಃ ಪ್ರಾಪ್ತಸ್ತಥಾ ಚಾನ್ಯೈರರ್ಥಃ ಕಾಮಸ್ತಥಾ ಪರೈಃ॥** 22

**ತತ್ತ್ವವೇದಿನೋ ಭೂತ್ವಾ ಜ್ಞಾನಧ್ಯಾನಸಮಾಧಿಭಿಃ।**
**ಅವಾಪುರ್ಮುಕ್ತಿಮಪರೇ ಪುರುಷಾ ಧ್ವಸ್ತಬಂಧನಾಃ॥** 23

**ಸಂಪದೈಶ್ವರ್ಯಮಾಹಾತ್ಮ್ಯಜ್ಞಾನಸಂತತಿಕರ್ಮಣಾಮ್।**
**ವಿಮುಕ್ತೇಶ್ಚೈಕತೋ ಲಭ್ಯಂ ಮೂಲಮಾರಾಧನಂ ಹರೇಃ॥** 24

---

ಬಹಳ ಚೆನ್ನಾಗಿದೆ! ಚೆನ್ನಾಗಿದೆ! ನಿಮ್ಮ ಮನಸ್ಸಿಗೆ ಖೇದವಾಗದಿದ್ದರೆ ಏನು ಪ್ರಯೋಜನವೆಂದು ಹೇಳುವೆನು, ಕೇಳಿರಿ! (19-20). ಧರ್ಮ, ಅರ್ಥ, ಕಾಮ, ಮೋಕ್ಷಗಳು ಪುರುಷಾರ್ಥಗಳೆಂದು ಹೇಳಲ್ಪಟ್ಟಿವೆ. ಈ ನಾಲ್ಕು ಪುರುಷಾರ್ಥಗಳೂ ಯಾವಾತನಿಂದ ದೊರಕುತ್ತವೆಯೋ 'ಆತನಿಂದ ಏನು ಪ್ರಯೋಜನ?'—ಎಂದು ಕೇಳಿದರೆ, ಏನು ಮಾತಿದು? (21). ಮರೀಚಿ ಮುನಿಗಳೂ ದಕ್ಷಪ್ರಜಾಪತಿಯೇ ಮೊದಲಾದವರೂ ಇನ್ನೂ ಇತರ ಮಹನೀಯರೂ ವಿಷ್ಣುವಿನಿಂದ ಧರ್ಮವನ್ನು ಪಡೆದಿದ್ದಾರೆ; ಕೆಲವರು ಅರ್ಥವನ್ನೂ ಕೆಲವರು ಕಾಮವನ್ನೂ ಪಡೆದಿದ್ದಾರೆ (22). ಮತ್ತೆ ಕೆಲವರು ವಿಷ್ಣುವಿನ ನಿಜಸ್ವರೂಪವನ್ನು ಜ್ಞಾನಧ್ಯಾನಸಮಾಧಿಗಳಿಂದ ತಿಳಿದು ಸಂಸಾರಬಂಧನವನ್ನು ಕಳಚಿ ಮುಕ್ತಿಯನ್ನು ಗಳಿಸಿದ್ದಾರೆ. ಸಂಪತ್ತು, ಐಶ್ವರ್ಯ, ಮಾಹಾತ್ಮ್ಯ, ಜ್ಞಾನ, ಸಂತಾನ, ಕರ್ಮ, ಮೋಕ್ಷ—ಇವೆಲ್ಲವು ಗಳಿಗೂ ಏಕಮೂಲವಾದದ್ದು ಶ್ರೀಹರಿಯ ಆರಾಧನೆ. ಅದೇ ನಮಗೆ ಆರ್ಜನೀಯವಾದದ್ದು (23-24). ಧರ್ಮಾರ್ಥಕಾಮಗಳೂ ಮುಕ್ತಿಯೂ

**ಯತೋ ಧರ್ಮಾರ್ಥಕಾಮಾಖ್ಯಂ ಮುಕ್ತಿಶ್ಚಾಪಿ ಫಲಂ ದ್ವಿಜಾಃ।**
**ತೇನಾಪಿ ಕಿಂ ಕಿಮಿತ್ಯೇವಮನಂತೇನ ಕಿಮುಚ್ಯತೇ॥ 25**

**ಕಿಂ ಚಾಪಿ ಬಹುನೋಕ್ತೇನ ಭವಂತೋ ಗುರವೋ ಮಮ।**
**ವದಂತು ಸಾಧು ವಾಸಾಧು ವಿವೇಕೋಽಸ್ಮಾಕಮಲ್ಪಕಃ॥ 26**

**ಬಹುನಾತ್ರ ಕಿಮುಕ್ತೇನ ಸ ಏವ ಜಗತಃ ಪತಿಃ।**
**ಸ ಕರ್ತಾ ಚ ವಿಕರ್ತಾ ಚ ಸಂಹರ್ತಾ ಚ ಹೃದಿ ಸ್ಥಿತಃ॥ 27**

**ಸ ಭೋಕ್ತಾ ಭೋಜ್ಯಮಪ್ಯೇವಂ ಸ ಏವ ಜಗದೀಶ್ವರಃ।**
**ಭವದ್ಭಿರೇತತ್ ಕ್ಷಂತವ್ಯಂ ಬಾಲ್ಯಾದುಕ್ತಂ ತು ಯನ್ಮಯಾ॥ 28**

*ಪುರೋಹಿತಾ ಊಚುಃ :*

**ದಹ್ಯಮಾನಸ್ತ್ವಮಸ್ಮಾಭಿರಗ್ನಿನಾ ಬಾಲ ರಕ್ಷಿತಃ।**
**ಭೂಯೋ ನ ವಕ್ಷ್ಯಸೀತ್ಯೇವಂ ನೈವ ಜ್ಞಾತೋಽಸ್ಯಬುದ್ಧಿಮಾನ್॥ 29**

---

ಯಾರಿಂದ ಫಲವಾಗಿ ದೊರೆಯುವುದೋ, ಅವನಿಂದ ಏನು ಪ್ರಯೋಜನ?—ಎಂದು, ಬ್ರಾಹ್ಮಣರೆ, ಏಕೆ ಕೇಳುತ್ತೀರಿ? (25). ಹೆಚ್ಚು ಹೇಳುವುದರಿಂದೇನು? ನೀವು ನನ್ನ ಗುರುಗಳು. ಸರಿಯೆಂದಾದರೂ ಹೇಳಿರಿ, ತಪ್ಪೆಂದಾದರೂ ಹೇಳಿರಿ. ನನ್ನ ವಿಚಾರಶಕ್ತಿ ಅಲ್ಪವಾದದ್ದು. ಬಹಳ ಹೇಳುವುದರಿಂದ ಫಲವೇನು? ವಿಷ್ಣುವೇ ಜಗದೀಶ್ವರ. ಆತನೇ ಕರ್ತ, ಅನ್ಯಥಾಕರ್ತ, ಸಂಹರ್ತ. ಅವನು ನನ್ನ ಹೃದಯದಲ್ಲಿ ನೆಲೆಸಿದ್ದಾನೆ (26-27). ಆತನೇ ಭೋಕ್ತ, ಭೋಜ್ಯ. ಆತನೇ ವಿಶ್ವಾಧಿಪತಿ. ನಾನು ಬಾಲತನದಿಂದ ಏನೋ ಹೇಳಿದ್ದೇನೆ. ನೀವು ದಯವಿಟ್ಟು ಕ್ಷಮಿಸಬೇಕು" ಎಂದು ತಿಳಿಸಿದನು (28). ಅದಕ್ಕೆ ಪುರೋಹಿತರು "ಎಲೆ ಹುಡುಗ, ಬೆಂಕಿಯಲ್ಲಿ ನೀನು ಸುಟ್ಟುಹೋಗುತ್ತಿರುವಾಗ ನಾವು ನಿನ್ನನ್ನು ಉಳಿಸಿದೆವು. ಮತ್ತೆ ಹೀಗೆ ಹೇಳುವುದಿಲ್ಲ—ಎಂದು ತಿಳಿದಿದ್ದೆವು. ನೀನು ಇಷ್ಟು ಮೂರ್ಖನೆಂದು ನಮಗೆ ಗೊತ್ತಾಗಲಿಲ್ಲ. ನಾವು ತಿಳಿಯಹೇಳಿದರೂ ನೀನು ಈ ಅಜ್ಞಾನದ ಬಲೆಯನ್ನು ತ್ಯಜಿಸುವುದಿಲ್ಲವಾದರೆ, ಎಲಾ ದುಷ್ಟ, ನಿನ್ನನ್ನು

**ಯದಾಸ್ಮದ್ವಚನಾನ್ಮೋಹಗ್ರಾಹಂ ನ ತ್ಯಕ್ಷ್ಯತೇ ಭವಾನ್।**
**ತತಃ ಕೃತ್ಯಾಂ ವಿನಾಶಾಯ ತವ ಸೃಕ್ಷ್ಯಾಮ ದುರ್ಮತೇ॥ 30**

*ಪ್ರಹ್ಲಾದ ಉವಾಚ:*

**ಕಃ ಕೇನ ಹನ್ಯತೇ ಜಂತುರ್ಜಂತುಃ ಕಃ ಕೇನ ರಕ್ಷ್ಯತೇ।**
**ಹಂತಿ ರಕ್ಷತಿ ಚೈವಾತ್ಮಾ ಹ್ಯಸತ್ಸಾಧು ಸಮಾಚರನ್॥ 31**

**ಕರ್ಮಣಾ ಜಾಯತೇ ಸರ್ವಂ ಕರ್ಮೈವ ಗತಿಸಾಧನಮ್।**
**ತಸ್ಮಾತ್ಸರ್ವಪ್ರಯತ್ನೇನ ಸಾಧುಕರ್ಮಸಮಾಚರೇತ್॥ 32**

*ಶ್ರೀಪರಾಶರ ಉವಾಚ:*

**ಇತ್ಯುಕ್ತಾಸ್ತೇನ ತೇ ಕ್ರುದ್ಧಾ ದೈತ್ಯರಾಜಪುರೋಹಿತಾಃ।**
**ಕೃತ್ಯಾಮುತ್ಪಾದಯಾಮಾಸುರ್ಜ್ವಾಲಾಮಾಲೋಜ್ಜ್ವಲಾಕೃತಿಮ್॥ 33**

**ಅತಿಭೀಮಾ ಸಮಾಗಮ್ಯ ಪಾದನ್ಯಾಸಕ್ಷತಕ್ಷಿತಿಃ।**
**ಶೂಲೇನ ಸಾಧು ಸಂಕ್ರುದ್ಧಾಂ ತಂ ಜಘಾನಾಶು ವಕ್ಷಸಿ॥ 34**

---

ನಾಶಗೊಳಿಸುವುದಕ್ಕಾಗಿ ಕೃತ್ಯೆಯನ್ನು ಸೃಷ್ಟಿಸುತ್ತೇವೆ!" ಎಂದರು (29-30). ಅದಕ್ಕೆ ಪ್ರಹ್ಲಾದನು "ಯಾರು ಯಾರನ್ನು ಕೊಲ್ಲುತ್ತಾರೆ, ಯಾರನ್ನು ರಕ್ಷಿಸುತ್ತಾರೆ! ಶುಭವನ್ನೋ ಅಶುಭವನ್ನೋ ಆಚರಿಸತಕ್ಕವನು ತನ್ನನ್ನು ತಾನೇ ಕೊಂದುಕೊಳ್ಳುತಾನೆ, ರಕ್ಷಿಸಿಕೊಳ್ಳುತ್ತಾನೆ. ಅವರವರ ಕರ್ಮದಿಂದಲೇ ಎಲ್ಲವೂ ಆಗುತ್ತದೆ. ಕರ್ಮವೇ ಸದ್ಗತಿಗೋ ದುರ್ಗತಿಗೋ ಸಾಧನ. ಆದ್ದರಿಂದ ಸರ್ವಪ್ರಯತ್ನಪೂರ್ವಕವಾಗಿ ಶುಭ ಕರ್ಮವನ್ನೇ ಆಚರಿಸಬೇಕು" ಎಂದು ಹೇಳಿದನು (31-32). ಈ ಪ್ರಕಾರಹೇಳಲಾಗಿ ದೈತ್ಯರಾಜಪುರೋಹಿತರು ಸಿಟ್ಟಿನಿಂದ ಕೆರಳಿ, ಜ್ವಾಲಾಮಾಲೆಗಳಿಂದ ಭೀಕರಾಕೃತಿಯಾದ ಕೃತ್ಯೆಯನ್ನು ಸೃಷ್ಟಿಸಿದರು. ಅತ್ಯಂತ ಭೀಷಣಳಾದ ಆ ಕೃತ್ಯೆಯು ಒಂದೊಂದು ಹೆಜ್ಜೆಗೂ ನೆಲವನ್ನು ನಡುಗಿಸುತ್ತ ಬಂದು ಕ್ರೋಧಾವಿಷ್ಟಳಾಗಿ ಪ್ರಹ್ಲಾದನ ಎದೆಯನ್ನು ಶೂಲದಿಂದ ಬಲವಾಗಿ ತಿವಿದಳು (33-34). ತೇಜೋಮಯವಾದ ಶೂಲವು ಆ ಬಾಲಕನ ಎದೆಗೆ

**ತತ್ತಸ್ಯ ಹೃದಯಂ ಪ್ರಾಪ್ಯ ಶೂಲಂ ಬಾಲಸ್ಯ ದೀಪ್ತಿಮತ್।**
**ಜಗಾಮ ಖಂಡಿತಂ ಭೂಮೌ ತತ್ರಾಪಿ ಶತಧಾ ಗತಮ್॥** 35

**ಯತ್ರಾನಪಾಯೀ ಭಗವಾನ್ ಹೃದ್ಯಾಸ್ತೇ ಹರಿರೀಶ್ವರಃ।**
**ಭಂಗೋ ಭವತಿ ವಜ್ರಸ್ಯ ತತ್ರ ಶೂಲಸ್ಯ ಕಾ ಕಥಾ॥** 36

**ಅಪಾಪೇ ತತ್ರ ಪಾಪೈಶ್ಚ ಪಾತಿತಾ ದೈತ್ಯಯಾಜಕೈಃ।**
**ತಾನೇವ ಸಾ ಜಘಾನಾಶು ಕೃತ್ಯಾ ನಾಶಂ ಜಗಾಮ ಚ॥** 37

**ಕೃತ್ಯಯಾ ದಹ್ಯಮಾನಾಂಸ್ತಾನ್ ವಿಲೋಕ್ಯ ಸ ಮಹಾಮತಿಃ।**
**ತ್ರಾಹಿ ಕೃಷ್ಣೇತ್ಯನಂತೇತಿ ವದನ್ನಭ್ಯವಪದ್ಯತ॥** 38

*ಪ್ರಹ್ಲಾದ ಉವಾಚ:*

**ಸರ್ವವ್ಯಾಪಿನ್ ಜಗದ್ರೂಪ ಜಗತ್ಸ್ರಷ್ಟರ್ಜನಾರ್ದನ।**
**ಪಾಹಿ ವಿಪ್ರಾನಿಮಾನಸ್ಮಾದ್‌ದುಃಸಹಾನ್ಮಂತ್ರಪಾವಕಾತ್॥** 39

**ಯಥಾ ಸರ್ವೇಷು ಭೂತೇಷು ಸರ್ವವ್ಯಾಪೀ ಜಗದ್‌ಗುರುಃ।**
**ವಿಷ್ಣುರೇವ ತಥಾ ಸರ್ವೇ ಜೀವಂತ್ವೇತೇ ಪುರೋಹಿತಾಃ॥** 40

---

ತಾಕಿ ಮುರಿದು ನೂರಾರು ಚೂರಾಗಿ ನೆಲದ ಮೇಲೆ ಬಿದ್ದಿತು! ಮೈತ್ರೇಯ, ಭಗವಂತನೂ ಈಶ್ವರನೂ ಆದ ಶ್ರೀಹರಿಯು ಯಾವ ಹೃದಯದಲ್ಲಿ ಸ್ಥಿರವಾಗಿ ನೆಲೆಸಿರುವನೋ, ಆ ಹೃದಯಕ್ಕೆ ತಾಕಿದರೆ ವಜ್ರಾಯುಧವೂ ಮುರಿದುಹೋಗುತ್ತದೆ, ಇನ್ನು ಆ ಶೂಲದ ಕಥೆಯೇನು? (35-36). ಪಾಪಿಗಳಾದ ದೈತ್ಯಪುರೋಹಿತರು ಪುಣ್ಯಾತ್ಮನಾದ ಪ್ರಹ್ಲಾದನ ಮೇಲೆ ಪ್ರಯೋಗಿಸಿದ ಆ ಕೃತ್ಯೆಯು ಕೂಡಲೇ ಆ ಪುರೋಹಿತರನ್ನೇ ಕೊಂದುಹಾಕಿ ಅದೃಶ್ಯಳಾದಳು! (37). ಕೃತ್ಯೆಯಿಂದ ಸುಟ್ಟುಹೋಗುತ್ತಿದ್ದ ಪುರೋಹಿತ ರನ್ನು ನೋಡಿ ಪ್ರಾಜ್ಞನಾದ ಪ್ರಹ್ಲಾದನು 'ಹಾ ಕೃಷ್ಣ! ಅನಂತ, ಕಾಪಾಡು!' ಎಂದು ಕೂಗುತ್ತ ಅಲ್ಲಿಗೆ ಓಡಿಬಂದನು (38). "ಹೇ ಸರ್ವವ್ಯಾಪಿ, ಜಗದ್ರೂಪ, ಸೃಷ್ಟಿಕರ್ತ, ಜನಾರ್ದನ! ದುಃಸಹವಾದ ಈ ಮಂತ್ರಾಗ್ನಿ ಯಿಂದ ಈ ವಿಪ್ರರನ್ನು ರಕ್ಷಿಸು. ಸರ್ವಭೂತಗಳಲ್ಲಿ ಸರ್ವವ್ಯಾಪಿಯೂ ಜಗದ್ಗುರುವೂ ಆದ ವಿಷ್ಣುವಿರುವುದೇ ಸತ್ಯ. ಇದರ ಬಲದಿಂದ ಈ

**ಯಥಾ ಸರ್ವಗತಂ ವಿಷ್ಣುಂ ಮನ್ಯಮಾನೋಽನಪಾಯಿನಮ್।**
**ಚಿಂತಯಾಮ್ಯರಿಪಕ್ಷೇಽಪಿ ಜೀವಂತ್ವೇತೇ ಪುರೋಹಿತಾಃ॥ 41**

**ಯೇ ಹಂತುಮಾಗತಾ ದತ್ತಂ ಯೈರ್ವಿಷಂ ಯೈರ್ಹುತಾಶನಃ।**
**ಯೈರ್ದಿಗ್ಗಜೈರಹಂ ಕ್ಷುಣ್ಣೋ ದಷ್ಟಃ ಸರ್ಪೈಶ್ಚ ಯೈರಪಿ॥ 42**

**ತೇಷ್ವಹಂ ಮಿತ್ರಭಾವೇನ ಸಮಃ ಪಾಪೋಽಸ್ಮಿ ನ ಕ್ವಚಿತ್।**
**ಯಥಾ ತೇನಾದ್ಯ ಸತ್ಯೇನ ಜೀವಂತ್ವಸುರಯಾಜಕಾಃ॥ 43**

*ಶ್ರೀಪರಾಶರ ಉವಾಚ:*

**ಇತ್ಯುಕ್ತಾಸ್ತೇನ ತೇ ಸರ್ವೇ ಸಂಸ್ಪೃಷ್ಟಾಶ್ಚ ನಿರಾಮಯಾಃ।**
**ಸಮುತ್ತಸ್ಥುರ್ದ್ವಿಜಾ ಭೂಯಸ್ತಮೂಚುಃ ಪ್ರಶ್ರಯಾನ್ವಿತಮ್॥ 44**

*ಪುರೋಹಿತಾ ಊಚುಃ :*

**ದೀರ್ಘಾಯುರಪ್ರತಿಹತೋ ಬಲವೀರ್ಯಸಮನ್ವಿತಃ।**
**ಪುತ್ರಪೌತ್ರಧನೈಶ್ವರ್ಯೈರ್ಯುಕ್ತೋ ವತ್ಸ ಭವೋತ್ತಮಃ॥ 45**

---

ಪುರೋಹಿತರು ಬದುಕಲಿ (39-40). ಸರ್ವಗತನಾದ ವಿಷ್ಣುವು ಶತ್ರುವಿನಲ್ಲಿಯೂ ಸ್ಥಿರವಾಗಿ ಇದ್ದಾನೆಂದು ತಿಳಿದು, ಹಾಗೆಯೇ ನಾನು ನಂಬಿರುವುದಾದರೆ ಈ ಪುರೋಹಿತರು ಬದುಕಲಿ (41). ಯಾರು ನನ್ನನ್ನು ಕೊಲ್ಲಲು ಬಂದರೋ, ಯಾರು ವಿಷವಿಟ್ಟರೋ, ಯಾರು ಬೆಂಕಿಯನ್ನು ಹೊತ್ತಿಸಿದರೋ, ಯಾವ ದಿಗ್ಗಜಗಳಿಂದ ನಾನು ತಿವಿಯಲ್ಪಟ್ಟೆನೋ, ಯಾವ ಸರ್ಪಗಳಿಂದ ಕಡಿಯಲ್ಪಟ್ಟೆನೋ ಅವರೆಲ್ಲರಲ್ಲಿಯೂ ನಾನು ಮಿತ್ರಭಾವದಿಂದ ಸಮದೃಷ್ಟಿಯನ್ನು ಹೊಂದಿರುವುದೇ ಹೌದಾದರೆ, ಯಾರ ವಿಷಯದಲ್ಲಿಯೂ ನಾನು ಪಾಪವನ್ನು ಮಾಡಿಲ್ಲವಾದರೆ, ಆ ಸತ್ಯಬಲದಿಂದ ಈ ಅಸುರ ಪುರೋಹಿತರು ಬದುಕಲಿ" ಎಂದನು (42-43). ಪ್ರಹ್ಲಾದನು ಹೀಗೆ ನುಡಿದು ಆ ವಿಪ್ರರನ್ನು ಸ್ಪರ್ಶಿಸಲು ಅವರೆಲ್ಲರೂ ಯಾವ ತೊಂದರೆಯಿಲ್ಲದೆ ಜೀವಂತರಾಗಿ ಎದ್ದು ನಯದಿಂದ "ವತ್ಸ, ದೀರ್ಘಾಯುವಾಗು, ಎದುರಿಲ್ಲದ ಬಲವೀರ್ಯಸಮನ್ವಿತನಾಗಿ ಪುತ್ರ ಪೌತ್ರ ಧನ ಸಂಪತ್ತು

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾ ತಂ ತತೋ ಗತ್ವಾ ಯಥಾವೃತ್ತಂ ಪುರೋಹಿತಾಃ।**
**ದೈತ್ಯರಾಜಾಯ ಸಕಲಮಾಚಚಕ್ಷುರ್ಮಹಾಮುನೇ॥** 46

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಅಷ್ಟಾದಶೋಽಧ್ಯಾಯಃ

---

ಗಳಿಂದ ಕೂಡಿ ಶ್ರೇಷ್ಠಪುರುಷನಾಗು" ಎಂದು ಆಶೀರ್ವದಿಸಿದರು. ಅನಂತರ ಆ ಪುರೋಹಿತರು ಹಿರಣ್ಯಕಶಿಪುವಿನ ಬಳಿಗೆ ಹೋಗಿ ನಡೆದ ವೃತ್ತಾಂತವನ್ನು ಅವನಿಗೆ ತಿಳಿಸಿದರು (44-46).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹದಿನೆಂಟನೆಯ ಅಧ್ಯಾಯ ಮುಗಿಯಿತು.



## ಏಕೋನವಿಂಶತಿತಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಹಿರಣ್ಯಕಶಿಪುಃ ಶ್ರುತ್ವಾ ತಾಂ ಕೃತ್ಯಾಂ ವಿತಥೀಕೃತಾಮ್ ।**
**ಆಹೂಯ ಪುತ್ರಂ ಪಪ್ರಚ್ಛ ಪ್ರಭಾವಸ್ಯಾಸ್ಯ ಕಾರಣಮ್ ॥** 1

*ಹಿರಣ್ಯಕಶಿಪುರುವಾಚ:*

**ಪ್ರಹ್ಲಾದ ಸುಪ್ರಭಾವೋಽಸಿ ಕಿಮೇತತ್ತೇ ವಿಚೇಷ್ಟಿತಮ್ ।**
**ಏತನ್ಮಂತ್ರಾದಿಜನಿತಮುತಾಹೋ ಸಹಜಂ ತವ ॥** 2

*ಶ್ರೀಪರಾಶರ ಉವಾಚ:*

**ಏವಂ ಪೃಷ್ಟಸ್ತದಾ ಪಿತ್ರಾ ಪ್ರಹ್ಲಾದೋಽಸುರಬಾಲಕಃ ।**
**ಪ್ರಣಿಪತ್ಯ ಪಿತುಃ ಪಾದಾವಿದಂ ವಚನಮಬ್ರವೀತ್ ॥** 3

---

## ಅಧ್ಯಾಯ 19

ಪ್ರಹ್ಲಾದನಿಂದ ಭಗವಂತನ ಗುಣವರ್ಣನೆ. ಪ್ರಹ್ಲಾದನನ್ನು ಕೊಲ್ಲಲು ಹಿರಣ್ಯಕಶಿಪುವಿನ ನಾನಾವಿಧ ಪ್ರಯತ್ನ. ಪ್ರಹ್ಲಾದನಿಂದ ಭಗವಂತನ ಸ್ತುತಿ.

ಪರಾಶರರು ಹೇಳಿದರು: ಕೃತ್ಯೆಯ ನಿರ್ಮಾಣ ವಿಫಲವಾದುದನ್ನು ಕೇಳಿ ಹಿರಣ್ಯಕಶಿಪು ಮಗನನ್ನು ಕರೆಸಿ "ಪ್ರಹ್ಲಾದ, ನೀನು ಬಹಳ ಪ್ರಭಾವ ಶಾಲಿಯಾಗಿದ್ದೀಯೆ. ಏನಿದು ನಿನ್ನ ಚೇಷ್ಟೆ? ಇದೇನು ಮಂತ್ರಾದಿಗಳಿಂದ ಉಂಟಾದ ಪ್ರಭಾವವೋ? ಅಥವಾ ಸಹಜವಾದದ್ದೋ?" ಎಂದು ಕೇಳಿದನು (1-2). ತಂದೆ ಹೀಗೆ ಕೇಳಲಾಗಿ ಬಾಲಕನಾದ ಪ್ರಹ್ಲಾದನು ತಂದೆಯ ಪಾದಗಳಿಗೆ ನಮಸ್ಕಾರ ಮಾಡಿ ಇಂತೆಂದನು: "ಅಪ್ಪ, ಇದು ಮಂತ್ರಾದಿಗಳಿಂದ ಆದ ಪ್ರಭಾವವಲ್ಲ. ನನಗೆ ಸಹಜವಾಗಿ ಇರತಕ್ಕದ್ದೂ ಅಲ್ಲ. ಯಾರ ಯಾರ ಹೃದಯದಲ್ಲಿ ಅಚ್ಯುತನು ನೆಲೆಸಿರುತ್ತಾನೋ

ನ ಮಂತ್ರಾದಿಕೃತಂ ತಾತ ನ ಚ ನೈಸರ್ಗಿಕೋ ಮಮ।
ಪ್ರಭಾವ ಏಷ ಸಾಮಾನ್ಯೋ ಯಸ್ಯ ಯಸ್ಯಾಚ್ಯುತೋ ಹೃದಿ॥ 4

ಅನ್ಯೇಷಾಂ ಯೋ ನ ಪಾಪಾನಿ ಚಿಂತಯತ್ಯಾತ್ಮನೋ ಯಥಾ।
ತಸ್ಯ ಪಾಪಾಗಮಸ್ತಾತ ಹೇತ್ವಭಾವಾನ್ನ ವಿದ್ಯತೇ॥ 5

ಕರ್ಮಣಾ ಮನಸಾ ವಾಚಾ ಪರಪೀಡಾಂ ಕರೋತಿ ಯಃ।
ತದ್ಬೀಜಂ ಜನ್ಮ ಫಲತಿ ಪ್ರಭೂತಂ ತಸ್ಯ ಚಾಶುಭಮ್॥ 6

ಸೋಽಹಂ ನ ಪಾಪಮಿಚ್ಛಾಮಿ ನ ಕರೋಮಿ ವದಾಮಿ ವಾ।
ಚಿಂತಯನ್ ಸರ್ವಭೂತಸ್ಥಮಾತ್ಮನ್ಯಪಿ ಚ ಕೇಶವಮ್॥ 7

ಶಾರೀರಂ ಮಾನಸಂ ದುಃಖಂ ದೈವಂ ಭೂತಭವಂ ತಥಾ।
ಸರ್ವತ್ರ ಶುಭಚಿತ್ತಸ್ಯ ತಸ್ಯ ಮೇ ಜಾಯತೇ ಕುತಃ॥ 8

ಏವಂ ಸರ್ವೇಷು ಭೂತೇಷು ಭಕ್ತಿರವ್ಯಭಿಚಾರಿಣೀ।
ಕರ್ತವ್ಯಾ ಪಂಡಿತೈರ್ಜ್ಞಾತ್ವಾ ಸರ್ವಭೂತಮಯಂ ಹರಿಮ್॥ 9

---

ಅವರಿಗಿರುವ ಸಾಮಾನ್ಯವಾದ ಪ್ರಭಾವವಿದು (3-4). ತನ್ನಂತೆಯೇ ಪರರನ್ನು ತಿಳಿದು ಯಾವಾತನು ಪರರಿಗೆ ಕೇಡನ್ನು ಮಾಡುವುದಿಲ್ಲವೋ, ಆತನಿಗೆ ಕಾರಣವೇ ಇಲ್ಲದ್ದರಿಂದ ಪಾಪವಿರುವುದಿಲ್ಲ. ಕ್ರಿಯೆ, ಮನಸ್ಸು, ವಾಕ್—ಇವುಗಳಿಂದ ಯಾವನು ಪರರನ್ನು ಪೀಡಿಸುತ್ತಾನೋ ಅವನಿಗೆ ಅದೇ ಬೀಜವಾಗಿ ಜನ್ಮವೆಂಬ ಫಲವನ್ನು ಕೊಡುತ್ತದೆ. ಅವನಿಗೆ ವಿಶೇಷವಾಗಿ ಕೆಟ್ಟದಾಗುತ್ತದೆ (5-6). ನಾನು ಸರ್ವಭೂತಗಳಲ್ಲಿಯೂ ನನ್ನಲ್ಲಿಯೂ ಕೇಶವನಿದ್ದಾನೆಂದು ತಿಳಿದು ಧ್ಯಾನಿಸುತ್ತ, ಯಾರಿಗೂ ಕೇಡನ್ನು ಬಯಸುವುದಿಲ್ಲ , ಮಾಡುವುದಿಲ್ಲ , ಹೇಳುವುದೂ ಇಲ್ಲ. ಎಲ್ಲರ ವಿಷಯದಲ್ಲಿಯೂ ಶುಭಚಿತ್ತನಾಗಿರುವ ನನಗೆ ಶಾರೀರಿಕ ಮಾನಸಿಕ ದುಃಖಗಳಾಗಲಿ ದೈವಿಕ ಭೌತಿಕ ದುಃಖಗಳಾಗಲಿ ಏಕೆ ಬರುತ್ತವೆ? (7-8). ಶ್ರೀಹರಿಯು ಸರ್ವಭೂತಾತ್ಮಕನೆಂದು ತಿಳಿದು ಪಂಡಿತರಾದವರು ಸರ್ವಭೂತಗಳಲ್ಲಿಯೂ ಅಚಲವಾದ ಭಕ್ತಿಯನ್ನಿರಿಸಬೇಕು" ಎಂದನು (9).

*ಶ್ರೀಪರಾಶರ ಉವಾಚ:*

**ಇತಿ ಶ್ರುತ್ವಾ ಸ ದೈತ್ಯೇಂದ್ರಃ ಪ್ರಾಸಾದಶಿಖರೇ ಸ್ಥಿತಃ।**
**ಕ್ರೋಧಾಂಧಕಾರಿತಮುಖಃ ಪ್ರಾಹ ದೈತೇಯಕಿಂಕರಾನ್॥** 10

*ಹಿರಣ್ಯಕಶಿಪುರುವಾಚ:*

**ದುರಾತ್ಮಕ್ಷಿಪ್ಯತಾಮಸ್ಮಾತ್ ಪ್ರಾಸಾದಾಚ್ಛತಯೋಜನಾತ್।**
**ಗಿರಿಪೃಷ್ಠೇ ಪತತ್ವಸ್ಮಿನ್ ಶಿಲಾಭಿನ್ನಾಂಗಸಂಹತಿಃ॥** 11

**ತತಸ್ತಂ ಚಿಕ್ಷಿಪುಃ ಸರ್ವೇ ಬಾಲಂ ದೈತೇಯದಾನವಾಃ।**
**ಪಪಾತ ಸೋಽಪ್ಯಧಃ ಕ್ಷಿಪ್ತೋ ಹೃದಯೇನೋದ್ವಹನ್ ಹರಿಮ್॥**

**ಪತಮಾನಂ ಜಗದ್ಧಾತ್ರೀ ಜಗದ್ಧಾತರಿ ಕೇಶವೇ।**
**ಭಕ್ತಿಯುಕ್ತಂ ದಧಾರೈನಮುಪಸಂಗಮ್ಯ ಮೇದಿನೀ॥** 13

**ತತೋ ವಿಲೋಕ್ಯ ತಂ ಸ್ವಸ್ಥಮವಿಶೀರ್ಣಾಸ್ಥಿಪಂಜರಮ್।**
**ಹಿರಣ್ಯಕಶಿಪುಃ ಪ್ರಾಹ ಶಂಬರಂ ಮಾಯಿನಾಂ ವರಮ್॥** 14

---

ತನ್ನ ಅರಮನೆಯ ಬಿಸಿಲು ಮಹಡಿಯ ಮೇಲೆ ಕುಳಿತಿದ್ದ ದೈತ್ಯರಾಜನು ಈ ಮಾತನ್ನು ಕೇಳಿ ಕೋಪದಿಂದ ಕಿಡಿಕಿಡಿಯಾಗಿ ಸೇವಕರನ್ನು ಕುರಿತು "ಇವನು ದುರಾತ್ಮ! ಮಹಡಿಯಿಂದ ಇವನನ್ನು ಕೆಳಗೆ ಎಸೆಯಿರಿ! ನೂರು ಯೋಜನ ಎತ್ತರದಿಂದ ಇವನು ಬೀಳಲಿ! ಆ ಬೆಟ್ಟದ ಬಂಡೆಯ ಮೇಲೆ ಬಿದ್ದು ಇವನ ಅಂಗಾಂಗಗಳು ಜಜ್ಜಿಹೋಗಲಿ!" ಎಂದು ಆರ್ಭಟಿಸಿದನು (10-11). ಅಂತೆಯೇ ದಾನವರು ಅವನನ್ನು ಮಹಡಿಯಿಂದ ಕೆಳಗೆಸೆದರು. ಪ್ರಹ್ಲಾದನು ಹೃದಯದಲ್ಲಿ ಶ್ರೀಹರಿಯನ್ನು ಧ್ಯಾನಿಸುತ್ತಿದ್ದನು. ಜಗದ್ಧಾತೃವಾದ ಕೇಶವನ ಭಕ್ತನಾದ ಆತನನ್ನು ಜಗದ್ಧಾತ್ರಿಯಾದ ಭೂದೇವಿಯು ಮೇಲೆದ್ದು (ಪೆಟ್ಟಾಗದಂತೆ) ಹಿಡಿದುಕೊಂಡಳು (12-13). ಅಸ್ಥಿಪಂಜರವು ಜಜ್ಜಿಹೋಗದೆ ಪ್ರಹ್ಲಾದನು ಸ್ವಸ್ಥನಾಗಿರುವುದನ್ನು ಕಂಡು ಹಿರಣ್ಯಕಶಿಪು ಮಹಾಮಾಯಾವಿಯಾದ ಶಂಬರಾಸುರನನ್ನು ಕರೆದು "ಈ ಕೆಟ್ಟ ಹುಡುಗನನ್ನು ಕೊಲ್ಲಲು ನಮ್ಮಿಂದ ಸಾಧ್ಯವಾಗುತ್ತಿಲ್ಲ! ನೀನು

*ಹಿರಣ್ಯಕಶಿಪುರುವಾಚ:*

**ನಾಸ್ಮಾಭಿಃ ಶಕ್ಯತೇ ಹಂತುಮಸೌ ದುರ್ಬುದ್ಧಿಬಾಲಕಃ।**
**ಮಾಯಾಂ ವೇತ್ತಿ ಭವಾಂಸ್ತಸ್ಮಾನ್ಮಾಯಯೈನಂ ನಿಷೂದಯ॥ 15**

*ಶಂಬರ ಉವಾಚ:*

**ಸೂದಯಾಮ್ಯೇವ ದೈತ್ಯೇಂದ್ರ ಪಶ್ಯ ಮಾಯಾಬಲಂ ಮಮ।**
**ಸಹಸ್ರಮತ್ರ ಮಾಯಾನಾಂ ಪಶ್ಯ ಕೋಟಿಶತಂ ತಥಾ॥ 16**

*ಶ್ರೀಪರಾಶರ ಉವಾಚ:*

**ತತಃ ಸ ಸಸೃಜೇ ಮಾಯಾಂ ಪ್ರಹ್ಲಾದೇ ಶಂಬರೋಽಸುರಃ।**
**ವಿನಾಶಮಿಚ್ಛನ್ ದುರ್ಬುದ್ಧಿಃ ಸರ್ವತ್ರ ಸಮದರ್ಶಿನಿ॥ 17**

**ಸಮಾಹಿತಮತಿರ್ಭೂತ್ವಾ ಶಂಬರೇಽಪಿ ವಿಮತ್ಸರಃ।**
**ಮೈತ್ರೇಯ ಸೋಽಪಿ ಪ್ರಹ್ಲಾದಃ ಸಸ್ಮಾರ ಮಧುಸೂದನಮ್॥ 18**

**ತತೋ ಭಗವತಾ ತಸ್ಯ ರಕ್ಷಾರ್ಥಂ ಚಕ್ರಮುತ್ತಮಮ್।**
**ಆಜಗಾಮ ಸಮಾಜ್ಞಪ್ತಂ ಜ್ವಾಲಾಮಾಲಿ ಸುದರ್ಶನಮ್॥ 19**

---

ಮಾಯೆಯನ್ನು ಬಲ್ಲೆ. ಮಾಯೆಯಿಂದ ಇವನನ್ನು ಧ್ವಂಸಮಾಡು!" ಎಂದು ಆಜ್ಞಾಪಿಸಿದನು (14-15). ಶಂಬರಾಸುರನು "ದೈತ್ಯೇಂದ್ರ, ಇವನನ್ನು ಧ್ವಂಸಮಾಡುತ್ತೇನೆ. ನನ್ನ ಮಾಯಾಬಲವನ್ನಾದರೂ ನೋಡು. ಸಾವಿರಾರು ಕೋಟಿಗಟ್ಟಲೆ ಇರುವ ನನ್ನ ಮಾಯಾಶಕ್ತಿಗಳನ್ನು ಕಾಣುತ್ತಿರು" ಎಂದನು (16). ಅನಂತರ ದುರ್ಬುದ್ಧಿಯಾದ ಶಂಬರಾಸುರನು, ಸರ್ವತ್ರ ಸಮದರ್ಶಿಯಾದ ಪ್ರಹ್ಲಾದನ ಮೇಲೆ ತನ್ನ ಮಾಯೆಯನ್ನು ಪ್ರಯೋಗಿಸಿದನು. ಮೈತ್ರೇಯ, ಆ ಪ್ರಹ್ಲಾದನಾದರೋ ದ್ವೇಷರಹಿತನಾಗಿ ಶಂಬರನಲ್ಲಿಯೂ ಸಮಚಿತ್ತನಾಗಿ ಭಗವಂತನನ್ನು ಧ್ಯಾನಿಸುತ್ತಿದ್ದನು (17-18). ಭಗವಂತನು ಭಕ್ತರಕ್ಷಣೆಗಾಗಿ ತನ್ನ ಸುದರ್ಶನ ಚಕ್ರಕ್ಕೆ ಆಜ್ಞೆಯಿತ್ತನು. ಆ ಶ್ರೇಷ್ಠವಾದ ಚಕ್ರವು ಜ್ವಾಲೆಗಳಿಂದ ಪ್ರಜ್ವಲಿಸುತ್ತ ಬಂದು, ಬಾಲಕನ ರಕ್ಷಣೆಗಾಗಿ ಶೀಘ್ರಗತಿಯಿಂದ ಸಂಚರಿಸುತ್ತ, ಶಂಬರನ ಸಾವಿರಾರು

ತೇನ ಮಾಯಾಸಹಸ್ರಂ ತಚ್ಛಂಬರಸ್ಯಾಶುಗಾಮಿನಾ।
ಬಾಲಸ್ಯ ರಕ್ಷತಾ ದೇಹಮೇಕೈಕಂ ಚ ವಿಶೋಧಿತಮ್॥ 20

ಸಂಶೋಷಕಂ ತಥಾ ವಾಯುಂ ದೈತ್ಯೇಂದ್ರಸ್ತ್ವಿದಮಬ್ರವೀತ್।
ಶೀಘ್ರಮೇಷ ಮಮಾದೇಶಾದ್‌ದುರಾತ್ಮಾ ನೀಯತಾಂ ಕ್ಷಯಮ್॥

ತಥೇತ್ಯುಕ್ತ್ವಾ ತು ಸೋಽಪ್ಯೇನಂ ವಿವೇಶ ಪವನೋ ಲಘು।
ಶೀತೋಽತಿರೂಕ್ಷಃ ಶೋಷಾಯ ತದ್ದೇಹಸ್ಯಾತಿದುಃಸಹಃ॥ 22

ತೇನಾವಿಷ್ಟಮಥಾತ್ಮಾನಂ ಸ ಬುದ್‌ಧ್ವಾ ದೈತ್ಯಬಾಲಕಃ।
ಹೃದಯೇನ ಮಹಾತ್ಮಾನಂ ದಧಾರ ಧರಣೀಧರಮ್॥ 23

ಹೃದಯಸ್ಥಸ್ತತಸ್ತಸ್ಯ ತಂ ವಾಯುಮತಿಭೀಷಣಮ್।
ಪಪೌ ಜನಾರ್ದನಃ ಕ್ರುದ್ಧಃ ಸ ಯಯೌ ಪವನಃ ಕ್ಷಯಮ್॥ 24

ಕ್ಷೀಣಾಸು ಸರ್ವಮಾಯಾಸು ಪವನೇ ಚ ಕ್ಷಯಂ ಗತೇ।
ಜಗಾಮ ಸೋಽಪಿ ಭವನಂ ಗುರೋರೇವ ಮಹಾಮತಿಃ॥ 25

---

ಮಾಯೆಗಳನ್ನು ಒಂದೊಂದಾಗಿ ವಿಧ್ವಂಸಗೊಳಿಸಿತು (19-20). ಆಮೇಲೆ ದೈತ್ಯೇಂದ್ರನು ಸಂಶೋಷಕನಾದ ವಾಯುವನ್ನು ಕರೆದು "ನನ್ನ ಅಪ್ಪಣೆಯಂತೆ ಈ ದುರಾತ್ಮನನ್ನು ಶೀಘ್ರದಲ್ಲಿ ನಾಶಗೊಳಿಸಬೇಕು" ಎಂದನು. ಹಾಗೆಯೇ ಆಗಲೆಂದು ಆ ಸಂಶೋಷಕನಾದ ವಾಯುವು ತಡೆಯಲಸಾಧ್ಯವಾದಷ್ಟು ಅತಿಶೀತನೂ ಅತಿರೂಕ್ಷನೂ ಆಗಿ ಪ್ರಹ್ಲಾದನ ದೇಹವನ್ನು ವೇಗವಾಗಿ ಪ್ರವೇಶಿಸಿದನು (21-22). ಆ ವಾಯು ತನ್ನ ದೇಹವನ್ನು ಹೊಕ್ಕನೆಂಬುದನ್ನರಿತು, ದೈತ್ಯಬಾಲಕನು ಹೃದಯದಲ್ಲಿ ಮಹಾತ್ಮನಾದ ಅಚ್ಯುತನನ್ನು ಧಾರಣ ಮಾಡಿದನು. ಹೃದಯದಲ್ಲಿ ನೆಲೆಸಿದ ಜನಾರ್ದನನು ಕ್ರುದ್ಧನಾಗಿ ಅತಿಭೀಷಣನಾದ ಸಂಶೋಷಕ ವಾಯುವನ್ನೇ ಹೀರಿ ಕುಡಿಯಲು, ವಾಯುವೇ ಕ್ಷೀಣವಾಯಿತು (23-24). ಹೀಗೆ ಶಂಬರನ ಸರ್ವ ಮಾಯೆಗಳೂ ಮುಗಿದು ವಾಯುವೂ ಕ್ಷಯಿಸಲಾಗಿ, ಬುದ್ಧಿಶಾಲಿಯಾದ ಪ್ರಹ್ಲಾದನು ತನ್ನ ಗುರುವಿನ ಮನೆಗೆ ಹೋದನು. ಅತ್ತ ಉಪಾಧ್ಯಾಯರು

**ಅಹನ್ಯಹನ್ಯಥಾಚಾರ್ಯೋ ನೀತಿಂ ರಾಜ್ಯಫಲಪ್ರದಾಮ್ ।**
**ಗ್ರಾಹಯಾಮಾಸ ತಂ ಬಾಲಂ ರಾಜ್ಞಾಮುಶನಸಾ ಕೃತಾಮ್ ॥ 26**

**ಗೃಹೀತನೀತಿಶಾಸ್ತ್ರಂ ತಂ ವಿನೀತಂ ಚ ಯದಾ ಗುರುಃ ।**
**ಮೇನೇ ತದೇನಂ ತತ್ಪಿತ್ರೇ ಕಥಯಾಮಾಸ ಶಿಕ್ಷಿತಮ್ ॥ 27**

*ಆಚಾರ್ಯ ಉವಾಚ:*

**ಗೃಹೀತನೀತಿಶಾಸ್ತ್ರಸ್ತೇ ಪುತ್ರೋ ದೈತ್ಯಪತೇ ಕೃತಃ ।**
**ಪ್ರಹ್ಲಾದಸ್ತತ್ತ್ವತೋ ವೇತ್ತಿ ಭಾರ್ಗವೇಣ ಯದೀರಿತಮ್ ॥ 28**

*ಹಿರಣ್ಯಕಶಿಪುರುವಾಚ:*

**ಮಿತ್ರೇಷು ವರ್ತೇತ ಕಥಮರಿವರ್ಗೇಷು ಭೂಪತಿಃ ।**
**ಪ್ರಹ್ಲಾದ ತ್ರಿಷು ಲೋಕೇಷು ಮಧ್ಯಸ್ಥೇಷು ಕಥಂ ಚರೇತ್ ॥ 29**

**ಕಥಂ ಮಂತ್ರಿಷ್ವಮಾತ್ಯೇಷು ಬಾಹ್ಯೇಷ್ವಾಭ್ಯಂತರೇಷು ಚ ।**
**ಚಾರೇಷು ಪೌರವರ್ಗೇಷು ಶಂಕಿತೇಷ್ವಿತರೇಷು ಚ ॥ 30**

---

ಪ್ರತಿದಿನವೂ ಪ್ರಹ್ಲಾದನಿಗೆ ಶುಕ್ರಪ್ರಣೀತವಾದ ರಾಜನೀತಿಯನ್ನು ಕಲಿಸುತ್ತಿದ್ದನು (25-26). ಪ್ರಹ್ಲಾದನು ನೀತಿಶಾಸ್ತ್ರದಲ್ಲಿ ಪಂಡಿತನೂ ವಿನೀತನೂ ಆಗಿದ್ದಾನೆಂದು ಮನದಟ್ಟಾದಮೇಲೆ, ಉಪಾಧ್ಯಾಯನು ಅವನ ತಂದೆಯ ಬಳಿಗೆ ತೆರಳಿ ಆತನ ಮಗನು ಶಿಕ್ಷಿತನಾಗಿದ್ದಾನೆಂದು ಹೇಳುತ್ತ "ದೈತ್ಯರಾಜ, ನಿನ್ನ ಮಗ ಪ್ರಹ್ಲಾದನು ನೀತಿಶಾಸ್ತ್ರದಲ್ಲಿ ಕುಶಲನಾಗಿದ್ದಾನೆ. ಶುಕ್ರನು ಹೇಳಿದ್ದನ್ನು ತತ್ತ್ವಶಃ ತಿಳಿದುಕೊಂಡಿದ್ದಾನೆ" ಎಂದನು (27-28). ಹಿರಣ್ಯಕಶಿಪು ಪುತ್ರನನ್ನು ಕರೆಸಿ "ಪ್ರಹ್ಲಾದ, ರಾಜನಾದವನು ಮೂರು ಲೋಕಗಳಲ್ಲಿಯೂ ಮಿತ್ರ, ಶತ್ರು ಮತ್ತು ತಟಸ್ಥರ ವಿಷಯದಲ್ಲಿ ಹೇಗೆ ಹೇಗೆ ನಡೆದುಕೊಳ್ಳಬೇಕು? ಮಂತ್ರಿಗಳು, ಸಮೀಪದ ಅಧಿಕಾರಿಗಳು, ಅರಮನೆಯ ಹೊರಗೆ ಮತ್ತು ಒಳಗೆ ಕೆಲಸಮಾಡುವ ಸೇವಕರು, ಗುಪ್ತಚಾರರು, ಪೌರರು, ಸಂದೇಹಾಸ್ಪದ ವ್ಯಕ್ತಿಗಳು ಮತ್ತು ಇತರ ಜನರ ವಿಷಯಗಳಲ್ಲಿ ಹೇಗೆ ವ್ಯವಹರಿಸಬೇಕು? (29-30) ರಾಜನು ಮಾಡ

**ಕೃತ್ಯಾಕೃತ್ಯವಿದಾನಂಚ ದುರ್ಗಾಟವಿಕಸಾಧನಮ್।**
**ಪ್ರಹ್ಲಾದ ಕಥ್ಯತಾಂ ಸಮ್ಯಕ್ ತಥಾ ಕಂಟಕಶೋಧನಮ್॥** 31

**ಏತಚ್ಚಾನ್ಯಚ್ಚ ಸಕಲಮಧೀತಂ ಭವತಾ ಯಥಾ।**
**ತಥಾ ಮೇ ಕಥ್ಯತಾಂ ಜ್ಞಾತುಂ ತವೇಚ್ಛಾಮಿ ಮನೋಗತಮ್॥**

*ಶ್ರೀಪರಾಶರ ಉವಾಚ:*

**ಪ್ರಣಿಪತ್ಯ ಪಿತುಃ ಪಾದೌ ತದಾ ಪ್ರಶ್ರಯಭೂಷಣಃ।**
**ಪ್ರಹ್ಲಾದಃ ಪ್ರಾಹ ದೈತ್ಯೇಂದ್ರಂ ಕೃತಾಂಜಲಿಪುಟಸ್ತಥಾ॥** 33

*ಪ್ರಹ್ಲಾದ ಉವಾಚ:*

**ಮಮೋಪದಿಷ್ಟಂ ಸಕಲಂ ಗುರುಣಾ ನಾತ್ರ ಸಂಶಯಃ।**
**ಗೃಹೀತಂತು ಮಯಾ ಕಿಂತು ನ ಸದೇತನ್ಮತಂ ಮಮ॥** 34

**ಸಾಮ ಚೋಪಪ್ರದಾನಂ ಚ ಭೇದದಂಡೌ ತಥಾ ಪರೌ।**
**ಉಪಾಯಾಃ ಕಥಿತಾಃ ಸರ್ವೇ ಮಿತ್ರಾದೀನಾಂ ಚ ಸಾಧನೇ॥** 35

---

ಬೇಕಾದದ್ದು ಯಾವುದು? ಮಾಡಬಾರದ್ದು ಯಾವುದು? ಕೋಟೆಕೊತ್ತಲು ಮತ್ತು ಅರಣ್ಯಗಳ ವ್ಯವಸ್ಥೆ ಹೇಗಿರಬೇಕು? ಹಾಗೆಯೇ ಆಂತರಿಕವಾದ ದಂಗೆಯನ್ನು ಅಡಗಿಸುವುದು ಹೇಗೆ? ಈ ಎಲ್ಲ ವಿಚಾರಗಳಲ್ಲಿ ನೀನು ಕಲಿತಿರುವುದನ್ನು ಸರಿಯಾಗಿ ಹೇಳು. ಪ್ರಹ್ಲಾದ, ನಿನ್ನ ಮನೋಗತ ವೇನೆಂಬುದನ್ನು ತಿಳಿಯಲಪೇಕ್ಷಿಸುತ್ತೇನೆ" ಎಂದು ಕೇಳಿದನು (31-32). ಆಗ ವಿನಯಭೂಷಿತನಾದ ಪ್ರಹ್ಲಾದನು ತಂದೆಯ ಪಾದಗಳಿಗೆ ವಂದಿಸಿ ಕೈ ಮುಗಿದುಕೊಂಡು ಇಂತೆಂದನು: "ಇದೆಲ್ಲವನ್ನೂ ಗುರುಗಳು ನನಗೆ ಹೇಳಿಕೊಟ್ಟಿದ್ದಾರೆ, ಸಂದೇಹವಿಲ್ಲ. ನಾನು ತಿಳಿದುಕೊಂಡೂ ಇದ್ದೇನೆ. ಆದರೆ ಇದೆಲ್ಲವೂ ಸರಿಯಲ್ಲವೆಂದು ನನ್ನ ಅಭಿಪ್ರಾಯ! (33-34). ಮಿತ್ರ ಸಾಧನೆ, ಶತ್ರುನಿಗ್ರಹ—ಮುಂತಾದ ವಿಷಯದಲ್ಲಿ ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳು ಉಕ್ತವಾಗಿವೆ. ಆದರೆ, ತಂದೆಯೆ, ಕೋಪಿಸಿಕೊಳ್ಳಬೇಡ. ಮಿತ್ರಾದಿಗಳು ಯಾರೆಂಬುದನ್ನೇ ನಾನು ಗುರುತಿಸ

**ತಾನೇವಾಹಂ ನ ಪಶ್ಯಾಮಿ ಮಿತ್ರಾದೀಂಸ್ತಾತ ಮಾಕ್ರುಧಃ।**
**ಸಾಧ್ಯಾಭಾವೇ ಮಹಾಬಾಹೋ ಸಾಧನೈಃ ಕಿಂ ಪ್ರಯೋಜನಮ್॥**

**ಸರ್ವಭೂತಾತ್ಮಕೇ ತಾತ ಜಗನ್ನಾಥೇ ಜಗನ್ಮಯೇ।**
**ಪರಮಾತ್ಮನಿ ಗೋವಿಂದೇ ಮಿತ್ರಾಮಿತ್ರಕಥಾ ಕುತಃ॥** 37

**ತ್ವಯ್ಯಸ್ತಿ ಭಗವಾನ್ ವಿಷ್ಣುರ್ಮಯಿ ಚಾನ್ಯತ್ರ ಚಾಸ್ತಿ ಸಃ।**
**ಯತಸ್ತತೋಽಯಂ ಮಿತ್ರಂ ಮೇ ಶತ್ರುಶ್ಚೇತಿ ಪೃಥಕ್ ಕುತಃ॥** 38

**ತದೇಭಿರಲಮತ್ಯರ್ಥಂ ದುಷ್ಟಾರಂಭೋಕ್ತಿವಿಸ್ತರೈಃ।**
**ಅವಿದ್ಯಾಂತರ್ಗತೈರ್ಯತ್ನಃ ಕರ್ತವ್ಯಸ್ತಾತ ಶೋಭನೇ॥** 39

**ವಿದ್ಯಾಬುದ್ಧಿರವಿದ್ಯಾಯಾಮಜ್ಞಾನಾತ್ತಾತ ಜಾಯತೇ।**
**ಬಾಲೋಽಗ್ನಿಂ ಕಿಂ ನ ಖದ್ಯೋತಮಸುರೇಶ್ವರ ಮನ್ಯತೇ॥** 40

**ತತ್ಕರ್ಮ ಯನ್ನ ಬಂಧಾಯ ಸಾ ವಿದ್ಯಾ ಯಾ ವಿಮುಕ್ತಯೇ।**
**ಆಯಾಸಾಯಾಪರಂ ಕರ್ಮ ವಿದ್ಯಾನ್ಯಾ ಶಿಲ್ಪನೈಪುಣಮ್॥** 41

---

ಲಾರೆ! ಸಾಧ್ಯವೇ ಇಲ್ಲದಾಗ ಸಾಧನೋಪಾಯಗಳಿಂದ ಪ್ರಯೋಜನವೇನು? (35-36). ಪರಮಾತ್ಮನಾದ ಗೋವಿಂದನೇ ಸರ್ವಭೂತಾತ್ಮಕನೂ ಜಗನ್ನಾಥನೂ ಜಗದ್ರೂಪನೂ ಆಗಿರುವಾಗ ಮಿತ್ರರು ಯಾರು? ಶತ್ರುಗಳು ಯಾರು? ಭಗವಾನ್ ವಿಷ್ಣುವು ನಿನ್ನಲ್ಲಿ ಇದ್ದಾನೆ, ನನ್ನಲ್ಲಿ ಇದ್ದಾನೆ, ಎಲ್ಲೆಡೆಯೂ ಇದ್ದಾನೆ. ಹೀಗಿರುವಾಗ ಇವನು ಮಿತ್ರ, ಇವನು ಶತ್ರು—ಎಂಬ ಭೇದವೆಲ್ಲಿಂದ ಬರುತ್ತದೆ? (37-38). ಆದ್ದರಿಂದ, ತಂದೆಯೆ, ದುಷ್ಕರ್ಮಗಳಲ್ಲಿ ಪ್ರವೃತ್ತಿಯನ್ನುಂಟುಮಾಡುವ ಅವಿದ್ಯಾಜನ್ಯಗಳಾದ ಈ ವಾಗ್ಜಾಲಗಳಿಂದ ಸರ್ವಥಾ ದೂರವಿರಬೇಕು! ಒಳ್ಳೆಯ ಕಾರ್ಯದಲ್ಲಿ ಯತ್ನಮಾಡಬೇಕು (39). ಅಜ್ಞಾನದ ಕಾರಣ ಜನರಿಗೆ ಅವಿದ್ಯೆಯಲ್ಲಿ ವಿದ್ಯೆಯೆಂಬ ಬುದ್ಧಿಯುಂಟಾಗಿಬಿಡುತ್ತದೆ! ಬಾಲಕನು ಬೆಂಕಿಯ ಕಿಡಿಯನ್ನು ದೀಪದ ಹುಳುವೆಂದು ತಿಳಿದುಕೊಳ್ಳುವುದಿಲ್ಲವೆ? ಹಾಗೆ ಇದು (40). ಯಾವುದು ಸಂಸಾರಬಂಧನಕ್ಕೆ ಕಾರಣವಾಗುವುದಿಲ್ಲವೋ ಅದೇ ಮಾಡಬೇಕಾದ ಕರ್ಮ. ಯಾವುದು ಮುಕ್ತಿಗೆ ಕಾರಣವೋ ಅದೇ ವಿದ್ಯೆ.

**ತದೇತದವಗಮ್ಯಾಹಮಸಾರಂ ಸಾರಮುತ್ತಮಮ್।**
**ನಿಶಾಮಯ ಮಹಾಭಾಗ ಪ್ರಣಿಪತ್ಯ ಬ್ರವೀಮಿ ತೇ॥** 42

**ನ ಚಿಂತಯತಿ ಕೋ ರಾಜ್ಯಂ ಕೋ ಧನಂ ನಾಭಿವಾಂಛತಿ।**
**ತಥಾಪಿ ಭಾವಮೇವೈತದುಭಯಂ ಪ್ರಾಪ್ಯತೇ ನರೈಃ॥** 43

**ಸರ್ವ ಏವ ಮಹಾಭಾಗ ಮಹತ್ತ್ವಂ ಪ್ರತಿ ಸೋದ್ಯಮಾಃ।**
**ತಥಾಪಿ ಪುಂಸಾಂ ಭಾಗ್ಯಾನಿ ನೋದ್ಯಮಾ ಭೂತಿಹೇತವಃ॥** 44

**ಜಡಾನಾಮವಿವೇಕಾನಾಮಶೂರಾಣಾಮಪಿ ಪ್ರಭೋ।**
**ಭಾಗ್ಯ ಭೋಜ್ಯಾನಿ ರಾಜ್ಯಾನಿ ಸಂತ್ಯನೀತಿಮತಾಮಪಿ॥** 45

**ತಸ್ಮಾದ್ಯತೇತ ಪುಣ್ಯೇಷು ಯ ಇಚ್ಛೇನ್ಮಹತೀಂ ಶ್ರಿಯಮ್।**
**ಯತಿತವ್ಯಂ ಸಮತ್ವೇ ಚ ನಿರ್ವಾಣಮಪಿ ಚೇಚ್ಛತಾ॥** 46

---

ಉಳಿದ ಕರ್ಮವೆಲ್ಲ ಬರಿಯ ಆಯಾಸ, ಉಳಿದ ವಿದ್ಯೆಯೆಲ್ಲ ಬರಿಯ ಕಲಾಕೌಶಲ! (41). ಆದ್ದರಿಂದ ಇದೆಲ್ಲವೂ ನಿಸ್ಸಾರವೆಂದು ತಿಳಿದಿದ್ದೇನೆ. ಓ ಮಹಾತ್ಮ, ನಿನಗೆ ನಮಸ್ಕರಿಸಿ ಉತ್ತಮವಾದ ಸಾರವನ್ನು ಹೇಳುವೆನು, ಆಲಿಸು. ಯಾವನು ರಾಜ್ಯದ ವಿಷಯವಾಗಿ ಚಿಂತಿಸುವುದಿಲ್ಲ? ಯಾರಿಗೆ ಹಣವು ಬೇಡವಾಗಿದೆ? ಆದರೂ ಲಭ್ಯವಾಗಿದ್ದರೆ ಮಾತ್ರ ಇವೆರಡೂ ಜನರಿಗೆ ದೊರೆಯುತ್ತದೆ (42-43). ಎಲ್ಲರೂ ಮಹತ್ತ್ವವನ್ನು ಪಡೆಯಲು ಉದ್ಯಮವನ್ನು ಮಾಡುತ್ತಾರೆ. ಆದರೆ ಮಹತ್ತ್ವಕ್ಕೆ ಜನರ ಭಾಗ್ಯವು ಕಾರಣವೇ ಹೊರತು ಉದ್ಯಮವಲ್ಲ. ಮಹಾರಾಜ, ಈ ಲೋಕದಲ್ಲಿ ಜಡರು, ಅವಿವೇಕಿಗಳು, ಕೈಲಾಗದವರು, ರಾಜನೀತಿಯ ಗಂಧವಿಲ್ಲದವರು—ತಮ್ಮ ಭಾಗ್ಯವಶದಿಂದ ರಾಜ್ಯಗಳನ್ನು ಭೋಗಿಸುವುದುಂಟು (44-45). ಆದ್ದರಿಂದ ಯಾವಾತನು ಮಹತ್ತರವಾದ ಸಂಪತ್ತನ್ನು ಬಯಸುತ್ತಾನೋ ಅವನು ಪುಣ್ಯಕಾರ್ಯಗಳಲ್ಲಿ ಯತ್ನವನ್ನು ನಡೆಸಬೇಕು. ಮೋಕ್ಷಾರ್ಥಿಯು ಸರ್ವಸಮತಾಭಾವಕ್ಕಾಗಿ ಯತ್ನಿಸಬೇಕು (46). ದೇವತೆ

**ದೇವಾ ಮನುಷ್ಯಾಃ ಪಶವಃ ಪಕ್ಷಿವೃಕ್ಷಸರೀಸೃಪಾಃ।**
**ರೂಪಮೇತದನಂತಸ್ಯ ವಿಷ್ಣೋರ್ಭಿನ್ನಮಿವ ಸ್ಥಿತಮ್॥** 47

**ಏತದ್ವಿಜಾನತಾ ಸರ್ವಂ ಜಗತ್ ಸ್ಥಾವರಜಂಗಮಮ್।**
**ದ್ರಷ್ಟವ್ಯಮಾತ್ಮವದ್ವಿಷ್ಣುರ್ಯತೋಽಯಂ ವಿಶ್ವರೂಪಧೃಕ್॥** 48

**ಏವಂ ಜ್ಞಾತೇ ಸ ಭಗವಾನನಾದಿಃ ಪರಮೇಶ್ವರಃ।**
**ಪ್ರಸೀದತ್ಯಚ್ಯುತಸ್ತಸ್ಮಿನ್ ಪ್ರಸನ್ನೇ ಕ್ಲೇಶಸಂಕ್ಷಯಃ॥** 49

*ಶ್ರೀಪರಾಶರ ಉವಾಚ:*

**ಏತಚ್ಛ್ರುತ್ವಾ ತು ಕೋಪೇನ ಸಮುತ್ಥಾಯ ವರಾಸನಾತ್।**
**ಹಿರಣ್ಯಕಶಿಪುಃ ಪುತ್ರಂ ಪದಾ ವಕ್ಷಸ್ಯತಾಡಯತ್॥** 50

**ಉವಾಚ ಚ ಸ ಕೋಪೇನ ಸಾಮರ್ಷಃ ಪ್ರಜ್ವಲನ್ನಿವ।**
**ನಿಕ್ಷಿಪ್ಯ ಪಾಣಿನಾ ಪಾಣಿಂ ಹಂತುಕಾಮೋ ಜಗದ್ಯಥಾ॥** 51

---

ಗಳು, ಮನುಷ್ಯರು, ಪಶುಗಳು, ಪಕ್ಷಿವೃಕ್ಷ ಸರೀಸೃಪಗಳು*—ಎಲ್ಲವೂ ಅನಂತನಾದ ವಿಷ್ಣುವಿನ ರೂಪ. ವಿಷ್ಣುವಿಗಿಂತ ಭಿನ್ನವೋ ಎಂಬಂತೆ ಕಾಣುತ್ತದೆ. ಇದನ್ನರಿತವನು ಸ್ಥಾವರಜಂಗಮಾತ್ಮಕವಾದ ಸಮಸ್ತ ಜಗತ್ತನ್ನೂ ಆತ್ಮ ಸ್ವರೂಪವೆಂದು ತಿಳಿಯಬೇಕು. ಏಕೆಂದರೆ, ವಿಷ್ಣುವೇ ವಿಶ್ವದ ರೂಪವನ್ನು ಧರಿಸಿದ್ದಾನೆ (47-48). ಹೀಗೆ (ಸರ್ವವೂ ವಿಷ್ಣುಮಯವೆಂದು) ತಿಳಿದರೆ ಭಗವಂತನು ಅನಾದಿಪರಮೇಶ್ವರನೂ ಆದ ಅಚ್ಯುತನು ಪ್ರಸನ್ನನಾಗುತ್ತಾನೆ. ಅವನು ಪ್ರಸನ್ನನಾದರೆ ಸಕಲ ಕ್ಲೇಶಗಳೂ ಕ್ಷಯಿಸುತ್ತವೆ" ಎಂದನು (49). ಈ ಮಾತನ್ನು ಕೇಳಿ ಹಿರಣ್ಯಕಶಿಪು ಕೆರಳಿ ಸಿಂಹಾಸನದಿಂದ ಎದ್ದು ಬಂದು ಪುತ್ರನ ಎದೆಯನ್ನು ಕಾಲಿಂದ ಒದ್ದನು. ಸಿಟ್ಟಿನಿಂದ ಪ್ರಜ್ವಲಿಸುವನೋ ಎಂಬಂತೆ ಸಿಡಿದೆದ್ದು ಕೈಯನ್ನು ಹಿಸುಕಿ ಕೊಳ್ಳುತ್ತ ಜಗತ್ತನ್ನು ಧ್ವಂಸಮಾಡುವನೋ ಎಂಬಂತೆ ಕಾಣಿಸಿದನು (50-51). "ಎಲೈ ವಿಪ್ರಚಿತ್ತಿ! ರಾಹು! ಬಲ! ಇವನನ್ನು ದೃಢವಾದ ನಾಗಪಾಶ

---

* ಸರೀಸೃಪ–ಹರಿದಾಡುವ ಸರ್ಪ ಮೊದಲಾದದ್ದು.

*ಹಿರಣ್ಯಕಶಿಪುರುವಾಚ:*

**ಹೇ ವಿಪ್ರ ಚಿತ್ತೇ ಹೇ ರಾಹೋ ಹೇ ಬಲ್ಯೈಷ ಮಹಾರ್ಣವೇ।**
**ನಾಗಪಾಶೈರ್ದೃಢೈರ್ಬದ್‌ಧ್ವಾ ಕ್ಷಿಪ್ಯತಾಂ ಮಾ ವಿಲಂಬ್ಯತಾಮ್॥**

**ಅನ್ಯಥಾ ಸಕಲಾ ಲೋಕಾಸ್ತಥಾ ದೈತೇಯದಾನವಾಃ।**
**ಅನುಯಾಸ್ಯಂತಿ ಮೂಢಸ್ಯ ಮತಮಸ್ಯ ದುರಾತ್ಮನಃ॥ 53**

**ಬಹುಶೋ ವಾರಿತೋಽಸ್ಮಾಭಿರಯಂ ಪಾಪಸ್ತಥಾಪ್ಯರೇಃ।**
**ಸ್ತುತಿಂ ಕರೋತಿ ದುಷ್ಟಾನಾಂ ವಧ ಏವೋಪಕಾರಕಃ॥ 54**

*ಶ್ರೀಪರಾಶರ ಉವಾಚ:*

**ತತಸ್ತೇ ಸತ್ವರಾ ದೈತ್ಯಾ ಬದ್‌ಧ್ವಾ ತಂ ನಾಗಬಂಧನೈಃ।**
**ಭರ್ತುರಾಜ್ಞಾಂ ಪುರಸ್ಕೃತ್ಯ ಚಿಕ್ಷಿಪುಃ ಸಲಿಲಾರ್ಣವೇ॥ 55**

**ತತಶ್ಚಚಾಲ ಚಲತಾ ಪ್ರಹ್ಲಾದೇನ ಮಹಾರ್ಣವಃ।**
**ಉದ್ವೇಲೋಽಭೂತ್ ಪರಂ ಕ್ಷೋಭಮುಪೇತ್ಯ ಚ ಸಮಂತತಃ॥**

**ಭೂರ್ಲೋಕಮಖಿಲಂ ದೃಷ್ಟ್ವಾ ಪ್ಲಾವ್ಯಮಾನಂ ಮಹಾಂಬಸಾ।**
**ಹಿರಣ್ಯಕಶಿಪುರ್ದೈತ್ಯಾನಿದಮಾಹ ಮಹಾಮತೇ॥ 57**

---

ಗಳಿಂದ ಬಿಗಿದುಕಟ್ಟಿ ಮಹಾಸಾಗರದಲ್ಲಿ ಎಸೆಯಿರಿ! ತಡಮಾಡಕೂಡದು. ಇಲ್ಲದಿದ್ದರೆ ಸಕಲ ಜನರೂ ದೈತ್ಯಮಾನವರೂ ಈ ಮೂಢನ—ಈ ದುರಾತ್ಮನ ಮತವನ್ನು ಅನುಸರಿಸುವರು! (52-53). ನಾವು ಎಷ್ಟು ಸಲ ಬೇಡವೆಂದರೂ ಕೇಳದೆ ಈ ಪಾಪಿಯು ನಮ್ಮ ವೈರಿಯನ್ನು ಸ್ತುತಿಸುತ್ತಾನೆ. ದುಷ್ಟರನ್ನು ವಧಿಸುವುದೇ ಲಾಭಕಾರಿ" ಎಂದು ಆಜ್ಞಾಪಿಸಿದನು (54). ಒಡನೆಯೇ ಒಡೆಯನ ಆಜ್ಞೆಯಂತೆ ದೈತ್ಯರು ನಾಗಪಾಶಗಳಿಂದ ಪ್ರಹ್ಲಾದನನ್ನು ಕಟ್ಟಿ ಸಮುದ್ರಜಲದಲ್ಲಿ ಎಸೆದರು. ಅನಂತರ ಪ್ರಹ್ಲಾದನು ನೀರಿನಲ್ಲಿ ಹೊರಳಾಡುತ್ತಿರಲು ಎಲ್ಲೆಲ್ಲಿಯೂ ಸಮುದ್ರವು ಉಲ್ಲೋಲಕಲ್ಲೋಲವಾಯಿತು. ನೀರು ಉಕ್ಕಿ ಮೇರೆದಪ್ಪಿತು (55-56). ಭೂಲೋಕವು ಜಲರಾಶಿಯಿಂದ ತೇಲಿಹೋಗುವುದನ್ನು ಕಂಡು ಹಿರಣ್ಯಕಶಿಪು ದೈತ್ಯರನ್ನು ಕರೆದು "ಎಲೈ ದೈತ್ಯರೆ, ಬೆಟ್ಟಗಳನ್ನು ತಂದು ಎಲ್ಲ ದಿಕ್ಕುಗಳಲ್ಲಿಯೂ

*ಹಿರಣ್ಯಕಶಿಪುರುವಾಚ:*

**ದೈತೇಯಾಃ ಸಕಲೈಃ ಶೈಲೇರತ್ರೈವ ವರುಣಾಲಯೇ।**
**ನಿಶ್ಛಿದ್ರೈಃ ಸರ್ವಶಃ ಸರ್ವೈಶ್ಚೀಯತಾಮೇಷ ದುರ್ಮತಿಃ॥** 58

**ನಾಗ್ನಿರ್ದಹತಿ ನೈವಾಯಂ ಶಸ್ತ್ರೈಶ್ಛಿನ್ನೋ ನ ಚೋರಗೈಃ।**
**ಕ್ಷಯಂ ನೀತೋ ನ ವಾತೇನ ನ ವಿಷೇಣ ನ ಕೃತ್ಯಯಾ॥** 59

**ನ ಮಾಯಾಭಿರ್ನ ಚೈವೋಚ್ಚಾತ್ಪತಿತೋ ನ ಚ ದಿಗ್ಗಜೈಃ।**
**ಬಾಲೋಽತಿದುಷ್ಟಚಿತ್ತೋಽಯಂ ನಾನೇನಾರ್ಥೋಽಸ್ತಿಜೀವತಾ॥** 60

**ತದೇಷ ತೋಯಮಧ್ಯೇ ತು ಸಮಾಕ್ರಾಂತೋ ಮಹೀಧರೈಃ।**
**ತಿಷ್ಠತ್ವಬ್ದಸಹಸ್ರಾಂತಂ ಪ್ರಾಣಾನ್ ಹಾಸ್ಯತಿ ದುರ್ಮತಿಃ॥** 61

**ತತೋ ದೈತ್ಯಾ ದಾನವಾಶ್ಚ ಪರ್ವತೈಸ್ತಂ ಮಹೋದಧೌ।**
**ಆಕ್ರಮ್ಯ ಚಯನಂ ಚಕ್ರುರ್ಯೋಜನಾನಿ ಸಹಸ್ರಶಃ॥** 62

---

ಸಮುದ್ರದಲ್ಲಿ ದಟ್ಟವಾಗಿ ಇಡುಕಿರಿ! ಈ ದುಷ್ಟನ ಸುತ್ತಲೂ ತುರುಕಿರಿ! (57-58). ಇವನನ್ನು ಅಗ್ನಿಯು ಸುಡುವುದಿಲ್ಲ! ಶಸ್ತ್ರಗಳು ಕತ್ತರಿಸುವುದಿಲ್ಲ; ಸರ್ಪಗಳಿಗೆ ಕೊಲ್ಲುವುದಕ್ಕಾಗಲಿಲ್ಲ; ವಾಯುವಿನಿಂದ ಏನೂ ಆಗಲಿಲ್ಲ. ವಿಷವು ಸಾಯಿಸಲಿಲ್ಲ, ಕೃತ್ಯೆಯ ಕೈಲಾಗಲಿಲ್ಲ! (59). (ಶಂಬರನ) ಮಾಯೆಗಳು ಇವನನ್ನು ನಾಶಪಡಿಸಲಿಲ್ಲ; ಎತ್ತರದಿಂದ ಎಸೆದರೂ ಇವನು ಸಾಯಲಿಲ್ಲ! ದಿಗ್ಗಜಗಳಿಂದ ವಧಿಸಲಾಗಲಿಲ್ಲ! ಈ ಹುಡುಗ ಬಹಳ ಕೆಟ್ಟಬುದ್ಧಿಯವನು. ಇವನು ಬದುಕಿದ್ದರಿಂದ ಯಾವ ಪ್ರಯೋಜನವೂ ಇಲ್ಲ! (60). ಆದ್ದರಿಂದ ಈತನು ಬೆಟ್ಟಗಳಿಂದ ಮುಚ್ಚಲ್ಪಟ್ಟ ನೀರಿನ ನಡುವೆ ಸಿಕ್ಕಿಕೊಂಡಿರಲಿ. ಈ ದುರ್ಬುದ್ಧಿಯು ಸಾವಿರ ವರ್ಷಗಳಾದರೂ ಅಲ್ಲಿಯೇ ಬಿದ್ದಿದ್ದು ಪ್ರಾಣವನ್ನು ಬಿಡಲಿ!" ಎಂದನು (61). ಆಮೇಲೆ ದೈತ್ಯದಾನವರು ಪರ್ವತಗಳನ್ನು ಸಮುದ್ರದಲ್ಲಿ ಹಾಕಿ ಪ್ರಹ್ಲಾದನ ಸುತ್ತಲೂ ಸಾವಿರಾರು ಯೋಜನಗಳವರೆಗೆ ಇಡುಕಿದರು. ಇತ್ತ ಸಮುದ್ರದೊಳಗೆ ಸುತ್ತಲೂ ಪರ್ವತಗಳು ತುಂಬಿಕೊಂಡಿರಲಾಗಿ, ಮಹಾಪ್ರಾಜ್ಞನಾದ ಪ್ರಹ್ಲಾದನು ಆಹ್ನಿಕವೇಳೆಯಲ್ಲಿ ಏಕಾಗ್ರಚಿತ್ತನಾಗಿ ಅಚ್ಯುತನನ್ನು ಈ ಪ್ರಕಾರ ಸ್ತುತಿಸು

**ಸ ಚಿತಃ ಪರ್ವತೈರಂತಃ ಸಮುದ್ರಸ್ಯ ಮಹಾಮತಿಃ।**
**ತುಷ್ಟಾವಾಹ್ನಿಕವೇಲಾಯಾಮೇಕಾಗ್ರಮತಿರಚ್ಯುತಮ್॥ 63**

*ಪ್ರಹ್ಲಾದ ಉವಾಚ:*

**ನಮಸ್ತೇ ಪುಂಡರೀಕಾಕ್ಷ ನಮಸ್ತೇ ಪುರುಷೋತ್ತಮ।**
**ನಮಸ್ತೇ ಸರ್ವಲೋಕಾತ್ಮನ್ ನಮಸ್ತೇ ತಿಗ್ಮಚಕ್ರಿಣೇ॥ 64**

**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ।**
**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ॥ 65**

**ಬ್ರಹ್ಮತ್ವೇ ಸೃಜತೇ ವಿಶ್ವಂ ಸ್ಥಿತೌ ಪಾಲಯತೇ ಪುನಃ।**
**ರುದ್ರರೂಪಾಯ ಕಲ್ಪಾಂತೇ ನಮಸ್ತುಭ್ಯಂ ತ್ರಿಮೂರ್ತಯೇ॥ 66**

**ದೇವಾ ಯಕ್ಷಾಸುರಾಃ ಸಿದ್ಧಾ ನಾಗಾ ಗಂಧರ್ವಕಿನ್ನರಾಃ।**
**ಪಿಶಾಚಾ ರಾಕ್ಷಸಾಶ್ಚೈವ ಮನುಷ್ಯಾಃ ಪಶವಸ್ತಥಾ॥ 67**

**ದಕ್ಷಿಣಃ ಸ್ಥಾವರಾಶ್ಚೈವ ಪಿಪೀಲಿಕಸರೀಸೃಪಾಃ।**
**ಭೂಮ್ಯಾಪೋಽಗ್ನಿರ್ನಭೋ ವಾಯುಃ ಶಬ್ದಃ ಸ್ಪರ್ಶಸ್ತಥಾ ರಸಃ॥ 68**

---

ತ್ತಿದ್ದನು (62-63): "ನಮಸ್ತೇ ಪುಂಡರೀಕಾಕ್ಷ ನಮಸ್ತೇ ಪುರುಷೋತ್ತಮ। ನಮಸ್ತೇ ಸರ್ವಲೋಕಾತ್ಮನ್ ನಮಸ್ತೇ ತಿಗ್ಮ* ಚಕ್ರಿಣೇ॥ ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣಹಿತಾಯ ಚ। ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ॥ ಬ್ರಹ್ಮನಾಗಿ ವಿಶ್ವವನ್ನು ಸೃಜಿಸುತ್ತ ಸ್ಥಿತಿ ಕಾಲದಲ್ಲಿ ವಿಷ್ಣುವಾಗಿ ಪಾಲಿಸುತ್ತ ಕಲ್ಪಾಂತದಲ್ಲಿ ರುದ್ರನಾಗಿ ಸಂಹರಿಸುತ್ತ ಮೂರ್ತಿತ್ರಯರೂಪನಾದ ನಿನಗೆ ನಮಸ್ಕಾರ (64-66). ದೇವ, ಯಕ್ಷ, ಅಸುರ, ಸಿದ್ಧ, ನಾಗ, ಗಂಧರ್ವ, ಕಿನ್ನರ, ಪಿಶಾಚ, ರಾಕ್ಷಸ, ಮನುಷ್ಯ, ಪಶು, ಪಕ್ಷಿ, ಸ್ಥಾವರ, ಇರುವೆ, ಸರೀಸೃಪ, ಭೂಮಿ, ಜಲ, ಅಗ್ನಿ, ಆಕಾಶ, ವಾಯು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಮನಸ್ಸು, ಬುದ್ಧಿ, ಜೀವಾತ್ಮ, ಕಾಲ, ಗುಣತ್ರಯ—ಇವೆಲ್ಲವೂ ನೀನೇ. ಅಚ್ಯುತ, ಇವುಗಳ

---

* ತಿಗ್ಮ = ತೀಕ್ಷ್ಣ.

ರೂಪಂ ಗಂಧೋ ಮನೋ ಬುದ್ಧಿರಾತ್ಮಾ ಕಾಲಸ್ತಥಾ ಗುಣಾಃ।
ಏತೇಷಾಂ ಪರಮಾರ್ಥಶ್ಚ ಸರ್ವಮೇತತ್ತ್ವಮಚ್ಯುತ॥ 69

ವಿದ್ಯಾವಿದ್ಯೇ ಭವಾನ್ಸತ್ಯಮಸತ್ಯಂ ತ್ವಂ ವಿಷಾಮೃತೇ।
ಪ್ರವೃತ್ತಂ ಚ ನಿವೃತ್ತಂ ಚ ಕರ್ಮ ವೇದೋದಿತಂ ಭವಾನ್॥ 70

ಸಮಸ್ತಕರ್ಮಭೋಕ್ತಾ ಚ ಕರ್ಮೋಪಕರಣಾನಿ ಚ।
ತ್ವಮೇವ ವಿಷ್ಣೋ ಸರ್ವಾಣಿ ಸರ್ವಕರ್ಮಫಲಂ ಚ ಯತ್॥ 71

ಮಯ್ಯನ್ಯತ್ರ ತಥಾನ್ಯೇಷು ಭೂತೇಷು ಭುವನೇಷು ಚ।
ತವೈವ ವ್ಯಾಪಿತರೈಶ್ವರ್ಯಗುಣಸಂಸೂಚಿಕೀ ಪ್ರಭೋ॥ 72

ತ್ವಾಂ ಯೋಗಿನಶ್ಚಿಂತಯಂತಿ ತ್ವಾಂ ಯಜಂತಿ ಚ ಯಾಜಕಾಃ।
ಹವ್ಯಕವ್ಯಭುಗೇಕಸ್ತ್ವಂ ಪಿತೃದೇವಸ್ವರೂಪಧೃಕ್॥ 73

ರೂಪಂ ಮಹತ್ತೇ ಸ್ಥಿತಮತ್ರ ವಿಶ್ವಂ
ತತಶ್ಚ ಸೂಕ್ಷ್ಮಂ ಜಗದೇತದೀಶ।
ರೂಪಾಣಿ ಸರ್ವಾಣಿ ಚ ಭೂತಭೇದಾ-
ಸ್ತೇಷ್ವಂತರಾತ್ಮಾಖ್ಯಮತೀವ ಸೂಕ್ಷ್ಮಮ್॥ 74

---

ಪರಮಾರ್ಥವು ನೀನೇ ಆಗಿದ್ದೀಯೆ (67-69). ವಿದ್ಯೆ ಅವಿದ್ಯೆಗಳು ನೀನು. ಸತ್ಯ ಅಸತ್ಯಗಳೂ ನೀನು. ವಿಷವೂ ನೀನು. ಅಮೃತವೂ ನೀನು. ವೇದೋದಿತಗಳಾದ ಪ್ರವೃತ್ತಿ ನಿವೃತ್ತಿ ಕರ್ಮಗಳೂ ನೀನು (70). ಸಮಸ್ತ ಕರ್ಮಗಳ ಭೋಕ್ತನೂ ಕರ್ಮದ ಸಕಲೋಪಕರಣಗಳೂ ಕರ್ಮಫಲವೂ, ಹೇ ವಿಷ್ಣೋ, ನೀನೇ ಆಗಿದ್ದೀಯೆ. ಹೇ ಸ್ವಾಮಿ, ನನ್ನಲ್ಲಿ ಅನ್ಯರಲ್ಲಿ ಸಮಸ್ತಭೂತಗಳಲ್ಲಿ ಭುವನಗಳಲ್ಲಿ ಐಶ್ವರ್ಯಗುಣಗಳನ್ನು ಪ್ರಕಟಿಸುವ ವ್ಯಾಪ್ತಿಯು ನಿನ್ನದೇ (71-72). ಯೋಗಿಗಳು ಧ್ಯಾನಮಾಡುತ್ತಿರುವುದು ನಿನ್ನನ್ನು. ಯಾಜಕರು ಯಜನಮಾಡುವುದು ನಿನ್ನನ್ನು. ಹವ್ಯವನ್ನು ಭುಜಿಸುವ ದೇವತೆ ನೀನು. ಕವ್ಯವನ್ನು ಭುಜಿಸುವ ಪಿತೃದೇವತೆಯೂ ನೀನು (73). ಈ ವಿಶ್ವವು ನಿನ್ನ ಸ್ಥೂಲರೂಪ. ಈ ಭೂಮಂಡಲವು ಅದಕ್ಕಿಂತ ಸೂಕ್ಷ್ಮವಾದ ರೂಪ. ಇಲ್ಲಿರುವ ನಿಖಿಲ ಪ್ರಾಣಿಗಳೂ ನಿನ್ನ

**ತಸ್ಮಾಚ್ಚ ಸೂಕ್ಷ್ಮಾದಿವಿಶೇಷಣಾನಾ-**
**ಮಗೋಚರೇ ಯತ್ಪರಮಾತ್ಮರೂಪಮ್।**
**ಕಿಮಪ್ಯಚಿಂತ್ಯಂ ತವ ರೂಪಮಸ್ತಿ**
**ತಸ್ಮೈ ನಮಸ್ತೇ ಪುರುಷೋತ್ತಮಾಯ॥** 75

**ಸರ್ವಭೂತೇಷು ಸರ್ವಾತ್ಮನ್ ಯಾ ಶಕ್ತಿರಪರಾ ತವ।**
**ಗುಣಾಶ್ರಯಾ ನಮಸ್ತಸ್ಯೈ ಶಾಶ್ವತಾಯೈ ಸುರೇಶ್ವರ॥** 76

**ಯಾತೀತಗೋಚರಾ ವಾಚಾಂ ಮನಸಾಂ ಚಾವಿಶೇಷಣಾ।**
**ಜ್ಞಾನಿಜ್ಞಾನಪರಿಚ್ಛೇದ್ಯಾ ತಾಂ ವಂದೇ ಸ್ವೇಶ್ವರೀಂ ಪರಾಮ್॥** 77

**ಓಂ ನಮೋ ವಾಸುದೇವಾಯ ತಸ್ಮೈ ಭಗವತೇ ಸದಾ।**
**ವ್ಯತಿರಿಕ್ತಂ ನ ಯಸ್ಯಾಸ್ತಿ ವ್ಯತಿರಿಕ್ತೋಽಖಿಲಸ್ಯ ಯಃ॥** 78

**ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಮಹಾತ್ಮನೇ।**
**ನಾಮರೂಪಂ ನ ಯಸ್ಯೈಕೋ ಯೋಽಸ್ತಿತ್ವೇ ನೋಪಲಭ್ಯತೇ॥** 79

---

ರೂಪಗಳೇ. ಅವುಗಳಲ್ಲಿ ಅಂತರಾತ್ಮನಾಗಿರುವುದು ನಿನ್ನ ಅತ್ಯಂತ ಸೂಕ್ಷ್ಮ ರೂಪ (74). ಸ್ಥೂಲ, ಸೂಕ್ಷ್ಮ, ಅತಿಸೂಕ್ಷ್ಮ—ಮುಂತಾದ ಯಾವ ವಿಶೇಷಣಗಳಿಗೂ ನಿಲುಕದ ಅಚಿಂತ್ಯವಾದ ಯಾವ ನಿನ್ನ ಪರಮಾತ್ಮ ಸ್ವರೂಪ ಉಂಟೋ ಅಂತಹ ಪುರುಷೋತ್ತಮನಾದ ನಿನಗೆ ನಮಸ್ಕಾರ (75). ಹೇ ಸರ್ವಾತ್ಮ-ದೇವೇಶ್ವರ, ಸಮಸ್ತ ಪ್ರಾಣಿಗಳಲ್ಲಿಯೂ ಗುಣಾಶ್ರಯವಾದ ನಿನ್ನ ಯಾವ ಪರಾಶಕ್ತಿಯುಂಟೋ, ಶಾಶ್ವತಳಾದ ಆ ದೇವಿಗೆ ನಮಸ್ಕಾರ. ಮಾತಿಗೆ ಅಗೋಚರಳೂ ಮನಸ್ಸಿಗೆ ಅವಿಷಯಳೂ ಜ್ಞಾನಿಗಳ ಜ್ಞಾನಕ್ಕೆ ಮಾತ್ರ ನಿಲುಕತಕ್ಕವಳೂ ಸ್ವತಂತ್ರಳೂ ಆದ ಪರಾಶಕ್ತಿಯನ್ನು ವಂದಿಸುತ್ತೇನೆ (76-77). ಯಾವಾತನಿಗೆ ಅತಿರಿಕ್ತವಾದದ್ದು ಈ ಜಗತ್ತಿನಲ್ಲಿ ಯಾವುದೂ ಇಲ್ಲವೋ ತಾನು ಮಾತ್ರ ಎಲ್ಲ ವಸ್ತುವಿಗಿಂತ ಅತಿರಿಕ್ತನೋ ಅಂತಹ ವಾಸುದೇವ ಭಗವಂತನಿಗೆ ಓಂ ನಮಃ. ಯಾವಾತನಿಗೆ ನಾಮರೂಪಗಳಿಲ್ಲವೋ ಕೇವಲ 'ಸತ್' ಎಂಬ ಸ್ವರೂಪದಿಂದ ಉಪಲಬ್ಧನಾಗುತ್ತಾನೋ ಆ ಮಹಾತ್ಮನಿಗೆ ನಮಸ್ಕಾರ, ನಮಸ್ಕಾರ,

**ಯಸ್ಯಾವತಾರರೂಪಾಣಿ ಸಮರ್ಚಂತಿ ದಿವೌಕಸಃ।**
**ಅಪಶ್ಯಂತಃ ಪರಂ ರೂಪಂ ನಮಸ್ತಸ್ಮೈ ಮಹಾತ್ಮನೇ॥ 80**

**ಯೋಽಂತಸ್ತಿಷ್ಠನ್ನಶೇಷಸ್ಯ ಪಶ್ಯತೀಶಃ ಶುಭಾಶುಭಮ್।**
**ತಂ ಸರ್ವಸಾಕ್ಷಿಣಂ ವಿಶ್ವಂ ನಮಸ್ಯೇ ಪರಮೇಶ್ವರಮ್॥ 81**

**ನಮೋಽಸ್ತು ವಿಷ್ಣವೇ ತಸ್ಮೈ ಯಸ್ಯಾಭಿನ್ನಮಿದಂ ಜಗತ್।**
**ಧ್ಯೇಯಃ ಸ ಜಗತಾಮಾದ್ಯಃ ಸ ಪ್ರಸೀದತು ಮೇಽವ್ಯಯಃ॥ 82**

**ಯತ್ರೋತಮೇತತ್ ಪ್ರೋತಂ ಚ ವಿಶ್ವಮಕ್ಷರಮವ್ಯಯಮ್।**
**ಆಧಾರಭೂತಃ ಸರ್ವಸ್ಯ ಸ ಪ್ರಸೀದತು ಮೇ ಹರಿಃ॥ 83**

**ಓಂ ನಮೋ ವಿಷ್ಣವೇ ತಸ್ಮೈ ನಮಸ್ತಸ್ಮೈ ಪುನಃ ಪುನಃ।**
**ಯತ್ರ ಸರ್ವಂ ಯತಃ ಸರ್ವಂ ಯಃ ಸರ್ವಂಸರ್ವಸಂಶ್ರಯಃ॥ 84**

---

ನಮಸ್ಕಾರ (78-79). ದೇವತೆಗಳು ಯಾವಾತನ ಅವತಾರ ರೂಪಗಳನ್ನು ಮಾತ್ರ ಅರ್ಚಿಸುತ್ತಾರೋ—ಏಕೆಂದರೆ ಆತನ ಪರಮಾರ್ಥ ಸ್ವರೂಪವು ಅವರಿಗೆ ಗೋಚರವಲ್ಲವಾದ್ದರಿಂದ—ಅಂತಹ ಮಹಾತ್ಮನಿಗೆ ನಮಸ್ಕಾರ (80). ಯಾವ ಈಶ್ವರನು ಸರ್ವರ ಅಂತರಂಗದಲ್ಲಿ ನೆಲೆಸಿ ಅವರ ಶುಭಾಶುಭ ಕರ್ಮಗಳನ್ನು ನೋಡುತ್ತಾ ಸರ್ವಸಾಕ್ಷಿಯಾಗಿರುವನೋ ಅಂತಹ ವಿಶ್ವರೂಪನಾದ ಪರಮೇಶ್ವರನಿಗೆ ನಮಸ್ಕರಿಸುತ್ತೇನೆ (81). ಯಾರಿಂದ ಈ ಜಗತ್ತು ಸರ್ವಥಾ ಅಭಿನ್ನವಾಗಿದೆಯೋ ಆ ವಿಷ್ಣುವಿಗೆ ನಮಸ್ಕಾರ. ಜಗತ್ತುಗಳಿಗೆ ಆದಿಕಾರಣನೂ ಯೋಗಿಧ್ಯೇಯನೂ ಅವ್ಯಯನೂ ಆದ ಶ್ರೀಹರಿಯು ನನಗೆ ಪ್ರಸನ್ನನಾಗಲಿ (82). ಯಾರಲ್ಲಿ ಈ ವಿಶ್ವವು ಓತಪ್ರೋತವಾಗಿದೆಯೋ ಅಂತಹ ಅಕ್ಷರವೂ ಅವ್ಯಯವೂ ಆದ ವಸ್ತುವಾದ ಮತ್ತು ಸರ್ವಕ್ಕೆ ಆಧಾರಭೂತನಾದ ಶ್ರೀಹರಿಯು ನನಗೆ ಪ್ರಸನ್ನನಾಗಲಿ (83). ಸರ್ವಾಧಾರನಾದ ಯಾರಲ್ಲಿ ಸರ್ವವೂ ಇದೆಯೋ, ಯಾರಿಂದ ಸರ್ವವೋ, ಯಾರೇ ಸರ್ವವೋ ಆ ವಿಷ್ಣುವಿಗೆ ಓಂ ನಮಃ, ಓಂ ನಮಃ, ಮತ್ತೆ ಮತ್ತೆ ಓಂ ನಮಃ (84). ಅನಂತನು ವಿಭುವಾದ್ದರಿಂದ

**ಸರ್ವಗತ್ವಾದನಂತಸ್ಯ ಸ ಏವಾಹಮವಸ್ಥಿತಃ।**
**ಮತ್ತಃ ಸರ್ವಮಹಂ ಸರ್ವಂ ಮಯಿ ಸರ್ವಂ ಸನಾತನೇ॥ 85**

**ಅಹಮೇವಾಕ್ಷಯೋ ನಿತ್ಯಃ ಪರಮಾತ್ಮಾತ್ಮಸಂಶ್ರಯಃ।**
**ಬ್ರಹ್ಮಸಂಜ್ಞೋಽಹಮೇವಾಗ್ರೇ ತಥಾಂತೇ ಚ ಪರಃ ಪುಮಾನ್॥ 86**

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಏಕೋನವಿಂಶತಿತಮೋಽಧ್ಯಾಯಃ

---

ಅವನೇ ನಾನಾಗಿ ನಿಂತಿದ್ದಾನೆ! ನನ್ನಿಂದ ಸರ್ವವೂ ಹುಟ್ಟಿದೆ. ನಾನೇ ಸರ್ವ. ಸನಾತನನಾದ ನನ್ನಲ್ಲಿ ಸರ್ವವೂ ಇದೆ (85). ಅಕ್ಷಯನೂ ನಿತ್ಯನೂ ತನಗೆ ತಾನೇ ಆಧಾರನೂ ಆದ ಪರಮಾತ್ಮನು ನಾನೇ. ಜಗತ್ತಿನ ಆದ್ಯಂತಗಳಲ್ಲಿಯೂ ಇರತಕ್ಕ 'ಬ್ರಹ್ಮ' ಎಂಬ ಹೆಸರಿನ ಪರಮಪುರುಷನು ನಾನೇ" ಎಂದು ಸ್ತುತಿಸುತ್ತಿದ್ದನು (86).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.



## ವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಏವಂ ಸಂಚಿಂತಯನ್ವಿಷ್ಣುಮಭೇದೇನಾತ್ಮನೋ ದ್ವಿಜ।**
**ತನ್ಮಯತ್ವಮವಾಪ್ಯಗ್ರ್ಯಂ ಮೇನೇ ಚಾತ್ಮಾನಮಚ್ಯುತಮ್॥** 1

**ವಿಸಸ್ಮಾರ ತಥಾತ್ಮಾನಂ ನಾನ್ಯತ್ಕಿಂಚಿದಜಾನತ।**
**ಅಹಮೇವಾವ್ಯಯೋಽನಂತಃ ಪರಮಾತ್ಮೇತ್ಯಚಿಂತಯತ್॥** 2

**ತಸ್ಯ ತದ್ಭಾವನಾಯೋಗಾತ್ ಕ್ಷೀಣಪಾಪಸ್ಯ ವೈ ಕ್ರಮಾತ್।**
**ಶುದ್ಧೇಽಂತಃಕರಣೇ ವಿಷ್ಣುಸ್ತಸ್ಥೌ ಜ್ಞಾನಮಯೋಽಚ್ಯುತಃ॥** 3

---

## ಅಧ್ಯಾಯ 20

ಪ್ರಹ್ಲಾದನಿಂದ ಭಗವಂತನ ಸ್ತುತಿ. ಭಗವಂತನು ಪ್ರತ್ಯಕ್ಷನಾಗುವುದು.
ಪ್ರಹ್ಲಾದವೃತ್ತಾಂತದ ಉಪಸಂಹಾರ.

ಪರಾಶರರು ಹೇಳಿದರು: ಹೀಗೆ ಪ್ರಹ್ಲಾದನು ವಿಷ್ಣುವನ್ನು ತನಗೆ ಅಭಿನ್ನನೆಂದು ಧ್ಯಾನಿಸುತ್ತ ತನ್ಮಯದ ಪರಾಕಾಷ್ಠೆಯನ್ನು ಪಡೆದು ತಾನೇ ಅಚ್ಯುತನೆಂದು ತಿಳಿದನು (1). ತನ್ನ ವ್ಯಕ್ತಿತ್ವವನ್ನು ಮರೆತನು. ಬಾಹ್ಯವಾದ ಯಾವುದೂ ಅವನಿಗೆ ಗೋಚರಿಸಲಿಲ್ಲ. ಅವ್ಯಯನೂ ಅನಂತನೂ ಆದ ಪರಮಾತ್ಮನು ನಾನೇ ಎಂದು ಮಾತ್ರ ಧ್ಯಾನಿಸುತ್ತಿದ್ದನು (2). ಈ ರೀತಿ ಪರಮಾತ್ಮ ಭಾವನಾಯೋಗದಿಂದ ಕ್ರಮವಾಗಿ ಅವನ ಪಾಪವೆಲ್ಲವೂ ಕ್ಷಯಿಸಿತು. ಶುದ್ಧನಾದ ಅವನ ಅಂತಃಕರಣದಲ್ಲಿ ಅಚ್ಯುತನಾದ ವಿಷ್ಣುವು ಜ್ಞಾನಮಯವಾಗಿ ನೆಲೆಸಿದನು (3). ಯೋಗಪ್ರಭಾವದಿಂದ ಅಸುರ ಕುಮಾರನಾದ ಪ್ರಹ್ಲಾದನು ವಿಷ್ಣುಸ್ವರೂಪನಾಗಿ ಚಲಿಸುತ್ತಿರಲು, ಮೈತ್ರೇಯ, ನಾಗಪಾಶಗಳು ಒಂದು ಕ್ಷಣದಲ್ಲಿ ಹರಿದು ಬಿದ್ದವು! ಸಮುದ್ರದಲ್ಲಿ ಅಲೆಗಳೆದ್ದು ಮಹಾಸಾಗರವು ಕ್ಷೋಭಿಸಿತು. ಮೊಸಳೆ

**ಯೋಗಪ್ರಭಾವಾತ್ ಪ್ರಹ್ಲಾದೇ ಜಾತೇ ವಿಷ್ಣುಮಯೇಽಸುರೇ।**
**ಚಲತ್ಯುರಗಬಂಧೈಸ್ತೈರ್ಮೈತ್ರೇಯ ತ್ರುಟಿತಂ ಕ್ಷಣಾತ್॥ 4**

**ಭ್ರಾಂತಗ್ರಾಹಗಣಃ ಸೋರ್ಮಿರ್ಯಯೌ ಕ್ಷೋಭಂ ಮಹಾರ್ಣವಃ।**
**ಚಚಾಲ ಚ ಮಹೀ ಸರ್ವಾ ಸಶೈಲವನಕಾನನಾ॥**

**ಸ ಚ ತಂ ಶೈಲಸಂಘಾತಂ ದೈತ್ಯೈರ್ನ್ಯಸ್ತಮಥೋ ಪರಿ।**
**ಉತ್‌ಕ್ಷಿಪ್ಯ ತಸ್ಮಾತ್ಸಲಿಲಾನ್ನಿಶ್ಚಕ್ರಾಮ ಮಹಾಮತಿಃ॥ 6**

**ದೃಷ್ಟ್ವಾ ಚ ಸ ಜಗದ್ಭೂಯೋ ಗಗನಾದ್ಯುಪಲಕ್ಷಣಮ್।**
**ಪ್ರಹ್ಲಾದೋಽಸ್ಮೀತಿ ಸಸ್ಮಾರ ಪುನರಾತ್ಮಾನಮಾತ್ಮನಿ॥ 7**

**ತುಷ್ಟಾವ ಚ ಪುನರ್ಧೀಮಾನನಾದಿಂ ಪುರುಷೋತ್ತಮಮ್।**
**ಏಕಾಗ್ರಮತಿರವ್ಯಗ್ರೋ ಯತವಾಕ್ಕಾಯಮಾನಸಃ॥ 8**

*ಪ್ರಹ್ಲಾದ ಉವಾಚ:*

**ಓಂ ನಮಃ ಪರಮಾರ್ಥಾರ್ಥ ಸ್ಥೂಲ ಸೂಕ್ಷ್ಮ ಕ್ಷರಾಕ್ಷರ।**
**ವ್ಯಕ್ತಾವ್ಯಕ್ತ ಕಲಾತೀತ ಸಕಲೇಶ ನಿರಂಜನ॥ 9**

---

ಮೊದಲಾದ ಜಲಜಂತುಗಳು ದಿಕ್ಕುಗೆಟ್ಟವು. ಪರ್ವತಾರಣ್ಯಸಹಿತವಾಗಿ ಪೃಥ್ವಿಯೇ ಅಲ್ಲಾಡಿತು! (4-5). ದೈತ್ಯರು ಮೇಲ್ಗಡೆ ಇಡಕಿದ್ದ ಪರ್ವತಗಳನ್ನು ಪ್ರಹ್ಲಾದನು ತಳ್ಳಿಹಾಕಿ ಸಮುದ್ರಜಲದಿಂದ ಹೊರಗೆ ಬಂದನು. ಅಲ್ಲಿ ಅವನು ಆಕಾಶ ಮೊದಲಾದ ಜಗದ್ವಿಸ್ತಾರವನ್ನು ನೋಡಿ 'ಓಹೋ! ನಾನು ಪ್ರಹ್ಲಾದ!' ಎಂದು ತನ್ನನ್ನು ತಾನೇ ಸ್ಮರಿಸಿಕೊಂಡನು! (6-7). ಅವನು ಮತ್ತೆ ವಾಕ್ಕಾಯ ಮನಸ್ಸುಗಳನ್ನು ನಿಯಂತ್ರಿಸಿಕೊಂಡು ಶಾಂತನೂ ಏಕಾಗ್ರಚಿತ್ತನೂ ಆಗಿ ಪುರುಷೋತ್ತಮನನ್ನು ಈ ಪ್ರಕಾರ ಸ್ತುತಿಸಿದನು: "ಹೇ ಪರಮಾತ್ಮಸ್ವರೂಪನೆ, (ಜಗತ್ತಿನ) ಸ್ಥೂಲರೂಪನೆ, (ಸ್ವಪ್ನದ) ಸೂಕ್ಷ್ಮರೂಪನೆ, ನಾಶವಾಗತಕ್ಕ ಸರ್ವಭೂತಸ್ವರೂಪನೇ, ನಾಶರಹಿತವಾದ ಕೂಟಸ್ಥಸ್ವರೂಪನೆ, ವ್ಯಕ್ತವಾದ ಪದಾರ್ಥವೂ ಅವ್ಯಕ್ತವಾದ ಪ್ರಧಾನವೂ ಆಗಿರತಕ್ಕವನೆ, ಕಲಾತೀತ, ಸಕಲೇಶ, ನಿರಂಜನ—ಓಂ ನಮಃ (8-9). ಗುಣಗಳಿಂದ ಲಿಪ್ತನೂ ಗುಣಗಳ ಆಧಾರನೂ ಗುಣಸ್ಥಿತನೂ

**ಗುಣಾಂಜನ ಗುಣಾಧಾರ ನಿರ್ಗುಣಾತ್ಮನ್ ಗುಣಸ್ಥಿತ।**
**ಮೂರ್ತಾಮೂರ್ತಮಹಾಮೂರ್ತೇ ಸೂಕ್ಷ್ಮಮೂರ್ತೇ**
**ಸ್ಫುಟಾಸ್ಫುಟ ॥** 10

**ಕರಾಲಸೌಮ್ಯರೂಪಾತ್ಮನ್ ವಿದ್ಯಾವಿದ್ಯಾಮಯಾಚ್ಯುತ।**
**ಸದಸದ್ರೂಪಸದ್ಭಾವ ಸದಸದ್ಭಾವಭಾವನ ॥** 11

**ನಿತ್ಯಾನಿತ್ಯ ಪ್ರಪಂಚಾತ್ಮನ್ ನಿಷ್ಪ್ರಪಂಚಾಮಲಾಶ್ರಿತ।**
**ಏಕಾನೇಕ ನಮಸ್ತುಭ್ಯಂ ವಾಸುದೇವಾದಿಕಾರಣ ॥** 12

**ಯಃ ಸ್ಥೂಲಸೂಕ್ಷ್ಮಃ ಪ್ರಕಟಪ್ರಕಾಶೋ।**
**ಯಃ ಸರ್ವಭೂತೋ ನ ಚ ಸರ್ವಭೂತಃ।**
**ವಿಶ್ವಂ ಯತಶ್ಚೈತದವಿಶ್ವಹೇತೋ-**
**ರ್ನಮೋಽಸ್ತು ತಸ್ಮೈ ಪುರುಷೋತ್ತಮಾಯ ॥** 13

---

ಆಗಿದ್ದರೂ, ವಾಸ್ತವದಲ್ಲಿ ನಿರ್ಗುಣಾತ್ಮನೆ! ಮೂರ್ತ, ಅಮೂರ್ತ, ಸೂಕ್ಷ್ಮ, ಸ್ಫುಟ, ಅಸ್ಫುಟ—ಎಲ್ಲವೂ ನೀನೇ (10). ಹೇ ಕರಾಳರೂಪ, ಸೌಮ್ಯರೂಪ, ಹೇ ವಿದ್ಯಾಮಯ, ಅವಿದ್ಯಾಮಯ, ಅಚ್ಯುತ, ವ್ಯಾಕೃತನೂ (ಸತ್) ಅವ್ಯಾಕೃತನೂ (ಅಸತ್) ಆಗಿ ಮತ್ತೆ ಅವುಗಳಲ್ಲಿ ನೆಲೆಸಿರತಕ್ಕವನೂ ಆಗಿದ್ದೀಯೆ. ಕಾರ್ಯಕಾರಣಗಳನ್ನು ರೂಪಿಸತಕ್ಕವನು ನೀನು (11). ನಿತ್ಯವೂ ಅನಿತ್ಯವೂ ಪ್ರಪಂಚವೂ ಆಗಿದ್ದೀಯೆ. ಪರಮಾರ್ಥದಲ್ಲಿ ಪ್ರಪಂಚದ ಲೇಪವಿಲ್ಲದವನು. ನಿರ್ಮಲಭಾವದ ಭಕ್ತರಿಂದ ಆಶ್ರಿತ. ಏಕನೆ, ಅನೇಕನೆ, ವಾಸುದೇವ, ಆದಿಕಾರಣ, ನಮಸ್ತುಭ್ಯಂ (12). ಯಾರು ಸ್ಥೂಲವೂ ಸೂಕ್ಷ್ಮವೂ ಆಗಿದ್ದಾನೋ ಅತ್ಯಂತ ಪ್ರಕಾಶಶೀಲನೋ, ಯಾರು ಸಮಸ್ತಭೂತಸ್ವರೂಪನಾದರೂ ವಸ್ತುತಃ ಸರ್ವಭೂತಗಳ ಸಂಬಂಧವಿಲ್ಲದವನೋ, ವಿಶ್ವಕ್ಕೆ ಕಾರಣನಲ್ಲದ ಯಾರಿಂದ ಈ ವಿಶ್ವ ಹುಟ್ಟಿದೆಯೋ! ಅಂತಹ ಪುರುಷೋತ್ತಮನಿಗೆ ನಮಸ್ಕಾರ" (13). ದೇವನಲ್ಲಿಯೇ ಮನಸ್ಸಿಟ್ಟು ಈ ಪ್ರಕಾರ ಸ್ತುತಿಮಾಡುತ್ತಿರಲು, ಪೀತಾಂಬರ

*ಶ್ರೀಪರಾಶರ ಉವಾಚ:*

**ತಸ್ಯ ತಚ್ಚೇತಸೋ ದೇವಃ ಸ್ತುತಿಮಿತ್ಥಂ ಪ್ರಕುರ್ವತಃ।**
**ಆವಿರ್ಬಭೂವ ಭಗವಾನ್ ಪೀತಾಂಬರಧರೋ ಹರಿಃ॥** 14

**ಸಸಂಭ್ರಮಸ್ತಮಾಲೋಕ್ಯ ಸಮುತ್ಥಾಯಾಕುಲಾಕ್ಷರಮ್।**
**ನಮೋಽಸ್ತು ವಿಷ್ಣವೇತ್ಯೇತದ್ವ್ಯಾಜಹಾರಾಸಕೃದ್ದ್ವಿಜ॥** 15

*ಪ್ರಹ್ಲಾದ ಉವಾಚ:*

**ದೇವ ಪ್ರಪನ್ನಾರ್ತಿಹರ ಪ್ರಸಾದಂ ಕುರು ಕೇಶವ।**
**ಅವಲೋಕನದಾನೇನ ಭೂಯೋ ಮಾಂ ಪಾವಯಾಚ್ಯುತ॥** 16

*ಶ್ರೀಭಗವಾನುವಾಚ:*

**ಕುರ್ವತಸ್ತೇ ಪ್ರಸನ್ನೋಽಹಂ ಭಕ್ತಿಮವ್ಯಭಿಚಾರಿಣೀಮ್।**
**ಯಥಾಭಿಲಷಿತೋ ಮತ್ತಃ ಪ್ರಹ್ಲಾದ ವ್ರಿಯತಾಂ ವರಃ॥** 17

*ಪ್ರಹ್ಲಾದ ಉವಾಚ:*

**ನಾಥ ಯೋನಿಸಹಸ್ರೇಷು ಯೇಷು ಯೇಷು ವ್ರಜಾಮ್ಯಹಮ್।**
**ತೇಷು ತೇಷ್ವಚ್ಯುತಾ ಭಕ್ತಿರಚ್ಯುತಾಸ್ತು ಸದಾ ತ್ವಯಿ॥** 18

---

ಧರನಾದ ಭಗವಾನ್ ಶ್ರೀಹರಿಯು ಪ್ರಹ್ಲಾದನೆದುರಿಗೆ ಪ್ರಕಟನಾದನು. ಮೈತ್ರೇಯ, ಅವನನ್ನು ನೋಡಿದ ಕೂಡಲೇ ಪ್ರಹ್ಲಾದನು ಸಂಭ್ರಮದಿಂದ ಮೇಲೆದ್ದು ಅಕ್ಷರಗಳನ್ನು ತೊದಲಿಸುತ್ತ 'ನಮೋಽಸ್ತು ವಿಷ್ಣವೇ, ನಮೋಽಸ್ತು ವಿಷ್ಣವೇ' ಎಂದು ಅನೇಕ ಸಲ ಹೇಳಿದನು (14-15). "ದೇವ, ಶರಣಾಗತರ ಕಷ್ಟವನ್ನು ನೀಗತಕ್ಕವನೆ, ಕೇಶವ, ಪ್ರಸನ್ನನಾಗು. ಅಚ್ಯುತ, ನನ್ನನ್ನು ಕೃಪೆಯಿಂದ ನೋಡಿ ಪಾವನಗೊಳಿಸು" ಎಂದನು. ಭಗವಂತನು "ಪ್ರಹ್ಲಾದ, ನನ್ನಲ್ಲಿ ನಿಶ್ಚಲವಾದ ಭಕ್ತಿಯನ್ನಿಟ್ಟಿರುವೆಯಾದ್ದರಿಂದ ಪ್ರಸನ್ನನಾಗಿದ್ದೇನೆ, ನಿನಗೆ ಇಷ್ಟವಾದ ವರವನ್ನು ನನ್ನಿಂದ ಕೇಳಿಕೊ" ಎಂದನು (16-17). ಅದಕ್ಕೆ ಪ್ರಹ್ಲಾದನು "ಸ್ವಾಮಿ, ನಾನು ಸಾವಿರಾರು ಯೋನಿಗಳಲ್ಲಿ ಯಾವುದರಲ್ಲೇ ಹುಟ್ಟಲಿ, ನನಗೆ ನಿನ್ನಲ್ಲಿ, ಅಚ್ಯುತ,

**ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ।**
**ತ್ವಾಮನುಸ್ಮರತಃ ಸಾ ಮೇ ಹೃದಯಾನ್ಮಾಪಸರ್ಪತು॥ 19**

*ಶ್ರೀಭಗವಾನುವಾಚ:*

**ಮಯಿ ಭಕ್ತಿಸ್ತವಾಸ್ತ್ಯೇವ ಭೂಯೋಽಪ್ಯೇವಂ ಭವಿಷ್ಯತಿ।**
**ವರಸ್ತು ಮತ್ತಃ ಪ್ರಹ್ಲಾದ ವ್ರಿಯತಾಂ ಯಸ್ತವೇಪ್ಸಿತಃ॥ 20**

*ಪ್ರಹ್ಲಾದ ಉವಾಚ:*

**ಮಯಿ ದ್ವೇಷಾನುಬಂಧೋಽಭೂತ್ ಸಂಸ್ತುತಾವುದ್ಯತೇ ತವ।**
**ಮತ್ಪಿತುಸ್ತತ್ ಕೃತಂ ಪಾಪಂ ದೇವ ತಸ್ಯ ಪ್ರಣಶ್ಯತು॥ 21**

**ಶಸ್ತ್ರಾಣಿ ಪಾತಿತಾನ್ಯಂಗೇ ಕ್ಷಿಪ್ತೋ ಯಚ್ಚಾಗ್ನಿಸಂಹತೌ।**
**ದಂಶಿತಶ್ಚೋರಗೈರ್ದತ್ತಂ ಯದ್ವಿಷಂ ಮಮ ಭೋಜನೇ॥ 22**

---

ಅಚ್ಯುತವಾದ ಭಕ್ತಿ ನೆಲೆಸಿರಲಿ! ವಿವೇಕಹೀನರಾದ ಜನರಿಗೆ ವಿಷಯ ಸುಖಗಳಲ್ಲಿ ಯಾವ ರೀತಿಯ ಅಚಲವಾದ ಪ್ರೀತಿ ನೆಲೆಸಿರುತ್ತದೆಯೋ, ಅಂತಹ ಅಚಲವಾದ ಪ್ರೀತಿ ಸದಾ ನಿನ್ನನ್ನು ಧ್ಯಾನಿಸುತ್ತಿರುವ ನನ್ನ ಹೃದಯ ದಿಂದ ಚಲಿಸದಿರಲಿ" ಎಂದು ನುಡಿದನು (18-19). ಭಗವಂತನು "ಪ್ರಹ್ಲಾದ, ನನ್ನಲ್ಲಿ ಅಚಲವಾದ ಭಕ್ತಿ ನಿನಗೆ ಇದ್ದೇ ಇದೆ. ಮುಂದೆಯೂ ಹೀಗೆಯೇ ಇರುವುದು. ಪ್ರಹ್ಲಾದ, ನನ್ನಿಂದ ಏನಾದರೂ ವರವನ್ನು ಕೇಳಿಕೊ" ಎಂದನು (20). ಪ್ರಹ್ಲಾದನು "ದೇವ, ನಿನ್ನನ್ನು ನಾನು ಸ್ತುತಿಸಲು ತೊಡಗಿದಷ್ಟೂ ನನ್ನ ತಂದೆಗೆ ನನ್ನಲ್ಲಿ ದ್ವೇಷವು ಬೆಳೆಯಿತು. ಅದರಿಂದ ನನ್ನ ತಂದೆಗೆ ಅಂಟಿದ ಪಾಪವು ನಾಶವಾಗಲಿ! (21). ಅಲ್ಲದೆ ನನ್ನ ಅಂಗಗಳಲ್ಲಿ ಶಸ್ತ್ರಗಳಿಂದ ಪ್ರಹರಿಸಿದ್ದು, ಬೆಂಕಿಯಲ್ಲಿ ನನ್ನನ್ನು ತಳ್ಳಿದ್ದು, ಸರ್ಪಗಳಿಂದ ಕಡಿಸಿದ್ದು, ಊಟದಲ್ಲಿ ವಿಷವನ್ನು ಕೊಟ್ಟದ್ದು, ಸಮುದ್ರದಲ್ಲಿ ನಾನು ಎಸೆಯಲ್ಪಟ್ಟದ್ದು, ನನ್ನ ಸುತ್ತಲೂ ಬೆಟ್ಟಗಳನ್ನು ಇಡುಕಿಸಿದ್ದು— ಇದೇ ರೀತಿ ಇನ್ನೂ ಯಾವ ಅಸಾಧು ಕೃತ್ಯಗಳನ್ನು ನನ್ನ ತಂದೆ ಎಸಗಿ

**ಬದ್‌ಧ್ವಾ ಸಮುದ್ರೇ ಯತ್ ಕ್ಷಿಪ್ತೋ ಯಚ್ಚಿತ್ತೋಽಸ್ಮಿ**
**ಶಿಲೋಚ್ಚಯೈಃ।**
**ಅನ್ಯಾನಿ ಚಾಪ್ಯಸಾಧೂನಿ ಯಾನಿ ಪಿತ್ರಾ ಕೃತಾನಿ ಮೇ॥ 23**

**ತ್ವಯಿ ಭಕ್ತಿಮತೋ ದ್ವೇಷಾದಘಂ ತತ್ಸಂಭವಂ ಚ ಯತ್।**
**ತ್ವತ್ಪ್ರಸಾದಾತ್ ಪ್ರಭೋ ಸದ್ಯಸ್ತೇನ ಮುಚ್ಯೇತ ಮೇ ಪಿತಾ॥ 24**

*ಶ್ರೀಭಗವಾನುವಾಚ:*

**ಪ್ರಹ್ಲಾದ ಸರ್ವಮೇತತ್ತೇ ಮತ್ಪ್ರಸಾದಾದ್‌ಭವಿಷ್ಯತಿ।**
**ಅನ್ಯಚ್ಚ ತೇ ವರಂ ದದ್ಮಿ ವ್ರಿಯತಾಮಸುರಾತ್ಮಜ॥ 25**

*ಪ್ರಹ್ಲಾದ ಉವಾಚ:*

**ಕೃತಕೃತ್ಯೋಽಸ್ಮಿ ಭಗವನ್ ವರೇಣಾನೇನ ಯತ್ತ್ವಯಿ।**
**ಭವಿತ್ರೀ ತ್ವತ್ಪ್ರಸಾದೇನ ಭಕ್ತಿರವ್ಯಭಿಚಾರಿಣೀ॥ 26**

**ಧರ್ಮಾರ್ಥಕಾಮೈಃ ಕಿಂ ತಸ್ಯ ಮುಕ್ತಿಸ್ತಸ್ಯ ಕರೇ ಸ್ಥಿತಾ।**
**ಸಮಸ್ತಜಗತಾಂ ಮೂಲೇ ಯಸ್ಯ ಭಕ್ತಿಃ ಸ್ಥಿರಾ ತ್ವಯಿ॥ 27**

---

ದನೋ, ಅವುಗಳಿಂದಲೂ ಮತ್ತು ನಿನ್ನ ಭಕ್ತನನ್ನು ದ್ವೇಷಿಸಿದ್ದರಿಂದಲೂ ಯಾವ ಯಾವ ಪಾಪ ನನ್ನ ತಂದೆಗೆ ಬಂದಿದೆಯೋ, ನಿನ್ನ ಅನುಗ್ರಹದಿಂದ ಕೂಡಲೇ ಆ ಎಲ್ಲ ಪಾಪಗಳಿಂದಲೂ ಅವನು ಬಿಡುಗಡೆ ಹೊಂದಲಿ" ಎಂದನು (22-24). ಭಗವಂತನು "ಪ್ರಹ್ಲಾದ, ಇದೆಲ್ಲವೂ ನನ್ನ ಅನುಗ್ರಹ ದಿಂದ ನಡೆಯುವುದು. ಇನ್ನೊಂದು ವರವನ್ನು ಕೊಡುವೆನು. ಅಸುರಾತ್ಮಜ, ಕೇಳಿಕೊ" ಎಂದನು. ಅದಕ್ಕೆ ಪ್ರಹ್ಲಾದನು "ಭಗವನ್, ನಾನು ಧನ್ಯನಾದೆ. ಆ ವರದಿಂದ ಇಷ್ಟಾಗಬೇಕು—ನನಗೆ ನಿನ್ನಲ್ಲಿ ನಿಶ್ಚಲವಾದ ಭಕ್ತಿ ನೆಲೆಸಿರಬೇಕು (25-26). ಸಮಸ್ತ ಜಗತ್ತುಗಳಿಗೆ ಮೂಲಕಾರಣನಾದ ನಿನ್ನಲ್ಲಿ ಯಾರಿಗೆ ಸ್ಥಿರವಾದ ಭಕ್ತಿಯಿದೆಯೋ, ಆತನ ಅಂಗೈಯಲ್ಲಿ ಮೋಕ್ಷವಿರುತ್ತದೆ. ಇನ್ನು ಧರ್ಮಾರ್ಥಕಾಮಗಳಿಂದ ಆಗ ಬೇಕಾದ್ದೇನು?" ಎಂದು ನುಡಿದನು (27). ಆಗ ಅಚ್ಯುತನು "ಪ್ರಹ್ಲಾದ,

*ಶ್ರೀಭಗವಾನುವಾಚ:*

**ಯಥಾ ತೇ ನಿಶ್ಚಲಂ ಚೇತೋ ಮಯಿ ಭಕ್ತಿಸಮನ್ವಿತಮ್।**
**ತಥಾ ತ್ವಂ ಮತ್ಪ್ರಸಾದೇನ ನಿರ್ವಾಣಂ ಪರಮಾಪ್ಸ್ಯಸಿ॥** 28

*ಶ್ರೀಪರಾಶರ ಉವಾಚ:*

**ಇತ್ಯುಕ್ತ್ವಾಂತರ್ದಧೇ ವಿಷ್ಣುಸ್ತಸ್ಯ ಮೈತ್ರೇಯ ಪಶ್ಯತಃ।**
**ಸ ಚಾಪಿ ಪುನರಾಗಮ್ಯ ವವಂದೇ ಚರಣೌ ಪಿತುಃ॥** 29

**ತಂ ಪಿತಾ ಮೂರ್ದ್ನ್ಯುಪಾಘ್ರಾಯ ಪರಿಷ್ವಜ್ಯ ಚ ಪೀಡಿತಮ್।**
**ಜೀವಸೀತ್ಯಾಹ ವತ್ಸೇತಿ ಬಾಷ್ಪಾರ್ದ್ರನಯನೋ ದ್ವಿಜ॥** 30

**ಪ್ರೀತಿಮಾಂಶ್ಚಾಭವತ್ತಸ್ಮಿನ್ನನುತಾಪೀ ಮಹಾಸುರಃ।**
**ಗುರುಪಿತ್ರೋಶ್ಚಕಾರೈವಂ ಶುಶ್ರೂಷಾಂ ಸೋಽಪಿ ಧರ್ಮವಿತ್॥** 31

**ಪಿತುರ್ಯುಪರತಿಂ ನೀತೇ ನರಸಿಂಹಸ್ವರೂಪಿಣಾ।**
**ವಿಷ್ಣುನಾ ಸೋಽಪಿ ದೈತ್ಯಾನಾಂ ಮೈತ್ರೇಯಾಭೂತ್ಪತಿಸ್ತತಃ॥** 32

---

ಭಕ್ತಿಯುಕ್ತವಾದ ನಿನ್ನ ಚಿತ್ತವು ನನ್ನಲ್ಲಿ ಸ್ಥಿರವಾಗಿ ನೆಲೆಸಿದೆ. ನನ್ನ ಕೃಪೆಯಿಂದ ಮುಕ್ತಿಯನ್ನು ಪಡೆಯುತ್ತೀಯೆ" ಎಂದು ಹೇಳಿ, ಮೈತ್ರೇಯ, ಪ್ರಹ್ಲಾದನು ನೋಡುತ್ತಿರುವಾಗಲೇ ವಿಷ್ಣು ಅಂತರ್ಧಾನ ಹೊಂದಿದನು. ಪ್ರಹ್ಲಾದನು ಹಿಂದಿರುಗಿ ಬಂದು ತಂದೆಯ ಪಾದಗಳಿಗೆ ವಂದಿಸಿದನು (28-29). ತಂದೆ ಹಿರಣ್ಯಕಶಿಪು ಮಗನ ತಲೆಯನ್ನು ಆಘ್ರಾಣಿಸಿ ಗಟ್ಟಿಯಾಗಿ ಅಪ್ಪಿಕೊಂಡು ಕಂಬನಿದುಂಬಿ, "ಮಗು, ಬದುಕಿ ಬಂದೆಯಾ" ಎಂದು ವಾತ್ಸಲ್ಯದಿಂದ ನುಡಿದನು (30). ಆ ಮಹಾದೈತ್ಯನು ತನ್ನ ಕೃತ್ಯಕ್ಕೆ ಪಶ್ಚಾತ್ತಾಪಗೊಂಡು ಪ್ರಹ್ಲಾದನಲ್ಲಿ ಪ್ರೀತಿಯುಳ್ಳವನಾದನು. ಧರ್ಮಜ್ಞನಾದ ಆ ಬಾಲಕನು ತಾಯಿತಂದೆಗಳ ಸೇವೆಯನ್ನು ಮಾಡಿಕೊಂಡಿದ್ದನು (31). ಮುಂದೆ ವಿಷ್ಣುವು ನರಸಿಂಹಾವತಾರ ಮಾಡಿ ಪ್ರಹ್ಲಾದನ ತಂದೆಯನ್ನು ಸಂಹರಿಸ ಲಾಗಿ, ಮೈತ್ರೇಯ, ಪ್ರಹ್ಲಾದನು ದೈತ್ಯರಾಜನಾದನು (32). ಆತನು ಪ್ರಾರಬ್ಧಕರ್ಮವನ್ನು ಸವೆಸತಕ್ಕ ರಾಜ್ಯಲಕ್ಷ್ಮಿಯನ್ನು ಪಡೆದು ಬಹಳ ಮಂದಿ ಪುತ್ರ ಪೌತ್ರರನ್ನೂ ಐಶ್ವರ್ಯವನ್ನೂ ಅನುಭವಿಸಿದನು (ಹೀಗೆ ಅನುಭವಿಸಿ

**ತತೋ ರಾಜ್ಯದ್ಯುತಿಂ ಪ್ರಾಪ್ಯ ಕರ್ಮಶುದ್ಧಿಕರೀಂ ದ್ವಿಜ।**
**ಪುತ್ರಪೌತ್ರಾಂಶ್ಚ ಸುಬಹೂನವಾಪ್ಯೈಶ್ವರ್ಯಮೇವ ಚ॥ 33**

**ಕ್ಷೀಣಾಧಿಕಾರಃ ಸ ಯದಾ ಪುಣ್ಯಪಾಪವಿವರ್ಜಿತಃ।**
**ತದಾ ಸ ಭಗವದ್ಧ್ಯಾನಾತ್ ಪರಂ ನಿರ್ವಾಣಮಾಪ್ತವಾನ್॥ 34**

**ಏವಂ ಪ್ರಭಾವೋ ದೈತ್ಯೋऽಸೌ ಮೈತ್ರೇಯಾಸೀನ್ಮಹಾಮತಿಃ।**
**ಪ್ರಹ್ಲಾದೋ ಭಗವದ್ಭಕ್ತೋ ಯಂ ತ್ವಂ ಮಾಮನುಪೃಚ್ಛಸಿ॥ 35**

**ಯಸ್ತ್ವೇತಚ್ಚರಿತಂ ತಸ್ಯ ಪ್ರಹ್ಲಾದಸ್ಯ ಮಹಾತ್ಮನಃ।**
**ಶೃಣೋತಿ ತಸ್ಯ ಪಾಪಾನಿ ಸದ್ಯೋ ಗಚ್ಛಂತಿ ಸಂಕ್ಷಯಮ್॥ 36**

**ಅಹೋರಾತ್ರಕೃತಂ ಪಾಪಂ ಪ್ರಹ್ಲಾದಚರಿತಂ ನರಃ।**
**ಶೃಣ್ವನ್ ಪಠಂಶ್ಚ ಮೈತ್ರೇಯ ವ್ಯಪೋಹತಿ ನ ಸಂಶಯಃ॥ 37**

**ಪೌರ್ಣಮಾಸ್ಯಾಮಮಾವಾಸ್ಯಾಮಷ್ಟಮ್ಯಾಮಥವಾ ಪಠನ್।**
**ದ್ವಾದಶ್ಯಾಂ ವಾ ತದಾಪ್ನೋತಿ ಗೋಪ್ರದಾನಫಲಂ ದ್ವಿಜ॥ 38**

---

ಪ್ರಾರಬ್ಧಕರ್ಮವು ಕ್ಷಯಿಸಿತು). (ನಿಷ್ಕಾಮನಾದ್ದರಿಂದ) ಕರ್ಮಾಧಿಕಾರವು ಕ್ಷಯಿಸಿತು. ಆದ್ದರಿಂದ ಪುಣ್ಯಪಾಪಗಳ ಲೇಪವಾಗಲಿಲ್ಲ. ಆಗ ಭಗವದ್ಧ್ಯಾನದಿಂದ ಪ್ರಹ್ಲಾದನು ಮೋಕ್ಷವನ್ನೈದಿದನು (33-34). ಮೈತ್ರೇಯ, ಭಗವದ್ಭಕ್ತನಾದ ಪ್ರಹ್ಲಾದನೆಂಬ ದೈತ್ಯನ ವಿಷಯವಾಗಿ ನೀನು ಕೇಳಿದೆಯಲ್ಲ, ಆತನು ಈ ರೀತಿಯ ಪ್ರಭಾವಶಾಲಿಯಾಗಿದ್ದನು. ಮಹಾತ್ಮನಾದ ಪ್ರಹ್ಲಾದನ ಈ ಚರಿತ್ರೆಯನ್ನು ಯಾವಾತನು ಆಲಿಸುತ್ತಾನೋ ಆತನ ಪಾಪಗಳು ಕೂಡಲೇ ಕ್ಷಯ ಹೊಂದುತ್ತವೆ (35-36). ಪ್ರಹ್ಲಾದನ ಚರಿತ್ರೆಯನ್ನು ಮನುಷ್ಯನು ಕೇಳಿದರೂ ಓದಿದರೂ ಆತನ ಅಹೋರಾತ್ರಕೃತವಾದ ಪಾಪವು ನಿಃಸಂಶಯವಾಗಿ ಕ್ಷಯಿಸುತ್ತದೆ (37). ಹುಣ್ಣಿಮೆ, ಅಮಾವಾಸ್ಯೆ ಅಥವಾ ಅಷ್ಟಮಿಯಲ್ಲಿ ಅಥವಾ ದ್ವಾದಶಿಯಲ್ಲಿ ಇದನ್ನು ಪಠಿಸತಕ್ಕವನಿಗೆ ಗೋದಾನದ ಫಲವು ಲಭಿಸುತ್ತದೆ. ಯಾವಾತನು ಸದಾ ಪ್ರಹ್ಲಾದಚರಿತ್ರೆಯನ್ನು ಕೇಳುತ್ತಾ ಇರುವನೋ ಅವನನ್ನು ಸರ್ವ

**ಪ್ರಹ್ಲಾದಂ ಸಕಲಾಪತ್ಸು ಯಥಾ ರಕ್ಷಿತವಾನ್ ಹರಿಃ।**
**ತಥಾ ರಕ್ಷತಿ ಯಸ್ತಸ್ಯ ಶೃಣೋತಿ ಚರಿತಂ ಸದಾ॥** 39

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ವಿಂಶೋಽಧ್ಯಾಯಃ

---

ವಿಪತ್ತುಗಳಲ್ಲಿಯೂ ಶ್ರೀಹರಿಯು ಕಾಪಾಡುತ್ತಾನೆ. ಪ್ರಹ್ಲಾದನನ್ನು ರಕ್ಷಿಸಿದಂತೆ ರಕ್ಷಿಸುತ್ತಾನೆ (38-39).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಇಪ್ಪತ್ತನೆಯ ಅಧ್ಯಾಯ ಮುಗಿಯಿತು.



## ಏಕವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಸಂಹ್ಲಾದಪುತ್ರ ಆಯುಷ್ಮಾನ್ ಶಿಬಿರ್ಬಾಷ್ಕಲ ಏವ ಚ।**
**ವಿರೋಚನಸ್ತು ಪ್ರಾಹ್ಲಾದಿರ್ಬಲಿರ್ಜಜ್ಞೇ ವಿರೋಚನಾತ್॥** 1

**ಬಲೇಃ ಪುತ್ರಶತಂ ತ್ವಾಸೀದ್ಬಾಣಜ್ಯೇಷ್ಠಂ ಮಹಾಮುನೇ।**
**ಹಿರಣ್ಯಾಕ್ಷಸುತಾಶ್ಚಾಸನ್ ಸರ್ವ ಏವ ಮಹಾಬಲಾಃ॥** 2

**ಉತ್ಕುರಃ ಶಕುನಿಶ್ಚೈವ ಭೂತಸಂತಾಪನಸ್ತಥಾ।**
**ಮಹಾನಾಭೋ ಮಹಾಬಾಹುಃ ಕಾಲನಾಭಸ್ತಥಾಪರಃ॥** 3

**ಅಭವನ್ ದನುಪುತ್ರಾಶ್ಚ ದ್ವಿಮೂರ್ಧಾ ಶಂಬರಸ್ತಥಾ।**
**ಅಯೋಮುಖಃ ಶಂಕುಶಿರಾಃ ಕಪಿಲಃ ಶಂಕರಸ್ತಥಾ॥** 4

---

## ಅಧ್ಯಾಯ 21

ಕಶ್ಯಪನ ಇತರ ಸ್ತ್ರೀಯರಲ್ಲಿ ಹುಟ್ಟಿದ ವಂಶದ ವರ್ಣನೆ. ಮರುತ್ತುಗಳ ಉತ್ಪತ್ತಿ.

ಪರಾಶರರು ಹೇಳಿದರು: (ಹಿರಣ್ಯಕಶಿಪುವಿನ ಮಗ) ಸಂಹ್ಲಾದನಿಗೆ ಆಯುಷ್ಮಾನ್, ಶಿಬಿ, ಬಾಷ್ಕಲ—ಎಂಬುವರು ಪುತ್ರರಾದರು. ಪ್ರಹ್ಲಾದನ ಮಗ ವಿರೋಚನ. ವಿರೋಚನನಿಂದ ಬಲಿಚಕ್ರವರ್ತಿ ಹುಟ್ಟಿದ (1). ಮೈತ್ರೇಯ, ಬಲಿಗೆ ನೂರು ಮಂದಿ ಪುತ್ರರಿದ್ದರು. ಅವರಲ್ಲಿ ಬಾಣನು ಹಿರಿಯ ಮಗ. ಇನ್ನು ಹಿರಣ್ಯಾಕ್ಷನಿಗೆ ಉತ್ಕುರ, ಶಕುನಿ, ಭೂತಸಂತಾಪನ, ಮಹಾನಾಭ, ಮಹಾಬಾಹು ಮತ್ತು ಕಾಲನಾಭ ಎಂಬ ಮಕ್ಕಳಿದ್ದರು. ಅವರೆಲ್ಲರೂ ಬಲಾಢ್ಯರು (2-3). ಕಶ್ಯಪನ ಇನ್ನೊಬ್ಬ ಭಾರ್ಯೆಯಾದ ದನುವಿಗೆ ದ್ವಿಮೂರ್ಧ, ಶಂಬರ, ಅಯೋಮುಖ, ಶಂಕುಶಿರ, ಕಪಿಲ, ಶಂಕರ, ಏಕಚಕ್ರ, ಮಹಾಬಾಹು, ಬಲಾಢ್ಯನಾದ ತಾರಕ, ಸ್ವರ್ಭಾನು,

**ಏಕಚಕ್ರೋ ಮಹಾಬಾಹುಸ್ತಾರಕಶ್ಚ ಮಹಾಬಲಃ।**
**ಸ್ವರ್ಭಾನುರ್ವೃಷಪರ್ವಾ ಚ ಪುಲೋಮಶ್ಚ ಮಹಾಬಲಃ॥** 5

**ಏತೇ ದನೋಃ ಸುತಾಃ ಖ್ಯಾತಾ ವಿಪ್ರಚಿತ್ತಿಶ್ಚ ವೀರ್ಯವಾನ್।**
**ಸ್ವರ್ಭಾನೋಸ್ತು ಪ್ರಭಾ ಕನ್ಯಾ ಶರ್ಮಿಷ್ಠಾ ವಾರ್ಷಪರ್ವಣೀ॥** 6

**ಉಪದಾನೀ ಹಯಶಿರಾಃ ಪ್ರಖ್ಯಾತಾ ವರಕನ್ಯಕಾಃ।**
**ವೈಶ್ವಾನರಸುತೇ ಚೋಭೇ ಪುಲೋಮಾ ಕಾಲಕಾ ತಥಾ॥** 7

**ಉಭೇ ಸುತೇ ಮಹಾಭಾಗೇ ಮಾರೀಚೇಸ್ತು ಪರಿಗ್ರಹಃ।**
**ತಾಭ್ಯಾಂ ಪುತ್ರಸಹಸ್ರಾಣಿ ಷಷ್ಟಿರ್ದಾನವಸತ್ತಮಾಃ॥** 8

**ಪೌಲೋಮಾಃ ಕಾಲಕೇಯಾಶ್ಚ ಮಾರೀಚತನಯಾಃ ಸ್ಮೃತಾಃ।**
**ತತೋಽಪರೇ ಮಹಾವೀರ್ಯಾ ದಾರುಣಾಸ್ತ್ವತಿನಿರ್ಘೃಣಾಃ॥** 9

---

ವೃಷಪರ್ವ, ಪುಲೋಮ, ಪರಾಕ್ರಮಿಯಾದ ವಿಪ್ರಚಿತ್ತಿ—ಇವರು ವಿಖ್ಯಾತರಾದ ಪುತ್ರರು. ಸ್ವರ್ಭಾನುವಿನ ಮಗಳು ಪ್ರಭಾ. ವೃಷಪರ್ವನ ಮಗಳು ಶರ್ಮಿಷ್ಠೆ (4-6). ಅಲ್ಲದೆ ವೃಷಪರ್ವನಿಗೆ ಉಪದಾನೀ, ಹಯಶಿರಾ—ಎಂಬ ಸುಂದರಿಯರಾದ ಹೆಣ್ಣು ಮಕ್ಕಳಿದ್ದರು. ವೈಶ್ವಾನರನ* ಪುತ್ರಿಯರಾದ ಪುಲೋಮಾ, ಕಾಲಕಾ—ಎಂಬಿಬ್ಬರು ಮರೀಚಿ ಪುತ್ರನಾದ ಕಶ್ಯಪನ ಭಾರ್ಯೆಯಾದರು. ಅವರಿಗೆ ಅರವತ್ತು ಸಾವಿರ ದಾನವ ಶ್ರೇಷ್ಠರು ಪುತ್ರರಾದರು (7-8). ಅವರು ಪೌಲೋಮರೆಂದೂ ಕಾಲಕೇಯರೆಂದೂ ಪ್ರಸಿದ್ಧರಾಗಿದ್ದಾರೆ. ಇವರು ಕಶ್ಯಪತನಯರು. ಅಲ್ಲದೆ ವಿಪ್ರಚಿತ್ತಿಗೆ ಸಿಂಹಿಕೆಯಲ್ಲಿ ಮಹಾವೀರರೂ ಕ್ರೂರಿಗಳೂ ಕಾರುಣ್ಯ ಹೀನರೂ ಆದ ಪುತ್ರರು ಜನಿಸಿದರು. ಅವರು ಯಾರೆಂದರೆ: ವ್ಯಂಶ,

---

* ವೈಶ್ವಾನರನ ಹೆಸರು ಈ ಪಟ್ಟಿಯಲ್ಲಿ ಬಂದಿಲ್ಲ. ಈತನು ವಾಯುಪುರಾಣ ಮತ್ತು ಭಾಗವತ ವ್ಯಾಖ್ಯಾನಗಳ ಪ್ರಕಾರ ದನುಪುತ್ರನಾಗುತ್ತಾನೆ. ಕಶ್ಯಪನು ತನ್ನ ಮೊಮ್ಮಕ್ಕಳನ್ನು ಮದುವೆಯಾದನೆಂಬ ವಿರೋಧ ಇಲ್ಲಿ ಬರುತ್ತದೆ. ವೈಶ್ವಾನರನೆಂದರೆ ಅಗ್ನಿಯೋ ಅಥವಾ ಬೇರೊಬ್ಬನೋ ಆಗಿರಬಹುದು.

**ಸಿಂಹಿಕಾಯಾಮಥೋತ್ಪನ್ನಾ ವಿಪ್ರಚಿತ್ತೇಃ ಸುತಾಸ್ತಥಾ।**
**ವ್ಯಂಶಃ ಶಲ್ಯಶ್ಚ ಬಲವಾನ್ ನಭಶ್ಚೈವ ಮಹಾಬಲಃ॥** 10

**ವಾತಾಪೀ ನಮುಚಿಶ್ಚೈವ ಇಲ್ವಲಃ ಖಸೃಮಸ್ತಥಾ।**
**ಅಂಧಕೋ ನರಕಶ್ಚೈವ ಕಾಲನಾಭಸ್ತಥೈವ ಚ॥** 11

**ಸ್ವರ್ಭಾನುಶ್ಚ ಮಹಾವೀರ್ಯೋ ವಕ್ತ್ರಯೋಧೀ ಮಹಾಸುರಃ।**
**ಏತೇ ವೈ ದಾನವಾಃ ಶ್ರೇಷ್ಠಾ ದನುವಂಶವಿವರ್ಧನಾಃ॥** 12

**ಏತೇಷಾಂ ಪುತ್ರಪೌತ್ರಾಶ್ಚ ಶತಶೋಽಥ ಸಹಸ್ರಶಃ।**
**ಪ್ರಹ್ಲಾದಸ್ಯ ತು ದೈತ್ಯಸ್ಯ ನಿವಾತಕವಚಾಃ ಕುಲೇ॥** 13

**ಸಮುತ್ಪನ್ನಾಃ ಸುಮಹತಾ ತಪಸಾ ಭಾವಿತಾತ್ಮನಃ।**
**ಷಟ್ ಸುತಾಃ ಸುಮಹಾಸತ್ತ್ವಾಸ್ತಾಮ್ರಾಯಾಃ ಪರಿಕೀರ್ತಿತಾಃ॥** 14

**ಶುಕೀ ಶ್ಯೇನೀ ಚ ಭಾಸೀ ಚ ಸುಗ್ರೀವೀ ಶುಚಿಗೃದ್‌ಧ್ರಿಕಾಃ।**
**ಶುಕೀ ಶುಕಾನಜನಯದುಲೂಕಪ್ರತ್ಯುಲೂಕಿಕಾಮ್॥** 15

---

ಶಲ್ಯ, ಬಲವಾನ್, ನಭ (9-10). ಬಲಾಢ್ಯನಾದ ವಾತಾಪಿ, ನಮುಚಿ, ಇಲ್ವಲ, ಖಸೃಮ, ಅಂಧಕ, ನರಕ, ಕಾಲನಾಭ, ಸ್ವರ್ಭಾನು, ವಕ್ತ್ರಯೋಧಿ, ಇವರೆಲ್ಲರೂ ದನುವಂಶವನ್ನು ಬೆಳೆಸಿದ ಪ್ರಖ್ಯಾತದಾನವರು (11-12). ಇವರಿಗೂ ನೂರಾರು ಸಾವಿರಾರು ಪುತ್ರರೂ ಪೌತ್ರರೂ ಜನಿಸಿದರು. ಮಹತ್ತರವಾದ ತಪಸ್ಸಿನಿಂದ ಜ್ಞಾನಸಂಪನ್ನನಾಗಿದ್ದ ಪ್ರಹ್ಲಾದನ ವಂಶದಲ್ಲಿ ನಿವಾತಕವಚರು ಜನಿಸಿದರು. ಕಶ್ಯಪಭಾರ್ಯೆಯಾದ ತಾಮ್ರಾ ಎಂಬುವಳಿಗೆ ಆರುಮಂದಿ ಪುತ್ರಿಯರು ಹುಟ್ಟಿದರು (13-14). ಶುಕೀ, ಶ್ಯೇನೀ, ಭಾಸೀ, ಸುಗ್ರೀವೀ, ಶುಚಿ ಮತ್ತು ಗೃಧ್ರಿಕಾ ಎಂದು ಅವರ ಹೆಸರು. ಶುಕಿಯು ಶುಕಗಳನ್ನೂ ಉಲೂಕ (ಗೂಬೆ) ಗಳನ್ನೂ ಉಲೂಕಗಳಿಗೆ ಪ್ರತಿಪಕ್ಷದವರಾದ ಕಾಕ–ಮೊದಲಾದವರನ್ನೂ ಹಡೆದಳು (15). ಶ್ಯೇನಿಯು ಗಿಡಗಗಳನ್ನೂ ಭಾಸಿಯು ಭಾಸಪಕ್ಷಿಗಳನ್ನೂ ಗೃಧ್ರಿಯು ಹದ್ದುಗಳನ್ನೂ ಶುಚಿಯು ಜಲಚರಪಕ್ಷಿಗಳನ್ನೂ ಹಡೆದರು.

**ಶ್ಯೇನೀ ಶ್ಯೇನಾಂಸ್ತಥಾ ಭಾಸೀ ಭಾಸಾನ್ ಗೃಧ್ರಾಂಶ್ಚ ಗೃಧ್ರ್ಯಪಿ।**
**ಶುಚ್ಯೌದಕಾನ್ ಪಕ್ಷಿಗಣಾನ್ ಸುಗ್ರೀವೀ ತು ವ್ಯಜಾಯತ॥** 16

**ಅಶ್ವಾನುಷ್ಟ್ರಾನ್ ಗರ್ದಭಾಂಶ್ಚ ತಾಮ್ರಾವಂಶಃ ಪ್ರಕೀರ್ತಿತಾಃ।**
**ವಿನತಾಯಾಸ್ತು ದ್ವೌ ಪುತ್ರೌ ವಿಖ್ಯಾತೌ ಗರುಡಾರುಣೌ॥** 17

**ಸುಪರ್ಣಃ ಪತತಾಂ ಶ್ರೇಷ್ಠೋ ದಾರುಣಃ ಪನ್ನಗಾಶನಃ।**
**ಸುರಸಾಯಾಂ ಸಹಸ್ರಂ ತು ಸರ್ಪಾಣಾಮಮಿತೌಜಸಾಮ್॥** 18

**ಅನೇಕಶಿರಸಾಂ ಬ್ರಹ್ಮನ್ ಖೇಚರಾಣಾಂ ಮಹಾತ್ಮನಾಮ್।**
**ಕಾದ್ರವೇಯಾಸ್ತು ಬಲಿನಃ ಸಹಸ್ರಮಮಿತೌಜಸಃ॥** 19

**ಸುಪರ್ಣವಶಗಾ ಬ್ರಹ್ಮನ್ ಜಜ್ಞಿರೇ ನೈಕಮಸ್ತಕಾಃ।**
**ತೇಷಾಂ ಪ್ರಧಾನಭೂತಾಸ್ತು ಶೇಷವಾಸುಕಿತಕ್ಷಕಾಃ॥** 20

**ಶಂಖಶ್ವೇತೋ ಮಹಾಪದ್ಮಃ ಕಂಬಲಾಶ್ವತರೌ ತಥಾ।**
**ಏಲಾಪುತ್ರಸ್ತಥಾ ನಾಗಃ ಕರ್ಕೋಟಕಧನಂಜಯೌ॥** 21

---

ಸುಗ್ರೀವಿಯು ಕುದುರೆ, ಒಂಟೆ, ಕತ್ತೆಗಳಿಗೆ ಜನ್ಮವಿತ್ತಳು. ಇದಿಷ್ಟು ತಾಮ್ರೆಯ ವಂಶವಿಸ್ತಾರ. ವಿನತೆಯ ಪುತ್ರರಾದ ಗರುಡ, ಅರುಣ—ಎಂಬವರು ಪ್ರಖ್ಯಾತರು (16-17). ಇವರಲ್ಲಿ ಸುಪರ್ಣನೆಂಬ ಗರುಡನು ಪಕ್ಷಿಶ್ರೇಷ್ಠನೂ ಭೀಕರನೂ ಸರ್ಪಭಕ್ಷಕನೂ ಆಗಿದ್ದಾನೆ. ಸುರಸೆಯಲ್ಲಿ ಮಹಾಪರಾಕ್ರಮಿಗಳಾದ ಸಾವಿರಾರು ಸರ್ಪಗಳು ಉದಿಸಿದವು (18). ಅವುಗಳಿಗೆ ಅನೇಕ ಶಿರಸ್ಸುಗಳಿದ್ದವು. ಗಗನಚಾರಿಗಳಾಗಿದ್ದವು. ಕದ್ರುವಿಗೂ ಬಲಶಾಲಿಗಳೂ ತೇಜಸ್ವಿಗಳೂ ಆದ ಸಾವಿರಾರು ಸರ್ಪಗಳು ಹುಟ್ಟಿದವು (19). ಮೈತ್ರೇಯ, ಅವರಿಗೂ ಅನೇಕ ಶಿರಸ್ಸುಗಳಿದ್ದು ಗರುಡನ ವಶವರ್ತಿಗಳಾಗಿದ್ದವು. ಅವರಲ್ಲಿ ಪ್ರಧಾನರು ಯಾರೆಂದರೆ: ಶೇಷ, ವಾಸುಕಿ, ತಕ್ಷಕ, ಶಂಖ, ಶ್ವೇತ, ಮಹಾಪದ್ಮ, ಕಂಬಲ, ಅಶ್ವತರ, ಏಲಾಪುತ್ರ, ನಾಗ, ಕರ್ಕೋಟಕ, ಧನಂಜಯ (20-21). ಇನ್ನೂ ಅನೇಕ ಸರ್ಪಗಳಿವೆ. ಎಲ್ಲವೂ ವಿಷೋಲ್ಬಣವಾದವು. ಕ್ರೋಧವಶೆಯ ಪುತ್ರಗಣವು ಕೋರೆ ದಾಡೆಯಿಂದ ಕೂಡಿದ್ದು. ಈ ಗಣಕ್ಕೆ ಸೇರಿದ ಸ್ಥಳ-ಜಲಚರಗಳಾದ

**ಏತೇ ಚಾನ್ಯೇ ಚ ಬಹವೋ ದಂದಶೂಕಾ ವಿಷೋಲ್ಬಣಾಃ।**
**ಗಣಂ ಕ್ರೌಧವಶಂ ವಿದ್ಧಿ ತಸ್ಯಾಃ ಸರ್ವೇ ಚ ದಂಷ್ಟ್ರಿಣಃ॥ 22**

**ಸ್ಥಲಜಾಃ ಪಕ್ಷಿಣೋಽಬ್ಜಾಶ್ಚ ದಾರುಣಾಃ ಪಿಶಿತಾಶನಾಃ।**
**ಕ್ರೋಧಾ ತು ಜನಯಾಮಾಸ ಪಿಶಾಚಾಂಶ್ಚ ಮಹಾಬಲಾನ್॥ 23**

**ಗಾಸ್ತು ವೈ ಜನಯಾಮಾಸ ಸುರಭಿರ್ಮಹಿಷಾಂಸ್ತಥಾ।**
**ಇರಾ ವೃಕ್ಷಲತಾವಲ್ಲೀಸ್ತೃಣಜಾತೀಶ್ಚ ಸರ್ವಶಃ॥ 24**

**ಖಸಾ ತು ಯಕ್ಷರಕ್ಷಾಂಸಿ ಮುನಿರಪ್ಸರಸಸ್ತಥಾ।**
**ಅರಿಷ್ಟಾ ತು ಮಹಾಸತ್ತ್ವಾನ್ ಗಂಧರ್ವಾನ್ ಸಮಜೀಜನತ್॥25**

**ಏತೇ ಕಶ್ಯಪದಾಯಾದಾಃ ಕೀರ್ತಿತಾಃ ಸ್ಥಾಣುಜಂಗಮಾಃ।**
**ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ॥ 26**

**ಏಷ ಮನ್ವಂತರೇ ಸರ್ಗೋ ಬ್ರಹ್ಮನ್ ಸ್ವಾರೋಚಿಷೇ ಸ್ಮೃತಃ।**
**ವೈವಸ್ವತೇ ಚ ಮಹತಿ ವಾರುಣೇ ವಿತತೇ ಕ್ರತೌ॥ 27**

---

ಪಕ್ಷಿಗಳು ಭೀಕರವಾದವು; ಮಾಂಸಾಹಾರಿಗಳು. ಕ್ರೋಧೆಯು ಬಲಶಾಲಿಗಳಾದ ಪಿಶಾಚಗಳನ್ನು ಹಡೆದಳು (22-23). ಸುರಭಿಯು ಗೋಮಹಿಷಗಳನ್ನೂ ಇರೆಯು ಮರ ಬಳ್ಳಿ ಪೊದೆ ನಾನಾ ಬಗೆಯ ಹುಲ್ಲುಗಳನ್ನೂ ಹಡೆದರು. ಖಸೆಯು ಯಕ್ಷರಕ್ಷೋಗಣಗಳನ್ನೂ ಮುನಿಯು ಅಪ್ಸರೆಯರನ್ನೂ ಅರಿಷ್ಟೆಯು ಗಂಧರ್ವರನ್ನೂ ಹಡೆದರು (24-25). ಕಶ್ಯಪನ ಪುತ್ರರಾದ ಸ್ಥಾವರಜಂಗಮಗಳನ್ನು ಹೇಳಿದ್ದಾಯಿತು. ಇವರ ಪುತ್ರಪೌತ್ರರು ಸಾವಿರಾರು ಸಂಖ್ಯೆಯಲ್ಲಿ ಬೆಳೆಯುತ್ತ ಹೋದರು (26). ಮೈತ್ರೇಯ, ಇದು ಸ್ವಾರೋಚಿಷಮನ್ವಂತರದಲ್ಲಿ ನಡೆದ ಸೃಷ್ಟಿ. (ಪ್ರಕೃತವಾದ) ವೈವಸ್ವತ ಮನ್ವಂತರದ ಆರಂಭದಲ್ಲಿ ವರುಣನು ಒಂದು ದೊಡ್ಡ ಯಾಗವನ್ನು ನಡೆಸಿದನು. ಅದರಲ್ಲಿ ಬ್ರಹ್ಮದೇವನು ಹೋತೃವಾಗಿದ್ದನು. ಆತನು ಸೃಷ್ಟಿ ಮಾಡಿದ ವಿಧಾನವನ್ನೀಗ ಹೇಳಲಾಗುವುದು. ಆತನಿಗೆ ಮೊದಲು ಏಳು

ಜುಹ್ವಾನಸ್ಯ ಬ್ರಹ್ಮಣೋ ವೈ ಪ್ರಜಾಸರ್ಗ ಇಹೋಚ್ಯತೇ।
ಪೂರ್ವಂ ಯತ್ರ ತು ಸಪ್ತರ್ಷೀನುತ್ಪನ್ನಾನ್ ಸಪ್ತಮಾನಸಾನ್॥ 28

ಪಿತೃತ್ವೇ ಕಲ್ಪಯಾಮಾಸ ಸ್ವಯಮೇವ ಪಿತಾಮಹಃ।
ಗಂಧರ್ವಭೋಗಿದೇವಾನಾಂ ದಾನವಾನಾಂ ಚ ಸತ್ತಮ॥ 29

ದಿತಿರ್ವಿನಷ್ಟಪುತ್ರಾ ವೈ ತೋಷಯಾಮಾಸ ಕಶ್ಯಪಮ್।
ತಯಾ ಚಾರಾಧಿತಃ ಸಮ್ಯಕ್ಕಶ್ಯಪಸ್ತಪತಾಂ ವರಃ॥ 30

ವರೇಣಚ್ಛಂದಯಾಮಾಸ ಸಾ ಚ ವವ್ರೇ ತತೋ ವರಮ್।
ಪುತ್ರಮಿಂದ್ರವಧಾರ್ಥಾಯ ಸಮರ್ಥಮಮಿತೌಜಸಮ್॥ 31

ಸ ಚ ತಸ್ಮೈ ವರಂ ಪ್ರಾದಾದ್ಭಾರ್ಯಾಯೈ ಮುನಿಸತ್ತಮಃ।
ದತ್ತ್ವಾ ಚ ವರಮತ್ಯುಗ್ರಂ ಕಶ್ಯಪಸ್ತಾಮುವಾಚ ಹ॥ 32

ಶಕ್ರಂ ಪುತ್ರೋ ನಿಹಂತಾ ತೇ ಯದಿ ಗರ್ಭಂ ಶರಚ್ಛತಮ್।
ಸಮಾಹಿತಾತಿಪ್ರಯತಾ ಶೌಚಿನೀ ಧಾರಯಿಷ್ಯಸಿ॥ 33

---

ಸಪ್ತರ್ಷಿಗಳು ಮಾನಸಪುತ್ರರಾಗಿ ಹುಟ್ಟಿದ್ದರಷ್ಟೆ (27-28). ಅವರು ಗಂಧರ್ವ ಸರ್ಪದೇವತೆಗಳಿಗೂ ದಾನವರಿಗೂ ಜನಕರಾಗಬೇಕೆಂದು ವ್ಯವಸ್ಥೆಮಾಡಿದನು. ತನ್ನ ಮಕ್ಕಳಾದ ದೈತ್ಯರು (ಇಂದ್ರನಿಂದ) ಹತರಾಗಲಾಗಿ, ದಿತಿಯು ಸೇವೆಮಾಡಿ ಕಶ್ಯಪನನ್ನು ಸಂತೋಷಪಡಿಸಿದಳು. ಸಂತೃಪ್ತನಾದ ಕಶ್ಯಪಮುನಿಯು ವರವನ್ನು ಕೇಳಿಕೊಳ್ಳುವಂತೆ ಹೇಳಿದನು (29-30). "ಇಂದ್ರನನ್ನು ವಧಿಸುವುದಕ್ಕೆ ಸಮರ್ಥನೂ ಮಹಾತೇಜಸ್ವಿಯೂ ಆದ ಪುತ್ರನು ನನಗೆ ಬೇಕು" ಎಂದು ಅವಳು ವರವನ್ನು ಕೇಳಿಕೊಂಡಳು. ಮುನಿಶ್ರೇಷ್ಠನಾದ ಕಶ್ಯಪನು ಅಂತೆಯೇ ಅವಳಿಗೆ ಅತ್ಯುಗ್ರವಾದ ಆ ವರವನ್ನೀಯುತ್ತ ಹೀಗೆಂದನು (31-32): "ನೀನು ಶುಚಿಯಾಗಿ ಅತ್ಯಂತ ಸಂಯಮಪೂರ್ವಕವಾಗಿ ಏಕಾಗ್ರಚಿತ್ತದಿಂದ ಭಗವಂತನನ್ನು ಧ್ಯಾನಿಸುತ್ತ ಒಂದು ನೂರು ವರ್ಷಗಳವರೆಗೆ ಗರ್ಭವನ್ನು ಧರಿಸುವುದಾದರೆ, ಇಂದ್ರನನ್ನು ಕೊಲ್ಲಲು ಸಮರ್ಥನಾದ ಪುತ್ರನು ನಿನಗೆ ಜನಿಸುವನು" (33). ಹೀಗೆ ನುಡಿದು ಕಶ್ಯಪಮುನಿಯು ಆ ದೇವಿಯೊಡನೆ

**ಇತ್ಯೇವಮುಕ್ತ್ವಾ ತಾಂ ದೇವೀಂ ಸಂಗತಃ ಕಶ್ಯಪೋ ಮುನಿಃ।**
**ದಧಾರ ಸಾ ಚ ತಂ ಗರ್ಭಂ ಸಮ್ಯಕ್ ಶೌಚಸಮನ್ವಿತಾ॥ 34**

**ಗರ್ಭಮಾತ್ಮವಧಾರ್ಥಾಯ ಜ್ಞಾತ್ವಾ ತಂ ಮಘವಾನಪಿ।**
**ಶುಶ್ರೂಷುಸ್ತಾಮಥಾಗಚ್ಛದ್ವಿನಯಾದಮರಾಧಿಪಃ॥ 35**

**ತಸ್ಯಾಶ್ಚೈವಾಂತರಪ್ರೇಪ್ಸುರತಿಷ್ಠತ್ ಪಾಕಶಾಸನಃ।**
**ಊನೇ ವರ್ಷಶತೇ ಚಾಸ್ಯಾ ದದರ್ಶಾಂತರಮಾತ್ಮನಾ॥ 36**

**ಅಕೃತ್ವಾ ಪಾದಯೋಃ ಶೌಚಂ ದಿತಿಃ ಶಯನಮಾವಿಶತ್।**
**ನಿದ್ರಾಂ ಚಾಹಾರಯಾಮಾಸ ತಸ್ಯಾಃ ಕುಕ್ಷಿಂ ಪ್ರವಿಶ್ಯ ಸಃ॥ 37**

**ವಜ್ರಪಾಣಿರ್ಮಹಾಗರ್ಭಂ ಚಿಚ್ಛೇದಾಥ ಸ ಸಪ್ತಧಾ।**
**ಸಂಪೀಡ್ಯಮಾನೋ ವಜ್ರೇಣ ಸ ರುರೋದಾತಿದಾರುಣಮ್॥ 38**

**ಮಾರೋದೀರಿತಿ ತಂ ಶಕ್ರಃ ಪುನಃ ಪುನರಭಾಷತ।**
**ಸೋಽಭವತ್ಸಪ್ತಧಾ ಗರ್ಭಸ್ತಮಿಂದ್ರಃ ಕುಪಿತಃ ಪುನಃ॥ 39**

---

ಸಂಗಮನಮಾಡಿದನು. ದಿತಿಯು ಗರ್ಭವನ್ನು ಧರಿಸಿ ಶೌಚನಿಯಮವನ್ನು ಪಾಲಿಸುತ್ತಿದ್ದಳು (34). ಅಮರಾಧಿಪನಾದ ಇಂದ್ರನಿಗೆ ಈ ಸಂಗತಿ ತಿಳಿಯಿತು. ತನ್ನ ವಧೆಗಾಗಿ ಈ ಗರ್ಭವು ಬೆಳೆಯುತ್ತಿದೆಯೆಂದರಿತು ಆತನು ದಿತಿಯನ್ನು ಶುಶ್ರೂಷೆ ಮಾಡುತ್ತಿರುವೆನೆಂದು ವಿನಯದಿಂದ ಬಂದು ಸೇರಿಕೊಂಡು, ಸಮಯಕ್ಕಾಗಿ ಹೊಂಚು ಹಾಕುತ್ತಿದ್ದನು. ನೂರು ವರ್ಷ ಕಳೆಯುವುದರೊಳಗಾಗಿ ಅವನಿಗೆ ಅಂತಹ ಸಮಯವೊಂದು ದೊರಕಿತು (35-36). ಒಂದು ದಿನ ದಿತಿಯು ಶೌಚವಿಧಿಯಂತೆ ಪಾದಗಳನ್ನು ತೊಳೆಯದೆ ಹಾಸಿಗೆಯಲ್ಲಿ ಪವಡಿಸಿ ನಿದ್ರೆಹೋದಳು! ಇದೇ ಸಮಯವೆಂದು ದೇವೇಂದ್ರನು ವಜ್ರಹಸ್ತನಾಗಿ ಅವಳ ಹೊಟ್ಟೆಯನ್ನು ಪ್ರವೇಶಿಸಿ ಗರ್ಭವನ್ನು ಏಳು ತುಂಡಾಗಿ ಕತ್ತರಿಸಿದನು. ವಜ್ರಾಯುಧದಿಂದ ಪೀಡಿತವಾದ ಗರ್ಭವು ಗಟ್ಟಿಯಾಗಿ ರೋದಿಸಿತು (37-38). ಇಂದ್ರನು 'ಮಾರೋದೀಃ = ಅಳಬೇಡ' ಎಂದು ಮತ್ತೆ ಮತ್ತೆ ಹೇಳುತ್ತಿರಲಾಗಿ ಗರ್ಭವು ಏಳು ತುಂಡಾಯಿತು. ಇಂದ್ರನು ಮತ್ತೂ ಕೋಪದಿಂದ ತನ್ನ

**ಏಕೈಕಂ ಸಪ್ತಧಾ ಚಕ್ರೇ ವಜ್ರೇಣಾರಿವಿದಾರಿಣಾ।**
**ಮರುತೋ ನಾಮ ದೇವಾಸ್ತೇ ಬಭೂವುರತಿವೇಗಿನಃ॥ 40**

**ಯದುಕ್ತಂ ವೈ ಭಗವತಾ ತೇನೈವ ಮರುತೋಽಭವನ್।**
**ದೇವಾ ಏಕೋನಪಂಚಾಶತ್ ಸಹಾಯಾ ವಜ್ರಪಾಣಿನಃ॥ 41**

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ಏಕವಿಂಶೋಽಧ್ಯಾಯಃ

---

ಅರಿಗಳನ್ನು ಕತ್ತರಿಸುವ ವಜ್ರಾಯುಧವನ್ನು ಬಳಸಿ ಗರ್ಭದ ಒಂದೊಂದು ತುಂಡನ್ನೂ ಪುನಃ ಏಳು ಚೂರುಗಳಾಗಿ ಕೊಚ್ಚಿದನು. ಅವರೇ ಮರುತ್ತುಗಳೆಂಬ ವೇಗಶಾಲಿಗಳಾದ ದೇವತೆಗಳಾದರು (39-40). ಭಗವಾನ್ ದೇವೇಂದ್ರನು 'ಮಾರುದಃ' ಎಂದು ಹೇಳಿದ್ದರಿಂದ ಆ ದೇವತೆಗಳು ಮಾರುತರೆಂದು ಹೆಸರನ್ನು ಪಡೆದರು. ಒಟ್ಟು ನಲವತ್ತೊಂಬತ್ತು ಮರುತ್ತುಗಳಾಗಿ ಅವರು ದೇವೇಂದ್ರನಿಗೆ ಸಹಾಯಕರಾಗಿದ್ದಾರೆ (41).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.



## ದ್ವಾವಿಂಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಯದಾಭಿಷಿಕ್ತಃ ಸ ಪೃಥುಃ ಪೂರ್ವಂ ರಾಜ್ಯೇ ಮಹರ್ಷಿಭಿಃ।**
**ತತಃ ಕ್ರಮೇಣ ರಾಜ್ಯಾನಿ ದದೌ ಲೋಕಪಿತಾಮಹಃ॥** 1

**ನಕ್ಷತ್ರಗ್ರಹವಿಪ್ರಾಣಾಂ ವೀರುಧಾಂ ಚಾಪ್ಯಶೇಷತಃ।**
**ಸೋಮಂ ರಾಜ್ಯೇ ದಧದ್‌ಬ್ರಹ್ಮಾ ಯಜ್ಞಾನಾಂ ತಪಸಾಮಪಿ॥** 2

**ರಾಜ್ಞಾಂ ವೈಶ್ರವಣಂ ರಾಜ್ಯೇ ಜಲಾನಾಂ ವರುಣಂ ತಥಾ।**
**ಆದಿತ್ಯಾನಾಂ ಪತಿಂ ವಿಷ್ಣುಂ ವಸೂನಾಮಥ ಪಾವಕಮ್॥** 3

**ಪ್ರಜಾಪತೀನಾಂ ದಕ್ಷಂ ತು ವಾಸವಂ ಮರುತಾಮಪಿ।**
**ದೈತ್ಯಾನಾಂ ದಾನವಾನಾಂ ಚ ಪ್ರಹ್ಲಾದಮಧಿಪಂ ದದೌ॥** 4

---

## ಅಧ್ಯಾಯ 22

ಬ್ರಹ್ಮನು ಚಂದ್ರಕುಬೇರಾದಿಗಳಿಗೆ ಬೇರೆಬೇರೆ ಆಧಿಪತ್ಯವನ್ನು ವಹಿಸಿಕೊಡುವುದು. ವಿಷ್ಣುವಿನ ಮಹಿಮೆ. ಪರಮತತ್ತ್ವದ ನಿರೂಪಣೆ.

ಪರಾಶರರು ಹೇಳಿದರು: ಮೈತ್ರೇಯ, ಹಿಂದೆ ಮಹರ್ಷಿಗಳು ಪೃಥು ರಾಜನಿಗೆ ಪಟ್ಟಾಭಿಷೇಕ ಮಾಡಲಾಗಿ, ಬ್ರಹ್ಮದೇವನು ಆಧಿಪತ್ಯಗಳನ್ನು ಬೇರೆಬೇರೆಯವರಿಗೆ ವಹಿಸಿಕೊಟ್ಟನು (1). ನಕ್ಷತ್ರ, ಗ್ರಹ, ಬ್ರಾಹ್ಮಣ, ಎಲ್ಲ ಬಗೆಯ ಓಷಧಿಗಳು, ಯಜ್ಞ, ತಪಸ್ಸು—ಇವುಗಳಿಗೆ ಸೋಮನನ್ನು ರಾಜ್ಯಾಧಿಪತಿಯನ್ನಾಗಿ ನೇಮಿಸಿದನು. ರಾಜರಿಗೆ ಕುಬೇರನನ್ನೂ ಜಲಗಳಿಗೆ ವರುಣನನ್ನೂ ಆದಿತ್ಯರಿಗೆ ವಿಷ್ಣುವನ್ನೂ ವಸುಗಳಿಗೆ ಅಗ್ನಿಯನ್ನೂ ಅಧಿಪತಿಗಳನ್ನಾಗಿ ಗೊತ್ತುಮಾಡಿದನು (2-3). ಪ್ರಜಾಪತಿಗಳಿಗೆ ದಕ್ಷನೂ ಮರುತ್ತುಗಳಿಗೆ ಇಂದ್ರನೂ ದೈತ್ಯದಾನವರಿಗೆ ಪ್ರಹ್ಲಾದನೂ ಅಧಿಪತಿಗಳೆಂದು ನಿಯಮಿಸಿದನು. ಧರ್ಮರಾಜನಾದ ಯಮನನ್ನು ಪಿತೃಗಳ ರಾಜ್ಯದಲ್ಲಿ

ಪಿತೄಣಾಂ ಧರ್ಮರಾಜಂ ತಂ ಯಮಂ ರಾಜ್ಯೇಽಭ್ಯಷೇಚಯತ್ ।
ಐರಾವತಂ ಗಜೇಂದ್ರಾಣಾಮಶೇಷಾಣಾಂ ಪತಿಂ ದದೌ ॥ 5

ಪತತ್ರಿಣಾಂ ತು ಗರುಡಂ ದೇವಾನಾಮಪಿ ವಾಸವಮ್ ।
ಉಚ್ಚೈಃಶ್ರವಸಮಶ್ವಾನಾಂ ವೃಷಭಂ ತು ಗವಾಮಪಿ ॥ 6

ಮೃಗಾಣಾಂ ಚೈವ ಸರ್ವೇಷಾಂ ರಾಜ್ಯೇ ಸಿಂಹಂ ದದೌ ಪ್ರಭುಃ ।
ಶೇಷಂ ತು ದಂದಶೂಕಾನಾಮಕರೋತ್ಪತಿಮವ್ಯಯಃ ॥ 7

ಹಿಮಾಲಯಂ ಸ್ಥಾವರಾಣಾಂ ಮುನೀನಾಂ ಕಪಿಲಂ ಮುನಿಮ್ ।
ನಖಿನಾಂ ದಂಷ್ಟ್ರಿಣಾಂ ಚೈವ ಮೃಗಾಣಾಂ ವ್ಯಾಘ್ರಮೀಶ್ವರಮ್ ॥ 8

ವನಸ್ಪತೀನಾಂ ರಾಜಾನಂ ಪ್ಲಕ್ಷಮೇವಾಭ್ಯಷೇಚಯತ್ ।
ಏವಮೇವಾನ್ಯಜಾತೀನಾಂ ಪ್ರಾಧಾನ್ಯೇನಾಕರೋತ್ ಪ್ರಭೂನ್ ॥ 9

ಏವಂ ವಿಭಜ್ಯ ರಾಜ್ಯಾನಿ ದಿಶಾಂ ಪಾಲಾನನಂತರಮ್ ।
ಪ್ರಜಾಪತಿಪತಿರ್ಬ್ರಹ್ಮಾ ಸ್ಥಾಪಯಾಮಾಸ ಸರ್ವತಃ ॥ 10

---

ಅಭಿಷೇಕ ಮಾಡಿದನು. ಹಾಗೆಯೇ ಬ್ರಹ್ಮನು ಎಲ್ಲ ಆನೆಗಳ ಒಡೆತನವನ್ನು ಐರಾವತಕ್ಕೆ ವಹಿಸಿಕೊಟ್ಟನು (4-5). ಹಕ್ಕಿಗಳಿಗೆ ಗರುಡನನ್ನೂ ದೇವತೆಗಳಿಗೆ ಇಂದ್ರನನ್ನೂ ಕುದುರೆಗಳಿಗೆ ಉಚ್ಚೈಃಶ್ರವಸ್ಸನ್ನೂ ಹಸುಗಳಿಗೆ ವೃಷಭವನ್ನೂ ಎಲ್ಲ ಮೃಗಗಳ ರಾಜ್ಯದಲ್ಲಿ ಸಿಂಹವನ್ನೂ ಅಧಿಪತಿಗಳನ್ನಾಗಿ ಮಾಡಿದನು. ಸರ್ಪಗಳಿಗೆ ಶೇಷನು ಒಡೆಯನೆಂದು ನಿಯಮಿಸಿದನು (6-7). ಸ್ಥಾವರಗಳಿಗೆ ಹಿಮಾಲಯ, ಮುನಿಗಳಿಗೆ ಕಪಿಲಮುನಿ, ಉಗುರು ಕೋರೆಹಲ್ಲುಗಳಿರುವ ಮೃಗಗಳಿಗೆ ಹುಲಿ, ವೃಕ್ಷಗಳಿಗೆ ಪ್ಲಕ್ಷ*—ಇವರನ್ನೂ ರಾಜರೆಂದು ರಾಜ್ಯಾಭಿಷೇಕ ಮಾಡಿದನು. ಹೀಗೆಯೇ ಇನ್ನೂ ಉಳಿದವುಗಳಿಗೆ ಆಯಾ ವರ್ಗದಲ್ಲಿ ಮುಖ್ಯರಾದವರನ್ನು ಬ್ರಹ್ಮನು ರಾಜರನ್ನಾಗಿ ಮಾಡಿದನು (8-9). ಪ್ರಜಾಪತಿಗಳಿಗೆ ಅಧೀಶ್ವರನಾದ ಬ್ರಹ್ಮನು ಈ ರೀತಿಯಲ್ಲಿ ರಾಜ್ಯಗಳನ್ನು ವಿಭಾಗಿಸಿಕೊಟ್ಟು ಅನಂತರ ಸುತ್ತಲೂ ದಿಕ್ಪತಿ

* ಪ್ಲಕ್ಷ = ಬಸರೀಮರ. ಗೋಣೀಮರವೆಂದೂ ಅಶ್ವತ್ಥವೆಂದೂ ಅರ್ಥ ಹೇಳುತ್ತಾರೆ.

**ಪೂರ್ವಸ್ಯಾಂ ದಿಶಿ ರಾಜಾನಂ ವೈರಾಜಸ್ಯ ಪ್ರಜಾಪತೇಃ।**
**ದಿಶಾಪಾಲಂ ಸುಧನ್ವಾನಂ ಸುತಂ ವೈ ಸೋಽಭ್ಯಷೇಚಯತ್॥ 11**

**ದಕ್ಷಿಣಸ್ಯಾಂ ದಿಶಿ ತಥಾ ಕರ್ದಮಸ್ಯ ಪ್ರಜಾಪತೇಃ।**
**ಪುತ್ರಂ ಶಂಖಪದಂ ನಾಮ ರಾಜಾನಂ ಸೋಽಭ್ಯಷೇಚಯತ್॥ 12**

**ಪಶ್ಚಿಮಸ್ಯಾಂ ದಿಶಿ ತಥಾ ರಜಸಃ ಪುತ್ರಮಚ್ಯುತಮ್।**
**ಕೇತುಮಂತಂ ಮಹಾತ್ಮಾನಂ ರಾಜಾನಂ ಸೋಽಭ್ಯಷೇಚಯತ್॥ 13**

**ತಥಾ ಹಿರಣ್ಯರೋಮಾಣಂ ಪರ್ಜನ್ಯಸ್ಯ ಪ್ರಜಾಪತೇಃ।**
**ಉದೀಚ್ಯಾಂ ದಿಶಿ ದುರ್ಧರ್ಷಂ ರಾಜಾನಮಭ್ಯಷೇಚಯತ್॥ 14**

**ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪತ್ತನಾ।**
**ಯಥಾ ಪ್ರದೇಶಮದ್ಯಾಪಿ ಧರ್ಮತಃ ಪರಿಪಾಲ್ಯತೇ॥ 15**

**ಏತೇ ಸರ್ವೇ ಪ್ರವೃತ್ತಸ್ಯ ಸ್ಥಿತೌ ವಿಷ್ಣೋರ್ಮಹಾತ್ಮನಃ।**
**ವಿಭೂತಿಭೂತಾ ರಾಜಾನೋ ಯೇ ಚಾನ್ಯೇ ಮುನಿಸತ್ತಮ॥ 16**

---

ಗಳನ್ನು ಸ್ಥಾಪಿಸಿದನು. ಪೂರ್ವದಿಕ್ಕಿನಲ್ಲಿ ವೈರಾಜಪ್ರಜಾಪತಿಯ ಪುತ್ರನಾದ ಸುಧನ್ವರಾಜನನ್ನು ದಿಕ್ಪಾಲಕನನ್ನಾಗಿ ಅಭಿಷೇಕ ಮಾಡಿದನು (10-11). ದಕ್ಷಿಣದಿಕ್ಕಿನಲ್ಲಿ ಕರ್ದಮಪ್ರಜಾಪತಿಯ ಪುತ್ರನಾದ ಶಂಕಪದ ಎಂಬವನನ್ನು ರಾಜನನ್ನಾಗಿ ಅಭಿಷೇಕ ಮಾಡಿದನು. ಆ ಬ್ರಹ್ಮನು ಪಶ್ಚಿಮದಿಕ್ಕಿನಲ್ಲಿ ರಜಸ್ಸಿನ ಪುತ್ರನೂ ಚ್ಯುತಿಯಿಲ್ಲದವನೂ ಆದ ಕೇತುಮಂತನೆಂಬ ಮಹಾತ್ಮನಿಗೆ ಪಟ್ಟಾಭಿಷೇಕ ಮಾಡಿದನು (12-13). ಉತ್ತರದಿಕ್ಕಿನಲ್ಲಿ ಪರ್ಜನ್ಯ ಪ್ರಜಾಪತಿಯ ಪುತ್ರನೂ ಮಹಾವೀರನೂ ಆದ ಹಿರಣ್ಯರೋಮನಿಗೆ ರಾಜನೆಂದು ಅಭಿಷೇಕ ಮಾಡಿದನು. ನಗರಗಳಿಂದಲೂ ಸಪ್ತದ್ವೀಪಗಳಿಂದಲೂ ಯುಕ್ತವಾದ ಈ ಸಮಸ್ತ ಪೃಥ್ವಿಯನ್ನು ಈಗಲೂ ಈ ನಾಲ್ವರು ತಮ್ಮ ವಿಭಾಗಾನುಸಾರವಾಗಿ ಪಾಲಿಸುತ್ತಿದ್ದಾರೆ (14-15). ಮೈತ್ರೇಯ, ಈ ರಾಜರೂ ಮತ್ತು ಅನ್ಯರಾಜರೂ ಸಹ ಲೋಕರಕ್ಷಣೆಗೆ ಪ್ರವೃತ್ತನಾದ ಮಹಾತ್ಮ ವಿಷ್ಣುವಿನ ನಾನಾ ವಿಭೂತಿಗಳು. ಯಾವ ಯಾವ ರಾಜರು ಮುಂದೆ ಆಗುವವರೋ, ಹಿಂದೆ ಆಗಿಹೋದರೋ ಅವರೆಲ್ಲರೂ ಸರ್ವ

**ಯೇ ಭವಿಷ್ಯಂತಿ ಯೇ ಭೂತಾಃ ಸರ್ವೇ ಭೂತೇಶ್ವರಾ ದ್ವಿಜ।**
**ತೇ ಸರ್ವೇ ಸರ್ವಭೂತಸ್ಯ ವಿಷ್ಣೋರಂಶಾ ದ್ವಿಜೋತ್ತಮ॥ 17**

**ಯೇ ತು ದೇವಾಧಿಪತಯೋ ಯೇ ಚ ದೈತ್ಯಾಧಿಪಾಸ್ತಥಾ।**
**ದಾನವಾನಾಂ ಚ ಯೇ ನಾಥಾ ಯೇ ನಾಥಾಃ ಪಿಶಿತಾಶಿನಾಮ್॥**

**ಪಶೂನಾಂ ಯೇ ಚ ಪತಯಃ ಪತಯೋ ಯೇ ಚ ಪಕ್ಷಿಣಾಮ್।**
**ಮನುಷ್ಯಾಣಾಂ ಚ ಸರ್ಪಾಣಾಂ ನಾಗಾನಾಮಧಿಪಾಶ್ಚ ಯೇ॥ 19**

**ವೃಕ್ಷಾಣಾಂ ಪರ್ವತಾನಾಂ ಚ ಗ್ರಹಾಣಾಂ ಚಾಪಿ ಯೇಽಧಿಪಾಃ।**
**ಅತೀತಾ ವರ್ತಮಾನಾಶ್ಚ ಯೇ ಭವಿಷ್ಯಂತಿ ಚಾಪರೇ।**
**ತೇ ಸರ್ವೇ ಸರ್ವಭೂತಸ್ಯ ವಿಷ್ಣೋರಂಶಸಮುದ್ಭವಾಃ॥ 20**

**ನ ಹಿ ಪಾಲನಸಾಮರ್ಥ್ಯಮೃತೇ ಸರ್ವೇಶ್ವರಂ ಹರಿಮ್।**
**ಸ್ಥಿರಂ ಸ್ಥಿತೌ ಮಹಾಪ್ರಾಜ್ಞ ಭವತ್ಯನ್ಯಸ್ಯ ಕಸ್ಯಚಿತ್॥ 21**

**ಸೃಜತ್ಯೇಷ ಜಗತ್ಸೃಷ್ಟೌ ಸ್ಥಿತೌ ಪಾತಿ ಸನಾತನಃ।**
**ಹಂತಿ ಚೈವಾಂತಕತ್ವೇನ ರಜಃಸತ್ತ್ವಾದಿ ಸಂಶ್ರಯಃ॥ 22**

---

ಭೂತಾತ್ಮನಾದ ವಿಷ್ಣುವಿನ ಅಂಶಗಳು (16-17). ಮತ್ತು ದೇವತೆಗಳ, ದೈತ್ಯರ, ದಾನವರ, ಮಾಂಸಭೋಜಿಗಳಾದ ಪಿಶಾಚಗಳ ಅಧಿಪತಿಗಳು ಯಾರಿದ್ದಾರೋ, ಪಶು-ಪಕ್ಷಿ-ಮನುಷ್ಯ-ಸರ್ಪ-ನಾಗರ ಅಧಿಪತಿಗಳು ಯಾರಿದ್ದಾರೋ, ವೃಕ್ಷ-ಪರ್ವತ-ಗ್ರಹಗಳ ಅಧಿಪತಿಗಳು ಯಾರಿದ್ದಾರೋ, ಅತೀತರಾಗಿರಲಿ ವಿದ್ಯಮಾನರಾಗಿರಲಿ ಅಥವಾ ಮುಂದೆ ಬರತಕ್ಕವ ರಾಗಿರಲಿ, ಅವರೆಲ್ಲರೂ ಸರ್ವಭೂತಾತ್ಮನಾದ ವಿಷ್ಣುವಿನ ಅಂಶದಿಂದ ಹುಟ್ಟಿದವರು (18-20). ಮೈತ್ರೇಯ, ಸರ್ವೇಶ್ವರನಾದ ಶ್ರೀಹರಿಯ ಹೊರತಾಗಿ ಸ್ಥಿರವಾದ ಪಾಲನ ಸಾಮರ್ಥ್ಯವು ಇನ್ನೊಬ್ಬನಿಗೆ ಇಲ್ಲವಷ್ಟೆ (21). ಸನಾತನನಾದ ಶ್ರೀಹರಿಯು ಸತ್ತ್ವರಜಸ್ತಮೋಗುಣಗಳಿಂದ ಸಹಿತನಾಗಿ ಸೃಷ್ಟಿಕಾಲದಲ್ಲಿ ಜಗತ್ತನ್ನು ಸೃಜಿಸುತ್ತಾನೆ; ಸ್ಥಿತಿಕಾಲದಲ್ಲಿ ಪಾಲಿಸುತ್ತಾನೆ; ಕಡೆಯಲ್ಲಿ ಅಂತಕನಾಗಿ ನಾಶಮಾಡುತ್ತಾನೆ (22). ಜನಾರ್ದನನು ಸೃಷ್ಟಿಮಾಡುವಾಗ ನಾಲ್ಕು ವಿಭಾಗವಾಗುತ್ತಾನೆ; ಸ್ಥಿತಿಕಾಲ

ಚತುರ್ವಿಭಾಗಃ ಸಂಸೃಷ್ಟೌ ಚತುರ್ಧಾ ಸಂಸ್ಥಿತಃ ಸ್ಥಿತೌ।
ಪ್ರಲಯಂ ಚ ಕರೋತ್ಯಂತೇ ಚತುರ್ಭೇದೋ ಜನಾರ್ದನಃ॥ 23

ಏಕೇನಾಂಶೇನ ಬ್ರಹ್ಮಾಸೌ ಭವತ್ಯವ್ಯಕ್ತಮೂರ್ತಿಮಾನ್।
ಮರೀಚಿಮಿಶ್ರಾಃ ಪತಯಃ ಪ್ರಜಾನಾಂ ಚಾನ್ಯಭಾಗಶಃ॥ 24

ಕಾಲಸ್ತೃತೀಯಸ್ತಸ್ಯಾಂಶಃ ಸರ್ವಭೂತಾನಿ ಚಾಪರಃ।
ಇತ್ಥಂ ಚತುರ್ಧಾ ಸಂಸೃಷ್ಟೌ ವರ್ತತೇಽಸೌ ರಜೋಗುಣಃ॥ 25

ಏಕಾಂಶೇನಾಸ್ಥಿತೋ ವಿಷ್ಣುಃ ಕರೋತಿ ಪ್ರತಿಪಾಲನಮ್।
ಮನ್ವಾದಿರೂಪಾಶ್ಚಾನ್ಯೇನ ಕಾಲರೂಪೋಽಪರೇಣ ಚ॥ 26

ಸರ್ವಭೂತೇಷು ಚಾನ್ಯೇನ ಸಂಸ್ಥಿತಃ ಕುರುತೇ ಸ್ಥಿತಿಮ್।
ಸತ್ತ್ವಂ ಗುಣಂ ಸಮಾಶ್ರಿತ್ಯ ಜಗತಃ ಪುರುಷೋತ್ತಮಃ॥ 27

ಆಶ್ರಿತ್ಯ ತಮಸೋ ವೃತ್ತಿಮಂತಕಾಲೇ ತಥಾ ಪುನಃ।
ರುದ್ರಸ್ವರೂಪೋ ಭಗವಾನೇಕಾಂಶೇನ ಭವತ್ಯಜಃ॥ 28

---

ದಲ್ಲಿ ನಾಲ್ಕು ಪ್ರಕಾರವಾಗುತ್ತಾನೆ; ಮತ್ತೆ ಅಂತಕಾಲದಲ್ಲಿ ನಾಲ್ಕು ರೂಪಗಳಲ್ಲಿದ್ದು ಲಯಮಾಡುತ್ತಾನೆ (23). ಅವ್ಯಕ್ತನಾಗಿರುವ ಈತನು ಒಂದು ಅಂಶದಿಂದ ಬ್ರಹ್ಮನಾಗುತ್ತಾನೆ. ಇನ್ನೊಂದು ಅಂಶದಿಂದ ಮರೀಚಿ ಮೊದಲಾದ ಪ್ರಜಾಪತಿಗಳಾಗುತ್ತಾನೆ. ಆತನ ಮತ್ತೊಂದು ಅಂಶವು ಕಾಲವಾಗುತ್ತದೆ. ಮಗದೊಂದು ಅಂಶವು ಸ್ಥಾವರಜಂಗಮಭೂತಗಳಾಗುತ್ತದೆ. ಈ ರೀತಿ ಸೃಷ್ಟಿಮಾಡುವಾಗ ರಜೋಗುಣವನ್ನು ಧರಿಸಿ ನಾಲ್ಕು ವಿಭಾಗವಾಗುತ್ತಾನೆ (24-25). ಈ ಪುರುಷೋತ್ತಮನು ಸತ್ತ್ವಗುಣವನ್ನಾಶ್ರಯಿಸಿ ಜಗತ್ತಿನ ಸ್ಥಿತಿಕಾರ್ಯವನ್ನು ನಡೆಸುತ್ತಾನೆ. ಆಗ ಒಂದು ಅಂಶದಿಂದ ವಿಷ್ಣುವಾಗಿ ಪಾಲಿಸುತ್ತಾನೆ. ಇನ್ನೊಂದು ಅಂಶದಿಂದ ಮನು ಮುಂತಾದ ಪ್ರಜಾಪತಿಗಳಾಗುತ್ತಾನೆ. ಮತ್ತೊಂದು ಅಂಶದಿಂದ ಕಾಲದ ಸ್ವರೂಪನಾಗಿ, ಮಗದೊಂದು ಅಂಶದಿಂದ ಸಕಲಭೂತಗಳಲ್ಲಿಯೂ ಇದ್ದು ಪಾಲನೆ ಮಾಡುತ್ತಾನೆ (26-27). ಪುನಃ ಪ್ರಳಯಕಾಲದಲ್ಲಿ ತಮೋಗುಣವನ್ನಾಶ್ರಯಿಸಿ ಒಂದಂಶದಿಂದ ಈ ಭಗವಂತನೇ ರುದ್ರನಾಗುತ್ತಾನೆ. ಇನ್ನೊಂದು

**ಅಗ್ನ್ಯಂತಕಾದಿರೂಪೇಣ ಭಾಗೇನಾನ್ಯೇನ ವರ್ತತೇ।**
**ಕಾಲಸ್ವರೂಪೋ ಭಾಗೋ ಯಸ್ಸರ್ವಭೂತಾನಿ ಚಾಪರಃ॥ 29**

**ವಿನಾಶಂ ಕುರ್ವತಸ್ತಸ್ಯ ಚತುರ್ಧೈವಂ ಮಹಾತ್ಮನಃ।**
**ವಿಭಾಗಕಲ್ಪನಾ ಬ್ರಹ್ಮನ್ ಕಥ್ಯತೇ ಸಾರ್ವಕಾಲಿಕೀ॥ 30**

**ಬ್ರಹ್ಮಾ ದಕ್ಷಾದಯಃ ಕಾಲಸ್ತಥೈವಾಖಿಲಜಂತವಃ।**
**ವಿಭೂತಯೋ ಹರೇರೇತಾ ಜಗತಃ ಸೃಷ್ಟಿಹೇತವಃ॥ 31**

**ವಿಷ್ಣುರ್ಮನ್ವಾದಯಃ ಕಾಲಃ ಸರ್ವಭೂತಾನಿ ಚ ದ್ವಿಜ।**
**ಸ್ಥಿತೇರ್ನಿಮಿತ್ತಭೂತಸ್ಯ ವಿಷ್ಣೋರೇತಾ ವಿಭೂತಯಃ॥ 32**

**ರುದ್ರಃ ಕಾಲಾಂತಕಾದ್ಯಾಶ್ಚ ಸಮಸ್ತಾಶ್ಚೈವ ಜಂತವಃ।**
**ಚತುರ್ಧಾ ಪ್ರಲಯಾಯೈತಾ ಜನಾರ್ದನವಿಭೂತಯಃ॥ 33**

---

ಅಂಶದಿಂದ ಅಗ್ನಿ, ಯಮ—ಮೊದಲಾದ ರೂಪವನ್ನು ಧರಿಸುತ್ತಾನೆ. ಮತ್ತೊಂದು ಅಂಶದಿಂದ ಕಾಲದ ಸ್ವರೂಪನಾಗಿ ಮಗದೊಂದು ಅಂಶದಿಂದ ಸಕಲಭೂತ* ಸ್ವರೂಪನಾಗುತ್ತಾನೆ (28-29). ಲಯವನ್ನು ಮಾಡತಕ್ಕ ಈ ಮಹಾತ್ಮನಿಗೆ ಈ ಪ್ರಕಾರವಾಗಿ ಶಾಶ್ವತವಾದ ನಾಲ್ಕು ವಿಭಾಗ ಕಲ್ಪನೆಗಳುಂಟು. ಬ್ರಹ್ಮ, ದಕ್ಷಾದಿಗಳು, ಕಾಲ, ಸಕಲಜಂತುಗಳು —ಇವು ಸೃಷ್ಟಿಗೆ ಕಾರಣಗಳಾದ ವಿಷ್ಣುವಿನ ವಿಭೂತಿಗಳು (30-31). ವಿಷ್ಣು, ಮನ್ವಾದಿಗಳು, ಕಾಲ, ಸಕಲಜಂತುಗಳು—ಇವು ಸ್ಥಿತಿಗೆ ಕಾರಣ ಗಳಾದ ವಿಷ್ಣುವಿನ ವಿಭೂತಿಗಳು. ರುದ್ರ, ಕಾಲ, ಯಮಾದಿಗಳು, ಸಕಲ ಜಂತುಗಳು—ಇವು ಪ್ರಳಯಕ್ಕೆ ಕಾರಣಗಳಾದ ಜನಾರ್ದನನ ವಿಭೂತಿ ಗಳು (32-33). ಮೈತ್ರೇಯ, ಜಗತ್ತಿನ ಆದಿಯಲ್ಲಿ, ಪ್ರಳಯವಾಗುವ ವರೆಗೆ ಮಧ್ಯದಲ್ಲಿ, ಸೃಷ್ಟಿಕಾರ್ಯ ನಡೆದಿರುತ್ತದೆ. ಬ್ರಹ್ಮ, ಮರೀಚಿ

---

* ಸಕಲಭೂತಗಳೂ ಭಗವಂತನ ಒಂದು ಅಂಶ-ರೂಪಾಂತರ. ಅವುಗಳಿಗೇ ಸೃಷ್ಟಿ ಸ್ಥಿತಿಲಯಗಳು ನಡೆಯುತ್ತವೆ. ತನ್ನನ್ನೇ ಸೃಜಿಸಿ, ತನ್ನನ್ನೇ ರಕ್ಷಿಸಿ, ತನ್ನನ್ನೇ ಸಂಹರಿಸಿಕೊಳ್ಳುತ್ತಾನೆ ಎಂದು ತಾತ್ಪರ್ಯ.

**ಜಗದಾದೌ ತಥಾ ಮಧ್ಯೇ ಸೃಷ್ಟಿರಾಪ್ರಲಯಾದ್ ದ್ವಿಜ।**
**ಧಾತ್ರಾ ಮರೀಚಿಮಿಶ್ರೈಶ್ಚ ಕ್ರಿಯತೇ ಜಂತುಭಿಸ್ತಥಾ॥ 34**

**ಬ್ರಹ್ಮಾ ಸೃಜತ್ಯಾದಿಕಾಲೇ ಮರೀಚಿಪ್ರಮುಖಾಸ್ತತಃ।**
**ಉತ್ಪಾದಯಂತ್ಯಪತ್ಯಾನಿ ಜಂತವಶ್ಚ ಪ್ರತಿಕ್ಷಣಮ್॥ 35**

**ಕಾಲೇನ ನ ವಿನಾ ಬ್ರಹ್ಮಾ ಸೃಷ್ಟಿನಿಷ್ಪಾದಕೋ ದ್ವಿಜ।**
**ನ ಪ್ರಜಾಪತಯಃ ಸರ್ವೇ ನ ಚೈವಾಖಿಲಜಂತವಃ॥ 36**

**ಏವಮೇವ ವಿಭಾಗೋಽಯಂ ಸ್ಥಿತಾವಪ್ಯುಪದಿಶ್ಯತೇ।**
**ಚತುರ್ಧಾ ತಸ್ಯ ದೇವಸ್ಯ ಮೈತ್ರೇಯ ಪ್ರಲಯೇ ತಥಾ॥ 37**

**ಯತ್ಕಿಂಚಿತ್ ಸೃಜತೇ ಯೇನ ಸತ್ತ್ವಜಾತೇನ ವೈ ದ್ವಿಜ।**
**ತಸ್ಯ ಸೃಜ್ಯಸ್ಯ ಸಂಭೂತೌ ತತ್ಸರ್ವಂ ವೈ ಹರೇಸ್ತನುಃ॥ 38**

**ಹಂತಿ ಯಾವಚ್ಚ ಯತ್ಕಿಂಚಿತ್ ಸತ್ತ್ವಂ ಸ್ಥಾವರಜಂಗಮಮ್।**
**ಜನಾರ್ದನಸ್ಯ ತದ್ರೌದ್ರಂ ಮೈತ್ರೇಯಾಂತಕರಂ ವಪುಃ॥ 39**

---

ಮೊದಲಾದವರು ಮತ್ತು ಪ್ರಾಣಿಗಳು ಸೃಷ್ಟಿಯನ್ನು ನಡೆಸತಕ್ಕವರು (34). ಆದಿಯಲ್ಲಿ ಬ್ರಹ್ಮನೂ ಅನಂತರ ಮರೀಚಿ ಮೊದಲಾದ ಪ್ರಜಾಪತಿಗಳೂ ಸೃಷ್ಟಿಕಾರ್ಯವನ್ನು ನಡೆಸುತ್ತಾರೆ. ಆಮೇಲೆ ಜೀವಿಗಳು ಸಂತತಿಯನ್ನು ಉತ್ಪಾದಿಸುತ್ತ ಹೋಗುತ್ತಾರೆ (35). ಇದಕ್ಕೆ ಕಾಲವು ಸಹಕಾರಿ. ಕಾಲವಿಲ್ಲದೆ ಬ್ರಹ್ಮನಾಗಲಿ ಪ್ರಜಾಪತಿಗಳಾಗಲಿ ಸಕಲ ಜೀವಿಗಳಾಗಲಿ ಸೃಷ್ಟಿಕಾರ್ಯವನ್ನು ನಡೆಸಲಾರರು. ಇದೇ ಪ್ರಕಾರ, ಮೈತ್ರೇಯ, ಸ್ಥಿತಿ ಮತ್ತು ಪ್ರಳಯಗಳಲ್ಲಿಯೂ ಆ ದೇವದೇವನ ನಾಲ್ಕು ಭಾಗಗಳು ವ್ಯವಸ್ಥಿತವಾಗಿ ಪಾಲುಗೊಳ್ಳುತ್ತವೆ (36-37). ಯಾವ ಜೀವಿಯಿಂದ ಯಾವುದೇ ಸೃಜಿಸಲ್ಪಡಲಿ, ಸೃಜ್ಯವಾದ ಆ ಜೀವಿಯ ಉತ್ಪತ್ತಿಗೆ ಕಾರಣವಾದದ್ದೆಲ್ಲವೂ ಶ್ರೀಹರಿಯ ಅಂಶವೇ ಆಗಿರುತ್ತದೆ (38). ಸ್ಥಾವರಜಂಗಮಾತ್ಮಕವಾದ ವಸ್ತುವಿನಲ್ಲಿ ಯಾವುದನ್ನು ಯಾವಾತನೇ ನಾಶಪಡಿಸಲಿ, ಅದೆಲ್ಲವೂ ಜನಾರ್ದನನ ಲಯಕಾರಿಯಾದ ರೌದ್ರಾಂಶ (39). ಇದೇ ರೀತಿ ಜನಾರ್ದನನು ಜಗತ್ತಿನ ಸೃಷ್ಟಿಕರ್ತನಾಗಿ, ಪಾಲಕನಾಗಿ, ಎಲ್ಲವನ್ನೂ ನಾಶ

**ಏವಮೇವ ಜಗತ್ಸ್ರಷ್ಟಾ ಜಗತ್ಪಾತಾ ತಥಾ ಜಗತ್।**
**ಜಗದ್ಭಕ್ಷಯಿತಾ ದೇವಃ ಸಮಸ್ತಸ್ಯ ಜನಾರ್ದನಃ॥** 40

**ಸೃಷ್ಟಿಸ್ಥಿತ್ಯಂತಕಾಲೇಷು ತ್ರಿಧೈವಂ ಸಂಪ್ರವರ್ತತೇ।**
**ಗುಣಪ್ರವೃತ್ತ್ಯಾ ಪರಮಂ ಪದಂ ತಸ್ಯಾಗುಣಂ ಮಹತ್॥** 41

**ತಚ್ಚ ಜ್ಞಾನಮಯಂ ವ್ಯಾಪಿ ಸ್ವಸಂವೇದ್ಯಮನೌಪಮಮ್।**
**ಚತುಷ್ಪ್ರಕಾರಂ ತದಪಿ ಸ್ವರೂಪಂ ಪರಮಾತ್ಮನಃ॥** 42

*ಶ್ರೀಮೈತ್ರೇಯ ಉವಾಚ:*

**ಚತುಃಪ್ರಕಾರತಾಂ ತಸ್ಯ ಬ್ರಹ್ಮಭೂತಸ್ಯ ಹೇ ಮುನೇ।**
**ಮಮಾಚಕ್ಷ್ವ ಯಥಾನ್ಯಾಯಂ ಯದುಕ್ತಂ ಪರಮಂ ಪದಮ್॥**

*ಶ್ರೀಪರಾಶರ ಉವಾಚ:*

**ಮೈತ್ರೇಯ ಕಾರಣಂ ಪ್ರೋಕ್ತಂ ಸಾಧನಂ ಸರ್ವವಸ್ತುಷು।**
**ಸಾಧ್ಯಂ ಚ ವಸ್ತ್ವಭಿಮತಂ ಯತ್ಸಾಧಯಿತುಮಾತ್ಮನಃ॥** 44

---

ಗೊಳಿಸುವ ಭಕ್ಷಕನೂ ಆಗಿದ್ದಾನೆ! ಸೃಷ್ಟಿಸ್ಥಿತಿಲಯಕಾಲಗಳಲ್ಲಿ ಸತ್ತ್ವಾದಿ ಗುಣಗಳು ಕಾರ್ಯೋನ್ಮುಖವಾಗಿ ಈ ಮೂರು ಪ್ರಕಾರಗಳು ನಡೆಯುತ್ತವೆ. ಭಗವಂತನ ಮಹತ್ತರವಾದ ಪರಮಸ್ವರೂಪವಾದರೋ ನಿರ್ಗುಣ ವಾದದ್ದು (40-41). ಆ ಸ್ವರೂಪವು ಜ್ಞಾನಮಯವೂ ವ್ಯಾಪಿಯೂ (ಬ್ರಹ್ಮಾಕಾರವೂ) ಸ್ವಯಂವೇದ್ಯವೂ ಉಪಮಾತೀತವೂ ಆಗಿದೆ. ಪರಮಾತ್ಮನ ಆ ನಿಜಸ್ವರೂಪವೂ ನಾಲ್ಕು ವಿಧವಾಗಿದೆ (42). ಆಗ ಮೈತ್ರೇಯರು "ಮಹರ್ಷಿಗಳೆ, ಭಗವಂತನ ಪರಮಸ್ವರೂಪವೂ ನಾಲ್ಕು ವಿಧವಾಗಿದೆಯೆಂದು ಹೇಳಿದಿರಲ್ಲ, ಅದಾವುದೆಂಬುದನ್ನು ಕ್ರಮವಾಗಿ ನನಗೆ ಹೇಳಿರಿ" ಎಂದು ಕೇಳಿಕೊಂಡರು (43). ಅದಕ್ಕೆ ಪರಾಶರರು ಹೇಳಿದರು: ಮೈತ್ರೇಯ, ಸಕಲ ವಸ್ತುಗಳಲ್ಲಿಯೂ ಕಾರಣವಾದುದನ್ನು ಸಾಧನವೆಂದೂ, ಸಾಧಿಸಬೇಕೆಂದು ತನಗೆ ಯಾವುದು ಅಭಿಮತ ವಾಗಿದೆಯೋ ಅದನ್ನು ಸಾಧ್ಯವೆಂದೂ ಹೇಳುತ್ತಾರೆ (44). ಮೋಕ್ಷಕಾಮ

**ಯೋಗಿನೋ ಮುಕ್ತಿಕಾಮಸ್ಯ ಪ್ರಾಣಾಯಾಮಾದಿಸಾಧನಮ್।**
**ಸಾಧ್ಯಂ ಚ ಪರಮಂ ಬ್ರಹ್ಮ ಪುನರ್ನಾವರ್ತತೇ ಯತಃ॥ 45**

**ಸಾಧನಾಲಂಬನಂ ಜ್ಞಾನಂ ಮುಕ್ತಯೇ ಯೋಗಿನಾಂ ಹಿ ಯತ್।**
**ಸ ಭೇದಃ ಪ್ರಥಮಸ್ತಸ್ಯ ಬ್ರಹ್ಮಭೂತಸ್ಯ ವೈ ಮುನೇ॥ 46**

**ಯುಂಜತಃ ಕ್ಲೇಶಮುಕ್ತ್ಯರ್ಥಂ ಸಾಧ್ಯಂ ಯದ್‌ಬ್ರಹ್ಮಯೋಗಿನಃ।**
**ತದಾಲಂಬನವಿಜ್ಞಾನಂ ದ್ವಿತೀಯೋಽಂಶೋ ಮಹಾಮುನೇ॥ 47**

**ಉಭಯೋಸ್ತ್ವವಿಭಾಗೇನ ಸಾಧ್ಯಸಾಧನಯೋರ್ಹಿ ಯತ್।**
**ವಿಜ್ಞಾನಮದ್ವೈತಮಯಂ ತದ್ಭಾಗೋಽನ್ಯೋ ಮಯೋದಿತಃ॥ 48**

**ಜ್ಞಾನತ್ರಯಸ್ಯ ವೈ ತಸ್ಯ ವಿಶೇಷೋ ಯೋ ಮಹಾಮುನೇ।**
**ತನ್ನಿರಾಕರಣದ್ವಾರಾ ದರ್ಶಿತಾತ್ಮಸ್ವರೂಪವತ್॥ 49**

---

ನಾದ ಯೋಗಿಗೆ ಪ್ರಾಣಾಯಾಮವೇ ಮೊದಲಾದದ್ದು ಸಾಧನವಾಗುತ್ತದೆ. ಯಾವುದರಿಂದ ಪುನರಾವೃತ್ತಿಯಿಲ್ಲವೋ ಆ ಪರಬ್ರಹ್ಮವು ಸಾಧ್ಯವೆನಿಸುತ್ತದೆ (45). ಮುಕ್ತಿಗಾಗಿ ಯೋಗಿಗಳ ಯಾವ (ಪ್ರಾಣಾಯಾಮಾದಿ) ಸಾಧನಾ ಲಂಬನಜ್ಞಾನವಿದೆಯೋ ಅದು ಬ್ರಹ್ಮ*ವೆನಿಸುವುದರ ಪ್ರಥಮ ಭೇದ (ಅಂಶ, ವಿಧ) (46). ಕ್ಲೇಶಬಂಧನದಿಂದ ಬಿಡುಗಡೆಯಾಗಬೇಕೆಂದು ಯೋಗಾಭ್ಯಾಸದಲ್ಲಿ ನಿರತನಾದ ಯೋಗಿಗೆ, ಸಾಧ್ಯವೆನಿಸುವ ಬ್ರಹ್ಮವನ್ನು ಆಲಂಬಿಸಿದ ಯಾವ ಜ್ಞಾನವುಂಟೋ ಅದು ಬ್ರಹ್ಮದ ದ್ವಿತೀಯಾಂಶ (47). ಸಾಧ್ಯ ಸಾಧನಗಳೆರಡಕ್ಕೂ ಭೇದವನ್ನು ಕಾಣದ ಅದ್ವೈತಮಯವಾದ ಜ್ಞಾನವು ಬ್ರಹ್ಮದ ತೃತೀಯ ಭೇದವೆಂದು ಉಕ್ತವಾಗಿದೆ (48). ಈ ಜ್ಞಾನತ್ರಯದಲ್ಲಿ ಯಾವ ಯಾವ ವಿಶೇಷವಿದೆಯೋ ಅದೆಲ್ಲವನ್ನೂ ನಿರಾಕರಿಸಿ ಆತ್ಮಸ್ವರೂಪವನ್ನು ಅನುಭವಕ್ಕೆ ತರುವ ನಿರ್ವ್ಯಾಪಾರವೂ (ಪ್ರಯತ್ನದಿಂದ ಅಜನ್ಯ), ವರ್ಣನಾತೀತವೂ ವ್ಯಾಪ್ತಿಮಾತ್ರವೂ (ಬ್ರಹ್ಮಾಕಾರ ಮಾತ್ರ), ಉಪಮಾರಹಿತವೂ, ಆತ್ಮಸಂಬೋಧ ವಿಷಯವೂ

---

* ಮೂಲದಲ್ಲಿ 'ಬ್ರಹ್ಮಭೂತ' ಎಂಬ ಶಬ್ದವಿದೆ. ಯಾವನು ಜ್ಞಾನದಿಂದ ಬ್ರಹ್ಮವಸ್ತುವಿಗೂ ತನಗೂ ಅಭೇದವನ್ನು ಕಾಣುತ್ತಾನೋ ಅವನು ಬ್ರಹ್ಮಭೂತ.

**ನಿರ್ವ್ಯಾಪಾರಮನಾಖ್ಯೇಯಂ ವ್ಯಾಪ್ತಿಮಾತ್ರಮನೂಪಮಮ್।**
**ಆತ್ಮಸಂಬೋಧವಿಷಯಂ ಸತ್ತಾಮಾತ್ರಮಲಕ್ಷಣಮ್॥ 50**

**ಪ್ರಶಾಂತಮಭಯಂ ಶುದ್ಧಂ ದುರ್ವಿಭಾವ್ಯಮಸಂಶ್ರಯಮ್।**
**ವಿಷ್ಣೋರ್ಜ್ಞಾನಮಯಸ್ಯೋಕ್ತಂ ತಜ್ಞಾನಂ ಬ್ರಹ್ಮಸಂಜ್ಞಿತಮ್॥ 51**

**ತತ್ರ ಜ್ಞಾನನಿರೋಧೇನ ಯೋಗಿನೋ ಯಾಂತಿ ಯೇ ಲಯಮ್।**
**ಸಂಸಾರಕರ್ಷಣೋಪ್ತೌ ತೇ ಯಾಂತಿ ನಿರ್ಬೀಜತಾಂ ದ್ವಿಜ॥ 52**

**ಏವಂಪ್ರಕಾರಮಮಲಂ ನಿತ್ಯಂ ವ್ಯಾಪಕಮಕ್ಷಯಮ್।**
**ಸಮಸ್ತಹೇಯರಹಿತಂ ವಿಷ್ಣ್ವಾಖ್ಯಂ ಪರಮಂ ಪದಮ್॥ 53**

---

(ಸ್ವಪ್ರಕಾಶ), ಸತ್ತಾಮಾತ್ರವೂ, ಲಕ್ಷಣರಹಿತವೂ, ಪ್ರಶಾಂತವೂ (ರಾಗಾದಿ ದೋಷಶೂನ್ಯ), ಅಭಯವೂ, ಶುದ್ಧವೂ (ನಿರ್ವಿಷಯ), ತರ್ಕಕ್ಕೆ ಅಗಮ್ಯವೂ (ನಿರ್ವಿಷಯವಾದ್ದರಿಂದ) ಆಶ್ರಯರಹಿತವೂ ಆಗಿ, ಜ್ಞಾನ ಮಯನಾದ ವಿಷ್ಣುವಿನ, 'ಬ್ರಹ್ಮ' ಎಂಬ ಹೆಸರಿನ ಜ್ಞಾನವು ನಾಲ್ಕನೆಯ ಪ್ರಕಾರ* (49-51). ಮೈತ್ರೇಯ, ಯಾವ ಯೋಗಿಗಳು (ಮೊದಲನೆಯ ಮೂರು ಪ್ರಕಾರದ) ಜ್ಞಾನವನ್ನು ನಿರೋಧಿಸಿ, ಅದರಲ್ಲಿ (ನಾಲ್ಕನೆಯದರಲ್ಲಿ) ಲೀನವಾಗುತ್ತಾರೋ ಅವರು ಸಂಸಾರ ಕ್ಷೇತ್ರದಲ್ಲಿ ಕೃಷಿಮಾಡಿ ಬೀಜಹಾಕಲು ಬೀಜವೇ§ ಇಲ್ಲದವರಾಗುತ್ತಾರೆ (52). ಈ ಪ್ರಕಾರವಾಗಿ ವಿಷ್ಣುವೆಂಬ ಪರಮಸ್ವರೂಪವು ಅಮಲವೂ ನಿತ್ಯವೂ ವ್ಯಾಪಕವೂ ಅಕ್ಷಯವೂ ಸಮಸ್ತ ಹೇಯರಹಿತವೂ ಆಗಿದೆ. ಪಾಪಪುಣ್ಯಗಳ ಕ್ಷಯವಾದ ಮೇಲೆ ಯೋಗಿಯು ಕ್ಲೇಶರಹಿತನೂ ಅತಿ ನಿರ್ಮಲನೂ ಆಗಿ ಆ ಪರಬ್ರಹ್ಮ

---

* ಸಾಧನಜ್ಞಾನ, ಸಾಧ್ಯಜ್ಞಾನ, ಸಾಧ್ಯಸಾಧನಗಳ ಅಭೇದಜ್ಞಾನ ಇವು ಕ್ರಮವಾಗಿ ಬ್ರಹ್ಮಪ್ರಾಪ್ತಿಯ ಸ್ತರಗಳು. ಬ್ರಹ್ಮವೆಂಬುದು ಅಖಂಡಜ್ಞಾನ ಸ್ವರೂಪವೇ. ಬ್ರಹ್ಮದಲ್ಲಿ ನಾಲ್ಕು ಪ್ರಕಾರಗಳನ್ನು ಕಲ್ಪಿಸಿರುವುದು ಬೋಧನ ಸೌಕರ್ಯಕ್ಕಾಗಿ. ಬ್ರಹ್ಮದಲ್ಲಿ ಯಾವ ಪ್ರಕಾರವೂ ಇಲ್ಲ.

§ ಪುಣ್ಯಪಾಪಗಳು ಸಂಸಾರದ ಬೀಜ. ಸಂಸಾರಕ್ಕೆ ಮರಳುವುದಿಲ್ಲ, ಮುಕ್ತರಾಗುತ್ತಾರೆ ಎಂದರ್ಥ.

**ತದ್‌ಬ್ರಹ್ಮ ಪರಮಂ ಯೋಗೀ ಯತೋ ನಾವರ್ತತೇ ಪುನಃ।**
**ಶ್ರಯತ್ಯಪುಣ್ಯೋ ಪರಮೇ ಕ್ಷೀಣಕ್ಲೇಶೋಽತಿನಿರ್ಮಲಃ॥ 54**

**ದ್ವೇ ರೂಪೇ ಬ್ರಹ್ಮಣಸ್ತಸ್ಯ ಮೂರ್ತಂ ಚಾಮೂರ್ತಮೇವ ಚ।**
**ಕ್ಷರಾಕ್ಷರಸ್ವರೂಪೇ ತೇ ಸರ್ವಭೂತೇಷ್ವವಸ್ಥಿತೇ॥ 55**

**ಅಕ್ಷರಂ ತತ್ಪರಂ ಬ್ರಹ್ಮ ಕ್ಷರಂ ಸರ್ವಮಿದಂ ಜಗತ್।**
**ಏಕದೇಶಸ್ಥಿತಸ್ಯಾಗ್ನೇರ್ಜ್ಯೋತ್ಸ್ನಾ ವಿಸ್ತಾರಿಣೀ ಯಥಾ।**
**ಪರಸ್ಯ ಬ್ರಹ್ಮಣಃ ಶಕ್ತಿಸ್ತಥೇದಮಖಿಲಂ ಜಗತ್॥ 56**

**ತತ್ರಾಪ್ಯಾಸನ್ನದೂರತ್ವಾದ್ಬಹುತ್ವಸ್ವಲ್ಪತಾಮಯಃ।**
**ಜ್ಯೋತ್ಸ್ನಾಭೇದೋಽಸ್ತಿ ತಚ್ಛಕ್ತೇಸ್ತದ್ವನ್ಮೈತ್ರೇಯ ವಿದ್ಯತೇ॥ 57**

**ಬ್ರಹ್ಮವಿಷ್ಣುಶಿವಾ ಬ್ರಹ್ಮನ್ ಪ್ರಧಾನಾ ಬ್ರಹ್ಮಶಕ್ತಯಃ।**
**ತತಶ್ಚ ದೇವಾ ಮೈತ್ರೇಯ ನ್ಯೂನಾ ದಕ್ಷಾದಯಸ್ತತಃ॥ 58**

---

ವನ್ನು ಸೇರುತ್ತಾನೆ. ಅನಂತರ ಅಲ್ಲಿಂದ ಅವನು ಸಂಸಾರಕ್ಕೆ ಮರಳುವುದಿಲ್ಲ (53-54). ಆ ಬ್ರಹ್ಮವಸ್ತುವಿಗೆ ಮೂರ್ತ, ಅಮೂರ್ತಗಳೆಂದು ಎರಡು ರೂಪಗಳಿವೆ. ಮೂರ್ತವು ಕ್ಷರ, ಅಮೂರ್ತವು ಅಕ್ಷರ. ಇವೆರಡೂ ಸಕಲ ಭೂತಗಳಲ್ಲಿಯೂ ಇವೆ (55). ಅಕ್ಷರವಾದದ್ದು ಪರಬ್ರಹ್ಮ. ಕ್ಷರವಾದದ್ದು ಈ ಸಮಸ್ತ ಜಗತ್ತೂ. ಒಂದು ಕಡೆ ಅಗ್ನಿ ಉರಿಯುತ್ತಿದ್ದಾಗ ಅದರ ಪ್ರಕಾಶವು ಹೇಗೆ ಸುತ್ತಲೂ ಹರಡಿರುವುದೋ ಹಾಗೇ ಬ್ರಹ್ಮದ ಶಕ್ತಿ ಎಲ್ಲೆಡೆಯೂ ಹರಡಿದೆ. ನಿಖಿಲ ಜಗತ್ತೂ ಬ್ರಹ್ಮದ ಶಕ್ತಿಯೇ (56). ಅಗ್ನಿಯ ಸಾಮೀಪ್ಯ-ದೂರಗಳಿಂದ ಅದರ ಪ್ರಕಾಶದಲ್ಲಿ ಹೇಗೆ ಅಧಿಕ-ನ್ಯೂನಗಳೆಂಬ ಭೇದವಿರುತ್ತದೆಯೋ ಹಾಗೆ ಬ್ರಹ್ಮದ ಶಕ್ತಿ ಪ್ರಸರಣದಲ್ಲಿಯೂ ತಾರತಮ್ಯವಿರುತ್ತದೆ (57). ಮೈತ್ರೇಯ, ಬ್ರಹ್ಮ-ವಿಷ್ಣು-ಶಿವ ಎಂಬ ತ್ರಿಮೂರ್ತಿಗಳು ಪ್ರಧಾನವಾದ ಬ್ರಹ್ಮಶಕ್ತಿಗಳು. ಅವರಿಗಿಂತ ದೇವತೆಗಳು ನ್ಯೂನಶಕ್ತಿಯವರು. ಅವರಿಗಿಂತಲೂ ದಕ್ಷಾದಿ ಪ್ರಜಾಪತಿಗಳು ನ್ಯೂನಶಕ್ತಿಯವರು (58). ಅನಂತರ ಮನುಷ್ಯರು, ಪಶುಗಳು, ಮೃಗ ಪಕ್ಷಿ ಸರೀಸೃಪಗಳು ಕ್ರಮವಾಗಿ ನ್ಯೂನನ್ಯೂನತರ ಶಕ್ತಿಯವು.

**ತತೋ ಮನುಷ್ಯಾಃ ಪಶವೋ ಮೃಗಪಕ್ಷಿಸರೀಸೃಪಾಃ।**
**ನ್ಯೂನಾನ್ಯೂನತರಾಶ್ಚೈವ ವೃಕ್ಷಗುಲ್ಮಾದಯಸ್ತಥಾ॥ 59**

**ತದೇತದಕ್ಷರಂ ನಿತ್ಯಂ ಜಗನ್ಮುನಿವರಾಖಿಲಮ್।**
**ಆವಿರ್ಭಾವತಿರೋಭಾವಜನ್ಮನಾಶವಿಕಲ್ಪವತ್॥ 60**

**ಸರ್ವಶಕ್ತಿಮಯೋ ವಿಷ್ಣುಃ ಸ್ವರೂಪಂ ಬ್ರಹ್ಮಣಃ ಪರಮ್।**
**ಮೂರ್ತಂ ಯದ್ಯೋಗಿಭಿಃ ಪೂರ್ವಂ**
**ಯೋಗಾರಂಭೇಷು ಚಿಂತ್ಯತೇ॥ 61**

**ಸಾಲಂಬನೋ ಮಹಾಯೋಗಃ ಸಬೀಜೋ ಯತ್ರ ಸಂಸ್ಥಿತಃ।**
**ಮನಸ್ಯವ್ಯಾಹತೇ ಸಮ್ಯಗ್ಯುಂಜತಾಂ ಜಾಯತೇ ಮುನೇ॥ 62**

**ಸ ಪರಃ ಪರಶಕ್ತೀನಾಂ ಬ್ರಹ್ಮಣಃ ಸಮನಂತರಮ್।**
**ಮೂರ್ತಂ ಬ್ರಹ್ಮ ಮಹಾಭಾಗ ಸರ್ವಬ್ರಹ್ಮಮಯೋ ಹರಿಃ॥ 63**

---

ಅವುಗಳಿಗಿಂತ ವೃಕ್ಷ, ಪೊದೆ ಮೊದಲಾದವು ಅಲ್ಪಶಕ್ತಿಯವು (59). ಮೈತ್ರೇಯ, ಆವಿರ್ಭಾವ ತಿರೋಭಾವ ಜನ್ಮನಾಶ—ಎಂಬ ವಿಕಲ್ಪಗಳುಳ್ಳದ್ದರಿಂದ ಈ ಸಮಸ್ತ ಜಗತ್ತು ಕ್ಷರವೆನಿಸಿದರೂ ಪರಮಾರ್ಥದಲ್ಲಿ (ಬ್ರಹ್ಮಶಕ್ತಿಯೇ ಆದ್ದರಿಂದ) ಅಕ್ಷರವೂ ನಿತ್ಯವೂ ಆಗಿದೆ (60). ಸರ್ವಶಕ್ತಿಮಯನಾದ ವಿಷ್ಣು ಬ್ರಹ್ಮವಸ್ತುವಿನ ಇನ್ನೊಂದು ಮೂರ್ತಸ್ವರೂಪನಾಗಿದ್ದಾನೆ. ಯೋಗಾರಂಭಕ್ಕೆ ಮೊದಲು ಯೋಗಿಗಳು ಆತನನ್ನು ಧ್ಯಾನಿಸುತ್ತಾರೆ (61). ವಿಧಿವತ್ತಾಗಿ ಯೋಗಾಭ್ಯಾಸ ಮಾಡುವ ಯೋಗಿಗಳ ಏಕಾಗ್ರಚಿತ್ತದಲ್ಲಿ ವಿಷ್ಣು ಆಲಂಬನ(ವಿಷಯ)ವಾಗಿರುವುದರಿಂದ ಅವರಿಗೆ ಸಬೀಜವಾದ (ಬೀಜಮಂತ್ರಸಹಿತವಾದ) ಸಾಲಂಬನ ಮಹಾಯೋಗವೆಂಬ (ಸಂಪ್ರಜ್ಞಾತ) ಸಮಾಧಿಯು ಸಿದ್ಧಿಸುತ್ತದೆ (62). ಮಹಾಭಾಗ—ಮೈತ್ರೇಯ, ಪರಬ್ರಹ್ಮಕ್ಕೆ ನಿಕಟವರ್ತಿಯಾದ ವಿಷ್ಣು ಪರಶಕ್ತಿಗಳಲ್ಲಿ ಪ್ರಧಾನ ಶಕ್ತಿಯಾಗಿದ್ದಾನೆ. ಬ್ರಹ್ಮಸರ್ವಸ್ವವೂ ಆಗಿರುವ ಶ್ರೀಹರಿಯು ಮೂರ್ತಿಧಾರಿಯಾದ ಬ್ರಹ್ಮವೇ (63). ಆತನಲ್ಲಿಯೇ ಸಮಸ್ತ ಜಗತ್ತೂ ಓತಪ್ರೋತವಾಗಿದೆ. ಮೈತ್ರೇಯ, ಆತನಿಂದ ಜಗತ್ತು, ಆತನಲ್ಲಿ ಜಗತ್ತು, ಆತನೇ

**ತತ್ರ ಸರ್ವಮಿದಂ ಪ್ರೋತಮೋತಂ ಚೈವಾಖಿಲಂ ಜಗತ್।**
**ತತೋ ಜಗಜ್ಜಗತ್ತಸ್ಮಿನ್ ಸಜಗಚ್ಚಾಖಿಲಂ ಮುನೇ॥ 64**

**ಕ್ಷರಾಕ್ಷರಮಯೋ ವಿಷ್ಣುರ್ಬಿಭರ್ತ್ಯಖಿಲಮೀಶ್ವರಃ।**
**ಪುರುಷಾ ವ್ಯಾಕೃತಮಯಂ ಭೂಷಣಾಸ್ತ್ರಸ್ವರೂಪವತ್॥ 65**

*ಶ್ರೀಮೈತ್ರೇಯ ಉವಾಚ:*

**ಭೂಷಣಾಸ್ತ್ರಸ್ವರೂಪಸ್ಥಂ ಯಚ್ಚೈತದಖಿಲಂ ಜಗತ್।**
**ಬಿಭರ್ತಿ ಭಗವನ್ವಿಷ್ಣುಸ್ತನ್ಮಮಾಖ್ಯಾತುಮರ್ಹಸಿ॥ 66**

*ಶ್ರೀಪರಾಶರ ಉವಾಚ:*

**ನಮಸ್ಕೃತ್ಯಾಪ್ರಮೇಯಾಯ ವಿಷ್ಣವೇ ಪ್ರಭವಿಷ್ಣವೇ।**
**ಕಥಯಾಮಿ ಯಥಾಖ್ಯಾತಂ ವಸಿಷ್ಠೇನ ಮಮಾಭವತ್॥ 67**

**ಆತ್ಮಾನಮಸ್ಯ ಜಗತೋ ನಿರ್ಲೇಪಮಗುಣಾಮಲಮ್।**
**ಬಿಭರ್ತಿ ಕೌಸ್ತುಭಮಣಿಸ್ವರೂಪಂ ಭಗವಾನ್ ಹರಿಃ॥ 68**

---

ಜಗತ್ತು! (64). ಈಶ್ವರನಾದ ವಿಷ್ಣುವೇ ಕ್ಷರ-ಅಕ್ಷರಗಳ ರೂಪನಾಗಿದ್ದಾನೆ. ತನ್ನ ಭೂಷಣ ಮತ್ತು ಆಯುಧಗಳ ರೂಪದಲ್ಲಿ ಪುರುಷ-ಪ್ರಕೃತಿಮಯವಾದ ಜಗತ್ತನ್ನು ಧರಿಸಿದ್ದಾನೆ (65). ಆಗ ಮೈತ್ರೇಯರು "ಮುನಿಗಳೆ, ಭೂಷಣ ಮತ್ತು ಅಸ್ತ್ರಗಳ ರೂಪದಲ್ಲಿ ನಿಖಿಲಜಗತ್ತನ್ನೂ ಭಗವಾನ್ ವಿಷ್ಣು ಧರಿಸಿದ್ದಾನೆಂದು ಹೇಳಿದಿರಷ್ಟೆ. ಅದನ್ನು ನನಗೆ ವಿವರಿಸಿ ಹೇಳಬೇಕು" ಎಂದು ಕೇಳಿದರು (66). ಪರಾಶರರು ಹೇಳಿದರು: ಅಜ್ಞೇಯನೂ ಮಹಾಮಹಿಮನೂ ಆದ ವಿಷ್ಣುವಿಗೆ ನಮಸ್ಕರಿಸಿ, ಹಿಂದೆ ವಸಿಷ್ಠಮುನಿಗಳು ನನಗೆ ಹೇಗೆ ತಿಳಿಸಿದ್ದರೋ ಹಾಗೆ ಹೇಳುತ್ತೇನೆ (67): ನಿರ್ಲೇಪನೂ ನಿರ್ಗುಣನೂ ನಿರ್ಮಲನೂ ಆದ ಜಗತ್ತಿನ ಆತ್ಮನನ್ನು (ಪುರುಷನನ್ನು) ಕೌಸ್ತುಭಮಣಿಯ ರೂಪದಿಂದ ಭಗವಾನ್ ಶ್ರೀಹರಿಯು ಧರಿಸಿದ್ದಾನೆ. ಪ್ರಧಾನ(ಪ್ರಕೃತಿ)ವನ್ನು ಶ್ರೀವತ್ಸನೆಂಬ ಹೆಸರಿನಿಂದ ಧರಿಸಿದ್ದಾನೆ. ಬುದ್ಧಿಯು ಗದೆಯ ಆಕೃತಿಯಾಗಿ

**ಶ್ರೀವತ್ಸಸಂಸ್ಥಾನಧರಮನಂತೇನ ಸಮಾಶ್ರಿತಮ್ ।**
**ಪ್ರಧಾನಂ ಬುದ್ಧಿರಪ್ಯಾಸ್ತೇ ಗದಾರೂಪೇಣ ಮಾಧವೇ ॥** 69

**ಭೂತಾದಿಮಿಂದ್ರಿಯಾದಿಂ ಚ ದ್ವಿಧಾಹಂಕಾರಮೀಶ್ವರಃ ।**
**ಬಿಭರ್ತಿ ಶಂಖರೂಪೇಣ ಶಾರ್ಙ್ಗರೂಪೇಣ ಚ ಸ್ಥಿತಮ್ ॥** 70

**ಚಲತ್ಸ್ವರೂಪಮತ್ಯಂತಂ ಜವೇನಾಂತರಿತಾನಿಲಮ್ ।**
**ಚಕ್ರಸ್ವರೂಪಂ ಚ ಮನೋ ಧತ್ತೇ ವಿಷ್ಣುಕರೇ ಸ್ಥಿತಮ್ ॥** 71

**ಪಂಚರೂಪಾ ತು ಯಾ ಮಾಲಾ ವೈಜಯಂತೀ ಗದಾಭೃತಃ ।**
**ಸಾ ಭೂತಹೇತುಸಂಘಾತಾ ಭೂತಮಾಲಾ ಚ ವೈ ದ್ವಿಜ ॥** 72

**ಯಾನೀಂದ್ರಿಯಾಣ್ಯಶೇಷಾಣಿ ಬುದ್ಧಿಕರ್ಮಾತ್ಮಕಾನಿ ವೈ ।**
**ಶರರೂಪಾಣ್ಯಶೇಷಾಣಿ ತಾನಿ ಧತ್ತೇ ಜನಾರ್ದನಃ ॥** 73

**ಬಿಭರ್ತಿ ಯಚ್ಚಾಸಿರತ್ನಮಚ್ಯುತೋಽತ್ಯಂತನಿರ್ಮಲಮ್ ।**
**ವಿದ್ಯಾಮಯಂ ತು ತಜ್ಜ್ಞಾನಮವಿದ್ಯಾಕೋಶಸಂಸ್ಥಿತಮ್ ॥** 74

---

ಮಾಧವನಲ್ಲಿದೆ (68-69). ಪಂಚಭೂತಗಳಿಗೆ ಕಾರಣವಾದ ತಾಮಸ ಅಹಂಕಾರವನ್ನೂ ಇಂದ್ರಿಯಗಳಿಗೆ ಕಾರಣವಾದ ರಾಜಸ ಅಹಂಕಾರವನ್ನೂ ಶಂಖ ಮತ್ತು ಶಾರ್ಙ್ಗಧನುಸ್ಸುಗಳ ರೂಪದಲ್ಲಿ ಹಿಡಿದಿದ್ದಾನೆ (70). ಅತ್ಯಂತ ಚಂಚಲವೂ ವೇಗದಲ್ಲಿ ವಾಯುವನ್ನು ಮೀರಿಸಿದ್ದೂ ಆದ ಮನಸ್ಸು ಚಕ್ರಸ್ವರೂಪವನ್ನು ತಳೆದು ವಿಷ್ಣುವಿನ ಕೈಯಲ್ಲಿದೆ. ಪಂಚರೂಪ (ಮುತ್ತು, ಮಾಣಿಕ್ಯ, ಮರಕತ, ಇಂದ್ರನೀಲ, ವಜ್ರ) ಮಯವಾದ ವೈಜಯಂತೀ ಮಾಲೆಯು ಪಂಚತನ್ಮಾತ್ರೆಗಳ ಮತ್ತು ಪಂಚಭೂತಗಳ ಸಮುದಾಯ ವಾಗಿದೆ (71-72). ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಲ್ಲವನ್ನೂ ಶರಗಳ ರೂಪದಿಂದ ಜನಾರ್ದನನು ಧರಿಸಿದ್ದಾನೆ. ಅತ್ಯಂತ ನಿರ್ಮಲವಾದ ಖಡ್ಗರತ್ನ ನಂದಕವನ್ನು ಅಚ್ಯುತನು ಧರಿಸಿದ್ದಾನಷ್ಟೆ, ಅದು ವಿದ್ಯಾಮಯ ವಾದ ಜ್ಞಾನವಾಗಿದೆ. ಅದು ಅವಿದ್ಯೆಯೆಂಬ ಒರೆಯಲ್ಲಿದೆ (73-74). ಮೈತ್ರೇಯ, ಈ ಪ್ರಕಾರದಲ್ಲಿ ಪುರುಷ, ಪ್ರಧಾನ, ಬುದ್ಧಿ, ಅಹಂಕಾರ, ಭೂತತನ್ಮಾತ್ರೆ-ಪಂಚಭೂತಗಳು, ಮನಸ್ಸು, ಸಮಸ್ತ ಇಂದ್ರಿಯಗಳು,

**ಇತ್ಥಂ ಪುಮಾನ್ ಪ್ರಧಾನಂ ಚ ಬುದ್ಧ್ಯಹಂಕಾರಮೇವ ಚ।**
**ಭೂತಾನಿ ಚ ಹೃಷೀಕೇಶೇ ಮನಃ ಸರ್ವೇಂದ್ರಿಯಾಣಿ ಚ।**
**ವಿದ್ಯಾವಿದ್ಯೇ ಚ ಮೈತ್ರೇಯ ಸರ್ವಮೇತತ್ ಸಮಾಶ್ರಿತಮ್॥** 75

**ಅಸ್ತ್ರಭೂಷಣಸಂಸ್ಥಾನಸ್ವರೂಪಂ ರೂಪವರ್ಜಿತಃ।**
**ಬಿಭರ್ತಿ ಮಾಯಾರೂಪೋಽಸೌ ಶ್ರೇಯಸೇ ಪ್ರಾಣಿನಾಂ ಹರಿಃ॥**

**ಸವಿಕಾರಂ ಪ್ರಧಾನಂ ಚ ಪುಮಾಂಸಮಖಿಲಂ ಜಗತ್।**
**ಬಿಭರ್ತಿ ಪುಂಡರೀಕಾಕ್ಷಸ್ತದೇವಂ ಪರಮೇಶ್ವರಃ॥** 77

**ಯಾ ವಿದ್ಯಾ ಯಾ ತಥಾವಿದ್ಯಾ ಯತ್ಸದ್ಯಚ್ಚಾಸದವ್ಯಯಮ್।**
**ತತ್ಸರ್ವಂ ಸರ್ವಭೂತೇಶೇ ಮೈತ್ರೇಯ ಮಧುಸೂದನೇ॥** 78

**ಕಲಾಕಾಷ್ಠಾನಿಮೇಷಾದಿದಿನರ್ತ್ವಯನಹಾಯನೈಃ।**
**ಕಾಲಸ್ವರೂಪೋ ಭಗವಾನಪಾಪೋ ಹರಿರವ್ಯಯಃ॥** 79

---

ವಿದ್ಯೆ, ಅವಿದ್ಯೆ—ಎಲ್ಲವೂ ವಿಷ್ಣುವಿನಲ್ಲಿ ಇವೆ (75). ರೂಪವರ್ಜಿತನಾದ ಶ್ರೀಹರಿಯು ಪ್ರಾಣಿಗಳ ಶ್ರೇಯಸ್ಸಿಗಾಗಿ ಮಾಯಾಮಯವಾದ ರೂಪವನ್ನು ತಳೆದು, ಇವುಗಳನ್ನು ಅಸ್ತ್ರರೂಪವಾಗಿಯೂ ಭೂಷಣರೂಪವಾಗಿಯೂ ಧರಿಸಿದ್ದಾನೆ (76). ಹೀಗೆ ಪರಮೇಶ್ವರನಾದ ಪುಂಡರೀಕಾಕ್ಷನು ವಿಕಾರಸಹಿತವಾದ ಪ್ರಧಾನವನ್ನೂ (ನಿರ್ವಿಕಾರವಾದ) ಪುರುಷನನ್ನೂ ಧರಿಸಿರುತ್ತಾನೆ. ವಿದ್ಯೆಯಾಗಲಿ ಅವಿದ್ಯೆಯಾಗಲಿ, ಸತ್ ಅಥವಾ ಅಸತ್ ಆಗಲಿ, ನಿತ್ಯವಸ್ತುವಾಗಲಿ—ಅದೆಲ್ಲವೂ ಸರ್ವಭೂತೇಶ್ವರನಾದ ವಿಷ್ಣುವಿನಲ್ಲಿಯೇ ಇದೆ (77-78). ನಿರ್ಮಲನೂ ಅವ್ಯಯನೂ ಆದ ಭಗವಾನ್ ಶ್ರೀಹರಿಯು ಕಲಾ, ಕಾಷ್ಠಾ, ನಿಮೇಷ, ದಿನ, ಋತು, ಸಂವತ್ಸರಗಳ ರೂಪದಿಂದ ಕಾಲಸ್ವರೂನೇ ಆಗಿದ್ದಾನೆ (79). ಮೈತ್ರೇಯ, ಭೂರ್ಲೋಕ, ಭುವರ್ಲೋಕ, ಸುವರ್ಲೋಕ, ಮಹಃ, ಜನಃ, ತಪಃ, ಸತ್ಯ—ಎಂಬ ಸಪ್ತಲೋಕಗಳೂ ವಿಷ್ಣುವೇ. ಸಕಲಪೂರ್ವಜರಿಗೆ ಪೂರ್ವದವನೂ ಸರ್ವ

**ಭೂರ್ಲೋಕೋಽಥ ಭುವರ್ಲೋಕಃ ಸ್ವರ್ಲೋಕೋ ಮುನಿಸತ್ತಮ।**
**ಮಹರ್ಜನಸ್ತಪಃ ಸತ್ಯಂ ಸಪ್ತ ಲೋಕಾ ಇಮೇ ವಿಭುಃ॥ 80**

**ಲೋಕಾತ್ಮಮೂರ್ತಿಃ ಸರ್ವೇಷಾಂ ಪೂರ್ವೇಷಾಮಪಿ ಪೂರ್ವಜಃ।**
**ಆಧಾರಃ ಸರ್ವವಿದ್ಯಾನಾಂ ಸ್ವಯಮೇವ ಹರಿಃ ಸ್ಥಿತಃ॥ 81**

**ದೇವಮಾನುಷಪಶ್ವಾದಿಸ್ವರೂಪೈರ್ಬಹುಭಿಃ ಸ್ಥಿತಃ।**
**ತತಃ ಸರ್ವೇಶ್ವರೋಽನಂತೋ ಭೂತಮೂರ್ತಿರಮೂರ್ತಿಮಾನ್॥**

**ಋಚೋ ಯಜೂಂಷಿ ಸಾಮಾನಿ ತಥೈವಾಥರ್ವಣಾನಿ ವೈ।**
**ಇತಿಹಾಸೋಪವೇದಾಶ್ಚ ವೇದಾಂತೇಷು ತಥೋಕ್ತಯಃ॥ 83**

**ವೇದಾಂಗಾನಿ ಸಮಸ್ತಾನಿ ಮನ್ವಾದಿಗದಿತಾನಿ ಚ।**
**ಶಾಸ್ತ್ರಾಣ್ಯಶೇಷಾಣ್ಯಾಖ್ಯಾನಾನ್ಯನುವಾಕಾಶ್ಚ ಯೇ ಕ್ವಚಿತ್॥ 84**

**ಕಾವ್ಯಾಲಾಪಾಶ್ಚ ಯೇ ಕೇಚಿದ್ಗೀತಕಾನ್ಯಖಿಲಾನಿ ಚ।**
**ಶಬ್ದಮೂರ್ತಿಧರಸ್ಯೈತದ್ವಪುರ್ವಿಷ್ಣೋರ್ಮಹಾತ್ಮನಃ॥ 85**

---

ವಿದ್ಯೆಗಳಿಗೆ ಆಧಾರನೂ ಆದ ಆ ಶ್ರೀಹರಿಯು ಸ್ವಯಂ ಜಗನ್ಮೂರ್ತಿಯಾಗಿ ನಿಂತಿದ್ದಾನೆ (80-81). ಸರ್ವೇಶ್ವರನಾದ ಅನಂತನು ನಿರಾಕಾರನಾಗಿದ್ದರೂ ದೇವ, ಮನುಷ್ಯ, ಪಶು—ಮೊದಲಾದ ಅನಂತ ರೂಪಗಳಿಂದಿದ್ದು ಭೂತಮೂರ್ತಿಯೆನಿಸಿದ್ದಾನೆ (82). ಋಗ್ಯಜುಃ ಸಾಮಾಥರ್ವಗಳೆಂಬ ವೇದಗಳು, ಇತಿಹಾಸಗಳು, (ಧನುರ್ವೇದಾದಿ) ಉಪವೇದಗಳು, ಉಪನಿಷತ್ತುಗಳು, ವೇದಾಂಗಗಳು, ಮನ್ವಾದಿಸ್ಮೃತಿವಚನಗಳು, ಸಮಸ್ತ ಶಾಸ್ತ್ರಗಳು, ಆಖ್ಯಾನಗಳು, ಕಲ್ಪಸೂತ್ರಾದ್ಯನುವಾಕಗಳು—ಇವೆಲ್ಲವೂ (83-84), ಮತ್ತು ಕಾವ್ಯಗಳು, ಸಮಸ್ತ ಗೀತಗಳು—ಇವುಗಳೂ ಸಹ ಶಬ್ದಾಕೃತಿಯನ್ನು ಧರಿಸಿದ ಮಹಾತ್ಮನಾದ ವಿಷ್ಣುವಿನ ಶರೀರ. ಈ ಲೋಕ ದಲ್ಲಾಗಲಿ ಬೇರೆ ಲೋಕದಲ್ಲಿ ಎಲ್ಲಾಗಲಿ ಮೂರ್ತ ಅಥವಾ ಅಮೂರ್ತ

**ಯಾನಿ ಮೂರ್ತಾನ್ಯಮೂರ್ತಾನಿ ಯಾನ್ಯತ್ರಾನ್ಯತ್ರ ವಾ ಕ್ವಚಿತ್।**
**ಸಂತಿ ವೈ ವಸ್ತುಜಾತಾನಿ ತಾನಿ ಸರ್ವಾಣಿ ತದ್ವಪುಃ॥ 86**

**ಅಹಂ ಹರಿಃ ಸರ್ವಮಿದಂ ಜನಾರ್ದನೋ**
**ನಾನ್ಯತ್ತತಃ ಕಾರಣಕಾರ್ಯಜಾತಮ್।**
**ಈದೃಙ್ಮನೋ ಯಸ್ಯ ನ ತಸ್ಯ ಭೂಯೋ**
**ಭವೋದ್ಭವಾ ದ್ವಂದ್ವಗದಾ ಭವಂತಿ॥ 87**

**ಇತ್ಯೇಷ ತೇಽಂಶಃ ಪ್ರಥಮಃ ಪುರಾಣಸ್ಯಾಸ್ಯ ವೈ ದ್ವಿಜ।**
**ಯಥಾವತ್ಕಥಿತೋ ಯಸ್ಮಿನ್ ಶ್ರುತೇ ಪಾಪೈಃ ಪ್ರಮುಚ್ಯತೇ॥ 88**

**ಕಾರ್ತ್ತಿಕ್ಯಾಂ ಪುಷ್ಕರಸ್ನಾನೇ ದ್ವಾದಶಾಬ್ದೇನ ಯತ್ಫಲಮ್।**
**ತದಸ್ಯ ಶ್ರವಣಾತ್ಸರ್ವಂ ಮೈತ್ರೇಯಾಪ್ನೋತಿ ಮಾನವಃ॥ 89**

---

ವಾದ ಯಾವ ಯಾವ ವಸ್ತುಗಳುಂಟೋ ಅವೆಲ್ಲವೂ ಆತನ ಶರೀರವೇ (85-86). "ನಾನೇ ಶ್ರೀಹರಿ, ಇದೆಲ್ಲವೂ ಜನಾರ್ದನನೇ. ಆತನಲ್ಲದ ಕಾರ್ಯವಾಗಲಿ ಕಾರಣವಾಗಲಿ ಇಲ್ಲ"—ಈ ರೀತಿಯಾಗಿ ಯಾವನ ಮನಸ್ಸಿನಲ್ಲಿ ಭಾವನೆಯಿರುತ್ತದೆಯೋ ಆತನಿಗೆ ಸಂಸಾರದಿಂದ ಸಂಭವಿಸುವ ರಾಗದ್ವೇಷಾದಿದ್ವಂದ್ವರೋಗಗಳು ಪುನಃ ಹುಟ್ಟುವುದಿಲ್ಲ (87). ಓ ಮೈತ್ರೇಯ, ಈ ರೀತಿಯಾಗಿ ನಿನಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶವನ್ನು ಯಥಾವತ್ತಾಗಿ ಹೇಳಿದ್ದಾಯಿತು. ಇದನ್ನು ಕೇಳಿದರೆ ಸಕಲ ಪಾಪಗಳಿಂದಲೂ ಬಿಡುಗಡೆಯಾಗುತ್ತದೆ (88). ಹನ್ನೆರಡು ವರ್ಷಗಳ ವರೆಗೆ ಕಾರ್ತಿಕ* ಶುದ್ಧ ಹುಣ್ಣಿಮೆಯಲ್ಲಿ ಪುಷ್ಕರತೀರ್ಥಸ್ನಾನ ಮಾಡಿದರೆ ಯಾವ ಫಲ ಬರುತ್ತದೆಯೋ ಅದೆಲ್ಲವೂ, ಮೈತ್ರೇಯ, ಇದನ್ನು ಕೇಳಿದ ಮನುಷ್ಯನಿಗೆ ಲಭಿಸುತ್ತದೆ (89). ಮೈತ್ರೇಯ, ದೇವರ್ಷಿ ಪಿತೃ ಗಂಧರ್ವ

---

* ಮೂಲದಲ್ಲಿ 'ಕಾರ್ತಿಕೀ' ಎಂದಿದೆ. ಇದಕ್ಕೆ ಹಿಂದೀ, ಇಂಗ್ಲಿಷ್ ಅನುವಾದಕರು ಕಾರ್ತಿಕಮಾಸವೆಂದು ಅರ್ಥವನ್ನು ಬರೆದಿದ್ದಾರೆ. ಈ ಶಬ್ದದ ಅರ್ಥ ಕಾರ್ತಿಕಮಾಸದ ಹುಣ್ಣಿಮೆ ಎಂದೇ ಆಗುತ್ತದೆ.

**ದೇವರ್ಷಿಪಿತೃಗಂಧರ್ವಯಕ್ಷಾದೀನಾಂ ಚ ಸಂಭವಮ್ ।**
**ಭವಂತಿ ಶೃಣ್ವತಃ ಪುಂಸೋ ದೇವಾದ್ಯಾ ವರದಾ ಮುನೇ॥ 90**

ಇತಿ ಶ್ರೀವಿಷ್ಣುಪುರಾಣೇ ಪ್ರಥಮೇಽಂಶೇ ದ್ವಾವಿಂಶೋಽಧ್ಯಾಯಃ

**ಇತಿ ಶ್ರೀಪರಾಶರಮುನಿವಿರಚಿತೇ ಶ್ರೀವಿಷ್ಣುಪರತ್ವನಿರ್ಣಾಯಕೇ**
**ಶ್ರೀಮತಿ ವಿಷ್ಣುಪುರಾಣೇ ಪ್ರಥಮೋಽಂಶಃ ಸಮಾಪ್ತಃ**

---

ಯಕ್ಷಾದಿಗಳ ಜನ್ಮವೃತ್ತಾಂತವನ್ನು ಕೇಳತಕ್ಕವನಿಗೆ ದೇವಾದಿಗಳು ಪ್ರಸನ್ನರಾಗಿ ಇಷ್ಟಾರ್ಥವನ್ನು ಅನುಗ್ರಹಿಸುತ್ತಾರೆ (90).

ಇಲ್ಲಿಗೆ ಶ್ರೀವಿಷ್ಣುಪುರಾಣದ ಪ್ರಥಮಾಂಶದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.

**ಪ್ರಥಮಾಂಶ ಸಂಪೂರ್ಣ**



# ದ್ವಿತೀಯಾಂಶಃ

## ಪ್ರಥಮೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಭಗವನ್‌ಸಮ್ಯಗಾಖ್ಯಾತಂ ಮಮೈತದಖಿಲಂ ತ್ವಯಾ।**
**ಜಗತಃ ಸರ್ಗಸಂಬಂಧಿ ಯತ್ಪೃಷ್ಟೋಽಸಿ ಗುರೋ ಮಯಾ॥ 1**

**ಯೋಽಯಮಂಶೋ ಜಗತ್ಸೃಷ್ಟಿಸಂಬಂಧೋ ಗದಿತಸ್ತ್ವಯಾ।**
**ತತ್ರಾಹಂ ಶ್ರೋತುಮಿಚ್ಛಾಮಿ ಭೂಯೋಽಪಿ ಮುನಿಸತ್ತಮ॥ 2**

**ಪ್ರಿಯವ್ರತೋತ್ತಾನಪಾದೌ ಸುತೌ ಸ್ವಾಯಂಭುವಸ್ಯ ಯೌ।**
**ತಯೋರುತ್ತಾನಪಾದಸ್ಯ ಧ್ರುವಃ ಪುತ್ರಸ್ತ್ವಯೋದಿತಃ॥ 3**

**ಪ್ರಿಯವ್ರತಸ್ಯ ನೈವೋಕ್ತಾ ಭವತಾ ದ್ವಿಜ ಸಂತತಿಃ।**
**ತಾಮಹಂ ಶ್ರೋತುಮಿಚ್ಛಾಮಿ ಪ್ರಸನ್ನೋ ವಕ್ತುಮರ್ಹಸಿ॥ 4**

---

# ದ್ವಿತೀಯಾಂಶಃ

## ಅಧ್ಯಾಯ 1

### ಪ್ರಿಯವ್ರತನ ವಂಶದ ವರ್ಣನೆ

ಮೈತ್ರೇಯರು "ಗುರುಗಳೆ, ಜಗತ್ತಿನ ಸೃಷ್ಟಿಗೆ ಸಂಬಂಧಿಸಿದಂತೆ ನಾನು ಏನನ್ನು ಕೇಳಿದೆನೋ, ಅದೆಲ್ಲವನ್ನೂ ಚೆನ್ನಾಗಿ ವಿವರಿಸಿ ಹೇಳಿದ್ದೀರಿ. ಜಗತ್ತಿನ ಸೃಷ್ಟಿಯ ವಿಷಯವಿರುವ ಪ್ರಥಮಾಂಶವನ್ನು ಹೇಳಿದಿರಷ್ಟೆ. ಆ ವಿಚಾರವಾಗಿ ಇನ್ನೂ ಕೇಳಬೇಕೆಂದಿದ್ದೇನೆ (1-2). ಸ್ವಾಯಂಭುವಮನುವಿನ ಪುತ್ರರಾದ ಪ್ರಿಯವ್ರತ ಮತ್ತು ಉತ್ತಾನಪಾದರಲ್ಲಿ ಧ್ರುವನು ಉತ್ತಾನ ಪಾದನ ಪುತ್ರನೆಂದು ಹೇಳಿದಿರಿ. ಪ್ರಿಯವ್ರತನ ಸಂತತಿಯ ವಿಷಯವಾಗಿ ನೀವು ಏನನ್ನೂ ಹೇಳಲಿಲ್ಲ. ಅದನ್ನು ಕೇಳಬೇಕೆಂದಿದ್ದೇನೆ. ಪ್ರಸನ್ನರಾಗಿ

*ಶ್ರೀಪರಾಶರ ಉವಾಚ:*

**ಕರ್ದಮಸ್ಯಾತ್ಮಜಾಂ ಕನ್ಯಾಮುಪಯೇಮೇ ಪ್ರಿಯವ್ರತಃ।**
**ಸಮ್ರಾಟ್ ಕುಕ್ಷಿಶ್ಚ ತತ್ಕನ್ಯೇ ದಶಪುತ್ರಾಸ್ತಥಾಪರೇ॥** 5

**ಮಹಾಪ್ರಜ್ಞಾ ಮಹಾವೀರ್ಯಾ ವಿನೀತಾ ದಯಿತಾಃ ಪಿತುಃ।**
**ಪ್ರಿಯವ್ರತಸುತಾಃ ಖ್ಯಾತಾಸ್ತೇಷಾಂ ನಾಮಾನಿ ಮೇ ಶೃಣು॥** 6

**ಆಗ್ನೀಧ್ರಶ್ಚಾಗ್ನಿಬಾಹುಶ್ಚ ವಪುಷ್ಮಾನ್ ದ್ಯುತಿಮಾಂಸ್ತಥಾ।**
**ಮೇಧಾ ಮೇಧಾತಿಥಿರ್ಭವ್ಯಃ ಸವನಃ ಪುತ್ರ ಏವ ಚ॥** 7

**ಜ್ಯೋತಿಷ್ಮಾನ್ ದಶಮಸ್ತೇಷಾಂ ಸತ್ಯನಾಮಾ ಸುತೋಽಭವತ್।**
**ಪ್ರಿಯವ್ರತಸ್ಯ ಪುತ್ರಾಸ್ತೇ ಪ್ರಖ್ಯಾತಾ ಬಲವೀರ್ಯತಃ॥** 8

**ಮೇಧಾಗ್ನಿಬಾಹುಪುತ್ರಾಸ್ತು ತ್ರಯೋ ಯೋಗಪರಾಯಣಾಃ।**
**ಜಾತಿಸ್ಮರಾ ಮಹಾಭಾಗಾ ನ ರಾಜ್ಯಾಯ ಮನೋ ದಧುಃ॥** 9

---

ಅದನ್ನು ನನಗೆ ಹೇಳಬೇಕು" ಎಂದರು (3-4). ಪರಾಶರರು ಹೇಳಿದರು: ಪ್ರಿಯವ್ರತನು ಕರ್ದಮನ ಮಗಳನ್ನು ಮದುವೆಯಾಗಿದ್ದನು. ಅವಳಲ್ಲಿ ಸಮ್ರಾಟ್, ಕುಕ್ಷಿ—ಎಂಬ ಇಬ್ಬರು ಹೆಣ್ಣುಮಕ್ಕಳೂ ಹತ್ತು ಮಂದಿ ಪುತ್ರರೂ ಜನಿಸಿದರು. ಪ್ರಿಯವ್ರತನ ಪುತ್ರರು ಬುದ್ಧಿಶಾಲಿಗಳೂ ಮಹಾವೀರರೂ ವಿನೀತರೂ ತಂದೆಯ ಪ್ರೀತಿಪಾತ್ರರೂ ವಿಖ್ಯಾತರೂ ಆಗಿದ್ದರು. ಅವರ ಹೆಸರನ್ನು ಕೇಳು (5-6): ಆಗ್ನೀಧ್ರ, ಅಗ್ನಿಬಾಹು, ವಪುಷ್ಮಾನ್, ದ್ಯುತಿಮಾನ್, ಮೇಧಾ, ಮೇಧಾತಿಥಿ, ಭವ್ಯ, ಸವನ, ಪುತ್ರ ಮತ್ತು ಜ್ಯೋತಿಷ್ಮಾನ್ ಎಂದು. ಇವರಲ್ಲಿ ಹತ್ತನೆಯವನಾದ ಜ್ಯೋತಿಷ್ಮಾನ್ ಎಂಬುವನು ಹೆಸರಿಗೆ ತಕ್ಕಂತೆ ತೇಜಸ್ವಿಯಾಗಿದ್ದನು. ಪ್ರಿಯವ್ರತನ ಪುತ್ರರೆಲ್ಲರೂ ಬಲ ಪರಾಕ್ರಮಗಳಿಂದ ಪ್ರಸಿದ್ಧರೇ (7-8). ಇವರಲ್ಲಿ ಮೇಧಾ, ಅಗ್ನಿಬಾಹು, ಪುತ್ರ—ಎಂಬ ಮೂವರು ಯೋಗಪರಾಯಣರೂ ಮಹಾತ್ಮರೂ ಆಗಿದ್ದರು. ಅವರಿಗೆ ಪೂರ್ವಜನ್ಮದ ಸ್ಮರಣೆ ಇತ್ತು. ಅವರಿಗೆ ರಾಜ್ಯಭಾರಮಾಡಲು ಮನಸ್ಸಾಗಲಿಲ್ಲ (9). ಅವರು ಸದಾಕಾಲದಲ್ಲಿಯೂ

**ನಿರ್ಮಲಾಃ ಸರ್ವಕಾಲಂತು ಸಮಸ್ತಾರ್ಥೇಷು ವೈ ಮುನೇ।**
**ಚಕ್ರುಃ ಕ್ರಿಯಾಂ ಯಥಾನ್ಯಾಯಮಫಲಾಕಾಂಕ್ಷಿಣೋ ಹಿತೇ॥ 10**

**ಪ್ರಿಯವ್ರತೋ ದದೌ ತೇಷಾಂ ಸಪ್ತಾನಾಂ ಮುನಿಸತ್ತಮ।**
**ಸಪ್ತದ್ವೀಪಾನಿ ಮೈತ್ರೇಯ ವಿಭಜ್ಯ ಸುಮಹಾತ್ಮನಾಮ್॥ 11**

**ಜಂಬೂದ್ವೀಪಂ ಮಹಾಭಾಗ ಸೋಽಗ್ನೀಧ್ರಾಯ ದದೌ ಪಿತಾ।**
**ಮೇಧಾತಿಥೇಸ್ತಥಾ ಪ್ರಾದಾತ್ ಪ್ಲಕ್ಷದ್ವೀಪಂ ತಥಾಪರಮ್॥ 12**

**ಶಾಲ್ಮಲೇ ಚ ವಪುಷ್ಮಂತಂ ನರೇಂದ್ರಮಭಿಷಿಕ್ತವಾನ್।**
**ಜ್ಯೋತಿಷ್ಮಂತಂ ಕುಶದ್ವೀಪೇ ರಾಜಾನಂ ಕೃತವಾನ್ ಪ್ರಭುಃ॥ 13**

**ದ್ಯುತಿಮಂತಂ ಚ ರಾಜಾನಂ ಕ್ರೌಂಚದ್ವೀಪೇ ಸಮಾದಿಶತ್।**
**ಶಾಕದ್ವೀಪೇಶ್ವರಂ ಚಾಪಿ ಭವ್ಯಂ ಚಕ್ರೇ ಪ್ರಿಯವ್ರತಃ॥ 14**

**ಪುಷ್ಕರಾಧಿಪತಿಂ ಚಕ್ರೇ ಸವನಂ ಚಾಪಿ ಸ ಪ್ರಭುಃ।**
**ಜಂಬೂದ್ವೀಪೇಶ್ವರೋ ಯಸ್ತು ಆಗ್ನೀದ್ರೋ ಮುನಿಸತ್ತಮ॥ 15**

**ತಸ್ಯ ಪುತ್ರಾ ಬಭೂವುಸ್ತೇ ಪ್ರಜಾಪತಿಸಮಾ ನವ।**
**ನಾಭಿಃ ಕಿಂಪುರುಷಶ್ಚೈವ ಹರಿವರ್ಷ ಇಲಾವೃತಃ॥ 16**

---

ನಿರ್ಮಲಚಿತ್ತರಾಗಿದ್ದುಕೊಂಡು ಸಮಸ್ತ ವಿಷಯಗಳಲ್ಲಿಯೂ ಫಲಾಪೇಕ್ಷೆಯನ್ನು ತ್ಯಜಿಸಿ ಶಾಸ್ತ್ರೀಯವಾಗಿ ಕರ್ಮಗಳನ್ನು ನಡೆಸುತ್ತಿದ್ದರು (10). ಮೈತ್ರೇಯ, ಪ್ರಿಯವ್ರತನು ಉಳಿದ ಏಳು ಮಂದಿ ಪುತ್ರರಿಗೆ ಸಪ್ತದ್ವೀಪಗಳನ್ನು ವಿಭಾಗಿಸಿಕೊಟ್ಟನು. ಆಗ್ನೀಧ್ರನಿಗೆ ಜಂಬೂದ್ವೀಪವನ್ನೂ, ಮೇಧಾತಿಥಿಗೆ ಪ್ಲಕ್ಷದ್ವೀಪವನ್ನೂ ಕೊಟ್ಟನು (11-12). ವಪುಷ್ಮಂತನನ್ನು ಶಾಲ್ಮಲಿ ದ್ವೀಪದ ರಾಜನೆಂದೂ ಜ್ಯೋತಿಷ್ಮಂತನನ್ನು ಕುಶದ್ವೀಪದ ರಾಜನೆಂದೂ ಪಟ್ಟಾಭಿಷೇಕಮಾಡಿದನು. ಪ್ರಿಯವ್ರತನು ಕ್ರೌಂಚದ್ವೀಪಕ್ಕೆ ದ್ಯುತಿಮಂತನನ್ನು ಶಾಕದ್ವೀಪಕ್ಕೆ ಭವ್ಯನನ್ನು ಪುಷ್ಕರದ್ವೀಪಕ್ಕೆ ಸವನನನ್ನು ರಾಜರೆಂದು ಗೊತ್ತುಮಾಡಿದನು. ಆಗ್ನೀಧ್ರನು ಜಂಬೂದ್ವೀಪಕ್ಕೆ ಒಡೆಯನಾಗಿದ್ದನಷ್ಟೆ (13-15). ಪ್ರಜಾಪತಿಗಳಿಗೆ ಸಮಾನರಾದ ಒಂಬತ್ತು ಮಂದಿ ಪುತ್ರರು ಆತನಿಗೆ ಜನಿಸಿದರು. ನಾಭಿ, ಕಿಂಪುರುಷ, ಹರಿವರ್ಷ,

ರಮ್ಯೋ ಹಿರಣ್ವಾನ್ ಷಷ್ಠಶ್ಚ ಕುರುರ್ಭದ್ರಾಶ್ವ ಏವ ಚ ।
ಕೇತುಮಾಲಸ್ತಥೈವಾನ್ಯಃ ಸಾದುಚೇಷ್ಟೋಽಭವನ್ನೃಪಃ ॥ 17

ಜಂಬೂದ್ವೀಪವಿಭಾಗಾಂಶ್ಚ ತೇಷಾಂ ವಿಪ್ರ ನಿಶಾಮಯ ।
ಪಿತ್ರಾ ದತ್ತಂ ಹಿಮಾಹ್ವಂ ತು ವರ್ಷಂ ನಾಭೇಸ್ತು ದಕ್ಷಿಣಮ್ ॥ 18

ಹೇಮಕೂಟಂ ತಥಾ ವರ್ಷಂ ದದೌ ಕಿಂಪುರುಷಾಯ ಸಃ ।
ತೃತೀಯಂ ನೈಷಧಂ ವರ್ಷಂ ಹರಿವರ್ಷಾಯ ದತ್ತವಾನ್ ॥ 19

ಇಲಾವೃತಾಯ ಪ್ರದದೌ ಮೇರುರ್ಯತ್ರ ತು ಮಧ್ಯಮಃ ।
ನೀಲಾಚಲಾಶ್ರಿತಂ ವರ್ಷಂ ರಮ್ಯಾಯ ಪ್ರದದೌ ಪಿತಾ ॥ 20

ಶ್ವೇತಂ ತದುತ್ತರಂ ವರ್ಷಂ ಪಿತ್ರಾ ದತ್ತಂ ಹಿರಣ್ವತೇ ।
ಯದುತ್ತರಂ ಶೃಂಗವತೋ ವರ್ಷಂ ತತ್ಕುರವೇ ದದೌ ॥ 21

ಮೇರೋಃ ಪೂರ್ವೇಣ ಯದ್ವರ್ಷಂ ಭದ್ರಾಶ್ವಾಯ ಪ್ರದತ್ತವಾನ್ ।
ಗಂಧಮಾದನವರ್ಷಂ ತು ಕೇತುಮಾಲಾಯ ದತ್ತವಾನ್ ॥ 22

---

ಇಲಾವೃತ, ರಮ್ಯ, ಹಿರಣ್ವಾನ್, ಕುರು, ಭದ್ರಾಶ್ವ, ಕೇತುಮೂಲ— ಎಂದು ಅವರ ಹೆಸರು. ಕೇತುಮೂಲನು ವಿಶೇಷವಾಗಿ ಸಾಧುಸ್ವಭಾವದವನು (16-17). ತಂದೆಯು ಅವನಿಗೆ ಹಂಚಿಕೊಟ್ಟ ಜಂಬೂದ್ವೀಪ ವಿಭಾಗಗಳು ಯಾವುವೆಂಬುದನ್ನು ಆಲಿಸು. ಹಿಮಾಲಯದ ದಕ್ಷಿಣದ ಹಿಮವೆಂಬ ದೇಶವನ್ನು (ಭರತವರ್ಷವನ್ನು) ನಾಭಿಗೆ ಕೊಟ್ಟನು. ಹೇಮಕೂಟವನ್ನು ಕಿಂಪುರುಷನಿಗೂ ನೈಷಧವನ್ನು ಹರಿವರ್ಷನಿಗೂ ಕೊಟ್ಟನು (18-19). ಮೇರುವೇ ನಡುವೆ ಇರುವ ಪ್ರದೇಶವನ್ನು ಇಲಾವೃತನಿಗೂ ನೀಲಾಚಲವಿರುವ ದೇಶವನ್ನು ರಮ್ಯನಿಗೂ ಅವರ ತಂದೆ ವಿಭಾಗಿಸಿ ಕೊಟ್ಟನು. ಅದಕ್ಕೆ ಉತ್ತರದಲ್ಲಿರುವ ಶ್ವೇತವರ್ಷವನ್ನು ಹಿರಣ್ವಂತನಿಗೂ ಶೃಂಗವಾನ್ ಪರ್ವತದ ಉತ್ತರದೇಶವನ್ನು ಕುರುವಿಗೂ ಕೊಟ್ಟನು (20-21). ಮೇರುವಿಗೆ ಪೂರ್ವದಲ್ಲಿರುವ ವರ್ಷವನ್ನು ಭದ್ರಾಶ್ವನಿಗೂ ಗಂಧಮಾದನವರ್ಷವನ್ನು ಕೇತುಮಾಲನಿಗೂ ವಿಭಜಿಸಿಕೊಟ್ಟನು. ಈ ರೀತಿಯಲ್ಲಿ ಆಗ್ನೀಧ್ರ ರಾಜನು ಪುತ್ರರಿಗೆ ರಾಜ್ಯಗಳನ್ನು ಹಂಚಿಕೊಟ್ಟು,

**ಇತ್ಯೇತಾನಿ ದದೈ ತೇಭ್ಯಃ ಪುತ್ರೇಭ್ಯಃ ಸ ನರೇಶ್ವರಃ।**
**ವರ್ಷೇಷ್ವೇತೇಷು ತಾನ್ ಪುತ್ರಾನಭಿಷಿಚ್ಯ ಸ ಭೂಮಿಪಃ॥** 23

**ಶಾಲಗ್ರಾಮಂ ಮಹಾಪುಣ್ಯಂ ಮೈತ್ರೇಯ ತಪಸೇ ಯಯೌ।**
**ಯಾನಿ ಕಿಂಪುರುಷಾದೀನಿ ವರ್ಷಾಣ್ಯಷ್ಟೌ ಮಹಾಮುನೇ॥** 24

**ತೇಷಾಂ ಸ್ವಾಭಾವಿಕೀ ಸಿದ್ಧಿಃ ಸುಖಪ್ರಾಯಾ ಹ್ಯಯತ್ನತಃ।**
**ವಿಪರ್ಯಯೋ ನ ತೇಷ್ವಸ್ತಿ ಜರಾಮೃತ್ಯುಭಯಂ ನ ಚ॥** 25

**ಧರ್ಮಾಧರ್ಮೌ ನ ತೇಷ್ವಾಸ್ತಾಂ ನೋತ್ತಮಾಧಮಮಧ್ಯಮಾಃ।**
**ನ ತೇಷ್ವಸ್ತಿ ಯುಗಾವಸ್ಥಾ ಕ್ಷೇತ್ರೇಷ್ವಷ್ಟಸು ಸರ್ವದಾ॥** 26

**ಹಿಮಾಹ್ವಯಂ ತು ವೈ ವರ್ಷಂ ನಾಭೇರಾಸೀನ್ಮಹಾತ್ಮನಃ।**
**ತಸ್ಯರ್ಷಭೋಽಭವತ್ಪುತ್ರೋ ಮೇರುದೇವ್ಯಾಂ ಮಹಾದ್ಯುತಿಃ॥** 27

**ಋಷಭಾದ್ಭರತೋ ಜಜ್ಞೇ ಜ್ಯೇಷ್ಠಃ ಪುತ್ರಶತಸ್ಯ ಸಃ।**
**ಕೃತ್ವಾ ರಾಜ್ಯಂ ಸ್ವಧರ್ಮೇಣ ತಥೇಷ್ಟ್ವಾ ವಿವಿಧಾನ್ಮಖಾನ್॥** 28

---

ಅವರಿಗೆ ಪಟ್ಟಾಭಿಷೇಕ ಮಾಡಿ, ಶಾಲಗ್ರಾಮವೆಂಬ ಮಹಾಪುಣ್ಯಕ್ಷೇತ್ರಕ್ಕೆ ತಪಸ್ಸಿಗಾಗಿ ಹೊರಟು ಹೋದನು (22-23). ಮೈತ್ರೇಯ, ಇವುಗಳಲ್ಲಿ ಕಿಂಪುರುಷ ಮೊದಲಾದ ಎಂಟು(ದೇಶ)* ಗಳಿವೆಯಲ್ಲ, ಅಲ್ಲಿ ಭೋಗಸಿದ್ಧಿ ಸ್ವಾಭಾವಿಕವಾಗಿರುತ್ತದೆ. ಯತ್ನವಿಲ್ಲದೆ ಸುಖಮಯವಾಗಿರುವ ದೇಶ ಗಳವು. ಅಲ್ಲಿ ಇದಕ್ಕೆ ವೈಪರೀತ್ಯವಿರುವುದಿಲ್ಲ. ಮುಪ್ಪು ಸಾವುಗಳ ಭಯವೂ ಅಲ್ಲಿ ಇಲ್ಲ (24-25). ಆ ಎಂಟು ದೇಶಗಳಲ್ಲಿ ಧರ್ಮಾಧರ್ಮಗಳ ವ್ಯವಸ್ಥೆಯಾಗಲಿ ಉತ್ತಮ ಮಧ್ಯಮ ಅಧಮವೆಂಬ ಭೇದವಾಗಲಿ ಇಲ್ಲ. ಯುಗಾನುರೂಪವಾದ ಅವಸ್ಥೆಯೂ ಅಲ್ಲಿಲ್ಲ (26). ಹಿಮ ಎಂಬ ವರ್ಷವು ನಾಭಿಗೆ ಸೇರಿತಷ್ಟೆ. ಆ ಮಹಾತ್ಮನಿಗೆ ಮೇರು ದೇವಿಯಲ್ಲಿ ಋಷಭನೆಂಬ ಮಹಾ ತೇಜಸ್ವಿಯಾದ ಪುತ್ರನು ಜನಿಸಿದನು (27). ಋಷಭನಿಂದ ಭರತನು ಜನಿಸಿದನು. ಋಷಭನ ನೂರು ಮಂದಿ ಪುತ್ರರಲ್ಲಿ

---

* ನಾಭಿಗೆ ಸೇರಿದ ಭಾರತವರ್ಷವನ್ನು ಬಿಟ್ಟು ಎಂಟು ವರ್ಷಗಳು. ಇವುಗಳ ವಿವರಣೆ ಮುಂದಿನ ಅಧ್ಯಾಯದಲ್ಲಿದೆ.

**ಅಭಿಷಿಚ್ಯ ಸುತಂ ವೀರಂ ಭರತಂ ಪೃಥಿವೀಪತಿಃ।**
**ತಪಸೇ ಸ ಮಹಾಭಾಗಃ ಪುಲಹಸ್ಯಾಶ್ರಮಂ ಯಯೌ॥ 29**

**ವಾನಪ್ರಸ್ಥವಿಧಾನೇನ ತತ್ರಾಪಿ ಕೃತನಿಶ್ಚಯಃ।**
**ತಪಸ್ತೇಪೇ ಯಥಾನ್ಯಾಯಮಿಯಾಜ ಸ ಮಹೀಪತಿಃ॥ 30**

**ತಪಸಾ ಕರ್ಷಿತೋಽತ್ಯರ್ಥಂ ಕೃಶೋ ಧಮನಿಸಂತತಃ।**
**ನಗ್ನೋ ವಿಟಂ ಮುಖೇ ಕೃತ್ವಾ ವೀರಾಧ್ವಾನಂ ತತೋ ಗತಃ॥ 31**

**ತತಶ್ಚ ಭಾರತಂ ವರ್ಷಮೇತಲ್ಲೋಕೇಷು ಗೀಯತೇ।**
**ಭರತಾಯ ಯತಃ ಪಿತ್ರಾ ದತ್ತಂ ಪ್ರಾತಿಷ್ಠತಾ ವನಮ್॥ 32**

**ಸುಮತಿರ್ಭರತಸ್ಯಾಭೂತ್ ಪುತ್ರಃ ಪರಮಧಾರ್ಮಿಕಃ।**
**ಕೃತ್ವಾ ಸಮ್ಯಗ್ದದೌ ತಸ್ಯ ರಾಜ್ಯಮಿಷ್ಟಮುಖಃ ಪಿತಾ॥ 33**

---

ಭರತನು ಹಿರಿಯ. ಮಹಾಭಾಗನಾದ ಋಷಭನು ಧರ್ಮದಿಂದ ರಾಜ್ಯವನ್ನು ಪಾಲಿಸಿ, ನಾನಾ ಯಾಗಗಳನ್ನು ನಡೆಸಿ, ವೀರಪುತ್ರನಾದ ಭರತನಿಗೆ ಪಟ್ಟಾಭಿಷೇಕಮಾಡಿ ಕಡೆಯಲ್ಲಿ ತಪಸ್ಸಿಗಾಗಿ ಪುಲಹಾಶ್ರಮಕ್ಕೆ ತೆರಳಿದನು (28-29). ಋಷಭ ಮಹಾರಾಜನು ಪುಲಹಾಶ್ರಮದಲ್ಲಿಯೂ ವಾನಪ್ರಸ್ಥ ವಿಧಾನದಿಂದ ದೃಢನಿಶ್ಚಯನಾಗಿ ತಪಸ್ಸು ಮಾಡುತ್ತ ವಿಧಿಪೂರ್ವಕವಾಗಿ ಯಜ್ಞ ಮಾಡುತ್ತಿದ್ದನು (30). ತಪಸ್ಸಿನಿಂದ ಅವನ ಶರೀರವು ಅತ್ಯಂತ ಕೃಶವಾಯಿತು. ನರಗಳು ಎದ್ದು ಕಾಣುತ್ತಿದ್ದವು. ಅಂತ್ಯಕಾಲದಲ್ಲಿ ನಗ್ನನಾಗಿದ್ದು ಬಾಯಲ್ಲಿ ಒಂದು ಕಲ್ಲುಹರಳ*ನ್ನಿಟ್ಟುಕೊಂಡು ಆತನು ಸದ್ಗತಿಯನ್ನು ಸೇರಿದನು (31). ತಂದೆಯು ವನಕ್ಕೆ ಹೋಗುವಾಗ ಭರತನಿಗೆ ಈ ರಾಷ್ಟ್ರವನ್ನು ಕೊಟ್ಟುಹೋದ್ದರಿಂದ (ಹಿಮಾಲಯದ ದಕ್ಷಿಣಕ್ಕಿರುವ ಇದು) ಭಾರತವರ್ಷವೆಂದು ಹೇಳಲ್ಪಡುತ್ತಿದೆ (32). ಪರಮ ಧಾರ್ಮಿಕನಾದ ಸುಮತಿ ಎಂಬುವನು ಭರತನಿಗೆ ಪುತ್ರನಾಗಿದ್ದನು. ಭರತನು ಯಜ್ಞಗಳನ್ನು ನೆರವೇರಿಸಿ ಕಡೆಯಲ್ಲಿ ಸುಮತಿಗೆ ತನ್ನ ರಾಜ್ಯವನ್ನು ವಹಿಸಿದನು (33).

---

* "ಆಸ್ಯೇ ಕೃತ್ವಾಶ್ಮಕವಲಂ" ಎಂದು ಭಾಗವತದಲ್ಲಿದೆ.

**ಪುತ್ರಸಂಕ್ರಾಮಿತಶ್ರೀಸ್ತು ಭರತಃ ಸ ಮಹೀಪತಿಃ।**
**ಯೋಗಾಭ್ಯಾಸರತಃ ಪ್ರಾಣಾನ್ ಶಾಲಗ್ರಾಮೇಽತ್ಯಜನ್ ಮನೇ॥ 34**

**ಅಜಾಯತ ಚ ವಿಪ್ರೋಽಸೌ ಯೋಗಿನಾಂ ಪ್ರವರೇ ಕುಲೇ।**
**ಮೈತ್ರೇಯ ತಸ್ಯ ಚರಿತಂ ಕಥಯಿಷ್ಯಾಮಿ ತೇ ಪುನಃ॥ 35**

**ಸುಮತೇಸ್ತೇಜಸಸ್ತಸ್ಮಾದಿಂದ್ರದ್ಯುಮ್ನೋ ವ್ಯಜಾಯತ।**
**ಪರಮೇಷ್ಠೀ ತತಸ್ತಸ್ಮಾತ್ ಪ್ರತಿಹಾರಸ್ತದನ್ವಯಃ॥ 36**

**ಪ್ರತಿಹರ್ತೇತಿ ವಿಖ್ಯಾತ ಉತ್ಪನ್ನಸ್ತಸ್ಯ ಚಾತ್ಮಜಃ।**
**ಭವಸ್ತಸ್ಮಾದಥೋದ್‌ಗೀಥಃ ಪ್ರಸ್ತಾವಸ್ತತ್ಸುತೋ ವಿಭುಃ॥ 37**

**ಪೃಥುಸ್ತತಸ್ತತೋ ನಕ್ತೋ ನಕ್ತಸ್ಯಾಪಿ ಗಯಃ ಸುತಃ।**
**ನರೋ ಗಯಸ್ಯ ತನಯಸ್ತತ್ಪುತ್ರೋಽಭೂದ್ವಿರಾಟ್ ತತಃ॥ 38**

**ತಸ್ಯ ಪುತ್ರೋ ಮಹಾವೀರ್ಯೋ ಧೀಮಾಂಸ್ತಸ್ಮಾದಜಾಯತ।**
**ಮಹಾಂತಸ್ತತ್ಸುತಶ್ಚಾಭೂನ್ಮನಸ್ಯುಸ್ತಸ್ಯ ಚಾತ್ಮಜಃ॥ 39**

---

ಹೀಗೆ ಭರತನು ತನ್ನ ಪುತ್ರನಿಗೆ ರಾಜ್ಯಲಕ್ಷ್ಮಿಯನ್ನು ವಹಿಸಿಕೊಟ್ಟು, ತಾನು ಶಾಲಗ್ರಾಮಕ್ಷೇತ್ರದಲ್ಲಿ ಯೋಗಾಭ್ಯಾಸನಿರತನಾಗಿ ಪ್ರಾಣವನ್ನು ಬಿಟ್ಟನು. ಮುಂದೆ ಆತನು ಯೋಗಿಗಳ ಶ್ರೇಷ್ಠವಾದ ಕುಲದಲ್ಲಿ ಬ್ರಾಹ್ಮಣನಾಗಿ ಹುಟ್ಟಿದನು. ಮೈತ್ರೇಯ, ಆತನ ಕಥೆಯನ್ನು ಆಮೇಲೆ ನಿನಗೆ ಹೇಳುತ್ತೇನೆ (34-35). ಸುಮತಿಯ ವೀರ್ಯದಿಂದ ಇಂದ್ರದ್ಯುಮ್ನನೂ ಅವನಿಂದ ಪರಮೇಷ್ಠಿಯೂ ಪರಮೇಷ್ಠಿಯಿಂದ ಪ್ರತಿಹಾರನೂ ಹುಟ್ಟಿದರು. ಪ್ರತಿಹಾರನ ಮಗ ಪ್ರತಿಹರ್ತನೆಂಬ ಕೀರ್ತಿಶಾಲಿ. ಆತನ ಮಗ ಭವ. ಅವನ ಮಗ ಉದ್ಗೀಥ. ಉದ್ಗೀಥನ ಪುತ್ರ ಪ್ರಸ್ತಾವ (36-37). ಪ್ರಸ್ತಾವನ ಮಗ ಪೃಥು, ಅವನಿಗೆ ನಕ್ತ, ನಕ್ತನಿಗೆ ಗಯ, ಅವನಿಗೆ ನರ, ನರನ ಪುತ್ರ ವಿರಾಟ್, ವಿರಾಟನ ಪುತ್ರ ಮಹಾವೀರ್ಯ, ಅವನಿಂದ ಧೀಮಾನ್ ಎಂಬವನು ಹುಟ್ಟಿದನು. ಅವನ ಮಗ ಮಹಾಂತ, ಅವನಿಗೆ ಮನಸ್ಯು ಪುತ್ರನಾಗಿ ಜನಿಸಿದನು (38-39). ಆತನ ಮಗ ತ್ವಷ್ಟಾ, ಅವನಿಗೆ ವಿರಜ, ವಿರಜನಿಗೆ ರಜ ಎಂಬವನು ಮಗ. ಆತನ ಮಗ ಶತಜಿತ್. ಶತಜಿತ್ತಿಗೆ

**ತ್ವಷ್ಟಾ ತ್ವಷ್ಟುಶ್ಚ ವಿರಜೋ ರಜಸ್ತಸ್ಯಾಪ್ಯಭೂತ್ ಸುತಃ।**
**ಶತಜಿದ್ರಜಸಸ್ತಸ್ಯ ಜಜ್ಞೇ ಪುತ್ರಶತಂ ಮುನೇ॥** 40

**ವಿಶ್ವಗ್ಜ್ಯೋತಿಃ ಪ್ರಧಾನಾಸ್ತೇ ಯೈರಿಮಾ ವರ್ದ್ಧಿತಾ ಪ್ರಜಾಃ।**
**ತೈರಿದಂ ಭಾರತಂ ವರ್ಷಂ ನವಭೇದಮಲಂಕೃತಮ್॥** 41

**ತೇಷಾಂ ವಂಶಪ್ರಸೂತೈಶ್ಚ ಭುಕ್ತೇಯಂ ಭಾರತೀ ಪುರಾ।**
**ಕೃತತ್ರೇತಾದಿಸರ್ಗೇಣ ಯುಗಾಖ್ಯಾಮೇಕಸಪ್ತತಿಮ್॥** 42

**ಏಷಃ ಸ್ವಾಯಂಭುವಃ ಸರ್ಗೋ ಯೇನೇದಂ ಪೂರಿತಂ ಜಗತ್।**
**ವಾರಾಹೇ ತು ಮುನೇ ಕಲ್ಪೇ ಪೂರ್ವಮನ್ವಂತರಾಧಿಪಃ॥** 43

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇऽಂಶೇ ಪ್ರಥಮೋऽಧ್ಯಾಯಃ

---

ನೂರು ಮಂದಿ ಪುತ್ರರು ಹುಟ್ಟಿದರು (40). ಅವರಲ್ಲಿ ವಿಷ್ವಗ್‌ಜ್ಯೋತಿ ಎಂಬವನು ಮೊದಲನೆಯವನು. ಅವರಿಂದ ಜನಸಂತತಿ ವಿಶೇಷವಾಗಿ ವರ್ಧಿಸಿತು. ಅವರಿಂದ ಈ ಭಾರತವರ್ಷವು ಒಂಬತ್ತು ಭೇದವುಳ್ಳದ್ದಾಗಿ ಭೂಷಿತವಾಯಿತು (41). ಅವರ ಸಂತತಿಯವರು ಕೃತ, ತ್ರೇತಾದಿಯುಗ ಕ್ರಮದಲ್ಲಿ ಎಪ್ಪತ್ತೊಂದು ಯುಗಗಳವರೆಗೆ ಈ ಭರತ ಭೂಮಿಯನ್ನು ಭೋಗಿಸಿದರು. ಮೈತ್ರೇಯ, ಈ ರೀತಿ ಜಗತ್ತು ಪ್ರಜೆಗಳಿಂದ ತುಂಬಿದ್ದು ಸ್ವಾಯಂಭುವ ಮನ್ವಂತರದಲ್ಲಿ . ವಾರಾಹಕಲ್ಪದ ಪ್ರಥಮ ಮನ್ವಂತರದಲ್ಲಿ ಸ್ವಯಂಭೂ ಮನು ಅಧಿಪತಿಯಾಗಿದ್ದನು (42-43).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಒಂದನೆಯ ಅಧ್ಯಾಯ ಮುಗಿಯಿತು.



## ದ್ವಿತೀಯೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಕಥಿತೋ ಭವತಾ ಬ್ರಹ್ಮನ್ ಸರ್ಗಃ ಸ್ವಾಯಂಭುವಶ್ಚ ಮೇ।**
**ಶ್ರೋತುಮಿಚ್ಛಾಮ್ಯಹಂ ತ್ವತ್ತಃ ಸಕಲಂ ಮಂಡಲಂ ಭುವಃ॥** 1

**ಯಾವಂತಃ ಸಾಗರಾದ್ವೀಪಾಸ್ತಥಾ ವರ್ಷಾಣಿ ಪರ್ವತಾಃ।**
**ವನಾನಿ ಸರಿತಃ ಪುರ್ಯೋ ದೇವಾದೀನಾಂ ತಥಾ ಮುನೇ॥** 2

**ಯತ್ಪ್ರಮಾಣಮಿದಂ ಸರ್ವಂ ಯದಾಧಾರಂ ಯದಾತ್ಮಕಮ್।**
**ಸಂಸ್ಥಾನಮಸ್ಯ ಚ ಮುನೇ ಯಥಾವದ್ವಕ್ತುಮರ್ಹಸಿ॥** 3

*ಶ್ರೀಪರಾಶರ ಉವಾಚ:*

**ಮೈತ್ರೇಯ ಶ್ರೂಯತಾಮೇತತ್ಸಂಕ್ಷೇಪಾದ್ಗದತೋ ಮಮ।**
**ನಾಸ್ಯ ವರ್ಷಶತೇನಾಪಿ ವಕ್ತುಂ ಶಕ್ಯೋ ಹಿ ವಿಸ್ತರಃ॥** 4

---

## ಅಧ್ಯಾಯ 2

ಭೂಮಂಡಲದ ವಿವರಣೆ. ಸಾಗರ, ದ್ವೀಪ, ವರ್ಷ—ಮುಂತಾದವುಗಳು

ಮೈತ್ರೇಯರು “ಮಹರ್ಷಿಗಳೆ, ಸ್ವಾಯಂಭುವ ಸೃಷ್ಟಿಯ ವಿವರವನ್ನು ನನಗೆ ಹೇಳಿದಿರಿ. ಈಗ ಸಕಲ ಭೂಮಂಡಲದ ವಿವರವನ್ನು ಕೇಳಲಪೇಕ್ಷಿಸುತ್ತೇನೆ (1). ಇದರಲ್ಲಿ ಯಾವ ಯಾವ ಸಾಗರಗಳು, ದ್ವೀಪಗಳು, ವರ್ಷಗಳು, ಪರ್ವತಗಳು ಇವೆ? ಅರಣ್ಯಗಳು, ನದಿಗಳು, ದೇವಾದಿಗಳ ನಗರಗಳು—ಯಾವುವು? ಇವುಗಳ ಪರಿಮಾಣ, ಆಧಾರ, ಉಪಾದಾನಕಾರಣ, ಆಕಾರ—ಇವೆಲ್ಲವನ್ನೂ ಯಥಾವತ್ತಾಗಿ ಹೇಳೋಣವಾಗಲಿ” ಎಂದರು (2-3). ಆಗ ಪರಾಶರರು: ಮೈತ್ರೇಯ, ಇದೆಲ್ಲವನ್ನೂ ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು. ವಿಸ್ತಾರವಾಗಿ ಇದನ್ನು ಹೇಳಲು ನೂರು ವರ್ಷಗಳಾದರೂ ಸಾಧ್ಯವಾಗದು! (4). ಜಂಬೂ, ಪ್ಲಕ್ಷ,

**ಜಂಬೂಪ್ಲಕ್ಷಾಹ್ವಯೌ ದ್ವೀಪೌ ಶಾಲ್ಮಲಶ್ಚಾಪರೋ ದ್ವಿಜ।**
**ಕುಶಃ ಕ್ರೌಂಚಸ್ತಥಾ ಶಾಕಃ ಪುಷ್ಕರಶ್ಚೈವ ಸಪ್ತಮಃ॥** 5

**ಏತೇ ದ್ವೀಪಾಃ ಸಮುದ್ರೈಸ್ತು ಸಪ್ತ ಸಪ್ತಭಿರಾವೃತಾಃ।**
**ಲವಣೇಕ್ಷುಸುರಾಸರ್ಪಿರ್ದಧಿದುಗ್ಧಜಲೈಃ ಸಮಮ್॥** 6

**ಜಂಬೂದ್ವೀಪಃ ಸಮಸ್ತಾನಾಮೇತೇಷಾಂ ಮಧ್ಯಸಂಸ್ಥಿತಃ।**
**ತಸ್ಯಾಪಿ ಮೇರುರ್ಮೈತ್ರೇಯ ಮಧ್ಯೇ ಕನಕಪರ್ವತಃ॥** 7

**ಚತುರಾಶೀತಿಸಾಹಸ್ರೋ ಯೋಜನೈರಸ್ಯ ಚೋಚ್ಛ್ರಯಃ।**
**ಪ್ರವಿಷ್ಟಃ ಷೋಡಶಾಧಸ್ತಾದ್ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ॥** 8

**ಮೂಲೇ ಷೋಡಶಸಾಹಸ್ರೋ ವಿಸ್ತಾರಸ್ತಸ್ಯ ಸರ್ವಶಃ।**
**ಭೂಪದ್ಮಸ್ಯಾಸ್ಯ ಶೈಲೋಽಸೌ ಕರ್ಣಿಕಾಕಾರಸಂಸ್ಥಿತಃ॥** 9

**ಹಿಮವಾನ್ ಹೇಮಕೂಟಶ್ಚ ನಿಷಧಶ್ಚಾಸ್ಯ ದಕ್ಷಿಣೇ।**
**ನೀಲಃ ಶ್ವೇತಶ್ಚ ಶೃಂಗೀಚ ಉತ್ತರೇ ವರ್ಷಪರ್ವತಾಃ॥** 10

---

ಶಾಲ್ಮಲ, ಕುಶ, ಕ್ರೌಂಚ, ಶಾಕ, ಪುಷ್ಕರ—ಎಂಬ ಸಪ್ತದ್ವೀಪಗಳಿವೆ. ಇವು ಸಪ್ತಸಮುದ್ರಗಳಿಂದ ಒಂದೊಂದೂ ಆವೃತವಾಗಿವೆ. ಲವಣ, ಇಕ್ಷು, ಸುರಾ, ಘೃತ, ದಧಿ, ಕ್ಷೀರ, ಜಲ—ಎಂದು ಸಪ್ತಸಮುದ್ರಗಳು ಈ ದ್ವೀಪಗಳನ್ನು ಆವರಿಸಿಕೊಂಡಿವೆ (5-6). ಜಂಬೂದ್ವೀಪವು ಈ ಎಲ್ಲ ದ್ವೀಪಗಳ ಮಧ್ಯದಲ್ಲಿದೆ. ಅದರ ನಡುವೆ ಸುವರ್ಣಮಯವಾದ ಮೇರು ಪರ್ವತವಿದೆ. ಅದರ ಎತ್ತರ ನಲವತ್ತು ಸಾವಿರ ಯೋಜನಗಳು. ಇದರಲ್ಲಿ ಹದಿನಾರು ಯೋಜನಗಳಷ್ಟು ನೆಲದೊಳಗಿದೆ. ಈ ಪರ್ವತವು ಮೇಲ್ಗಡೆ ಮೂವತ್ತೆರಡು ಯೋಜನಗಳಷ್ಟು ಅಗಲವಾಗಿದೆ (7-8). ಮೇರು ಪರ್ವತದ ಬುಡದ ವಿಸ್ತಾರವು ಹದಿನಾರು ಸಾವಿರ ಯೋಜನ. ಈ ಶೈಲವು ಭೂಮಿಯೆಂಬ ಕಮಲಕ್ಕೆ ಕರ್ಣಿಕೆಯಂತಿದೆ. ಇದರ ದಕ್ಷಿಣದಲ್ಲಿ ಹಿಮಾಲಯ, ಹೇಮಕೂಟ, ನಿಷಧ—ಎಂಬ ಪರ್ವತಗಳೂ ಉತ್ತರದಲ್ಲಿ ನೀಲ, ಶ್ವೇತ, ಶೃಂಗಿ—ಎಂಬ ಪರ್ವತಗಳೂ ಇವೆ (9-10). ಇವುಗಳಲ್ಲಿ ನಡುವೆ ನಿಷಧ, ನೀಲ ಎಂಬಿವೆರಡು ಲಕ್ಷಯೋಜನಗಳವರೆಗೂ

**ಲಕ್ಷಪ್ರಮಾಣೌ ದ್ವೌ ಮಧ್ಯೌ ದಶಹೀನಾಸ್ತಥಾಪರೇ।**
**ಸಹಸ್ರದ್ವಿತಯೋಚ್ಛ್ರಾಯಾಸ್ತಾವದ್ವಿಸ್ತಾರಿಣಶ್ಚ ತೇ॥ 11**

**ಭಾರತಂ ಪ್ರಥಮಂ ವರ್ಷಂ ತತಃ ಕಿಂಪುರುಷಂ ಸ್ಮೃತಮ್।**
**ಹರಿವರ್ಷಂ ತಥೈವಾನ್ಯನ್ಮೇರೋರ್ದಕ್ಷಿಣತೋ ದ್ವಿಜ॥ 12**

**ರಮ್ಯಕಂ ಚೋತ್ತರಂ ವರ್ಷಂ ತಸ್ಯೈವಾನುಹಿರಣ್ಮಯಮ್।**
**ಉತ್ತರಾಃ ಕುರವಶ್ಚೈವ ಯಥಾ ವೈ ಭಾರತಂ ತಥಾ॥ 13**

**ನವಸಾಹಸ್ರಮೇಕೈಕಮೇತೇಷಾಂ ದ್ವಿಜಸತ್ತಮ।**
**ಇಲಾವೃತಂ ಚ ತನ್ಮಧ್ಯೇ ಸೌವರ್ಣೋ ಮೇರುರುಚ್ಛ್ರಿತಃ॥ 14**

**ಮೇರೋಶ್ಚತುರ್ದಿಶಂ ತತ್ತು ನವಸಾಹಸ್ರವಿಸ್ತೃತಮ್।**
**ಇಲಾವೃತಂ ಮಹಾಭಾಗ ಚತ್ವಾರಶ್ಚಾತ್ರ ಪರ್ವತಾಃ॥ 15**

---

ಉಳಿದವು ಕ್ರಮವಾಗಿ ಲಕ್ಷಕ್ಕೆ-ಹತ್ತು ಕಡಿಮೆ ಯೋಜನಗಳವರೆಗೂ ಹರಡಿವೆ (ಎಂದರೆ, ನಿಷಧ-ನೀಲಗಳು ಒಂದು ಲಕ್ಷ ಯೋಜನ ಹರಡಿವೆ. ಹೇಮಕೂಟ-ಶ್ವೇತಗಳು ತೊಂಬತ್ತು ಸಾವಿರ ಯೋಜನ, ಹಿಮಾಲಯ ಶೃಂಗಿಗಳು ಎಂಬತ್ತು ಸಾವಿರ ಯೋಜನ ಹರಡಿವೆ). ಇವೆಲ್ಲವೂ ಎರಡು ಸಾವಿರ ಯೋಜನ ಎತ್ತರವಾಗಿದ್ದು ಅಷ್ಟೇ ಅಗಲವಾಗಿವೆ (11). ಮೇರುವಿನ ದಕ್ಷಿಣಕ್ಕೆ ಮೊದಲು ಭಾರತವರ್ಷ, ಆಮೇಲೆ ಕಿಂಪುರುಷ ವರ್ಷ, ಅನಂತರ ಹರಿವರ್ಷಗಳಿವೆ. ಮೇರುವಿನ ಉತ್ತರಕ್ಕೆ ಮೊದಲು ರಮ್ಯಕವರ್ಷ, ಆಮೇಲೆ ಹಿರಣ್ಮಯ ವರ್ಷ, ಅನಂತರ ಉತ್ತರಕುರು ವರ್ಷಗಳಿವೆ (12). ಅವುಗಳಲ್ಲಿ ಒಂದೊಂದು ವರ್ಷವೂ ಒಂಬತ್ತು ಸಾವಿರ ಯೋಜನಗಳ ವಿಸ್ತಾರವಾಗಿದೆ. ಉತ್ತರಕುರುವರ್ಷವು ಭಾರತ ದಂತೆ (ಧನುರಾಕಾರವಾಗಿ) ಇದೆ. ಇವೆಲ್ಲವುಗಳ ನಡುವೆ ಇಲಾವೃತ ವರ್ಷವಿದ್ದು ಅದರ ನಡುವೆ ಮೇರು ಪರ್ವತವಿದೆ (14). ಮೈತ್ರೇಯ, ಇಲಾವೃತವು ಮೇರುವಿನ ನಾಲ್ಕೂ ಕಡೆಗಳಲ್ಲಿಯೂ ಒಂಬತ್ತು ಸಾವಿರ ಯೋಜನದವರೆಗೆ ಹರಡಿದೆ. ಇದರಲ್ಲಿ ನಾಲ್ಕು ಪರ್ವತಗಳುಂಟು (15). ಇವು ಹತ್ತುಸಾವಿರ ಯೋಜನ ಎತ್ತರವಾಗಿದ್ದು ಮೇರುಪರ್ವತಕ್ಕೆ ಸುತ್ತಲೂ

**ವಿಷ್ಕಂಭಾ ರಚಿತಾ ಮೇರೋರ್ಯೋಜನಾಯುತಮುಚ್ಛ್ರಿತಾಃ।**
**ಪೂರ್ವೇಣ ಮಂದರೋ ನಾಮ ದಕ್ಷಿಣೇ ಗಂಧಮಾದನಃ॥ 16**

**ವಿಪುಲಃ ಪಶ್ಚಿಮೇ ಪಾರ್ಶ್ವೇ ಸುಪಾರ್ಶ್ವಶ್ಚೋತ್ತರೇ ಸ್ಮೃತಃ।**
**ಕದಂಬಸ್ತೇಷು ಜಂಬೂಶ್ಚ ಪಿಪ್ಪಲೋ ವಟ ಏವ ಚ॥ 17**

**ಏಕಾದಶಶತಾಯಾಮಾಃ ಪಾದಪಾ ಗಿರಿಕೇತವಃ।**
**ಜಂಬೂದ್ವೀಪಸ್ಯ ಸಾ ಜಂಬೂರ್ನಾಮಹೇತುರ್ಮಹಾಮುನೇ॥ 18**

**ಮಹಾಗಜಪ್ರಮಾಣಾನಿ ಜಂಬ್ವಾಸ್ತಸ್ಯಾಃ ಫಲಾನಿ ವೈ।**
**ಪತಂತಿ ಭೂಭೃತಃ ಪೃಷ್ಠೇ ಶೀರ್ಯಮಾಣಾನಿ ಸರ್ವತಃ॥ 19**

**ರಸೇನ ತೇಷಾಂ ಪ್ರಖ್ಯಾತಾ ತತ್ರ ಜಾಂಬೂನದೀತಿ ವೈ।**
**ಸರಿತ್ಪ್ರವರ್ತತೇ ಚಾಪಿ ಪೀಯತೇ ತನ್ನಿವಾಸಿಭಿಃ॥ 20**

**ನ ಸ್ವೇದೋ ನ ಚ ದೌರ್ಗಂಧ್ಯಂ ನ ಜರಾ ನೇಂದ್ರಿಯಕ್ಷಯಃ।**
**ತತ್ಪಾನಾತ್ಸ್ವಚ್ಛಮನಸಾಂ ಜನಾನಾಂ ತತ್ರ ಜಾಯತೇ॥ 21**

---

ರಚಿಸಿರುವ ನಾಲ್ಕು ಕೀಲುಗಳಂತೆ ಇವೆ. ಪೂರ್ವದಲ್ಲಿ ಮಂದರ, ದಕ್ಷಿಣದಲ್ಲಿ ಗಂಧಮಾದನ, ಪಶ್ಚಿಮದಲ್ಲಿ ವಿಪುಲ ಮತ್ತು ಉತ್ತರದಲ್ಲಿ ಸುಪಾರ್ಶ್ವ—ಎಂಬ ಹೆಸರಿನ ಪರ್ವತಗಳಿವು. ಇವುಗಳ ಮೇಲೆ ಕದಂಬ, ಜಂಬೂ, ಅಶ್ವತ್ಥ, ಆಲದಮರಗಳಿವೆ (16-17). ಈ ವೃಕ್ಷಗಳು ಹನ್ನೊಂದು ನೂರು ಯೋಜನಗಳಷ್ಟು ಎತ್ತರವಾಗಿದ್ದು ಪರ್ವತಗಳ ಮೇಲಿರುವ ಧ್ವಜಸ್ತಂಭಗಳಾಗಿವೆ. ಇವುಗಳಲ್ಲಿ ಜಂಬೂ ವೃಕ್ಷವು (ನೇರಿಳೆ) ಜಂಬೂದ್ವೀಪವೆಂದು ಹೆಸರು ಬರಲು ನಿಮಿತ್ತ. ಆದರೆ ನೇರಿಳೆ ಹಣ್ಣುಗಳು ದೊಡ್ಡ ಆನೆಯ ಗಾತ್ರದವು! ಆ ಹಣ್ಣುಗಳು ಪರ್ವತದ ಮೇಲೆ ಉದುರುತ್ತವೆ (18-19). ಆಗ ನೇರಿಳೆ ಹಣ್ಣಿನ ರಸ ನದಿಯಾಗಿ ಹರಿಯುತ್ತದೆ. ಅದರ ಹೆಸರು ಜಾಂಬೂನದಿ. ಅಲ್ಲಿಯ ಜನರು ಆ ರಸವನ್ನು ಕುಡಿಯುತ್ತಾರೆ. ಆ ರಸವನ್ನು ಕುಡಿಯುವುದರಿಂದ ಅಲ್ಲಿರುವ ಜನರಿಗೆ ಬೆವರು ಇಲ್ಲ, ದುರ್ಗಂಧವಿಲ್ಲ, ಮುಪ್ಪಿಲ್ಲ, ಇಂದ್ರಿಯ ದೌರ್ಬಲ್ಯವೂ ಇಲ್ಲ (20-21). ಆ ನದೀತೀರದ ಮಣ್ಣು ಜಂಬೂರಸವನ್ನು ಹೀರಿಕೊಳ್ಳುತ್ತದೆ.

**ತೀರಮೃತ್ತದ್ರಸಂ ಪ್ರಾಪ್ಯ ಸುಖವಾಯುವಿಶೋಷಿತಾ।**
**ಜಾಂಬೂನದಾಖ್ಯಂ ಭವತೀ ಸುವರ್ಣಂ ಸಿದ್ಧಭೂಷಣಮ್॥ 22**

**ಭದ್ರಾಶ್ವಂ ಪೂರ್ವತೋ ಮೇರೋಃ ಕೇತುಮಾಲಂ ಚ ಪಶ್ಚಿಮೇ।**
**ವರ್ಷೇ ದ್ವೇ ತು ಮುನಿಶ್ರೇಷ್ಠ ತಯೋರ್ಮಧ್ಯಮಿಲಾವೃತಃ॥ 23**

**ವನಂ ಚೈತ್ರರಥಂ ಪೂರ್ವೇ ದಕ್ಷಿಣೇ ಗಂಧಮಾದನಮ್।**
**ವೈಭ್ರಾಜಂ ಪಶ್ಚಿಮೇ ತದ್ವದುತ್ತರೇ ನಂದನಂ ಸ್ಮೃತಮ್॥ 24**

**ಅರುಣೋದಂ ಮಹಾಭದ್ರಮಸಿತೋದಂ ಸಮಾನಸಮ್।**
**ಸರಾಂಸ್ಯೇತಾನಿ ಚತ್ವಾರಿ ದೇವಭೋಗ್ಯಾನಿ ಸರ್ವದಾ॥ 25**

**ಶೀತಾಂತಶ್ಚ ಕುಮುಂದಶ್ಚ ಕುರರೀ ಮಾಲ್ಯವಾಂಸ್ತಥಾ।**
**ವೈಕಂಕಪ್ರಮುಖಾ ಮೇರೋಃ ಪೂರ್ವತಃ ಕೇಸರಾಚಲಾಃ॥ 26**

**ತ್ರಿಕೂಟಃ ಶಿಶಿರಶ್ಚೈವ ಪತಂಗೋ ರುಚಕಸ್ತಥಾ।**
**ನಿಷಧಾದ್ಯಾ ದಕ್ಷಿಣತಸ್ತಸ್ಯ ಕೇಸರಪರ್ವತಾಃ॥ 27**

---

ಅನಂತರ ಮಂದವಾತದಿಂದ ಒಣಗಿ ಜಾಂಬೂನದವೆಂಬ ಚಿನ್ನವಾಗುತ್ತದೆ! ಅದು ಸಿದ್ಧಪುರುಷರಿಗೆ ಒಡವೆಯಾಗುತ್ತದೆ! (22). ಮೇರುವಿನ ಪೂರ್ವ ದಿಕ್ಕಿನಲ್ಲಿ ಭದ್ರಾಶ್ವ, ಪಶ್ಚಿಮದಿಕ್ಕಿನಲ್ಲಿ ಕೇತುಮಾಲ—ಎಂಬ ಎರಡು ವರ್ಷಗಳಿವೆ. ಅವೆರಡರ ನಡುವೆ ಇಲಾವೃತವರ್ಷವಿದೆ (23). ಮೇರುವಿನ ಪೂರ್ವಕ್ಕಿರುವುದು ಚೈತ್ರರಥವೆಂಬ ಉದ್ಯಾನ. ದಕ್ಷಿಣ ಕ್ಕಿರುವುದು ಗಂಧಮಾದನವನ. ಪಶ್ಚಿಮಕ್ಕೆ ವೈಭ್ರಾಜವನವೂ ಉತ್ತರಕ್ಕೆ ನಂದನವನವೂ ಇವೆ (24). ಹಾಗೆಯೇ ದೇವಭೋಗ್ಯಗಳಾದ ಅರುಣೋದ, ಮಹಾಭದ್ರ, ಅಸಿತೋದ, ಮಾನಸ ಎಂಬ ನಾಲ್ಕು ಸರೋವರಗಳಿವೆ. ಮೇರುವಿನ ಪೂರ್ವದಲ್ಲಿ ಶೀತಾಂತ, ಕುಮುಂದ (ಮುಕುಂದ), ಕುರರೀ, ಮಾಲ್ಯವಾನ್, ವೈಕಂಕ ಮೊದಲಾದ ಕೇಸರ ಪರ್ವತಗಳಿವೆ (ಭೂಪದ್ಮಕ್ಕೆ ಕರ್ಣಿಕ ರೂಪದಲ್ಲಿರುವ ಮೇರುವಿಗೆ ಇವು ಕೇಸರಗಳಂತಿವೆ) (25-26). ತ್ರಿಕೂಟ, ಶಿಶಿರ, ಪತಂಗ, ರುಚಕ, ನಿಷಧ —ಮೊದಲಾದವು ದಕ್ಷಿಣದಲ್ಲಿರುವ ಕೇಸರ ಪರ್ವತಗಳು. ಶಿಖಿವಾಸ,

**ಶಿಖಿವಾಸಾಃ ಸವೈಡೂರ್ಯಃ ಕಪಿಲೋ ಗಂಧಮಾದನಃ।**
**ಜಾರುಧಿಪ್ರಮುಖಾಸ್ತದ್ವತ್ ಪಶ್ಚಿಮೇ ಕೇಸರಾಚಲಾಃ॥ 28**

**ಮೇರೋರನಂತರಾಂಗೇಷು ಜಠರಾದಿಷ್ವವಸ್ಥಿತಾಃ।**
**ಶಂಖಕೂಟೋಽಥ ಋಷಭೋ ಹಂಸೋ ನಾಗಸ್ತಥಾಪರಃ।**
**ಕಾಲಂಜಾದ್ಯಾಶ್ಚ ತಥಾ ಉತ್ತರೇ ಕೇಸರಾಚಲಾಃ॥ 29**

**ಚತುರ್ದಶಸಹಸ್ರಾಣಿ ಯೋಜನಾನಾಂ ಮಹಾಪುರೀ।**
**ಮೇರೋರುಪರಿ ಮೈತ್ರೇಯ ಬ್ರಹ್ಮಣಃ ಪ್ರಥಿತಾ ದಿವಿ॥ 30**

**ತಸ್ಯಾಸ್ಸಮಂತತಶ್ಚಾಷ್ಟೌ ದಿಶಾಸು ವಿದಿಶಾಸು ಚ।**
**ಇಂದ್ರಾದಿಲೋಕಪಾಲಾನಾಂ ಪ್ರಖ್ಯಾತಾಃ ಪ್ರವರಾಃ ಪುರಃ॥ 31**

**ವಿಷ್ಣುಪಾದವಿನಿಷ್ಕ್ರಾಂತಾ ಪ್ಲಾವಯಿತ್ವೇಂದುಮಂಡಲಮ್।**
**ಸಮಂತಾದ್ಬ್ರಹ್ಮಣಃ ಪುರ್ಯಾಂ ಗಂಗಾ ಪತತಿ ವೈ ದಿವಃ॥ 32**

**ಸಾ ತತ್ರ ಪತಿತಾ ದಿಕ್ಷು ಚತುರ್ಧಾ ಪ್ರತಿಪದ್ಯತೇ।**
**ಸೀತಾ ಚಾಲಕನಂದಾ ಚ ಚಕ್ಷುರ್ಭದ್ರಾ ಚ ವೈ ಕ್ರಮಾತ್॥ 33**

---

ವೈಡೂರ್ಯ, ಕಪಿಲ, ಗಂಧಮಾದನ, ಜಾರುಧಿ—ಮೊದಲಾದವು ಪಶ್ಚಿಮದಲ್ಲಿರುವ ಕೇಸರ ಪರ್ವತಗಳು (27-28). ಮೇರುವಿಗೆ ಅತಿ ಸಮೀಪದಲ್ಲಿ ಇರುವ ಜಠರಾದಿ ದೇಶಗಳಲ್ಲಿ ಶಂಖಕೂಟ, ಋಷಭ, ಹಂಸ, ನಾಗ, ಕಾಲಂಜ—ಮೊದಲಾದವು ಉತ್ತರದ ಕೇಸರ ಪರ್ವತಗಳು (29). ಮೈತ್ರೇಯ, ಮೇರುವಿನ ಮೇಲೆ ಅಂತರಿಕ್ಷದಲ್ಲಿ ಹದಿನಾಲ್ಕು ಸಾವಿರ ಯೋಜನಗಳಷ್ಟು ವಿಸ್ತಾರವಾದ ಬ್ರಹ್ಮನ ಮಹಾಪುರಿ ಇದೆ. ಆ ಮಹಾಪುರಿಯ ಸುತ್ತಲೂ ದಿಕ್ಕುವಿದಿಕ್ಕುಗಳಲ್ಲಿ ಇಂದ್ರಾದಿ ಲೋಕಪಾಲರ ಎಂಟು ನಗರಗಳು ಪ್ರಖ್ಯಾತವಾಗಿವೆ (30-31). ವಿಷ್ಣುಪಾದೋದ್ಭವೆಯಾದ ಗಂಗಾನದಿಯು ಚಂದ್ರಮಂಡಲವನ್ನು ನೆನೆಯಿಸಿ ಬ್ರಹ್ಮಪುರಿಯಲ್ಲಿ ಧುಮುಕುತ್ತದೆ. ಅಲ್ಲಿ ಧುಮುಕಿದ ಗಂಗಾನದಿಯು ನಾಲ್ಕು ಕವಲಾಗಿ ಸೀತಾ, ಅಲಕನಂದಾ, ಚಕ್ಷು, ಭದ್ರಾ—ಎಂಬ ಹೆಸರುಗಳನ್ನು ಪಡೆದಿದೆ (32-33). ಅವುಗಳಲ್ಲಿ ಸೀತಾನದಿಯು ಅಂತರಿಕ್ಷ ಮಾರ್ಗದಲ್ಲಿ ಬೆಟ್ಟದಿಂದ

**ಪೂರ್ವೇಣ ಶೈಲಾತ್ ಸೀತಾ ತು ಶೈಲಂ ಯಾತ್ಯಂತರಿಕ್ಷಗಾ।**
**ತತಶ್ಚ ಪೂರ್ವವರ್ಷೇಣ ಭದ್ರಾಶ್ವೇನೈತಿ ಸಾರ್ಣವಮ್॥** 34

**ತಥೈವಾಲಕನಂದಾಪಿ ದಕ್ಷಿಣೇನೈತ್ಯ ಭಾರತಮ್।**
**ಪ್ರಯಾತಿ ಸಾಗರಂ ಭೂತ್ವಾ ಸಪ್ತಭೇದಾ ಮಹಾಮುನೇ॥** 35

**ಚಕ್ಷುಶ್ಚ ಪಶ್ಚಿಮಗಿರೀನತೀತ್ಯ ಸಕಲಾಂಸ್ತತಃ।**
**ಪಶ್ಚಿಮಂ ಕೇತುಮಾಲಾಖ್ಯಂ ವರ್ಷಂ ಗತ್ವೈತಿ ಸಾಗರಮ್॥** 36

**ಭದ್ರಾ ತಥೋತ್ತರಗಿರೀನುತ್ತರಾಂಶ್ಚ ತಥಾ ಕುರೂನ್।**
**ಅತೀತ್ಯೋತ್ತರಮಂಭೋಧಿಂ ಸಮಭ್ಯೇತಿ ಮಹಾಮುನೇ॥** 37

**ಆನೀಲನಿಷಧಾಯಾಮೌ ಮಾಲ್ಯವದ್‌ಗಂಧಮಾದನೌ।**
**ತಯೋರ್ಮಧ್ಯಗತೋ ಮೇರುಃ ಕರ್ಣಿಕಾಕಾರಸಂಸ್ಥಿತಃ॥** 38

**ಭಾರತಾಃ ಕೇತುಮಾಲಾಶ್ಚ ಭದ್ರಾಶ್ವಾಃ ಕುರವಸ್ತಥಾ।**
**ಪತ್ರಾಣಿ ಲೋಕಪದ್ಮಸ್ಯ ಮರ್ಯಾದಾಶೈಲಬಾಹ್ಯತಃ॥** 39

---

ಬೆಟ್ಟಕ್ಕೆ ಹರಿಯುತ್ತ, ಕಡೆಗೆ ಪೂರ್ವದಿಕ್ಕಿನಲ್ಲಿರುವ ಭದ್ರಾಶ್ವ ಎಂಬ ವರ್ಷದ ಮೂಲಕ ಸಮುದ್ರವನ್ನು ಸೇರುತ್ತದೆ (34). ಹಾಗೆಯೇ ಅಲಕನಂದೆಯು ದಕ್ಷಿಣಕ್ಕೆ ಹರಿದು ಭಾರತದೇಶವನ್ನು ಸೇರಿ ಮತ್ತೆ ಏಳು ಕವಲಾಗಿ ಸಾಗರವನ್ನು ಸೇರುತ್ತದೆ. ಚಕ್ಷು ಎಂಬ ನದಿಯು ಪಶ್ಚಿಮ ಪರ್ವತಗಳನ್ನು ಹಾಯ್ದು ಅಲ್ಲಿರುವ ಕೇತುಮಾಲ ಎಂಬ ವರ್ಷದ ಮೂಲಕ ಸಮುದ್ರವನ್ನು ಸೇರುತ್ತದೆ (35-36). ಭದ್ರಾನದಿಯು ಉತ್ತರ ಗಿರಿಗಳನ್ನು ಹಾಯ್ದು ಉತ್ತರ ಕುರುವರ್ಷದ ಮೂಲಕ ಹರಿದು ಉತ್ತರ ಸಾಗರವನ್ನು ಸೇರುತ್ತದೆ. ಮೇರು ಪರ್ವತವು ನೀಲ ನಿಷಧ ಪರ್ವತಗಳಿಗೂ (ಕ್ರಮವಾಗಿ ಉತ್ತರ ಮತ್ತು ದಕ್ಷಿಣದಲ್ಲಿ) ಮಾಲ್ಯವಾನ್ ಗಂಧಮಾದನಗಳಿಗೂ (ಕ್ರಮವಾಗಿ ಪಶ್ಚಿಮ ಮತ್ತು ಪೂರ್ವಗಳಲ್ಲಿ) ನಡುವೆ ಕಮಲದ ಕರ್ಣಿಕೆಯಂತೆ ಇದೆ (37-38). ಮೈತ್ರೇಯ, ಈ ಮರ್ಯಾದಾ ಪರ್ವತಗಳ ಹೊರಗಡೆ ಇರುವ ಭಾರತ, ಕೇತುಮಾಲ, ಭದ್ರಾಶ್ವ ಮತ್ತು ಉತ್ತರ ಕುರುದೇಶಗಳು ಲೋಕಪದ್ಮದ ದಳಗಳು. ಜಠರ, ದೇವಕೂಟ—

**ಜಠರೋ ದೇವಕೂಟಶ್ಚ ಮರ್ಯಾದಾಪರ್ವತಾವುಭೌ।**
**ತೌ ದಕ್ಷಿಣೋತ್ತರಾಯಾಮಾವಾನೀಲನಿಷಧಾಯತೌ॥ 40**

**ಗಂಧಮಾದನಕೈಲಾಸೌ ಪೂರ್ವಪಶ್ಚಾಯತಾವುಭೌ।**
**ಅಶೀತಿಯೋಜನಾಯಾಮಾವರ್ಣವಾಂತರ್ವ್ಯವಸ್ಥಿತೌ॥ 41**

**ನಿಷಧಃ ಪಾರಿಯಾತ್ರಶ್ಚ ಮರ್ಯಾದಾಪರ್ವತಾವುಭೌ।**
**ಮೇರೋಃ ಪಶ್ಚಿಮದಿಗ್ಭಾಗೇ ಯಥಾಪೂರ್ವೇ ತಥಾ ಸ್ಥಿತೌ॥ 42**

**ತ್ರಿಶೃಂಗೋ ಜಾರುಧಿಶ್ಚೈವ ಉತ್ತರೌ ವರ್ಷಪರ್ವತೌ।**
**ಪೂರ್ವಪಶ್ಚಾಯತಾವೇತಾವರ್ಣವಾಂತರ್ವ್ಯವಸ್ಥಿತೌ॥ 43**

**ಇತ್ಯೇತೇ ಮುನಿವರ್ಯೋಕ್ತಾ ಮರ್ಯಾದಾಪರ್ವತಾಸ್ತವ।**
**ಜಠರಾದ್ಯಾಃ ಸ್ಥಿತಾ ಮೇರೋಸ್ತೇಷಾಂ ದ್ವೌ ದ್ವೌ ಚತುರ್ದಿಶಮ್॥**

**ಮೇರೋಶ್ಚತುರ್ದಿಶಂ ಯೇ ತು ಪ್ರೋಕ್ತಾಃ ಕೇಸರಪರ್ವತಾಃ।**
**ಶೀತಾಂತಾದ್ಯಾ ಮುನೇ ತೇಷಾಮತೀವ ಹಿ ಮನೋರಮಾಃ॥ 45**

---

ಎಂಬೆರಡು ಪರ್ವತಪಂಕ್ತಿಗಳು ದಕ್ಷಿಣೋತ್ತರವಾಗಿ ಹಬ್ಬಿ ನೀಲ ಮತ್ತು ನಿಷಧ ಪರ್ವತಗಳನ್ನು ಸೇರಿಸುತ್ತದೆ (39-40). ಗಂಧಮಾದನ, ಕೈಲಾಸಗಳೆಂಬ ಪರ್ವತ ಪಂಕ್ತಿಗಳು ಪೂರ್ವ ಪಶ್ಚಿಮವಾಗಿ ಎಂಬತ್ತು ಯೋಜನಗಳವರೆಗೆ ಹರಡಿ ಸಮುದ್ರ ಪರ್ಯಂತ ವ್ಯಾಪಿಸಿವೆ. ಪೂರ್ವ ದಿಕ್ಕಿನಲ್ಲಿರುವಂತೆ ಮೇರುವಿನ ಪಶ್ಚಿಮದಲ್ಲಿಯೂ ನಿಷಧ ಮತ್ತು ಪಾರಿಯಾತ್ರಗಳೆಂಬ ಮರ್ಯಾದಾಪರ್ವತಗಳು ಹರಡಿವೆ (41-42). ತ್ರಿಶೃಂಗ, ಜಾರುಧಿ ಎಂದೆರಡು ಉತ್ತರ ದಿಕ್ಕಿನ ವರ್ಷಪರ್ವತಗಳು ಪೂರ್ವ ಪಶ್ಚಿಮವಾಗಿ ಹಬ್ಬಿ ಸಮುದ್ರ ಪರ್ಯಂತ ವ್ಯಾಪಿಸಿವೆ. ಮೈತ್ರೇಯ, ಜಠರ—ಮುಂತಾದ ಮರ್ಯಾದಾಪರ್ವತಗಳ ವಿಷಯವನ್ನು ನಿನಗೆ ಹೇಳಿದೆನು. ಇವುಗಳಲ್ಲಿ ಎರಡೆರಡು ಪರ್ವತಗಳು ಮೇರುವಿನ ನಾಲ್ಕು ದಿಕ್ಕುಗಳಲ್ಲಿಯೂ ಇವೆ (43-44). ಮೇರುವಿನ ನಾಲ್ಕು ದಿಕ್ಕುಗಳಲ್ಲಿ ಶೀತಾಂತ—ಮೊದಲಾದ ಕೇಸರ ಪರ್ವತಗಳಿವೆಯೆಂದು ಹೇಳಿದೆನಷ್ಟೆ; ಆ ಶೈಲಗಳ ನಡುವೆ ಮನೋಹರವಾದ ಕಂದಕಗಳಿವೆ.

**ಶೈಲಾನಾಮಂತರೇ ದ್ರೋಣ್ಯಃ ಸಿದ್ಧಚಾರಣಸೇವಿತಾಃ।**
**ಸುರಮ್ಯಾಣಿ ತಥಾ ತಾಸು ಕಾನನಾನಿ ಪುರಾಣಿ ಚ॥ 46**

**ಲಕ್ಷ್ಮೀವಿಷ್ಣ್ವಗ್ನಿಸೂರ್ಯಾದಿದೇವಾನಾಂ ಮುನಿಸತ್ತಮ।**
**ತಾಸ್ವಾಯತನವರ್ಯಾಣಿ ಜುಷ್ಟಾನಿ ವರಕಿನ್ನರೈಃ॥ 47**

**ಗಂಧರ್ವಯಕ್ಷರಕ್ಷಾಂಸಿ ತಥಾ ದೈತೇಯದಾನವಾಃ।**
**ಕ್ರೀಡಂತಿ ತಾಸು ರಮ್ಯಾಸು ಶೈಲದ್ರೋಣೀಷ್ವಹರ್ನಿಶಮ್॥ 48**

**ಭೌಮಾ ಹ್ಯೇತೇ ಸ್ಮೃತಾಃ ಸ್ವರ್ಗಾಃ ಧರ್ಮಿಣಾಮಾಲಯಾ ಮುನೇ।**
**ನೈತೇಷು ಪಾಪಕರ್ಮಾಣೋ ಯಾಂತಿ ಜನ್ಮಶತೈರಪಿ॥ 49**

**ಭದ್ರಾಶ್ವೇ ಭಗವಾನ್ ವಿಷ್ಣುರಾಸ್ತೇ ಹಯಶಿರಾ ದ್ವಿಜ।**
**ವರಾಹಃ ಕೇತುಮಾಲೇ ತು ಭಾರತೇ ಕೂರ್ಮರೂಪಧೃಕ್॥ 50**

**ಮತ್ಸ್ಯರೂಪಶ್ಚ ಗೋವಿಂದಃ ಕುರುಷ್ವಾಸ್ತೇ ಜನಾರ್ದನಃ।**
**ವಿಶ್ವರೂಪೇಣ ಸರ್ವತ್ರ ಸರ್ವಃ ಸರ್ವತ್ರಗೋ ಹರಿಃ॥ 51**

---

ಅವನ್ನು ಸಿದ್ಧ ಚಾರಣರು ಉಪಯೋಗಿಸುತ್ತಾರೆ. ಅಲ್ಲಿ ಕಾನನಗಳೂ ಪುರಗಳೂ ಇವೆ (45-46). ಅಲ್ಲಿ ಲಕ್ಷ್ಮಿ, ವಿಷ್ಣು, ಅಗ್ನಿ, ಸೂರ್ಯ—ಮೊದಲಾದ ದೇವತೆಗಳ ಮಂದಿರಗಳಿವೆ. ಕಿನ್ನರರು ಅಲ್ಲಿ ಸೇವೆ ಸಲ್ಲಿಸುತ್ತಾರೆ. ಶೈಲಗಳ ನಡುವೆ ಇರುವ ಕಂದಕಗಳಲ್ಲಿ ಗಂಧರ್ವಯಕ್ಷ ರಕ್ಷೋಗಣಗಳೂ ದೈತ್ಯದಾನವರೂ ಹಗಲು ರಾತ್ರಿಗಳಲ್ಲಿಯೂ ವಿಹರಿಸುತ್ತಾರೆ (47-48). ಮೈತ್ರೇಯ, ಅವು ಧರ್ಮಶೀಲರಿಗೆ ದೊರಕತಕ್ಕ ಭೂಸ್ವರ್ಗಗಳು. ನೂರು ಜನ್ಮ ಕಳೆದರೂ ಪಾಪಿಗಳು ಅಲ್ಲಿಗೆ ಹೋಗಲಾರರು. ಭದ್ರಾಶ್ವದೇಶದಲ್ಲಿ ವಿಷ್ಣು ಹಯಗ್ರೀವನಾಗಿರುತ್ತಾನೆ. ಕೇತುಮಾಲದಲ್ಲಿ ವರಾಹರೂಪದಿಂದಲೂ, ಭಾರತದಲ್ಲಿ ಕೂರ್ಮರೂಪದಿಂದಲೂ ಇರುತ್ತಾನೆ (49-50). ಉತ್ತರ ಕುರುವರ್ಷದಲ್ಲಿ ಜನಾರ್ದನನು ಮತ್ಸ್ಯರೂಪದಿಂದ ಇರುತ್ತಾನೆ. ಸರ್ವನೂ ಸರ್ವಗನೂ ಆದ ಶ್ರೀಹರಿಯು ಸರ್ವತ್ರ ವಿಶ್ವರೂಪದಿಂದ ಇದ್ದಾನೆ (51). ಆತನು ಸರ್ವಾತ್ಮಕನಾಗಿ ಸರ್ವಕ್ಕೂ ಆಧಾರನಾದವನು. ಮೈತ್ರೇಯ, ಕಿಂಪುರುಷ—ಮುಂತಾದ

**ಸರ್ವಸ್ಯಾಧಾರಭೂತೋಽಸೌ ಮೈತ್ರೇಯಾಸ್ತೇಽಖಿಲಾತ್ಮಕಃ॥ 52**

**ಯಾನಿ ಕಿಂಪುರುಷಾದೀನಿ ವರ್ಷಾಣ್ಯಷ್ಟೌ ಮಹಾಮುನೇ।**
**ನ ತೇಷು ಶೋಕೋ ನಾಯಾಸೋ ನೋದ್ವೇಗಃ**
**ಕ್ಷುದ್ಭಯಾದಿಕಮ್॥ 53**

**ಸ್ವಸ್ಥಾಃ ಪ್ರಜಾ ನಿರಾತಂಕಾಸ್ಸರ್ವದುಃಖವಿವರ್ಜಿತಾಃ।**
**ದಶದ್ವಾದಶವರ್ಷಾಣಾಂ ಸಹಸ್ರಾಣಿ ಸ್ಥಿರಾಯುಷಃ॥ 54**

**ನ ತೇಷು ವರ್ಷತೇ ದೇವೋ ಭೌಮಾನ್ಯಂಭಾಂಸಿ ತೇಷು ವೈ।**
**ಕೃತತ್ರೇತಾದಿಕಂ ನೈವ ತೇಷು ಸ್ಥಾನೇಷು ಕಲ್ಪನಾ॥ 55**

**ಸರ್ವೇಷ್ವೇತೇಷು ವರ್ಷೇಷು ಸಪ್ತ ಸಪ್ತ ಕುಲಾಚಲಾಃ।**
**ನದ್ಯಶ್ಚ ಶತಶಸ್ತೇಭ್ಯಃ ಪ್ರಸೂತಾ ಯಾ ದ್ವಿಜೋತ್ತಮ॥ 56**

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ದ್ವಿತೀಯೋಽಧ್ಯಾಯಃ

---

ಯಾವ ಎಂಟು ವರ್ಷಗಳುಂಟೋ ಅಲ್ಲಿ, ಶೋಕ, ಆಯಾಸ, ಉದ್ವೇಗ, ಹಸಿವು, ಭಯ ಮುಂತಾದ ಇವಾವುದೂ ಇಲ್ಲ (52-53). ಅಲ್ಲಿರುವ ಪ್ರಜೆಗಳು ಆರೋಗ್ಯಶಾಲಿಗಳಾಗಿ ಆತಂಕ, ದುಃಖಗಳಿಲ್ಲದೆ ಇರುತ್ತಾರೆ. ಹತ್ತು ಹನ್ನೆರಡು ಸಾವಿರ ವರ್ಷಗಳವರೆಗೆ ಸ್ಥಿರವಾಗಿ ಬಾಳುತ್ತಾರೆ (54). ಅಲ್ಲಿ ಮಳೆ ಸುರಿಯುವುದಿಲ್ಲ. ನೆಲದಲ್ಲಿ ಸಮೃದ್ಧವಾಗಿ ಜಲವಿರುತ್ತದೆ. ಆ ದೇಶಗಳಲ್ಲಿ ಕೃತ ತ್ರೇತಾದಿ ಯುಗಗಳ ಕಲ್ಪನೆ ಇಲ್ಲ. ಆ ಎಲ್ಲ ವರ್ಷ ಗಳಲ್ಲಿಯೂ ಏಳು ಏಳು ಕುಲಪರ್ವತಗಳಿವೆ. ಅವುಗಳಿಂದ ನೂರಾರು ನದಿಗಳು ಹುಟ್ಟಿವೆ (55-56).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಎರಡನೆಯ ಅಧ್ಯಾಯ ಮುಗಿಯಿತು.



## ತೃತೀಯೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಉತ್ತರಂ ಯತ್ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಮ್ ।**
**ವರ್ಷಂ ತದ್ಭಾರತಂ ನಾಮ ಭಾರತೀ ಯತ್ರ ಸಂತತಿಃ ॥** 1

**ನವಯೋಜನಸಹಸ್ರೋ ವಿಸ್ತಾರೋಽಸ್ಯ ಮಹಾಮುನೇ ।**
**ಕರ್ಮಭೂಮಿರಿಯಂ ಸ್ವರ್ಗಮಪವರ್ಗಂ ಚ ಗಚ್ಛತಾಮ್ ॥** 2

**ಮಹೇಂದ್ರೋ ಮಲಯಃ ಸಹ್ಯಃ ಶುಕ್ತಿಮಾನೃಕ್ಷಪರ್ವತಃ ।**
**ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತಾತ್ರ ಕುಲಪರ್ವತಾಃ ॥** 3

**ಅತಃ ಸಂಪ್ರಾಪ್ಯತೇ ಸ್ವರ್ಗೋ ಮುಕ್ತಿಮಸ್ಮಾತ್ಪ್ರಯಾಂತಿ ವೈ ।**
**ತಿರ್ಯಕ್ತ್ವಂ ನರಕಂ ಚಾಪಿ ಯಾಂತ್ಯತಃ ಪುರುಷಾ ಮುನೇ ॥** 4

---

### ಅಧ್ಯಾಯ 3

ಭಾರತಾದಿ ನವಖಂಡಗಳ ವಿಭಾಗ

ಪರಾಶರರು ಹೇಳಿದರು: ಸಮುದ್ರಕ್ಕೆ ಉತ್ತರದಲ್ಲಿ ಮತ್ತು ಹಿಮಾಲಯದ ದಕ್ಷಿಣದಲ್ಲಿ ಇರತಕ್ಕ ದೇಶಕ್ಕೆ ಭಾರತ ವರ್ಷವೆಂದು ಹೆಸರು. ಭರತನ ಸಂತತಿ ಇಲ್ಲಿ ನೆಲೆಸಿದೆ (1). ಇದು ಒಂಬತ್ತು ಸಾವಿರ ಯೋಜನಗಳ ವಿಸ್ತಾರ (ಸುತ್ತಳತೆ) ಉಳ್ಳದ್ದು. ಸ್ವರ್ಗವನ್ನು ಮತ್ತು ಮೋಕ್ಷ ವನ್ನು ಸೇರತಕ್ಕವರಿಗೆ ಭಾರತವರ್ಷವು ಕರ್ಮಭೂಮಿಯಾಗಿದೆ (2). ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರ —ಇವು ಏಳು ಇಲ್ಲಿರುವ ಕುಲಪರ್ವತಗಳು. ಮೈತ್ರೇಯ, ಈ ಕರ್ಮ ಭೂಮಿಯಿಂದ ಸ್ವರ್ಗವು ಪ್ರಾಪ್ತವಾಗುತ್ತದೆ. ಇಲ್ಲಿಂದಲೇ ಮುಕ್ತಿಯನ್ನೈದು ತ್ತಾರೆ. ತಿರ್ಯಗ್ಯೋನಿಯನ್ನು ನರಕವನ್ನು ಪಡೆಯುವುದು ಇಲ್ಲಿಂದಲೇ (3-4). ಇಲ್ಲಿಂದಲೇ (ಕರ್ಮಾನುಸಾರವಾಗಿ) ಸ್ವರ್ಗ, ಮೋಕ್ಷ, ಅಂತರಿಕ್ಷ

**ಇತಃ ಸ್ವರ್ಗಶ್ಚ ಮೋಕ್ಷಶ್ಚ ಮಧ್ಯಂ ಚಾಂತಶ್ಚ ಗಮ್ಯತೇ।**
**ನ ಖಲ್ವನ್ಯತ್ರ ಮರ್ತ್ಯಾನಾಂ ಕರ್ಮಭೂಮೌ ವಿಧೀಯತೇ॥ 5**

**ಭಾರತಸ್ಯಾಸ್ಯ ವರ್ಷಸ್ಯ ನವಭೇದಾನ್ನಿಶಾಮಯ।**
**ಇಂದ್ರದ್ವೀಪಃ ಕಸೇರುಶ್ಚ ತಾಮ್ರಪರ್ಣೋ ಗಭಸ್ತಿಮಾನ್॥ 6**

**ನಾಗದ್ವೀಪಸ್ತಥಾ ಸೌಮ್ಯೋ ಗಂಧರ್ವಸ್ತ್ವಥ ವಾರುಣಃ।**
**ಅಯಂ ತು ನವಮಸ್ತೇಷಾಂ ದ್ವೀಪಃ ಸಾಗರಸಂವೃತಃ॥ 7**

**ಯೋಜನಾನಾಂ ಸಹಸ್ರಂ ತು ದ್ವೀಪೋಽಯಂ ದಕ್ಷಿಣೋತ್ತರಾತ್।**
**ಪೂರ್ವೇ ಕಿರಾತಾ ಯಸ್ಯಾಂತೇ ಪಶ್ಚಿಮೇ ಯವನಾಃ ಸ್ಥಿತಾಃ॥ 8**

---

ಲೋಕ, ಪಾತಾಳಾದಿ ಎಲ್ಲವೂ ದೊರೆಯುತ್ತವೆ. ಮಾನವರಿಗೆ ಭಾರತ ವರ್ಷವನ್ನು ಬಿಟ್ಟು ಬೇರೆ ಎಲ್ಲಿಯೂ ಕರ್ಮವು ವಿಹಿತವಾಗಿಲ್ಲ (5). ಈ ಭಾರತ ದೇಶದಲ್ಲಿ ಒಂಬತ್ತು ವಿಭಾಗಗಳಿವೆ. ಅವನ್ನು ಕೇಳು. ಇಂದ್ರದ್ವೀಪ, ಕಸೇರು, ತಾಮ್ರಪರ್ಣ, ಗಭಸ್ತಿಮಾನ್, ನಾಗದ್ವೀಪ, ಸೌಮ್ಯ, ಗಂಧರ್ವ, ವಾರುಣ. ಅವುಗಳಲ್ಲಿ ಒಂಬತ್ತನೆಯ* ಈ ದ್ವೀಪವಾದರೋ ಸಮುದ್ರ ದಿಂದ ಸುತ್ತುವರಿಯಲ್ಪಟ್ಟಿದೆ (6-7). ಈ ದ್ವೀಪವು (ಭಾರತವರ್ಷವು) ದಕ್ಷಿಣೋತ್ತರವಾಗಿ ಒಂದು ಸಾವಿರ ಯೋಜನವಿದೆ. ಇದರ ಪೂರ್ವದಲ್ಲಿ ಕಿರಾತರೂ ಪಶ್ಚಿಮದಲ್ಲಿ ಯವನರೂ ವಾಸವಾಗಿದ್ದಾರೆ. ಮಧ್ಯದಲ್ಲಿರ ತಕ್ಕವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ—ಎಂದು ನಾಲ್ಕು ವಿಭಾಗ ವಾಗಿದ್ದಾರೆ. ಯಜ್ಞ, ಶಸ್ತ್ರಧಾರಣ, ವಾಣಿಜ್ಯ—ಮುಂತಾದ ವೃತ್ತಿಗಳನ್ನು

---

* ಈ ಒಂಬತ್ತನೆಯ ವಿಭಾಗಕ್ಕೆ ಯಾವ ಗ್ರಂಥದಲ್ಲಿಯೂ ಹೆಸರನ್ನು ತಿಳಿಸದೆ ಹೀಗೆಯೇ ಬಿಡಲಾಗಿದೆಯೆಂದು ಶ್ರೀ H. H. Wilson ಬರೆಯುತ್ತಾರೆ. ಇದು ಈಗಿನ ಇಂಡಿಯಾ ದೇಶವೆಂಬುದರಲ್ಲಿ ಸಂದೇಹವಿಲ್ಲವೆಂದೂ ಅವರು ಹೇಳಿದ್ದಾರೆ. ಕರ್ಮಾನುಷ್ಠಾನದ ಸಂಕಲ್ಪದಲ್ಲಿ 'ಭರತಖಂಡೇ ಭಾರತವರ್ಷೇ' ಎನ್ನುವುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಇವೆರಡರ ಭೇದವೂ ತಿಳಿಯದು. ಸಮಗ್ರ ಭಾರತ ವರ್ಷವನ್ನೇ ಒಂಬತ್ತನೆಯ ಭೇದವೆಂದು ತಿಳಿಯಬಹುದು.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಶ್ಚ ಭಾಗಶಃ।**
**ಇಜ್ಯಾಯುಧವಣಿಜ್ಯಾದ್ಯೈರ್ವರ್ತಯಂತೋ ವ್ಯವಸ್ಥಿತಾಃ॥ 9**

**ಶತದ್ರುಚಂದ್ರಭಾಗಾದ್ಯಾ ಹಿಮವತ್ಪಾದನಿರ್ಗತಾಃ।**
**ವೇದಸ್ಮೃತಿಮುಖಾದ್ಯಶ್ಚ ಪಾರಿಯಾತ್ರೋದ್ಭವಾ ಮುನೇ॥ 10**

**ನರ್ಮದಾ ಸುರಸಾದ್ಯಾಶ್ಚ ನದ್ಯೋ ವಿಂಧ್ಯಾದ್ರಿನಿರ್ಗತಾಃ।**
**ತಾಪೀಪಯೋಷ್ಣೀನಿರ್ವಿಂಧ್ಯಾ ಪ್ರಮುಖಾ ಋಕ್ಷಸಂಭವಾಃ॥ 11**

**ಗೋದಾವರೀಭೀಮರಥೀಕೃಷ್ಣವೇಣ್ಯಾದಿಕಾಸ್ತಥಾ।**
**ಸಹ್ಯಪಾದೋದ್ಭವಾ ನದ್ಯಃ ಸ್ಮೃತಾಃ ಪಾಪಭಯಾಪಹಾಃ॥ 12**

**ಕೃತಮಾಲಾತಾಮ್ರಪರ್ಣೀಪ್ರಮುಖಾ ಮಲಯೋದ್‌ಭವಾಃ।**
**ತ್ರಿಸಾಮಾ ಚಾರ್ಯಕುಲ್ಯಾದ್ಯಾ ಮಹೇಂದ್ರಪ್ರಭವಾಃ ಸ್ಮೃತಾಃ॥ 13**

**ಋಷಿಕುಲ್ಯಾಕುಮಾರಾದ್ಯಾಃ ಶುಕ್ತಿಮತ್ಪಾದಸಂಭವಾಃ।**
**ಆಸಾಂ ನದ್ಯುಪನದ್ಯಶ್ಚ ಸಂತ್ಯನ್ಯಾಶ್ಚ ಸಹಸ್ರಶಃ॥ 14**

---

ನಡೆಸುತ್ತ ಇವರು ವ್ಯವಸ್ಥಿತರಾಗಿದ್ದಾರೆ (8-9). ಶತದ್ರು, ಚಂದ್ರಭಾಗ— ಮೊದಲಾದ ನದಿಗಳು ಹಿಮಾಲಯದ ತಪ್ಪಲಿನಿಂದ ಹೊರಟಿವೆ. ವೇದಸ್ಮೃತಿ ಮುಂತಾದ ನದಿಗಳು ಪಾರಿಯತ್ರ ಪರ್ವತದಿಂದ ಹರಿಯುತ್ತವೆ (10). ನರ್ಮದಾ, ಸುರಸಾ—ಮೊದಲಾದ ನದಿಗಳು ವಿಂಧ್ಯ ಪರ್ವತದಿಂದ ಹುಟ್ಟಿವೆ. ತಾಪೀ, ಪಯೋಷ್ಣೀ, ನಿರ್ವಿಂಧ್ಯಾ— ಮೊದಲಾದವು ಋಕ್ಷಗಿರಿಸಂಭೂತವಾದವು. ಗೋದಾವರೀ, ಭೀಮರಥೀ, ಕೃಷ್ಣವೇಣೀ—ಮೊದಲಾದವು ಸಹ್ಯ ಪರ್ವತಶ್ರೇಣಿಯಿಂದ ಹರಿಯುತ್ತಿರುವ ಪುಣ್ಯ ನದಿಗಳು (11-12). ಕೃತಮಾಲಾ, ತಾಮ್ರಪರ್ಣೀ —ಮುಂತಾದವು ಮಲಯ ಗಿರಿಯಿಂದಲೂ ತ್ರಿಸಾಮಾ, ಆರ್ಯಕುಲ್ಯಾ —ಮುಂತಾದವು ಮಹೇಂದ್ರಗಿರಿಯಿಂದಲೂ ಋಷಿಕುಲ್ಯಾ, ಕುಮಾರ— ಮುಂತಾದವು ಶುಕ್ತಿಮತ್ ಪರ್ವತದಿಂದಲೂ ಹುಟ್ಟಿ ಹರಿಯುವ ನದಿಗಳು. ಅಲ್ಲದೆ ಇತರ ನದಿಗಳೂ ಉಪನದಿಗಳೂ ಸಾವಿರಾರು ಇವೆ (13-14). ಆ ನದೀತೀರಗಳಲ್ಲಿ ಕುರು, ಪಾಂಚಾಲ, ಮಧ್ಯದೇಶ ನಿವಾಸಿ

**ತಾಸ್ವಿಮೇ ಕುರುಪಾಂಚಾಲಾ ಮಧ್ಯದೇಶಾದಯೋ ಜನಾಃ।**
**ಪೂರ್ವದೇಶಾದಿಕಾಶ್ಚೈವ ಕಾಮರೂಪನಿವಾಸಿನಃ॥** 15

**ಪುಂಡ್ರಾಃ ಕಲಿಂಗಾ ಮಗಧಾ ದಕ್ಷಿಣಾದ್ಯಾಶ್ಚ ಸರ್ವಶಃ।**
**ತಥಾಪರಾಂತಾಃ ಸೌರಾಷ್ಟ್ರಾಃ ಶೂರಾಭೀರಾಸ್ತಥಾರ್ಬುದಾಃ॥** 16

**ಕಾರೂಷಾ ಮಾಲವಾಶ್ಚೈವ ಪಾರಿಯಾತ್ರನಿವಾಸಿನಃ।**
**ಸೌವೀರಾಃ ಸೈಂಧವಾ ಹೂಣಾಃ ಸಾಲ್ವಾಃ ಕೋಸಲವಾಸಿನಃ।**
**ಮಾದ್ರಾರಾಮಾಸ್ತಥಾಂಬಷ್ಠಾಃ ಪಾರಸೀಕಾದಯಸ್ತಥಾ॥** 17

**ಆಸಾಂ ಪಿಬಂತಿ ಸಲಿಲಂ ವಸಂತಿ ಸಹಿತಾಃ ಸದಾ।**
**ಸಮೀಪತೋ ಮಹಾಭಾಗ ಹೃಷ್ಟಪುಷ್ಟಜನಾಕುಲಾಃ॥** 18

**ಚತ್ವಾರಿ ಭಾರತೇ ವರ್ಷೇ ಯುಗಾನ್ಯತ್ರ ಮಹಾಮುನೇ।**
**ಕೃತಂ ತ್ರೇತಾ ದ್ವಾಪರಂಚ ಕಲಿಶ್ಚಾನ್ಯತ್ರ ನ ಕ್ವಚಿತ್॥** 19

**ತಪಸ್ತಪ್ಯಂತಿ ಮುನಯೋ ಜುಹ್ವತೇ ಚಾತ್ರ ಯಜ್ವಿನಃ।**
**ದಾನಾನಿ ಚಾತ್ರ ದೀಯಂತೇ ಪರಲೋಕಾರ್ಥಮಾದರಾತ್॥** 20

---

ಗಳೂ ಕಾಮರೂಪ ಮುಂತಾದ ಪೂರ್ವದೇಶ ವಾಸಿಗಳೂ ಪುಂಡ್ರ, ಕಲಿಂಗ, ಮಗಧ, ಮತ್ತು ಅನ್ಯ ದಾಕ್ಷಿಣಾತ್ಯರೂ ಇದ್ದಾರೆ. ಅಪರಾಂತ, ಸೌರಾಷ್ಟ್ರ, ಶೂರ, ಅಭೀರ, ಅರ್ಬುದರೂ ಇದ್ದಾರೆ (15-16). ಕಾರೂಷ, ಮಾಲವ, ಪಾರಿಯಾತ್ರ, ನಿವಾಸಿಗಳೂ ಸೌವೀರ, ಸೈಂಧವ, ಹೂಣ, ಸಾಲ್ವ, ಕೋಲಸವಾಸಿಗಳೂ ಮಾದ್ರ, ಆರಾಮ, ಅಂಬಷ್ಠ, ಪಾರಸೀಕ ಮೊದಲಾದವರೂ ಈ ಭರತಖಂಡದಲ್ಲಿದ್ದಾರೆ (17). ಇವರೆಲ್ಲರೂ ಜೊತೆಯಾಗಿ ವಾಸಮಾಡುತ್ತ ಹಿಂದೆ ಹೇಳಿದ ನದಿಗಳ ಜಲವನ್ನು ಕುಡಿಯುತ್ತ ಇದ್ದಾರೆ. ಈ ಜನಪದಗಳಲ್ಲಿರತಕ್ಕ ಪ್ರಜೆಗಳು ಹೃಷ್ಟಪುಷ್ಟ ರಾಗಿದ್ದಾರೆ (18). ಮೈತ್ರೇಯ, ಈ ಭಾರತ ವರ್ಷದಲ್ಲಿ ಕೃತ, ತ್ರೇತಾ, ದ್ವಾಪರ, ಕಲಿ—ಎಂಬ ನಾಲ್ಕು ಯುಗಗಳು ಪ್ರವರ್ತಿಸುತ್ತವೆ. ಇವು ಬೇರೆ ಇನ್ನೆಲ್ಲಿಯೂ ಇಲ್ಲ. ಇಲ್ಲಿ ಪರಲೋಕಾರ್ಥವಾಗಿ ನಿಷ್ಠೆಯಿಂದ ಮುನಿಗಳು ತಪಸ್ಸನ್ನಾಚರಿಸುತ್ತಾರೆ. ಯಾಜಕರು ಯಜ್ಞ ಮಾಡುತ್ತಾರೆ. ದಾನಿಗಳು

**ಪುರುಷೈರ್ಯಜ್ಞಪುರುಷೋ ಜಂಬೂದ್ವೀಪೇ ಸದೇಜ್ಯತೇ।**
**ಯಜ್ಞೈರ್ಯಜ್ಞಮಯೋ ವಿಷ್ಣುರನ್ಯದ್ವೀಪೇಷು ಚಾನ್ಯಥಾ॥ 21**

**ಅತ್ರಾಪಿ ಭಾರತಂ ಶ್ರೇಷ್ಠಂ ಜಂಬೂದ್ವೀಪೇ ಮಹಾಮುನೇ।**
**ಯತೋ ಹಿ ಕರ್ಮಭೂರೇಷಾ ಹ್ಯತೋಽನ್ಯಾ**
**ಭೋಗಭೂಮಯಃ॥ 22**

**ಅತ್ರಜನ್ಮಸಹಸ್ರಾಣಾಂ ಸಹಸ್ರೈರಪಿ ಸತ್ತಮ।**
**ಕದಾಚಿಲ್ಲಭತೇ ಜಂತುರ್ಮಾನುಷ್ಯಂ ಪುಣ್ಯಸಂಚಯಾತ್॥ 23**

**ಗಾಯಂತಿ ದೇವಾಃ ಕಿಲ ಗೀತಕಾನಿ**
**ಧನ್ಯಾಸ್ತು ತೇ ಭಾರತಭೂಮಿಭಾಗೇ।**
**ಸ್ವರ್ಗಾಪವರ್ಗಾಸ್ಪದಮಾರ್ಗಭೂತೇ**
**ಭವಂತಿ ಭೂಯಃ ಪುರುಷಾಃ ಸುರತ್ವಾತ್॥ 24**

---

ದಾನ ಮಾಡುತ್ತಾರೆ (19-20). ಜಂಬೂದ್ವೀಪದಲ್ಲಿ ಯಜ್ಞಪುರುಷನಾದ ವಿಷ್ಣು ಯಜ್ಞಾದಿದ್ವಾರಾ ಸದಾ ಅರ್ಚಿಸಲ್ಪಡುತ್ತಿದ್ದಾನೆ. ಅನ್ಯದ್ವೀಪಗಳಲ್ಲಿ ಬೇರೊಂದು ಪ್ರಕಾರದಿಂದ ಪೂಜಿಸಲ್ಪಡುತ್ತಾನೆ (21). ಮೈತ್ರೇಯ, ಜಂಬೂ ದ್ವೀಪದಲ್ಲಿಯೂ ಭಾರತ ವರ್ಷವು ಸರ್ವಶ್ರೇಷ್ಠವಾದುದು. ಏಕೆಂದರೆ, ಇದು ಕರ್ಮಭೂಮಿ. ಉಳಿದವು ಭೋಗ ಭೂಮಿಗಳು. ಎಷ್ಟೋ ಸಾವಿರಾರು ಜನ್ಮಗಳು ಕಳೆದ ಮೇಲೆ, ಸಂಗ್ರಹಿಸಿದ ಪುಣ್ಯಬಲ ದಿಂದ, ಯಾವಾಗಲೋ ಒಮ್ಮೆ ಭರತಖಂಡದಲ್ಲಿ ಜೀವಿಗೆ ಮನುಷ್ಯಜನ್ಮ ಬರುತ್ತದೆ! (22-23). ಮೈತ್ರೇಯ, ದೇವತೆಗಳು ತಮ್ಮಲ್ಲಿ ಹೀಗೆ ಹಾಡಿ ಕೊಳ್ಳುತ್ತಾರೆ: "ಆಹಾ! ಭರತಖಂಡದಲ್ಲಿ ಹುಟ್ಟತಕ್ಕ ಜನರೇ ಧನ್ಯರು! ದೇವತೆಗಳಿಗಿಂತ ಈ ಮನುಷ್ಯಜನ್ಮ ಉತ್ತಮ! ಸ್ವರ್ಗ ಮತ್ತು ಮೋಕ್ಷಗಳಿಗೆ ಅವಕಾಶವಿರುವ ಮಾರ್ಗವನ್ನು ತೋರಿಸತಕ್ಕ ಕರ್ಮಭೂಮಿ ಅದು! (24). ಈ ಕರ್ಮಭೂಮಿಯಲ್ಲಿ ಜನ್ಮವನ್ನು ಪಡೆದು ಫಲಾಶೆಯಿಲ್ಲದ ನಿಷ್ಕಾಮ ಕರ್ಮಗಳನ್ನು ಪರಮಾತ್ಮನಾದ ವಿಷ್ಣುವಿಗೆ ಸಮರ್ಪಿಸಿ ನಿರ್ಮಲ ರಾಗಿ, ಅನಂತನಾದ ಭಗವಂತನಲ್ಲಿ ಲಯ ಹೊಂದತಕ್ಕ ಭರತಖಂಡ

**ಕರ್ಮಾಣ್ಯಸಂಕಲ್ಪಿತತತ್ಫಲಾನಿ**
**ಸಂನ್ಯಸ್ಯ ವಿಷ್ಣೌ ಪರಮಾತ್ಮಭೂತೇ।**
**ಅವಾಪ್ಯ ತಾಂ ಕರ್ಮಮಹೀಮನಂತೇ**
**ತಸ್ಮಿನ್‌ಲಯಂ ಯೇ ತ್ವಮಲಾಃ ಪ್ರಯಾಂತಿ॥** 25

**ಜಾನೀಮ ನೈತತ್ ಕ್ವ ವಯಂ ವಿಲೀನೇ**
**ಸ್ವರ್ಗಪ್ರದೇ ಕರ್ಮಣಿ ದೇಹಬಂಧಮ್।**
**ಪ್ರಾಪ್ಸ್ಯಾಮ ಧನ್ಯಾಃ ಖಲು ತೇ ಮನುಷ್ಯಾ**
**ಯೇ ಭಾರತೇ ನೇಂದ್ರಿಯವಿಪ್ರಹೀನಾಃ॥** 26

**ನವವರ್ಷಂ ತು ಮೈತ್ರೇಯ ಜಂಬೂದ್ವೀಪಮಿದಂ ಮಯಾ।**
**ಲಕ್ಷಯೋಜನವಿಸ್ತಾರಂ ಸಂಕ್ಷೇಪಾತ್ ಕಥಿತಂ ತವ॥** 27

**ಜಂಬೂದ್ವೀಪಂ ಸಮಾವೃತ್ಯ ಲಕ್ಷಯೋಜನವಿಸ್ತರಃ।**
**ಮೈತ್ರೇಯ ವಲಯಾಕಾರಃ ಸ್ಥಿತಃ ಕ್ಷಾರೋದಧಿರ್ಬಹಿಃ॥** 28

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯಾಂಶೇ ತೃತೀಯೋऽಧ್ಯಾಯಃ

---

ನಿವಾಸಿಗಳೇ ಧನ್ಯರು! (25). ನಮಗೆ ಸ್ವರ್ಗವನ್ನು ಕೊಟ್ಟಿರುವ ಈ ಪುಣ್ಯಕರ್ಮವು ಸವೆದಮೇಲೆ, ಮತ್ತೆ ಎಲ್ಲಿ ಹುಟ್ಟಿ ದೇಹಬಂಧವನ್ನು ಪಡೆಯುತ್ತೇವೋ ನಮಗೆ ಗೊತ್ತಿಲ್ಲ! ಇಂದ್ರಿಯ ಶಕ್ತಿಗಳಿಂದ ಸಹಿತರಾಗಿ ಭರತಖಂಡದಲ್ಲಿ ಹುಟ್ಟಿದ ಮನುಷ್ಯರೇ ಧನ್ಯರು!" (26). ಮೈತ್ರೇಯ, ಒಂಬತ್ತು ವರ್ಷವಿಭಾಗಗಳಿಂದ ಕೂಡಿದ ಲಕ್ಷಯೋಜನ ವಿಸ್ತಾರವಾದ ಜಂಬೂ ದ್ವೀಪದ ವಿಚಾರವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಈ ಜಂಬೂದ್ವೀಪವನ್ನು ವಲಯಾಕಾರವಾಗಿ ಹೊರಗಡೆ ಸುತ್ತುವರಿದು ಲಕ್ಷ ಯೋಜನ ವಿಸ್ತಾರವಾಗಿರುವ ಕ್ಷೀರಸಮುದ್ರವಿದೆ (27-28).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಮೂರನೆಯ ಅಧ್ಯಾಯ ಮುಗಿಯಿತು.



## ಚತುರ್ಥೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಕ್ಷಾರೋದೇನ ಯಥಾ ದ್ವೀಪೋ ಜಂಬೂಸಂಜ್ಞೋಽಭಿವೇಷ್ಟಿತಃ।**
**ಸಂವೇಷ್ಟ್ಯ ಕ್ಷಾರಮುದಧಿಂ ಪ್ಲಕ್ಷದ್ವೀಪಸ್ತಥಾ ಸ್ಥಿತಃ॥ 1**

**ಜಂಬೂದ್ವೀಪಸ್ಯ ವಿಸ್ತಾರಃ ಶತಸಾಹಸ್ರಸಮ್ಮಿತಃ।**
**ಸ ಏವ ದ್ವಿಗುಣೋ ಬ್ರಹ್ಮನ್ ಪ್ಲಕ್ಷದ್ವೀಪ ಉದಾಹೃತಃ॥ 2**

**ಸಪ್ತ ಮೇಧಾತಿಥೇಃ ಪುತ್ರಾಃ ಪ್ಲಕ್ಷದ್ವೀಪೇಶ್ವರಸ್ಯ ವೈ।**
**ಜ್ಯೇಷ್ಠಃ ಶಾಂತಹಯೋ ನಾಮ ಶಿಶಿರಸ್ತದನಂತರಃ॥ 3**

**ಸುಖೋದಯಸ್ತಥಾನಂದಃ ಶಿವಃ ಕ್ಷೇಮಕ ಏವ ಚ।**
**ಧ್ರುವಶ್ಚ ಸಪ್ತಮಸ್ತೇಷಾಂ ಪ್ಲಕ್ಷದ್ವೀಪೇಶ್ವರಾ ಹಿ ತೇ॥ 4**

---

## ಅಧ್ಯಾಯ 4

### ಪ್ಲಕ್ಷ, ಶಾಲ್ಮಲ—ಮುಂತಾದ ದ್ವೀಪಗಳ ವರ್ಣನೆ

ಪರಾಶರರು ಹೇಳಿದರು: ಜಂಬೂದ್ವೀಪವು ಹೇಗೆ ಲವಣಸಮುದ್ರದಿಂದ ಆವೃತವಾಗಿದೆಯೋ ಹಾಗೆ ಪ್ಲಕ್ಷದ್ವೀಪವು ಲವಣಸಮುದ್ರವನ್ನು ಸುತ್ತಲೂ ಆವರಿಸಿಕೊಂಡಿದೆ. ಜಂಬೂದ್ವೀಪದ ವಿಸ್ತಾರ ಒಂದು ಲಕ್ಷ ಯೋಜನ. ಅದರ ಎರಡರಷ್ಟು ಅಂದರೆ ಎರಡು ಲಕ್ಷ ಯೋಜನ ವಿಸ್ತಾರವುಳ್ಳದ್ದು ಪ್ಲಕ್ಷದ್ವೀಪ (1-2). ಆ ದ್ವೀಪಕ್ಕೆ ಒಡೆಯನಾದ ಮೇಧಾತಿಥಿಗೆ ಏಳುಮಂದಿ ಪುತ್ರರಿದ್ದರು. ಅವರಲ್ಲಿ ಶಾಂತಹಯನೆಂಬವನು ಜ್ಯೇಷ್ಠ. ಅವನ ಒತ್ತಿನವನು ಶಿಶಿರ. ಆಮೇಲೆ ಸುಖೋದಯ, ಆನಂದ, ಶಿವ, ಕ್ಷೇಮಕ ಎಂಬುವರು. ಧ್ರುವನೆಂಬವನು ಏಳನೆಯವನು. ಇವರೆಲ್ಲರೂ ಪ್ಲಕ್ಷದ್ವೀಪ ವಿಭಾಗಕ್ಕೆ ಅಧಿಪತಿಗಳಾದರು (3-4). ಕ್ರಮವಾಗಿ

**ಪೂರ್ವಂ ಶಾಂತಹಯಂ ವರ್ಷಂ ಶಿಶಿರಂ ಚ ಸುಖಂ ತಥಾ।**
**ಆನಂದಂ ಚ ಶಿವಂ ಚೈವ ಕ್ಷೇಮಕಂ ಧ್ರುವಮೇವ ಚ॥ 5**

**ಮರ್ಯಾದಾಕಾರಕಾಸ್ತೇಷಾಂ ತಥಾನ್ಯೇ ವರ್ಷಪರ್ವತಾಃ।**
**ಸಪ್ತೈವ ತೇಷಾಂ ನಾಮಾನಿ ಶೃಣುಷ್ವ ಮುನಿಸತ್ತಮ॥ 6**

**ಗೋಮೇದಶ್ಚೈವ ಚಂದ್ರಶ್ಚ ನಾರದೋ ದುಂದುಭಿಸ್ತಥಾ।**
**ಸೋಮಕಃ ಸುಮನಾಶ್ಚೈವ ವೈಭ್ರಾಜಶ್ಚೈವ ಸಪ್ತಮಃ॥ 7**

**ವರ್ಷಾಚಲೇಷು ರಮ್ಯೇಷು ವರ್ಷೇಷ್ವೇತೇಷು ಚಾನಘಾಃ।**
**ವಸಂತಿ ದೇವಗಂಧರ್ವಸಹಿತಾಃ ಸತತಂ ಪ್ರಜಾಃ॥ 8**

**ತೇಷು ಪುಣ್ಯಾ ಜನಪದಾಶ್ಚಿರಾಚ್ಚ ಮ್ರಿಯತೇ ಜನಃ।**
**ನಾಧಯೋ ವ್ಯಾಧಯೋ ವಾಪಿ ಸರ್ವಕಾಲಸುಖಂ ಹಿ ತತ್॥ 9**

**ತೇಷಾಂ ನದ್ಯಸ್ತು ಸಪ್ತೈವ ವರ್ಷಾಣಾಂ ಚ ಸಮುದ್ರಗಾಃ।**
**ನಾಮತಸ್ತಾಃ ಪ್ರವಕ್ಷ್ಯಾಮಿ ಶ್ರುತಾಃ ಪಾಪಂ ಹರಂತಿ ಯಾಃ॥ 10**

---

ಅವರ ಆಧಿಪತ್ಯವಿದ್ದ ದೇಶವು ಶಾಂತಹಯವರ್ಷ, ಶಿಶಿರವರ್ಷ, ಸುಖೋದಯವರ್ಷ, ಆನಂದವರ್ಷ, ಶಿವವರ್ಷ, ಕ್ಷೇಮಕವರ್ಷ ಮತ್ತು ಧ್ರುವವರ್ಷ—ಎಂಬ ಹೆಸರುಗಳನ್ನು ಪಡೆದಿದೆ (5). ಆ ದೇಶಗಳ ಎಲ್ಲೆಗಳನ್ನು ಗೊತ್ತು ಮಾಡುವ ಏಳು ಮರ್ಯಾದಾಕಾರಕಗಳಾದ ವರ್ಷ ಪರ್ವತಗಳಿವೆ. ಅವುಗಳ ಹೆಸರನ್ನು ಕೇಳು: ಗೋಮೇದ, ಚಂದ್ರ, ನಾರದ, ದುಂದುಭಿ, ಸೋಮಕ, ಸುಮನಸ್ ಮತ್ತು ಏಳನೆಯ ವೈಭ್ರಾಜ ಪರ್ವತ (6-7). ಈ ವರ್ಷಪರ್ವತಗಳಲ್ಲಿಯೂ ಶಾಂತಹಯಾದಿವರ್ಷ ಗಳಲ್ಲಿಯೂ ಪ್ರಜೆಗಳು ದೇವಗಂಧರ್ವಸಹಿತರಾಗಿ ವಾಸಮಾಡುತ್ತಾರೆ. ಆ ನಿವಾಸಿಗಳು ಪುಣ್ಯವಂತರು. ಬಹಳ ಕಾಲದ ಮೇಲೆ (ದೀರ್ಘಾಯು ಗಳಾಗಿ) ಜನರು ಸಾಯುತ್ತಾರೆ. ಆಧಿವ್ಯಾಧಿಗಳು ಅಲ್ಲಿಲ್ಲ. ಸರ್ವ ಕಾಲ ದಲ್ಲಿಯೂ ಜನರು ಸುಖವಾಗಿ ಇರುತ್ತಾರೆ (8-9). ಅಲ್ಲಿ ಸಮುದ್ರಗಾಮಿ ಗಳಾದ ನದಿಗಳು ಏಳು ಇವೆ. ಪಾಪಹಾರಿಗಳಾದ ಆ ನದಿಗಳ ಹೆಸರನ್ನು ಹೇಳುವೆನು. ಅನುತಪ್ತಾ, ಶಿಖೀ, ವಿಪಾಶಾ, ತ್ರಿದಿವಾ, ಅಕ್ಲಮಾ,

**ಅನುತಪ್ತಾ ಶಿಖೀ ಚೈವ ವಿಪಾಶಾ ತ್ರಿದಿವಾಕ್ಲಮಾ।**
**ಅಮೃತಾ ಸುಕೃತಾ ಚೈವ ಸಪ್ತೈತಾಸ್ತತ್ರ ನಿಮ್ನಗಾಃ॥ 11**

**ಏತೇ ಶೈಲಾಸ್ತಥಾ ನದ್ಯಃ ಪ್ರಧಾನಾಃ ಕಥಿತಾಸ್ತವ।**
**ಕ್ಷುದ್ರಶೈಲಾಸ್ತಥಾ ನದ್ಯಸ್ತತ್ರ ಸಂತಿ ಸಹಸ್ರಶಃ॥ 12**

**ತಾಃ ಪಿಬಂತಿ ಸದಾ ಹೃಷ್ಟಾ ನದೀರ್ಜನಪದಾಸ್ತು ತೇ।**
**ಅಪಸರ್ಪಿಣೀ ನ ತೇಷಾಂ ವೈ ನ ಚೈವೋತ್ಸರ್ಪಿಣೀ ದ್ವಿಜ॥ 13**

**ನ ತ್ವೇವಾಸ್ತಿ ಯುಗಾವಸ್ಥಾ ತೇಷು ಸ್ಥಾನೇಷು ಸಪ್ತಸು।**
**ತ್ರೇತಾಯುಗಸಮಃ ಕಾಲಃ ಸರ್ವದೈವ ಮಹಾಮತೇ॥ 14**

**ಪ್ಲಕ್ಷದ್ವೀಪಾದಿಷು ಬ್ರಹ್ಮನ್ ಶಾಕದ್ವೀಪಾಂತಿಕೇಷು ವೈ।**
**ಪಂಚವರ್ಷಸಹಸ್ರಾಣಿ ಜನಾ ಜೀವಂತ್ಯನಾಮಯಾಃ॥ 15**

**ಧರ್ಮಾಃ ಪಂಚ ತಥೈತೇಷು ವರ್ಣಾಶ್ರಮವಿಭಾಗಶಃ।**
**ವರ್ಣಾಶ್ಚ ತತ್ರ ಚತ್ವಾರಸ್ತಾನ್ನಿಬೋಧ ವದಾಮಿ ತೇ॥ 16**

---

ಅಮೃತಾ ಮತ್ತು ಸುಕೃತಾ ಎಂಬುವು ಸಪ್ತನದಿಗಳು (10-11). ಮುಖ್ಯವಾದ ಶೈಲಗಳನ್ನೂ ನದಿಗಳನ್ನೂ ನಿನಗೆ ಹೇಳಿದ್ದೇನೆ. ಇನ್ನು ಚಿಕ್ಕದಾದ ಬೆಟ್ಟಗಳೂ ಹೊಳೆಗಳೂ ಸಾವಿರಾರು ಇವೆ. ಅಲ್ಲಿರುವ ಜನರು ಸದಾ ಹೃಷ್ಟರಾಗಿ ಆ ನದಿಗಳ ನೀರನ್ನು ಕುಡಿಯುತ್ತಾರೆ. ಅಲ್ಲಿ ಹ್ರಾಸರೂಪವಾದ ದುಷ್ಕಾಲವಾಗಲಿ ವೃದ್ಧಿರೂಪವಾದ ಕಾಲಾವಸ್ಥೆಯಾಗಲಿ ಇಲ್ಲ (12-13). ಅಲ್ಲದೆ ಈ ಏಳು ದ್ವೀಪಗಳಲ್ಲಿ ಯುಗಾವಸ್ಥೆಯೂ ಇಲ್ಲ. ಯಾವಾಗಲೂ ತ್ರೇತಾಯುಗಕ್ಕೆ ಸಮಾನವಾದ ಕಾಲವು ನಡೆಯುತ್ತದೆ. ಪ್ಲಕ್ಷದ್ವೀಪದಿಂದ ಹಿಡಿದು ಶಾಕದ್ವೀಪಪರ್ಯಂತವಾಗಿ ಜನರು ರೋಗರುಜಿನಗಳಿಲ್ಲದೆ ಐದು ಸಾವಿರ ವರ್ಷಗಳವರೆಗೆ ಬದುಕುತ್ತಾರೆ (14-15). ವರ್ಣಾಶ್ರಮ ವಿಭಾಗಾನುಸಾರವಾಗಿ ಅಲ್ಲಿ (ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳೆಂಬ) ಐದು ಧರ್ಮಗಳಿರುತ್ತವೆ. ಅಲ್ಲಿರುವ ವರ್ಣಗಳು ನಾಲ್ಕು. ಅವನ್ನು ಹೇಳುತ್ತೇನೆ, ಕೇಳು (16). ಆ ದ್ವೀಪದಲ್ಲಿ ಆರ್ಯಕ, ಕುರರ, ವಿದಿಶ್ಯ, ಮತ್ತು ಭಾವಿ—ಎಂಬ ಜಾತಿಯವರು

ಆರ್ಯಕಾಃ ಕುರರಾಶ್ಚೈವ ವಿದಿಶ್ಯಾ ಭಾವಿನಶ್ಚ ತೇ।
ವಿಪ್ರಕ್ಷತ್ರಿಯವೈಶ್ಯಾಸ್ತೇ ಶೂದ್ರಾಶ್ಚ ಮುನಿಸತ್ತಮ॥ 17

ಜಂಬೂವೃಕ್ಷಪ್ರಮಾಣಸ್ತು ತನ್ಮಧ್ಯೇ ಸುಮಹಾಂಸ್ತರುಃ।
ಪ್ಲಕ್ಷಸ್ತನ್ನಾಮಸಂಜ್ಞೋಽಯಂ ಪ್ಲಕ್ಷದ್ವೀಪೋ ದ್ವಿಜೋತ್ತಮ॥ 18

ಇಜ್ಯತೇ ತತ್ರ ಭಗವಾಂಸ್ತೈರ್ವರ್ಣೈರಾರ್ಯಕಾದಿಭಿಃ।
ಸೋಮರೂಪೀ ಜಗತ್ಸ್ರಷ್ಟಾ ಸರ್ವಃ ಸರ್ವೇಶ್ವರೋ ಹರಿಃ॥ 19

ಪ್ಲಕ್ಷದ್ವೀಪಪ್ರಮಾಣೇನ ಪ್ಲಕ್ಷದ್ವೀಪಃ ಸಮಾವೃತಃ।
ತಥೈವೇಕ್ಷುರಸೋದೇನ ಪರಿವೇಷಾನುಕಾರಿಣಾ॥ 20

ಇತ್ಯೇವಂ ತವ ಮೈತ್ರೇಯ ಪ್ಲಕ್ಷದ್ವೀಪ ಉದಾಹೃತಃ।
ಸಂಕ್ಷೇಪೇಣ ಮಯಾ ಭೂಯಃ ಶಾಲ್ಮಲಂ ಮೇ ನಿಶಾಮಯ॥

ಶಾಲ್ಮಲಸ್ಯೇಶ್ವರೋ ವೀರೋ ವಪುಷ್ಮಾಂಸ್ತತ್ಸುತಾನ್ ಶೃಣು।
ತೇಷಾಂ ತು ನಾಮಸಂಜ್ಞಾನಿ ಸಪ್ತವರ್ಷಾಣಿ ತಾನಿ ವೈ॥ 22

---

ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಾಗಿದ್ದಾರೆ (17). ಆ ದ್ವೀಪದ ನಡುವೆ ಜಂಬೂವೃಕ್ಷದಷ್ಟು ದೊಡ್ಡದಾದ ಪ್ಲಕ್ಷವೃಕ್ಷವಿದೆ. ಆದ್ದರಿಂದ ಆ ದ್ವೀಪಕ್ಕೆ ಪ್ಲಕ್ಷದ್ವೀಪವೆಂದು ಹೆಸರು ಬಂದಿದೆ. ಸೃಷ್ಟಿಕರ್ತನೂ ಸರ್ವನೂ ಸರ್ವೇಶ್ವರನೂ ಆದ ಶ್ರೀಹರಿಯು ಅಲ್ಲಿರುವ ಆರ್ಯಕಾದಿ ವರ್ಣದವರಿಂದ ಸೋಮರೂಪನಾಗಿ ಅರ್ಚಿಸಲ್ಪಡುತ್ತಾನೆ (18-19). ಪ್ಲಕ್ಷ ದ್ವೀಪದಷ್ಟು ಪ್ರಮಾಣವುಳ್ಳ ಇಕ್ಷು ಸಮುದ್ರವು ಪ್ಲಕ್ಷದ್ವೀಪವನ್ನು ಪರಿವೇಷ ದಂತೆ ಆವರಿಸಿಕೊಂಡಿದೆ. ಮೈತ್ರೇಯ, ಈ ಪ್ರಕಾರವಾಗಿ ನಾನು ಪ್ಲಕ್ಷ ದ್ವೀಪದ ವಿಷಯವನ್ನು ಹೇಳಿದ್ದಾಯಿತು. ಇನ್ನು ಶಾಲ್ಮಲದ್ವೀಪದ ವಿಷಯವನ್ನು ಕೇಳು (20-21). ಶಾಲ್ಮಲದ್ವೀಪಕ್ಕೆ ವೀರನಾದ ವಪುಷ್ಮಾನ್ ಎಂಬವನು ಅಧಿಪತಿ. ಅವನ ಪುತ್ರರ ಹೆಸರನ್ನು ಕೇಳು. ಅವರಿಗೆ ಸೇರಿದ ಸಪ್ತವರ್ಷಗಳೂ ಅವರ ಹೆಸರಿನಿಂದಲೇ ಪ್ರಸಿದ್ಧವಾಗಿದೆ. ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾನಸ ಮತ್ತು ಸುಪ್ರಭ ಎಂದು

ಶ್ವೇತೋಽಥ ಹರಿತಶ್ಚೈವ ಜೀಮೂತೋ ರೋಹಿತಸ್ತಥಾ।
ವೈದ್ಯುತೋ ಮಾನಸಶ್ಚೈವ ಸುಪ್ರಭಶ್ಚ ಮಹಾಮುನೇ॥ 23

ಶಾಲ್ಮಲೇನ ಸಮುದ್ರೋಽಸೌ ದ್ವೀಪೇನೇಕ್ಷುರಸೋದಕಃ।
ವಿಸ್ತಾರದ್ವಿಗುಣೇನಾಥ ಸರ್ವತಃ ಸಂವೃತಃ ಸ್ಥಿತಃ॥ 24

ತತ್ರಾಪಿ ಪರ್ವತಾಃ ಸಪ್ತ ವಿಜ್ಞೇಯಾ ರತ್ನಯೋನಯಃ।
ವರ್ಷಾಭಿವ್ಯಂಜಕಾ ಯೇ ತು ತಥಾ ಸಪ್ತ ಚ ನಿಮ್ನಗಾಃ॥ 25

ಕುಮುದಶ್ಚೋನ್ನತಶ್ಚೈವ ತೃತೀಯಶ್ಚ ಬಲಾಹಕಃ।
ದ್ರೋಣೋ ಯತ್ರ ಮಹೌಷಧ್ಯಃ ಸ ಚತುರ್ಥೋ ಮಹೀಧರಃ॥

ಕಂಕಸ್ತು ಪಂಚಮಃ ಷಷ್ಠೋ ಮಹಿಷಃ ಸಪ್ತಮಸ್ತಥಾ।
ಕಕುದ್ಮಾನ್ ಪರ್ವತವರಃ ಸರಿನ್ನಾಮಾನಿ ಮೇ ಶೃಣು॥ 27

ಯೋನಿಸ್ತೋಯಾ ವಿತೃಷ್ಣಾ ಚ ಚಂದ್ರಾ ಮುಕ್ತಾ ವಿಮೋಚನೀ।
ನಿವೃತ್ತಿಃ ಸಪ್ತಮೀ ತಾಸಾಂ ಸ್ಮೃತಾಸ್ತಾಃ ಪಾಪಶಾಂತಿದಾಃ॥ 28

ಶ್ವೇತಂ ಚ ಹರಿತಂ ಚೈವ ವೈದ್ಯುತಂ ಮಾನಸಂ ತಥಾ।
ಜೀಮೂತಂ ರೋಹಿತಂ ಚೈವ ಸುಪ್ರಭಂ ಚಾಪಿ ಶೋಭನಮ್।
ಸಪ್ತೈತಾನಿ ತು ವರ್ಷಾಣಿ ಚಾತುರ್ವರ್ಣ್ಯಯುತಾನಿ ವೈ॥ 29

---

ಅವರ ಹೆಸರು (22-23). (ಪ್ಲಕ್ಷದ್ವೀಪವನ್ನು ಆವರಿಸಿದ) ಇಕ್ಷುಸಮುದ್ರವು ತನಗಿಂತ ಎರಡರಷ್ಟು ವಿಸ್ತಾರವಾದ ಈ ಶಾಲ್ಮಲದ್ವೀಪದಿಂದ ಸುತ್ತಲೂ ಆವೃತವಾಗಿದೆ. ಈ ದ್ವೀಪದಲ್ಲಿಯೂ ರತ್ನಗಳಿಗೆ ಉದ್ಭವಸ್ಥಾನಗಳೂ ಅಲ್ಲಿರುವ (ಸಪ್ತ) ವರ್ಷಗಳನ್ನು ವಿಭಾಗಿಸತಕ್ಕವೂ ಆದ ಏಳು ಪರ್ವತಗಳಿವೆ. ಏಳು ನದಿಗಳು ಇವೆ (24-25). ಕುಮುದ, ಉನ್ನತ, ಬಲಾಹಕ, ಮಹೌಷಧಿಗಳಿರುವ ದ್ರೋಣ, ಕಂಕ, ಮಹಿಷ ಮತ್ತು ಏಳನೆಯದಾದ ಕಕುದ್ಮನ್ ಎಂಬಿವು ಪರ್ವತಗಳು. ನದಿಗಳ ಹೆಸರನ್ನು ಕೇಳು (26-27). ಯೋನಿ, ತೋಯಾ, ವಿತೃಷ್ಣಾ, ಚಂದ್ರಾ, ಮುಕ್ತಾ, ವಿಮೋಚನೀ, ಏಳನೆಯದಾದ ನಿವೃತ್ತಿ—ಎಂಬ ನದಿಗಳು ಪಾಪಶಮನ ಮಾಡತಕ್ಕವು. ಶ್ವೇತ, ಹರಿತ, ವೈದ್ಯುತ, ಮಾನಸ, ಜೀಮೂತ, ರೋಹಿತ, ಸುಪ್ರಭ—

**ಶಾಲ್ಮಲೇ ಯೇ ತು ವರ್ಣಾಶ್ಚ ವಸಂತ್ಯೇತೇ ಮಹಾಮುನೇ।**
**ಕಪಿಲಾಶ್ಚಾರುಣಾಃ ಪೀತಾಃ ಕೃಷ್ಣಾಶ್ಚೈವ ಪೃಥಕ್ ಪೃಥಕ್॥ 30**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವ ಯಜಂತಿ ತಮ್।**
**ಭಗವಂತಂ ಸಮಸ್ತಸ್ಯ ವಿಷ್ಣುಮಾತ್ಮಾನಮವ್ಯಯಮ್॥ 31**

**ವಾಯುಭೂತಂ ಮಖಶ್ರೇಷ್ಠೈರ್ಯಜ್ವಾನೋ ಯಜ್ಞಸಂಸ್ಥಿತಿಮ್।**
**ದೇವಾನಾಮತ್ರ ಸಾನ್ನಿಧ್ಯಮತೀವ ಸುಮನೋಹರೇ॥ 32**

**ಶಾಲ್ಮಲಿಃ ಸುಮಹಾನ್ ವೃಕ್ಷೋ ನಾಮ್ನಾ ನಿರ್ವೃತಿಕಾರಕಃ।**
**ಏಷ ದ್ವೀಪಃ ಸಮುದ್ರೇಣ ಸುರೋದೇನ ಸಮಾವೃತಃ॥ 33**

**ವಿಸ್ತಾರಾಚ್ಛಾಲ್ಮಲಸ್ಯೈವ ಸಮೇನ ತು ಸಮಂತತಃ।**
**ಸುರೋದಕಃ ಪರಿವೃತಃ ಕುಶದ್ವೀಪೇನ ಸರ್ವತಃ॥ 34**

**ಶಾಲ್ಮಲಸ್ಯ ತು ವಿಸ್ತಾರಾದ್ ದ್ವಿಗುಣೇನ ಸಮಂತತಃ।**
**ಜ್ಯೋತಿಷ್ಮತಃ ಕುಶದ್ವೀಪೇ ಸಪ್ತಪುತ್ರಾನ್ ಶೃಣುಷ್ವ ತಾನ್॥ 35**

---

ಎಂಬ ಏಳು ವರ್ಷಗಳು (ದೇಶಗಳು) ಚಾತುರ್ವರ್ಣ್ಯದ ಜನರಿಂದ ಕೂಡಿವೆ (28-29). ಕಪಿಲ, ಅರುಣ, ಪೀತ, ಕೃಷ್ಣ—ಎಂಬ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಅಲ್ಲಿದ್ದಾರೆ. ಅವರು ಸರ್ವಾತ್ಮನೂ ಅವ್ಯಯನೂ ಆದ ವಿಷ್ಣುಭಗವಂತನನ್ನು ಅರ್ಚಿಸುತ್ತಾರೆ (30-31). ಯಾಜಿಗಳು ಯಜ್ಞಪ್ರತಿಷ್ಠಿತನಾದ ವಿಷ್ಣುವನ್ನು ವಾಯುಸ್ವರೂಪನನ್ನಾಗಿ ಭಾವಿಸಿ ಯಜ್ಞಗಳಿಂದ ಪೂಜಿಸುತ್ತಾರೆ. ಅತ್ಯಂತಮನೋಹರವಾದ ಈ ದ್ವೀಪದಲ್ಲಿ ದೇವತೆಗಳು ನೆಲೆಸಿದ್ದಾರೆ (32). ಅಲ್ಲಿ ಶಾಲ್ಮಲಿಯೆಂಬ ಸುಖಕಾರಿಯಾದ ಮಹಾವೃಕ್ಷವಿದೆ. ಈ ದ್ವೀಪವು ಸುರೋದಕದ (ಮದ್ಯ) ಸಮುದ್ರದಿಂದ ಆವೃತವಾಗಿದೆ. ಈ ಸಮುದ್ರವು ಶಾಲ್ಮಲದ್ವೀಪದಷ್ಟು ವಿಸ್ತಾರವಾಗಿಲ್ಲದೆ, ಸುತ್ತಲೂ ಕುಶದ್ವೀಪದಿಂದ ಸಮಾವೃತವಾಗಿದೆ. (33-34). ಕುಶದ್ವೀಪವು ಶಾಲ್ಮಲದ ಎರಡರಷ್ಟು ದೊಡ್ಡದು. ಕುಶದ್ವೀಪದ ಅಧಿಪತಿಯಾದ ಜ್ಯೋತಿಷ್ಮಂತನ ಏಳುಮಂದಿ ಪುತ್ರರು ಯಾರೆಂದರೆ: ಉದ್ಭಿದ, ವೇಣುಮಾನ್, ವೈರಥ, ಲಂಬನ, ಧೃತಿ, ಪ್ರಭಾಕರ ಮತ್ತು

**ಉದ್ಭಿದೋ ವೇಣುಮಾಂಶ್ಚೈವ ವೈರಥೋ ಲಂಬನೋ ಧೃತಿಃ।**
**ಪ್ರಭಾಕರೋಽಥ ಕಪಿಲಸ್ತನ್ನಾಮಾ ವರ್ಷಪದ್ಧತಿಃ॥ 36**

**ತಸ್ಮಿನ್ ವಸಂತಿ ಮನುಜಾಃ ಸಹ ದೈತೇಯದಾನವೈಃ।**
**ತಥೈವ ದೇವಗಂಧರ್ವಯಕ್ಷಕಿಂಪುರುಷಾದಯಃ॥ 37**

**ವರ್ಣಾಸ್ತತ್ರಾಪಿ ಚತ್ವಾರೋ ನಿಜಾನುಷ್ಠಾನತತ್ಪರಾಃ।**
**ದಮಿನಃ ಶುಷ್ಮಿಣಃ ಸ್ನೇಹಾ ಮಂದೇಹಾಶ್ಚ ಮಹಾಮುನೇ॥ 38**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚಾನುಕ್ರಮೋದಿತಾಃ।**
**ಯಥೋಕ್ತಕರ್ಮಕರ್ತೃತ್ವಾತ್ ಸ್ವಾಧಿಕಾರಕ್ಷಯಾಯ ತೇ॥ 39**

**ತತ್ರೈವ ತಂ ಕುಶದ್ವೀಪೇ ಬ್ರಹ್ಮರೂಪಂ ಜನಾರ್ದನಮ್।**
**ಯಜಂತಃ ಕ್ಷಪಯಂತ್ಯುಗ್ರಮಧಿಕಾರಫಲಪ್ರದಮ್॥ 40**

**ವಿದ್ರುಮೋ ಹೇಮಶೈಲಶ್ಚ ದ್ಯುತಿಮಾನ್ ಪುಷ್ಪವಾಂಸ್ತಥಾ।**
**ಕುಶೇಶಯೋ ಹರಿಶ್ಚೈವ ಸಪ್ತಮೋ ಮಂದರಾಚಲಃ॥ 41**

---

ಕಪಿಲ. ಇವರ ಹೆಸರಿಂದಲೇ ಏಳು ವರ್ಷಗಳ ವಿಭಾಗವಿದೆ (35-36). ಅಲ್ಲಿ ಮನುಷ್ಯರು ದೈತ್ಯದಾನವರೊಡನೆ ವಾಸಮಾಡುತ್ತಾರೆ. ಹಾಗೆಯೇ ದೇವ, ಗಂಧರ್ವ, ಯಕ್ಷ, ಕಿಂಪುರುಷಾದಿಗಳೂ ಇದ್ದಾರೆ. ಅಲ್ಲಿಯೂ ತಮ್ಮ ತಮ್ಮ ಕರ್ಮಾನುಷ್ಠಾನಗಳಲ್ಲಿ ತತ್ಪರರಾದ ನಾಲ್ಕು ವರ್ಣದವರಿದ್ದಾರೆ. ದಮಿ, ಶುಷ್ಮಿ, ಸ್ನೇಹ, ಮಂದೇಹ—ಎಂದು ಆ ವರ್ಣದವರ ನಾಮವಿದೆ (37-38). ಅವರೇ ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು. ಪ್ರಾರಬ್ಧಕರ್ಮಕ್ಷಯಕ್ಕಾಗಿ ಅವರು ಶಾಸ್ತ್ರವಿಹಿತ ಕರ್ಮವನ್ನು ಆಚರಿಸುತ್ತ, ಕುಶದ್ವೀಪದಲ್ಲಿ ಬ್ರಹ್ಮರೂಪನಾಗಿರುವ ಜನಾರ್ದನನನ್ನು ಪೂಜಿಸುತ್ತ, ಪ್ರಾರಬ್ಧದ ಅಧಿಕಾರಫಲವನ್ನು ಕೊಡುವ ಉಗ್ರವಾದ ಅಹಂಕಾರವನ್ನು ಹೋಗಲಾಡಿಸಿಕೊಳ್ಳುತ್ತಾರೆ (39-40). ಆ ದ್ವೀಪದಲ್ಲಿ ವಿದ್ರುಮ, ಹೇಮಶೈಲ, ದ್ಯುತಿಮಾನ್, ಪುಷ್ಪವಾನ್, ಕುಶೇಶಯ, ಹರಿ, ಏಳನೆಯದಾದ ಮಂದಾರಚಲ—ಇವು ವರ್ಷಪರ್ವತಗಳು. ನದಿಗಳೂ ಏಳು ಇವೆ. ಅವುಗಳ ಹೆಸರನ್ನು ಕೇಳು: ಧೂತಪಾಪಾ, ಶಿವಾ, ಪವಿತ್ರಾ,

**ವರ್ಷಾಚಲಾಸ್ತು ಸಪ್ತೈತೇ ತತ್ರ ದ್ವೀಪೇ ಮಹಾಮುನೇ।**
**ನದ್ಯಶ್ಚ ಸಪ್ತ ತಾಸಾಂ ತು ಶೃಣು ನಾಮಾನ್ಯನುಕ್ರಮಾತ್॥ 42**

**ಧೂತಪಾಪಾ ಶಿವಾ ಚೈವ ಪವಿತ್ರಾ ಸಮ್ಮತಿಸ್ತಥಾ।**
**ವಿದ್ಯುದಂಭಾ ಮಹೀ ಚಾನ್ಯಾ ಸರ್ವಪಾಪಹರಾಸ್ತ್ವಿಮಾಃ॥ 43**

**ಅನ್ಯಾಃ ಸಹಸ್ರಶಸ್ತತ್ರ ಕ್ಷುದ್ರನದ್ಯಸ್ತಥಾಚಲಾಃ।**
**ಕುಶದ್ವೀಪೇ ಕುಶಸ್ತಂಬಃ ಸಂಜ್ಞಯಾ ತಸ್ಯ ತತ್ ಸ್ಮೃತಮ್॥ 44**

**ತತ್ಪ್ರಮಾಣೇನ ಸ ದ್ವೀಪೋ ಘೃತೋದೇನ ಸಮಾವೃತಃ।**
**ಘೃತೋದಶ್ಚ ಸಮುದ್ರೋ ವೈ ಕ್ರೌಂಚದ್ವೀಪೇನ ಸಂವೃತಃ॥ 45**

**ಕ್ರೌಂಚದ್ವೀಪೋ ಮಹಾಭಾಗ ಶ್ರೂಯತಾಂಚಾಪರೋ ಮಹಾನ್।**
**ಕುಶದ್ವೀಪಸ್ಯ ವಿಸ್ತಾರಾದ್ ದ್ವಿಗುಣೋ ಯಸ್ಯ ವಿಸ್ತರಃ॥ 46**

**ಕ್ರೌಂಚದ್ವೀಪೇ ದ್ಯುತಿಮತಃ ಪುತ್ರಾಸ್ತಸ್ಯ ಮಹಾತ್ಮನಃ।**
**ತನ್ನಾಮಾನಿ ಚ ವರ್ಷಾಣಿ ತೇಷಾಂ ಚಕ್ರೇ ಮಹೀಪತಿಃ॥ 47**

**ಕುಶಲೋ ಮಂದಗಶ್ಚೋಷ್ಣಃ ಪೀವರೋಽಥಾಂಧಕಾರಕಃ।**
**ಮುನಿಶ್ಚ ದುಂದುಭಿಶ್ಚೈವ ಸಪ್ತೈತೇ ತತ್ಸುತಾ ಮುನೇ॥ 48**

---

ಸಂಮತಿ, ವಿದ್ಯುತ್, ಅಂಭಾ, ಮಹೀ—ಇವು ಸರ್ವಪಾಪಹಾರಿಗಳಾದ ನದಿಗಳು (41-43). ಇನ್ನು ಚಿಕ್ಕ ಚಿಕ್ಕ ಬೆಟ್ಟಗಳೂ ಹೊಳೆಗಳೂ ಸಾವಿರಾರು ಇವೆ. ಆ ದ್ವೀಪದಲ್ಲಿ ಕುಶಗಳ ಪೊದೆ ಇರುವುದರಿಂದ ಕುಶದ್ವೀಪವೆಂದು ಹೆಸರು ಬಂದಿದೆ. ಆ ದ್ವೀಪವು ಅಷ್ಟೇ ಅಳತೆಯುಳ್ಳ ಘೃತಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ಘೃತಸಮುದ್ರದ ಸುತ್ತಲೂ ಕ್ರೌಂಚದ್ವೀಪವಿದೆ. ಆ ದ್ವೀಪವು ಕುಶದ್ವೀಪದ ಎರಡರಷ್ಟು ದೊಡ್ಡದು (44-46). ಕ್ರೌಂಚದ್ವೀಪದ ಒಡೆಯನಾದ ದ್ಯುತಿಮಂತನು ತನ್ನ ಪುತ್ರರ ಆಳ್ವಿಕೆಗೆ ಒಳಪಟ್ಟ ವರ್ಷಗಳಿಗೂ ಅವರ ಹೆಸರನ್ನೇ ಗೊತ್ತುಮಾಡಿದನು. ಅವನ ಮಕ್ಕಳು ಯಾರೆಂದರೆ: ಕುಶಲ, ಮಂದಗ, ಉಷ್ಣ, ಪೀವರ, ಅಂಧಕಾರಕ, ಮುನಿ ಮತ್ತು ದುಂದುಭಿ. ಅಲ್ಲಿಯೂ ಸಹ, ಮೈತ್ರೇಯ, ದೇವಗಂಧರ್ವಸೇವಿತ

**ತತ್ರಾಪಿ ದೇವಗಂಧರ್ವಸೇವಿತಾಃ ಸುಮನೋಹರಾಃ।**
**ವರ್ಷಾಚಲಾ ಮಹಾಬುದ್ಧೇ ತೇಷಾಂ ನಾಮಾನಿ ಮೇ ಶೃಣು॥ 49**

**ಕ್ರೌಂಚಶ್ಚ ವಾಮನಶ್ಚೈವ ತೃತೀಯಶ್ಚಾಂಧಕಾರಕಃ।**
**ಚತುರ್ಥೋ ರತ್ನಶೈಲಶ್ಚ ಸ್ವಾಹಿನೀ ಹಯಸನ್ನಿಭಃ॥ 50**

**ದಿವಾವೃತ್ಪಂಚಮಶ್ಚಾತ್ರ ತಥಾನ್ಯಃ ಪುಂಡರೀಕವಾನ್।**
**ದುಂದುಭಿಶ್ಚ ಮಹಾಶೈಲೋ ದ್ವಿಗುಣಾಸ್ತೇ ಪರಸ್ಪರಮ್॥ 51**

**ದ್ವೀಪಾ ದ್ವೀಪೇಷು ಯೇ ಶೈಲಾ ಯಥಾದ್ವೀಪೇಷು ತೇ ತಥಾ।**
**ವರ್ಷೇಷ್ವೇತೇಷು ರಮ್ಯೇಷು ತಥಾ ಶೈಲವರೇಷು ಚ।**
**ನಿವಸಂತಿ ನಿರಾತಂಕಾಃ ಸಹ ದೈವಗಣೈಃ ಪ್ರಜಾಃ॥ 52**

**ಪುಷ್ಕರಾಃ ಪುಷ್ಕಲಾ ಧನ್ಯಾಸ್ತಿಷ್ಯಾಖ್ಯಾಶ್ಚ ಮಹಾಮುನೇ।**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚಾನುಕ್ರಮೋದಿತಾಃ॥ 53**

**ನದೀರ್ಮೈತ್ರೇಯ ತೇ ತತ್ರ ಯಾಃ ಪಿಬಂತಿ ಶೃಣುಷ್ವ ತಾಃ।**
**ಸಪ್ತಪ್ರಧಾನಾಃ ಶತಶಸ್ತತ್ರಾನ್ಯಾಃ ಕ್ಷುದ್ರನಿಮ್ನಗಾಃ॥ 54**

---

ಗಳಾದ ಮನೋಹರವಾದ ವರ್ಷಪರ್ವತಗಳಿವೆ. ಅವುಗಳ ಹೆಸರನ್ನು ಕೇಳು (47-49). ಕ್ರೌಂಚ, ವಾಮನ, ಅಂಧಕಾರಕ, ರತ್ನಶೈಲವೂ ಅಶ್ವಾಕಾರವೂ ಆದ ಸ್ವಾಹಿನೀ, ದಿವಾವೃತ್, ಪುಂಡರೀಕವಾನ್ ಮತ್ತು ದುಂದುಭಿ. ಈ ಪರ್ವತಗಳು ಕ್ರಮವಾಗಿ ವಿಸ್ತಾರದಲ್ಲಿ ದ್ವಿಗುಣವಾಗಿವೆ (50-51). ದ್ವೀಪಗಳು ಉತ್ತರೋತ್ತರವಾಗಿ ಹೇಗೆ ದ್ವಿಗುಣವಾಗಿವೆಯೋ ಹಾಗೆಯೇ ಪರ್ವತಗಳೂ ವಿಸ್ತಾರದಲ್ಲಿ ದ್ವಿಗುಣವಾಗಿವೆಯೆಂದು ತಿಳಿಯ ಬೇಕು. ರಮ್ಯವಾದ ಈ ವರ್ಷಗಳಲ್ಲಿ ಮತ್ತು ಪರ್ವತಗಳಲ್ಲಿ ಪ್ರಜೆಗಳು ದೇವತೆಗಳೊಡನೆ ನಿರಾತಂಕವಾಗಿ ವಾಸಮಾಡುತ್ತಾರೆ (52). ಈ ಕುಶ ದ್ವೀಪದಲ್ಲಿ ಪುಷ್ಕರ, ಪುಷ್ಕಲ, ಧನ್ಯ, ತಿಷ್ಯ ಎಂಬ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿದ್ದಾರೆ. ಮೈತ್ರೇಯ, ಅವರು ಅಲ್ಲಿ ಯಾವ ನದಿಯ ನೀರನ್ನು ಕುಡಿಯುತ್ತಾರೆಂಬುದನ್ನು ಕೇಳು. ಅವುಗಳಲ್ಲಿ ಏಳು ಪ್ರಧಾನ ನದಿಗಳು. ಇನ್ನು ನೂರಾರು ಚಿಕ್ಕ ಹೊಳೆಗಳಿವೆ (53-54). ಗೌರೀ,

**ಗೌರೀ ಕುಮುದ್ವತೀ ಚೈವ ಸಂಧ್ಯಾ ರಾತ್ರಿರ್ಮನೋಜವಾ।**
**ಕ್ಷಾಂತಿಶ್ಚ ಪುಂಡರೀಕಾ ಚ ಸಪ್ತೈತಾ ವರ್ಷನಿಮ್ನಗಾಃ॥** 55

**ತತ್ರಾಪಿ ವಿಷ್ಣುರ್ಭಗವಾನ್ ಪುಷ್ಕರಾದ್ಯೈರ್ಜನಾರ್ದನಃ।**
**ಯಾಗೈರುದ್ರಸ್ವರೂಪಶ್ಚ ಇಜ್ಯತೇ ಯಜ್ಞಸನ್ನಿಧೌ॥** 56

**ಕ್ರೌಂಚದ್ವೀಪಃ ಸಮುದ್ರೇಣ ದಧಿಮಂಡೋದಕೇನ ಚ।**
**ಆವೃತಃ ಸರ್ವತಃ ಕ್ರೌಂಚದ್ವೀಪತುಲ್ಯೇನ ಮಾನತಃ॥** 57

**ದಧಿಮಂಡೋದಕಶ್ಚಾಪಿ ಶಾಕದ್ವೀಪೇನ ಸಂವೃತಃ।**
**ಕ್ರೌಂಚದ್ವೀಪಸ್ಯ ವಿಸ್ತಾರಾದ್ ದ್ವಿಗುಣೇನ ಮಹಾಮುನೇ॥** 58

**ಶಾಕದ್ವೀಪೇಶ್ವರಸ್ಯಾಪಿ ಭವ್ಯಸ್ಯ ಸುಮಹಾತ್ಮನಃ।**
**ಸಪ್ತೈವ ತನಯಾಸ್ತೇಷಾಂ ದದೌ ವರ್ಷಾಣಿ ಸಪ್ತ ಸಃ॥** 59

**ಜಲದಶ್ಚ ಕುಮಾರಶ್ಚ ಸುಕುಮಾರೋ ಮರೀಚಕಃ।**
**ಕುಸುಮೋದಶ್ಚ ಮೌದಾಕಿಃ ಸಪ್ತಮಶ್ಚ ಮಹಾದ್ರುಮಃ॥** 60

**ತತ್ಸಂಜ್ಞಾನ್ಯೇವ ತತ್ರಾಪಿ ಸಪ್ತ ವರ್ಷಾಣ್ಯನುಕ್ರಮಾತ್।**
**ತತ್ರಾಪಿ ಪರ್ವತಾಃ ಸಪ್ತ ವರ್ಷವಿಚ್ಛೇದಕಾರಿಣಃ॥** 61

---

ಕುಮುದ್ವತೀ, ಸಂಧ್ಯಾ, ರಾತ್ರೀ, ಮನೋಜವಾ, ಕ್ಷಾಂತಿ ಮತ್ತು ಪುಂಡರೀಕಾ—ಎಂಬಿವು ಸಪ್ತ ವರ್ಷ ನದಿಗಳು. ಕುಶದ್ವೀಪದಲ್ಲಿಯೂ ಪುಷ್ಕರ ಮೊದಲಾದ ಜನರಿಂದ ಜನಾರ್ದನನು ರುದ್ರರೂಪದಿಂದ ಯಜ್ಞಗಳ ಮೂಲಕ ಅರ್ಚಿಸಲ್ಪಡುತ್ತಾನೆ (55-56). ಕ್ರೌಂಚದ್ವೀಪವು ಅದರಷ್ಟೇ ವಿಸ್ತಾರವಾದ ದಧಿಸಮುದ್ರದಿಂದ ಸುತ್ತಲೂ ಪರಿವೃತವಾಗಿದೆ. ದಧಿಸಮುದ್ರವಾದರೋ ಕ್ರೌಂಚದ್ವೀಪದ ಎರಡರಷ್ಟಿರುವ ಶಾಕದ್ವೀಪ ದಿಂದ ಆವರಿಸಲ್ಪಟ್ಟಿದೆ (57-58). ಮಹಾತ್ಮನಾದ ಭವ್ಯನು ಶಾಕದ್ವೀಪದ ಅಧಿಪತಿ. ಅವನಿಗೂ ಏಳು ಮಂದಿ ಪುತ್ರರು. ಅವರಿಗೆ ತಂದೆ ಏಳು ವರ್ಷಗಳನ್ನು ಹಂಚಿಕೊಟ್ಟಿದ್ದಾನೆ. ಆ ಪುತ್ರರು ಯಾರೆಂದರೆ: ಜಲದ, ಕುಮಾರ, ಸುಕುಮಾರ, ಮರೀಚಕ, ಕುಸುಮೋದ, ಮೌದಾಕಿ ಮತ್ತು ಏಳನೆಯವನು ಮಹಾದ್ರುಮ (59-60). ಅಲ್ಲಿಯೂ ಏಳು ವರ್ಷಗಳು

**ಪೂರ್ವಸ್ತತ್ರೋದಯಗಿರಿರ್ಜಲಾಧಾರಸ್ತಥಾಪರಃ।**
**ತಥಾ ರೈವತಕಃ ಶ್ಯಾಮಸ್ತಥೈವಾಸ್ತಗಿರಿರ್ದ್ವಿಜ॥ 62**

**ಆಂಬಿಕೇಯಸ್ತಥಾ ರಮ್ಯಃ ಕೇಸರೀ ಪರ್ವತೋತ್ತಮಃ।**
**ಶಾಕಸ್ತತ್ರ ಮಹಾವೃಕ್ಷಃ ಸಿದ್ಧಗಂಧರ್ವಸೇವಿತಃ॥ 63**

**ಯತ್ರತ್ಯವಾತಸಂಸ್ಪರ್ಶಾದಾಹ್ಲಾದೋ ಜಾಯತೇ ಪರಃ।**
**ತತ್ರ ಪುಣ್ಯಾ ಜನಪದಾಶ್ಚಾತುರ್ವರ್ಣ್ಯಸಮನ್ವಿತಾಃ॥ 64**

**ನದ್ಯಶ್ಚಾತ್ರ ಮಹಾಪುಣ್ಯಾಃ ಸರ್ವಪಾಪಭಯಾಪಹಾಃ।**
**ಸುಕುಮಾರೀ ಕುಮಾರೀ ಚ ನಲಿನೀ ಧೇನುಕಾ ಚ ಯಾ॥ 65**

**ಇಕ್ಷುಶ್ಚ ವೇಣುಕಾ ಚೈವ ಗಭಸ್ತೀ ಸಪ್ತಮೀ ತಥಾ।**
**ಅನ್ಯಾಶ್ಚ ಶತಶಸ್ತತ್ರ ಕ್ಷುದ್ರನದ್ಯೋ ಮಹಾಮುನೇ॥ 66**

**ಮಹೀಧರಾಸ್ತಥಾ ಸಂತಿ ಶತಶೋಽಥ ಸಹಸ್ರಶಃ।**
**ತಾಃ ಪಿಬಂತಿ ಮುದಾ ಯುಕ್ತಾ ಜಲದಾದಿಷು ಯೇ ಸ್ಥಿತಾಃ॥ 67**

---

ಇವರ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಆ ವರ್ಷಗಳನ್ನು ವಿಭಾಗಿಸುವ ವರ್ಷಪರ್ವತಗಳು ಏಳು. ಉದಯಗಿರಿ, ಜಲಾಧಾರ, ರೈವತಕ, ಶ್ಯಾಮ, ಅಸ್ತಗಿರಿ, ಆಂಬಿಕೇಯ ಮತ್ತು ರಮ್ಯವಾದ ಕೇಸರೀಪರ್ವತಗಳೇ ಅವು. ಅಲ್ಲಿ ಸಿದ್ಧಗಂಧರ್ವ ಸೇವಿತವಾದ ಶಾಕವೆಂಬ ಮಹಾವೃಕ್ಷವಿದೆ (61-63). ಅದರ ಗಾಳಿಯ ಸ್ಪರ್ಶದಿಂದ ಪರಮಹರ್ಷವಾಗುತ್ತದೆ. ಚಾತುರ್ವರ್ಣ್ಯವನ್ನು ಪಾಲಿಸುತ್ತಿರುವ ಆ ದ್ವೀಪದ ಪ್ರಜೆಗಳು ಪುಣ್ಯವಂತರು. ಸರ್ವಪಾಪ ಭಯಗಳನ್ನು ನೀಗುವ ಪುಣ್ಯನದಿಗಳು ಆ ದ್ವೀಪದಲ್ಲಿವೆ. ಸುಕುಮಾರೀ, ಕುಮಾರೀ, ನಲಿನೀ, ಧೇನುಕಾ, ಇಕ್ಷು, ವೇಣುಕಾ ಮತ್ತು ಏಳನೆಯ ಗಭಸ್ತಿ—ಎಂಬ ನದಿಗಳು ಅವು. ಇನ್ನೂ ನೂರಾರು ಸಣ್ಣ ಹೊಳೆಗಳಿವೆ (64-66). ಹಾಗೆಯೇ ನೂರಾರು ಸಾವಿರಾರು ಬೆಟ್ಟಗಳಿವೆ. ಜಲದ ವರ್ಷ—ಮೊದಲಾದ ದೇಶಗಳಲ್ಲಿರುವ ಜನರು ಈ ನದಿಗಳ ನೀರನ್ನು ಕುಡಿಯುತ್ತಾರೆ. ಆ ಜನರು ಸ್ವರ್ಗಭೋಗವನ್ನನುಭವಿಸಿ ಅನಂತರ ಈ ವರ್ಷಗಳಿಗೆ ಬಂದು ನೆಲೆಸಿದ್ದಾರೆ. ಅಲ್ಲಿ ಧರ್ಮಕ್ಕೆ ಚ್ಯುತಿ ಇಲ್ಲ. ಒಬ್ಬರಿ

ವರ್ಷೇಷು ತೇ ಜನಪದಾಃ ಸ್ವರ್ಗಾದಭ್ಯೇತ್ಯ ಮೇದಿನೀಮ್।
ಧರ್ಮಹಾನಿರ್ನ ತೇಷ್ವಸ್ತಿ ನ ಸಂಘರ್ಷಃ ಪರಸ್ಪರಮ್॥ 68

ಮರ್ಯಾದಾವ್ಯುತ್ಕ್ರಮೋ ನಾಪಿ ತೇಷು ದೇಶೇಷು ಸಪ್ತಸು।
ವಂಗಾಶ್ಚ ಮಾಗಧಾಶ್ಚೈವ ಮಾನಸಾ ಮಂದಗಾಸ್ತಥಾ॥ 69

ವಂಗಾ ಬ್ರಾಹ್ಮಣಭೂಯಿಷ್ಠಾ ಮಾಗಧಾಃ ಕ್ಷತ್ರಿಯಾಸ್ತಥಾ।
ವೈಶ್ಯಾಸ್ತು ಮಾನಸಾಸ್ತೇಷಾಂ ಶೂದ್ರಾಸ್ತೇಷಾಂ ತು ಮಂದಗಾಃ॥ 70

ಶಾಕದ್ವೀಪೇ ತು ತೈರ್ವಿಷ್ಣುಃ ಸೂರ್ಯರೂಪಧರೋ ಮುನೇ।
ಯಥೋಕ್ತೈರಿಜ್ಯತೇ ಸಮ್ಯಕ್ ಕರ್ಮಭಿರ್ನಿಯತಾತ್ಮಭಿಃ॥ 71

ಶಾಕದ್ವೀಪಸ್ತು ಮೈತ್ರೇಯ ಕ್ಷೀರೋದೇನ ಸಮಾವೃತಃ।
ಶಾಕದ್ವೀಪಪ್ರಮಾಣೇನ ವಲಯೇನೇವ ವೇಷ್ಟಿತಃ॥ 72

ಕ್ಷೀರಾಬ್ಧಿಃ ಸರ್ವತೋ ಬ್ರಹ್ಮನ್ ಪುಷ್ಕರಾಖ್ಯೇನ ವೇಷ್ಟಿತಃ।
ದ್ವೀಪೇನ ಶಾಕದ್ವೀಪಾತ್ತು ದ್ವಿಗುಣೇನ ಸಮಂತತಃ॥ 73

ಪುಷ್ಕರೇ ಸವನಸ್ಯಾಪಿ ಮಹಾವೀರೋಽಭವತ್ಸುತಃ।
ಧಾತಕಿಶ್ಚ ತಯೋಸ್ತತ್ರ ದ್ವೇ ವರ್ಷೇ ನಾಮಚಿಹ್ನಿತೇ॥ 74

---

ಗೊಬ್ಬರಿಗೆ ಘರ್ಷಣೆ ಇಲ್ಲ (67-68). ಆ ಸಪ್ತ ದೇಶಗಳಲ್ಲಿ ನೀತಿ ಮರ್ಯಾದೆಯ ಉಲ್ಲಂಘನೆಯೂ ಇಲ್ಲ. ಆ ದ್ವೀಪದಲ್ಲಿ ವಂಗ, ಮಾಗಧ, ಮಾನಸ, ಮಂದಗ ಎಂದು ನಾಲ್ಕು ವರ್ಣಗಳಿವೆ. ಇವರಲ್ಲಿ ವಂಗರು ಬ್ರಾಹ್ಮಣರು; ಮಾಗಧರು ಕ್ಷತ್ರಿಯರು; ಮಾನಸರು ವೈಶ್ಯರು; ಮಂದಗರು ಶೂದ್ರರು (69-70). ಮೈತ್ರೇಯ, ಶಾಕದ್ವೀಪದಲ್ಲಿ ಜನರು ಸಂಯತಚಿತ್ತರಾಗಿ ಶಾಸ್ತ್ರೋಕ್ತ ವಿಧಿಗಳಿಂದ ಸೂರ್ಯರೂಪಧಾರಿಯಾದ ವಿಷ್ಣುವನ್ನು ಅರ್ಚಿಸುತ್ತಾರೆ. ಆ ಶಾಕದ್ವೀಪವು ಅದರಷ್ಟೇ ಪರಿಮಾಣವುಳ್ಳ ಕ್ಷೀರ ಸಮುದ್ರದಿಂದ ವಲಯಾಕಾರವಾಗಿ ಆವೃತವಾಗಿದೆ (71-72). ಶಾಕ ದ್ವೀಪದ ಎರಡರಷ್ಟು ದೊಡ್ಡದಾದ ಪುಷ್ಕರ ದ್ವೀಪದಿಂದ ಶಾಕದ್ವೀಪವು ಸುತ್ತಲೂ ಆವೃತವಾಗಿದೆ. ಪುಷ್ಕರದ್ವೀಪದ ಅಧಿಪತಿಯಾದ ಸವನನಿಗೆ ಮಹಾವೀರ, ಧಾತಕಿ—ಎಂದು ಇಬ್ಬರು ಪುತ್ರರು (73-74). ಅವರಿಬ್ಬರ

**ಮಹಾವೀರಂ ತಥೈವಾನ್ಯದ್ಧಾತಕೀಖಂಡಸಂಜ್ಞಿತಮ್।**
**ಏಕಶ್ಚಾತ್ರ ಮಹಾಭಾಗ ಪ್ರಖ್ಯಾತೋ ವರ್ಷಪರ್ವತಃ॥** 75

**ಮಾನಸೋತ್ತರಸಂಜ್ಞೋ ವೈ ಮಧ್ಯತೋ ವಲಯಾಕೃತಿಃ।**
**ಯೋಜನಾನಾಂ ಸಹಸ್ರಾಣಿ ಊರ್ಧ್ವಂ ಪಂಚಾಶದುಚ್ಛ್ರಿತಃ॥** 76

**ತಾವದೇವ ಚ ವಿಸ್ತೀರ್ಣಃ ಸರ್ವತಃ ಪರಿಮಂಡಲಃ।**
**ಪುಷ್ಕರದ್ವೀಪವಲಯಂ ಮಧ್ಯೇನ ವಿಭಜನ್ನಿವ॥** 77

**ಸ್ಥಿತೋಽಸೌ ತೇನ ವಿಚ್ಛಿನ್ನಂ ಜಾತಂ ತದ್ವರ್ಷಕದ್ವಯಮ್।**
**ವಲಯಾಕಾರಮೇಕೈಕಂ ತಯೋರ್ವರ್ಷಂ ತಥಾ ಗಿರಿಃ॥** 78

**ದಶವರ್ಷಸಹಸ್ರಾಣಿ ತತ್ರ ಜೀವಂತಿ ಮಾನವಾಃ।**
**ನಿರಾಮಯಾ ವಿಶೋಕಾಶ್ಚ ರಾಗದ್ವೇಷಾದಿವರ್ಜಿತಾಃ॥** 79

**ಅಧಮೋತ್ತಮೌ ನ ತೇಷ್ವಾಸ್ತಾಂ ನ ವಧ್ಯವಧಕೌ ದ್ವಿಜ।**
**ನೇರ್ಷ್ಯಾಸೂಯಾ ಭಯಂ ದ್ವೇಷೋ ದೋಷೋ**
**ಲೋಭಾದಿಕೋ ನ ಚ॥** 80

---

ಹೆಸರಿನಲ್ಲಿ ಮಹಾವೀರ, ಧಾತಕೀಖಂಡ—ಎಂದು ಎರಡು ದೇಶಗಳಿವೆ. ಇವೆರಡು ದೇಶಗಳ ಮಧ್ಯದಲ್ಲಿ ಮಾನಸೋತ್ತರವೆಂಬ ವಲಯಾಕಾರದ ವರ್ಷಪರ್ವತವಿದೆ. ಇದು ಐವತ್ತು ಸಾವಿರ ಯೋಜನ ಎತ್ತರವಾಗಿದೆ (75-76). ಅಲ್ಲದೆ ಈ ಪರ್ವತವು ಎತ್ತರದಷ್ಟೇ ದೂರ ಸುತ್ತಲೂ ಹರಡಿಕೊಂಡು ಪುಷ್ಕರದ್ವೀಪವೆಂಬ ಗೋಳವನ್ನು ಎರಡಾಗಿ ವಿಭಾಗಿಸುತ್ತದೆಯೋ ಎಂಬಂತೆ ಕಾಣುತ್ತದೆ (77). ಆದ್ದರಿಂದ ಅಲ್ಲಿರುವ ಎರಡು ವರ್ಷಗಳು ವಿಭಕ್ತವಾಗಿವೆ. ಈ ವರ್ಷಗಳೂ ಪರ್ವತವೂ ವಲಯಾಕಾರವಾಗಿವೆ. ಅಲ್ಲಿ ಮಾನವರು ರಾಗದ್ವೇಷ ಶೋಕಾದಿಗಳಿಂದ ವರ್ಜಿತರಾಗಿ ಹತ್ತುಸಾವಿರ ವರ್ಷಗಳವರೆಗೆ ಆರೋಗ್ಯದಿಂದ ಬಾಳುತ್ತಾರೆ (78-79). ಆ ದ್ವೀಪದಲ್ಲಿ, ಮೈತ್ರೇಯ, ಉಚ್ಚನೀಚರೆಂಬ ಭೇದವಿಲ್ಲ, ವಧ್ಯರೂ ವಧಕರೂ ಇಲ್ಲ. ಈರ್ಷ್ಯೆ, ಅಸೂಯೆ, ಭಯ, ದ್ವೇಷಗಳಾಗಲಿ ಲೋಭಾದಿದೋಷಗಳಾಗಲಿ ಇಲ್ಲ (80). ಮಾನಸೋತ್ತರ ಶೈಲದ

**ಮಹಾವೀರಂ ಬಹಿರ್ವರ್ಷಂ ಧಾತಕೀಖಂಡಮಂತಮಃ।**
**ಮಾನಸೋತ್ತರಶೈಲಸ್ಯ ದೇವದೈತ್ಯಾದಿಸೇವಿತಮ್॥ 81**

**ಸತ್ಯಾನೃತೇ ನ ತತ್ರಾಸ್ತಾಂ ದ್ವೀಪೇ ಪುಷ್ಕರಸಂಜ್ಞಿತೇ।**
**ನ ತತ್ರ ನದ್ಯಃಶೈಲಾ ವಾ ದ್ವೀಪೇ ವರ್ಷದ್ವಯಾನ್ವಿತೇ॥ 82**

**ತುಲ್ಯವೇಷಾಸ್ತು ಮನುಜಾ ದೇವಾಸ್ತತ್ರೈಕರೂಪಿಣಃ।**
**ವರ್ಣಾಶ್ರಮಾಚಾರಹೀನಂ ಧರ್ಮಾಚರಣವರ್ಜಿತಮ್॥ 83**

**ತ್ರಯೀ ವಾರ್ತಾ ದಂಡನೀತಿಶುಶ್ರೂಷಾರಹಿತಂ ಚ ಯತ್।**
**ವರ್ಷದ್ವಯಂ ತು ಮೈತ್ರೇಯ ಭೌಮಃ**
**ಸ್ವರ್ಗೋಽಯಮುತ್ತಮಃ॥ 84**

**ಸರ್ವರ್ತುಸುಖದಃ ಕಾಲೋ ಜರಾರೋಗಾದಿವರ್ಜಿತಃ।**
**ಧಾತಕೀಖಂಡಸಂಜ್ಞೇಽಥ ಮಹಾವೀರೇ ಚ ವೈ ಮುನೇ॥ 85**

---

ಹೊರಭಾಗದಲ್ಲಿ ಮಹಾವೀರವರ್ಷವೂ ಒಳಭಾಗದಲ್ಲಿ ಧಾತಕೀಖಂಡ ವರ್ಷವೂ ಇವೆ. ದೇವದೈತ್ಯಾದಿಗಳು ಅಲ್ಲಿ ವಾಸವಾಗಿದ್ದಾರೆ. ಪುಷ್ಕರ ದ್ವೀಪದಲ್ಲಿ ಸತ್ಯ-ಅನೃತ ಎಂಬ ದ್ವಂದ್ವಗಳಿಲ್ಲ*. ದೇಶದ್ವಯಗಳಿಂದ ಕೂಡಿದ ಆ ದ್ವೀಪದಲ್ಲಿ ನದಿಗಳಾಗಲಿ ಪರ್ವತಗಳಾಗಲಿ ಇಲ್ಲ (81-82). ಅಲ್ಲಿರುವ ಮನುಷ್ಯರೂ ದೇವತೆಗಳೂ ಸಮಾನವೇಷದವರೂ ಸಮಾನ ರೂಪದವರೂ ಆಗಿದ್ದಾರೆ. ವರ್ಣಾಶ್ರಮವಿಭಾಗವಾಗಲಿ ಧರ್ಮ ಕಾರ್ಯದ ಅನುಷ್ಠಾನವಾಗಲಿ ಅಲ್ಲಿಲ್ಲ (83). ವೇದತ್ರಯ, ಕೃಷಿವಾಣಿಜ್ಯ ಗಳು, ದಂಡನೀತಿ, ಶುಶ್ರೂಷೆ—ಎಂಬಿವು ಆ ದ್ವೀಪದಲ್ಲಿಲ್ಲ. ಆ ಎರಡು ವರ್ಷಗಳು ಭೂಮಿಯಲ್ಲಿರುವ ಉತ್ತಮ ಸ್ವರ್ಗಗಳು (84). ಎಲ್ಲ ಋತುಗಳಲ್ಲಿಯೂ ಕಾಲವು ಸುಖಮಯವಾಗಿರುತ್ತದೆ. ಅಲ್ಲಿ ಮುಪ್ಪು ರೋಗಗಳೂ ಇಲ್ಲ. ಧಾತಕೀಖಂಡದಲ್ಲಿಯೂ ಹಾಗೆಯೇ. ಮಹಾವೀರ

---

* ಎಲ್ಲರೂ ಸತ್ಯವನ್ನೇ ನುಡಿಯುತ್ತಾರೆ ಎಂದು ತಾತ್ಪರ್ಯ. ಅನೃತವಿದ್ದರೆ ಸತ್ಯವೆಂಬ ಇನ್ನೊಂದಕ್ಕೆ ಉತ್ಥಿತಿ. ಅನೃತವಿಲ್ಲದಾಗ ಯಾವುದು ಸತ್ಯ, ಯಾವುದು ಸುಳ್ಳು—ಎಂಬ ವಿಭಾಗವಿರುವುದಿಲ್ಲ.

**ನ್ಯಗ್ರೋಧಃ ಪುಷ್ಕರದ್ವೀಪೇ ಬ್ರಹ್ಮಣಃ ಸ್ಥಾನಮುತ್ತಮಮ್।**
**ತಸ್ಮಿನ್ನಿವಸತಿ ಬ್ರಹ್ಮಾ ಪೂಜ್ಯಮಾನಃ ಸುರಾಸುರೈಃ॥ 86**

**ಸ್ವಾದೂದಕೇನೋದಧಿನಾ ಪುಷ್ಕರಃ ಪರಿವೇಷ್ಟಿತಃ।**
**ಸಮೇನ ಪುಷ್ಕರಸ್ಯೈವ ವಿಸ್ತಾರಾನ್ಮಂಡಲಂ ತಥಾ॥ 87**

**ಏವಂ ದ್ವೀಪಾಃ ಸಮುದ್ರೈಶ್ಚ ಸಪ್ತ ಸಪ್ತಭಿರಾವೃತಾಃ।**
**ದ್ವೀಪಶ್ಚೈವ ಸಮುದ್ರಶ್ಚ ಸಮಾನೌ ದ್ವಿಗುಣೌ ಪರೌ॥ 88**

**ಪಯಾಂಸಿ ಸರ್ವದಾ ಸರ್ವಸಮುದ್ರೇಷು ಸಮಾನಿ ವೈ।**
**ನ್ಯೂನಾತಿರಿಕ್ತತಾ ತೇಷಾಂ ಕದಾಚಿನ್ನೈವ ಜಾಯತೇ॥ 89**

**ಸ್ಥಾಲೀಸ್ಥಮಗ್ನಿಸಂಯೋಗಾದುದ್ರೇಕಿ ಸಲಿಲಂ ಯಥಾ।**
**ತಥೇಂದುವೃದ್ಧೌ ಸಲಿಲಮಂಭೋಧೌ ಮುನಿಸತ್ತಮ॥ 90**

---

ವರ್ಷದಲ್ಲಿಯೂ ಹಾಗೆಯೇ. ಪುಷ್ಕರದ್ವೀಪದಲ್ಲಿ ಬ್ರಹ್ಮನ ಸ್ಥಾನವಾದ ಒಂದು ಆಲದ ಮರವಿದೆ. ಅದರಲ್ಲಿ ಬ್ರಹ್ಮದೇವನು ಸುರಾಸುರರಿಂದ ಪೂಜಿತನಾಗಿ ವಾಸಿಸುತ್ತಿದ್ದಾನೆ (85-86). ಈ ಪುಷ್ಕರದ್ವೀಪವು ಅದರಷ್ಟೇ ಪರಿಮಾಣವುಳ್ಳ ಸ್ವಾದೂದಕ ಸಮುದ್ರದಿಂದ ಮಂಡಲಾಕಾರವಾಗಿ ಪರಿವೃತವಾಗಿದೆ. ಹೀಗೆ ಸಪ್ತದ್ವೀಪಗಳು ಸಪ್ತ ಸಮುದ್ರಗಳಿಂದ ಪರಿವೃತ ವಾಗಿದ್ದು ಒಂದೊಂದು ದ್ವೀಪವೂ ಅದರ ಸುತ್ತಲಿರುವ ಸಮುದ್ರವೂ ಸಮಾನ ಪರಿಮಾಣವುಳ್ಳವುಗಳಾಗಿವೆ. ಹಾಗೆಯೇ ಉತ್ತರೋತ್ತರವಾಗಿ ಒಂದೊಂದು ದ್ವೀಪವೂ ಸಮುದ್ರವೂ ಹಿಂದಿನವುಗಳಿಗಿಂತ ಎರಡರಷ್ಟು ದೊಡ್ಡದಾಗುತ್ತ ಹೋಗುತ್ತವೆ (87-88). ಎಲ್ಲ ಸಮುದ್ರಗಳಲ್ಲಿಯೂ ಸರ್ವದಾ ಒಂದೇ ಅಳತೆಯಲ್ಲಿ ನೀರಿರುತ್ತದೆ. ಅದರಲ್ಲಿ ನ್ಯೂನಾತಿ ರೇಕಗಳೂ ಯಾವಾಗಲೂ ಆಗುವುದಿಲ್ಲ. ಬೆಂಕಿಯನ್ನು ಹೊತ್ತಿಸಿದಾಗ ಪಾತ್ರೆಯಲ್ಲಿರುವ ನೀರು ಹೇಗೆ ಉಕ್ಕುತ್ತದೆಯೋ ಹಾಗೆ ಚಂದ್ರನು ವರ್ಧಿಸಿ ದಾಗ ಸಮುದ್ರದ ನೀರು ಉಕ್ಕುತ್ತದೆ (ಹೆಚ್ಚುವುದಿಲ್ಲ) (89-90). ಶುಕ್ಲಕೃಷ್ಣ ಪಕ್ಷಗಳಲ್ಲಿ ಚಂದ್ರನು ಉದಯಿಸಿದಾಗ ಸಮುದ್ರ ಜಲವು ಉಕ್ಕುತ್ತದೆ. ಅಸ್ತಮಯವಾದಾಗ ಇಳಿಯುತ್ತದೆ. ಆದರೆ ಸಮುದ್ರಜಲವು ಹೆಚ್ಚುವುದೂ

**ಅನ್ಯೂನಾನತಿರಿಕ್ತಾಶ್ಚ ವರ್ಧಂತ್ಯಾಪೋ ಹ್ರಸಂತಿ ಚ।**
**ಉದಯಾಸ್ತಮನೇಷ್ವಿಂದೋಃ ಪಕ್ಷಯೋಃ ಶುಕ್ಲಕೃಷ್ಣಯೋಃ॥** 91

**ದಶೋತ್ತರಾಣಿ ಪಂಚೈವ ಹ್ಯಂಗುಲಾನಾಂ ಶತಾನಿ ವೈ।**
**ಅಪಾಂ ವೃದ್ಧಿಕ್ಷಯೌ ದೃಷ್ಟೌ ಸಾಮುದ್ರೀಣಾಂ**
**ಮಹಾಮುನೇ॥** 92

**ಭೋಜನಂ ಪುಷ್ಕರದ್ವೀಪೇ ತತ್ರ ಸ್ವಯಮುಪಸ್ಥಿತಮ್।**
**ಷಡ್‌ರಸಂ ಭುಂಜತೇ ವಿಪ್ರ ಪ್ರಜಾಃ ಸರ್ವಾಃ ಸದೈವ ಹಿ॥** 93

**ಸ್ವಾದೂದಕಸ್ಯ ಪರಿತೋ ದೃಶ್ಯತೇಽಲೋಕಸಂಸ್ಥಿತಿಃ।**
**ದ್ವಿಗುಣಾ ಕಾಂಚನೀ ಭೂಮಿಃ ಸರ್ವಜಂತುವಿವರ್ಜಿತಾ॥** 94

**ಲೋಕಾಲೋಕಸ್ತತಶ್ಶೈಲೋ ಯೋಜನಾಯುತವಿಸ್ತೃತಃ।**
**ಉಚ್ಛ್ರಾಯೇಣಾಪಿ ತಾವಂತಿ ಸಹಸ್ರಾಣ್ಯಚಲೋ ಹಿ ಸಃ॥** 95

**ತತಸ್ತಮಃ ಸಮಾವೃತ್ಯ ತಂ ಶೈಲಂ ಸರ್ವತಃ ಸ್ಥಿತಮ್।**
**ತಮಶ್ಚಾಂಡಕಟಾಹೇನ ಸಮಂತಾತ್ ಪರಿವೇಷ್ಟಿತಮ್॥** 96

---

ಇಲ್ಲ; ಕಡಿಮೆಯಾಗುವುದೂ ಇಲ್ಲ (91). ಮೈತ್ರೇಯ, ಸಮುದ್ರಜಲದ ವೃದ್ಧಿಕ್ಷಯಗಳು ಐದುನೂರ ಹತ್ತು ಅಂಗುಲಗಳಷ್ಟು ಮಾತ್ರವೇ ಕಂಡು ಬಂದಿವೆ. ಪುಷ್ಕರದ್ವೀಪದಲ್ಲಿ (ಪ್ರಯತ್ನವಿಲ್ಲದೆಯೇ) ಭೋಜನವು ತಾನಾಗಿ ಉಪಸ್ಥಿತವಾಗುತ್ತದೆ. ಸಕಲ ಪ್ರಜೆಗಳೂ ಸದಾ ಷಡ್ರಸೋಪೇತವಾದ ಭೋಜನವನ್ನು ಊಟಮಾಡುತ್ತಾರೆ! (92-93). ಸುತ್ತಲೂ ಇರುವ ಸ್ವಾದೂದಕಸಮುದ್ರದ ಆಚೆ ಜನವಸತಿ ಕಂಡುಬರುವುದಿಲ್ಲ. ಕೇವಲ ಅದರ ಎರಡರಷ್ಟಿರುವ ಸುವರ್ಣಭೂಮಿಯು ಮಾತ್ರ ಗೋಚರಿಸುತ್ತದೆ. ಅದರಲ್ಲಿ ಯಾವ ಜೀವಿಯೂ ಇಲ್ಲ (94). ಅಲ್ಲಿ ಹತ್ತುಸಾವಿರ ಯೋಜನಗಳ ವಿಸ್ತಾರವಾದ ಅಷ್ಟೇ ಎತ್ತರವಾದ ಲೋಕಾಲೋಕ ಪರ್ವತವಿದೆ. ಅದರ ಹೊರಗೆ ಸುತ್ತಲೂ ಕತ್ತಲೆ ತುಂಬಿಕೊಂಡಿದೆ. ಕತ್ತಲೆಯನ್ನು ಬ್ರಹ್ಮಾಂಡಕಟಾಹವು ಆವರಿಸಿದೆ (95-96). ಮೈತ್ರೇಯ, ಅಂಡಾಕಾರದ ಕಟಾಹದಿಂದ ಸಹಿತವಾಗಿ ಸಮಸ್ತದ್ವೀಪ ಸಮುದ್ರ ಪರ್ವತಗಳಿಂದ

**ಪಂಚಾಶತ್ಕೋಟಿವಿಸ್ತಾರಾ ಸೇಯಮುರ್ವೀ ಮಹಾಮುನೇ।**
**ಸಹೈವಾಂಡಕಟಾಹೇನ ಸದ್ವೀಪಾಬ್ಧಿಮಹೀಧರಾ॥ 97**

**ಸೇಯಂ ಧಾತ್ರೀ ವಿಧಾತ್ರೀ ಚ ಸರ್ವಭೂತಗುಣಾಧಿಕಾ।**
**ಆಧಾರಭೂತಾ ಸರ್ವೇಷಾಂ ಮೈತ್ರೇಯ ಜಗತಾಮಿತಿ॥ 98**

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ಚತುರ್ಥೋಽಧ್ಯಾಯಃ

---

ಒಡಗೂಡಿದ ಈ ಭೂಮಂಡಲವು ಐವತ್ತು ಕೋಟಿ ಯೋಜನ ವಿಸ್ತಾರವಾದದ್ದು* (97). ಸರ್ವಭೂತಗಳಿಗಿಂತ ಅಧಿಕ ಗುಣಶಾಲಿಯಾದ ಈ ಭೂಮಿಯು ಜಗತ್ತಿನ ಎಲ್ಲ ಜೀವಿಗಳಿಗೆ ಆಧಾರಭೂತವೂ ಜನ್ಮದಾತ್ರಿಯೂ ಪಾಲನಕರ್ತ್ರಿಯೂ ಆಗಿದೆ.

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ನಾಲ್ಕನೆಯ ಅಧ್ಯಾಯ ಮುಗಿಯಿತು.



---

* Wilford ಎಂಬ ಪಾಶ್ಚಾತ್ಯ ವಿದ್ವಾಂಸರು ಮುಂದೆ ಹೇಳಿದಂತೆ ದ್ವೀಪಗಳು ಯಾವುವೆಂಬುದನ್ನು ಊಹಿಸಿದ್ದಾರೆಂದು H. H. Wilson ಅವರು ಬರೆಯುತ್ತಾರೆ: ಜಂಬೂ = ಇಂಡಿಯಾ, ಕುಶ = ಇಂಡಿಯಾ ಮತ್ತು ಮೆಸಪಟೋಮಿಯಾದ ನಡುವಿನ ಪ್ರದೇಶ, ಪ್ಲಕ್ಷ = ಏಷಿಯಾ ಮೈನರ್, ಶಾಲ್ಮಲಿ = ಪೂರ್ವಯೂರೋಪ್, ಕ್ರೌಂಚ = ಜರ್ಮನಿ, ಶಕ = ಬ್ರಿಟಿಷ್ ದ್ವೀಪಗಳು, ಪುಷ್ಕರ = ಐಸ್‌ಲ್ಯಾಂಡ್.

## ಪಂಚಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ವಿಸ್ತಾರ ಏಷ ಕಥಿತಃ ಪೃಥಿವ್ಯಾ ಭವತೋ ಮಯಾ।**
**ಸಪ್ತತಿಸ್ತು ಸಹಸ್ರಾಣಿ ದ್ವಿಜೋಚ್ಛ್ರಾಯೋಽಪಿ ಕಥ್ಯತೇ॥** 1

**ದಶಸಾಹಸ್ರಮೇಕೈಕಂ ಪಾತಾಲಂ ಮುನಿಸತ್ತಮ।**
**ಅತಲಂ ವಿತಲಂ ಚೈವ ನಿತಲಂ ಚ ಗಭಸ್ತಿಮತ್।**
**ಮಹಾಖ್ಯಂ ಸುತಲಂ ಚಾಗ್ರ್ಯಂ ಪಾತಾಲಂ ಚಾಪಿ ಸಪ್ತಮಮ್॥** 2

**ಶುಕ್ಲಕೃಷ್ಣಾರುಣಾಃ ಪೀತಾಃ ಶರ್ಕರಾಃ ಶೈಲಕಾಂಚನಾಃ।**
**ಭೂಮಯೋ ಯತ್ರ ಮೈತ್ರೇಯ ವರಪ್ರಾಸಾದಮಂಡಿತಾಃ॥** 3

**ತೇಷು ದಾನವದೈತೇಯಾ ಯಕ್ಷಾಶ್ಚ ಶತಶಸ್ತಥಾ।**
**ನಿವಸಂತಿ ಮಹಾನಾಗಜಾತಯಶ್ಚ ಮಹಾಮುನೇ॥** 4

---

## ಅಧ್ಯಾಯ 5

### ಸಪ್ತ ಪಾತಾಳಗಳ ವರ್ಣನೆ

ಪರಾಶರರು ಹೇಳಿದರು: ಮೈತ್ರೇಯ, ಈ ಭೂಮಂಡಲದ ವಿಸ್ತಾರವನ್ನು ಹೇಳಿದ್ದಾಗಿದೆ. ಇದರ ಎತ್ತರ (ದಪ್ಪ) ಎಪ್ಪತ್ತು ಸಾವಿರ ಯೋಜನಗಳೆಂದು ಉಕ್ತವಾಗಿದೆ (1). (ಕೆಳಗಿರುವ) ಪಾತಾಳ ಭೇದಗಳಲ್ಲಿ ಒಂದೊಂದೂ ಹತ್ತುಸಾವಿರ ಯೋಜನಗಳ ಅಂತರದಲ್ಲಿವೆ. ಅವು ಯಾವುವೆಂದರೆ: ಅತಳ, ವಿತಳ, ನಿತಳ, ಗಭಸ್ತಿಮಾನ್, ಮಹಾತಳ, ಸುತಳ ಮತ್ತು ಪಾತಾಳ. ಅವುಗಳ ನೆಲಗಳು ಬಿಳುಪು, ಕಪ್ಪು, ಕೆಂಪು, ಹಳದಿ ಬಣ್ಣದವು. ಕೆಲವು ನೆಲಗಳು ಮರಳು, ಕಲ್ಲು, ಸುವರ್ಣಮಯಗಳಾಗಿವೆ. ಉತ್ತಮವಾದ ಪ್ರಾಸಾದಗಳು ಅಲ್ಲಿವೆ (2-3). ಅವುಗಳಲ್ಲಿ ದೈತ್ಯದಾನವರೂ ಯಕ್ಷರೂ ದೊಡ್ಡ ದೊಡ್ಡ ನಾಗಜಾತಿಯವರೂ

**ಸ್ವರ್ಲೋಕಾದಪಿ ರಮ್ಯಾಣಿ ಪಾತಾಲಾನೀತಿ ನಾರದಃ।**
**ಪ್ರಾಹ ಸ್ವರ್ಗಸದಾಂ ಮಧ್ಯೇ ಪಾತಾಲೇಭ್ಯೋ ಗತೋ ದಿವಿ॥ 5**

**ಆಹ್ಲಾದಕಾರಿಣಃ ಶುಭ್ರಾ ಮಣಯೋ ಯತ್ರ ಸುಪ್ರಭಾಃ।**
**ನಾಗಾಭರಣಭೂಷಾಸು ಪಾತಾಲಂ ಕೇನ ತತ್ಸಮಮ್॥ 6**

**ದೈತ್ಯದಾನವಕನ್ಯಾಭಿರಿತಶ್ಚೇತಶ್ಚ ಶೋಭಿತೇ।**
**ಪಾತಾಲೇ ಕಸ್ಯ ನ ಪ್ರೀತಿರ್ವಿಮುಕ್ತಸ್ಯಾಪಿ ಜಾಯತೇ॥ 7**

**ದಿವಾರ್ಕರಶ್ಮಯೋ ಯತ್ರ ಪ್ರಭಾಂ ತನ್ವಂತಿ ನಾತಪಮ್।**
**ಶಶಿರಶ್ಮಿರ್ನಶೀತಾಯ ನಿಶಿ ದ್ಯೋತಾಯ ಕೇವಲಮ್॥ 8**

**ಭಕ್ಷ್ಯಭೋಜ್ಯಮಹಾಪಾನಮುದಿತೈರಪಿ ಭೋಗಿಭಿಃ।**
**ಯತ್ರ ನ ಜ್ಞಾಯತೇ ಕಾಲೋ ಗತೋಽಪಿ ಧನುಜಾದಿಭಿಃ॥ 9**

---

ವಾಸಮಾಡುತ್ತಾರೆ. ಒಮ್ಮೆ ನಾರದರು ಪಾತಾಳದಿಂದ ಸ್ವರ್ಗಲೋಕಕ್ಕೆ ಹೋಗಿ ದೇವತೆಗಳೆದುರಿಗೆ "ಸ್ವರ್ಗಲೋಕಕ್ಕಿಂತ ಪಾತಾಳಲೋಕ*ಗಳು ರಮ್ಯವಾಗಿವೆ!" ಎಂದು ಹೇಳಿದರು (4-5). ನಾಗಗಳ ಆಭರಣಗಳಲ್ಲಿರುವ ಶುಭ್ರಮಣಿಗಳು ಎಷ್ಟು ಕಾಂತಿಯುತವಾಗಿ ಆಹ್ಲಾದಕಾರಿಗಳಾಗಿವೆ! ಅಂತಹ ಪಾತಾಳಕ್ಕೆ ಸಮವಾದದ್ದು ಯಾವುದು? (6). ಇಲ್ಲಿಂದಲ್ಲಿಗೆ ಸಂಚರಿಸುವ ದೈತ್ಯದಾನವಕನ್ಯೆಯರಿಂದ ಶೋಭಿತವಾದ ಪಾತಾಳದಲ್ಲಿ ಯಾವ ಮುಕ್ತಪುರುಷನಿಗೆ ಸಹ ಪ್ರೀತಿಯುಂಟಾಗದೆ ಇದ್ದೀತು? (7). ಅಲ್ಲಿ ಹಗಲು ಹೊತ್ತು ಸೂರ್ಯರಶ್ಮಿಗಳು ಬರಿಯ ಬೆಳಕನ್ನು ನೀಡುತ್ತವೆಯೇ ಹೊರತು ಸುಡುವ ಬಿಸಿಲನ್ನು ಬೀರುವುದೇ ಇಲ್ಲ! ರಾತ್ರಿಯ ಹೊತ್ತು ಚಂದ್ರರಶ್ಮಿಯು ಬೆಳದಿಂಗಳನ್ನು ನೀಡುತ್ತದೆಯೇ ಹೊರತು ಚಳಿಯನ್ನುಂಟುಮಾಡುವುದಿಲ್ಲ! (8). ಭಕ್ಷ್ಯಭೋಜ್ಯಗಳು ಮತ್ತು ಉತ್ತಮ ಪಾನೀಯಗಳಿಂದ ಸಂತೋಷಿಸುವ ಭೋಗಿಗಳಾದ ದನುಜಾದಿಗಳಿಗೆ ಹೊತ್ತು ಹೋದದ್ದೇ ತಿಳಿಯುವುದಿಲ್ಲ! (9). ಉದ್ಯಾನವನಗಳು,

---

* ಅತಳ ವಿತಳಾದಿಗಳೆಲ್ಲಕ್ಕೂ ಪಾತಾಳವೆಂದು ವ್ಯವಹಾರವಿದೆ.

ವನಾನಿ ನದ್ಯೋ ರಮ್ಯಾಣಿ ಸರಾಂಸಿ ಕಮಲಾಕರಾಃ।
ಪುಂಸ್ಕೋಕಿಲಾಭಿಲಾಪಾಶ್ಚ ಮನೋಜ್ಞಾನ್ಯಂಬರಾಣಿ ಚ॥ 10

ಭೂಷಣಾನ್ಯತಿಶುಭ್ರಾಣಿ ಗಂಧಾಢ್ಯಂ ಚಾನುಲೇಪನಮ್।
ವೀಣಾವೇಣುಮೃದಂಗಾನಾಂ ಸ್ವನಾಸ್ತೂರ್ಯಾಣಿ ಚ ದ್ವಿಜ॥ 11

ಏತಾನ್ಯನ್ಯಾನಿ ಚೋದಾರಭಾಗ್ಯಭೋಗ್ಯಾನಿ ದಾನವೈಃ।
ದೈತ್ಯೋರಗೈಶ್ಚ ಭುಜ್ಯಂತೇ ಪಾತಾಲಾಂತರಗೋಚರೈಃ॥ 12

ಪಾತಾಲಾನಾಮಧಶ್ಚಾಸ್ತೇ ವಿಷ್ಣೋರ್ಯಾ ತಾಮಸೀ ತನುಃ।
ಶೇಷಾಖ್ಯಾ ಯದ್ಗುಣಾನ್ವಕ್ತುಂ ನ ಶಕ್ತಾ ದೈತ್ಯದಾನವಾಃ॥ 13

ಯೋಽನಂತಃ ಪಠ್ಯತೇ ಸಿದ್ಧೈರ್ದೇವೋ ದೇವರ್ಷಿಪೂಜಿತಃ।
ಸ ಸಹಸ್ರಶಿರಾ ವ್ಯಕ್ತಸ್ವಸ್ತಿಕಾಮಲಭೂಷಣಃ॥ 14

ಫಣಾಮಣಿಸಹಸ್ರೇಣ ಯಃ ಸ ವಿದ್ಯೋತಯನ್ ದಿಶಃ।
ಸರ್ವಾನ್ ಕರೋತಿ ನಿರ್ವೀರ್ಯಾನ್ ಹಿತಾಯ
ಜಗತೋಽಸುರಾನ್॥ 15

---

ನದಿಗಳು, ಸೊಗಸಾದ ಸರೋವರಗಳು, ಕಮಲವನಗಳು ಎಲ್ಲವೂ ಮನೋಹರವಾಗಿವೆ. ಗಂಡು ಕೋಗಿಲೆಗಳ ಇಂಚರಗಳಿಂದ ಅಂಬರ ತಳಗಳೂ ಸಹ ಇಂಪಾಗಿವೆ! (10). ಅಲ್ಲಿಯವರ ಒಡವೆಗಳು ಅತಿಶುಭ್ರ ವಾಗಿರುತ್ತವೆ. ಅನುಲೇಪನವು ಪರಿಮಳಭರಿತವಾದದ್ದು. ವೀಣೆ, ಕೊಳಲು, ಮೃದಂಗಾದಿ ನಾನಾ ವಾದ್ಯಗಳ ಮಧುರಧ್ವನಿಗಳು ಹರಡಿರು ತ್ತವೆ. ಇವೇ ಮೊದಲಾದ ನಾನಾ ಬಗೆಯ ಉದಾರ ಭೋಗ್ಯಭಾಗ್ಯಗಳು ಪಾತಾಳಗಳಲ್ಲಿ ವಾಸಿಸುವ ದೈತ್ಯದಾನವ ನಾಗಾದಿಗಳಿಂದ ಅನುಭವಿಸ ಲ್ಪಡುತ್ತಿವೆ (11-12). ಈ ಸಪ್ತಪಾತಾಳಗಳ ಕೆಳಗೆ ವಿಷ್ಣುವಿನ ತಮೋಮಯವಾದ 'ಶೇಷ' ಎಂಬ ಶರೀರ ಉಂಟು. ಶೇಷನ ಗುಣ ಗಳನ್ನು ವರ್ಣಿಸಲು ದೈತ್ಯದಾನವರಿಗೆ ಅಳವಲ್ಲ (13). ದೇವರ್ಷಿಪೂಜಿತ ನಾದ ಈ ಸ್ವಾಮಿಯನ್ನು 'ಅನಂತ' ಎಂದು ಸಿದ್ಧಪುರುಷರು ಕರೆಯುತ್ತಾರೆ. ಆತನಿಗೆ ಸ್ವಸ್ತಿಕ ಚಿಹ್ನೆಗಳಿಂದ ಭೂಷಿತಗಳಾದ ಸಾವಿರ ಶಿರಸ್ಸುಗಳುಂಟು (14). ಆತನು ಸಾವಿರ ಫಣಾಮಣಿಗಳಿಂದ ದಿಕ್ಕುಗಳನ್ನು ಬೆಳಗಿಸುತ್ತ

**ಮದಾಘೂರ್ಣಿತನೇತ್ರೋಽಸೌ ಯಃ ಸದೈವೈಕಕುಂಡಲಃ।**
**ಕಿರೀಟೀ ಸ್ರಗ್ಧರೋ ಭಾತಿ ಸಾಗ್ನಿಃ ಶ್ವೇತ ಇವಾಚಲಃ॥ 16**

**ನೀಲವಾಸಾ ಮದೋತ್ಸಿಕ್ತಃ ಶ್ವೇತಹಾರೋಪಶೋಭಿತಃ।**
**ಸಾಭ್ರಗಂಗಾಪ್ರವಾಹೋಽಸೌ ಕೈಲಾಸಾದ್ರಿರಿವಾಪರಃ॥ 17**

**ಲಾಂಗಲಾಸಕ್ತಹಸ್ತಾಗ್ರೋ ವಿಭ್ರನ್ಮುಸಲಮುತ್ತಮಮ್।**
**ಉಪಾಸ್ಯತೇ ಸ್ವಯಂ ಕಾಂತ್ಯಾ ಯೋ ವಾರುಣ್ಯಾ ಚ**
**ಮೂರ್ತಯಾ॥ 18**

**ಕಲ್ಪಾಂತೇ ಯಸ್ಯ ವಕ್ತ್ರೇಭ್ಯೋ ವಿಷಾನಲಶಿಖೋಜ್ಜ್ವಲಃ।**
**ಸಂಕರ್ಷಣಾತ್ಮಕೋ ರುದ್ರೋ ನಿಷ್ಕ್ರಮ್ಯಾತ್ತಿ ಜಗತ್ತ್ರಯಮ್॥ 19**

**ಸ ಬಿಭ್ರಚ್ಛೇಖರೀಭೂತಮಶೇಷಂ ಕ್ಷಿತಿಮಂಡಲಮ್।**
**ಆಸ್ತೇ ಪಾತಾಲಮೂಲಸ್ಥಃ ಶೇಷೋಽಶೇಷಸುರಾರ್ಚಿತಃ॥ 20**

---

ಲೋಕಹಿತಕ್ಕಾಗಿ ಎಲ್ಲ ಅಸುರರ ಪರಾಕ್ರಮವನ್ನು ಹಾನಿಗೊಳಿಸುತ್ತಾನೆ. ಒಂದೇ ಸುತ್ತು ಹಾಕಿ ಮಲಗಿರುವ ಆತನ ನೇತ್ರಗಳು ಸದಾ ಮದದಿಂದ ಚಲಿಸುತ್ತ ಇರುತ್ತವೆ. ಕಿರೀಟಧಾರಿಯೂ ಮಾಲಾಭೂಷಿತನೂ ಆದ ಅನಂತನು ಅಗ್ನಿಯುಕ್ತವಾದ ಶ್ವೇತಪರ್ವತದಂತೆ ಕಂಗೊಳಿಸುತ್ತಾನೆ (15-16). ನೀಲವಸ್ತ್ರಧಾರಿಯೂ ಮದೋದ್ರಿಕ್ತನೂ ಆದ ಅನಂತನು ಬಿಳಿಯ ಹಾರದಿಂದ ಶೋಭಿತನಾಗಿ, ಆಕಾಶಗಂಗಾಪ್ರವಾಹದಿಂದ ಶೋಭಿಸುವ ಮತ್ತೊಂದು ಕೈಲಾಸಪರ್ವತವೋ ಎಂಬಂತೆ ಕಂಗೊಳಿಸುತ್ತಾನೆ (17). ಕೈಯಲ್ಲಿ ಹಲಧಾರಿಯೂ ಉತ್ತಮವಾದ ಮುಸಲಾಯುಧವನ್ನು ಹಿಡಿದಿರುವವನೂ ಆದ ಆತನನ್ನು ಕಾಂತಿಯೂ ಮದಿರೆಯೂ ಮೂರ್ತಿಮತ್ತಾಗಿ ಸೇವಿಸುತ್ತಾರೆ (18). ಆತನ ಮುಖಗಳಿಂದ ಕಲ್ಪಾಂತಕಾಲದಲ್ಲಿ ವಿಷಾಗ್ನಿ ಜ್ವಾಲೆಗಳಿಂದ ಉಜ್ವಲನಾದ ಸಂಕರ್ಷಣನೆಂಬ ರುದ್ರನು ಹೊರಬಂದು ಮೂರು ಲೋಕಗಳನ್ನೂ ನುಂಗಿ ನೊಣೆಯುತ್ತಾನೆ (19). ಅಶೇಷ ಸುರಾರ್ಚಿತನಾದ ಆದಿಶೇಷನು ಅಶೇಷ ಜಗತ್ತನ್ನೂ ಶಿರಸ್ಸಿನಲ್ಲಿ ಶೇಖರವಾಗಿ ಧರಿಸಿ ಪಾತಾಳದ ಬುಡದಲ್ಲಿ ನೆಲೆಸಿದ್ದಾನೆ. ಆತನ ವೀರ್ಯ,

ತಸ್ಯ ವೀರ್ಯಂ ಪ್ರಭಾವಶ್ಚ ಸ್ವರೂಪಂ ರೂಪಮೇವ ಚ ।
ನ ಹಿ ವರ್ಣಯಿತುಂ ಶಕ್ಯಂ ಜ್ಞಾತುಂ ಚ ತ್ರಿದಶೈರಪಿ ॥ 21

ಯಸ್ಯೈಷಾ ಸಕಲಾ ಪೃಥ್ವೀ ಫಣಾಮಣಿಶಿಖಾರುಣಾ ।
ಆಸ್ತೇ ಕುಸುಮಮಾಲೇವ ಕಸ್ತದ್ವೀರ್ಯಂ ವದಿಷ್ಯತಿ ॥ 22

ಯದಾ ವಿಜೃಂಭತೇಽನಂತೋ ಮದಾಘೂರ್ಣಿತಲೋಚನಃ ।
ತದಾ ಚಲತಿ ಭೂರೇಷಾ ಸಾಬ್ಧಿತೋಯಾ ಸಕಾನನಾ ॥ 23

ಗಂಧರ್ವಾಪ್ಸರಸಃ ಸಿದ್ಧಾಃ ಕಿನ್ನರೋರಗಚಾರಣಾಃ ।
ನಾಂತಂ ಗುಣಾನಾಂ ಗಚ್ಛಂತಿ ತೇನಾನಂತೋಽಯಮವ್ಯಯಃ ॥ 24

ಯಸ್ಯ ನಾಗವಧೂಹಸ್ತೈರ್ಲೇಪಿತಂ ಹರಿಚಂದನಮ್ ।
ಮುಹುಃ ಶ್ವಾಸಾನಿಲಾಪಾಸ್ತಂ ಯಾತಿ ದಿಕ್ಸೂದವಾಸತಾಮ್ ॥ 25

ಯಮಾರಾಧ್ಯ ಪುರಾಣರ್ಷಿರ್ಗರ್ಗೋ ಜ್ಯೋತೀಂಷಿ ತತ್ತ್ವತಃ ।
ಜ್ಞಾತವಾನ್ ಸಕಲಂ ಚೈವ ನಿಮಿತ್ತಪಠಿತಂ ಫಲಮ್ ॥ 26

---

ಪ್ರಭಾವ, ಸ್ವರೂಪ, ರೂಪಗಳನ್ನು ದೇವತೆಗಳೂ ವರ್ಣಿಸಿ ಹೇಳಲಾರರು. ಅವರು ತಿಳಿದುಕೊಳ್ಳಲೂ ಸಮರ್ಥರಲ್ಲ! (20-21). ಯಾವಾತನ ಶಿರಸ್ಸಿನಲ್ಲಿ ಸಕಲ ಪೃಥ್ವಿಯೂ ಫಣಾಮಣಿಗಳ ಕಾಂತಿಯಿಂದ ಕೆಂಪಾದ ಹೂಮಾಲೆಯಂತೆ ನಿಂತಿದೆಯೋ, ಆತನ ಸಾಮರ್ಥ್ಯವನ್ನು ಯಾವನು ಹೇಳಿಯಾನು? (22). ಮದದಿಂದ ನೇತ್ರಗಳನ್ನು ಅಲ್ಲಾಡಿಸುತ್ತ ಅನಂತನು ಯಾವಾಗ ಆಕಳಿಸುತ್ತಾನೋ ಆಗ ಸಮುದ್ರಾರಣ್ಯಸಹಿತವಾದ ಈ ಪೃಥ್ವಿ ಅಲ್ಲಾಡುತ್ತದೆ! ಗಂಧರ್ವರೂ, ಅಪ್ಸರೆಯರೂ ಸಿದ್ಧರೂ ಕಿನ್ನರೋರಗ ಚಾರಣರೂ ಸಹ ಈತನ ಗುಣಗಳ ಅಂತವನ್ನು ಕಂಡಿಲ್ಲವಾದ್ದರಿಂದ ಈತನು ಅವ್ಯಯನಾದ ಅನಂತನೆನಿಸಿದ್ದಾನೆ (23-24). ನಾಗವಧುಗಳು ಈ ಅನಂತಮೂರ್ತಿಗೆ ಹರಿಚಂದನವನ್ನು ಲೇಪಿಸುತ್ತಾರೆ. ಅದು ಅನಂತನ ಶ್ವಾಸಾನಿಲದಿಂದ ಒಣಗಿದ ಸುಗಂಧಚೂರ್ಣವಾಗಿ ದಿಗ್‌ದಿಗಂತಗಳಿಗೆ ಹಾರಿಹೋಗುತ್ತದೆ! (25). ಪುರಾಣ ಋಷಿಯಾದ ಗರ್ಗನು ಈ ಆದಿಶೇಷನನ್ನು ಆರಾಧಿಸಿ ನಕ್ಷತ್ರಾದಿಜ್ಯೋತಿರ್ಮಂಡಲದ ತತ್ತ್ವವನ್ನೂ

**ತೇನೇಯಂ ನಾಗವರ್ಯೇಣ ಶಿರಸಾ ವಿಧೃತಾ ಮಹೀ।**
**ಬಿಭರ್ತಿ ಮಾಲಾಂ ಲೋಕಾನಾಂ**
**ಸದೇವಾಸುರಮಾನುಷಾಮ್॥ 27**

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ಪಂಚಮೋಽಧ್ಯಾಯಃ

---

ಶಕುನಗಳಿಂದಾಗುವ ಸಕಲ ಫಲಗಳನ್ನೂ ಅರಿತುಕೊಂಡನು (26). ಅಂತಹ ನಾಗಶ್ರೇಷ್ಠನಾದ ಆದಿಶೇಷನಿಂದ ಈ ಪೃಥ್ವಿಯು ಧರಿಸಲ್ಪಟ್ಟಿದೆ. ದೇವಾಸುರಮನುಷ್ಯರಿಂದ ಸಹಿತವಾದ ಲೋಕಗಳ ಮಾಲೆಯನ್ನು ಆತನು ಧರಿಸಿದ್ದಾನೆ (27).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಐದನೆಯ ಅಧ್ಯಾಯ ಮುಗಿಯಿತು.



## ಷಷ್ಠೋಽಧ್ಯಾಯಃ

*ಶ್ರೀಪರಾಶರ ಉವಾಚ:*

ತತಶ್ಚ ನರಕಾ ವಿಪ್ರಾ ಭುವೋಽಧಃ ಸಲಿಲಸ್ಯ ಚ।
ಪಾಪಿನೋ ಯೇಷು ಪಾತ್ಯಂತೇ ತಾನ್ ಶೃಣುಷ್ವ ಮಹಾಮುನೇ॥

ರೌರವಃ ಸೂಕರೋ ರೋಧಸ್ತಾಲೋ ವಿಶಸನಸ್ತಥಾ।
ಮಹಾಜ್ವಾಲಸ್ತಪ್ತಕುಂಭೋ ಲವಣೋಽಥ ವಿಲೋಹಿತಃ॥ 2

ರುಧಿರಾಂಭೋ ವೈತರಣಿಃ ಕೃಮೀಶಃ ಕೃಮಿಭೋಜನಃ।
ಅಸಿಪತ್ರವನಂ ಕೃಷ್ಣೋ ಲಾಲಾಭಕ್ಷಶ್ಚ ಧಾರುಣಃ॥ 3

ತಥಾ ಪೂಯವಹಃ ಪಾಪೋ ವಹ್ನಿಜ್ವಾಲೋ ಹ್ಯಧಃ ಶಿರಾಃ।
ಸಂದಂಶಃ ಕಾಲಸೂತ್ರಶ್ಚ ತಮಶ್ಚಾವೀಚಿರೇವ ಚ॥ 4

ಶ್ವಭೋಜನೋಽಥಾಪ್ರತಿಷ್ಠಶ್ಚಾಪ್ರುಚಿಶ್ಚ ತಥಾ ಪರಃ।
ಇತ್ಯೇವಮಾದಯಾಶ್ಚಾನ್ಯೇ ನರಕಾ ಭೃಶದಾರುಣಾಃ॥ 5

---

## ಅಧ್ಯಾಯ ೬

ನಾನಾನರಕಗಳ ವರ್ಣನೆ. ಭಗವನ್ನಾಮಸ್ಮರಣೆಯ ಮಹಿಮೆ.

ಪರಾಶರರು ಹೇಳಿದರು: ಮೈತ್ರೇಯ, ಇನ್ನು ಭೂಮಿಯ ಮತ್ತು ಜಲದ ಕೆಳಗೆ ಇರುವ ನರಕಗಳನ್ನು ಹೇಳುತ್ತೇನೆ ಕೇಳು. ಪಾಪಿಗಳು ಆ ನರಕಗಳಿಗೆ ಎಸೆಯಲ್ಪಡುತ್ತಾರೆ (1). ರೌರವ, ಸೂಕರ, ರೋಧ, ತಾಲ, ವಿಶಸನ, ಮಹಾಜ್ವಾಲ, ತಪ್ತಕುಂಭ, ಲವಣ, ವಿಲೋಹಿತ, ರುಧಿರಾಂಭಸ್, ವೈತರಣಿ, ಕೃಮೀಶ, ಕೃಮಿಭೋಜನ, ಅಸಿಪತ್ರವನ, ಕೃಷ್ಣ, ಲಾಲಾಭಕ್ಷ, ದಾರುಣ, ಪೂಯವಹ, ಪಾಪ, ವಹ್ನಿಜ್ವಾಲ, ಅಧಃ ಶಿರಸ್, ಸಂದಂಶ, ಕಾಲಸೂತ್ರ, ತಮಸ್, ಅವೀಚಿ, ಶ್ವಭೋಜನ, ಅಪ್ರತಿಷ್ಠ, ಅಪ್ರುಚಿ—ಇವೇ ಮೊದಲಾದ ಇನ್ನೂ ಅನೇಕ ಭೀಕರವಾದ

ಯಮಸ್ಯ ವಿಷಯೇ ಘೋರಾಃ ಶಸ್ತ್ರಾಗ್ನಿಭಯದಾಯಿನಃ।
ಪತಂತಿ ಯೇಷು ಪುರುಷಾಃ ಪಾಪಕರ್ಮರತಾಸ್ತು ಯೇ॥ 6

ಕೂಟಸಾಕ್ಷೀ ತಥಾ ಸಮ್ಯಕ್ ಪಕ್ಷಪಾತೇನ ಯೋ ವದೇತ್।
ಯಶ್ಚಾನ್ಯದನೃತಂ ವಕ್ತಿ ಸ ನರೋ ಯಾತಿ ರೌರವಮ್॥ 7

ಭ್ರೂಣಹಾ ಪುರಹಂತಾ ಚ ಗೋಘ್ನಶ್ಚ ಮುನಿಸತ್ತಮ।
ಯಾಂತಿ ತೇ ನರಕಂ ರೋಧಂ ಯಶ್ಚೋಚ್ಛ್ವಾಸನಿರೋಧಕಃ॥ 8

ಸುರಾಪೋ ಬ್ರಹ್ಮಹಾ ಹರ್ತಾ ಸುವರ್ಣಸ್ಯ ಚ ಸೂಕರೇ।
ಪ್ರಯಾಂತಿ ನರಕೇ ಯಶ್ಚ ತೈಃ ಸಂಸರ್ಗಮುಪೈತಿ ವೈ॥ 9

ರಾಜನ್ಯವೈಶ್ಯಹಾ ತಾಲೇ ತಥೈವ ಗುರುತಲ್ಪಗಃ।
ತಪ್ತಕುಂಡೇ ಸ್ವಸೃಗಾಮೀ ಹಂತಿ ರಾಜಭಟಾಂಶ್ಚ ಯಃ॥ 10

ಸಾಧ್ವೀವಿಕ್ರಯಕೃದ್ಬಂಧಪಾಲಃ ಕೇಸರಿವಿಕ್ರಯೀ।
ತಪ್ತಲೋಹೇ ಪತಂತ್ಯೇತೇ ಯಶ್ಚ ಭಕ್ತಂ ಪರಿತ್ಯಜೇತ್॥ 11

---

ನರಕಗಳಿವೆ (2-5). ಇವು ಯಮರಾಜನ ಅಧೀನದಲ್ಲಿದ್ದು ಶತ್ರುಭಯ-ಅಗ್ನಿಭಯಗಳನ್ನೀಯುವ ಘೋರವಾದ ನರಕಗಳು. ಪಾಪಕರ್ಮಿಗಳಾದ ಜನರು ಇವುಗಳಲ್ಲಿ ಬೀಳುತ್ತಾರೆ (6). ಸುಳ್ಳು ಸಾಕ್ಷ್ಯ ಹೇಳತಕ್ಕವನು, ಪಕ್ಷಪಾತದಿಂದ ಮಾತಾಡತಕ್ಕವನು, ಇನ್ನೂ ಬೇರೆ ಬಗೆಯ ಸುಳ್ಳು ಹೇಳತಕ್ಕವನು—ಇವರೆಲ್ಲ ರೌರವನರಕದಲ್ಲಿ ಬೀಳುತ್ತಾರೆ (7). ಭ್ರೂಣ ಹತ್ಯೆ ಮಾಡಿದವನು, ಊರನ್ನು ನಾಶಮಾಡುವವನು, ಗೋಹತ್ಯೆ ಮಾಡು ವವನು, ಜೀವಿಗಳಿಗೆ ಉಸಿರುಕಟ್ಟುವಂತೆ ಮಾಡುವವನು—ಇವರು ರೋಧವೆಂಬ ನರಕಕ್ಕೆ ಹೋಗುತ್ತಾರೆ (8). ಹೆಂಡಕುಡಿಯುವವನು, ಬ್ರಹ್ಮಹತ್ಯೆ ಮಾಡಿದವನು, ಚಿನ್ನದ ಕಳ್ಳ ಮತ್ತು ಇವರ ಜೊತೆಯಿರ ತಕ್ಕವನು—ಇವರು ಸೂಕರ ನರಕಕ್ಕೆ ಹೋಗುತ್ತಾರೆ (9). ಕ್ಷತ್ರಿಯ ವೈಶ್ಯ ರನ್ನು ಕೊಂದವನು ತಾಲ ನರಕಕ್ಕೂ ಗುರುಪತ್ನೀಗಾಮಿ, ಸೋದರೀಗಾಮಿ, ರಾಜದೂತರ ಘಾತಿ—ಇವರು ತಪ್ತಕುಂಡಕ್ಕೂ ಹೋಗುತ್ತಾರೆ (10). ಸಾಧ್ವಿಯಾದ ಹೆಂಡತಿಯನ್ನು ಮಾರತಕ್ಕವನೂ ಸೆರೆಯಿದ್ದವರ ಕಾವಲು ಗಾರನೂ ಅಶ್ವವಿಕ್ರಯಿಯೂ ಆಶ್ರಿತನನ್ನು ತೊರೆಯುವವನೂ ತಪ್ತಲೋಹ

ಸ್ನುಷಾಂ ಸುತಾಂ ಚಾಪಿ ಗತ್ವಾ ಮಹಾಜ್ವಾಲೇ ನಿಪಾತ್ಯತೇ।
ಅವಮಂತಾ ಗುರೂಣಾಂ ಯೋ ಯಶ್ಚಾಕ್ರೋಷ್ಟಾ ನರಾಧಮಃ॥

ವೇದದೂಷಯಿತಾ ಯಶ್ಚ ವೇದವಿಕ್ರಯಿಕಶ್ಚ ಯಃ।
ಅಗಮ್ಯಗಾಮೀ ಯಶ್ಚ ಸ್ಯಾತ್ತೇ ಯಾಂತಿ ಲವಣಂ ದ್ವಿಜ॥ 13

ಚೋರೋ ವಿಲೋಹೇ ಪತತಿ ಮರ್ಯಾದಾದೂಷಕಸ್ತಥಾ।
ದೇವದ್ವಿಜಪಿತೃದ್ವೇಷ್ಟಾ ರತ್ನದೂಷಯಿತಾ ಚ ಯಃ॥ 14

ಸ ಯಾತಿ ಕೃಮಿಭಕ್ಷೇ ವೈ ಕೃಮೀಶೇ ಚ ದುರಿಷ್ಟಕೃತ್।
ಪಿತೃದೇವಾತಿಥೀಂಸ್ತ್ಯಕ್ತ್ವಾ ಪರ್ಯಶ್ನಾತಿ ನರಾಧಮಃ॥ 15

ಲಾಲಾಭಕ್ಷೇ ಸ ಯಾತ್ಯುಗ್ರೇ ಶರಕರ್ತಾ ಚ ವೇಧಕೇ।
ಕರೋತಿ ಕರ್ಣಿನೋ ಯಶ್ಚ ಯಶ್ಚ ಖಡ್ಗಾದಿಕೃನ್ನರಃ॥ 16

ಪ್ರಯಾಂತ್ಯೇತೇ ವಿಶಸನೇ ನರಕೇ ಭೃಶದಾರುಣೇ।
ಅಸತ್ಪ್ರತಿಗೃಹೀತಾ ತು ನರಕೇ ಯಾತ್ಯಧೋಮುಖೇ॥ 17

---

ನರಕದಲ್ಲಿ ಬೀಳುತ್ತಾರೆ (11). ಸೊಸೆಯನ್ನೂ ಮಗಳನ್ನೂ ಗಮನಮಾಡ ತಕ್ಕವನು ಮಹಾಜ್ವಾಲದಲ್ಲಿ ತಳ್ಳಲ್ಪಡುತ್ತಾನೆ. ಹಾಗೆಯೇ ಗುರುಜನರಿಗೆ ಅವಮಾನಮಾಡುವವನೂ ಅವರನ್ನು ಬಯ್ಯುವ ನರಾಧಮನೂ ವೇದ ನಿಂದಕನೂ ವೇದವಿಕ್ರಯಿಯೂ ಅಗಮ್ಯಸ್ತ್ರೀಯನ್ನು ಗಮನಮಾಡು ವವನೂ ಲವಣವೆಂಬ ನರಕಕ್ಕೆ ಹೋಗುತ್ತಾರೆ (12-13). ಕಳ್ಳನೂ ಮರ್ಯಾದೆಯನ್ನು ಉಲ್ಲಂಘಿಸತಕ್ಕವನೂ ವಿಲೋಹದಲ್ಲಿ ಬೀಳುತ್ತಾರೆ. ದೇವದ್ವಿಜಪಿತೃಗಳನ್ನೂ ದ್ವೇಷಿಸತಕ್ಕವನೂ ರತ್ನಗಳನ್ನು ಕೆಡಿಸತಕ್ಕವನೂ ಕೃಮಿಭಕ್ಷಕ್ಕೂ, ದುರ್ಮಾರ್ಗದಲ್ಲಿ ಯಜ್ಞಮಾಡತಕ್ಕವನು ಕೃಮೀಶಕ್ಕೂ ಹೋಗುತ್ತಾರೆ. ಪಿತೃಗಳನ್ನೂ ದೇವತೆಗಳನ್ನೂ ಅತಿಥಿಗಳನ್ನೂ ವರ್ಜಿಸಿ ಊಟಮಾಡತಕ್ಕ ನರಾಧಮನು ಉಗ್ರವಾದ ಲಾಲಾಭಕ್ಷದಲ್ಲಿ ಬೀಳುತ್ತಾನೆ (14-15). ಶರಗಳನ್ನು ನಿರ್ಮಿಸತಕ್ಕವನು ವೇಧಕದಲ್ಲಿ ಬೀಳುತ್ತಾನೆ. ಕರ್ಣಿ ಎಂಬ ಬಾಣಗಳನ್ನೂ ಖಡ್ಗಾದಿ ಆಯುಧಗಳನ್ನು ನಿರ್ಮಿಸತಕ್ಕವರೂ ಅತಿ ಕ್ರೂರವಾದ ವಿಶಸನ ಎಂಬ ನರಕದಲ್ಲಿ ಬೀಳುತ್ತಾರೆ. ದುಷ್ಟಪ್ರತಿಗ್ರಹ

**ಅಯಾಜ್ಯಯಾಜಕಶ್ಚೈವ ತಥಾ ನಕ್ಷತ್ರಸೂಚಕಃ।**
**ವೇಗೀ ಪೂಯವಹೇ ಚೈಕೋ ಯಾತಿ ಮಿಷ್ಟಾನ್ನಭುಙ್ನರಃ॥ 18**

**ಲಾಕ್ಷಾಮಾಂಸರಸಾನಾಂ ಚ ತಿಲಾನಾಂ ಲವಣಸ್ಯ ಚ।**
**ವಿಕ್ರೇತಾ ಬ್ರಾಹ್ಮಣೋ ಯಾತಿ ತಮೇವ ನರಕಂ ದ್ವಿಜ॥ 19**

**ಮರ್ಜಾರಕುಕ್ಕುಟಚ್ಛಾಗಶ್ವವರಾಹವಿಹಂಗಮಾನ್।**
**ಪೋಷಯನ್ನರಕಂ ಯಾತಿ ತಮೇವ ದ್ವಿಜಸತ್ತಮ॥ 20**

**ರಂಗೋಪಜೀವೀ ಕೈವರ್ತ್ತಃ ಕುಂಡಾಶೀ ಗರದಸ್ತಥಾ।**
**ಸೂಚೀ ಮಾಹಿಷಕಶ್ಚೈವ ಪರ್ವಗಾಮೀ ಚ ಯೋ ದ್ವಿಜಃ॥ 21**

**ಆಗಾರದಾಹೀ ಮಿತ್ರಘ್ನಃ ಶಾಕುನಿರ್ಗ್ರಾಮಯಾಜಕಃ।**
**ರುಧಿರಾಂಧೇ ಪತಂತ್ಯೇತೇ ಸೋಮಂ ವಿಕ್ರೀಣತೇ ಚ ಯೇ॥ 22**

---

ಮಾಡತಕ್ಕವನೂ ಅಯಾಜ್ಯಯಾಜಕನೂ ನಕ್ಷತ್ರವಿದ್ಯೆಯನ್ನರಿಯದೆ ಫಲ ಹೇಳತಕ್ಕವನೂ ಅಧೋಮುಖವೆಂಬ ನರಕಕ್ಕೆ ಹೋಗುತ್ತಾರೆ. ಉಗ್ರಕರ್ಮವನ್ನು ಮಾಡತಕ್ಕವನೂ (ಪುತ್ರ ಮಿತ್ರಾದಿಗಳನ್ನು ವಂಚಿಸಿ) ಮಿಷ್ಟಾನ್ನಭೋಜನ ಮಾಡತಕ್ಕವನೂ ಪೂಯವಹದಲ್ಲಿ ಬೀಳುತ್ತಾರೆ (16-18). ಅರಗು, ಮಾಂಸ, ಮದ್ಯ, ಎಳ್ಳು, ಉಪ್ಪುಗಳನ್ನು ಮಾರತಕ್ಕ ಬ್ರಾಹ್ಮಣನು ಅದೇ ಪೂಯವಹ ನರಕಕ್ಕೆ ಹೋಗುತ್ತಾನೆ. ಬೆಕ್ಕು, ಕೋಳಿ, ಮೇಕೆ, ನಾಯಿ, ಹಂದಿ, ಹಕ್ಕಿಗಳನ್ನು ಸಾಕತಕ್ಕವನೂ ಸಹ, ಮೈತ್ರೇಯ, ಅದೇ ನರಕಕ್ಕೆ ಹೋಗುತ್ತಾರೆ (19-20). ರಂಗಸ್ಥಳದಿಂದ ಜೀವಿಸ ತಕ್ಕವನು, ಮೀನು ಹಿಡಿಯತಕ್ಕವನು, ವ್ಯಭಿಚಾರಜಾತನ ಅನ್ನವನ್ನು ತಿನ್ನತಕ್ಕವನು, ವಿಷಹಾಕುವವನು, ಚಾಡಿಖೋರ, ಹೆಂಡತಿಯನ್ನು ವ್ಯಭಿಚಾರಕ್ಕೆ ಹಚ್ಚಿ ಜೀವಿಸುವವನು (ಮಾಹಿಷಕ), ಪರ್ವದಿನಗಳಲ್ಲಿ ಸ್ತ್ರೀಗಮನ ಮಾಡುವವನು, ಮನೆಗೆ ಬೆಂಕಿಹಚ್ಚತಕ್ಕವನು, ಮಿತ್ರದ್ರೋಹಿ, ಹಕ್ಕಿಹಿಡಿಯುವವನು, ಗ್ರಾಮಪುರೋಹಿತ, ಸೋಮಲತೆಯನ್ನು ಮಾರತಕ್ಕವನು—ಇಂತಹ ಬ್ರಾಹ್ಮಣರು—ರುಧಿರಾಂಧವೆಂಬ ನರಕದಲ್ಲಿ ಬೀಳುತ್ತಾರೆ (21-22). ಯಜ್ಞವನ್ನು ಕೆಡಿಸತಕ್ಕವನು ಮತ್ತು ಗ್ರಾಮಕ್ಕೆ

**ಮಖಹಾ ಗ್ರಾಮಹಂತಾ ಚ ಯಾತಿ ವೈತರಣೀಂ ನರಃ।**
**ರೇತಃ ಪಾತಾದಿಕರ್ತಾರೋ ಮರ್ಯಾದಾಭೇದಿನೋ ಹಿ ಯೇ॥**

**ತೇ ಕೃಷ್ಣೇ ಯಾಂತ್ಯಶೌಚಾಶ್ಚ ಕುಹಕಾಜೀವಿನಶ್ಚ ಯೇ।**
**ಅಸಿಪತ್ರವನಂ ಯಾತಿ ವನಚ್ಛೇದೀ ವೃಥೈವ ಯಃ॥** 24

**ಔರಭ್ರಿಕೋ ಮೃಗವ್ಯಾಧೋ ವಹ್ನಿಜ್ವಾಲೇ ಪತಂತಿ ವೈ।**
**ಯಾಂತ್ಯೇತೇ ದ್ವಿಜ ತತ್ರೈವ ಯೇ ಚಾಪಾಕೇಷು ವಹ್ನಿದಾಃ॥** 25

**ವ್ರತಾನಾಂ ಲೋಪಕೋ ಯಶ್ಚ ಸ್ವಾಶ್ರಮಾದ್ವಿಚ್ಯುತಶ್ಚ ಯಃ।**
**ಸಂದಂಶಯಾತನಾಮಧ್ಯೇ ಪತತಸ್ತಾವುಭಾವಪಿ॥** 26

**ದಿವಾ ಸ್ವಪ್ನೇ ಚ ಸ್ಕಂದಂತೇ ಯೇ ನರಾ ಬ್ರಹ್ಮಚಾರಿಣಃ।**
**ಪುತ್ರೈರಧ್ಯಾಪಿತಾ ಯೇ ಚ ತೇ ಪತಂತಿ ಶ್ವಭೋಜನೇ॥** 27

**ಏತೇ ಚಾನ್ಯೇ ಚ ನರಕಾಃ ಶತಶೋಽಥ ಸಹಸ್ರಶಃ।**
**ಯೇಷು ದುಷ್ಕೃತಕರ್ಮಾಣಃ ಪಚ್ಯಂತೇ ಯಾತನಾಗತಾಃ॥** 28

---

ಹಿಂಸೆಕೊಡತಕ್ಕವನು ವೈತರಣಿಗೆ ಹೋಗುತ್ತಾರೆ. ವೀರ್ಯಸ್ಖಲನ ಮಾಡಿಕೊಳ್ಳತಕ್ಕವರೂ ಅಳತೆಯ ಬಾಂದುಕಲ್ಲನ್ನು ಕಿತ್ತುಹಾಕುವವರೂ ಶೌಚವರ್ಜಿತರೂ ಮೋಸಮಾಡಿ ಜೀವಿಸತಕ್ಕವರೂ ಕೃಷ್ಣವೆಂಬ ನರಕವನ್ನು ಸೇರುತ್ತಾರೆ. ನಿಷ್ಕಾರಣವಾಗಿ ಕಾಡನ್ನು ಕಡಿಯತಕ್ಕವನಿಗೆ ಅಸಿಪತ್ರವನವೆಂಬ ನರಕದ ಪ್ರಾಪ್ತಿಯಾಗುತ್ತದೆ (23-24). ಕುರಿಗಳನ್ನು ಮಾರಿ ಜೀವಿಸತಕ್ಕವನು, ಬೇಟೆಗಾರ ಇವರು ವಹ್ನಿಜ್ವಾಲದಲ್ಲಿ ಬೀಳುತ್ತಾರೆ. ಹಸಿಯ ಗಿಡಗಳಿಗೆ ಬೆಂಕಿಹಾಕತಕ್ಕವರೂ ಅಲ್ಲಿಯೇ ಬೀಳುತ್ತಾರೆ. ವ್ರತಗಳನ್ನು ಲೋಪಮಾಡತಕ್ಕವನೂ ತನ್ನ ಆಶ್ರಮಧರ್ಮದಿಂದ ಪತಿತನಾದವನೂ ಸಂದಂಶವೆಂಬ ನರಕದಲ್ಲಿ ಬೀಳುತ್ತಾರೆ (25-26). ಯಾವ ಬ್ರಹ್ಮಚಾರಿಗಳು ಹಗಲು ನಿದ್ರೆಮಾಡಿ ವೀರ್ಯಸ್ಖಲನಮಾಡುತ್ತಾರೋ ಯಾರು ತಮ್ಮ ಮಕ್ಕಳಿಂದಲೇ ವೇದವನ್ನು ಹೇಳಿಸಿಕೊಳ್ಳುತ್ತಾರೋ ಅವರು ಶ್ವಭೋಜನವೆಂಬ ನರಕದಲ್ಲಿ ಬೀಳುತ್ತಾರೆ (27). ಮೈತ್ರೇಯ, ಈ ರೀತಿಯಲ್ಲಿ ನೂರಾರು ಸಾವಿರಾರು ನರಕಗಳಿವೆ. ಪಾಪಕರ್ಮಿಗಳು ಅವುಗಳಲ್ಲಿ

**ಯಥೈವ ಪಾಪಾನ್ಯೇತಾನಿ ತಥಾನ್ಯಾನಿ ಸಹಸ್ರಶಃ ।**
**ಭುಜ್ಯಂತೇ ತಾನಿ ಪುರುಷೈರ್ನರಕಾಂತರಗೋಚರೈಃ ॥ 29**

**ವರ್ಣಾಶ್ರಮವಿರುದ್ಧಂ ಚ ಕರ್ಮ ಕುರ್ವಂತಿ ಯೇ ನರಾ ।**
**ಕರ್ಮಣಾ ಮನಸಾ ವಾಚಾ ನಿರಯೇಷು ಪತಂತಿ ತೇ ॥ 30**

**ಅಧಃಶಿರೋಭಿರ್ದೃಶ್ಯಂತೇ ನಾರಕೈರ್ದಿವಿ ದೇವತಾಃ ।**
**ದೇವಾಶ್ಚಾಧೋಮುಖಾನ್ ಸರ್ವಾನಧಃ ಪಶ್ಯಂತಿ ನಾರಕಾನ್ ॥ 31**

**ಸ್ಥಾವರಾಃ ಕೃಮಯೋಽಬ್ಜಾಶ್ಚ ಪಕ್ಷಿಣಃ ಪಶವೋ ನರಾಃ ।**
**ಧಾರ್ಮಿಕಾಸ್ತ್ರಿದಶಾಸ್ತದ್ವನ್ಮೋಕ್ಷಿಣಶ್ಚ ಯಥಾಕ್ರಮಮ್ ॥ 32**

**ಸಹಸ್ರಭಾಗಪ್ರಥಮಾ ದ್ವಿತೀಯಾನುಕ್ರಮಾಸ್ತಥಾ ।**
**ಸರ್ವೇ ಹ್ಯೇತೇ ಮಹಾಭಾಗ ಯಾವನ್ಮುಕ್ತಿಸಮಾಶ್ರಯಾಃ ॥ 33**

---

ಯಾತನೆಯನ್ನನುಭವಿಸುತ್ತ ಬೆಂದುಹೋಗುತ್ತಾರೆ. ಇದುವರೆಗೆ ಹೇಳಿದ ಪಾಪಕೃತ್ಯಗಳಲ್ಲದೆ ಇನ್ನೂ ಸಾವಿರಾರು ಬಗೆಯ ಪಾಪಕೃತ್ಯಗಳಿವೆ. ಅವುಗಳನ್ನು ಮಾಡುವ ಪಾಪಿಗಳು ಬೇರೆ ಬೇರೆ ನರಕಗಳಲ್ಲಿ ಬಿದ್ದು ದಂಡನೆಯನ್ನನುಭವಿಸುತ್ತಾರೆ (28-29). ಯಾರು ವರ್ಣಾಶ್ರಮಧರ್ಮಕ್ಕೆ ವಿರುದ್ಧವಾದ ಕೆಲಸವನ್ನು ಕ್ರಿಯೆಯಿಂದಾಗಲಿ ಮನಸ್ಸಿನಿಂದಾಗಲಿ ಮಾತಿನಿಂದಾಗಲಿ ಆಚರಿಸುತ್ತಾರೋ ಅವರು ನರಕಗಳಲ್ಲಿ ಬೀಳುತ್ತಾರೆ (30). ನರಕವಾಸಿಗಳು ತಲೆಕೆಳಗಾಗಿ ನಿಂತು ಮೇಲೆ ಸ್ವರ್ಗದಲ್ಲಿರುವ ದೇವತೆಗಳನ್ನು ನೋಡುತ್ತಾರೆ. ದೇವತೆಗಳು ಅಧೋಮುಖರಾಗಿ ಕೆಳಗಿರುವ ನರಕವಾಸಿಗಳನ್ನು ನೋಡುತ್ತಾರೆ (31). ಈ ಜಗತ್ತಿನಲ್ಲಿ ಸ್ಥಾವರಗಳು, ಕೃಮಿಗಳು, ಜಲಚರಗಳು, ಪಕ್ಷಿಗಳು, ಪಶುಗಳು, ಮನುಷ್ಯರು, ದೇವತೆಗಳು ಮತ್ತು ಮುಮುಕ್ಷುಗಳು ಇದ್ದಾರೆ. ಇವರಲ್ಲಿ ಎರಡನೆಯವರಿಗಿಂತ ಮೊದಲನೆಯವರ ಸಂಖ್ಯೆ, ಮುಮುಕ್ಷುಗಳಿಂದ ಹಿಡಿದು ಸ್ಥಾವರಗಳವರೆಗೆ, ಒಂದಕ್ಕೆ ಸಾವಿರದಷ್ಟು ಯಥಾಕ್ರಮವಾಗಿ ಹೆಚ್ಚುತ್ತಾ ಹೋಗುತ್ತದೆ! (32-33). ಸ್ವರ್ಗದಲ್ಲಿ ಎಷ್ಟು ಜನರಿದ್ದಾರೋ ಅಷ್ಟೇ ಜನರು ನರಕದಲ್ಲಿದ್ದಾರೆ. ಪಾಪಿಯಾದವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ

**ಯಾವಂತೋ ಜಂತವಃ ಸ್ವರ್ಗೇ ತಾವಂತೋ ನರಕೌಕಸಃ।**
**ಪಾಪಕೃದ್‌ಯಾತಿ ನರಕಂ ಪ್ರಾಯಶ್ಚಿತ್ತಪರಾಙ್ಮುಖಃ॥ 34**

**ಪಾಪಾನಾಮನುರೂಪಾಣಿ ಪ್ರಾಯಶ್ಚಿತ್ತಾನಿ ಯದ್ಯಥಾ।**
**ತಥಾ ತಥೈವ ಸಂಸ್ಮೃತ್ಯ ಪ್ರೋಕ್ತಾನಿ ಪರಮರ್ಷಿಭಿಃ॥ 35**

**ಪಾಪೇ ಗುರೂಣಿ ಗುರುಣಿ ಸ್ವಲ್ಪಾನ್ಯಲ್ಪೇ ಚ ತದ್ವಿದಃ।**
**ಪ್ರಾಯಶ್ಚಿತ್ತಾನಿ ಮೈತ್ರೇಯ ಜಗುಃ ಸ್ವಾಯಂಭುವಾದಯಃ॥ 36**

**ಪ್ರಾಯಶ್ಚಿತ್ತಾನ್ಯಶೇಷಾಣಿ ತಪಃಕರ್ಮಾತ್ಮಕಾನಿ ವೈ।**
**ಯಾನಿ ತೇಷಾಮಶೇಷಾಣಾಂ ಕೃಷ್ಣಾನುಸ್ಮರಣಂ ಪರಮ್॥ 37**

**ಕೃತೇ ಪಾಪೇಽನುತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ।**
**ಪ್ರಾಯಶ್ಚಿತ್ತಂ ತು ತಸ್ಯೈಕಂ ಹರಿಸಂಸ್ಮರಣಂ ಪರಮ್॥ 38**

**ಪ್ರಾತರ್ನಿಶಿ ತಥಾ ಸಂಧ್ಯಾಮಧ್ಯಾಹ್ನಾದಿಷು ಸಂಸ್ಮರನ್।**
**ನಾರಾಯಣಮವಾಪ್ನೋತಿ ಸದ್ಯಃ ಪಾಪಕ್ಷಯಾನ್ನರಃ॥ 39**

---

ನರಕಕ್ಕೆ ಹೋಗುತ್ತಾನೆ (34). ಪಾಪಕರ್ಮಗಳಿಗೆ ಅನುರೂಪವಾಗಿ ಪ್ರಾಯಶ್ಚಿತ್ತಗಳು ಹೇಗಿರಬೇಕೋ ಹಾಗೆ ಮಹರ್ಷಿಗಳು ಸ್ಮೃತಿಗ್ರಂಥಗಳಲ್ಲಿ ಹೇಳಿದ್ದಾರೆ. ಮೈತ್ರೇಯ, ದೊಡ್ಡ ಪಾಪಕೃತ್ಯಕ್ಕೆ ದೊಡ್ಡ ಪ್ರಾಯಶ್ಚಿತ್ತಗಳನ್ನೂ ಅಲ್ಪ ಪಾಪಕ್ಕೆ ಅಲ್ಪ ಪ್ರಾಯಶ್ಚಿತ್ತಗಳನ್ನೂ ಪ್ರಾಜ್ಞರಾದ ಸ್ವಾಯಂಭುವ ಮನ್ವಾದಿಗಳು ವಿಧಿಸಿರುತ್ತಾರೆ (35-36). ತಪೋರೂಪವಾದ ಮತ್ತು ಕರ್ಮರೂಪವಾದ ಎಲ್ಲ ಪ್ರಾಯಶ್ಚಿತ್ತಗಳಿಗಿಂತಲೂ ಶ್ರೀಕೃಷ್ಣಸ್ಮರಣೆಯು ಶ್ರೇಷ್ಠವಾದ ಪ್ರಾಯಶ್ಚಿತ್ತ. ಪಾಪಕೃತ್ಯವನ್ನು ಮಾಡಿದ ಮೇಲೆ ಯಾವ ಮನುಷ್ಯನಿಗೆ ಅದಕ್ಕಾಗಿ ಪಶ್ಚಾತ್ತಾಪವಾಗುತ್ತದೆಯೋ ಆತನಿಗೆ ಶ್ರೀಹರಿಸ್ಮರಣೆ ಉತ್ತಮವಾದ ಪ್ರಾಯಶ್ಚಿತ್ತ (37-38). ಪ್ರಾತಃಕಾಲ, ಸಾಯಂಕಾಲ, ಮಧ್ಯಾಹ್ನ, ರಾತ್ರಿಗಳಲ್ಲಿ ಶ್ರೀಮನ್ನಾರಾಯಣನನ್ನು ಧ್ಯಾನ ಮಾಡತಕ್ಕವನು ಶೀಘ್ರವಾಗಿ ಪಾಪಗಳನ್ನು ಕ್ಷಯಿಸಿಕೊಳ್ಳುತ್ತಾನೆ (39).

**ವಿಷ್ಣುಸಂಸ್ಮರಣಾತ್ ಕ್ಷೀಣಸಮಸ್ತಕ್ಲೇಶಸಂಚಯಃ।**
**ಮುಕ್ತಿಂ ಪ್ರಯಾತಿ ಸ್ವರ್ಗಾಪ್ತಿಸ್ತಸ್ಯ ವಿಘ್ನೋಽನುಮೀಯತೇ॥ 40**

**ವಾಸುದೇವೇ ಮನೋ ಯಸ್ಯ ಜಪಹೋಮಾರ್ಚನಾದಿಷು।**
**ತಸ್ಯಾಂತರಾಯೋ ಮೈತ್ರೇಯ ದೇವೇಂದ್ರತ್ವಾದಿಕಂ ಫಲಮ್॥ 41**

**ಕ್ವ ನಾಕಪೃಷ್ಠಗಮನಂ ಪುನರಾವೃತ್ತಿಲಕ್ಷಣಮ್।**
**ಕ್ವ ಜಪೋ ವಾಸುದೇವೇತಿ ಮುಕ್ತಿಬೀಜಮನುತ್ತಮಮ್॥ 42**

**ತಸ್ಮಾದಹರ್ನಿಶಂ ವಿಷ್ಣುಂ ಸಂಸ್ಮರನ್ ಪುರುಷೋ ಮುನೇ।**
**ನ ಯಾತಿ ನರಕಂ ಮರ್ತ್ಯಃ ಸಂಕ್ಷೀಣಾಖಿಲಪಾತಕಃ॥ 43**

**ಮನಃಪ್ರೀತಿಕರಃ ಸ್ವರ್ಗೋ ನರಕಸ್ತದ್ವಿಪರ್ಯಯಃ।**
**ನರಕಸ್ವರ್ಗಸಂಜ್ಞೇ ವೈ ಪಾಪಪುಣ್ಯೇ ದ್ವಿಜೋತ್ತಮ॥ 44**

---

ವಿಷ್ಣುಸ್ಮರಣೆಯಿಂದ ಸಮಸ್ತ ಪಾಪಸಂಚಯವೂ ನಾಶವಾಗಲಾಗಿ, ಮನುಷ್ಯನು ಮೋಕ್ಷವನ್ನೈದುತ್ತಾನೆ. ಆತನಿಗೆ ಸ್ವರ್ಗಪ್ರಾಪ್ತಿಯು ವಿಘ್ನವೆಂದು ತಿಳಿಯಲ್ಪಟ್ಟಿದೆ (40). ಯಾವಾತನಿಗೆ ಜಪಹೋಮಾರ್ಚನಾದಿಗಳನ್ನು ಮಾಡುವಾಗ ಚಿತ್ತವು ವಾಸುದೇವನಲ್ಲಿ ನೆಲೆಸಿರುತ್ತದೆಯೋ, ಆತನಿಗೆ ದೇವೇಂದ್ರಪದವಿ ಮೊದಲಾದದ್ದೂ ಸಹ ವಿಘ್ನವೆಂದೇ ಗಣ್ಯವಾಗುತ್ತದೆ (41). ಪುನರ್ಜನ್ಮದ ಆವೃತ್ತಿಚಕ್ರಕ್ಕೆ ಎಸೆಯುವ ಸ್ವರ್ಗಪ್ರಾಪ್ತಿ ಎಲ್ಲಿ? ಶ್ರೇಷ್ಠವಾದ ಮುಕ್ತಿಬೀಜವೆನಿಸಿದ 'ವಾಸುದೇವ' ಎಂಬ ಜಪವೆಲ್ಲಿ? ಆದ್ದರಿಂದ ಮೈತ್ರೇಯ, ಅಹೋರಾತ್ರವೂ ವಿಷ್ಣುವನ್ನು ಸ್ಮರಿಸುತ್ತಿದ್ದರೆ ಸಮಸ್ತ ಪಾಪವೂ ಕ್ಷಯಿಸುವುದರಿಂದ ಮಾನವನು ನರಕಕ್ಕೆ ಹೋಗುವುದಿಲ್ಲ (42-43). ಮನಸ್ಸಿಗೆ ಸಂತೋಷಕರವಾದದ್ದೇ ಸ್ವರ್ಗ, ಅದಕ್ಕೆ ವಿಪರೀತವಾಗಿ ದುಃಖಕರವಾದದ್ದೇ ನರಕ. ಪಾಪಕ್ಕೆ ನರಕವೆಂದೂ ಪುಣ್ಯಕ್ಕೆ ಸ್ವರ್ಗವೆಂದೂ ಹೆಸರು (44). ಒಂದೇ ಪದಾರ್ಥವು ಸುಖಕ್ಕೂ ಕಾರಣವಾಗುತ್ತದೆ; ದುಃಖ, ಅಸೂಯೆ, ಕೋಪಗಳಿಗೂ ಕಾರಣವಾಗುತ್ತದೆ.

**ವಸ್ತ್ವೇಕಮೇವ ದುಃಖಾಯ ಸುಖಾಯೇರ್ಷ್ಯಾಗಮಾಯ ಚ।**
**ಕೋಪಾಯ ಚ ಯತಸ್ತಸ್ಮಾದ್ವಸ್ತು ವಸ್ತ್ವಾತ್ಮಕಂ ಕುತಃ॥ 45**

**ತದೇವ ಪ್ರೀತಯೇ ಭೂತ್ವಾ ಪುನರ್ದುಃಖಾಯ ಜಾಯತೇ।**
**ತದೇವ ಕೋಪಾಯ ಯತಃ ಪ್ರಸಾದಾಯ ಚ ಜಾಯತೇ॥ 46**

**ತಸ್ಮಾದ್‌ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಮ್।**
**ಮನಸಃ ಪರಿಣಾಮೋಽಯಂ ಸುಖದುಃಖಾದಿಲಕ್ಷಣಃ॥ 47**

**ಜ್ಞಾನಮೇವ ಪರಂ ಬ್ರಹ್ಮ ಜ್ಞಾನಂ ಬಂಧಾಯ ಚೇಷ್ಯತೇ।**
**ಜ್ಞಾನಾತ್ಮಕಮಿದಂ ವಿಶ್ವಂ ನ ಜ್ಞಾನಾದ್ವಿದ್ಯತೇ ಪರಮ್॥ 48**

**ವಿದ್ಯಾವಿದ್ಯೇತಿ ಮೈತ್ರೇಯ ಜ್ಞಾನಮೇವೋಪಧಾರಯ॥ 49**

**ಏವಮೇತನ್ಮಯಾಖ್ಯಾತಂ ಭವತೋ ಮಂಡಲಂ ಭುವಃ।**
**ಪಾತಾಲಾನಿ ಚ ಸರ್ವಾಣಿ ತಥೈವ ನರಕಾ ದ್ವಿಜ॥ 50**

---

ಹೀಗಿರುವಾಗ ಯಾವ ಪದಾರ್ಥವು ನಿಯತ ಸ್ವಭಾವವುಳ್ಳ ವಸ್ತುವಾಗಿದೆ? (45). ಅದೇ ಪ್ರೀತಿಗೆ ಕಾರಣವಾಗಿದ್ದು ಮತ್ತೆ ದುಃಖಕ್ಕೆ ಕಾರಣವಾಗುತ್ತದೆ. ಅದೇ ವಸ್ತು ಕೋಪಕ್ಕೆ ಕಾರಣವಾಗಿ ಮತ್ತೆ ಪ್ರಸನ್ನತೆಗೆ ಕಾರಣವಾಗುತ್ತದೆ (46). ಆದ್ದರಿಂದ, ಮೈತ್ರೇಯ, ಸುಖಾತ್ಮಕವಾದ ವಸ್ತುವೂ ಇಲ್ಲ, ದುಃಖಾತ್ಮಕವಾದ ವಸ್ತುವೂ ಇಲ್ಲ. ಸುಖ ದುಃಖಾದಿಗಳೆಂಬುದೆಲ್ಲ ಕೇವಲ ಮನಸ್ಸಿನ ಪರಿಣಾಮ (47). (ಜ್ಞಾನಾತ್ಮಕವಾದ ಪರಬ್ರಹ್ಮವೇ ಪರಮಾರ್ಥ) ಜ್ಞಾನವೇ ಪರಬ್ರಹ್ಮ. (ಅವಿದ್ಯೋಪಾಧಿಯಿಂದ) ಜ್ಞಾನವೇ ಸಂಸಾರಬಂಧಕ್ಕೆ ಕಾರಣ. ಈ ವಿಶ್ವವು ಬರಿಯ ಜ್ಞಾನಾತ್ಮಕವಾದದ್ದು. ಜ್ಞಾನಕ್ಕಿಂತ ಬೇರೆಯಾದದ್ದು ಇಲ್ಲ. ವಿದ್ಯೆ ಅವಿದ್ಯೆಗಳು, ಮೈತ್ರೇಯ, ಜ್ಞಾನವೆಂದೇ ತಿಳಿ (48-49). ಈ ರೀತಿಯಾಗಿ ನಿನಗೆ ಭೂಮಂಡಲ, ಸಮಸ್ತ ಪಾತಾಳಭೇದಗಳು, ನರಕಗಳು—ಇವುಗಳ ವಿಷಯವಾಗಿ ಹೇಳಿದ್ದೇನೆ. ಸಮುದ್ರ, ಪರ್ವತ, ದ್ವೀಪ, ವರ್ಷ, ನದಿ—ಇವೆಲ್ಲವನ್ನೂ

**ಸಮುದ್ರಾಃ ಪರ್ವತಾಶ್ಚೈವ ದ್ವೀಪಾ ವರ್ಷಾಣಿ ನಿಮ್ನಗಾಃ।**
**ಸಂಕ್ಷೇಪಾತ್ಸರ್ವಮಾಖ್ಯಾತಂ ಕಿಂ ಭೂಯಃ ಶ್ರೋತುಮಿಚ್ಛಸಿ॥ 51**

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ಷಷ್ಠೋಽಧ್ಯಾಯಃ

---

ಸಂಕ್ಷೇಪವಾಗಿ ತಿಳಿಸಿದ್ದೇನೆ. ಇನ್ನೂ ಏನನ್ನು ಕೇಳಲು ಬಯಸುತ್ತೀಯೆ? (50-51).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಆರನೆಯ ಅಧ್ಯಾಯ ಮುಗಿಯಿತು.



## ಸಪ್ತಮೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಕಥಿತಂ ಭೂತಲಂ ಬ್ರಹ್ಮನ್ ಮಮೈತದಖಿಲಂ ತ್ವಯಾ।**
**ಭುವರ್ಲೋಕಾದಿಕಾನ್ ಲೋಕಾನ್**
**ಶ್ರೋತುಮಿಚ್ಛಾಮ್ಯಹಂ ಮುನೇ॥ 1**

**ತಥೈವ ಗ್ರಹಸಂಸ್ಥಾನಂ ಪ್ರಮಾಣಾನಿ ಯಥಾತಥಾ।**
**ಸಮಾಚಕ್ಷ್ವ ಮಹಾಭಾಗ ತನ್ಮಹ್ಯಂ ಪರಿಪೃಚ್ಛತೇ॥ 2**

*ಶ್ರೀಪರಾಶರ ಉವಾಚ:*

**ರವಿಚಂದ್ರಮಸೋರ್ಯಾವನ್ಮಯೂಖೈರವಭಾಸ್ಯತೇ।**
**ಸಸಮುದ್ರಸರಿಚ್ಛೈಲಾ ತಾವತೀ ಪೃಥಿವೀ ಸ್ಮೃತಾ॥ 3**

**ಯಾವತ್ ಪ್ರಮಾಣಾ ಪೃಥಿವೀ ವಿಸ್ತಾರಪರಿಮಂಡಲಾತ್।**
**ನಭಸ್ತಾವತ್ ಪ್ರಮಾಣಂ ವೈ ವ್ಯಾಸಮಂಡಲತೋ ದ್ವಿಜ॥ 4**

---

## ಅಧ್ಯಾಯ 7

ಭೂರ್ಲೋಕಾದಿ ಸಪ್ತ ಊರ್ಧ್ವಲೋಕಗಳ ವೃತ್ತಾಂತ. ವಿಷ್ಣುವೇ ವಿಶ್ವಕಾರಣ.

ಮೈತ್ರೇಯರು "ಮಹರ್ಷಿಗಳೆ, ನೀವು ನನಗೆ ಸಮಸ್ತ ಭೂಮಂಡಲದ ವೃತ್ತಾಂತವನ್ನೂ ಹೇಳಿದಿರಿ. ಭುವರ್ಲೋಕ ಮೊದಲಾದ ಲೋಕಗಳ ವಿಷಯವನ್ನು ಕೇಳಲಪೇಕ್ಷಿಸುತ್ತೇನೆ. ಹಾಗೆಯೇ ಗ್ರಹಗಳ ಸ್ಥಾನ, ಪ್ರಮಾಣ ಮೊದಲಾದ್ದನ್ನೂ ತಿಳಿಸಿರಿ" ಎಂದರು (1-2). ಪರಾಶರರು ಹೇಳಿದರು: ಸೂರ್ಯ ಚಂದ್ರರ ಕಿರಣಗಳು ಎಷ್ಟು ದೂರದ ವರೆಗೆ ಪ್ರಕಾಶಿಸುತ್ತವೆಯೋ ಅಷ್ಟು ದೂರದವರೆಗೆ ಸಮುದ್ರ ನದೀ ಶೈಲ ಗಳಿಂದ ಕೂಡಿದ ಪ್ರದೇಶವು ಪೃಥಿವಿಯೆನಿಸಿಕೊಂಡಿದೆ (ಭೂರ್ಲೋಕ) (3). ಪೃಥಿವಿಯು ಎಷ್ಟು ಅಗಲ ಸುತ್ತಳತೆಗಳುಳ್ಳದ್ದೋ ಮೇಲೆ ಅಷ್ಟು

ಭೂಮೇರ್ಯೋಜನಲಕ್ಷೇ ತು ಸೌರಂ ಮೈತ್ರೇಯ ಮಂಡಲಮ್ ।
ಲಕ್ಷಾದ್ದಿವಾಕರಸ್ಯಾಪಿ ಮಂಡಲಂ ಶಶಿನಃ ಸ್ಥಿತಮ್ ॥ 5

ಪೂರ್ಣೇ ಶತಸಹಸ್ರೇ ತು ಯೋಜನಾನಾಂ ನಿಶಾಕರಾತ್ ।
ನಕ್ಷತ್ರಮಂಡಲಂ ಕೃತ್ಸ್ನಮುಪರಿಷ್ಟಾತ್ ಪ್ರಕಾಶತೇ ॥ 6

ದ್ವೇ ಲಕ್ಷೇ ಚೋತ್ತರೇ ಬ್ರಹ್ಮನ್ ಬುಧೋ ನಕ್ಷತ್ರಮಂಡಲಾತ್ ।
ತಾವತ್ ಪ್ರಮಾಣಭಾಗೇ ತು ಬುಧಸ್ಯಾಪ್ಯುಶನಾಃ ಸ್ಥಿತಃ ॥ 7

ಅಂಗಾರಕೋಽಪಿ ಶುಕ್ರಸ್ಯ ತತ್ ಪ್ರಮಾಣೇ ವ್ಯವಸ್ಥಿತಃ ।
ಲಕ್ಷದ್ವಯೇ ತು ಭೌಮಸ್ಯ ಸ್ಥಿತೋ ದೇವಪುರೋಹಿತಃ ॥ 8

ಶೌರಿರ್ಬೃಹಸ್ಪತೇಶ್ಚೋರ್ಧ್ವಂ ದ್ವಿಲಕ್ಷೇ ಸಮವಸ್ಥಿತಃ ।
ಸಪ್ತರ್ಷಿಮಂಡಲಂ ತಸ್ಮಾಲ್ಲಕ್ಷಮೇಕಂ ದ್ವಿಜೋತ್ತಮ ॥ 9

ಋಷಿಭ್ಯಸ್ತು ಸಹಸ್ರಾಣಾಂ ಶತಾದೂರ್ಧ್ವಂ ವ್ಯವಸ್ಥಿತಃ ।
ಮೇಧೀಭೂತಃ ಸಮಸ್ತಸ್ಯ ಜ್ಯೋತಿಶ್ಚಕ್ರಸ್ಯ ವೈ ಧ್ರುವಃ ॥ 10

---

ದೂರದ ಆಕಾಶಪ್ರದೇಶವು ಭುವರ್ಲೋಕವೆನಿಸಿಕೊಳ್ಳುತ್ತದೆ. ಭೂಮಿಗೆ ಲಕ್ಷಯೋಜನ ದೂರದಲ್ಲಿ ಸೂರ್ಯಮಂಡಲವಿದೆ. ಸೂರ್ಯನಿಂದ ಲಕ್ಷಯೋಜನ ದೂರದಲ್ಲಿ ಚಂದ್ರಮಂಡಲವಿದೆ (4-5). ಚಂದ್ರನಿಂದ ಒಂದು ಲಕ್ಷಯೋಜನ ದೂರದಲ್ಲಿ ಮೇಲ್ಗಡೆ ನಕ್ಷತ್ರ ಮಂಡಲವು ಪ್ರಕಾಶಿಸುತ್ತಿದೆ. ನಕ್ಷತ್ರ ಮಂಡಲದಿಂದ ಎರಡು ಲಕ್ಷ ಯೋಜನದಲ್ಲಿ ಬುಧನೂ ಅವನಿಂದ ಎರಡುಲಕ್ಷ ಯೋಜನದಲ್ಲಿ ಶುಕ್ರನೂ ಇದ್ದಾರೆ (6-7). ಶುಕ್ರನಿಂದ ಎರಡು ಲಕ್ಷ ಯೋಜನದಲ್ಲಿ ಅಂಗಾರಕನೂ ಅವನಿಂದ ಲಕ್ಷದ್ವಯಯೋಜನ ದೂರದಲ್ಲಿ ದೇವಪುರೋಹಿತನಾದ ಬೃಹಸ್ಪತಿಯೂ ಇದ್ದಾರೆ. ಬೃಹಸ್ಪತಿಯಿಂದ ಲಕ್ಷದ್ವಯಯೋಜನದ ಮೇಲೆ ಶನಿ ಇದ್ದಾನೆ. ಮೈತ್ರೇಯ, ಶನಿಗೆ ಒಂದು ಲಕ್ಷ ಯೋಜನ ದೂರದಲ್ಲಿ ಸಪ್ತರ್ಷಿ ಮಂಡಲವಿದೆ (8-9). ಸಪ್ತರ್ಷಿ ಮಂಡಲಕ್ಕೆ ಒಂದು ಲಕ್ಷ ಯೋಜನದ ಮೇಲೆ ಎಲ್ಲ ಜ್ಯೋತಿಶ್ಚಕ್ರಕ್ಕೂ ನಾಭಿಸ್ಥಾನವಾಗಿ ಧ್ರುವನಿದ್ದಾನೆ. ಔನ್ನತ್ಯವನ್ನವಲಂಬಿಸಿ ಮೂರು ಲೋಕಗಳನ್ನು ನಿನಗೆ ಹೇಳಿದ್ದಾಯಿತು.

ತ್ರೈಲೋಕ್ಯಮೇತತ್ ಕಥಿತಮುತ್ಸೇಧೇನ ಮಹಾಮುನೇ।
ಇಜ್ಯಾಫಲಸ್ಯ ಭೂರೇಷಾ ಇಜ್ಯಾ ಚಾತ್ರ ಪ್ರತಿಷ್ಠಿತಾ॥ 11

ಧ್ರುವಾದೂರ್ಧ್ವಂ ಮಹರ್ಲೋಕೋ ಯತ್ರ ತೇ ಕಲ್ಪವಾಸಿನಃ।
ಏಕಯೋಜನಕೋಟಿಸ್ತು ಯತ್ರ ತೇ ಕಲ್ಪವಾಸಿನಃ॥ 12

ದ್ವೇ ಕೋಟೀ ತು ಜನೋ ಲೋಕೋ ಯತ್ರ ತೇ ಬ್ರಹ್ಮಣಃ ಸುತಾಃ।
ಸನಂದನಾದ್ಯಾಃ ಪ್ರಥಿತಾ ಮೈತ್ರೇಯಾಮಲಚೇತಸಃ॥ 13

ಚತುರ್ಗುಣೋತ್ತರೇ ಚೋರ್ಧ್ವಂ ಜನಲೋಕಾತ್ತಪಃಸ್ಥಿತಮ್।
ವೈರಾಜಾ ಯತ್ರ ತೇ ದೇವಾಃ ಸ್ಥಿತಾ ದಾಹವಿವರ್ಜಿತಾಃ॥ 14

ಷಡ್ಗುಣೇನ ತಪೋಲೋಕಾತ್ ಸತ್ಯಲೋಕೋ ವಿರಾಜತೇ।
ಅಪುನರ್ಮಾರಕಾ ಯತ್ರ ಬ್ರಹ್ಮಲೋಕೋ ಹಿ ಸ ಸ್ಮೃತಃ॥ 15

ಪಾದಗಮ್ಯಂತು ಯತ್ಕಿಂಚಿದ್ವಸ್ತ್ವಸ್ತಿ ಪೃಥಿವೀಮಯಮ್।
ಸ ಭೂರ್ಲೋಕಃ ಸಮಾಖ್ಯಾತೋ ವಿಸ್ತರೋಽಸ್ಯ ಮಯೋದಿತಃ॥

---

ಅದೆಲ್ಲವೂ ಯಜ್ಞದ ಫಲರೂಪವಾದದ್ದು. ಯಜ್ಞವಾದರೋ ಈ ಭಾರತ ವರ್ಷದಲ್ಲಿ ಪ್ರತಿಷ್ಠಿತವಾಗಿದೆ (10-11). ಧ್ರುವನಿಂದ ಒಂದು ಕೋಟಿ ಯೋಜನ ಊರ್ಧ್ವದಲ್ಲಿ ಮಹರ್ಲೋಕವಿದೆ. ಅಲ್ಲಿರುವ ಋಷಿಗಳು ಒಂದು ಕಲ್ಪದವರೆಗೆ (ಬ್ರಹ್ಮನ ಒಂದು ಹಗಲು) ಜೀವಿಸುತ್ತಾರೆ (12). ಅಲ್ಲಿಂದ ಎರಡು ಕೋಟಿ ಯೋಜನಗಳ ಊರ್ಧ್ವದಲ್ಲಿ ಜನರ್ಲೋಕವಿದೆ. ಅಲ್ಲಿ ಬ್ರಹ್ಮನ ಪುತ್ರರಾದ ಪರಿಶುದ್ಧ ಚಿತ್ತವುಳ್ಳ ಸನಂದನಾದಿಗಳು ವಾಸಿಸುತ್ತಾರೆ (13). ಜನರ್ಲೋಕದಿಂದ ನಾಲ್ಕರಷ್ಟು ಎಂದರೆ ಎಂಟು ಕೋಟಿ ಯೋಜನಗಳ ಊರ್ಧ್ವದಲ್ಲಿ ತಪೋಲೋಕವಿದೆ. ಅಲ್ಲಿ ತಾಪ ವರ್ಜಿತರಾದ ವೈರಾಜರೆಂಬ ದೇವತೆಗಳಿದ್ದಾರೆ (14). ತಪೋಲೋಕದಿಂದ ಆರರಷ್ಟು ಎಂದರೆ ಹನ್ನೆರಡು ಕೋಟಿ ಯೋಜನಗಳ ಊರ್ಧ್ವದಲ್ಲಿ ಸತ್ಯಲೋಕವು ವಿರಾಜಿಸುತ್ತಿದೆ. ಅದೇ ಬ್ರಹ್ಮಲೋಕ. ಅಲ್ಲಿಯ ನಿವಾಸಿಗಳಿಗೆ ಮರಣವಿಲ್ಲ (15). ನಮ್ಮ ಪಾದಸಂಚಾರಕ್ಕೆ ಯೋಗ್ಯವಾದ ಯಾವ

**ಭೂಮಿಸೂರ್ಯಾಂತರಂ ಯಚ್ಚ ಸಿದ್ಧಾದಿಮುನಿಸೇವಿತಮ್।**
**ಭುವರ್ಲೋಕಸ್ತು ಸೋಽಪ್ಯುಕ್ತೋ ದ್ವಿತೀಯೋ**
**ಮುನಿಸತ್ತಮ॥ 17**

**ಧ್ರುವಸೂರ್ಯಾಂತರಂ ಯಚ್ಚ ನಿಯುತಾನಿ ಚತುರ್ದಶ।**
**ಸ್ವರ್ಲೋಕಃ ಸೋಽಪಿ ಗದಿತೋ ಲೋಕಸಂಸ್ಥಾನಚಿಂತಕೈಃ॥ 18**

**ತ್ರೈಲೋಕ್ಯಮೇತತ್ ಕೃತಕಂ ಮೈತ್ರೇಯ ಪರಿಪಠ್ಯತೇ।**
**ಜನಸ್ತಪಸ್ತಥಾ ಸತ್ಯಮಿತಿ ಚಾಕೃತಕಂ ತ್ರಯಮ್॥ 19**

**ಕೃತಕಾಕೃತಯೋರ್ಮಧ್ಯೇ ಮಹರ್ಲೋಕ ಇತಿ ಸ್ಮೃತಃ।**
**ಶೂನ್ಯೋ ಭವತಿ ಕಲ್ಪಾಂತೇ ಯೋಽತ್ಯಂತಂ ನ ವಿನಶ್ಯತಿ॥ 20**

**ಏತೇ ಸಪ್ತ ಮಯಾ ಲೋಕಾ ಮೈತ್ರೇಯ ಕಥಿತಾಸ್ತವ।**
**ಪಾತಾಲಾನಿ ಚ ಸಪ್ತೈವ ಬ್ರಹ್ಮಾಂಡಸ್ಯೈಷ ವಿಸ್ತರಃ॥ 21**

---

ಪೃಥಿವೀ ಪ್ರದೇಶವಿದೆಯೋ ಅದಕ್ಕೆ ಭೂರ್ಲೋಕವೆಂದು ಹೆಸರು. ಇದರ ವಿಸ್ತಾರವನ್ನು ಹೇಳಿದ್ದೇನೆ. ಭೂಮಿಯಿಂದ ಸೂರ್ಯಮಂಡಲದ ವರೆಗಿರುವ ಸಿದ್ಧಾದಿಮುನಿಸೇವಿತ ಪ್ರದೇಶವು ಎರಡನೆಯದಾದ ಭುವರ್ಲೋಕ. ಅದರ ವಿಚಾರವೂ ಹೇಳಿದ್ದಾಗಿದೆ (16-17). ಸೂರ್ಯ ಮಂಡಲಕ್ಕೂ ಧ್ರುವನಿಗೂ ನಡುವೆ ಇರುವ ಹದಿನಾಲ್ಕು ಲಕ್ಷ ಯೋಜನ ವಿಸ್ತಾರವಾದ ಪ್ರದೇಶವು ಸ್ವರ್ಲೋಕವೆಂದು ಲೋಕಸ್ಥಿತಿಯನ್ನು ಚಿಂತಿಸು ವವರು ಹೇಳಿದ್ದಾರೆ (18). ಈ ಮೂರು ಲೋಕಗಳು (ಭೂಃ, ಭುವಃ, ಸುವಃ) ಕೃತಕವೆಂದು ಹೇಳಲ್ಪಟ್ಟಿದೆ. ಜನರ್ಲೋಕ, ಮಹರ್ಲೋಕ, ಸತ್ಯಲೋಕ—ಇವು ಅಕೃತಕ ಲೋಕತ್ರಯವೆಂದು ಉಕ್ತವಾಗಿದೆ (19). ಈ ಕೃತಕ* ಮತ್ತು ಅಕೃತಕ ಲೋಕತ್ರಯಗಳ ಮಧ್ಯದಲ್ಲಿ ಮಹರ್ಲೋಕ ವಿದೆ. ಕಲ್ಪಾಂತದಲ್ಲಿ ಇದು ಜನಶೂನ್ಯವಾಗುತ್ತದೆಯೇ ಹೊರತು ನಾಶ ವಾಗುವುದಿಲ್ಲ. (ಆದ್ದರಿಂದ ಇದು ಕೃತಕಾಕೃತಕ) (20). ಮೈತ್ರೇಯ, ಹೀಗೆ ನಾನು ಏಳು ಊರ್ಧ್ವ ಲೋಕಗಳನ್ನೂ ಏಳು ಪಾತಾಳ ಲೋಕಗಳನ್ನೂ

---

* ಕೃತಕ = ಪ್ರತಿಕಲ್ಪದಲ್ಲಿಯೂ ಹುಟ್ಟತಕ್ಕದ್ದು.

**ಏತದಂಡಕಟಾಹೇನ ತಿರ್ಯಕ್ ಚೋರ್ಧ್ವಮಧಸ್ತಥಾ।**
**ಕಪಿತ್ಥಸ್ಯ ಯಥಾ ಬೀಜಂ ಸರ್ವತೋ ವೈ ಸಮಾವೃತಮ್॥ 22**

**ದಶೋತ್ತರೇಣ ಪಯಸಾ ಮೈತ್ರೇಯಾಂಡಂ ಚ ತದ್‌ವೃತಮ್।**
**ಸರ್ವೋಽಂಬುಪರಿಧಾನೋಽಸೌ ವಹ್ನಿನಾ ವೇಷ್ಟಿತೋ ಬಹಿಃ॥ 23**

**ವಹ್ನಿಶ್ಚ ವಾಯುನಾ ವಾಯುರ್ಮೈತ್ರೇಯ ನಭಸಾ ವೃತಃ।**
**ಭೂತಾದಿನಾ ನಭಃ ಸೋಽಪಿ ಮಹತಾ ಪರಿವೇಷ್ಟಿತಃ॥ 24**

**ದಶೋತ್ತರಾಣ್ಯಶೇಷಾಣಿ ಮೈತ್ರೇಯೈತಾನಿ ಸಪ್ತ ವೈ।**
**ಮಹಾಂತಂ ಚ ಸಮಾವೃತ್ಯ ಪ್ರಧಾನಂ ಸಮವಸ್ಥಿತಮ್॥ 25**

**ಅನಂತಸ್ಯ ನ ತಸ್ಯಾಂತಃ ಸಂಖ್ಯಾನಾಂ ಚಾಪಿ ವಿದ್ಯತೇ।**
**ತದನಂತಮಸಂಖ್ಯಾತಪ್ರಮಾಣಂ ಚಾಪಿ ವೈ ಯತಃ॥ 26**

**ಹೇತುಭೂತಮಶೇಷಸ್ಯ ಪ್ರಕೃತಿಃ ಸಾ ಪರಾ ಮುನೇ।**
**ಅಂಡಾನಾಂ ತು ಸಹಸ್ರಾಣಾಂ ಸಹಸ್ರಾಣ್ಯಯುತಾನಿ ಚ॥ 27**

---

ನಿನಗೆ ಹೇಳಿದ್ದೇನೆ. ಇಷ್ಟು ಬ್ರಹ್ಮಾಂಡದ ವಿಸ್ತಾರ (21). ಬೇಲದ ಹಣ್ಣಿನ ಬೀಜವು ಸುತ್ತಲೂ ಹಣ್ಣಿನ ಸಿಪ್ಪೆಯಿಂದ ಆವರಿಸಲ್ಪಟ್ಟಿರುವಂತೆ, ಈ ಬ್ರಹ್ಮಾಂಡವು ಅಡ್ಡಲಾಗಿ ಮೇಲೆ ಕೆಳಗೆ ಎಲ್ಲೆಡೆಯೂ ಅಂಡಕಟಾಹ (ಅನಂತ ಬ್ರಹ್ಮಾಂಡಗಳನ್ನೊಳಗೊಂಡ ವಿಶ್ವಕಟಾಹ) ದಿಂದ ಪರಿವೃತ ವಾಗಿದೆ (22). ಮೈತ್ರೇಯ, (ನಿನಗೆ ಹೇಳಿದ) ಈ ಬ್ರಹ್ಮಾಂಡವು ಅದರ ಹತ್ತರಷ್ಟು ಪ್ರಮಾಣದ ಜಲದಿಂದ ಆವೃತವಾಗಿದೆ. ಆ ಜಲವು ಹೊರಗೆ ಅಗ್ನಿಯಿಂದ ಆವೃತವಾಗಿದೆ. ಅಗ್ನಿಯು ವಾಯುವಿನಿಂದಲೂ ವಾಯು ಆಕಾಶದಿಂದಲೂ ಆವೃತವಾಗಿವೆ. ಆ ಆಕಾಶವು ಭೂತಾದಿಯಾದ ಅಹಂಕಾರತತ್ತ್ವದಿಂದಲೂ ಅಹಂಕಾರತತ್ತ್ವವು ಮಹತ್ತತ್ತ್ವದಿಂದಲೂ ಪರಿವೇಷ್ಟಿತವಾಗಿದೆ (23-24). ಬ್ರಹ್ಮಾಂಡದಿಂದ ಹಿಡಿದು ಮಹತ್ತತ್ತ್ವದ ವರೆಗಿನ ಈ ಏಳು ಪದಾರ್ಥಗಳು ಉತ್ತರೋತ್ತರ ಹತ್ತರಷ್ಟು ಅಧಿಕ ವಾಗಿವೆ. ಮಹತ್ತನ್ನು ಪ್ರಧಾನವು ಆವರಿಸಿಕೊಂಡಿದೆ (25). ಅನಂತವಾದ ಪ್ರಧಾನಕ್ಕೆ ಅಂತವಾಗಲಿ ಎಣಿಕೆಯಾಗಲಿ ಇಲ್ಲ. ಏಕೆಂದರೆ, ಪ್ರಧಾನವು

**ಈದೃಶಾನಾಂ ತಥಾ ತತ್ರ ಕೋಟಿಕೋಟಿಶತಾನಿ ಚ।**
**ದಾರುಣ್ಯಗ್ನಿರ್ಯಥಾ ತೈಲಂ ತಿಲೇ ತದ್ವತ್ ಪುಮಾನಪಿ॥ 28**

**ಪ್ರಧಾನೇಽವಸ್ಥಿತೋ ವ್ಯಾಪೀ ಚೇತನಾತ್ಮಾತ್ಮವೇದನಃ।**
**ಪ್ರಧಾನಂ ಚ ಪುಮಾಂಶ್ಚೈವ ಸರ್ವಭೂತಾತ್ಮಭೂತಯಾ॥ 29**

**ವಿಷ್ಣುಶಕ್ತ್ಯಾ ಮಹಾಬುದ್ಧೇ ವೃತೌ ಸಂಶ್ರಯಧರ್ಮಿಣೌ।**
**ತಯೋಃ ಸೈವ ಪೃಥಗ್ಭಾವಕಾರಣಂ ಸಂಶ್ರಯಸ್ಯ ಚ॥ 30**

**ಕ್ಷೋಭಕಾರಣಭೂತಾ ಚ ಸರ್ಗಕಾಲೇ ಮಹಾಮತೇ।**
**ಯಥಾ ಸಕ್ತಂ ಜಲೇ ವಾತೋ ಬಿಭರ್ತಿತ ಕಣಿಕಾಶತಮ್॥ 31**

**ಶಕ್ತಿಃ ಸಾಪಿ ತಥಾ ವಿಷ್ಣೋಃ ಪ್ರಧಾನಪುರುಷಾತ್ಮಕಮ್।**
**ಯಥಾ ಚ ಪಾದಪೋ ಮೂಲಸ್ಕಂಧಶಾಕಾದಿಸಂಯುತಃ॥ 32**

---

ಅನಂತವೂ ಅಸಂಖ್ಯೇಯವೂ ಪರಿಮಾಣರಹಿತವೂ ಆಗಿದೆ. ಮೈತ್ರೇಯ, ಅದು ಅಶೇಷಜಗತ್ತಿಗೆ ಕಾರಣವಾಗಿ ಪರಾಪ್ರಕೃತಿಯೆನಿಸಿಕೊಂಡಿದೆ. ಆ ಪ್ರಧಾನದಲ್ಲಿ ಈ ಬಗೆಯ ಸಾವಿರ ಹತ್ತು ಸಾವಿರ ಕೋಟಿ ನೂರುಕೋಟಿ ಬ್ರಹ್ಮಾಂಡಗಳುಂಟು! ಕಟ್ಟಿಗೆಯಲ್ಲಿ ಬೆಂಕಿಯೂ ಎಳ್ಳಿನಲ್ಲಿ ಎಣ್ಣೆಯೂ ಇರುವಂತೆ ಪ್ರಧಾನದಲ್ಲಿ ಪುರುಷನಿದ್ದಾನೆ (26-28). ಪ್ರಧಾನದಲ್ಲಿರುವ ಪುರುಷನು (ಆತ್ಮನು) ವ್ಯಾಪಕನೂ ಚೇತನನೂ ಸ್ವಯಂಪ್ರಕಾಶನೂ ಆಗಿದ್ದಾನೆ. ಒಂದಕ್ಕೊಂದು ಸೇರಿಕೊಂಡಿರುವ ಈ ಪ್ರಕೃತಿ-ಪುರುಷರು ಸರ್ವಭೂತಾತ್ಮಕವಾದ ವಿಷ್ಣುಶಕ್ತಿಯಿಂದ ವ್ಯಾಪ್ತರಾಗಿದ್ದಾರೆ. ಆ ಪ್ರಕೃತಿ-ಪುರುಷರು ಅನ್ಯೋನ್ಯವಾಗಿ ಸೇರಿಕೊಳ್ಳುವ ಸಂಯೋಗಕ್ಕೂ ವಿಯೋಗಕ್ಕೂ ವಿಷ್ಣುಶಕ್ತಿಯೇ ನಿಮಿತ್ತ (29-30). ಸೃಷ್ಟಿಕಾಲದಲ್ಲಿ ಅವರಿಬ್ಬರಿಗೆ ಸ್ಪಂದನವನ್ನುಂಟುಮಾಡತಕ್ಕದ್ದೂ ಈ ವಿಷ್ಣುಶಕ್ತಿಯೇ. ನೀರೊಳಗೆ ಸೇರಿದ ವಾಯು ಹೇಗೆ ನೂರಾರು ಗುಳ್ಳೆಗಳನ್ನುಂಟುಮಾಡಿ ಧರಿಸುತ್ತದೆಯೋ ಹಾಗೆ ವಿಷ್ಣುಶಕ್ತಿಯು ಪ್ರಕೃತಿ ಪುರುಷಾತ್ಮಕವಾದ ಪ್ರಾಣಿಜಾತವನ್ನು ಧರಿಸಿದೆ (31). ಬೇರು, ಸ್ಕಂಧ, ಶಾಖಾದಿಗಳಿಂದ ಕೂಡಿದ ಮರವು ಆದಿಬೀಜದಿಂದ ಹುಟ್ಟುತ್ತದೆ. ಆ ಮರದಿಂದ ಅನ್ಯಬೀಜಗಳು ಉತ್ಪನ್ನ

**ಆದಿಬೀಜಾತ್ ಪ್ರಭವತಿ ಬೀಜಾನ್ಯನ್ಯಾನಿ ವೈ ತತಃ।**
**ಪ್ರಭವಂತಿ ತತಸ್ತೇಭ್ಯಃ ಸಂಭವಂತ್ಯಪರೇ ದ್ರುಮಾಃ॥ 33**

**ತೇಽಪಿ ತಲ್ಲಕ್ಷಣದ್ರವ್ಯಕಾರಣಾನುಗತಾ ಮುನೇ।**
**ಏವಮವ್ಯಾಕೃತಾತ್ ಪೂರ್ವಂ ಜಾಯಂತೇ ಮಹದಾದಯಃ॥ 34**

**ವಿಶೇಷಾಂತಾಸ್ತತಸ್ತೇಭ್ಯಃ ಸಂಭವಂತ್ಯಸುರಾದಯಃ।**
**ತೇಭ್ಯಶ್ಚ ಪುತ್ರಾಸ್ತೇಷಾಂ ಚ ಪುತ್ರಾಣಾಮಪರೇ ಸುತಾಃ॥ 35**

**ಬೀಜಾದ್‌ವೃಕ್ಷಪ್ರರೋಹೇಣ ಯಥಾ ನಾಪಚಯಸ್ತರೋಃ।**
**ಭೂತಾನಾಂ ಭೂತಸರ್ಗೇಣ ನೈವಾಸ್ತ್ಯಪಚಯಸ್ತಥಾ॥ 36**

**ಸನ್ನಿಧಾನಾದ್ಯಥಾಕಾಶಕಾಲಾದ್ಯಾಃ ಕಾರಣಂ ತರೋಃ।**
**ತಥೈವಾಪರಿಣಾಮೇನ ವಿಶ್ವಸ್ಯ ಭಗವಾನ್ ಹರಿಃ॥ 37**

**ವ್ರೀಹಿಬೀಜೇ ಯಥಾ ಮೂಲಂ ನಾಲಂ ಪತ್ರಾಂಕುರೌ ತಥಾ।**
**ಕಾಂಡಂ ಕೋಶಸ್ತು ಪುಷ್ಪಂ ಚ ಕ್ಷೀರಂ ಚದ್ವಚ್ಚ ತಂಡುಲಾಃ॥ 38**

---

ವಾಗುತ್ತವೆ. ಅವುಗಳಿಂದ ಮತ್ತೆ ಇತರ ಮರಗಳು ಹುಟ್ಟುತ್ತವೆ (32-33). ಅವು ಮೂಲಕಾರಣವಾದ ಬೀಜದ ಎಲ್ಲ ದ್ರವ್ಯಗುಣ ಲಕ್ಷಣಗಳನ್ನು ಹೊಂದಿರುತ್ತವೆ. ಹಾಗೆಯೇ ಅವ್ಯಾಕೃತವಾದ ಪ್ರಕೃತಿಯಿಂದ ಮಹತ್ತತ್ತ್ವದಿಯಾಗಿ ಪಂಚಭೂತವಿಶೇಷಗಳವರೆಗಿನ ವಸ್ತುಗಳು ಉತ್ಪನ್ನವಾಗುತ್ತವೆ. ಅವುಗಳಿಂದ ಅಸುರ ಮನುಷ್ಯಾದಿಗಳ ನಿರ್ಮಾಣ ವಾಗುತ್ತದೆ. ಅವರಿಗೆ ಪುತ್ರರೂ ಪುತ್ರರಿಗೆ ಅನ್ಯಪುತ್ರರೂ ಹುಟ್ಟುತ್ತಾರೆ (34-35). ವೃಕ್ಷವು ತನ್ನ ಬೀಜದಿಂದ ಇನ್ನೊಂದು ವೃಕ್ಷವನ್ನು ಹುಟ್ಟಿಸಿದ್ದ ರಿಂದ ಮೊದಲನೆಯ ವೃಕ್ಷಕ್ಕೆ ಹೇಗೆ ಕ್ಷತಿಯಿಲ್ಲವೋ ಹಾಗೆಯೇ ಅನ್ಯಪ್ರಾಣಿ ಗಳ ಉತ್ಪಾದನೆಯಿಂದ ಕಾರಣವಾದ ಪ್ರಾಣಿಗಳಿಗೆ ಯಾವ ಹಾನಿಯೂ ಇಲ್ಲ (36). ಆಕಾಶ, ಕಾಲ—ಮೊದಲಾದವು ಸಾಂನಿಧ್ಯ ಮಾತ್ರದಿಂದ ಮರದ ಉತ್ಪತ್ತಿಗೆ ಹೇಗೆ ಕಾರಣವೋ ಹಾಗೆ ಭಗವಾನ್ ಹರಿಯು ತನ್ನಲ್ಲಿ ಯಾವ ಪರಿಣಾಮವೂ ಆಗದೆಯೇ ವಿಶ್ವದ ಉತ್ಪತ್ತಿಗೆ ಕಾರಣನಾಗಿದ್ದಾನೆ (37). ಬೀಜವಾದ ಬತ್ತದಲ್ಲಿ (ಮುಂದೆ ವ್ಯಕ್ತವಾಗಲಿರುವ) ಬೇರು, ನಾಳ,

**ತುಷಾಃ ಕಣಾಶ್ಚ ಸಂತೋ ವೈ ಯಾಂತ್ಯಾವಿರ್ಭಾವಮಾತ್ಮನಃ।**
**ಪ್ರರೋಹಹೇತುಸಾಮಗ್ರೀಮಾಸಾದ್ಯ ಮುನಿಸತ್ತಮ॥ 39**

**ತಥಾ ಕರ್ಮಸ್ವನೇಕೇಷು ದೇವಾದ್ಯಾಃ ಸಮವಸ್ಥಿತಾಃ।**
**ವಿಷ್ಣುಶಕ್ತಿಂ ಸಮಾಸಾದ್ಯ ಪ್ರರೋಹಮುಪಯಾಂತಿ ವೈ॥ 40**

**ಸ ಚ ವಿಷ್ಣುಃ ಪರಂ ಬ್ರಹ್ಮ ಯತಃ ಸರ್ವಮಿದಂ ಜಗತ್।**
**ಜಗಚ್ಚ ಯೋ ಯತ್ರ ಚೇದಂ ಯಸ್ಮಿಂಶ್ಚ ಲಯಮೇಷ್ಯತಿ॥ 41**

**ತದ್‌ಬ್ರಹ್ಮ ತತ್ಪರಂ ಧಾಮ ಸದಸತ್ಪರಮಂ ಪದಮ್।**
**ಯಸ್ಯ ಸರ್ವಮಭೇದೇನ ಯತಶ್ಚೈತಚ್ಚರಾಚರಮ್॥ 42**

**ಸ ಏವ ಮೂಲಪ್ರಕೃತಿರ್ವ್ಯಕ್ತರೂಪೀ ಜಗಚ್ಚ ಸಃ।**
**ತಸ್ಮಿನ್ನೇವ ಲಯಂ ಸರ್ವಂ ಯಾತಿ ತತ್ರ ಚ ತಿಷ್ಠತಿ॥ 43**

---

ಎಲೆ, ಮೊಳಕೆ, ಕಾಂಡ, ಮೊಗ್ಗು, ಹೂ, ಹಾಲು, ಅಕ್ಕಿ, ಹೊಟ್ಟು, ತೆನೆಗಳು (ಅವ್ಯಕ್ತರೂಪದಲ್ಲಿ) ಇರುತ್ತವೆ. ಬೆಳೆಯುವುದಕ್ಕೆ ಕಾರಣವಾದ ಸಾಮಗ್ರಿಯನ್ನು (ಮಣ್ಣು, ನೀರು) ಪಡೆದು ಅವು ಆವಿರ್ಭವಿಸುತ್ತವೆ (38-39). ಹಾಗೆಯೇ ಅನೇಕ ವಿಧವಾದ (ಪುಣ್ಯಪಾಪರೂಪವಾದ) ಕರ್ಮಗಳಲ್ಲಿ ದೇವಮನುಷ್ಯಾದಿಗಳು ಇದ್ದು ವಿಷ್ಣುಶಕ್ತಿಯೆಂಬ ಸಾಮಗ್ರಿ ಯನ್ನು ಪಡೆದು ಆವಿರ್ಭವಿಸುತ್ತಾರೆ (40). ಆ ವಿಷ್ಣುವೇ ಪರಬ್ರಹ್ಮ. ಅವನಿಂದ ಸಮಸ್ತ ಜಗತ್ತು ಹುಟ್ಟಿದೆ. ಅವನೇ ಜಗತ್ತು. ಈ ಜಗತ್ತು ಅವನಲ್ಲಿದ್ದು ಅವನಲ್ಲಿಯೇ ಲಯಹೊಂದುತ್ತದೆ. ಅವನೇ ಬ್ರಹ್ಮ; ಪರಮ ಗತಿ; ಸತ್, ಅಸತ್, ಪರಮಪದ—ಎಲ್ಲವೂ ಅವನೇ. ಚರಾಚರಾತ್ಮಕ ವಾದದ್ದೆಲ್ಲವೂ ಅವನಲ್ಲಿ ಅದ್ವೈತವಾಗಿದ್ದು ಅಭಿವ್ಯಕ್ತವಾಗಿದೆ (41-42). (ಅವ್ಯಕ್ತವಾದ) ಮೂಲಪ್ರಕೃತಿಯೆಂದರೂ ವಿಷ್ಣುವೇ. ಅವನು ವ್ಯಕ್ತರೂಪ ನಾಗಿ ಜಗತ್ತಾಗಿದ್ದಾನೆ. ಸರ್ವವೂ ಅವನಲ್ಲಿಯೇ ಲಯವಾಗುತ್ತದೆ. ಅವನಲ್ಲಿಯೇ ಇದ್ದುಕೊಂಡಿರುತ್ತದೆ (43). ವಿಷ್ಣುವೇ ಯಜ್ಞಾದಿಕ್ರಿಯೆಗೆ ಕರ್ತ. ಯಜ್ಞಕ್ಕೆ ವಿಷಯವಾದ ಕರ್ಮವೂ ಆತನೇ. ಆತನೇ ಯಜ್ಞರೂಪ ವಾದ ಕ್ರಿಯೆ. ಯಜ್ಞದ ಫಲವೂ ಆತನೇ. ಸ್ರುಕ್, ಸ್ರುವಾದಿ ಯಜ್ಞದ

**ಕರ್ತಾ ಕ್ರಿಯಾಣಾಂ ಸ ಚ ಇಜ್ಯತೇ ಕ್ರತುಃ**
**ಸ ಏವ ತತ್ಕರ್ಮಫಲಂ ಚ ತಸ್ಯ।**
**ಸ್ರುಗಾದಿ ಯತ್ಸಾಧನಮಪ್ಯಶೇಷಂ**
**ಹರೇರ್ನ ಕಿಂಚಿದ್ವ್ಯತಿರಿಕ್ತಮಸ್ತಿ॥** 44

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ಸಪ್ತಮೋಽಧ್ಯಾಯಃ

---

ಸರ್ವಸಲಕರಣೆಯೂ ಆತನೇ. ಶ್ರೀಹರಿಗೆ ಅತಿರಿಕ್ತವಾದ ವಸ್ತು ಯಾವುದೂ ಇಲ್ಲ (44).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಏಳನೆಯ ಅಧ್ಯಾಯ ಮುಗಿಯಿತು.



## ಅಷ್ಟಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ವ್ಯಾಖ್ಯಾತಮೇತದ್‌ಬ್ರಹ್ಮಾಂಡಸಂಸ್ಥಾನಂ ತವ ಸುವ್ರತ।**
**ತತಃ ಪ್ರಮಾಣಸಂಸ್ಥಾನೇ ಸೂರ್ಯಾದೀನಾಂ ಶೃಣುಷ್ವ ಮೇ॥ 1**

**ಯೋಜನಾನಾಂ ಸಹಸ್ರಾಣಿ ಭಾಸ್ಕರಸ್ಯ ರಥೋ ನವ।**
**ಈಷಾದಂಡಸ್ತಥೈವಾಸ್ಯ ದ್ವಿಗುಣೋ ಮುನಿಸತ್ತಮ॥ 2**

**ಸಾರ್ಧಕೋಟಿಸ್ತಥಾ ಸಪ್ತ ನಿಯುತಾನ್ಯಧಿಕಾನಿ ವೈ।**
**ಯೋಜನಾನಾಂ ತು ತಸ್ಯಾಕ್ಷಸ್ತತ್ರ ಚಕ್ರಂ ಪ್ರತಿಷ್ಠಿತಮ್॥ 3**

**ತ್ರಿನಾಭಿಮತಿ ಪಂಚಾರೇ ಷಣ್ಣೇಮಿನ್ಯಕ್ಷಯಾತ್ಮಕೇ।**
**ಸಂವತ್ಸರಮಯೇ ಕೃತ್ಸ್ನಂ ಕಾಲಚಕ್ರಂ ಪ್ರತಿಷ್ಠಿತಮ್॥ 4**

---

## ಅಧ್ಯಾಯ 8

ಸೂರ್ಯಮಂಡಲ; ನಕ್ಷತ್ರ ಮತ್ತು ರಾಶಿಗಳ ವ್ಯವಸ್ಥೆ;
ಲೋಕಪಾಲರು; ಗಂಗೆಯ ಆವಿರ್ಭಾವ

ಪರಾಶರರು ಹೇಳಿದರು: ಸುವ್ರತ-ಮೈತ್ರೇಯ, ಈ ಬ್ರಹ್ಮಾಂಡದ ಪರಿಸ್ಥಿತಿಯನ್ನು ವಿವರಿಸಿದ್ದಾಯಿತು. ಇನ್ನು ಸೂರ್ಯಾದಿಗಳ ಪ್ರಮಾಣ, ಸ್ಥಿತಿಗಳ ವಿಷಯವನ್ನಾಲಿಸು (1). ಸೂರ್ಯನ ರಥವು ಒಂಬತ್ತು ಸಾವಿರ ಯೋಜನಗಳ ವಿಸ್ತಾರವಾದದ್ದು. ಅದರ ಈಷಾದಂಡವು (ಮೂಕಿ ಮರ) ಎರಡರಷ್ಟು ಎಂದರೆ ಹದಿನೆಂಟು ಸಾವಿರ ಯೋಜನ ಉದ್ದವಾಗಿದೆ (2). ರಥದ ಅಚ್ಚು ಒಂದೂವರೆ ಕೋಟಿ, ಏಳುಲಕ್ಷ (ಒಂದು ಕೋಟಿ ಐವತ್ತೇಳು ಲಕ್ಷ) ಯೋಜನಗಳ ಉದ್ದವಿದೆ. ಅದಕ್ಕೆ ಚಕ್ರವನ್ನು ಸೇರಿಸಲಾಗಿದೆ (3). ಸಂವತ್ಸರಮಯವಾದ ಈ ಚಕ್ರದಲ್ಲಿ ಸಮಸ್ತಕಾಲಚಕ್ರವು ನೆಲೆಸಿದೆ. ಈ ಚಕ್ರಕ್ಕೆ ಮೂರು ನಾಭಿಗಳೂ (ಗುಂಬಗಳು), ಐದು ಅರೆಕಾಲುಗಳೂ (Spokes), ಆರು ನೇಮಿಗಳೂ (ಚಕ್ರದ ಅಂಚು, ಹಳಿ) ಇದ್ದು

**ಹಯಾಶ್ಚ ಸಪ್ತಚ್ಛಂದಾಂಸಿ ತೇಷಾಂ ನಾಮಾನಿ ಮೇ ಶೃಣು।**
**ಗಾಯತ್ರೀ ಚ ಬೃಹತ್ಯುಷ್ಣಿಗ್ಜಗತೀ ತ್ರಿಷ್ಟುಬೇವ ಚ॥ 5**

**ಅನುಷ್ಟುಪ್ ಪಂಕ್ತಿರಿತ್ಯುಕ್ತಾ ಛಂದಾಂಸಿ ಹರಯೋ ರವೇಃ।**
**ಚತ್ವಾರಿಂಶತ್ ಸಹಸ್ರಾಣಿ ದ್ವಿತೀಯೋಽಕ್ಷೋ ವಿವಸ್ವತಃ॥ 6**

**ಪಂಚಾನ್ಯಾನಿ ತು ಸಾರ್ಧಾನಿ ಸ್ಯಂದನಸ್ಯ ಮಹಾಮತೇ।**
**ಅಕ್ಷಪ್ರಮಾಣಮುಭಯೋಃ ಪ್ರಮಾಣಂ ತದ್ಯುಗಾರ್ಧಯೋಃ॥ 7**

**ಹ್ರಸ್ವೋಽಕ್ಷಸ್ತದ್ಯುಗಾರ್ಧೇನ ಧ್ರುವಾಧಾರೋ ರಥಸ್ಯ ವೈ।**
**ದ್ವಿತೀಯೇಽಕ್ಷೇ ತು ತಚ್ಚಕ್ರಂ ಸಂಸ್ಥಿತಂ ಮಾನಸಾಚಲೇ॥ 8**

**ಮಾನಸೋತ್ತರಶೈಲಸ್ಯ ಪೂರ್ವತೋ ವಾಸವೀ ಪುರೀ।**
**ದಕ್ಷಿಣೇ ತು ಯಮಸ್ಯಾನ್ಯಾ ಪ್ರತೀಚ್ಯಾಂ ವರುಣಸ್ಯ ಚ॥ 9**

---

ಚಕ್ರವು* ಅಕ್ಷಯವಾಗಿದೆ (4). ಏಳು ಛಂದಸ್ಸುಗಳು ಆ ರಥದ ಅಶ್ವಗಳು. ಅವುಗಳ ಹೆಸರನ್ನು ಕೇಳು: ಗಾಯತ್ರೀ, ಬೃಹತೀ, ಉಷ್ಣಿಕ್, ಜಗತೀ, ತ್ರಿಷ್ಟುಪ್, ಅನುಷ್ಟುಪ್ ಮತ್ತು ಪಂಕ್ತಿ. ಇವು ಸೂರ್ಯನ ಅಶ್ವಗಳು. ಸೂರ್ಯನ ರಥಕ್ಕೆ ನಲವತ್ತೈದು ಸಾವಿರದ ಐನೂರು ಯೋಜನ ಉದ್ದವಿರುವ ಇನ್ನೊಂದು ಅಚ್ಚು ಇದೆ. ರಥದ ನೊಗದ ಒಂದು ಅರ್ಧಭಾಗವು ಒಂದು ಅಚ್ಚಿನಷ್ಟೂ ಇನ್ನೊಂದು ಅರ್ಧಭಾಗವು ಮತ್ತೊಂದು ಅಚ್ಚಿನಷ್ಟೂ ಉದ್ದವಾಗಿದೆ§ (5-7). ರಥದ ಗಿಡ್ಡವಾದ ಅಚ್ಚು ಗಿಡ್ಡವಾದ ನೊಗದ ಅರ್ಧಭಾಗದೊಡನೆ ಧ್ರುವನಕ್ಷತ್ರದಲ್ಲಿ ನಿಂತಿದೆ. ಎರಡನೆಯ ಅಚ್ಚಿನಲ್ಲಿರುವ ಚಕ್ರವು ಮಾನಸಾಚಲದಲ್ಲಿ ನಿಂತಿದೆ (8). ಮಾನಸೋತ್ತರಶೈಲದ ಪೂರ್ವದಲ್ಲಿ ಇಂದ್ರನಗರಿಯೂ ದಕ್ಷಿಣದಲ್ಲಿ ಯಮನಗರಿಯೂ

---

* ಮೂರು ನಾಭಿಗಳು = ಪೂರ್ವಾಹ್ಣ, ಅಪರಾಹ್ಣ, ರಾತ್ರಿ. ಐದು ಅರೆಕಾಲುಗಳು = ಸೌರ, ಚಂದ್ರ, ಸಾಯನ, ನಾಕ್ಷತ್ರ, ಬಾರ್ಹಸ್ಪತ್ಯ—ಎಂಬ ಐದು ಸಂವತ್ಸರಗಳು. ಆರು ನೇಮಿಗಳು = ಆರು ಋತುಗಳು.

§ ಎರಡು ಅಚ್ಚುಗಳ ಒಟ್ಟು ಉದ್ದದಷ್ಟು ನೊಗದ ಪ್ರಮಾಣ. ನೊಗದ ಒಂದು ಪಾರ್ಶ್ವ ಉದ್ದವಾಗಿಯೂ ಇನ್ನೊಂದು ಪಾರ್ಶ್ವ ಗಿಡ್ಡವಾಗಿಯೂ ಇದೆ.

**ಉತ್ತರೇಣ ಚ ಸೋಮಸ್ಯ ತಾಸಾಂ ನಾಮಾನಿ ಮೇ ಶೃಣು।**
**ವಸ್ವೌಕಸಾರಾ ಶಕ್ರಸ್ಯ ಯಾಮ್ಯಾ ಸಂಯಮನೀ ತಥಾ॥** 10

**ಪುರೀ ಸುಖಾ ಜಲೇಶಸ್ಯ ಸೋಮಸ್ಯ ಚ ವಿಭಾವರೀ।**
**ಕಾಷ್ಠಾಂ ಗತೋ ದಕ್ಷಿಣತಃ ಕ್ಷಿಪ್ತೇಷುರಿವ ಸರ್ಪತಿ॥** 11

**ಮೈತ್ರೇಯ ಭಗವಾನ್ ಭಾನುರ್ಜ್ಯೋತಿಷಾಂ ಚಕ್ರಸಂಯುತಃ।**
**ಅಹೋರಾತ್ರವ್ಯವಸ್ಥಾನಕಾರಣಂ ಭಗವಾನ್ ರವಿಃ॥** 12

**ದೇವಯಾನಃ ಪರಃ ಪಂಥಾ ಯೋಗಿನಾಂ ಕ್ಲೇಶಸಂಕ್ಷಯೇ।**
**ದಿವಸಸ್ಯ ರವಿರ್ಮಧ್ಯೇ ಸರ್ವಕಾಲಂ ವ್ಯವಸ್ಥಿತಃ॥** 13

**ಸರ್ವದ್ವೀಪೇಷು ಮೈತ್ರೇಯ ನಿಶಾರ್ಧಸ್ಯ ಚ ಸಮ್ಮುಖಃ।**
**ಉದಯಾಸ್ತಮನೇ ಚೈವ ಸರ್ವಕಾಲಂ ತು ಸಮ್ಮುಖೇ॥** 14

---

ಪಶ್ಚಿಮದಲ್ಲಿ ವರುಣನಗರಿಯೂ ಉತ್ತರದಲ್ಲಿ ಚಂದ್ರನ ನಗರಿಯೂ ಇವೆ. ಅವುಗಳ ಹೆಸರನ್ನು ಕೇಳು: ವಸ್ವೌಕಸಾರಾ ಎಂಬುದು ಇಂದ್ರನ ನಗರ. ಸಂಯಮನಿಯು ಯಮನಿಗೆ ಸೇರಿದ್ದು (9-10). ಸುಖಾ ಎಂಬುದು ವರುಣನ ಪಟ್ಟಣ. ವಿಭಾವರಿಯು ಚಂದ್ರನ ಪುರಿ. ಭಗವಾನ್ ಸೂರ್ಯನು ಜ್ಯೋತಿಶ್ಚಕ್ರದೊಡನೆ ದಕ್ಷಿಣದಿಕ್ಕಿನಿಂದ ಪ್ರವೇಶಿಸಿ, ಎಸೆದ ಬಾಣದಂತೆ ವೇಗವಾಗಿ ಚಲಿಸುತ್ತಾನೆ. ಹಗಲು ರಾತ್ರಿಗಳ ವ್ಯವಸ್ಥೆಗೆ ಆತನು ಕಾರಣನಾಗಿದ್ದಾನೆ (11-12). ಮತ್ತು ರಾಗಾದಿಕ್ಲೇಶಗಳು ಕ್ಷೀಣವಾದ ಮೇಲೆ (ಕ್ರಮಮುಕ್ತಿಭಾಗಿಗಳಾದ) ಯೋಗಿಗಳಿಗೆ ದೇವಯಾನವೆಂಬ ಶ್ರೇಷ್ಠವಾದ ಮಾರ್ಗವಾಗಿದ್ದಾನೆ. ಮೈತ್ರೇಯ, ಸರ್ವದ್ವೀಪಗಳಲ್ಲಿಯೂ ಸೂರ್ಯನು ಮಧ್ಯಾಹ್ನದಲ್ಲಿ ಯಾವ ಆಕಾಶಭಾಗದಲ್ಲಿರುತ್ತಾನೋ, ಆ ದ್ವೀಪದಲ್ಲಿ ಮಧ್ಯರಾತ್ರಿಯಾದಾಗ, (ನೇರವಾಗಿ ವಿರುದ್ಧ ದಿಕ್ಕಿನಲ್ಲಿರುವ ದ್ವೀಪದಲ್ಲಿ) ಅದಕ್ಕೆ ಸಂಮುಖನಾಗಿರುತ್ತಾನೆ. ಹೀಗೆಯೇ ಉದಯಾಸ್ತ ಸಮಯಗಳಲ್ಲಿಯೂ ಸರ್ವದಾ ಒಂದು ದ್ವೀಪದಿಂದ ಇನ್ನೊಂದು ದ್ವೀಪಕ್ಕೆ ಸಂಮುಖನಾಗಿರುತ್ತಾನೆ (13-14). ಸಮಸ್ತ ದಿಕ್ಕುಗಳಲ್ಲಾಗಲಿ ವಿದಿಕ್ಕುಗಳಲ್ಲಾಗಲಿ ಅಲ್ಲಿರುವ ಜನರಿಗೆ ಸೂರ್ಯನು ಯಾವಾಗ ಕಾಣಿಸುತ್ತಾನೋ

**ವಿದಿಶಾಸು ತ್ವಶೇಷಾಸು ತಥಾ ಬ್ರಹ್ಮನ್ ದಿಶಾಸು ಚ।**
**ಯೈರ್ಯತ್ರ ದೃಶ್ಯತೇ ಭಾಸ್ವಾನ್ ಸ ತೇಷಾಮುದಯಃ ಸ್ಮೃತಃ॥** 15

**ತಿರೋಭಾವಂ ಚ ಯತ್ರೈತಿ ತತ್ರೈವಾಸ್ತಮನಂ ರವೇಃ।**
**ನೈವಾಸ್ತಮನಮರ್ಕಸ್ಯ ನೋದಯಃ ಸರ್ವದಾ ಸತಃ॥** 16

**ಉದಯಾಸ್ತಮನಾಖ್ಯಂ ಹಿ ದರ್ಶನಾದರ್ಶನಂ ರವೇಃ।**
**ಶಕ್ರಾದೀನಾಂ ಪುರೇ ತಿಷ್ಠನ್ ಸ್ಪೃಶತ್ಯೇಷ ಪುರತ್ರಯಮ್॥** 17

**ವಿಕೋಣೌ ದ್ವೌ ವಿಕೋಣಸ್ಥಃತ್ರೀನ್ ಕೋಣಾನ್**
**ದ್ವೇ ಪುರೇ ತಥಾ।**
**ಉದಿತೋ ವರ್ದ್ಧಮಾನಾಭಿರಾಮಧ್ಯಾಹ್ನಾತ್ತಪನ್ ರವಿಃ॥** 18

---

ಆಗ ಸೂರ್ಯೋದಯವೆಂದು ಹೇಳಲ್ಪಡುತ್ತದೆ. ಯಾವಾಗ ಸೂರ್ಯನು ಕಾಣಿಸುವುದಿಲ್ಲವೋ ಆಗ ಸೂರ್ಯಾಸ್ತಮಯವೆಂದು ಹೇಳಲ್ಪಡುತ್ತದೆ. ಸರ್ವದಾ ಪ್ರಕಾಶಿಸುತ್ತಿರುವ ಸೂರ್ಯನಿಗೆ ಅಸ್ತಮಯವೂ ಇಲ್ಲ, ಉದಯವೂ ಇಲ್ಲ (15-16). ಸೂರ್ಯನ ದರ್ಶನವೇ ಸೂರ್ಯೋದಯ. ಅದರ್ಶನವೇ ಅಸ್ತಮಯ. ಸೂರ್ಯನು ಇಂದ್ರಾದಿಗಳ ನಗರದಲ್ಲಿ ಪ್ರಕಾಶಿಸುತ್ತಿರುವಾಗ ಮೂರು ನಗರಗಳನ್ನೂ ಎರಡು ವಿಕೋಣಗಳನ್ನೂ* ಬೆಳಗುತ್ತಾನೆ. ಆತನು ವಿಕೋಣದಲ್ಲಿದ್ದಾಗ ಮೂರು ವಿಕೋಣಗಳನ್ನೂ ಎರಡು ನಗರಗಳನ್ನು ಬೆಳಗುತ್ತಾನೆ. ಅವನು ಉದಿತನಾದಮೇಲೆ ವರ್ಧಿಸುತ್ತಿರುವ ಕಿರಣಗಳಿಂದ ಮಧ್ಯಾಹ್ನದ ವರೆಗೆ ತಾಪವನ್ನು ಕೊಡುತ್ತ ಹೋಗುತ್ತಾನೆ (17-18). ಅನಂತರ ಕ್ರಮವಾಗಿ ಕ್ಷೀಣವಾಗುವ ಕಿರಣಗಳೊಡನೆ ಅಸ್ತಂಗತನಾಗುತ್ತಾನೆ. ಸೂರ್ಯನ ಉದಯಾಸ್ತಮನಗಳ ನಿಮಿತ್ತದಿಂದ ಪೂರ್ವದಿಕ್ಕು, ಪಶ್ಚಿಮದಿಕ್ಕು ಎಂಬ ವ್ಯವಹಾರ ಬಂದಿದೆ. ಆತನು ಪೂರ್ವ

* ವಿಕೋಣ = ವಿದಿಕ್ಕು, ಮೂಲೆ ಪೂರ್ವದಿಕ್ಕಿನಲ್ಲಿದ್ದಾಗ ಪಾರ್ಶ್ವದ ಎರಡು ಮೂಲೆಗಳನ್ನೂ ಪೂರ್ವ, ದಕ್ಷಿಣ, ಉತ್ತರಗಳನ್ನೂ ಬೆಳಗುತ್ತಾನೆ. ಮೂಲೆಯಲ್ಲಿದ್ದಾಗ ಪಾರ್ಶ್ವದ ಎರಡು ದಿಕ್ಕು, ಆ ದಿಕ್ಕುಗಳ ತುದಿಯಲ್ಲಿರುವ ಎರಡು ಮೂಲೆಗಳು ಮತ್ತು ತಾನಿದ್ದ ಮೂಲೆ ಇವನ್ನು ಬೆಳಗುತ್ತಾನೆ. ಅಂತೂ ಭೂಗೋಳದ ಅರ್ಧಭಾಗದಷ್ಟು ಸದಾ ಬೆಳಕಿನಿಂದ ಕೂಡಿರುತ್ತದೆ.

**ತತಃ ಪರಂ ಹ್ರಸಂತೀಭಿರ್ಗೋಭಿರಸ್ತಂ ನಿಯಚ್ಛತಿ।**
**ಉದಯಾಸ್ತಮನಾಭ್ಯಾಂ ಚ ಸ್ಮೃತೇ ಪೂರ್ವಾಪರೇ ದಿಶೌ॥ 19**

**ಯಾವತ್ಪುರಸ್ತಾತ್ತಪತಿ ತಾವತ್ ಪೃಷ್ಠೇ ಚ ಪಾರ್ಶ್ವಯೋಃ।**
**ಋತೇಽಮರಗಿರೇರ್ಮೇರೋರುಪರಿ ಬ್ರಹ್ಮಣಃ ಸಭಾಮ್॥ 20**

**ಯೇ ಯೇ ಮರೀಚಯೋಽರ್ಕಸ್ಯ ಪ್ರಯಾಂತಿ**
**ಬ್ರಹ್ಮಣಃ ಸಭಾಮ್।**
**ತೇ ತೇ ನಿರಸ್ತಾಸ್ತದ್ಭಾಸಾ ಪ್ರತೀಪಮುಪಯಾಂತಿ ವೈ॥ 21**

**ತಸ್ಮಾದ್ದಿಶ್ಯುತ್ತರಸ್ಯಾಂ ವೈ ದಿವಾರಾತ್ರಿಃ ಸದೈವ ಹಿ।**
**ಸರ್ವೇಷಾಂ ದ್ವೀಪವರ್ಷಾಣಾಂ ಮೇರುರುತ್ತರತೋ ಯತಃ॥ 22**

**ಪ್ರಭಾ ವಿವಸ್ವತೋ ರಾತ್ರಾವಸ್ತಂ ಗಚ್ಛತಿ ಭಾಸ್ಕರೇ।**
**ವಿಶತ್ಯಗ್ನಿಮತೋ ರಾತ್ರೌ ವಹ್ನಿರ್ದೂರಾತ್ ಪ್ರಕಾಶತೇ॥ 23**

**ವಹ್ನೇಃ ಪ್ರಭಾ ತಥಾ ಭಾನುಂ ದಿನೇಷ್ವಾವಿಶತಿ ದ್ವಿಜ।**
**ಅತೀವ ವಹ್ನಿಸಂಯೋಗಾದತಃ ಸೂರ್ಯಃ ಪ್ರಕಾಶತೇ॥ 24**

---

ದಿಕ್ಕಿನಲ್ಲಿ ಬೆಳಗುವಾಗ ಹಿಂದಿನ ಪಶ್ಚಿಮವನ್ನೂ, ಪಾರ್ಶ್ವಗಳಾದ ಉತ್ತರ ದಕ್ಷಿಣಗಳನ್ನೂ ಬೆಳಗುತ್ತಲೇ ಇರುತ್ತಾನೆ. ಅಮರಗಿರಿಯಾದ ಮೇರುವಿನ ಮೇಲಿರುವ ಬ್ರಹ್ಮಸಭೆಯನ್ನು ಮಾತ್ರ ಬೆಳಗಲಾರ (19-20). ಏಕೆಂದರೆ, ಸೂರ್ಯನ ಯಾವ ಯಾವ ಕಿರಣಗಳು ಬ್ರಹ್ಮಸಭೆಯನ್ನು ಸೇರುತ್ತವೆಯೋ ಅವು ಬ್ರಹ್ಮದೇವನ ತೇಜಸ್ಸಿನಿಂದ ಪರಾಹತವಾಗಿ ಹಿಂದಿರುಗುತ್ತವೆ! (21). ಸಮಸ್ತದ್ವೀಪಗಳಿಗೂ ದೇಶಗಳಿಗೂ ಮೇರುಪರ್ವತವು ಉತ್ತರದಲ್ಲಿರುವುದರಿಂದ, ಮೇರುಪರ್ವತದ ಮೇಲೆ ಯಾವಾಗಲೂ (ಒಂದು ಪಾರ್ಶ್ವದಲ್ಲಿ) ಹಗಲು (ಇನ್ನೊಂದು ಪಾರ್ಶ್ವದಲ್ಲಿ) ರಾತ್ರಿಯಾಗಿರುತ್ತದೆ (22). ಭಾಸ್ಕರನು ಅಸ್ತವಾದಮೇಲೆ ರಾತ್ರಿಯಲ್ಲಿ ಅವನ ಕಿರಣಗಳು ಅಗ್ನಿಯನ್ನು ಪ್ರವೇಶಿಸುವುದರಿಂದ ಅಗ್ನಿಯು ದೂರದಿಂದಲೇ ಪ್ರಕಾಶಿಸುತ್ತದೆ (23). ಹಾಗೆಯೇ ಅಗ್ನಿಯ ಪ್ರಭೆಯು ಹಗಲುಹೊತ್ತು ಸೂರ್ಯನಲ್ಲಿ ಸೇರಿಕೊಳ್ಳುತ್ತದೆ. ಅತ್ಯಂತ ವಹ್ನಿಸಂಯೋಗದ ಕಾರಣದಿಂದ ಹಗಲು ಸೂರ್ಯನು ಪ್ರಕಾಶಿಸುತ್ತಾನೆ (24). ಪ್ರಕಾಶಮಯ ಮತ್ತು ಉಷ್ಣತಾ

**ತೇಜಸೀ ಭಾಸ್ಕರಾಗ್ನೇಯೇ ಪ್ರಕಾಶೋಷ್ಣಸ್ವರೂಪಿಣೀ।**
**ಪರಸ್ಪರಾನುಪ್ರವೇಶಾದಾಪ್ಯಾಯೇತೇ ದಿವಾನಿಶಮ್॥ 25**

**ದಕ್ಷಿಣೋತ್ತರಭೂಮ್ಯರ್ಧೇ ಸಮುತ್ತಿಷ್ಠತಿ ಭಾಸ್ಕರೇ।**
**ಅಹೋರಾತ್ರಂ ವಿಶತ್ಯಂಭಸ್ತಮಃ ಪ್ರಾಕಾಶ್ಯಶೀಲವತ್॥ 26**

**ಆತಾಮ್ರಾ ಹಿ ಭವಂತ್ಯಾಪೋ ದಿವಾ ನಕ್ತಪ್ರವೇಶನಾತ್।**
**ದಿನಂ ವಿಶತಿ ಚೈವಾಂಭೋ ಭಾಸ್ಕರೇಽಸ್ತಮುಪೇಯುಷಿ॥ 27**

**ತಸ್ಮಾಚ್ಛುಕ್ಲಾ ಭವಂತ್ಯಾಪೋ ನಕ್ತಮಹ್ನಃ ಪ್ರವೇಶನಾತ್।**
**ಏವಂ ಪುಷ್ಕರಮಧ್ಯೇನ ಯದಾ ಯಾತಿ ದಿವಾಕರಃ॥ 28**

**ತ್ರಿಂಶದ್ಭಾಗಂತು ಮೇದಿನ್ಯಾಸ್ತದಾ ಮೌಹೂರ್ತಿಕೀ ಗತಿಃ।**
**ಕುಲಾಲಚಕ್ರಪರ್ಯಂತೋ ಭ್ರಮನ್ನೇಷ ದಿವಾಕರಃ॥ 29**

**ಕರೋತ್ಯಹಸ್ತಥಾ ರಾತ್ರಿಂ ವಿಮುಂಚನ್ ಮೇದಿನೀಂ ದ್ವಿಜ।**
**ಅಯನಸ್ಯೋತ್ತರಸ್ಯಾದೌ ಮಕರಂ ಯಾತಿ ಭಾಸ್ಕರಃ॥ 30**

---

ಮಯಗಳಾದ ಸೂರ್ಯಾಗ್ನಿಗಳ ತೇಜಸ್ಸುಗಳು ಪರಸ್ಪರ ಅನುಪ್ರವೇಶದಿಂದ ಹಗಲು ರಾತ್ರಿಗಳಲ್ಲಿ ಕ್ರಮವಾಗಿ ವೃದ್ಧಿಹೊಂದುತ್ತವೆ (25). ಭಾಸ್ಕರನು ಭೂಮಿಯ ದಕ್ಷಿಣಾರ್ಧದಲ್ಲಿರಲಿ ಅಥವಾ ಉತ್ತರಾರ್ಧದಲ್ಲಿರಲಿ, ಪ್ರಕಾಶಶೀಲವಾದ ಹಗಲೂ ಮತ್ತು ತಮೋಮಯವಾದ ರಾತ್ರಿಯೂ ಕ್ರಮವರಿತು ನೀರನ್ನು ಪ್ರವೇಶಿಸುತ್ತವೆ (26). ರಾತ್ರಿಯು ಪ್ರವೇಶಿಸಿರುವುದರಿಂದ ಹಗಲುಹೊತ್ತು ನೀರು ಸ್ವಲ್ಪ ಕೆಂಪಾಗಿ ಕಾಣಿಸುತ್ತದೆ. ಸೂರ್ಯನು ಅಸ್ತಂಗತನಾದಾಗ ಹಗಲು ನೀರನ್ನು ಪ್ರವೇಶಿಸುತ್ತದೆ. ಹಗಲು ಪ್ರವೇಶಿಸಿದ್ದರಿಂದ ರಾತ್ರಿಯ ವೇಳೆ ನೀರು ಬೆಳ್ಳಗೆ ಕಾಣಿಸುತ್ತದೆ (27). ಸೂರ್ಯನು ಪುಷ್ಕರದ್ವೀಪದ ಮಧ್ಯವನ್ನು ಸೇರಿ ಭೂಮಂಡಲದ ಮೂವತ್ತನೆಯ ಒಂದು ಭಾಗವನ್ನು ಯಾವಾಗ ಅತಿಕ್ರಮಿಸುವನೋ ಆಗ ಅಷ್ಟು ಕಾಲಕ್ಕೆ ಒಂದು ಮುಹೂರ್ತವೆಂದು ಹೆಸರು. ಹೀಗೆ ಕುಂಬಾರನ ಚಕ್ರದ ಅಂಚಿನಂತೆ ಸುತ್ತುತ್ತ ಸೂರ್ಯನು ಭೂಮಿಗೆ ಹಗಲು ರಾತ್ರಿಗಳನ್ನುಂಟುಮಾಡುತ್ತಾನೆ. ಉತ್ತರಾಣಯದ ಆದಿಯಲ್ಲಿ ಆತನು ಮಕರ ರಾಶಿಯನ್ನು ಪ್ರವೇಶಿಸುತ್ತಾನೆ (28-30). ರಾಶಿಯಿಂದ ರಾಶಿಗೆ

**ತತಃ ಕುಂಭಂ ಚ ಮೀನಂ ಚ ರಾಶೇ ರಾಶ್ಯಂತರಂ ದ್ವಿಜ।**
**ತ್ರಿಷ್ವೇತೇಷ್ವಥ ಭುಕ್ತೇಷು ತತೋ ವೈಷುವತೀಂ ಗತಿಮ್॥ 31**

**ಪ್ರಯಾತಿ ಸವಿತಾ ಕುರ್ವನ್ನಹೋರಾತ್ರಂ ತತಃ ಸಮಮ್।**
**ತತೋ ರಾತ್ರಿಃ ಕ್ಷಯಂ ಯಾತಿ ವರ್ದ್ಧತೇಽನುದಿನಂ ದಿನಮ್॥ 32**

**ತತಶ್ಚ ಮಿಥುನಸ್ಯಾಂತೇ ಪರಾಂ ಕಾಷ್ಠಾಮುಪಾಗತಃ।**
**ರಾಶಿಂ ಕರ್ಕಟಕಂ ಪ್ರಾಪ್ಯ ಕುರುತೇ ದಕ್ಷಿಣಾಯನಮ್॥ 33**

**ಕುಲಾಲಚಕ್ರಪರ್ಯಂತೋ ಯಥಾ ಶೀಘ್ರಂ ಪ್ರವರ್ತತೇ।**
**ದಕ್ಷಿಣಪ್ರಕ್ರಮೇ ಸೂರ್ಯಸ್ತಥಾ ಶೀಘ್ರಂ ಪ್ರವರ್ತತೇ॥ 34**

**ಅತಿವೇಗಿತಯಾ ಕಾಲಂ ವಾಯುವೇಗಬಲಾಚ್ಚರನ್।**
**ತಸ್ಮಾತ್ ಪ್ರಕೃಷ್ಟಾಂ ಭೂಮಿಂ ತು ಕಾಲೇನಾಲ್ಪೇನ ಗಚ್ಛತಿ॥ 35**

---

ಸಂಚರಿಸತಕ್ಕ ಸೂರ್ಯನು ಅನಂತರ ಕುಂಭರಾಶಿಗೂ ಮೀನರಾಶಿಗೂ ಹೋಗುತ್ತಾನೆ. ಈ ಮೂರು ರಾಶಿಗಳು ಭುಕ್ತವಾದಮೇಲೆ ಭಾಸ್ಕರನು ವಿಷುವದ್‌ಗತಿಯನ್ನು ಅವಲಂಬಿಸುತ್ತಾನೆ (ಭೂಮಧ್ಯರೇಖೆಯ ಬಳಿ ಸಂಚರಿಸುತ್ತಾನೆ) (31). ಆಗ ಸೂರ್ಯನು ಅಹೋರಾತ್ರಗಳನ್ನು ಸಮಪ್ರಮಾಣವುಳ್ಳದ್ದಾಗಿ ಮಾಡುತ್ತ ಚಲಿಸುತ್ತಾನೆ. ಅದಾದ ಮೇಲೆ ಅನುದಿನವೂ ರಾತ್ರಿಯ ಪ್ರಮಾಣವು ಕಡಿಮೆಯಾಗುತ್ತ ಹಗಲಿನ ಪ್ರಮಾಣವು ಹೆಚ್ಚುತ್ತ ಹೋಗುವುದು (32). ಆಮೇಲೆ (ಮೇಷ, ವೃಷಭ ಗಳನ್ನು ದಾಟಿ) ಮಿಥುನರಾಶಿಯ ಅಂತ್ಯಭಾಗದಲ್ಲಿ ಉತ್ತರದ ತುಟ್ಟ ತುದಿಯನ್ನು ಮುಟ್ಟಿರುತ್ತಾನೆ. ಅನಂತರ ಕರ್ಕಾಟಕರಾಶಿಯನ್ನು ಸೇರಿ ದಕ್ಷಿಣಾಯನವನ್ನಾರಂಭಿಸುತ್ತಾನೆ (33). ಕುಲಾಲಚಕ್ರದ ಅಂಚು ಹೇಗೆ ವೇಗವಾಗಿ ಸುತ್ತುತ್ತದೆಯೋ ಹಾಗೆ ಸೂರ್ಯನು ದಕ್ಷಿಣಾಯನದಲ್ಲಿ ವೇಗವಾಗಿ ಚಲಿಸುತ್ತಾನೆ. ಅವನು ಅತ್ಯಂತವೇಗಶಾಲಿಯಾದ್ದರಿಂದ ವಾಯುವೇಗದಂತೆ ಕಾಲವನ್ನು ಬಳಸುತ್ತ ಅಲ್ಪಕಾಲದಲ್ಲಿಯೇ ಬಹುದೂರ ಪ್ರದೇಶವನ್ನು ದಾಟುತ್ತಾನೆ (34-35). ಮೈತ್ರೇಯ, ದಕ್ಷಿಣಾಯನದಲ್ಲಿ ಸೂರ್ಯನು ಹಗಲುಹೊತ್ತು ಹನ್ನೆರಡು ಮುಹೂರ್ತಗಳಲ್ಲಿ ಹದಿ

**ಸೂರ್ಯೋ ದ್ವಾದಶಭಿಃ ಶೈಘ್ರ್ಯಾನ್ಮುಹೂರ್ತೈರ್ದಕ್ಷಿಣಾಯನೇ।**
**ತ್ರಯೋದಶಾರ್ಧಮೃಕ್ಷಾಣಾಮಹ್ನಾ ತು ಚರತಿ ದ್ವಿಜ॥ 36**

**ಮುಹೂರ್ತೈಸ್ತಾವದೃಕ್ಷಾಣಿ ನಕ್ತಮಷ್ಟಾದಶೈಶ್ಚರನ್।**
**ಕುಲಾಲಚಕ್ರಮಧ್ಯಸ್ಥೋ ಯಥಾ ಮಂದಂ ಪ್ರಸರ್ಪತಿ॥ 37**

**ತಥೋದಗಯನೇ ಸೂರ್ಯಃ ಸರ್ಪತೇ ಮಂದವಿಕ್ರಮಃ।**
**ತಸ್ಮಾದ್ದೀರ್ಘೇಣ ಕಾಲೇನ ಭೂಮಿಮಲ್ಪಾಂ ತು ಗಚ್ಛತಿ॥ 38**

**ಅಷ್ಟಾದಶಮುಹೂರ್ತಂ ಯದುತ್ತರಾಯಣಪಶ್ಚಿಮಮ್।**
**ಅಹರ್ಭವತಿ ತಚ್ಚಾಪಿ ಚರತೇ ಮಂದವಿಕ್ರಮಃ॥ 39**

**ತ್ರಯೋದಶಾರ್ಧಮಹ್ನಾ ತು ಋಕ್ಷಾಣಾಂ ಚರತೇ ರವಿಃ।**
**ಮುಹೂರ್ತೈಸ್ತಾವದೃಕ್ಷಾಣಿ ರಾತ್ರೌ ದ್ವಾದಶಭಿಶ್ಚರನ್॥ 40**

**ಅತೋ ಮಂದತರಂ ನಾಭ್ಯಾಂ ಚಕ್ರಂ ಭ್ರಮತಿ ವೈ ಯಥಾ।**
**ಮೃತ್ಪಿಂಡ ಇವ ಮಧ್ಯಸೋ ಧ್ರುವೋ ಭ್ರಮತಿ ವೈ ತಥಾ॥ 41**

---

ಮೂರುವರೆ ನಕ್ಷತ್ರಗಳನ್ನು ಶೀಘ್ರವಾಗಿ ಅತಿಕ್ರಮಿಸಿಬಿಡುತ್ತಾನೆ. ರಾತ್ರಿಯ ಹೊತ್ತು ಅಷ್ಟೇ ನಕ್ಷತ್ರಗಳನ್ನು ಹದಿನೆಂಟು ಮುಹೂರ್ತಗಳಲ್ಲಿ ದಾಟುತ್ತಾನೆ. ಆಗ ಕುಲಾಲಚಕ್ರದ ಮಧ್ಯದಲ್ಲಿರುವ ಜೀವಿಗೆ ಹೇಗೆ ಮಂದಗತಿಯಿರುತ್ತದೆಯೋ ಹಾಗೆ ಸೂರ್ಯನ ಗತಿ ಮಂದವಾಗಿರುತ್ತದೆ (36-37). ಹಾಗೆಯೇ ಉತ್ತರಾಯಣದಲ್ಲಿ ಸೂರ್ಯನು ಮಂದಗತಿಯಿಂದ ಸಂಚರಿಸುತ್ತಾನೆ. ಆದ್ದರಿಂದ ದೀರ್ಘಕಾಲದಲ್ಲಿ ಸ್ವಲ್ಪ ಭಾಗವನ್ನು ಮಾತ್ರ ದಾಟುತ್ತಾನೆ (38). ಆ ಕಾರಣವೇ ಉತ್ತರಾಣಯದ ಕಡೆಯ ದಿನದ ಹಗಲು ಹದಿನೆಂಟು ಮುಹೂರ್ತವುಳ್ಳದ್ದಾಗಿರುತ್ತದೆ. ಆ ದಿನ ಸೂರ್ಯನ ಗತಿಯು ಅತ್ಯಂತ ಮಂದವಾಗಿರುತ್ತದೆ. ಆ ದಿವಸ ರವಿಯು ಒಂದು ಹಗಲಿನಲ್ಲಿ ಹದಿಮೂರುವರೆ ನಕ್ಷತ್ರಗಳನ್ನು ದಾಟುತ್ತಾನೆ. ರಾತ್ರಿ ಹನ್ನೆರಡು ಮುಹೂರ್ತಗಳಲ್ಲಿಯೇ ಅಷ್ಟು ನಕ್ಷತ್ರಗಳನ್ನು ಅತಿಕ್ರಮಿಸುತ್ತಾನೆ (39-40). ಚಕ್ರವು ನಾಭಿಪ್ರದೇಶದಲ್ಲಿ ಮಂದತರ ಗತಿಯಿಂದ ಸುತ್ತುವುದರಿಂದ ಆ ಪ್ರದೇಶದಲ್ಲಿರುವ ಮಣ್ಣುಮುದ್ದೆಯಂತೆ, ಜ್ಯೋತಿಶ್ಚಕ್ರದ ಮಧ್ಯದಲ್ಲಿರುವ

**ಕುಲಾಲಚಕ್ರನಾಭಿಸ್ತು ಯಥಾ ತತ್ರೈವ ವರ್ತತೇ।**
**ಧ್ರುವಸ್ತಥಾ ಹಿ ಮೈತ್ರೇಯ ತತ್ರೈವ ಪರಿವರ್ತತೇ॥ 42**

**ಉಭಯೋಃ ಕಾಷ್ಠಯೋರ್ಮಧ್ಯೇ ಭ್ರಮತೋ ಮಂಡಲಾನಿ ತು।**
**ದಿವಾನಕ್ತಂ ಚ ಸೂರ್ಯಸ್ಯ ಮಂದಾ ಶೀಘ್ರಾ ಚ ವೈ ಗತಿಃ॥ 43**

**ಮಂದಾಹ್ನಿ ಯಸ್ಮಿನ್ನಯನೇ ಶೀಘ್ರಾ ನಕ್ತಂ ತದಾ ಗತಿಃ।**
**ಮಂದಾ ನಿಶಿ ಯದಾ ಚಾಸ್ಯ ತದಾ ಶೀಘ್ರಾ ದಿವಾ ಗತಿಃ॥ 44**

**ಏಕಪ್ರಮಾಣಮೇವೈಷ ಮಾರ್ಗಂ ಯಾತಿ ದಿವಾಕರಃ।**
**ಅಹೋರಾತ್ರೇಣ ಯೋ ಭುಂಕ್ತೇ ಸಮಸ್ತಾ ರಾಶಯೋ ದ್ವಿಜ॥ 45**

**ಷಡೇವ ರಾಶಿನ್ ಯೋ ಭುಂಕ್ತೇ ರಾತ್ರಾವನ್ಯಾಂಶ್ಚ ಷಡ್ದಿವಾ।**
**ರಾಶಿಪ್ರಮಾಣಜನಿತಾ ದೀರ್ಘಹ್ರಸ್ವಾತ್ಮತಾ ದಿನೇ॥ 46**

---

ಧ್ರುವನಕ್ಷತ್ರವೂ ಮೆಲ್ಲಗೆ ಸುತ್ತುತ್ತದೆ (41). ಕುಲಾಲಚಕ್ರದ ನಾಭಿಯು ಮಧ್ಯದಲ್ಲಿಯೇ ಇರುವಂತೆ, ಮೈತ್ರೇಯ, ಧ್ರುವನಕ್ಷತ್ರವು ತನ್ನ ಸ್ಥಳದಲ್ಲಿಯೇ ಇದ್ದು ತಿರುಗುತ್ತದೆ (42). ಈ ಪ್ರಕಾರದಲ್ಲಿ ದಕ್ಷಿಣೋತ್ತರ ದಿಕ್ಕುಗಳ ನಡುವೆ ಮಂಡಲಾಕಾರವಾಗಿ ಸುತ್ತುವ ಸೂರ್ಯನಿಗೆ ಹಗಲು ರಾತ್ರಿಗಳಲ್ಲಿ ಮಂದವಾದ ಅಥವಾ ಶೀಘ್ರವಾದ ಗತಿ ಇರುತ್ತದೆ (43). ಯಾವ ಆಯನದಲ್ಲಿ ಹಗಲು ಅವನ ಗತಿ ಮಂದವಾಗಿರುತ್ತದಯೋ ಆಗ ರಾತ್ರಿಯ ಹೊತ್ತು ಗತಿಯು ಶೀಘ್ರವಾಗಿರುತ್ತದೆ. ಯಾವ ಅಯನದಲ್ಲಿ ರಾತ್ರಿ ಸೂರ್ಯನ ಗತಿ ಮಂದವಾಗಿರುತ್ತದೆಯೋ ಆಗ ಹಗಲಿನಲ್ಲಿ ಅವನ ಗತಿ ಶೀಘ್ರವಾಗಿರುತ್ತದೆ* (44). (ಹೇಗಿದ್ದರೂ) ಸೂರ್ಯನು ಹಗಲು ರಾತ್ರಿಗಳು ಸೇರಿ ಎಲ್ಲ (ಹನ್ನೆರಡು) ರಾಶಿಗಳನ್ನೂ ಭೋಗಿಸುವುದರಿಂದ ಈತನ ಮಾರ್ಗವು (ಎರಡು ಅಯನಗಳಲ್ಲಿಯೂ) ಒಂದೇ ಅಳತೆಯುಳ್ಳದ್ದಾಗಿದೆ (45). ಆರೇ ರಾಶಿಗಳನ್ನು ರಾತ್ರಿಯಲ್ಲಿಯೂ ಉಳಿದ ಆರು ರಾಶಿಗಳನ್ನು ಹಗಲಿನಲ್ಲಿಯೂ ಆತನು ಭೋಗಿಸುತ್ತಾನೆ. ಹಗಲು ದೀರ್ಘವಾಗಿದೆ-ಹ್ರಸ್ವವಾಗಿದೆ ಎಂಬ ಭೇದವು ರಾಶಿಗಳ ಪರಿಮಾಣದ ದೆಸೆಯಿಂದ ಉಂಟಾದದ್ದು (46). ಹಾಗೆಯೇ ರಾತ್ರಿ ದೀರ್ಘವಾಗಿದೆ-

**ತಥಾ ನಿಶಾಯಾಂ ರಾಶೀನಾಂ ಪ್ರಮಾಣೈರ್ಲಘುದೀರ್ಘತಾ।**
**ದಿನಾದೇರ್ದೀರ್ಘಹ್ರಸ್ವತ್ವಂ ತದ್ಭೋಗೇನೈವ ಜಾಯತೇ॥ 47**

**ಉತ್ತರ ಪ್ರಕ್ರಮೇ ಶೀಘ್ರಾ ನಿಶಿ ಮಂದಾ ಗತಿರ್ದಿವಾ।**
**ದಕ್ಷಿಣೇ ತ್ವಯನೇ ಚೈವ ವಿಪರೀತಾ ವಿವಸ್ವತಃ॥ 48**

**ಉಷಾ ರಾತ್ರಿಃ ಸಮಾಖ್ಯಾತಾ ವ್ಯುಷ್ಟಿಶ್ಚಾಪ್ಯುಚ್ಯತೇ ದಿನಮ್।**
**ಪ್ರೋಚ್ಯತೇ ಚ ತಥಾ ಸಂಧ್ಯಾ ಉಷಾವ್ಯುಷ್ಟ್ಯೋರ್ಯದಂತರಮ್॥**

**ಸಂಧ್ಯಾಕಾಲೇ ಚ ಸಂಪ್ರಾಪ್ತೇ ರೌದ್ರೇ ಪರಮದಾರುಣೇ।**
**ಮಂದೇಹಾ ರಾಕ್ಷಸಾ ಘೋರಾಃ ಸೂರ್ಯಮಿಚ್ಛಂತಿ ಖಾದಿತುಮ್॥ 50**

---

ಹ್ರಸ್ವವಾಗಿದೆ ಎಂಬ ಭೇದಕ್ಕೆ ರಾಶಿಗಳ ಪರಿಮಾಣಗಳೇ ಕಾರಣ. ದಿನ ರಾತ್ರಿಗಳ ದೀರ್ಘತ್ವ–ಹ್ರಸ್ವತ್ವಗಳು ರಾಶಿಭೋಗದ ಕಾಲಪ್ರಮಾಣದಿಂದ ಆಗುತ್ತವೆ (47). ಉತ್ತರಾಯಣದಲ್ಲಿ ಸೂರ್ಯಗತಿ ರಾತ್ರಿಯಲ್ಲಿ ಮಂದ, ಹಗಲಿನಲ್ಲಿ ಶೀಘ್ರ. ದಕ್ಷಿಣಾಯನದಲ್ಲಿ ಇದಕ್ಕೆ ವಿಪರೀತವಾಗಿ ರಾತ್ರಿಯಲ್ಲಿ ಶೀಘ್ರ, ಹಗಲಿನಲ್ಲಿ ಮಂದ* (48). ರಾತ್ರಿಯು ಉಷಾ ಎಂದೂ ಹಗಲು ವ್ಯುಷ್ಟಿ ಎಂದೂ (ವೇದದಲ್ಲಿ) ಹೇಳಲ್ಪಟ್ಟಿದೆ. ಇವೆರಡರ ಮಧ್ಯಕಾಲಕ್ಕೆ ಸಂಧ್ಯಾ ಎಂದು ಹೆಸರು. ಸಂಧ್ಯಾಕಾಲವು ಪರಮದಾರುಣವೂ ರೌದ್ರವೂ ಆದದ್ದು. ಆ ಸಮಯದಲ್ಲಿ ಮಂದೇಹರೆಂಬ ಘೋರರಾಕ್ಷಸರು ಸೂರ್ಯನನ್ನು ಭಕ್ಷಿಸಲು ಬಯಸುತ್ತಾರೆ. (49-50). ಮೈತ್ರೇಯ, ಆ ರಾಕ್ಷಸರ ಶರೀರವು ಅಕ್ಷಯವಾಗಿದ್ದು ದಿನದಿನವೂ ಮರಣವಾಗಬೇಕೆಂದು ಬ್ರಹ್ಮನು ಅವರಿಗೆ ಕೊಟ್ಟ ಶಾಪವಿದೆ! ಆದ್ದರಿಂದ ಅವರಿಗೂ ಸೂರ್ಯನಿಗೂ ಭೀಕರವಾದ ಯುದ್ಧ ನಡೆಯುತ್ತದೆ. ಆಗ ವಿಪ್ರೋತ್ತಮರು ಓಂಕಾರಬ್ರಹ್ಮ

---

* ಈ ಶ್ಲೋಕದ ದ್ವಿತೀಯಾರ್ಧದ ಪಾಠ "ಶೀಘ್ರಾ ನಿಶಿ ಯದಾ ಚಾಸ್ಯ ತದಾ ಮಂದಾ ದಿವಾ ಗತಿಃ" ಎಂದು ಎಲ್ಲ ಪ್ರತಿಗಳಲ್ಲಿಯೂ ಇದೆ. ಪೂರ್ವಾರ್ಧಕ್ಕಿಂತ ಅದರ ಅರ್ಥ ಬೇರೆಯಾಗುವುದಿಲ್ಲವಾದ್ದರಿಂದ ಅದು ಅಪಪಾಠವೆಂದು ಭಾವಿಸಿ, ಮೇಲ್ಕಂಡಂತೆ ಮಾರ್ಪಡಿಸಲಾಗಿದೆ. 48ನೆಯ ಶ್ಲೋಕವನ್ನು ನೋಡಿ.

**ಪ್ರಜಾಪತಿಕೃತಃ ಶಾಪಸ್ತೇಷಾಂ ಮೈತ್ರೇಯ ರಕ್ಷಸಾಮ್।**
**ಅಕ್ಷಯತ್ವಂ ಶರೀರಾಣಾಂ ಮರಣಂ ಚ ದಿನೇ ದಿನೇ॥ 51**

**ತತಃ ಸೂರ್ಯಸ್ಯ ತೈರ್ಯುದ್ಧಂ ಭವತ್ಯತ್ಯಂತದಾರುಣಮ್।**
**ತತೋ ದ್ವಿಜೋತ್ತಮಾಸ್ತೋಯಂ ಸಂಕ್ಷಿಪಂತಿ ಮಹಾಮುನೇ॥ 52**

**ಓಂಕಾರಬ್ರಹ್ಮಸಂಯುಕ್ತಂ ಗಾಯತ್ರ್ಯಾ ಚಾಭಿಮಂತ್ರಿತಮ್।**
**ತೇನ ದಹ್ಯಂತಿ ತೇ ಪಾಪಾ ವಜ್ರೀಭೂತೇನ ವಾರಿಣಾ॥ 53**

**ಅಗ್ನಿಹೋತ್ರೇ ಹೂಯತೇ ಯಾ ಸಮಂತ್ರಾ ಪ್ರಥಮಾಹುತಿಃ।**
**ಸೂರ್ಯೋ ಜ್ಯೋತಿಃ ಸಹಸ್ರಾಂಶುಸ್ತಯಾ ದೀಪ್ಯತಿ ಭಾಸ್ಕರಃ॥ 54**

**ಓಂಕಾರೋ ಭಗವಾನ್ ವಿಷ್ಣುಸ್ತ್ರಿಧಾಮಾ ವಚಸಾಂ ಪತಿಃ।**
**ತದುಚ್ಚಾರಣತಸ್ತೇ ತು ವಿನಾಶಂ ಯಾಂತಿ ರಾಕ್ಷಸಾಃ॥ 55**

---

ಸಂಯುಕ್ತವೂ ಗಾಯತ್ರಿಯಿಂದ ಅಭಿಮಂತ್ರಿತವೂ ಆದ ಜಲವನ್ನು ಅರ್ಘ್ಯವಾಗಿಬಿಡುತ್ತಾರೆ. ಆ ಜಲವು ವಜ್ರಾಯುಧವಾಗಿ ಆ ಪಾಪಿಗಳನ್ನು ಸುಟ್ಟುಹಾಕುತ್ತದೆ (51-53). ಅಗ್ನಿಹೋತ್ರದಲ್ಲಿ 'ಸೂರ್ಯೋ ಜ್ಯೋತಿಃ' ಇತ್ಯಾದಿ ಮಂತ್ರಯುಕ್ತವಾದ ಯಾವ ಪ್ರಥಮಾಹುತಿಯು ಹಾಕಲ್ಪಡುತ್ತದೆಯೋ ಅದರಿಂದ ಸಹಸ್ರಾಂಶುವಾದ ಭಾಸ್ಕರನು ದೇದೀಪ್ಯಮಾನನಾಗುತ್ತಾನೆ (54). ಓಂಕಾರವೆಂದರೆ (ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ) ಮೂರು ಸ್ಥಾನಗಳಲ್ಲಿ ನೆಲೆಸಿದ ವೇದಾಧಿಪತಿಯಾದ ಭಗವಾನ್ ವಿಷ್ಣುವೇ. ಓಂಕಾರದ ಉಚ್ಚಾರಣ ಮಾತ್ರದಿಂದ ಆ ಮಂದೇಹರಾಕ್ಷಸರು ವಿನಾಶ ಹೊಂದುತ್ತಾರೆ (55). ಸೂರ್ಯನು ವಿಷ್ಣುಭಗವಂತನ ಶ್ರೇಷ್ಠವಾದ ಅಂಶ.

---

* ಕೆಲವು ರಾಶಿಗಳು ದೊಡ್ಡವು, ಕೆಲವು ಚಿಕ್ಕವು. ಆದ್ದರಿಂದ ಅವನ್ನು ದಾಟಲು ಹಿಡಿಯುವ ಸಮಯದಲ್ಲಿ ಹೆಚ್ಚು ಕಡಿಮೆ ಆಗುತ್ತದೆ. ರಾಶಿ ಸಾಪೇಕ್ಷವಾಗಿ ಸೂರ್ಯನ ಗತಿ ಶೀಘ್ರ, ಮಂದ–ಎಂದು ಹೇಳಲಾಗಿದೆ. ಅವನ ಗತಿ ಯಾವಾಗಲೂ ಏಕಪ್ರಕಾರ —ಎಂದು ತಾತ್ಪರ್ಯ. ಹೀಗೆ ಒಂದು ದಿನದಲ್ಲಿ ಸೂರ್ಯನು ಎಲ್ಲ ರಾಶಿಗಳನ್ನೂ ದಾಟುವುದಾದರೆ, ಮೇಷಮಾಸ ವೃಷಭಮಾಸ—ಇತ್ಯಾದಿಗಳ ಗಣನೆ ಹೇಗೆಂಬುದು ಚಿಂತನೀಯ.

ವೈಷ್ಣವೋಽಂಶಃ ಪರಃ ಸೂರ್ಯೋ
ಯೋಽಂತರ್ಜ್ಯೋತಿರಸಂಪ್ಲವಮ್।
ಅಭಿಧಾಯಕ ಓಂಕಾರಸ್ತಸ್ಯ ತತ್ಪ್ರೇರಕಃ ಪರಃ॥ 56

ತೇನ ಸಂಪ್ರೇರಿತಂ ಜ್ಯೋತಿರೋಂಕಾರೇಣಾಥ ದೀಪ್ತಿಮತ್।
ದಹತ್ಯಶೇಷರಕ್ಷಾಂಸಿ ಮಂದೇಹಾಖ್ಯಾನ್ಯಘಾನಿ ವೈ॥ 57

ತಸ್ಮಾನ್ನೋಲ್ಲಂಘನಂ ಕಾರ್ಯಂ ಸಂಧ್ಯೋಪಾಸನಕರ್ಮಣಃ।
ಸ ಹಂತಿ ಸೂರ್ಯಂ ಸಂಧ್ಯಾಯಾ ನೋಪಾಸ್ತಿಂ ಕುರುತೇ ತು ಯಃ॥

ತತಃ ಪ್ರಯಾತಿ ಭಗವಾನ್ ಬ್ರಾಹ್ಮಣೈರಭಿರಕ್ಷಿತಃ।
ವಾಲಖಿಲ್ಯಾದಿಭಿಶ್ಚೈವ ಜಗತಃ ಪಾಲನೋದ್ಯತಃ॥ 59

ಕಾಷ್ಠಾ ನಿಮೇಷಾ ದಶ ಪಂಚ ಚೈವ
ತ್ರಿಂಶಚ್ಚ ಕಾಷ್ಠಾ ಗಣಯೇತ್ ಕಲಾಂ ಚ।
ತ್ರಿಂಶತ್ಕಲಶ್ಚೈವ ಭವೇನ್ಮುಹೂರ್ತ-
ಸ್ತೈಸ್ತ್ರಿಂಶತಾ ರಾತ್ರ್ಯಹನೀ ಸಮೇತೇ॥ 60

---

ವಿಕಾರರಹಿತವಾದ ಅಂತರ್ಜ್ಯೋತಿಯೇ ಅವನು. ಅವನ ವಾಚಕಶಬ್ದ ಓಂಕಾರ. ಅದು ರಾಕ್ಷಸವಧೆಗೆ ಸೂರ್ಯನ ಶ್ರೇಷ್ಠವಾದ ಪ್ರೇರಕ (55-56). ಅದರಿಂದ ಪ್ರೇರಿತವಾದ ದೀಪ್ತಿಶಾಲಿಯಾದ ಸೂರ್ಯಜ್ಯೋತಿಯು ಮಂದೇಹರೆಂಬ ಪಾಪಿರಾಕ್ಷಸರನ್ನು ನಾಶಪಡಿಸುತ್ತದೆ. ಆದ್ದರಿಂದ ಸಂಧ್ಯೋಪಾಸನೆಯನ್ನು ಉಲ್ಲಂಘಿಸಬಾರದು. ಯಾವನು ಉಲ್ಲಂಘಿಸುತ್ತಾನೋ ಅವನು ಸೂರ್ಯನ ವಧೆ ಮಾಡಿದಂತೆ (57-58). ಹೀಗೆ ಬ್ರಾಹ್ಮಣರಿಂದಲೂ ವಾಲಖಿಲ್ಯಾದಿ ಮುನಿಗಳಿಂದಲೂ (ಅರ್ಘ್ಯಪ್ರದಾನದ ಮೂಲಕ) ರಕ್ಷಿತನಾದ ಭಗವಾನ್ ಸೂರ್ಯನು ಜಗತ್ತಿನ ಪರಿಪಾಲನೆಗಾಗಿ ಮುಂದೆ ಸಂಚರಿಸುವನು (59). ಹದಿನೈದು ನಿಮೇಷಗಳಿಗೆ ಒಂದು ಕಾಷ್ಠಾ. ಮೂವತ್ತು ಕಾಷ್ಠಗಳಿಗೆ ಒಂದು ಕಲೆ. ಮೂವತ್ತು ಕಲೆಗಳಿಗೆ ಒಂದು ಮುಹೂರ್ತ*. ಮೂವತ್ತು ಮುಹೂರ್ತಗಳಿಗೆ ಹಗಲು ರಾತ್ರಿ

* 1 ಮುಹೂರ್ತ = 48 ನಿಮಿಷ.

**ಹ್ರಾಸವೃದ್ಧೀ ತ್ವಹರ್ಭಾಗೈರ್ದಿವಸಾನಾಂ ಯಥಾಕ್ರಮಮ್।**
**ಸಂಧ್ಯಾ ಮುಹೂರ್ತಮಾತ್ರಾ ವೈ ಹ್ರಾಸವೃದ್ಧ್ಯೋಃ**
**ಸಮಾ ಸ್ಮೃತಾ॥ 61**

**ರೇಖಾಪ್ರಭೃತ್ಯಥಾದಿತ್ಯೇ ತ್ರಿಮುಹೂರ್ತಗತೇ ರವೌ।**
**ಪ್ರಾತಃ ಸ್ಮೃತಸ್ತತಃ ಕಾಲೋ ಭಾಗಶ್ಚಾಹ್ನ ಸ ಪಂಚಮಃ॥ 62**

**ತಸ್ಮಾತ್ ಪ್ರಾತಸ್ತನಾತ್ಕಾಲಾತ್ ತ್ರಿಮುಹೂರ್ತಸ್ತು ಸಂಗವಃ।**
**ಮಧ್ಯಾಹ್ನಸ್ತ್ರಿಮುಹೂರ್ತಸ್ತು ತಸ್ಮಾತ್ ಕಾಲಾತ್ತು ಸಂಗವಾತ್॥ 63**

**ತಸ್ಮಾನ್ಮಾಧ್ಯಾಹ್ನಿಕಾತ್ ಕಾಲಾದಪರಾಹ್ಣ ಇತಿ ಸ್ಮೃತಃ।**
**ತ್ರಯ ಏವ ಮುಹೂರ್ತಾಸ್ತು ಕಾಲಭಾಗಃ ಸ್ಮೃತೋ ಬುಧೈಃ॥ 64**

**ಅಪರಾಹ್ಣೇ ವ್ಯತೀತೇ ತು ಕಾಲಃ ಸಾಯಾಹ್ನ ಏವ ಚ।**
**ದಶಪಂಚಮುಹೂರ್ತಾ ವೈ ಮುಹೂರ್ತಾಸ್ತ್ರಯ ಏವ ಚ॥ 65**

---

ಗಳೂ ಸೇರಿ ಒಂದು ದಿನ (60). ಪ್ರಾತಃಕಾಲ, ಮಧ್ಯಾಹ್ನಕಾಲ ಮುಂತಾದ ದಿನ ಭಾಗಗಳ ಕಾಲಗಣನೆಯಲ್ಲಿ ಯಥಾಕ್ರಮವಾಗಿ ಹ್ರಾಸ, ವೃದ್ಧಿಗಳು ಆಗುತ್ತವೆ. ಹಗಲಿನ ಪ್ರಮಾಣದಲ್ಲಿ ಹ್ರಾಸವೃದ್ಧಿಗಳಾದರೂ ಸಂಧ್ಯೆಯು ಮಾತ್ರ ಯಾವಾಗಲೂ ಒಂದು ಮುಹೂರ್ತ ಕಾಲವುಳ್ಳದ್ದು (61). ಸೂರ್ಯರೇಖಾದರ್ಶನದಿಂದ ಹಿಡಿದು ಮೂರು ಮುಹೂರ್ತಗಳವರೆಗೆ ಸೂರ್ಯನು ಪ್ರಯಾಣ ಮಾಡುವವರೆಗೆ ಪ್ರಾತಃಕಾಲ ಎಂದು ಹೆಸರು. ಅನಂತರ ಬರತಕ್ಕದ್ದೂ ಹಗಲಿನ ಐದನೆಯ ಒಂದು ಭಾಗ ಪ್ರಮಾಣ ವುಳ್ಳದ್ದೂ ಆದ ಮೂರು ಮುಹೂರ್ತಗಳ ಕಾಲಕ್ಕೆ ಸಂಗವ ಎಂದು ಹೆಸರು. ಸಂಗವಕಾಲದಿಂದ ಮುಂದಕ್ಕೆ ಮೂರು ಮುಹೂರ್ತಗಳ ಕಾಲ ಮಧ್ಯಾಹ್ನವೆನಿಸುತ್ತದೆ (62-63). ಮಧ್ಯಾಹ್ನವಾದಮೇಲೆ ಮುಂದಿನ ಮೂರು ಮುಹೂರ್ತಗಳ ಕಾಲಕ್ಕೆ ಅಪರಾಹ್ಣವೆಂದು ಹೆಸರು. ಅಪರಾಹ್ಣ ಕಳೆದಮೇಲೆ ಮುಂದಿನ ಮೂರು ಮುಹೂರ್ತಗಳ ಕಾಲಕ್ಕೆ ಸಾಯಾಹ್ನ ವೆಂದು ಹೆಸರು. ಹೀಗೆ ಒಟ್ಟು ಹದಿನೈದು ಮುಹೂರ್ತಗಳು ದಿನದಲ್ಲಿ ಸಲ್ಲುತ್ತವೆ. ಒಂದೊಂದು ಕಾಲವಿಭಾಗಕ್ಕೆ ಮೂರು ಮುಹೂರ್ತಗಳು (64-65). (ಹಗಲು ರಾತ್ರಿಗಳು ಸಮಪ್ರಮಾಣವಿದ್ದಾಗ) ಹದಿನೈದು

**ದಶಪಂಚಮುಹೂರ್ತಂ ವೈ ಅಹರ್ವೈಷುವತಂ ಸ್ಮೃತಮ್।**
**ವರ್ಧತೇ ಹ್ರಸತೇ ಚೈವಾಪ್ಯಯನೇ ದಕ್ಷಿಣೋತ್ತರೇ॥ 66**

**ಅಹಸ್ತು ಗ್ರಸತೇ ರಾತ್ರಿಂ ರಾತ್ರಿರ್ಗ್ರಸತಿ ವಾಸರಮ್।**
**ಶರದ್ವಸಂತಯೋರ್ಮಧ್ಯೇ ವಿಷುವಂ ತು ವಿಭಾವ್ಯತೇ॥ 67**

**ತುಲಾಮೇಷಗತೇ ಭಾನೌ ಸಮರಾತ್ರಿದಿನಂ ತು ತತ್।**
**ಕರ್ಕಟಾವಸ್ಥಿತೇ ಭಾನೌ ದಕ್ಷಿಣಾಯನಮುಚ್ಯತೇ॥ 68**

**ಉತ್ತರಾಯಣಮಪ್ಯುಕ್ತಂ ಮಕರಸ್ಥೇ ದಿವಾಕರೇ।**
**ತ್ರಿಂಶನ್ಮುಹೂರ್ತಂ ಕಥಿತಮಹೋರಾತ್ರಂ ತು ಯನ್ಮಯಾ॥ 69**

**ತಾನಿ ಪಂಚದಶ ಬ್ರಹ್ಮನ್ ಪಕ್ಷ ಇತ್ಯಭಿಧೀಯತೇ।**
**ಮಾಸಃ ಪಕ್ಷದ್ವಯೇನೋಕ್ತೋ ದ್ವೌ ಮಾಸೌ ಚಾರ್ಕಜಾವೃತುಃ॥**

---

ಮುಹೂರ್ತಗಳಿರುವ ಹಗಲಿಗೆ ವೈಷುವತ ದಿನವೆಂದು ಹೆಸರು. ಉತ್ತರಾಯಣ ದಕ್ಷಿಣಾಯನಗಳಲ್ಲಿ ಹಗಲಿನ ಪ್ರಮಾಣ ಕ್ರಮವಾಗಿ ಹೆಚ್ಚುತ್ತದೆ, ಇಳಿಯುತ್ತದೆ (66). ಹಗಲು ರಾತ್ರಿಯನ್ನೂ ರಾತ್ರಿ ಹಗಲನ್ನೂ ಸ್ವಲ್ಪ ಮಟ್ಟಿಗೆ ನುಂಗುತ್ತವೆ. ಶರದೃತು ಮತ್ತು ವಸಂತ ಋತುಗಳ ನಡುವೆ ಎಂದರೆ ಸೂರ್ಯನು ತುಲಾರಾಶಿಯಲ್ಲಿ ಮತ್ತು ಮೇಷರಾಶಿಯಲ್ಲಿ ಇದ್ದಾಗ ರಾತ್ರಿದಿನಪ್ರಮಾಣ ಸಮವಾಗಿರುವ ವಿಷುವದಿನ ಅನುಭವಕ್ಕೆ ಬರುತ್ತದೆ. ಸೂರ್ಯನು ಕರ್ಕಾಟಕರಾಶಿಯನ್ನು ಪ್ರವೇಶಿಸಿದಾಗ ದಕ್ಷಿಣಾಯನ (67-68). ಸೂರ್ಯನು ಮಕರರಾಶಿಗೆ ಬಂದಾಗ ಉತ್ತರಾಯಣವೆಂದು ಹೇಳಿದ್ದಾಗಿದೆ. ಮೈತ್ರೇಯ, ಅಹೋರಾತ್ರಗಳು ಸೇರಿ ಮೂವತ್ತು ಮುಹೂರ್ತಗಳಿಗೆ ಒಂದು ದಿನವೆಂದು ಹೇಳಿದೆನಷ್ಟೆ (69). ಅಂತಹ ಹದಿನೈದು ದಿನಗಳಿಗೆ ಪಕ್ಷವೆಂದೂ ಎರಡು ಪಕ್ಷಗಳಿಗೆ ಮಾಸವೆಂದೂ ಎರಡು ಸೌರ ಮಾಸಗಳಿಗೆ* ಋತುವೆಂದೂ ಹೆಸರು. ಮೂರು ಋತು ಗಳಿಗೆ ಒಂದು ಅಯನ. ಎರಡು ಅಯನಗಳಿಗೆ ಒಂದು ವರ್ಷ. ನಾಲ್ಕು

---

* ಮೇಷ, ವೃಷಭ ಮಾಸಗಳು. ವಸಂತಋತು–ಎಂದು ಸೌರಋತು. ಚೈತ್ರ, ವೈಶಾಖಗಳು ವಸಂತಋತು–ಎಂದು ಚಾಂದ್ರಋತು.

**ಋತುತ್ರಯಂ ಚಾಪ್ಯಯನಂ ದ್ವೇಽಯನೇ ವರ್ಷಸಂಜ್ಞಿತೇ।**
**ಸಂವತ್ಸರಾದಾಯಃ ಪಂಚ ಚತುರ್ಮಾಸವಿಕಲ್ಪಿತಾಃ॥ 71**

**ನಿಶ್ಚಯಃ ಸರ್ವಕಾಲಸ್ಯ ಯುಗಮಿತ್ಯಭಿಧೀಯತೇ।**
**ಸಂವತ್ಸರಸ್ತು ಪ್ರಥಮೋ ದ್ವಿತೀಯಃ ಪರಿವತ್ಸರಃ॥ 72**

**ಇದ್ವತ್ಸರಸ್ತೃತೀಯಸ್ತು ಚತುರ್ಥಶ್ಚಾನುವತ್ಸರಃ।**
**ವತ್ಸರಃ ಪಂಚಮಶ್ಚಾತ್ರ ಕಾಲೋಽಯಂ ಯುಗಸಂಜ್ಞಿತಃ॥ 73**

**ಯಃ ಶ್ವೇತಸ್ಯೋತ್ತರಃ ಶೈಲಃ ಶೃಂಗವಾನಿತಿ ವಿಶ್ರುತಃ।**
**ತ್ರೀಣಿ ತಸ್ಯ ತು ಶೃಂಗಾಣಿ ಯೈರಯಂ ಶೃಂಗವಾನ್ ಸ್ಮೃತಃ॥ 74**

**ದಕ್ಷಿಣಂ ಚೋತ್ತರಂ ಚೈವ ಮಧ್ಯಂ ವೈಷುವತಂ ತಥಾ।**
**ಶರದ್ವಸಂತಯೋರ್ಮಧ್ಯೇ ತದ್ಭಾನುಃ ಪ್ರತಿಪದ್ಯತೇ॥ 75**

---

ಪ್ರಕಾರದ§ ಮಾಸಗಳ ಲೆಕ್ಕದಿಂದ ಐದು ಬಗೆಯ ಸಂವತ್ಸರಾದಿ ವರ್ಷಗಳಾಗುತ್ತವೆ (70-71). ಈ ಸರ್ವಪ್ರಕಾರದ ವರ್ಷಗಳ ಸಮುದಾಯಕ್ಕೆ 'ಯುಗ' ಎಂಬ ಹೆಸರಿದೆ. ಒಂದನೆಯದು ಸಂವತ್ಸರ. ಎರಡನೆಯದು ಪರಿವತ್ಸರ. ಮೂರನೆಯದು ಇದ್ವತ್ಸರ. ನಾಲ್ಕನೆಯದು ಅನುವತ್ಸರ. ಐದನೆಯದು ವತ್ಸರ. ಈ ಸಮುದಿತ ಕಾಲಕ್ಕೆ 'ಯುಗ' ಎಂದು ಹೆಸರು (72-73). ಶ್ವೇತವರ್ಷದ ಉತ್ತರಕ್ಕೆ ಶೃಂಗವಾನ್ ಎಂಬ ಪರ್ವತವಿದೆಯಷ್ಟೆ, ಅದಕ್ಕೆ ಮೂರು ಶೃಂಗಗಳಿರುವುದರಿಂದ 'ಶೃಂಗವಾನ್' ಎಂದು ಹೆಸರಾಗಿದೆ. ಒಂದು ದಕ್ಷಿಣ ದಿಕ್ಕಿನಲ್ಲಿ ಇನ್ನೊಂದು ಉತ್ತರ ದಿಕ್ಕಿನಲ್ಲಿ ಇವೆ. ಮಧ್ಯದಲ್ಲಿರುವ ಶೃಂಗಕ್ಕೆ ವೈಷುವತ ಎಂದು ಹೆಸರು. ಶರತ್ ಮತ್ತು ವಸಂತ ಋತುಗಳ ಮಧ್ಯದಲ್ಲಿ ಸೂರ್ಯನು ಈ ವೈಷುವತ ಶೃಂಗಕ್ಕೆ ಬರುತ್ತಾನೆ (74-75). ಮೇಷ ಮತ್ತು ತುಲಾರಾಶಿಗಳ ಆದಿಯಲ್ಲಿ

---

§ ಚಾಂದ್ರ, ಸೌರ, ಸಾವನ, ನಾಕ್ಷತ್ರ—ಎಂದು ನಾಲ್ಕು ಬಗೆಯ ಮಾಸಗಳು. ಈ ಗಣನೆಯಿಂದ ಚಾಂದ್ರ ಸೌರಾದಿ ನಾಲ್ಕು ವರ್ಷಗಳು ಮತ್ತು ಬಾರ್ಹಸ್ಪತ್ಯ ಎಂಬ ವರ್ಷವು ಸೇರಿ ಐದು ವರ್ಷಗಳು. ಬಾರ್ಹಸ್ಪತ್ಯ ಎಂಬ ಮಾಸವಿಲ್ಲ. ಮುಂದೆ ಹೇಳುವ ಸಂವತ್ಸರ, ಪರಿವತ್ಸರಾದಿಗಳು ಯಾವ ಯಾವ ವರ್ಷಕ್ಕೆ ಹೆಸರೆಂಬುದು ಸ್ಪಷ್ಟವಿಲ್ಲ.

**ಮೇಷಾದೌ ಚ ತುಲಾದೌ ಚ ಮೈತ್ರೇಯ ವಿಷುವತ್ಸ್ಥಿತಃ।**
**ತದಾ ತುಲ್ಯಮಹೋರಾತ್ರಂ ಕರೋತಿ ತಿಮಿರಾಪಹಃ॥ 76**

**ದಶಪಂಚಮುಹೂರ್ತಂ ವೈ ತದೇತದುಭಯಂ ಸ್ಮೃತಮ್।**
**ಪ್ರಥಮೇ ಕೃತ್ತಿಕಾಭಾಗೇ ಯದಾ ಭಾಸ್ವಾಂಸ್ತದಾ ಶಶೀ॥ 77**

**ವಿಶಾಖಾನಾಂ ಚತುರ್ಥೇಂಶೇ ಮುನೇ ತಿಷ್ಠತ್ಯಸಂಶಯಮ್।**
**ವಿಶಾಖಾನಾಂ ಯದಾ ಸೂರ್ಯಶ್ಚರತ್ಯಂಶಂ ತೃತೀಯಕಮ್॥ 78**

**ತದಾ ಚಂದ್ರಂ ವಿಜಾನೀಯಾತ್ ಕೃತ್ತಿಕಾಶಿರಸಿ ಸ್ಥಿತಮ್।**
**ತದೈವ ವಿಷುವಾಖ್ಯೋಽಯಂ ಕಾಲಃ ಪುಣ್ಯೋಽಭಿಧೀಯತೇ॥ 79**

**ತದಾ ದಾನಾನಿ ದೇಯಾನಿ ದೇವೇಭ್ಯಃ ಪ್ರಯತಾತ್ಮಭಿಃ।**
**ಬ್ರಾಹ್ಮಣೇಭ್ಯಃ ಪಿತೃಭ್ಯಶ್ಚ ಸುಖಮೇತತ್ತು ದಾನಜಮ್॥ 80**

**ದತ್ತದಾನಸ್ತು ವಿಷುವೇ ಕೃತಕೃತ್ಯೋಽಭಿ ಜಾಯತೇ।**
**ಅಹೋರಾತ್ರಾರ್ಧಮಾಸಾಸ್ತು ಕಲಾಃ ಕಾಷ್ಠಾಃ ಕ್ಷಣಾಸ್ತಥಾ॥ 81**

---

ಸೂರ್ಯನು ವೈಷುವತದಲ್ಲಿದ್ದಾಗ ಆತನು ಅಹೋರಾತ್ರಗಳನ್ನು ಸಮಪ್ರಮಾಣವಾಗಿ ಮಾಡುತ್ತಾನೆ (76). ಆಗ ಹಗಲು ರಾತ್ರಿಗಳೆರಡೂ ಹದಿನೈದು ಮುಹೂರ್ತಗಳಾಗಿರುತ್ತವೆ. ಮೈತ್ರೇಯ, ಯಾವಾಗ ಸೂರ್ಯನು ಕೃತ್ತಿಕೆಯ ಪ್ರಥಮ ಭಾಗದಲ್ಲಿ (ಮೇಷರಾಶಿಯ ಅಂತ್ಯದಲ್ಲಿ) ಇರುತ್ತಾನೋ ಆಗ ಚಂದ್ರನು ನಿಶ್ಚಯವಾಗಿ ವಿಶಾಖೆಯ ನಾಲ್ಕನೆಯ ಅಂಶದಲ್ಲಿ (ವೃಶ್ಚಿಕದ ಆದಿಯಲ್ಲಿ) ಇರುತ್ತಾನೆ. ಅಥವಾ ಯಾವಾಗ ಸೂರ್ಯನು ವಿಶಾಖೆಯ ಮೂರನೆಯ ಅಂಶದಲ್ಲಿ (ತುಲಾರಾಶಿಯ ಅಂತ್ಯದಲ್ಲಿ) ಇರುತ್ತಾನೋ ಆಗ ಚಂದ್ರನು ಕೃತ್ತಿಕೆಯ ಆದಿಯಲ್ಲಿ (ಮೇಷ ರಾಶಿಯ ಅಂತ್ಯದಲ್ಲಿ) ಇರುತ್ತಾನೆಂದು ತಿಳಿಯಬೇಕು. ಈ ಎರಡು ಕಾಲವೂ ವಿಷುವ ಪುಣ್ಯಕಾಲ ಎಂದು ಹೇಳಲ್ಪಡುತ್ತದೆ (77-79). ಆಗ ಜನರು ಪರಿಶುದ್ಧರಾಗಿ ದೇವತೆಗಳಿಗೂ ಬ್ರಾಹ್ಮಣರಿಗೂ ಪಿತೃಗಳಿಗೂ ದಾನಾದಿ ಗಳನ್ನು ಕೊಡಬೇಕು. ಈ ದಾನವು ಅತ್ಯಂತ ಸುಖಕರವಾದದ್ದು (80). ವಿಷುವತ್ ಪುಣ್ಯಕಾಲದಲ್ಲಿ ದಾನ ಮಾಡಿದವನು ಕೃತಕೃತ್ಯನಾಗುತ್ತಾನೆ.

**ಪೌರ್ಣಮಾಸೀ ತಥಾ ಜ್ಞೇಯಾ ಅಮಾವಾಸ್ಯಾ ತಥೈವ ಚ।**
**ಸಿನೀವಾಲೀ ಕುಹೂಶ್ಚೈವ ರಾಕಾ ಚಾನುಮತಿಸ್ತಥಾ॥ 82**

**ತಪಸ್ತಪಸ್ಯೌ ಮಧುಮಾಧವೌ ಚ**
**ಶುಕ್ರಃ ಶುಚಿಶ್ಚಾಯನಮುತ್ತರಂ ಸ್ಯಾತ್।**
**ನಭೋನಭಸ್ಯೌ ಚ ಇಷಸ್ತಥೋರ್ಜ-**
**ಸ್ಸಹಃ ಸಹಸ್ಯಾವಿತಿ ದಕ್ಷಿಣಂ ತತ್॥ 83**

**ಲೋಕಾಲೋಕಶ್ಚ ಯಶ್ಶೈಲಃ ಪ್ರಾಗುಕ್ತೋ ಭವತೋ ಮಯಾ।**
**ಲೋಕಪಾಲಾಸ್ತು ಚತ್ವಾರಸ್ತತ್ರ ತಿಷ್ಠಂತಿ ಸುವ್ರತಾಃ॥ 84**

**ಸುಧಾಮಾ ಶಂಖಪಾಚ್ಚೈವ ಕರ್ದಮಸ್ಯಾತ್ಮಜೋ ದ್ವಿಜ।**
**ಹಿರಣ್ಯರೋಮಾ ಚೈವಾನ್ಯಶ್ಚತುರ್ಥಃ ಕೇತುಮಾನಪಿ॥ 85**

---

(ಯಾಗಾದಿಗಳ ಕಾಲನಿರ್ಣಯಕ್ಕಾಗಿ ಮುಂದಿನವುಗಳನ್ನು ತಿಳಿದಿರಬೇಕು.) ಅಹೋರಾತ್ರಾತ್ಮಕವಾದ ದಿವಸ, ಪಕ್ಷ, ಕಲಾ, ಕಾಷ್ಠಾ, ಕ್ಷಣ, ರಾಕಾ (ಪೂರ್ಣಚಂದ್ರನಿರುವ ಹುಣ್ಣಿಮೆ), ಅನುಮತಿ (ಒಂದು ಕಲೆ ಕಡಿಮೆ ಯಾದ ಚಂದ್ರನಿರುವ ಹುಣ್ಣಿಮೆ), ಅಮಾವಾಸ್ಯೆ, ಸಿನೀವಾಲೀ (ಚಂದ್ರಕಲೆ ಕಾಣಿಸುವ ಅಮಾವಾಸ್ಯೆ), ಕುಹೂ (ಚಂದ್ರಕಲೆ ಕಾಣಿಸದ ಅಮಾವಾಸ್ಯೆ) —ಇವು (81-82). ಮಾಘ, ಫಾಲ್ಗುಣ, ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ—ಈ ಆರು ತಿಂಗಳು ಉತ್ತರಾಯಣ. ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ, ಮಾರ್ಗಶೀರ್ಷ, ಪೌಷ—ಇರು ಆರು ತಿಂಗಳು ದಕ್ಷಿಣಾಯನ* (83). ಹಿಂದೆ ನಾನು ಲೋಕಾಲೋಕವೆಂಬ ಪರ್ವತವನ್ನು ಹೇಳಿದೆನಷ್ಟೆ; ಅಲ್ಲಿ ವ್ರತಶೀಲರಾದ ನಾಲ್ವರು ಲೋಕಪಾಲರಿದ್ದಾರೆ. ಸುಧಾಮ, ಕರ್ದಮಪುತ್ರನಾದ ಶಂಖಪಾಲ, ಹಿರಣ್ಯರೋಮ, ನಾಲ್ಕನೆಯವನಾದ ಕೇತುಮಾನ್—ಎಂಬವರೇ ಆ ಲೋಕಪಾಲರು (84-85). ದ್ವಂದ್ವಾತೀತರೂ, ನಿರಭಿಮಾನರೂ, ಆಲಸ್ಯರಹಿತರೂ, ಪರಿಗ್ರಹ

---

* ಪ್ರಕೃತದಲ್ಲಿ ಈ ಗಣನೆ ಭಿನ್ನವಾಗಿದೆ. ಗಣಿತದ ಪ್ರಕಾರ ಈ ಕಾಲಮಾನವು ಕ್ರಿ.ಪೂ. 1400 ರಲ್ಲಿ ಇತ್ತು ಎಂದು ಶ್ರೀ ಕೋಲ್‌ಬ್ರೂಕ್ ಅವರು ಹೇಳುತ್ತಾರೆ.

ನಿರ್ದ್ವಂದ್ವಾ ನಿರಭಿಮಾನಾ ನಿಸ್ತಂದ್ರಾ ನಿಷ್ಪರಿಗ್ರಹಾಃ।
ಲೋಕಪಾಲಾಃ ಸ್ಥಿತಾ ಹ್ಯೇತೇ ಲೋಕಾಲೋಕೇ ಚತುರ್ದಿಶಮ್॥

ಉತ್ತರಂ ಯಗದಸ್ತ್ಯಸ್ಯ ಅಜವೀಥ್ಯಾಶ್ಚ ದಕ್ಷಿಣಮ್।
ಪಿತೃಯಾನಃ ಸ ವೈ ಪಂಥಾ ವೈಶ್ವಾನರ ಪಥಾದ್ಬಹಿಃ॥ 87

ತತ್ರಾಸತೇ ಮಹಾತ್ಮಾನ ಋಷಯೋ ಯೇಽಗ್ನಿಹೋತ್ರಿಣಃ।
ಭೂತಾರಂಭಕೃತಂ ಬ್ರಹ್ಮ ಶಂಸಂತೋ ಋತ್ವಿಗುದ್ಯತಾಃ।
ಪ್ರಾರಭಂತೇ ತು ಯೇ ಲೋಕಾಸ್ತೇಷಾಂ ಪಂಥಾಃ ಸ ದಕ್ಷಿಣಃ॥

ಚಲಿತಂ ತೇ ಪುನರ್ಬ್ರಹ್ಮ ಸ್ಥಾಪಯಂತಿ ಯುಗೇ ಯುಗೇ।
ಸಂತತ್ಯಾ ತಪಸಾ ಚೈವ ಮರ್ಯಾದಾಭಿಃ ಶ್ರುತೇನ ಚ॥ 89

ಜಾಯಮಾನಾಸ್ತು ಪೂರ್ವೇ ಚ ಪಶ್ಚಿಮಾನಾಂ ಗೃಹೇಷು ವೈ।
ಪಶ್ಚಿಮಾಶ್ಚೈವ ಪೂರ್ವೇಷಾಂ ಜಾಯಂತೇ ನಿಧನೇಷ್ವಿಹ॥ 90

---

ಮಾಡದವರೂ ಆದ ಈ ಲೋಕಪಾಲರು ಲೋಕಾಲೋಕಶೈಲದ ನಾಲ್ಕು ದಿಕ್ಕುಗಳಲ್ಲಿದ್ದಾರೆ (86). ಅಗಸ್ತ್ಯನಕ್ಷತ್ರದ ಉತ್ತರಕ್ಕೆ ಅಜವೀಥಿಗೆ ದಕ್ಷಿಣಕ್ಕೆ ವೈಶ್ವಾನರಪಥದ ಹೊರಗೆ ಪಿತೃಯಾನವೆಂಬ ಮಾರ್ಗವಿದೆ (87). ಅಲ್ಲಿ ಮಹಾತ್ಮರೂ ಅಗ್ನಿಹೋತ್ರಿಗಳೂ ಆದ ಋಷಿಗಳಿದ್ದಾರೆ. ಪ್ರಾಣಿಗಳ ಸೃಷ್ಟಿಗೆ ಆರಂಭಕವಾದ ವೇದವನ್ನು ಪಠಿಸುತ್ತ ಋತ್ವಿಕ್‌ಕರ್ಮದಲ್ಲಿ ನಿರತರಾಗಿದ್ದಾರೆ. ಅದೇ ರೀತಿಯಲ್ಲಿ ಯಾರು ವೈದಿಕ ಕರ್ಮಗಳನ್ನು ಆಚರಿಸುತ್ತಾರೋ ಅವರಿಗೂ ಪಿತೃಯಾನವೆಂಬ ಆ ದಕ್ಷಿಣಮಾರ್ಗ ಲಭಿಸುತ್ತದೆ (88). ಯುಗಯುಗಗಳಲ್ಲಿ ವಿಚ್ಛಿನ್ನವಾಗುವ ವೇದಧರ್ಮವನ್ನು ಅವರು ತಮ್ಮ ಸಂತತಿ, ತಪಸ್ಸು, ವರ್ಣಾಶ್ರಮ ಧರ್ಮಪಾಲನೆ ಮತ್ತು ಶಾಸ್ತ್ರರಚನೆಗಳಿಂದ ಸ್ಥಾಪಿಸುತ್ತಾರೆ (89). ಮೊದಲಿನ ಧರ್ಮಪ್ರವರ್ತಕರು ತಮ್ಮ ಉತ್ತರಕಾಲದವರ ಮನೆಗಳಲ್ಲಿ ಜನಿಸುತ್ತಾರೆ. ಉತ್ತರಕಾಲದವರು ಮರಣವಾದ ಮೇಲೆ ಮತ್ತೆ ತಮ್ಮ ಹಿಂದಿನವರ ವಂಶದಲ್ಲಿಯೇ ಜನಿಸುತ್ತಾರೆ (90). ನಿಯಮ ಪೂರ್ವಕವಾಗಿ ವ್ರತವನ್ನು ಆಚರಿಸತಕ್ಕ ಅವರು ಹೀಗೆ

ಏವಮಾವರ್ತಮಾನಾಸ್ತೇ ತಿಷ್ಠಂತಿ ನಿಯತವ್ರತಾಃ।
ಸವಿತುರ್ದಕ್ಷಿಣಂ ಮಾರ್ಗಂ ಶ್ರಿತಾ ಹ್ಯಾಚಂದ್ರತಾರಕಮ್॥ 91

ನಾಗವೀಥ್ಯುತ್ತರಂ ಯಚ್ಚ ಸಪ್ತರ್ಷಿಭ್ಯಶ್ಚ ದಕ್ಷಿಣಮ್।
ಉತ್ತರಃ ಸವಿತುಃ ಪಂಥಾ ದೇವಯಾನಶ್ಚ ಸ ಸ್ಮೃತಃ॥ 92

ತತ್ರ ತೇ ವಶಿನಃ ಸಿದ್ಧಾ ವಿಮಲಾ ಬ್ರಹ್ಮಚಾರಿಣಃ।
ಸಂತತಿಂ ತೇ ಜುಗುಪ್ಸಂತಿ ತಸ್ಮಾನ್ಮೃತ್ಯುರ್ಜಿತಶ್ಚ ತೈಃ॥ 93

ಅಷ್ಟಾಶೀತಿಸಹಸ್ರಾಣಿ ಮುನೀನಾಮೂರ್ಧ್ವರೇತಸಾಮ್।
ಉದಕ್ಪಂಥಾನಮರ್ಯಮ್ಣಃ ಸ್ಥಿತಾನ್ಯಾಭೂತಸಂಪ್ಲವಮ್॥ 94

ತೇಽಸಂಪ್ರಯೋಗಾಲ್ಲೋಭಸ್ಯ ಮೈಥುನಸ್ಯ ಚ ವರ್ಜನಾತ್।
ಇಚ್ಛಾದ್ವೇಷಾಪ್ರವೃತ್ತ್ಯಾ ಚ ಭೂತಾರಂಭವಿವರ್ಜನಾತ್॥ 95

ಪುನಶ್ಚ ಕಾಮಾಸಂಯೋಗಾತ್ ಶಬ್ದಾದೇರ್ದೋಷದರ್ಶನಾತ್।
ಇತ್ಯೇಭಿಃಕಾರಣೈಃಶುದ್ಧಾಸ್ತೇಽಮೃತತ್ವಂ ಹಿ ಭೇಜಿರೇ॥ 96

---

ಆವೃತ್ತಿಗೊಳ್ಳುತ್ತ ಚಂದ್ರ ನಕ್ಷತ್ರಗಳಿರುವವರೆಗೆ ಸೂರ್ಯನ ದಕ್ಷಿಣ ಮಾರ್ಗದಲ್ಲಿಯೇ ಇರುತ್ತಾರೆ (91). ನಾಗವೀಥಿಗೆ ಉತ್ತರದಲ್ಲಿ ಸಪ್ತರ್ಷಿಗಳ ದಕ್ಷಿಣದಲ್ಲಿ ಸೂರ್ಯನ ಉತ್ತರ ಮಾರ್ಗವಿದೆ. ಅದಕ್ಕೆ ದೇವಯಾನವೆಂದು ಹೆಸರು (92). ಇಲ್ಲಿ ವಶಿಗಳೂ ಸಿದ್ಧರೂ ನಿರ್ಮಲರೂ ಬ್ರಹ್ಮಚರ್ಯ ವ್ರತಧಾರಿಗಳೂ ಆದವರಿದ್ದಾರೆ. ಅವರು ಸಂತತಿಯನ್ನು ಬಯಸತಕ್ಕವರಲ್ಲ. ಆದ್ದರಿಂದ ಮೃತ್ಯುವನ್ನು ಅವರು ಜಯಿಸಿದ್ದಾರೆ (93). ಸೂರ್ಯನ ಉತ್ತರ ಮಾರ್ಗದಲ್ಲಿ ಊರ್ಧ್ವರೇತಸ್ಕರಾದ ಎಂಬತ್ತೆಂಟು ಸಾವಿರ ಮುನಿಗಳಿದ್ದಾರೆ. ಪ್ರಳಯಪರ್ಯಂತ ಅವರು ಅಲ್ಲಿರುತ್ತಾರೆ (94). ಲೋಭತ್ಯಾಗ, ಮೈಥುನತ್ಯಾಗ, ಇಚ್ಛಾದ್ವೇಷಗಳ ದೂರೀಕರಣ, ಸಂತತಿ ನಿರ್ಮಾಣದ ವರ್ಜನೆ, ಕಾಮನೆಗಳ ವರ್ಜನೆ, ಶಬ್ದಾದಿ ವಿಷಯಗಳಲ್ಲಿ ದೋಷದರ್ಶನದಿಂದ ಅವುಗಳ ತ್ಯಾಗ—ಈ ಕಾರಣಗಳಿಂದ ಅವರು ಶುದ್ಧರಾಗಿ ಅಮೃತತ್ವವನ್ನು ಪಡೆದಿದ್ದಾರೆ (95-96). ಭೂತಗಳ ಪ್ರಳಯ ಪರ್ಯಂತವಾಗಿ ಸ್ಥಿರವಾಗಿರುವುದಕ್ಕೆ ಅಮೃತತ್ವವೆಂದು ಹೆಸರು.

**ಆಭೂತಸಂಪ್ಲವಂ ಸ್ಥಾನಮಮೃತತ್ವಂ ವಿಭಾವ್ಯತೇ।**
**ತ್ರೈಲೋಕ್ಯಸ್ಥಿತಿಕಾಲೋಽಯಮಪುನರ್ಮಾರ ಉಚ್ಯತೇ॥ 97**

**ಬ್ರಹ್ಮಹತ್ಯಾಶ್ವಮೇಧಾಭ್ಯಾಂ ಪಾಪಪುಣ್ಯಕೃತೋ ವಿಧಿಃ।**
**ಆಭೂತಸಂಪ್ಲವಾಂತಂತು ಫಲಮುಕ್ತಂ ತಯೋರ್ದ್ವಿಜ॥ 98**

**ಯಾವನ್ಮಾತ್ರೇ ಪ್ರದೇಶೇ ತು ಮೈತ್ರೇಯಾವಸ್ಥಿತೋ ಧ್ರುವಃ।**
**ಕ್ಷಯಮಾಯಾತಿ ತಾವತ್ತು ಭೂಮೇರಾಭೂತಸಂಪ್ಲವಾತ್॥ 99**

**ಊರ್ಧ್ವೋತ್ತರಮೃಷಿಭ್ಯಸ್ತು ಧ್ರುವೋ ಯತ್ರ ವ್ಯವಸ್ಥಿತಃ।**
**ಏತದ್ವಿಷ್ಣುಪದಂ ದಿವ್ಯಂ ತೃತೀಯಂ ವ್ಯೋಮ್ನಿ ಭಾಸುರಮ್॥ 100**

**ನಿರ್ಧೂತದೋಷಪಂಕಾನಾಂ ಯತೀನಾಂ ಸಂಯತಾತ್ಮನಾಮ್।**
**ಸ್ಥಾನಂ ತತ್ಪರಮಂ ವಿಪ್ರ ಪುಣ್ಯಪಾಪಪರಿಕ್ಷಯೇ॥ 101**

**ಅಪುಣ್ಯಪುಣ್ಯೋ ಪರಮೇ ಕ್ಷೀಣಾಶೇಷಾಪ್ತಿಹೇತವಃ।**
**ಯತ್ರ ಗತ್ವಾ ನ ಶೋಚಂತಿ ತದ್ವಿಷ್ಣೋಃ ಪರಮಂ ಪದಮ್॥ 102**

---

ಮೂರು ಲೋಕಗಳ ಸ್ಥಿತಿಪರ್ಯಂತವಾದ ಈ ಕಾಲವು ಅಪುನರ್ಮಾರ (ಪುನರ್ಮರಣರಹಿತ) ಎಂದು ಉಕ್ತವಾಗಿದೆ (97). ಮೈತ್ರೇಯ, ಬ್ರಹ್ಮ ಹತ್ಯೆಯಿಂದಾದ ಪಾಪ, ಅಶ್ವಮೇಧದಿಂದಾದ ಪುಣ್ಯ—ಇವುಗಳ ಫಲವು ಪ್ರಳಯಪರ್ಯಂತವಾಗಿರುವುದೆಂದು ಉಕ್ತವಾಗಿದೆ. ಭೂಮಿಯಿಂದ ಧ್ರುವನವರೆಗೆ ಯಾವ ಪ್ರದೇಶವಿದೆಯೋ ಅದು ಪ್ರಳಯ ಕಾಲದಲ್ಲಿ ನಾಶವಾಗುತ್ತದೆ (98-99). ಸಪ್ತರ್ಷಿಗಳಿಗಿಂತ ಮೇಲೆ ಉತ್ತರದಲ್ಲಿ ಧ್ರುವ ಪರ್ಯಂತವಾದ ಯಾವ ಪ್ರದೇಶವಿದೆಯೋ ಅದು ದಿವ್ಯವೂ ಭಾಸುರವೂ ಆದ ವಿಷ್ಣುವಿನ ತೃತೀಯ ಧಾಮವೆನಿಸಿದೆ (100). ಪುಣ್ಯ ಪಾಪಗಳೆರಡೂ ಕ್ಷಯವಾದ ಮೇಲೆ ದೋಷಲೇಶವೂ ಇಲ್ಲದ ಜಿತೇಂದ್ರಿಯರಾದ ಯಾವ ಯತಿಗಳಿದ್ದಾರೋ ಅವರಿಗೆ ಇದು ಪರಮಸ್ಥಾನವಾಗಿದೆ (101). ಪಾಪ ಪುಣ್ಯಗಳೆರಡೂ ಕ್ಷೀಣವಾದ್ದರಿಂದ ಜನ್ಮಪ್ರಾಪ್ತಿಗೆ ಕಾರಣವು ಯಾರಿಗೆ ನಷ್ಟವಾಗಿ ಹೋಗುತ್ತದೆಯೋ ಅವರು ಎಲ್ಲಿಗೆ ಹೋಗುತ್ತಾರೋ, ಎಲ್ಲಿಗೆ ಹೋಗಿ ಶೋಕರಹಿತರಾಗುತ್ತಾರೋ ಅದೇ ವಿಷ್ಣುವಿನ ಪರಮ ಪದ

**ಧರ್ಮಧ್ರುವಾದ್ಯಾಸ್ತಿಷ್ಠಂತಿ ಯತ್ರ ತೇ ಲೋಕಸಾಕ್ಷಿಣಃ।**
**ತತ್ಸಾರ್ಷ್ಟ್ಯೋರ್ತ್ವನ್ನಯೋಗೇದ್ಧಾಸ್ತದ್ವಿಷ್ಣೋಃ ಪರಮಂ ಪದಮ್॥**

**ಯತ್ರೋತಮೇತತ್ಪ್ರೋತಂ ಚ ಯದ್ಭೂತಂ ಸಚರಾಚರಮ್।**
**ಭಾವ್ಯಂ ಚ ವಿಶ್ವಂ ಮೈತ್ರೇಯ ತದ್ವಿಷ್ಣೋಃ ಪರಮಂ ಪದಮ್॥**

**ದಿವೀವ ಚಕ್ಷುರಾತತಂ ಯೋಗಿನಾಂ ತನ್ಮಯಾತ್ಮನಾಮ್।**
**ವಿವೇಕಜ್ಞಾನದೃಷ್ಟಂ ಚ ತದ್ವಿಷ್ಣೋಃ ಪರಮಂ ಪದಮ್॥** 105

**ಯಸ್ಮಿನ್ಪ್ರತಿಷ್ಠಿತೋ ಭಾಸ್ವಾನ್ ಮೇಢೀಭೂತಃ ಸ್ವಯಂ ಧ್ರುವಃ।**
**ಧ್ರುವೇ ಚ ಸರ್ವಜ್ಯೋತೀಂಷಿ ಜ್ಯೋತಿಃಷ್ವಂಭೋ**
**ಮುಚೋ ದ್ವಿಜ॥** 106

**ಮೇಘೇಷು ಸಂಗತಾ ವೃಷ್ಟಿರ್ವೃಷ್ಟೇಃ ಸೃಷ್ಟೇಶ್ಚ ಪೋಷಣಮ್।**
**ಆಪ್ಯಾಯನಂ ಚ ಸರ್ವೇಷಾಂ ದೇವಾದೀನಾಂ**
**ಮಹಾಮುನೇ॥** 107

---

(102). ಭಗವಂತನ ಸಮಾನ್ಯೈಶ್ವರ್ಯತೆಯಿಂದ ಹುಟ್ಟಿದ ಅವನಲ್ಲಿ ಚಿತ್ತಲಯದಿಂದ ಪ್ರಜ್ವಲಿಸುತ್ತ ಲೋಕಸಾಕ್ಷಿಗಳಾದ ಧರ್ಮ, ಧ್ರುವಾದಿಗಳು ಎಲ್ಲಿ ನೆಲೆಸಿದ್ದಾರೋ ಅದು ವಿಷ್ಣುವಿನ ಪರಮಪದ (103). ಭೂತ ಭವಿಷ್ಯತ್ ಮತ್ತು ವರ್ತಮಾನವಾದ ಚರಾಚರಾತ್ಮಕ ವಿಶ್ವವು ಎಲ್ಲಿ ಓತಪ್ರೋತವಾಗಿ ನೆಲೆಸಿದೆಯೋ ಅದು ವಿಷ್ಣುವಿನ ಪರಮಪದ. ತಲ್ಲೀನ ಚಿತ್ತರಾದ ಯೋಗಿಗಳಿಗೆ ಆಕಾಶದಲ್ಲಿರುವ ಸೂರ್ಯನಂತೆ ಪ್ರಕಾಶಮಾನ ವಾಗಿಯೂ ವಿವೇಕ ಜ್ಞಾನಕ್ಕೆ ಗೋಚರವಾಗಿಯೂ ಇರತಕ್ಕದ್ದೇ ವಿಷ್ಣುವಿನ ಪರಮಪದ (104-105). ಎಲ್ಲ (ಜ್ಯೋತಿಗಳಿಗೂ) ಆಧಾರಸ್ತಂಭವಾದ ತೇಜಸ್ವಿ ಧ್ರುವನು ಈ ವಿಷ್ಣುಪದದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಈ ಧ್ರುವನನ್ನು ಆಶ್ರಯಿಸಿಕೊಂಡು ಗ್ರಹ ನಕ್ಷತ್ರಗಳೂ ಅವುಗಳನ್ನು ಆಶ್ರಯಿಸಿ ಮೇಘಗಳೂ ಇವೆ (106). ಮೇಘಗಳಲ್ಲಿ ವೃಷ್ಟಿ ಇದೆ. ವೃಷ್ಟಿಯಿಂದ ಸೃಷ್ಟಿಯ ಪೋಷಣೆಯಾಗುತ್ತದೆ. ಸಮಸ್ತ ದೇವಾದಿಗಳಿಗೆ ಆಪ್ಯಾಯನ ವಾಗುತ್ತದೆ. (ಸೃಷ್ಟಿಯ ಪೋಷಣೆಯಾದ್ದರಿಂದ) ಆಜ್ಯಾಹುತಿಗಳ ದ್ವಾರಾ

**ತತಶ್ಚಾಜ್ಯಾಹುತಿದ್ವಾರಾ ಪೋಷಿತಾಸ್ತೇ ಹವಿರ್ಭುಜಃ।**
**ವೃಷ್ಟೇಃ ಕಾರಣತಾಂ ಯಾಂತಿ ಭೂತಾನಾಂ ಸ್ಥಿತಯೇ ಪುನಃ॥**

**ಏವಮೇತತ್ಪದಂ ವಿಷ್ಣೋಸ್ತೃತೀಯಮಮಲಾತ್ಮಕಮ್।**
**ಆಧಾರಭೂತಂ ಲೋಕಾನಾಂ ತ್ರಯಾಣಾಂ ವೃಷ್ಟಿಕಾರಣಮ್॥** 109

**ತತಃ ಪ್ರಭವತಿ ಬ್ರಹ್ಮನ್ ಸರ್ವಪಾಪಹರಾ ಸರಿತ್।**
**ಗಂಗಾ ದೇವಾಂಗನಾಂಗಾನಾಮನುಲೇಪನಪಿಂಜರಾ॥** 110

**ವಾಮಪಾದಾಂಬುಜಾಂಗುಷ್ಠನಖಸ್ರೋತೋವಿನಿರ್ಗತಾಮ್।**
**ವಿಷ್ಣೋರ್ಬಿಭರ್ತಿ ಯಾಂ ಭಕ್ತ್ಯಾ ಶಿರಸಾಹರ್ನಿಶಂ ಧ್ರುವಃ॥** 111

**ತತಃ ಸಪ್ತರ್ಷಯೋ ಯಸ್ಯಾಃ ಪ್ರಾಣಾಯಾಮಪರಾಯಣಾಃ।**
**ತಿಷ್ಠಂತಿ ವೀಚಿಮಾಲಾಭಿರುಹ್ಯಮಾನಜಟಾ ಜಲೇ॥** 112

---

ಸಂಪ್ರೀತರಾದ ದೇವತೆಗಳು ಪ್ರಾಣಿಗಳ ರಕ್ಷಣೆಗಾಗಿ ಮತ್ತೆ ವೃಷ್ಟಿಗೆ ಕಾರಣರಾಗುತ್ತಾರೆ (107-108). ನಿರ್ಮಲವಾದ ಈ ತೃತೀಯ* ವಿಷ್ಣು ಪದವು ಈ ಪ್ರಕಾರದಲ್ಲಿ ವೃಷ್ಟಿಗೆ ಕಾರಣವಾಗಿ ಮೂರು ಲೋಕಗಳಿಗೂ ಆಧಾರಭೂತವಾಗಿದೆ. ಮೈತ್ರೇಯ, ಈ ವಿಷ್ಣುಪದದಿಂದ ಸರ್ವಪಾಪ ಹಾರಿಯೂ ದೇವಾಂಗನೆಯರು ಸ್ನಾನಮಾಡುವುದರಿಂದ ಅವರ ಅನುಲೇಪನ ಸಂಬಂಧದಿಂದ ಸ್ವರ್ಣವರ್ಣೆಯೂ ಆದ ಗಂಗಾನದಿ ಉತ್ಪನ್ನಳಾಗಿದ್ದಾಳೆ (109-110). ವಿಷ್ಣುವಿನ ವಾಮಪಾದಕಮಲದ ಅಂಗುಷ್ಠನಖವೆಂಬ ಸ್ರೋತಸ್ಸಿನಿಂದ ಉದ್ಭವಿಸಿದ ಗಂಗೆಯನ್ನು ಧ್ರುವನು ಅಹರ್ನಿಶವೂ ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಿದ್ದಾನೆ (111). ಅನಂತರ ಸಪ್ತರ್ಷಿಗಳು ಪ್ರಾಣಾಯಾಮಮಾಡುತ್ತ ನದೀತರಂಗಗಳಿಂದ ಸೆಳೆಯಲ್ಪಡುವ ಜಟೆಯುಳ್ಳವರಾಗಿ ಗಂಗೆಯ ಜಲದಲ್ಲಿ ನಿಂತಿರುತ್ತಾರೆ (112).

---

* ಪಿತೃಯಾನ, ದೇವಯಾನ, ಧ್ರುವಸ್ಥಾನ—ಇವು ಕ್ರಮವಾಗಿ ವಿಷ್ಣುವಿನ ಮೂರು ಸ್ಥಾನಗಳು ಎಂದು ತೋರುತ್ತದೆ.

**ವಾರ್ಯೋಘೈಃ ಸಂತತೈರ್ಯಸ್ಯಾಃ ಪ್ಲಾವಿತಂ ಶಶಿಮಂಡಲಮ್।**
**ಭೂಯೋಽಧಿಕತರಾಂ ಕಾಂತಿಂ ವಹತ್ಯೇತದುಹಕ್ಷಯೇ॥ 113**

**ಮೇರುಪೃಷ್ಠೇ ಪತತ್ಯುಚ್ಚೈರ್ನಿಷ್ಕ್ರಾಂತಾ ಶಶಿಮಂಡಲಾತ್।**
**ಜಗತಃ ಪಾವನಾರ್ಥಾಯ ಪ್ರಯಾತಿ ಚ ಚತುರ್ದಿಶಮ್॥ 114**

**ಸೀತಾ ಚಾಲಕನಂದಾಚ ಚಕ್ಷುರ್ಭದ್ರಾ ಚ ಸಂಸ್ಥಿತಾ।**
**ಏಕೈವ ಯಾ ಚತುರ್ಭೇದಾ ದಿಗ್ಭೇದಗತಿಲಕ್ಷಣಾ॥ 115**

**ಭೇದಂ ಚಾಲಕನಂದಾಖ್ಯಂ ಯಸ್ಯಾಃ ಶರ್ವೋಽಪಿ ದಕ್ಷಿಣಮ್।**
**ದಧಾರ ಶಿರಸಾ ಪ್ರೀತ್ಯಾ ವರ್ಷಾಣಾಮಧಿಕಂ ಶತಮ್॥ 116**

**ಶಂಭೋರ್ಜಟಾಕಲಾಪಾಚ್ಚ ವಿನಿಷ್ಕ್ರಾಂತಾಸ್ಥಿಶರ್ಕರಾಃ।**
**ಪ್ಲಾವಯಿತ್ವಾ ದಿವಂ ನಿನ್ಯೇ ಯಾ ಪಾಪಾನ್ ಸಗರಾತ್ಮಜಾನ್॥ 117**

**ಸ್ನಾತಸ್ಯ ಸಲಿಲೇ ಯಸ್ಯಾಃ ಸದ್ಯಃ ಪಾಪಂ ಪ್ರಣಶ್ಯತಿ।**
**ಅಪೂರ್ವಪುಣ್ಯಪ್ರಾಪ್ತಿಶ್ಚ ಸದ್ಯೋ ಮೈತ್ರೇಯ ಜಾಯತೇ॥ 118**

---

ಚಂದ್ರಮಂಡಲವು ಕ್ಷಯವಾದರೂ ಗಂಗಾಜಲದಿಂದ ಸದಾ ಆರ್ದ್ರವಾಗಿ ಮತ್ತೆ ಅಧಿಕತರವಾದ ಕಾಂತಿಯನ್ನು ಪಡೆಯುತ್ತದೆ. ಚಂದ್ರಮಂಡಲದಿಂದ ಹೊರಟು ಮೇರುಪರ್ವತದ ಮೇಲೆ ಎತ್ತರದಿಂದ ಜಗತ್ತನ್ನು ಪಾವನಗೊಳಿಸುವುದಕ್ಕಾಗಿ ಧುಮುಕಿ (ನಾಲ್ಕು ಕವಲುಗಳಾಗಿ) ನಾಲ್ಕು ದಿಕ್ಕಿಗೂ ಹರಿಯುತ್ತದೆ (113-114). ನಾಲ್ಕು ದಿಕ್ಕುಗಳಿಗೆ ಹರಿಯುವ ಒಂದೇ ಗಂಗಾನದಿಯು ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂಬ ಹೆಸರುಗಳಿಂದ ನಾಲ್ಕು ಭೇದಗಳನ್ನು ಪಡೆದಿದೆ (115). ಅಲಕನಂದಾ ಎಂಬ ಈ ದಕ್ಷಿಣದ ಪ್ರವಾಹಭೇದವನ್ನು ಈಶ್ವರನು ನೂರು ವರ್ಷಗಳಿಗಿಂತ ಹೆಚ್ಚು ಕಾಲ ಪ್ರೀತಿಯಿಂದ ತನ್ನ ಶಿರಸ್ಸಿನಲ್ಲಿ ಧರಿಸಿದ್ದನು (116). ಈಶ್ವರನ ಜಟೆಯಿಂದ ಧುಮುಕಿದ ಗಂಗೆಯು ಪಾಪಿಗಳಾದ ಸಗರಪುತ್ರರ ಮೂಳೆಯ ಚೂರುಗಳನ್ನು ತೇಲಿಸಿ ಅವರನ್ನು ಸ್ವರ್ಗಕ್ಕೆ ಸೇರಿಸಿದಳು (117). ಮೈತ್ರೇಯ, ಗಂಗಾನದಿಯ ಜಲದಲ್ಲಿ ಸ್ನಾನಮಾಡಿದವನ ಪಾಪವು ಒಡನೆಯೇ ನಾಶವಾಗುವುದು. ಅಲ್ಲದೆ ಅಸಾಧಾರಣವಾದ

**ದತ್ತಾಃ ಪಿತೃಭ್ಯೋ ಯತ್ರಾಪಸ್ತನಯೈಃ ಶ್ರದ್ಧಯಾನ್ವಿತೈಃ।**
**ಸಮಾಶತಂ ಪ್ರಯಚ್ಛಂತಿ ತೃಪ್ತಿಂ ಮೈತ್ರೇಯ ದುರ್ಲಭಾಮ್॥ 119**

**ಯಸ್ಯಾಮಿಷ್ಟ್ವಾ ಮಹಾಯಜ್ಞೈರ್ಯಜ್ಞೇಶಂ ಪುರುಷೋತ್ತಮಮ್।**
**ದ್ವಿಜ ಭೂಪಾಃ ಪರಾಂ ಸಿದ್ಧಿಮವಾಪುರ್ದಿವಿ ಚೇಹ ಚ॥ 120**

**ಸ್ನಾನಾದ್ವಿಧೂತಪಾಪಾಶ್ಚ ಯಜ್ಜಲೈರ್ಯತಯಸ್ತಥಾ।**
**ಕೇಶವಾಸಕ್ತಮನಸಃ ಪ್ರಾಪ್ತಾ ನಿರ್ವಾಣಮುತ್ತಮಮ್॥ 121**

**ಶ್ರುತಾಭಿಲಷಿತಾ ದೃಷ್ಟಾ ಸ್ಪೃಷ್ಟಾ ಪೀತಾವಗಾಹಿತಾ।**
**ಯಾ ಪಾವಯತಿ ಭೂತಾನಿ ಕೀರ್ತಿತಾ ಚ ದಿನೇ ದಿನೇ॥ 122**

**ಗಂಗಾ ಗಂಗೇತಿ ಯೈರ್ನಾಮ ಯೋಜನಾನಾಂ ಶತೇಷ್ವಪಿ।**
**ಸ್ಥಿತೈರುಚ್ಚಾರಿತಂ ಹಂತಿ ಪಾಪಂ ಜನ್ಮತ್ರಯಾರ್ಜಿತಮ್॥ 123**

---

ಪುಣ್ಯವೂ ಒಡನೆಯೇ ಲಭಿಸುತ್ತದೆ (118). ಮೈತ್ರೇಯ, ಪುತ್ರರು ಪಿತೃಗಳಿಗೆ ಗಂಗಾಜಲವನ್ನು ಶ್ರದ್ಧೆಯಿಂದ ತರ್ಪಣವಾಗಿ ಕೊಟ್ಟರೆ, ನೂರು ವರ್ಷಗಳವರೆಗೆ ದುರ್ಲಭವಾದ ತೃಪ್ತಿಯನ್ನು ನೀಡುತ್ತದೆ (119). ಗಂಗಾತೀರದಲ್ಲಿ, ಮೈತ್ರೇಯ, ಅನೇಕ ಭೂಪಾಲರು ಮಹಾಯಜ್ಞಗಳಿಂದ ಯಜ್ಞಾಧಿಪನಾದ ಪುರುಷೋತ್ತಮನನ್ನು ಅರ್ಚಿಸಿ ಇಹಪರಗಳಲ್ಲಿ ಶ್ರೇಷ್ಠ ವಾದ ಸಿದ್ಧಿಯನ್ನು ಪಡೆದಿದ್ದಾರೆ (120). ಅದರ ಜಲದಲ್ಲಿ ಸ್ನಾನ ಮಾಡಿದ್ದ ರಿಂದ ನಿಷ್ಪಾಪರಾದ ಯತಿಗಳು ಕೇಶವನಲ್ಲಿ ದೃಢಚಿತ್ತವನ್ನಿಟ್ಟು ಉತ್ತಮ ವಾದ ಮೋಕ್ಷವನ್ನು ಪಡೆದಿದ್ದಾರೆ. ಪ್ರತಿದಿನ ಶ್ರವಣ, ಇಚ್ಛೆ, ದರ್ಶನ, ಸ್ಪರ್ಶನ, ಪಾನ, ಸ್ನಾನ ಅಥವಾ ಕೀರ್ತನದಿಂದಲೂ ಸಹ ಗಂಗೆಯು ಜನರನ್ನು ಪವಿತ್ರಗೊಳಿಸುತ್ತಾಳೆ (121-122). ನೂರು ಯೋಜನಗಳ ದೂರದಲ್ಲಿದ್ದರೂ ಸಹ ಯಾರು 'ಗಂಗಾ ಗಂಗಾ' ಎಂದು ನಾಮೋಚ್ಚಾರಣೆ ಮಾಡುತ್ತಾರೋ ಅವರು ಮೂರು ಜನ್ಮಗಳಲ್ಲಿ ಆರ್ಜಿಸಿದ ಪಾಪ ವನ್ನಾದರೂ ಗಂಗೆಯು ವಿನಾಶಗೊಳಿಸುತ್ತಾಳೆ (123). ಮೂರು ಲೋಕಗಳನ್ನೂ ಪಾವನಗೊಳಿಸಲು ಸಮರ್ಥಳಾದ ಗಂಗೆಯು ಎಲ್ಲಿಂದ

**ಯತಃ ಸಾ ಪಾವನಾಯಾಲಂ ತ್ರಯಾಣಾಂ ಜಗತಾಮಪಿ।**
**ಸಮುದ್ಭೂತಾ ಪರಂ ತತ್ತು ತೃತೀಯಂ ಭಗವತ್ಪದಮ್॥** 124

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ಅಷ್ಟಮೋಽಧ್ಯಾಯಃ

---

ಉದ್ಭವಿಸಿದಳೋ ಅದು ಭಗವಂತನ ತೃತೀಯ ಪರಮಪದವಾಗಿದೆ (124).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಎಂಟನೆಯ ಅಧ್ಯಾಯ ಮುಗಿಯಿತು.



## ನವಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ತಾರಾಮಯಂ ಭಗವತಃ ಶಿಶುಮಾರಾಕೃತಿ ಪ್ರಭೋಃ।**
**ದಿವಿ ರೂಪಂ ಹರೇರ್ಯತ್ತು ತಸ್ಯ ಪುಚ್ಛೇ ಸ್ಥಿತೋ ಧ್ರುವಃ॥** 1

**ಸೈಷ ಭ್ರಮನ್ ಭ್ರಾಮಯತಿ ಚಂದ್ರಾದಿತ್ಯಾದಿಕಾನ್ ಗ್ರಹಾನ್।**
**ಭ್ರಮಂತಮನು ತಂ ಯಾಂತಿ ನಕ್ಷತ್ರಾಣಿ ಚ ಚಕ್ರವತ್॥** 2

**ಸೂರ್ಯಾಚಂದ್ರಮಸೌ ತಾರಾ ನಕ್ಷತ್ರಾಣಿ ಗ್ರಹೈಃ ಸಹ।**
**ವಾತಾನೀಕಮಯೈರ್ಬಂಧೈರ್ಧ್ರುವೇ ಬದ್ಧಾನಿ ತಾನಿ ವೈ॥** 3

---

## ಅಧ್ಯಾಯ 9

### ಶಿಶುಮಾರಚಕ್ರ ಮತ್ತು ಜ್ಯೋತಿಶ್ಚಕ್ರಗಳ ವರ್ಣನೆ

ಪರಾಶರರು ಹೇಳಿದರು: ಪ್ರಭುವಾದ ಭಗವಾನ್ ಶ್ರೀಹರಿಯು ಶಿಶುಮಾರಾ*ಕೃತಿಯಲ್ಲಿರುವ ತಾರಾಮಯವಾದ ಒಂದು ರೂಪವು ಗಗನದಲ್ಲಿ ಗೋಚರಿಸುವದಷ್ಟೆ. ಅದರ ಪುಚ್ಛಭಾಗದಲ್ಲಿ ಧ್ರುವನಿದ್ದಾನೆ (1). ಈ ಧ್ರುವನು ಸ್ವಯಂ ತಿರುಗುತ್ತ ಸೂರ್ಯಚಂದ್ರಾದಿ ಸಕಲ ಗ್ರಹಗಳನ್ನೂ ತಿರುಗಿಸುತ್ತಾನೆ. ತಿರುಗುತ್ತಿರುವ ಈತನನ್ನನುಸರಿಸಿ ನಕ್ಷತ್ರ ಗಳು ಚಕ್ರದಂತೆ ಹಿಂಬಾಲಿಸುತ್ತವೆ (2). ಸೂರ್ಯಚಂದ್ರರೂ ತಾರೆಗಳೂ ನಕ್ಷತ್ರಗಳೂ (ಅಶ್ವಿನೀ, ಭರಣಿ—ಮೊದಲಾದವು), ಅನ್ಯಗ್ರಹಗಳೊಡನೆ ವಾಯುಮಂಡಲಗಳೆಂಬ ಹಗ್ಗಗಳಿಂದ ಧ್ರುವನೊಡನೆ ಬಿಗಿಯಲ್ಪಟ್ಟಿವೆ (3). ಶಿಶುಮಾರಾಕೃತಿಯಲ್ಲಿರುವ ನಕ್ಷತ್ರಮಯವಾದ ಒಂದು ರೂಪವು ಗಗನದಲ್ಲಿದೆಯೆಂದು ಉಕ್ತವಾಯಿತಷ್ಟೆ. ಅದರ ಹೃದಯದಲ್ಲಿ

---

* ಶಿಶುಮಾರ—ಒಂದು ಜಲಜಂತು, ನೆಗಳು (Alligator, porpoise).

**ಶಿಶುಮಾರಾಕೃತಿ ಪ್ರೋಕ್ತಂ ಯದ್ರೂಪಂ ಜ್ಯೋತಿಷಾಂ ದಿವಿ।**
**ನಾರಾಯಣೋಽಯನಂ ಧಾಮ್ನಾಂ ತಸ್ಯಾಧಾರಃ ಸ್ವಯಂ ಹೃದಿ॥4**

**ಉತ್ತಾನಪಾದಪುತ್ರಸ್ತು ತಮಾರಾಧ್ಯ ಜಗತ್ಪತಿಮ್।**
**ಸ ತಾರಾಶಿಶುಮಾರಸ್ಯ ಧ್ರುವಃ ಪುಚ್ಛೇ ವ್ಯವಸ್ಥಿತಃ॥ 5**

**ಆಧಾರಃ ಶಿಶುಮಾರಸ್ಯ ಸರ್ವಾಧ್ಯಕ್ಷೋ ಜನಾರ್ದನಃ।**
**ಧ್ರುವಸ್ಯ ಶಿಶುಮಾರಸ್ತು ಧ್ರುವೇ ಭಾನುರ್ವ್ಯವಸ್ಥಿತಃ॥ 6**

**ತದಾಧಾರಂ ಜಗಚ್ಚೇದಂ ಸದೇವಾಸುರಮಾನುಷಮ್।**
**ಯೇನ ವಿಪ್ರ ವಿಧಾನೇನ ತನ್ಮಮೈಕಮನಾಃ ಶೃಣು॥ 7**

**ವಿವಿಸ್ವಾನಷ್ಟಭಿರ್ಮಾಸೈರಾದಾಯಾಪೋ ರಸಾತ್ಮಿಕಾಃ।**
**ವರ್ಷತ್ಯಂಬು ತತಶ್ಚಾನ್ನಮನ್ನಾದಪ್ಯಖಿಲಂ ಜಗತ್॥ 8**

**ವಿವಸ್ವಾನಂಶುಭಿಸ್ತೀಕ್ಷ್ಣೈರಾದಾಯ ಜಗತೋ ಜಲಮ್।**
**ಸೋಮಂ ಪುಷ್ಣಾತ್ಯಥೇಂದುಶ್ಚ ವಾಯುನಾಡೀಮಯೈರ್ದಿವಿ॥ 9**

---

ತೇಜೋಧಾಮನಾದ ಶ್ರೀಮನ್ನಾರಾಯಣನು ಆಧಾರವಾಗಿ ನೆಲೆಸಿದ್ದಾನೆ (4). ಉತ್ತಾನಪಾದಪುತ್ರನಾದ ಧ್ರುವನು ಆ ಜಗದೀಶ್ವರನನ್ನು ಆರಾಧಿಸಿ, ತಾರಾಮಯವಾದ ಆ ಶಿಶುಮಾರದ ಪುಚ್ಛಭಾಗದಲ್ಲಿ ನೆಲೆಸಿದ್ದಾನೆ. ಸರ್ವಾಧ್ಯಕ್ಷನಾದ ಜನಾರ್ದನನು ಶಿಶುಮಾರವು ನಿಂತಿರುವುದಕ್ಕೆ ಆಧಾರ. ಶಿಶುಮಾರವು ಧ್ರುವನಿಗೆ ಆಧಾರ. ಧ್ರುವನನ್ನು ಆಶ್ರಯಿಸಿ ಸೂರ್ಯ ನಿದ್ದಾನೆ (5-6). ದೇವಾಸುರ ಮನುಷ್ಯಸಹಿತವಾದ ಈ ಜಗತ್ತು ಸೂರ್ಯನನ್ನು ಆಶ್ರಯಿಸಿ ನಿಂತಿದೆ. ಅದು ಯಾವ ಪ್ರಕಾರವೆಂಬುದನ್ನು, ಮೈತ್ರೇಯ, ಸಾವಧಾನಚಿತ್ತನಾಗಿ ಕೇಳು (7). ಸೂರ್ಯನು ಎಂಟು ತಿಂಗಳ ಕಾಲ ರಸಾತ್ಮಕವಾದ ಜಲವನ್ನು ಹೀರಿ, ಅನಂತರ ಮಳೆಯ ರೂಪದಲ್ಲಿ ನೀರನ್ನು ಸುರಿಸುತ್ತಾನೆ. ನೀರಿನಿಂದ ಅನ್ನ, ಅನ್ನದಿಂದ ಜಗತ್ತು (8). ಸೂರ್ಯನು ತೀಕ್ಷ್ಣವಾದ ಕಿರಣಗಳ ಮೂಲಕ ಭೂಮಿಯಲ್ಲಿರುವ ನೀರನ್ನು ಹೀರಿ ಚಂದ್ರನನ್ನು ಪೋಷಿಸುತ್ತಾನೆ. ಚಂದ್ರನು ವಾಯುನಾಡಿಗಳ ಮೂಲಕ ನೀರನ್ನು ಆಕಾಶದಲ್ಲಿರುವ ಮೇಘಗಳಿಗೆ ಸೇರಿಸುತ್ತಾನೆ.

**ನಾಲ್ಕೈರ್ವಿಕ್ಷಿಪತೇಽಭ್ರೇಷು ಧೂಮಾಗ್ನ್ಯನಿಲಮೂರ್ತಿಷು।**
**ನ ಭ್ರಶ್ಯಂತಿ ಯತಸ್ತೇಭ್ಯೋ ಜಲಾನ್ಯಭ್ರಾಣಿ ತಾನ್ಯತಃ॥ 10**

**ಅಭ್ರಸ್ಥಾಃ ಪ್ರಪತಂತ್ಯಾಪೋ ವಾಯುನಾ ಸಮುದೀರಿತಾಃ।**
**ಸಂಸ್ಕಾರಂ ಕಾಲಜನಿತಂ ಮೈತ್ರೇಯಾಸಾದ್ಯ ನಿರ್ಮಲಾಃ॥ 11**

**ಸರಿತ್ಸಮುದ್ರಭೌಮಾಸ್ತು ತಥಾಪಃ ಪ್ರಾಣಿಸಂಭವಾಃ।**
**ಚತುಷ್ಪ್ರಕಾರಾ ಭಗವಾನಾದತ್ತೇ ಸವಿತಾ ಮುನೇ॥ 12**

**ಆಕಾಶಗಂಗಾಸಲಿಲಂ ತಥಾದಾಯ ಗಭಸ್ತಿಮಾನ್।**
**ಅನಭ್ರಗತಮೇವೋರ್ವ್ಯಾಂ ಸದ್ಯಃ ಕ್ಷಿಪತಿ ರಶ್ಮಿಭಿಃ॥ 13**

**ತಸ್ಯ ಸಂಸ್ಪರ್ಶನಿರ್ಧೂತಪಾಪಪಂಕೋ ದ್ವಿಜೋತ್ತಮ।**
**ನ ಯಾತಿ ನರಕಂ ಮರ್ತ್ಯೋ ದಿವ್ಯಂ ಸ್ನಾನಂ ಹಿ**
**ತತ್ ಸ್ಮೃತಮ್॥ 14**

---

ಮೇಘವು ಧೂಮ, ಅಗ್ನಿ, ಅನಿಲಗಳ ಸಮುದಾಯ. ಚಂದ್ರನಿಂದ ಪ್ರಾಪ್ತವಾದ ಜಲವು ಮೇಘದಿಂದ ಥಟ್ಟನೆ ಭ್ರಂಶವಾಗುವುದಿಲ್ಲವಾದ್ದರಿಂದ ಮೇಘಕ್ಕೆ 'ಅಭ್ರ' ಎಂದು ಹೆಸರಿದೆ (9-10). ಮೈತ್ರೇಯ, ಈ ಅಭ್ರದಲ್ಲಿರುವ ನೀರು ಕಾಲಕ್ರಮದಿಂದ ಸಂಸ್ಕಾರ ಹೊಂದಿ ನಿರ್ಮಲವಾಗಿ, ವಾಯುಪ್ರೇರಣೆಯಿಂದ ಕೆಳಗೆ ಸುರಿಯುತ್ತದೆ. ಭಗವಾನ್ ಸೂರ್ಯದೇವನು ನದೀ, ಸಮುದ್ರ, ಭೌಮ (ಭೂಮಿಯಲ್ಲಿರುವ ಸಸ್ಯ, ಕೆರೆ ಮೊದಲಾದವು) ಮತ್ತು ಪ್ರಾಣಿ—ಇವುಗಳಿಗೆ ಸಂಬಂಧಿಸಿದಂತೆ ನಾಲ್ಕು ಪ್ರಕಾರವಾದ ಜಲವನ್ನು ಹೀರುತ್ತಾನೆ (11-12). ಅಲ್ಲದೆ ಸೂರ್ಯದೇವನು ಆಕಾಶಗಂಗಾ ಜಲವನ್ನು ಹೀರಿಕೊಂಡು, ಅದನ್ನು ಮೇಘಕ್ಕೆ ಸಾಗಿಸದೆ, ನೇರವಾಗಿ ಭೂಮಿಗೆ ತನ್ನ ಕಿರಣಗಳಿಂದ ಸುರಿಯುತ್ತಾನೆ. ಅದರ ಸ್ಪರ್ಶದಿಂದ ಮಾನವನು ಪಾಪಪಂಕವನ್ನು ಕಳೆದುಕೊಳ್ಳುವುದರಿಂದ ನರಕಕ್ಕೆ ಹೋಗುವುದಿಲ್ಲ. ಈ ಸ್ನಾನಕ್ಕೆ ದಿವ್ಯಸ್ನಾನವೆಂದು ಹೆಸರು (13-14). ಸೂರ್ಯನು ಕಾಣುತ್ತಿರುವಾಗ ಮೋಡವಿಲ್ಲದೆಯೇ ಗಗನದಿಂದ ಯಾವ ಜಲವು ಸುರಿಯುವುದೋ ಅದು ಆಕಾಶಗಂಗಾ ನದಿಗೆ

ದೃಷ್ಟಸೂರ್ಯಂ ಹಿ ಯದ್ವಾರಿ ಪತತ್ಯಭ್ರೈರ್ವಿನಾ ದಿವಃ।
ಆಕಾಶಗಂಗಾಸಲಿಲಂ ತದ್ಗೋಭಿಃ ಕ್ಷಿಪ್ಯತೇ ರವೇಃ॥ 15

ಕೃತ್ತಿಕಾದಿಷು ಋಕ್ಷೇಷು ವಿಷಮೇಷು ಚ ಯದ್ದಿವಃ।
ದೃಷ್ಟಾರ್ಕಪತಿತಂ ಜ್ಞೇಯಂ ತದ್ಗಾಂಗಂ ದಿಗ್ಗಜೋಜ್ಝಿತಮ್॥ 16

ಯುಗ್ಮರ್ಕ್ಷೇಷು ಚ ಯತ್ತೋಯಂ ಪತತ್ಯರ್ಕೋಜ್ಝಿತಂ ದಿವಃ।
ತತ್ಸೂರ್ಯರಶ್ಮಿಭಿಃ ಸರ್ವಂ ಸಮಾದಾಯ ನಿರಸ್ಯತೇ॥ 17

ಉಭಯಂ ಪುಣ್ಯಮತ್ಯರ್ಥಂ ನೃಣಾಂ ಪಾಪಭಯಾಪಹಮ್।
ಆಕಾಶಗಂಗಾಸಲಿಲಂ ದಿವ್ಯಂ ಸ್ನಾನಂ ಮಹಾಮುನೇ॥ 18

ಯತ್ತು ಮೇಘೈಃ ಸಮುತ್ಸೃಷ್ಟಂ ವಾರಿ ತತ್ಪ್ರಾಣಿನಾಂ ದ್ವಿಜ।
ಪುಷ್ಣಾತ್ಯೋಷಧಯಃ ಸರ್ವಾ ಜೀವನಾಯಾಮೃತಂ ಹಿ ತತ್॥ 19

ತೇನ ವೃದ್ಧಿಂ ಪರಾಂ ನೀತಃ ಸಕಲಶ್ಚೌಷಧೀಗಣಃ।
ಸಾಧಕಃ ಫಲಪಾಕಾಂತಃ ಪ್ರಜಾನಾಂ ದ್ವಿಜ ಜಾಯತೇ॥ 20

---

ಸೇರಿದುದು. ಅದು ಸೂರ್ಯನ ಕಿರಣಗಳಿಂದ ಕೆಳಗೆ ತಳ್ಳಲ್ಪಡುತ್ತದೆ. ಕೃತ್ತಿಕೆ ಮೊದಲಾದ ವಿಷಮ ಸಂಖ್ಯೆಯ ನಕ್ಷತ್ರಗಳಲ್ಲಿ ಈ ಪ್ರಕಾರ ಸೂರ್ಯ ನಿರುವಾಗ ಸುರಿಯುವ ಜಲವು ದಿಗ್ಗಜಗಳಿಂದ ಎರಚಲ್ಪಟ್ಟ ಆಕಾಶಗಂಗಾ ಜಲ (15-16). (ರೋಹಿಣಿ ಮುಂತಾದ) ಸಮ ನಕ್ಷತ್ರಗಳಲ್ಲಿ ಸುರಿಯುವ ಜಲವು ನೇರವಾಗಿ ಸೂರ್ಯಕಿರಣಗಳು ಹೀರಿ ಸುರಿಸಿದ ಆಕಾಶಗಂಗಾ ಜಲ. ಈ ಉಭಯ ಜಲವೂ ಅತ್ಯಂತ ಪುಣ್ಯಕರವಾದದ್ದು. ಮನುಷ್ಯರಿಗೆ ಪಾಪಭಯವನ್ನು ನಿವಾರಿಸತಕ್ಕದ್ದು. ಮೈತ್ರೇಯ, ಆಕಾಶಗಂಗಾಜಲ ಸ್ನಾನವು ದಿವ್ಯಸ್ನಾನವೆನಿಸುತ್ತದೆ (17-18). ಇನ್ನು ಮೇಘಗಳಿಂದ ಸುರಿಯಲ್ಪಟ್ಟ ಜಲವು ಪ್ರಾಣಿಗಳ ಜೀವನಕ್ಕಾಗಿ ಸಮಸ್ತ ಸಸ್ಯಗಳನ್ನೂ ಪೋಷಿಸುತ್ತದೆ. ಈ ಜಲವು ಅಮೃತವೇ ಸರಿ. (19). ಅದರಿಂದ ಬೆಳೆಯುವ ಸಮಸ್ತ ಸಸ್ಯಗಣವೂ ಫಸಲನ್ನು ನೀಡಿ ಒಣಗುತ್ತ ಪ್ರಾಣಿಗಳ (ಉತ್ಪತ್ತಿ ಪೋಷಣೆಗಳಿಗೆ) ಸಾಧಕವಾಗಿದೆ. ಈ ಧ್ಯಾನಗಳಿಂದ ಶಾಸ್ತ್ರ ವಿದರಾದ ಮಾನವರು ಶಾಸ್ತ್ರೋಕ್ತ ಯಜ್ಞಗಳನ್ನಾಚರಿಸಿ ಪ್ರತಿದಿನವೂ

**ತೇನ ಯಜ್ಞಾನ್ಯಥಾಪ್ರೋಕ್ತಾನ್ಮಾನವಾಃ ಶಾಸ್ತ್ರಚಕ್ಷುಷಃ।**
**ಕುರ್ವಂತ್ಯಹರಹಸ್ತೈಶ್ಚ ದೇವಾನಾಪ್ಯಾಯಯಂತಿ ತೇ॥** 21

**ಏವಂ ಯಜ್ಞಾಶ್ಚ ವೇದಾಶ್ಚ ವರ್ಣಾಶ್ಚ ವೃಷ್ಟಿಪೂರ್ವಕಾಃ।**
**ಸರ್ವೇ ದೇವನಿಕಾಯಾಶ್ಚ ಸರ್ವೇ ಭೂತಗಣಾಶ್ಚ ಯೇ॥** 22

**ವೃಷ್ಟ್ಯಾ ಧೃತಮಿದಂ ಸರ್ವಮನ್ನಂ ನಿಷ್ಪಾದ್ಯತೇ ಯಯಾ।**
**ಸಾಪಿ ನಿಷ್ಪಾದ್ಯತೇ ವೃಷ್ಟಿಃ ಸವಿತ್ರಾ ಮುನಿಸತ್ತಮ॥** 23

**ಆಧಾರಭೂತಃ ಸವಿತುರ್ಧ್ರುವೋ ಮುನಿವರೋತ್ತಮ।**
**ಧ್ರುವಸ್ಯ ಶಿಶುಮಾರೋಽಸೌ ಸೋಽಪಿ ನಾರಾಯಣಾತ್ಮಕಃ॥** 24

**ಹೃದಿ ನಾರಾಯಣಸ್ತಸ್ಯ ಶಿಶಿಮಾರಸ್ಯ ಸಂಸ್ಥಿತಃ।**
**ಬಿಭರ್ತಾ ಸರ್ವಭೂತಾನಾಮಾದಿಭೂತಃ ಸನಾತನಃ॥** 25

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ನವಮೋಽಧ್ಯಾಯಃ

---

ದೇವತೆಗಳನ್ನು ಆಪ್ಯಾಯನಗೊಳಿಸುತ್ತಾರೆ (20-21). ಹೀಗೆ ಯಜ್ಞಗಳು, ವೇದಗಳು, ಬ್ರಾಹ್ಮಣಾದಿ ವರ್ಣಗಳು, ದೇವತೆಗಳು, ಪ್ರಾಣಿಗಳು ಎಲ್ಲವೂ ವೃಷ್ಟಿಯನ್ನು ಅವಲಂಬಿಸಿಕೊಂಡಿವೆ. ಅನ್ನವನ್ನು ನಿಷ್ಪಾದಿಸುವ ವೃಷ್ಟಿಯನ್ನು ಸರ್ವವೂ ಅವಲಂಬಿಸಿಕೊಂಡಿದೆ. ಆ ವೃಷ್ಟಿಯಾದರೋ ಸೂರ್ಯನಿಂದ ಉಂಟಾಗುತ್ತದೆ (22-23). ಮೈತ್ರೇಯ, ಈ ಸೂರ್ಯನಿಗೆ ಧ್ರುವನು ಆಧಾರ. ಧ್ರುವನಿಗೆ ಶಿಶುಮಾರಚಕ್ರವು ಆಧಾರ. ಶಿಶುಮಾರಕ್ಕೆ ಶ್ರೀಮನ್ನಾರಾಯಣನು ಆಧಾರ. ಆದಿಭೂತನೂ ಸನಾತನನೂ ಆದ ನಾರಾಯಣನು ಶಿಶುಮಾರದ ಹೃದಯದಲ್ಲಿದ್ದು ಸಮಸ್ತ ಪ್ರಾಣಿ ವರ್ಗವನ್ನೂ ಧರಿಸಿ ಪೋಷಿಸುತ್ತಿದ್ದಾನೆ (24-25).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಒಂಬತ್ತನೆಯ ಅಧ್ಯಾಯ ಮುಗಿಯಿತು.



## ದಶಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಸಾಶೀತಿಮಂಡಲಶತಂ ಕಾಷ್ಠಯೋರಂತರಂ ದ್ವಯೋಃ।**
**ಆರೋಹಣಾವರೋಹಾಭ್ಯಾಂ ಭಾನೋರಬ್ದೇನ ಯಾ ಗತಿಃ॥ 1**

**ಸ ರಥೋಽಧಿಷ್ಠಿತೋ ದೇವೈರಾದಿತ್ಯೈರ್ಋಷಿಭಿಸ್ತಥಾ।**
**ಗಂಧರ್ವೈರಪ್ಸರೋಭಿಶ್ಚ ಗ್ರಾಮಣೀಸರ್ಪರಾಕ್ಷಸೈಃ॥ 2**

**ಧಾತಾ ಕ್ರತುಸ್ಥಲಾ ಚೈವ ಪುಲಸ್ತ್ಯೋ ವಾಸುಕಿಸ್ತಥಾ।**
**ರಥಭೃದ್‌ಗ್ರಾಮಣೀರ್ಹೇತಿಸ್ತುಂಬುರುಶ್ಚೈವ ಸಪ್ತಮಃ॥ 3**

---

## ಅಧ್ಯಾಯ 10

### ದ್ವಾದಶಸೂರ್ಯರು ಮತ್ತು ಬೇರೆಬೇರೆ ಮಾಸಗಳ ಅಧಿಕಾರಿಗಳು

ಪರಾಶರರು ಹೇಳಿದರು: ಒಂದು ವರ್ಷದಲ್ಲಿ ಸೂರ್ಯನು ಆರೋಹ ಮತ್ತು ಅವರೋಹಗಳ ಮೂಲಕ ಸಂಚರಿಸುವ ಎರಡು ದಿಕ್ಕುಗಳ (ಉತ್ತರ ಮತ್ತು ದಕ್ಷಿಣ) ನಡುವಿನ ಅಂತರವು ನೂರೆಂಬತ್ತು* ಮಂಡಲಗಳು (1). ಸೂರ್ಯನ ರಥವು ದೇವತೆಗಳಾದ ಆದಿತ್ಯರಿಂದಲೂ ಋಷಿಗಳಿಂದಲೂ ಗಂಧರ್ವರಿಂದಲೂ ಅಪ್ಸರೆಯರಿಂದಲೂ ಯಕ್ಷರಿಂದಲೂ ಸರ್ಪರಾಕ್ಷಸರಿಂದಲೂ ಅಧಿಷ್ಠಿತವಾಗಿರುತ್ತದೆ (ಪ್ರತಿಯೊಂದು ಗುಂಪಿನಿಂದ ಒಬ್ಬೊಬ್ಬರು ಪ್ರತಿ ಮಾಸದಲ್ಲಿ ಅಧಿಷ್ಠಿತರಾಗಿರುತ್ತಾರೆ) (2). ಸರ್ವದಾ ಚೈತ್ರಮಾಸದಲ್ಲಿ ಧಾತಾ (ಆದಿತ್ಯ), ಕ್ರತುಸ್ಥಲಾ (ಅಪ್ಸರೆ),

---

* ಉತ್ತರ ದಿಕ್ಕಿನ ತುದಿಯಿಂದ ದಕ್ಷಿಣ ದಿಕ್ಕಿನ ತುದಿಗೆ 360 ಮಂಡಲಗಳೆಂದು ವಾಯುಪುರಾಣದಲ್ಲಿದೆ. ಇಲ್ಲಿಯೂ ಸಹ ಮಧ್ಯದಿಂದ (Equator) ಒಂದೊಂದು ದಿಕ್ಕಿನ ತುದಿಗೆ 180 ಮಂಡಲ ಎಂದು ಅರ್ಥ ಹೇಳಲು ಸಾಧ್ಯ. ಆಗ ಎರಡು ಪುರಾಣಗಳಿಗೂ ಏಕವಾಕ್ಯತೆ ಬರುತ್ತದೆ. ಈ ಅರ್ಥ ಯುಕ್ತವೂ ಹೌದು. ಮಂಡಲ = Degree, ವರ್ಷದ 360 ದಿನಗಳಿಗೆ 360 ಮಂಡಲ.

**ಏತೇ ವಸಂತಿ ವೈ ಚೈತ್ರೇ ಮಧುಮಾಸೇ ಸದೈವ ಹಿ।**
**ಮೈತ್ರೇಯ ಸ್ಯಂದನೇ ಭಾನೋಃ ಸಪ್ತ ಮಾಸಾಧಿಕಾರಿಣಃ॥ 4**

**ಅರ್ಯಮಾ ಪುಲಹಶ್ಚೈವ ರಥೌಜಾಃ ಪುಂಜಿಕಸ್ಥಲಾ।**
**ಪ್ರಹೇತಿಃ ಕಚ್ಛವೀರಶ್ಚ ನಾರದಶ್ಚ ರಥೇ ರವೇಃ॥ 5**

**ಮಾಧವೇ ನಿವಸಂತ್ಯೇತೇ ಶುಚಿಸಂಜ್ಞೇ ನಿಬೋಧ ಮೇ॥ 6**

**ಮಿತ್ರೋಽತ್ರಿಸ್ತಕ್ಷಕೋ ರಕ್ಷಃ ಪೌರುಷೇಯೋಽಥ ಮೇನಕಾ।**
**ಹಾಹಾ ರಥಸ್ವನಶ್ಚೈವ ಮೈತ್ರೇಯೈತೇ ವಸಂತಿ ವೈ॥ 7**

**ವರುಣೋ ವಸಿಷ್ಠೋ ನಾಗಶ್ಚ ಸಹಜನ್ಯಾ ಹುಹೂ ರಥಃ।**
**ರಥಚಿತ್ರಸ್ತಥಾ ಶುಕ್ರೇ ವಸಂತ್ಯಾಷಾಢಸಂಜ್ಞಕೇ॥ 8**

**ಇಂದ್ರೋ ವಿಶ್ವಾವಸುಃ ಸ್ರೋತ ಏಲಾಪುತ್ರಸ್ತಥಾಂಗಿರಾಃ।**
**ಪ್ರಮ್ಲೋಚಾ ಚ ನಭಸ್ಯೇತೇ ಸರ್ಪಿಶ್ಚಾರ್ಕೇ ವಸಂತಿ ವೈ॥ 9**

---

ಪುಲಸ್ತ್ಯ (ಋಷಿ), ವಾಸುಕಿ (ಸರ್ಪ), ರಥಭೃತ್ (ಯಕ್ಷ), ಹೇತಿ (ರಾಕ್ಷಸ), ತುಂಬುರು (ಗಂಧರ್ವ)—ಇವರು ಚೈತ್ರಮಾಸಕ್ಕೆ ಅಧಿಕಾರಿಗಳಾಗಿ ಸೂರ್ಯನ ರಥದಲ್ಲಿರುತ್ತಾರೆ (3-4). ವೈಶಾಖ ಮಾಸದಲ್ಲಿ ಅರ್ಯಮಾ (ಆದಿತ್ಯ), ಪುಲಹ (ಋಷಿ), ರಥೌಜಾ (ಯಕ್ಷ), ಪುಂಜಿಕಸ್ಥಲಾ (ಅಪ್ಸರೆ), ಪ್ರಹೇತಿ (ರಾಕ್ಷಸ), ಕಚ್ಛವೀರ (ಸರ್ಪ), ನಾರದ (ಗಂಧರ್ವ)—ಇವರು ಸೂರ್ಯನ ರಥದಲ್ಲಿರುತ್ತಾರೆ. ಈಗ ಜ್ಯೇಷ್ಠ ಮಾಸದಲ್ಲಿರತಕ್ಕವರ ಹೆಸರನ್ನಾಲಿಸು (5-6). ಮಿತ್ರ, ಅತ್ರಿ, ತಕ್ಷಕ, ಪೌರುಷೇಯನೆಂಬ ರಾಕ್ಷಸ, ಮೇನಕಾ, ಹಾಹಾ, ರಥಸ್ವನ (ಯಕ್ಷ)—ಇವರು ಇರುತ್ತಾರೆ (7). ಆಷಾಢಮಾಸದಲ್ಲಿ ವರುಣ (ಆದಿತ್ಯ), ವಸಿಷ್ಠ, ನಾಗ, ಸಹಜನ್ಯಾ, ಹುಹೂ, ರಥ (ರಾಕ್ಷಸ), ರಥಚಿತ್ರ (ಗಂಧರ್ವ)—ಇವರು ಸೂರ್ಯನ ರಥದಲ್ಲಿರುತ್ತಾರೆ (8). ಶ್ರಾವಣಮಾಸದಲ್ಲಿ ಇಂದ್ರ (ಆದಿತ್ಯ), ವಿಶ್ವಾವಸು, ಸ್ರೋತ (ಯಕ್ಷ), ಏಲಾಪುತ್ರ (ಸರ್ಪ), ಅಂಗಿರಸ್, ಪ್ರಮ್ಲೋಚಾ, ಸರ್ಪಿ (ರಾಕ್ಷಸ)—ಇವರು ಸೂರ್ಯರಥದಲ್ಲಿರುತ್ತಾರೆ (9). ಭಾದ್ರಪದಮಾಸದಲ್ಲಿ ವಿವಸ್ವಾನ್ (ಆದಿತ್ಯ),

ವಿವಸ್ವಾನುಗ್ರಸೇನಶ್ಚ ಭೃಗುರಾಪೂರಣಸ್ತಥಾ।
ಅನುಮ್ಲೋಚಾ ಶಂಖಪಾಲೋ ವ್ಯಾಘ್ರೋ ಭಾದ್ರಪದೇ ತಥಾ ॥10

ಪೂಷಾವಸುರುಚಿರ್ವಾತೋ ಗೌತಮೋಽಥ ಧನಂಜಯಃ।
ಸುಷೇಣೋಽನ್ಯೋ ಘೃತಾಚೀ ಚ ವಸಂತ್ಯಾಶ್ವಯುಜೇ ರವೌ ॥11

ವಿಶ್ವಾವಸುರ್ಭರದ್ವಾಜಃ ಪರ್ಜನ್ಯೈರಾವತೌ ತಥಾ।
ವಿಶ್ವಾಚೀ ಸೇನಜಿಚ್ಚಾಪಃ ಕಾರ್ತಿಕೇ ಚ ವಸಂತಿ ವೈ॥ 12

ಅಂಶಕಾಶ್ಯಪತಾರ್ಕ್ಷ್ಯಾಸ್ತು ಮಹಾಪದ್ಮಸ್ತಥೋರ್ವಶೀ।
ಚಿತ್ರಸೇನಸ್ತಥಾ ವಿದ್ಯುನ್ಮಾರ್ಗಶೀರ್ಷೇಽಧಿಕಾರಿಣಃ॥ 13

ಕ್ರತುರ್ಭಗಸ್ತಥೋರ್ಣಾಯುಃ ಸ್ಫೂರ್ಜಃ ಕರ್ಕೋಟಕಸ್ತಥಾ।
ಅರಿಷ್ಟನೇಮಿಶ್ಚೈವಾನ್ಯಾ ಪೂರ್ವಚಿತ್ತಿರ್ವರಾಪ್ಸರಾಃ॥ 14

ಪೌಷಮಾಸೇ ವಸಂತ್ಯೇತೇ ಸಪ್ತ ಭಾಸ್ಕರಮಂಡಲೇ।
ಲೋಕಪ್ರಕಾಶನಾರ್ಥಾಯ ವಿಪ್ರವರ್ಯಾಧಿಕಾರಿಣಃ॥ 15

---

ಉಗ್ರಸೇನ (ಗಂಧರ್ವ), ಭೃಗು, ಆಪೂರಣ (ಯಕ್ಷ), ಅನುಮ್ಲೋಚಾ (ಅಪ್ಸರೆ), ಶಂಖಪಾಲ (ಸರ್ಪ), ವ್ಯಾಘ್ರ (ರಾಕ್ಷಸ)—ಇವರು ಇರುತ್ತಾರೆ (10). ಆಶ್ವಯುಜದಲ್ಲಿ ಪೂಷ, ವಸುರುಚಿ (ಗಂಧರ್ವ), ವಾತ (ರಾಕ್ಷಸ), ಗೌತಮ, ಧನಂಜಯ (ಸರ್ಪ), ಸುಷೇಣ (ಗಂಧರ್ವ), ಘೃತಾಚೀ—ಇವರು ಸೂರ್ಯರಥದಲ್ಲಿರುತ್ತಾರೆ (11). ಕಾರ್ತಿಕ ಮಾಸದಲ್ಲಿ ವಿಶ್ವಾವಸು (ಗಂಧರ್ವ), ಭರದ್ವಾಜ, ಪರ್ಜನ್ಯ (ಆದಿತ್ಯ), ಐರಾವತ (ಸರ್ಪ), ವಿಶ್ವಾಚೀ (ಅಪ್ಸರೆ), ಸೇನಜಿತ್ (ಯಕ್ಷ), ಆಪ (ರಾಕ್ಷಸ)—ಇವರು ಇರುತ್ತಾರೆ (12). ಮಾರ್ಗಶೀರ್ಷ ಮಾಸದಲ್ಲಿ ಅಂಶ (ಆದಿತ್ಯ), ಕಾಶ್ಯಪ, ತಾರ್ಕ್ಷ್ಯ (ಯಕ್ಷ), ಮಹಾಪದ್ಮ (ಸರ್ಪ), ಉರ್ವಶೀ, ಚಿತ್ರಸೇನ, ವಿದ್ಯುತ್ (ರಾಕ್ಷಸ) ಇವರು ಅಧಿಕಾರಿಗಳಾಗಿ ಸೂರ್ಯನ ರಥದಲ್ಲಿರುತ್ತಾರೆ (13). ಪೌಷಮಾಸದಲ್ಲಿ ಕ್ರತು (ಋಷಿ), ಭಗ (ಆದಿತ್ಯ). ಊರ್ಣಾಯು (ಗಂಧರ್ವ), ಸ್ಫೂರ್ಜ (ರಾಕ್ಷಸ), ಕರ್ಕೋಟಕ, ಅರಿಷ್ಟನೇಮಿ (ಯಕ್ಷ), ಪೂರ್ವಚಿತ್ತಿ (ಅಪ್ಸರೆ)—ಇವರು ಲೋಕ

**ತ್ವಷ್ಟಾಥ ಜಮದಗ್ನಿಶ್ಚ ಕಂಬಲೋಽಥ ತಿಲೋತ್ತಮಾ।**
**ಬ್ರಹ್ಮೋಪೇತೋಽಥ ಋತಜಿದ್ ಧೃತರಾಷ್ಟ್ರೋಽಥ ಸಪ್ತಮಃ॥ 16**

**ಮಾಘಮಾಸೇ ವಸಂತ್ಯೇತೇ ಸಪ್ತ ಮೈತ್ರೇಯ ಭಾಸ್ಕರೇ।**
**ಶ್ರೂಯತಾಂ ಚಾಪರೇ ಸೂರ್ಯೇ ಫಾಲ್ಗುನೇ ನಿವಸಂತಿಯೇ॥ 17**

**ವಿಷ್ಣುರಶ್ವತರೋ ರಂಭಾ ಸೂರ್ಯವರ್ಚಾಶ್ಚ ಸತ್ಯಜಿತ್।**
**ವಿಶ್ವಾಮಿತ್ರಸ್ತಥಾ ರಕ್ಷೋ ಯಜ್ಞೋಪೇತೋ ಮಹಾಮುನೇ॥ 18**

**ಮಾಸೇಷ್ವೇತೇಷು ಮೈತ್ರೇಯ ವಸಂತ್ಯೇತೇ ತು ಸಪ್ತಕಾಃ।**
**ಸವಿತುರ್ಮಂಡಲೇ ಬ್ರಹ್ಮನ್ ವಿಷ್ಣುಶಕ್ತ್ಯುಪಬೃಂಹಿತಾಃ॥ 19**

**ಸ್ತುವಂತಿ ಮುನಯಃ ಸೂರ್ಯಂ ಗಂಧರ್ವೈರ್ಗೀಯತೇ ಪುರಃ।**
**ನೃತ್ಯಂತ್ಯಪ್ಸರಸೋ ಯಾಂತಿ ಸೂರ್ಯಸ್ಯಾನು ನಿಶಾಚರಾಃ॥ 20**

---

ಪ್ರಕಾಶನಕ್ಕೋಸ್ಕರ ಅಧಿಕಾರಿಗಳಾಗಿ ಸೂರ್ಯಮಂಡಲದಲ್ಲಿ ಇರುತ್ತಾರೆ (14-15). ಮಾಘಮಾಸದಲ್ಲಿ ತ್ವಷ್ಟಾ (ಆದಿತ್ಯ), ಜಮದಗ್ನಿ, ಕಂಬಲ (ಸರ್ಪ), ತಿಲೋತ್ತಮಾ, ಬ್ರಹ್ಮೋಪೇತ (ರಾಕ್ಷಸ), ಋತಜಿತ್ (ಯಕ್ಷ), ಧೃತರಾಷ್ಟ್ರ (ಗಂಧರ್ವ)—ಇವರು ಇರುತ್ತಾರೆ. ಮೈತ್ರೇಯ, ಫಾಲ್ಗುನ ಮಾಸದಲ್ಲಿ ಸೂರ್ಯಮಂಡಲದಲ್ಲಿರತಕ್ಕವರ ಹೆಸರನ್ನು ಕೇಳು (16-17). ವಿಷ್ಣು (ಆದಿತ್ಯ), ಅಶ್ವತರ (ಸರ್ಪ), ರಂಭಾ, ಸೂರ್ಯವರ್ಚ (ಗಂಧರ್ವ), ಸತ್ಯಜಿತ್ (ಯಕ್ಷ), ವಿಶ್ವಾಮಿತ್ರ, ಯಜ್ಞೋಪೇತನೆಂಬ ರಾಕ್ಷಸ—ಇವರು ಇರುತ್ತಾರೆ (18). ಮೈತ್ರೇಯ, ಈ ಎಲ್ಲ ಮಾಸಗಳಲ್ಲಿ ಈಗ ಹೇಳಿದಂತೆ ಏಳು ಏಳು ಜನರು ವಿಷ್ಣುಶಕ್ತಿಯಿಂದ ಸಂದೀಪ್ತರಾಗಿ ಸೂರ್ಯಮಂಡಲದಲ್ಲಿ ನೆಲೆಸಿರುತ್ತಾರೆ (19). (ಒಂದೊಂದು ಮಾಸದಲ್ಲಿ ಒಬ್ಬೊಬ್ಬರಂತೆ) ಋಷಿಗಳು ಸೂರ್ಯನನ್ನು ಸ್ತುತಿಸುತ್ತಾರೆ. ಗಂಧರ್ವರು ಎದುರಿಗೆ ಹಾಡುತ್ತಾರೆ. ಅಪ್ಸರೆಯರು ನರ್ತಿಸುತ್ತಾರೆ. ರಾಕ್ಷಸರು ಹಿಮ್ಮೇಳದಲ್ಲಿ ಹೋಗುತ್ತಾರೆ. ಸರ್ಪಗಳು ರಥದ ಸಾಗಾಣಿಕೆಗೆ ಅಣಿ

**ವಹಂತಿ ಪನ್ನಗಾ ಯಕ್ಷೈಃ ಕ್ರಿಯತೇಽಭಿಷುಸಂಗ್ರಹಃ।**
**ವಾಲಖಿಲ್ಯಾಸ್ತಥೈವೈನಂ ಪರಿವಾರ್ಯ ಸಮಾಸತೇ॥** 21

**ಸೋಽಯಂ ಸಪ್ತಗಣಃ ಸೂರ್ಯಮಂಡಲೇ ಮುನಿಸತ್ತಮ।**
**ಹಿಮೋಷ್ಣವಾರಿವೃಷ್ಟೀನಾಂ ಹೇತುಃ ಸ್ವಸಮಯಂ ಗತಃ॥** 22

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ದಶಮೋಽಧ್ಯಾಯಃ

---

ಮಾಡಿಕೊಡುತ್ತವೆ. ಯಕ್ಷರು ಲಗಾಮುಗಳನ್ನು ಹಿಡಿಯುತ್ತಾರೆ. ಮತ್ತು ವಾಲಖಿಲ್ಯರೆಂಬ ಋಷಿಗಳು ರಥದ ಸುತ್ತಲೂ ನೆರೆದಿರುತ್ತಾರೆ (20-21). ಮೈತ್ರೇಯ, ಸೂರ್ಯರಥಕ್ಕೆ ಸಂಬಂಧಿಸಿದ ಈ ಸಪ್ತಗಣವು ತಮ್ಮ ತಮ್ಮ ಸಮಯದಲ್ಲಿ ಚಳಿ, ಉಷ್ಣತೆ, ಜಲವೃಷ್ಟಿ—ಇವುಗಳಿಗೆ ಕಾರಣವಾಗುತ್ತದೆ (22).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಹತ್ತನೆಯ ಅಧ್ಯಾಯ ಮುಗಿಯಿತು.



## ಏಕಾದಶೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಯದೇತದ್ಭಗವಾನಾಹ ಗಣಃ ಸಪ್ತವಿಧೋ ರವೇಃ।**
**ಮಂಡಲೇ ಹಿಮತಾಪಾದೇಃ ಕಾರಣಂ ತನ್ಮಯಾ ಶ್ರುತಮ್॥ 1**

**ವ್ಯಾಪಾರಶ್ಚಾಪಿ ಕಥಿತೋ ಗಂಧರ್ವೋರಗರಾಕ್ಷಸಮ್।**
**ಋಷೀಣಾಂ ವಾಲಖಿಲ್ಯಾನಾಂ ತಥೈವಾಪ್ಸರಸಾಂ ಗುರೋ॥ 2**

**ಯಕ್ಷಾಣಾಂ ಚ ರಥೇ ಭಾನೋರ್ವಿಷ್ಣುಶಕ್ತಿಧೃತಾತ್ಮನಾಮ್।**
**ಕಿಂ ಚಾದಿತ್ಯಸ್ಯ ಯತ್ಕರ್ಮ ತನ್ನಾತ್ರೋಕ್ತಂ ತ್ವಯಾ ಮುನೇ॥ 3**

**ಯದಿ ಸಪ್ತಗಣೋ ವಾರಿ ಹಿಮಮುಷ್ಣಂ ಚ ವರ್ಷತಿ।**
**ತತ್ಕಿಮತ್ರ ರವೇರ್ಯೇನ ವೃಷ್ಟಿಃ ಸೂರ್ಯಾದಿತೀರ್ಯತೇ॥ 4**

---

## ಅಧ್ಯಾಯ 11

### ಸೂರ್ಯಶಕ್ತಿ ಮತ್ತು ವೈಷ್ಣವೀಶಕ್ತಿಗಳ ವರ್ಣನೆ

ಆಗ ಮೈತ್ರೇಯರು "ಮಹರ್ಷಿಗಳೆ, ಸೂರ್ಯಮಂಡಲದಲ್ಲಿರುವ ಸಪ್ತಗಣಗಳು ಶೈತ್ಯ, ತಾಪಾದಿಗಳಿಗೆ ಕಾರಣರೆಂದು ಹೇಳಿದಿರಿ. ಅದನ್ನು ಕೇಳಿದೆನು (1). ಗುರುಗಳೆ, ಸೂರ್ಯರಥದಲ್ಲಿ ವಿಷ್ಣುಶಕ್ತಿಯಿಂದ ಸಂದೀಪ್ತರಾದ ಗಂಧರ್ವೋರಗ ರಾಕ್ಷಸರು, ಋಷಿಗಳು, ವಾಲಖಿಲ್ಯರು, ಅಪ್ಸರೆಯರು ಮತ್ತು ಯಕ್ಷರು—ಇವರ ವ್ಯಾಪಾರವೇನೆಂಬುದನ್ನು ತಿಳಿಸಿದಿರಿ. ಆದರೆ ಆದಿತ್ಯನ ಕೆಲಸವೇನೆಂಬುದನ್ನು ಮಾತ್ರ ಹೇಳಲಿಲ್ಲ (2-3). ಈ ಸಪ್ತಗಣಗಳೇ ಮಳೆ, ಚಳಿ, ತಾಪಗಳಿಗೆ ಕಾರಣರಾದ ಮೇಲೆ, ಸೂರ್ಯನಿಂದ ಮಳೆಯಾಗುತ್ತದೆ ಎಂದು ಹೇಳುವುದೇಕೆ? ಎಲ್ಲ ವ್ಯಾಪಾರವೂ ಸಪ್ತಗಣಗಳದ್ದೇ ಆದ ಮೇಲೆ 'ಈಗ ಸೂರ್ಯನು

**ವಿವಸ್ವಾನುದಿತೋ ಮಧ್ಯೇ ಯಾತ್ಯಸ್ತಮಿತಿ ಕಿಂ ಜನಃ।**
**ಬ್ರವೀತ್ಯೇತತ್ಸಮಂ ಕರ್ಮ ಯದಿ ಸಪ್ತಗಣಸ್ಯ ತತ್॥** 5

*ಶ್ರೀಪರಾಶರ ಉವಾಚ:*

**ಮೈತ್ರೇಯ ಶ್ರೂಯತಾಮೇತದ್ಯದ್ಭವಾನ್ಪರಿಪೃಚ್ಛತಿ।**
**ಯಥಾ ಸಪ್ತಗಣೇಽಪ್ಯೇಕಃ ಪ್ರಾಧಾನ್ಯೇನಾಧಿಕೋ ರವಿಃ॥** 6

**ಸರ್ವಶಕ್ತಿಃ ಪರಾ ವಿಷ್ಣೋರ್ಋಗ್ಯಜುಃಸಾಮಸಂಜ್ಞಿತಾ।**
**ಸೈಷಾ ತ್ರಯೀ ತಪತ್ಯಂಹೋ ಜಗತಶ್ಚ ಹಿನಸ್ತಿ ಯಾ॥** 7

**ಸೈಷಾ ವಿಷ್ಣುಃ ಸ್ಥಿತಃ ಸ್ಥಿತ್ಯಾಂ ಜಗತಃ ಪಾಲನೋದ್ಯತಃ।**
**ಋಗ್ಯಜುಃಸಾಮಭೂತೋಽಂತಃ ಸವಿತುರ್ದ್ವಿಜ ತಿಷ್ಠತಿ॥** 8

**ಮಾಸಿ ಮಾಸಿ ರವಿರ್ಯೋ ಯಸ್ತತ್ರ ತತ್ರ ಹಿ ಸಾ ಪರಾ।**
**ತ್ರಯೀಮಯೀ ವಿಷ್ಣುಶಕ್ತಿರವಸ್ಥಾನಂ ಕರೋತಿ ವೈ॥** 9

---

ಹುಟ್ಟಿದನು, ಆಕಾಶ ಮಧ್ಯದಲ್ಲಿದ್ದಾನೆ, ಈಗ ಅಸ್ತಂಗತನಾಗುವನು' ಎಂದು ಜನರು ಏಕೆ ಹೇಳುತ್ತಾರೆ?" ಎಂದು ಕೇಳಿದರು (4-5). ಅದಕ್ಕೆ ಪರಾಶರರು ಹೇಳಿದರು: ಮೈತ್ರೇಯ, ನೀನು ಪ್ರಶ್ನೆ ಮಾಡಿದುದಕ್ಕೆ ಉತ್ತರವನ್ನು ಕೇಳು. ಆ ಸಪ್ತಗಣ*ಗಳಲ್ಲಿ ಸೂರ್ಯನೇ ಪ್ರಧಾನನಾದವನು (6). ಋಗ್ಯಜುಃಸಾಮಗಳೆಂಬ ಹೆಸರುಳ್ಳ ವೇದತ್ರಯಿಯೆಂಬ ವಿಷ್ಣುವಿನ ಪರಾಶಕ್ತಿಯು (ಸೂರ್ಯನಲ್ಲಿದ್ದು) ಬೆಳಗುತ್ತಿದೆ. ಜಗತ್ತಿನ ಪಾಪವನ್ನು ಹೋಗಲಾಡಿಸಲು ಸಮರ್ಥವಾಗಿದೆ (7). ಋಗ್ಯಜುಃಸಾಮಸ್ವರೂಪನಾದ ವಿಷ್ಣುವೇ ಸ್ಥಿತಿ ಕಾಲದಲ್ಲಿ ಜಗತ್ತನ್ನು ಪಾಲಿಸಬೇಕೆಂದು, ಸೂರ್ಯ ಮಂಡಲದ ನಡುವೆ ಇರುತ್ತಾನೆ (8). ಪ್ರತಿಮಾಸದಲ್ಲಿಯೂ ಯಾವ ಯಾವ ಹೆಸರಿನ ಆದಿತ್ಯನಿರುವನೋ ಅವನಲ್ಲಿ ತ್ರಯೀರೂಪವಾದ ವಿಷ್ಣು ಶಕ್ತಿಯು ನೆಲೆಸಿರುತ್ತದೆ. ಪ್ರಾತಃಕಾಲದಲ್ಲಿ ಋಕ್ಕುಗಳೂ ಮಧ್ಯಾಹ್ನದಲ್ಲಿ

---

* ಹಿಂದೆ ಹೇಳಿದ ಸಪ್ತಗಣಗಳಲ್ಲಿ ಆದಿತ್ಯನು ಸೇರಿದ್ದಾನೆ. ವಾಲಖಿಲ್ಯರು ಸೇರಿಲ್ಲ. ಅವರನ್ನು ಆಮೇಲೆ ಸೇರಿಸಿ ಹೇಳಲಾಗಿದೆ.

**ಋಚಃ ಸ್ತುವಂತಿ ಪೂರ್ವಾಹ್ಣೇ ಮಧ್ಯಾಹ್ನೇಽಥ ಯಜೂಂಷಿ ವೈ।**
**ಬೃಹದ್ರಥಂತರಾದೀನಿ ಸಾಮಾನ್ಯಹ್ನಃ ಕ್ಷಯೇ ರವಿಮ್॥ 10**

**ಅಂಗಮೇಷಾ ತ್ರಯೀ ವಿಷ್ಣೋರೃಗ್ಯಜುಃಸಾಮಸಂಜ್ಞಿತಾ।**
**ವಿಷ್ಣುಶಕ್ತಿರವಸ್ಥಾನಂ ಸದಾದಿತ್ಯೇ ಕರೋತಿ ಸಾ॥ 11**

**ನ ಕೇವಲಂ ರವೇಃ ಶಕ್ತಿರ್ವೈಷ್ಣವೀ ಸಾ ತ್ರಯೀಮಯೀ।**
**ಬ್ರಹ್ಮಾಥ ಪುರುಷೋ ರುದ್ರಸ್ತ್ರಯಮೇತತ್ತ್ರಯೀಮಯಮ್॥ 12**

**ಸರ್ಗಾದೌ ಋಙ್ಮಯೋ ಬ್ರಹ್ಮಾ ಸ್ಥಿತೌ ವಿಷ್ಣುರ್ಯಜುರ್ಮಯಃ।**
**ರುದ್ರಃ ಸಾಮಮಯೋಽಂತಾಯ ತಸ್ಮಾತ್ತಸ್ಯಾಶುಚಿರ್ಧ್ವನಿಃ॥ 13**

**ಏವಂ ಸಾ ಸಾತ್ತ್ವಿಕೀ ಶಕ್ತಿರ್ವೈಷ್ಣವೀ ಯಾ ತ್ರಯೀಮಯೀ।**
**ಆತ್ಮಸಪ್ತಗಣಸ್ಥಂ ತಂ ಭಾಸ್ವಂತಮಧಿತಿಷ್ಠತಿ॥ 14**

---

ಯಜುಸ್ಸುಗಳೂ ಸಾಯಂಕಾಲದಲ್ಲಿ ಬೃಹದ್ರಥಂತರಾದಿಸಾಮಗಳೂ ಸೂರ್ಯನನ್ನು ಸ್ತುತಿಸುತ್ತವೆ (9-10). ಋಗ್ಯಜುಃಸಾಮಗಳೆಂಬ ಈ ವೇದತ್ರಯವು ವಿಷ್ಣುವಿನ ಒಂದು ಅಂಗವಾಗಿದ್ದು, ಸದಾ ಆದಿತ್ಯನಲ್ಲಿ ನೆಲೆಸಿರುತ್ತದೆ. ತ್ರಯೀಮಯವಾದ ಈ ವೈಷ್ಣವೀಶಕ್ತಿಯು ಸೂರ್ಯನಲ್ಲಿ ಮಾತ್ರ ನೆಲೆಸಿರುತ್ತದೆಯೆಂದಲ್ಲ. ಬ್ರಹ್ಮ ವಿಷ್ಣು ರುದ್ರ—ಈ ತ್ರಿಮೂರ್ತಿಗಳೂ ತ್ರಯೀಮಯ ಶಕ್ತಿಯೇ ಆಗಿದ್ದಾರೆ (11-12). ಸೃಷ್ಟಿಕಾಲದಲ್ಲಿ ಬ್ರಹ್ಮನು ಋಙ್ಮಯನಾಗಿರುತ್ತಾನೆ. ಸ್ಥಿತಿಕಾಲದಲ್ಲಿ ವಿಷ್ಣು ಯಜುರ್ಮಯನಾಗಿರುತ್ತಾನೆ. ಪ್ರಳಯಕಾಲದಲ್ಲಿ ರುದ್ರನು ಸಾಮಮಯನಾಗಿರುತ್ತಾನೆ. ಪ್ರಳಯಕ್ಕೆ ಸಂಬಂಧಿಸಿದ್ದರಿಂದ ಸಾಮಧ್ವನಿಯು ಅಶುಚಿ*ಯೆನಿಸಿದೆ (13). ಈ ಪ್ರಕಾರವಾಗಿ ತ್ರಯೀಮಯವಾದ ವಿಷ್ಣುವಿನ ಸಾತ್ತ್ವಿಕೀಶಕ್ತಿಯು ಸಪ್ತಗಣ ಮಧ್ಯಸ್ಥನಾದ ಆದಿತ್ಯನಲ್ಲಿ ಅತಿಶಯವಾಗಿ ನೆಲೆಸಿದೆ. ಈ

---

* 'ನ ಸಾಮಧ್ವನೌಋಗ್ಯಜುಷೀ' ಎಂದು ಗೌತಮಧರ್ಮಸೂತ್ರ. ಸಾಮಗಾನ ನಡೆಯುವಾಗ ಋಗ್ವೇದವನ್ನಾಗಲಿ ಯಜುರ್ವೇದವನ್ನಾಗಲಿ ಹೇಳಬಾರದು. ಈ ನಿಷೇಧ ಹೇಳುವುದಕ್ಕೋಸ್ಕರ ಸಾಮವೇದವು ಅಶುಚಿಯೆಂದು ಆರೋಪದಿಂದ ಕಲ್ಪಿಸಲಾಗಿದೆ. 'ವೇದಾನಾಂ ಸಾಮವೇದೋಽಸ್ಮಿ' ಎಂದು ಭಗವಂತನ ಗೀತಾವಚನವಿದೆ.

**ತಥಾ ಚಾಧಿಷ್ಠಿತಃ ಸೋಽಪಿ ಜಾಜ್ವಲೀತಿ ಸ್ವರಶ್ಮಿಭಿಃ।**
**ತಮಃ ಸಮಸ್ತಜಗತಾಂ ನಾಶಂ ನಯತಿ ಚಾಖಿಲಮ್॥ 15**

**ಸ್ತುವಂತಿ ಚೈನಂ ಮುನಯೋ ಗಂಧರ್ವೈರ್ಗೀಯತೇ ಪುರಃ।**
**ನೃತ್ಯಂತ್ಯೋಽಪ್ಸರಸೋ ಯಾಂತಿ ತಸ್ಯ ಚಾನು ನಿಶಾಚರಾಃ॥ 16**

**ವಹಂತಿ ಪನ್ನಗಾ ಯಕ್ಷೈಃ ಕ್ರಿಯತೇಽಭೀಷುಸಂಗ್ರಹಃ।**
**ವಾಲಖಿಲ್ಯಾಸ್ತಥೈವೈನಂ ಪರಿವಾರ್ಯ ಸಮಾಸತೇ॥ 17**

**ನೋದೇತಾ ನಾಸ್ತಮೇತಾ ಚ ಕದಾಚಿಚ್ಛಕ್ತಿರೂಪಧೃಕ್।**
**ವಿಷ್ಣುರ್ವಿಷ್ಣೋಃ ಪೃಥಕ್ ತಸ್ಯ ಗಣಸ್ಸಪ್ತವಿಧೋಽಪ್ಯಯಮ್॥ 18**

**ಸ್ತಂಭಸ್ಥದರ್ಪಣಸ್ಯೇವ ಯೋಽಯಮಾಸನ್ನತಾಂ ಗತಃ।**
**ಛಾಯಾದರ್ಶನಸಂಯೋಗಂ ಸ ತಂ ಪ್ರಾಪ್ನೋತ್ಯಥಾತ್ಮನಃ॥ 19**

---

ಶಕ್ತಿಯಿಂದ ವಿಶಿಷ್ಟನಾದ ಆದಿತ್ಯನು ತನ್ನ ಕಿರಣಗಳನ್ನು ಬೀರುತ್ತ ವಿಶೇಷವಾಗಿ ಪ್ರಜ್ವಲಿಸುತ್ತಾನೆ. ಜಗತ್ತಿನ ಎಲ್ಲ ಕತ್ತಲೆಯನ್ನೂ ಧ್ವಂಸ ಗೊಳಿಸುತ್ತಾನೆ (14-15). ಈತನನ್ನು ಋಷಿಗಳು ಸ್ತುತಿಸುತ್ತಾರೆ. ಈತನ ಎದುರಿಗೆ ಗಂಧರ್ವರು ಹಾಡುತ್ತ ಇರುತ್ತಾರೆ. ಅಪ್ಸರೆಯರು ನೃತ್ಯ ಮಾಡು ತ್ತಾರೆ. ರಾಕ್ಷಸರು ಹಿಮ್ಮೇಳದಲ್ಲಿ ಹೋಗುತ್ತಾರೆ. ಉರಗರು ರಥವನ್ನು ನಡೆಸಲು ಅಣಿ ಮಾಡುತ್ತಾರೆ. ಯಕ್ಷರು (ಕುದುರೆಗಳ) ಲಗಾಮನ್ನು ಹಿಡಿಯುತ್ತಾರೆ. ವಾಲಖಿಲ್ಯರು ಆದಿತ್ಯನ ಸುತ್ತಲೂ ಪರಿವಾರವಾಗಿ ಇರು ತ್ತಾರೆ (16-17). ವೇದತ್ರಯ ಶಕ್ತಿರೂಪವನ್ನು ಧರಿಸಿ (ಸೂರ್ಯಸ್ವರೂಪ ನಾಗಿರುವ) ಈ ವಿಷ್ಣು ಉದಿಸುವುದೂ ಇಲ್ಲ, ಅಸ್ತಂಗತನಾಗುವುದೂ ಇಲ್ಲ. ಮೇಲ್ಕಂಡ ಸಪ್ತವಿಧಗಣಗಳು ಆತನಿಗಿಂತ ಪೃಥಕ್ ಆಗಿ ಇದ್ದು ಸದಾ ಇರುತ್ತವೆ (18). ಒಂದು ಕಂಬದಲ್ಲಿ (Stand) ಇರುವ ಕನ್ನಡಿಗೆ ಸಮೀಪಕ್ಕೆ ಹೋದವನ ನೆರಳು ಆ ಕನ್ನಡಿಯಲ್ಲಿ ಹೇಗೆ ನಿಶ್ಚಲವಾಗಿ ಇದ್ದೇ ಇರು ವುದೋ ಹಾಗೆ ವೈಷ್ಣವೀ ಶಕ್ತಿಯೂ ಸೂರ್ಯಮಂಡಲದಲ್ಲಿ ನೆಲೆಸಿರುತ್ತದೆ (19). ಅದೇ ಪ್ರಕಾರ ಪ್ರತಿಯೊಂದು ಮಾಸದಲ್ಲಿಯೂ ರಥಸ್ಥನಾದ

**ಏವಂ ಸಾ ವೈಷ್ಣವೀ ಶಕ್ತಿರ್ನೈವಾಪೈತಿ ತತೋ ದ್ವಿಜ।**
**ಮಾಸಾನುಮಾಸಂ ಭಾಸ್ವಂತಮಧ್ಯಾಸ್ತೇ ತತ್ರ ಸಂಸ್ಥಿತಮ್॥ 20**

**ಪಿತೃದೇವ ಮನುಷ್ಯಾದೀನ್ ಸ ಸದಾಪ್ಯಾಯಯನ್ ಪ್ರಭುಃ।**
**ಪರಿವರ್ತತ್ಯಹೋರಾತ್ರಕಾರಣಂ ಸವಿತಾ ದ್ವಿಜ॥ 21**

**ಸೂರ್ಯರಶ್ಮಿಃ ಸುಷುಮ್ನಾ ಯಸ್ತರ್ಪಿತಸ್ತೇನ ಚಂದ್ರಮಾಃ।**
**ಕೃಷ್ಣಪಕ್ಷೇಽಮರೈಃ ಶಶ್ವತ್ ಪೀಯತೇ ವೈ ಸುಧಾಮಯಃ॥ 22**

**ಪೀತಂ ತಂ ದ್ವಿಕಲಂ ಸೋಮಂ ಕೃಷ್ಣಪಕ್ಷಕ್ಷಯೇ ದ್ವಿಜ।**
**ಪಿಬಂತಿ ಪಿತರಸ್ತೇಷಾಂ ಭಾಸ್ಕರಾತ್ತರ್ಪಣಂ ತಥಾ॥ 23**

**ಆದತ್ತೇ ರಶ್ಮಿಭಿರ್ಯಂತು ಕ್ಷಿತಿಸಂಸ್ಥಂ ರಸಂ ರವಿಃ।**
**ತಮುತ್ಸೃಜತಿ ಭೂತಾನಾಂ ಪುಷ್ಟ್ಯರ್ಥಂ ಸಸ್ಯವೃದ್ಧಯೇ॥ 24**

**ತೇನ ಪ್ರೀಣಾತ್ಯಶೇಷಾಣಿ ಭೂತಾನಿ ಭಗವಾನ್ ರವಿಃ।**
**ಪಿತೃದೇವ ಮನುಷ್ಯಾದೀನೇವಮಾಪ್ಯಾಯಯತ್ಯಸೌ॥ 25**

---

ಸೂರ್ಯನಲ್ಲಿ ವೈಷ್ಣವೀ ಶಕ್ತಿಯು ಪ್ರತಿಬಿಂಬಿತವಾಗಿರುತ್ತದೆ. ಮೈತ್ರೇಯ, ಪ್ರಭುವಾದ ಸೂರ್ಯನು ಪಿತೃ-ದೇವ-ಮನುಷ್ಯರನ್ನು ಆಪ್ಯಾಯನ ಗೊಳಿಸುತ್ತ ಅಹೋರಾತ್ರಗಳಲ್ಲಿ ಸದಾ ಸಂಚರಿಸುತ್ತ ಇರುತ್ತಾನೆ (20-21). ಸುಷುಮ್ನೆಯೆಂಬ ಸೂರ್ಯರಶ್ಮಿಯು (ಶುಕ್ಲಪಕ್ಷದಲ್ಲಿ) ಚಂದ್ರನನ್ನು ವರ್ಧಿಸುತ್ತದೆ. ಕೃಷ್ಣಪಕ್ಷದಲ್ಲಿ ಆ ಸುಧಾಮಯನಾದ ಚಂದ್ರನನ್ನು (ಒಂದೊಂದು ಕಲೆಯಾಗಿ) ದೇವತೆಗಳು ಕುಡಿಯುತ್ತಾರೆ (22). ಕಡೆಗೆ ಆತನಲ್ಲಿ ಎರಡು ಕಲೆಗಳು ಉಳಿದಾಗ ಕೃಷ್ಣಪಕ್ಷದಲ್ಲಿ (ಚತುರ್ದಶಿಯು ಕಳೆದ ಮೇಲೆ) ಎರಡು ಕಲೆಗಳುಳ್ಳ ಚಂದ್ರನನ್ನು ಪಿತೃಗಳು ಕುಡಿಯುತ್ತಾರೆ. ಹೀಗೆ ಸೂರ್ಯನಿಂದ ಪಿತೃಗಳು ಆಪ್ಯಾಯನಗೊಳ್ಳುತ್ತಾರೆ (23). ಸೂರ್ಯನು ತನ್ನ ರಶ್ಮಿಗಳಿಂದ ಭೂಮಿಯಲ್ಲಿರುವ ಜಲವನ್ನು ಹೀರಿ ಕೊಂಡು, ಪ್ರಾಣಿಗಳ ಪುಷ್ಟಿಗಾಗಿ ಸಸ್ಯಗಳು ಬೆಳೆಯಲೆಂದು ಆ ಜಲವನ್ನು ಮಳೆಯ ರೂಪದಲ್ಲಿ ವಿಸರ್ಜಿಸುತ್ತಾನೆ (24). ಆದರಿಂದ ಭಗವಾನ್ ಸೂರ್ಯದೇವನು ಸಮಸ್ತ ಪ್ರಾಣಿವರ್ಗವನ್ನೂ ಆಪ್ಯಾಯನಗೊಳಿಸುತ್ತಾನೆ. ಈ ಪ್ರಕಾರ ಸೂರ್ಯನಿಂದ ಪಿತೃ-ದೇವ-ಮನುಷ್ಯಾದಿಗಳ ಆಪ್ಯಾಯನವು

**ಪಕ್ಷತೃಪ್ತಿಂ ತು ದೇವಾನಾಂ ಪಿತೄಣಾಂ ಚೈವ ಮಾಸಿಕೀಮ್।**
**ಶಶ್ವತ್ತೃಪ್ತಿಂ ಚ ಮರ್ತ್ಯಾನಾಂ ಮೈತ್ರೇಯಾರ್ಕಃ ಪ್ರಯಚ್ಛತಿ॥ 26**

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ಏಕಾದಶೋಽಧ್ಯಾಯಃ

---

ನಡೆಯುತ್ತದೆ (25). ಮೈತ್ರೇಯ, ಈ ರೀತಿಯಲ್ಲಿ ಸೂರ್ಯನು ದೇವತೆಗಳಿಗೆ ಒಂದು ಪಕ್ಷಕಾಲದ ತೃಪ್ತಿಯನ್ನೂ ಪಿತೃಗಳಿಗೆ ತಿಂಗಳಿಗೊಮ್ಮೆ ಮಾಸಿಕ ತೃಪ್ತಿಯನ್ನೂ ಮಾನವರಿಗೆ ನಿತ್ಯತೃಪ್ತಿಯನ್ನೂ ಉಂಟು ಮಾಡುತ್ತಾನೆ (26).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಹನ್ನೊಂದನೆಯ ಅಧ್ಯಾಯ ಮುಗಿಯಿತು.



## ದ್ವಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ರಥಸ್ತ್ರಿಚಕ್ರಃ ಸೋಮಸ್ಯ ಕುಂದಾಭಾಸ್ತಸ್ಯ ವಾಜಿನಃ।**
**ವಾಮದಕ್ಷಿಣತೋ ಯುಕ್ತಾ ದಶ ತೇನ ಚರತ್ಯಸೌ॥ 1**

**ವೀಥ್ಯಾಶ್ರಯಾಣಿ ಋಕ್ಷಾಣಿ ಧ್ರುವಾಧಾರೇಣ ವೇಗಿನಾ।**
**ಹ್ರಾಸವೃದ್ಧಿಕ್ರಮಸ್ತಸ್ಯ ರಶ್ಮೀನಾಂ ಸವಿತುರ್ಯಥಾ॥ 2**

**ಅರ್ಕಸ್ಯೇವ ಹಿ ತಸ್ಯಾಶ್ವಾಃ ಸಕೃದ್ಯುಕ್ತಾ ವಹಂತಿ ತೇ।**
**ಕಲ್ಪಮೇಕಂ ಮುನಿಶ್ರೇಷ್ಠ ವಾರಿಗರ್ಭಸಮುದ್ಭವಾಃ॥ 3**

**ಕ್ಷೀಣಂ ಪೀತಂ ಸುರೈಃ ಸೋಮಮಾಪ್ಯಾಯಯತಿ ದೀಪ್ತಿಮಾನ್।**
**ಮೈತ್ರೇಯೈಕಕಲಂ ಸಂತಂ ರಶ್ಮಿನೈಕೇನ ಭಾಸ್ಕರಃ॥ 4**

---

## ಅಧ್ಯಾಯ 12

ನವಗ್ರಹಗಳ ವರ್ಣನೆ. ಲೋಕಾಂತರ ಸಂಬಂಧಿ ವಿಷಯಗಳ ಉಪಸಂಹಾರ. ಸರ್ವವೂ ವಿಷ್ಣುಮಯ.

ಪರಾಶರರು ಹೇಳಿದರು: ಚಂದ್ರನ ರಥಕ್ಕೆ ಮೂರು ಚಕ್ರಗಳುಂಟು. ರಥದ ಎಡಬಲಗಳಲ್ಲಿ ಮಲ್ಲಿಗೆಯ ಹೂವಿನಂತೆ ಬಿಳಿಯ ಬಣ್ಣದ ಹತ್ತು ಕುದುರೆಗಳನ್ನು ಹೂಡಲಾಗಿದೆ. ಆ ರಥದಲ್ಲಿ ಚಂದ್ರನು ಸಂಚರಿಸುತ್ತಾನೆ (1). ಧ್ರುವನಕ್ಷತ್ರದ ಆಧಾರದಿಂದ ನಿಂತಿರುವ ವೇಗಶಾಲಿಯಾದ ಆ ರಥದಲ್ಲಿ ಚಂದ್ರನು ನಾಗವೀಥಿಯಲ್ಲಿರುವ ಅಶ್ವಿನ್ಯಾದಿ ನಕ್ಷತ್ರಗಳನ್ನು ಸೂರ್ಯನಂತೆ ಕ್ರಮಿಸುತ್ತಾನೆ. ಹಾಗೆಯೇ ಕಿರಣಗಳಿಗೆ ಬಿಗಿತ ಮತ್ತು ಶೈಥಿಲ್ಯಗಳುಂಟು (2). ಮೈತ್ರೇಯ, ಜಲಮಧ್ಯದಿಂದ ಹುಟ್ಟಿರುವ ಚಂದ್ರನ ಅಶ್ವಗಳು, ಸೂರ್ಯನ ಅಶ್ವಗಳಂತೆ ಒಮ್ಮೆ ಹೂಡಲ್ಪಟ್ಟರೆ ಒಂದು ಕಲ್ಪ ಪರ್ಯಂತ ರಥವನ್ನೆಳೆಯುತ್ತವೆ. ದೇವತೆಗಳು ಕುಡಿದ ಮೇಲೆ ಏಕಕಲಾ

**ಕ್ರಮೇಣ ಯೇನ ಪೀತೋಽಸೌ ದೇವೈಸ್ತೇನ ನಿಶಾಕರಮ್।**
**ಆಪ್ಯಾಯಯತ್ಯನುದಿನಂ ಭಾಸ್ಕರೋ ವಾರಿತಸ್ಕರಃ॥ 5**

**ಸಂಭೃತಂ ಚಾರ್ಧಮಾಸೇನ ತತ್ಸೋಮಸ್ಥಂ ಸುಧಾಮೃತಮ್।**
**ಪಿಬಂತಿ ದೇವಾ ಮೈತ್ರೇಯ ಸುಧಾಹಾರಾ ಯತೋಽಮರಾಃ॥ 6**

**ತ್ರಯಸ್ತ್ರಿಂಶತ್ಸಹಸ್ರಾಣಿ ತ್ರಯಸ್ತ್ರಿಂಶಚ್ಛತಾನಿ ಚ।**
**ತ್ರಯಸ್ತ್ರಿಂಶತ್ತಥಾ ದೇವಾಃ ಪಿಬಂತಿ ಕ್ಷಣದಾಕರಮ್॥ 7**

**ಕಲಾದ್ವಯಾವಶಿಷ್ಟಸ್ತು ಪ್ರವಿಷ್ಟಃ ಸೂರ್ಯಮಂಡಲಮ್।**
**ಅಮಾಖ್ಯರಶ್ಮೌ ವಸತಿ ಅಮಾವಾಸ್ಯಾ ತತಃ ಸ್ಮೃತಾಃ॥ 8**

---

ಮಾತ್ರನಾಗಿ* ಉಳಿಯುವ ಚಂದ್ರನನ್ನು ದೀಪ್ತಿಶಾಲಿಯಾದ ಸೂರ್ಯನು ಮತ್ತೆ ತನ್ನ ಒಂದು ಕಿರಣದಿಂದ ವೃದ್ಧಿಗೊಳಿಸುತ್ತಾನೆ (3-4). ದೇವತೆಗಳು ಚಂದ್ರನನ್ನು ಯಾವ ಪ್ರಕಾರವಾಗಿ ಕುಡಿಯುವರೋ ಅದೇ ಪ್ರಕಾರ ದಿನಕ್ಕೆ ಒಂದೊಂದು ಕಲೆಯಂತೆ ಜಲಾಪಹಾರಿಯಾದ ಸೂರ್ಯನು ಆತನನ್ನು ಆಪ್ಯಾಯನಗೊಳಿಸುತ್ತಾನೆ (5). ಈ ಪ್ರಕಾರದಲ್ಲಿ, ಮೈತ್ರೇಯ, ಅರ್ಧ ಮಾಸದಲ್ಲಿ ತುಂಬಿಕೊಳ್ಳುವ ಚಂದ್ರನಲ್ಲಿರುವ ಸುಧಾಮೃತವನ್ನು ದೇವತೆಗಳು ಪುನಃ ಕುಡಿಯುತ್ತಾರೆ. ಏಕೆಂದರೆ, ದೇವತೆಗಳ ಆಹಾರ ಸುಧೆಯಾಗಿರುತ್ತದೆ (6). ಒಟ್ಟು ಮೂವತ್ತು ಮೂರು ಸಾವಿರದ ಮೂವತ್ತು ಮೂರು ನೂರ ಮೂವತ್ತು ಮೂರು (33333) ದೇವತೆಗಳು ಹೀಗೆ ಚಂದ್ರನ ಅಮೃತವನ್ನು ಪಾನಮಾಡುತ್ತಾರೆ (7). ಎರಡು ಕಲೆಗಳು ಮಾತ್ರ ಉಳಿದಾಗ ಚಂದ್ರನು ಸೂರ್ಯಮಂಡಲವನ್ನು ಪ್ರವೇಶಿಸಿ ಸೂರ್ಯನ 'ಅಮಾ' ಎಂಬ ಕಿರಣದಲ್ಲಿ ವಾಸ ಮಾಡುತ್ತಾನೆ. ಆದ್ದರಿಂದ ಆ ತಿಥಿಗೆ ಅಮಾವಾಸ್ಯೆಯೆಂದು§ ಹೆಸರು (8). ಅಂದು ಅಹೋರಾತ್ರ

* ಉಳಿದಿದ್ದ ಎರಡು ಕಲೆಗಳಲ್ಲಿ ಒಂದನ್ನು ಅಮಾವಾಸ್ಯೆಯ ದಿನ ಪಿತೃಗಳು ಕುಡಿಯುವುದರಿಂದ ಚಂದ್ರನಲ್ಲಿ ಏಕಕಲೆ ಉಳಿದಿರುತ್ತದೆ.

§ ಚಂದ್ರ ಸೂರ್ಯರು ಜೊತೆಗೆ ವಾಸಿಸುವುದರಿಂದ ಅಮಾವಸ್ಯೆ ಅಥವಾ ಅಮಾವಾಸ್ಯೆ ಎಂದೂ ವ್ಯುತ್ಪತ್ತಿ ಇದೆ. ನೋಡಿ: 'ಅಮಾ ಸಹ ವಸತೋಽಸ್ಯಾಂ ಚಂದ್ರಾರ್ಕಾವಮಾವಸ್ಯಾ' (ಸಿದ್ಧಾಂತಕೌಮುದೀ ಅಷ್ಟಾಧ್ಯಾಯೀ, ಸೂತ್ರ 3-1-122).

ಅಪ್ಸು ತಸ್ಮಿನ್ನಹೋರಾತ್ರೇ ಪೂರ್ವಂ ವಿಶತಿ ಚಂದ್ರಮಾಃ।
ತತೋ ವೀರುತ್ಸು ವಸತಿ ಪ್ರಯಾತ್ಯರ್ಕಂ ತತಃ ಕ್ರಮಾತ್॥ 9

ಛಿನತ್ತಿ ವೀರುಧೋ ಯಸ್ತು ವೀರುತ್ಸಂಸ್ಥೇ ನಿಶಾಕರೇ।
ಪತ್ರಂ ವಾ ಪಾತಯತ್ಯೇಕಂ ಬ್ರಹ್ಮಹತ್ಯಾಂ ಸ ವಿಂದತಿ॥ 10

ಸೋಮಂ ಪಂಚದಶೇ ಭಾಗೇ ಕಿಂಚಿಚ್ಛಿಷ್ಟೇ ಕಲಾತ್ಮಕೇ।
ಅಪರಾಹ್ಣೇ ಪಿತೃಗಣಾ ಜಘನ್ಯಂ ಪರ್ಯುಪಾಸತೇ॥ 11

ಪಿಬಂತಿ ದ್ವಿಕಲಾಕಾರಂ ಶಿಷ್ಟಾ ತಸ್ಯ ಕಲಾ ತು ಯಾ।
ಸುಧಾಮೃತಮಯೀ ಪುಣ್ಯಾ ತಾಮಿಂದೋಃ ಪಿತರೋ ಮುನೇ॥

ನಿಸ್ಸೃತಂ ತದಮಾವಾಸ್ಯಾಂ ಗಭಸ್ತಿಭ್ಯಃ ಸುಧಾಮೃತಮ್।
ಮಾಸಂ ತೃಪ್ತಿಮವಾಪ್ಯಾಗ್ರ್ಯಾಂ ಪಿತರಃ ಸಂತಿ ನಿರ್ವೃತಾಃ।
ಸೌಮ್ಯಾ ಬರ್ಹಿಷದಶ್ಚೈವ ಅಗ್ನಿಷ್ವಾತ್ತಾಶ್ಚ ತೇ ತ್ರಿಧಾ॥ 13

---

ಗಳಲ್ಲಿಯೂ ಚಂದ್ರನು ಮೊದಲು ನೀರನ್ನು ಪ್ರವೇಶಿಸಿ ಅನಂತರ ಗಿಡಮರ ಬಳ್ಳಿಗಳಲ್ಲಿದ್ದು ಆಮೇಲೆ ಸೂರ್ಯನನ್ನು ಸೇರುತ್ತಾನೆ. ಆದ್ದರಿಂದ ಆ ದಿನ ಯಾವಾತನು ಗಿಡ ಮರ ಬಳ್ಳಿಗಳನ್ನು ಕತ್ತರಿಸುತ್ತಾನೋ ಅಥವಾ ಒಂದು ಎಲೆಯನ್ನು ಉದುರಿಸುತ್ತಾನೋ ಅವನು ಬ್ರಹ್ಮಹತ್ಯಾ ದೋಷಕ್ಕೆ ಒಳಗಾಗುತ್ತಾನೆ (9-10). ಚಂದ್ರನ ಹದಿನೈದನೆಯ ಕಲಾಭಾಗವು ಸ್ವಲ್ಪ ಉಳಿದಿರುವಾಗ ಆ ಕ್ಷೀಣಚಂದ್ರನನ್ನು (ಅಮಾವಾಸ್ಯೆಯ) ಅಪರಾಹ್ಣದಲ್ಲಿ ಪಿತೃಗಣಗಳು ಮುತ್ತುತ್ತಾರೆ (11). ಎರಡು ಕಲೆಗಳು ಮಾತ್ರ ಉಳಿದಿರುವ ಚಂದ್ರನ ಸುಧಾಮಯವಾದ ಒಂದು ಪುಣ್ಯಕಲೆಯನ್ನು ಪಿತೃಗಳು ಕುಡಿದು ಬಿಡುತ್ತಾರೆ. ಹೀಗೆ ಅಮಾವಾಸ್ಯೆಯ ದಿನ ಚಂದ್ರರಶ್ಮಿಗಳಿಂದ ಹೊರಟ ಸುಧೆಯನ್ನು ಕುಡಿಯುವ ಪಿತೃದೇವತೆಗಳು ಒಂದು ತಿಂಗಳವರೆಗೆ ತೃಪ್ತರಾಗಿರುತ್ತಾರೆ. ಆ ಪಿತೃದೇವತೆಗಳು ಸೌಮ್ಯ, ಬರ್ಹಿಷದ, ಅಗ್ನಿಷ್ವಾತ್ತ ರೆಂದು ಮೂರು ಪ್ರಕಾರವಾಗಿದ್ದಾರೆ (12-13). ಹೀಗೆ ಚಂದ್ರನು ಶುಕ್ಲಪಕ್ಷ ದಲ್ಲಿ, (ಯಾಗದ್ವಾರಾ) ದೇವತೆಗಳನ್ನೂ, ಕೃಷ್ಣಪಕ್ಷದಲ್ಲಿ (ಶ್ರಾದ್ಧದ್ವಾರಾ)

**ಏವಂ ದೇವಾನ್ ಸಿತೇ ಪಕ್ಷೇ ಕೃಷ್ಣಪಕ್ಷೇ ತಥಾ ಪಿತೄನ್।**
**ವೀರುಧಶ್ಚಾಮೃತಮಯೈಃ ಶೀತೈರಪ್ಪರಮಾಣುಭಿಃ॥** 14

**ವೀರುಧೌಷಧಿನಿಷ್ಪತ್ತ್ಯಾ ಮನುಷ್ಯಪಶುಕೀಟಕಾನ್।**
**ಆಪ್ಯಾಯಯತಿ ಶೀತಾಂಶುಃ ಪ್ರಾಕಾಶ್ಯಾಹ್ಲಾದನೇನ ತು॥** 15

**ವಾಯ್ವಗ್ನಿದ್ರವ್ಯಸಂಭೂತೋ ರಥಶ್ಚಂದ್ರಸುತಸ್ಯ ಚ।**
**ಪಿಶಂಗೈಸ್ತುರಗೈರ್ಯುಕ್ತಃ ಸೋಽಷ್ಟಾಭಿರ್ವಾಯುವೇಗಿಭಿಃ॥** 16

**ಸವರೂಥಃ ಸಾನುಕರ್ಷೋ ಯುಕ್ತೋ ಭೂಸಂಭವೈರ್ಹಯೈಃ।**
**ಸೋಪಾಸಂಗಪತಾಕಸ್ತು ಶುಕ್ರಸ್ಯಾಪಿ ರಥೋ ಮಹಾನ್॥** 17

**ಅಷ್ಟಾಶ್ವಃ ಕಾಂಚನಃ ಶ್ರೀಮಾನ್ ಭೌಮಸ್ಯಾಪಿ ರಥೋ ಮಹಾನ್।**
**ಪದ್ಮರಾಗಾರುಣೈರಶ್ವೈಃ ಸಂಯುಕ್ತೋ ವಹ್ನಿಸಂಭವೈಃ॥** 18

**ಅಷ್ಟಾಭಿಃ ಪಾಂಡುರೈರ್ಯುಕ್ತೋ ವಾಜಿಭಿಃ ಕಾಂಚನೋ ರಥಃ।**
**ತಸ್ಮಿಂಸ್ತಿಷ್ಠತಿ ವರ್ಷಾಂತೇ ರಾಶೌ ರಾಶೌ ಬೃಹಸ್ಪತಿಃ॥** 19

---

ಪಿತೃಗಳನ್ನೂ ಆಪ್ಯಾಯನಗೊಳಿಸುತ್ತಾನೆ. ಅಮೃತಮಯವೂ ಶೀತಲವೂ ಆದ ಜಲಕಣಗಳಿಂದ ಬಳ್ಳಿ ಸಸ್ಯ ಮೊದಲಾದವನ್ನು ಉತ್ಪಾದಿಸುವುದರಿಂದಲೂ ಪ್ರಕಾಶ ಸಂತೋಷಗಳನ್ನುಂಟುಮಾಡುವುದರಿಂದಲೂ ಮನುಷ್ಯ ಪಶು ಕೀಟಗಳನ್ನೂ ಸಹ ಆಪ್ಯಾಯನಗೊಳಿಸುತ್ತಾನೆ (14-15). ಚಂದ್ರಸುತನಾದ ಬುಧನ ರಥವು ವಾಯು ಮತ್ತು ಅಗ್ನಿಮಯದ್ರವ್ಯಗಳಿಂದ ರಚಿತವಾಗಿದೆ. ಗೋರೋಚನ ಬಣ್ಣದ ವಾಯುವೇಗವುಳ್ಳ ಎಂಟು ಕುದುರೆಗಳನ್ನು ಅದಕ್ಕೆ ಹೂಡಲಾಗಿದೆ. ರಥದ ರಕ್ಷಣಾರ್ಥವಾದ ಲೋಹದ ಆವರಣದಿಂದಲೂ ಮೂಕಿಮರದಿಂದಲೂ ಕೂಡಿ, ಬತ್ತಳಿಕೆ ಪತಾಕೆಗಳಿಂದ ಯುಕ್ತವಾಗಿ, ಭೂದೇವಿಯಿಂದ ಜನಿಸಿದ ಕುದುರೆಗಳಿಂದ ಯುಕ್ತವಾದ ಮಹಾರಥವು ಶುಕ್ರನಿಗಿದೆ (16-17). ಕುಜನ ಮಹಾರಥವು ಎಂಟು ಕುದುರೆಗಳಿಂದ ಯುಕ್ತವಾಗಿದ್ದು ಸುವರ್ಣಮಯವಾಗಿ ಶೋಭಿಸುತ್ತದೆ. ಆ ರಥದ ಕುದುರೆಗಳು ಅಗ್ನಿಜನ್ಯಗಳಾಗಿದ್ದು ಪದ್ಮರಾಗದಂತೆ ಕೆಂಪಾಗಿವೆ (18). ಬಿಳಿಯ ಬಣ್ಣದ ಎಂಟು ಅಶ್ವಗಳನ್ನು ಹೂಡಿದ ಸುವರ್ಣರಥವು

**ಆಕಾಶಸಂಭವೈರಶ್ವೈಃ ಶಬಲೈಃ ಸ್ಯಂದನಂ ಯುತಮ್।**
**ತಮಾರುಹ್ಯ ಶನೈರ್ಯಾತಿ ಮಂದಗಾಮೀ ಶನೈಶ್ಚರಃ॥ 20**

**ಸ್ವರ್ಭಾನೋಸ್ತುರಗಾ ಹ್ಯಷ್ಟೌ ಭೃಂಗಾಭಾ ಧೂಸರಂ ರಥಮ್।**
**ಸಕೃದ್ಯುಕ್ತಾಸ್ತು ಮೈತ್ರೇಯ ವಹಂತ್ಯವಿರತಂ ಸದಾ॥ 21**

**ಆದಿತ್ಯಾನ್ನಿಸ್ಸೃತೋ ರಾಹುಃ ಸೋಮಂ ಗಚ್ಛತಿ ಪರ್ವಸು।**
**ಆದಿತ್ಯಮೇತಿ ಸೋಮಾಚ್ಚ ಪುನಃ ಸೌರೇಷು ಪರ್ವಸು॥ 22**

**ತಥಾ ಕೇತುರಥಸ್ಯಾಶ್ವಾ ಅಪ್ಯಷ್ಟೌ ವಾತರಂಹಸಃ।**
**ಪಲಾಲಧೂಮವರ್ಣಾಭಾ ಲಾಕ್ಷಾರಸನಿಭಾರುಣಾಃ॥ 23**

---

ಬೃಹಸ್ಪತಿಗಿದೆ. ವರ್ಷಾಂತದಲ್ಲಿ ಬೃಹಸ್ಪತಿಯು ಆ ರಥದಲ್ಲಿ ಕುಳಿತು ಬೇರೆ ಬೇರೆ ರಾಶಿಗಳಲ್ಲಿ ಉಪಸ್ಥಿತನಾಗುತ್ತಾನೆ (19). ಆಕಾಶಸಂಭೂತಗಳೂ ಚಿತ್ರವರ್ಣದವೂ ಆದ ಅಶ್ವಗಳಿಂದ ಯುಕ್ತವಾದ ರಥದಲ್ಲಿ ಕುಳಿತು ಮಂದಗಾಮಿಯಾದ ಶನೈಶ್ಚರನು ಮೆಲ್ಲಗೆ ಪ್ರಯಾಣ ಮಾಡುತ್ತಾನೆ (20). ರಾಹುವಿನ ಕುದುರೆಗಳು ಎಂಟು. ಅವು ದುಂಬಿಗಳಂತೆ ಕಪ್ಪು. ರಥವು ಮಾಸಲು ಕಪ್ಪು. ಮೈತ್ರೇಯ, ಒಮ್ಮೆ ಹೂಡಿದ ಆ ಕುದುರೆಗಳು ನಿರಂತರ ವಾಗಿ ಚಲಿಸುತ್ತ ಇರುತ್ತವೆ (21). ಈ ರಾಹು ಪೂರ್ಣಿಮೆಗಳಲ್ಲಿ ಸೂರ್ಯ ನಿಂದ ಹೊರಟು ಚಂದ್ರನ ಬಳಿಗೆ ಹೋಗುತ್ತಾನೆ. ಸೌರಪರ್ವಗಳಲ್ಲಿ ಎಂದರೆ ಅಮಾವಾಸ್ಯೆಗಳಲ್ಲಿ ಆತನು ಚಂದ್ರನಿಂದ ಹೊರಟು ಸೂರ್ಯನ ಬಳಿಗೆ ಹೋಗುತ್ತಾನೆ* (22). ಕೇತುವಿಗೆ ವಾಯುವೇಗವುಳ್ಳ ಎಂಟು ಅಶ್ವಗಳಿವೆ. ಅವುಗಳಲ್ಲಿ ಕೆಲವು ಹೊಟ್ಟುಹುಲ್ಲಿನಂತೆ ಮಾಸಲು ಕಪ್ಪಾಗಿಯೂ ಕೆಲವು ಲಾಕ್ಷಾರಸದಂತೆ ಕೆಂಪಾಗಿಯೂ ಇವೆ (23). ಮೈತ್ರೇಯ, ಈ ರೀತಿಯಲ್ಲಿ ಗ್ರಹಗಳ ಒಂಬತ್ತು ರಥಗಳ ವಿಷಯವನ್ನು

---

* ಭೂಮಿಯ ವರ್ತುಲಾಕಾರದ ನೆರಳು ರಾಹುವೆಂದು ಮತ್ಸ್ಯ, ಲಿಂಗ ಮತ್ತು ವಾಯುಪುರಾಣಗಳಲ್ಲಿ ಹೇಳಿದೆ: 'ಉದ್ಧೃತ್ಯ ಪಾರ್ಥಿವೀಂ ಛಾಯಾಂ ನಿರ್ಮಿತಾಂ ಮಂಡಲಾಕೃತಿಂ'.

**ಏತೇ ಮಯಾ ಗ್ರಹಾಣಾಂ ವೈ ತವಾಖ್ಯಾತಾ ರಥಾ ನವ।**
**ಸರ್ವೇ ಧ್ರುವೇ ಮಹಾಭಾಗ ಪ್ರಬದ್ಧಾ ವಾಯುರಶ್ಮಿಭಿಃ॥** 24

**ಗ್ರಹರ್ಕ್ಷತಾರಾಧಿಷ್ಣ್ಯಾನಿ ಧ್ರುವೇ ಬದ್ಧಾನ್ಯಶೇಷತಃ।**
**ಭ್ರಮಂತ್ಯುಚಿತಚಾರೇಣ ಮೈತ್ರೇಯಾನಿಲರಶ್ಮಿಭಿಃ॥** 25

**ಯಾವಂತ್ಯಶ್ಚೈವ ತಾರಾಸ್ತಾಸ್ತಾವಂತೋ ವಾತರಶ್ಮಯಃ।**
**ಸರ್ವೇ ಧ್ರುವೇ ನಿಬದ್ಧಾಸ್ತೇ ಭ್ರಮಂತೋ ಭ್ರಾಮಯಂತಿ ತಮ್॥** 26

**ತೈಲಾಪೀಡಾ ಯಥಾ ಚಕ್ರಂ ಭ್ರಮಂತೋ ಭ್ರಾಮಯಂತಿ ವೈ।**
**ತಥಾ ಭ್ರಮಂತಿ ಜ್ಯೋತೀಂಷಿ ವಾತವಿದ್ಧಾನಿ ಸರ್ವಶಃ॥** 27

**ಅಲಾತಚಕ್ರವದ್ಯಾಂತಿ ವಾತಚಕ್ರೇರಿತಾನಿ ತು।**
**ಯಸ್ಮಾಜ್ಜ್ಯೋತೀಂಷಿ ವಹತಿ ಪ್ರವಹಸ್ತೇನ ಸ ಸ್ಮೃತಃ॥** 28

**ಶಿಶುಮಾರಸ್ತು ಯಃ ಪ್ರೋಕ್ತಃ ಸ ಧ್ರುವೋ ಯತ್ರ ತಿಷ್ಠತಿ।**
**ಸನ್ನಿವೇಶಂ ಚ ತಸ್ಯಾಪಿ ಶೃಣುಷ್ವ ಮುನಿಸತ್ತಮ॥** 29

---

ನಾನು ನಿನಗೆ ಹೇಳಿದ್ದೇನೆ. ಇವೆಲ್ಲವೂ ವಾಯುರಶ್ಮಿಗಳಿಂದ ಧ್ರುವನಕ್ಷತ್ರದಲ್ಲಿ ನಿಬದ್ಧವಾಗಿವೆ (24). ಮೈತ್ರೇಯ, ಸಮಸ್ತ ಗ್ರಹಗಳೂ ಅಶ್ವಿನ್ಯಾದಿ ನಕ್ಷತ್ರಗಳೂ ತಾರೆಗಳೂ ವಾಯುರಶ್ಮಿಗಳಿಂದ ಧ್ರುವನಲ್ಲಿ ಬಂಧಿಸಲ್ಪಟ್ಟು ತಮಗೆ ಉಚಿತವಾದ ಗತಿಯಲ್ಲಿ ಸುತ್ತುತ್ತಿವೆ (25). ಈ ಬಗೆಯಲ್ಲಿ ಎಷ್ಟು ತಾರಾಗಣಗಳಿವೆಯೋ ಅಷ್ಟು ವಾಯುರಶ್ಮಿಗಳಿವೆ. ಅವೆಲ್ಲವೂ ಧ್ರುವನಲ್ಲಿ ನಿಬದ್ಧವಾಗಿದ್ದು ಸ್ವಯಂ ತಿರುಗುತ್ತ ಧ್ರುವನನ್ನೂ ತಿರುಗಿಸುತ್ತವೆ (26). ಎಣ್ಣೆಗಾಣ ತಿರುಗಿಸತಕ್ಕವರು ಸ್ವತಃ ತಾವೂ ತಿರುಗುತ್ತ ಗಾಣದ ಚಕ್ರಗಳನ್ನು ಹೇಗೆ ತಿರುಗಿಸುತ್ತಾರೋ, ಹಾಗೆ ತಾರಾದಿಜ್ಯೋತಿಗಳು ವಾತರಶ್ಮಿಗಳಿಂದ ಬಂಧಿಸಲ್ಪಟ್ಟು ತಿರುಗುತ್ತವೆ (27). ವಾಯುಚಕ್ರದಿಂದ ತಳ್ಳಲ್ಪಡುವ ಜ್ಯೋತಿಗಳು ಕೊಳ್ಳಿಯ ಚಕ್ರದಂತೆ ಸುತ್ತುತ್ತವೆಯಾದ್ದರಿಂದ ಆ ವಾಯುವಿಗೆ ಪ್ರವಹವೆಂದು ಹೆಸರು (28). ಮೈತ್ರೇಯ, ಧ್ರುವನು ನೆಲೆಸಿರುವ ಶಿಶುಮಾರ ಚಕ್ರದ ವಿಷಯವನ್ನು ಹಿಂದೆ ಹೇಳಿದೆನಷ್ಟೆ; ಶಿಶುಮಾರದ ಸಂನಿವೇಶವೇನೆಂಬುದನ್ನು ಆಲಿಸು (29). ಯಾವ ರಾತ್ರಿ

ಯದಹ್ನಾ ಕುರುತೇ ಪಾಪಂ ತಂ ದೃಷ್ಟ್ವಾ ನಿಶಿಮುಚ್ಯತೇ।
ಯಾವಂತ್ಯಶ್ಚೈವ ತಾರಾಸ್ತಾಃ ಶಿಶುಮಾರಾಶ್ರಿತಾ ದಿವಿ॥ 30

ತಾವಂತ್ಯೇವ ತು ವರ್ಷಾಣಿ ಜೀವತ್ಯಭ್ಯಧಿಕಾನಿ ಚ।
ಉತ್ತಾನಪಾದಸ್ತಸ್ಯಾಥೋ ವಿಜ್ಞೇಯೋ ಹ್ಯುತ್ತರೋ ಹನುಃ॥ 31

ಯಜ್ಞೋಽಧರಶ್ಚ ವಿಜ್ಞೇಯೋ ಧರ್ಮೋ ಮೂರ್ಧಾನಮಾಶ್ರಿತಃ।
ಹೃದಿ ನಾರಾಯಣಾಶ್ಚಾಸ್ತೇ ಅಶ್ವಿನೌ ಪೂರ್ವಪಾದಯೋಃ॥ 32

ವರುಣಶ್ಚಾರ್ಯಮಾ ಚೈವ ಪಶ್ಚಿಮೇ ತಸ್ಯ ಸಕ್ಥಿನೀ।
ಶಿಶ್ನಃ ಸಂವತ್ಸರಸ್ತಸ್ಯ ಮಿತ್ರೋಽಪಾನಂ ಸಮಾಶ್ರಿತಃ॥ 33

ಪುಚ್ಛೇಽಗ್ನಿಶ್ಚ ಮಹೇಂದ್ರಶ್ಚ ಕಶ್ಯಪೋಽಥ ತತೋ ಧ್ರುವಃ।
ತಾರಕಾ ಶಿಶುಮಾರಸ್ಯ ನಾಸ್ತಮೇತಿ ಚತುಷ್ಟಯಮ್॥ 34

ಇತ್ಯೇಷ ಸನ್ನಿವೇಶೋಽಯಂ ಪೃಥಿವ್ಯಾ ಜ್ಯೋತಿಷಾಂ ತಥಾ।
ದ್ವೀಪಾನಾಮುದಧೀನಾಂ ಚ ಪರ್ವತಾನಾಂ ಚ ಕೀರ್ತಿತಃ॥ 35

---

ಮಾನವನು ಶಿಶುಮಾರವನ್ನು ನೋಡುತ್ತಾನೋ ಅಂದಿನ ಹಗಲು ಆತನು ಮಾಡಿದ ಪಾಪದಿಂದ ಮುಕ್ತನಾಗುತ್ತಾನೆ. ಗಗನದಲ್ಲಿ ಎಷ್ಟು ತಾರೆಗಳಿವೆಯೋ ಅವೆಲ್ಲವೂ ಶಿಶುಮಾರವನ್ನು ಆಶ್ರಯಿಸಿಕೊಂಡಿವೆಯಷ್ಟೆ (30). ಆ ತಾರೆಗಳಷ್ಟು ದೀರ್ಘಕಾಲ ಆ ಮಾನವನು ಜೀವಿಸುತ್ತಾನೆ. ಉತ್ತಾನಪಾದ ನಕ್ಷತ್ರವು ಶಿಶುಮಾರದ ಮೇಲ್ದವಡೆ ಎಂದು ತಿಳಿಯಬೇಕು. ಯಜ್ಞನಕ್ಷತ್ರವು ಕೆಳದವಡೆ. ಧರ್ಮನಕ್ಷತ್ರವು ಶಿಶುಮಾರದ ಶಿರಸ್ಸನ್ನು ಆಶ್ರಯಿಸಿ ನಿಂತಿದೆ. ಹೃದಯದಲ್ಲಿ ನಾರಾಯಣನಿದ್ದಾನೆ. ಶಿಶುಮಾರದ ಎದುರಿನ ಎರಡು ಪಾದಗಳಲ್ಲಿ ಅಶ್ವಿನೀ ದೇವತೆಗಳಿದ್ದಾರೆ (31-32). ವರುಣ ಮತ್ತು ಅರ್ಯಮರು ಅದರ ಹಿಂಗಾಲಿನ ತೊಡೆಗಳು. ಸಂವತ್ಸರವು ಅದರ ಶಿಶ್ನ. ಮಿತ್ರನು ಅದರ ಅಪಾನ ದೇಶದಲ್ಲಿದ್ದಾನೆ. ಶಿಶುಮಾರದ ಪುಚ್ಛ ಭಾಗದಲ್ಲಿ ಅಗ್ನಿ, ಮಹೇಂದ್ರ, ಕಶ್ಯಪ ಮತ್ತು ಧ್ರುವ—ಎಂಬ ತಾರೆಗಳಿವೆ. ಈ ನಾಲ್ಕು ತಾರೆಗಳು ಯಾವಾಗಲೂ ಅಸ್ತವಾಗುವುದಿಲ್ಲ (33-34). ಈ ಪ್ರಕಾರವಾಗಿ ಪೃಥ್ವಿ, ಜ್ಯೋತಿಗಳು,

**ವರ್ಷಾಣಾಂ ಚ ನದೀನಾಂ ಚ ಯೇ ಚ ತೇಷು ವಸಂತಿ ವೈ।**
**ತೇಷಾಂ ಸ್ವರೂಪಮಾಖ್ಯಾತಂ ಸಂಕ್ಷೇಪಃ ಶ್ರೂಯತಾಂ ಪುನಃ॥ 36**

**ಯದಂಬು ವೈಷ್ಣವಃ ಕಾಯಸ್ತತೋ ವಿಪ್ರ ವಸುಂಧರಾ।**
**ಪದ್ಮಾಕಾರಾ ಸಮುದ್ಭೂತಾ ಪರ್ವತಾಬ್ಧ್ಯಾದಿ ಸಂಯುತಾ॥ 37**

**ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣು-**
**ರ್ವನಾನಿ ವಿಷ್ಣುರ್ಗಿರಯೋ ದಿಶಶ್ಚ।**
**ನದ್ಯಃ ಸಮುದ್ರಾಶ್ಚ ಸ ಏವ ಸರ್ವಂ**
**ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ॥ 38**

**ಜ್ಞಾನಸ್ವರೂಪೋ ಭಗವಾನ್ಯತೋಽಸಾ-**
**ವಶೇಷಮೂರ್ತಿರ್ನ ತು ವಸ್ತುಭೂತಃ।**
**ತತೋ ಹಿ ಶೈಲಾಬ್ಧಿಧರಾದಿಭೇದಾಂ-**
**ಜಾನೀಹಿ ವಿಜ್ಞಾನವಿಜೃಂಭಿತಾನಿ॥ 39**

---

ದ್ವೀಪಗಳು, ಸಮುದ್ರಗಳು, ಪರ್ವತಗಳು, ವರ್ಷಗಳು, ನದಿಗಳು ಮತ್ತು ಅಲ್ಲಲ್ಲಿ ವಾಸಮಾಡತಕ್ಕ ಜೀವಿಗಳು—ಇವೆಲ್ಲವುಗಳ ಸ್ವರೂಪವನ್ನು ಹೇಳಲಾಯಿತು. ಮೈತ್ರೇಯ, ಒಟ್ಟಿನಲ್ಲಿ ಇದರ ಸಂಕ್ಷೇಪವೇನೆಂಬುದನ್ನು ಕೇಳು (35-36). ಭಗವಾನ್ ವಿಷ್ಣುವಿನ ಶರೀರವಾದ ಯಾವ ಜಲ ಉಂಟೋ, ಅದರಿಂದ ಪರ್ವತ ಸಮುದ್ರಸಹಿತವಾದ ಕಮಲಾಕೃತಿಯ ಈ ಪೃಥ್ವಿ ಹುಟ್ಟಿದೆ. ಮೈತ್ರೇಯ, ಜ್ಯೋತಿಗಳೆಲ್ಲವೂ ವಿಷ್ಣು; ಲೋಕಗಳೆಲ್ಲವೂ ವಿಷ್ಣು; ವನಗಳೂ ವಿಷ್ಣು; ಗಿರಿಗಳೂ ದಿಕ್ಕುಗಳೂ ವಿಷ್ಣುವೇ. ನದಿಗಳೂ ಸಮುದ್ರಗಳೂ ಎಲ್ಲವೂ ಆತನೇ. ಇರುವುದೂ, ಈಗ ಇಲ್ಲದಿರುವುದೂ ಎಲ್ಲವೂ ವಿಷ್ಣುವೇ (37-38). ಭಗವಾನ್ ವಿಷ್ಣು ಜ್ಞಾನಸ್ವರೂಪನಾಗಿದ್ದಾನೆ. ಆದ್ದರಿಂದ ಆತನು ಸರ್ವವಸ್ತುಗಳ ರೂಪವನ್ನು ತಳೆದಿದ್ದಾನೆ ಅಷ್ಟೆ. ವಿಷ್ಣುವು ಪರಿಚ್ಛಿನ್ನವಾದ ಒಂದು ವಸ್ತುವಲ್ಲ. ಆದ್ದರಿಂದ, ಬೆಟ್ಟ ಕಡಲು ಭೂಮಿ ಮೊದಲಾದ ನಾನಾ ಭೇದಗಳೆಲ್ಲವೂ

ಯದಾ ತು ಶುದ್ಧಂ ನಿಜರೂಪಿ ಸರ್ವಂ
ಕರ್ಮಕ್ಷಯೇ ಜ್ಞಾನಮಪಾಸ್ತದೋಷಮ್।
ತದಾ ಹಿ ಸಂಕಲ್ಪತರೋಃ ಫಲಾನಿ।
ಭವಂತಿ ನೋ ವಸ್ತುಷು ವಸ್ತುಭೇದಾಃ॥ 40

ವಸ್ತ್ವಸ್ತಿ ಕಿಂ ಕುತ್ರ ಚಿದಾದಿಮಧ್ಯ-
ಪರ್ಯಂತಹೀನಂ ಸತತೈಕರೂಪಮ್।
ಯಚ್ಚಾನ್ಯಥಾತ್ವಂ ದ್ವಿಜ ಯಾತಿ ಭೂಯೋ
ನ ತತ್ತಥಾ ತತ್ರ ಕುತೋ ಹಿ ತತ್ತ್ವಮ್॥ 41

ಮಹೀ ಘಟತ್ವಂ ಘಟತಃ ಕಪಾಲಿಕಾ
ಕಪಾಲಿಕಾ ಚೂರ್ಣರಜಸ್ತತೋಽಣುಃ।
ಜನೈಃ ಸ್ವಕರ್ಮಸ್ತಿಮಿತಾತ್ಮನಿಶ್ಚಯೈ-
ರಾಲಕ್ಷ್ಯತೇ ಬ್ರೂಹಿ ಕಿಮತ್ರ ವಸ್ತು॥ 42

---

ವಿಜ್ಞಾನದ ವಿಜೃಂಭಣೆಗಳು* ಮಾತ್ರ ಎಂದು ತಿಳಿ (39). ಕರ್ಮಕ್ಷಯವಾದ ಮೇಲೆ ಯಾವಾಗ ಪರಿಶುದ್ಧವೂ ಸತ್ಯವೂ ಸರ್ವಾತ್ಮಕವೂ ದೋಷರಹಿತವೂ ಆದ ಜ್ಞಾನ ಉದಯಿಸುವುದೋ, ಆಗ ಸಂಕಲ್ಪವೃಕ್ಷದ ಫಲಗಳಾದ ಈ ಪದಾರ್ಥಭೇದಗಳು ಯಾವುವೂ ಇರುವುದಿಲ್ಲ (40). ಮೈತ್ರೇಯ, ಆದಿ ಮಧ್ಯ ಅಂತಗಳಿಲ್ಲದೆ ಸತತವಾಗಿ ಏಕರೂಪವಾಗಿರುವ ಯಾವುದಾದರೊಂದು ಪದಾರ್ಥವು ಈ ಜಗತ್ತಿನಲ್ಲಿ ಎಲ್ಲದರೂ ಇದೆಯೇನು? ಯಾವುದು ಮೊದಲಿನಂತಿರದೆ ಪರಿಣಾಮ ಹೊಂದುತ್ತದೆಯೋ, ಆಮೇಲೆ ಇರುವುದೇ ಇಲ್ಲವೋ ಅದರಲ್ಲಿ ವಾಸ್ತವಿಕವಾದ ಸತ್ಯವೆಲ್ಲಿ ಇದ್ದೀತು? (41). ನೋಡು, ಮೊದಲು ಮಣ್ಣು, ಆಮೇಲೆ ಗಡಿಗೆ, ಗಡಿಗೆಯಿಂದ ಕಪಾಲ, ಕಪಾಲ ಒಡೆದ ಪುಡಿ, ಪುಡಿಯಿಂದ ಪರಮಾಣು, ಇದೆಲ್ಲವೂ ತಮ್ಮ ಕರ್ಮಬಂಧಗಳಿಗೆ ಒಳಗಾಗಿ ಯಾರಿಗೆ

---

* ವಿಜ್ಞಾನದ ವಿಜೃಂಭಣೆಗಳು = ಜ್ಞಾನಸ್ವರೂಪನಾದ ಭಗವಂತನ ಮಾಯಾ ಲೀಲೆಗಳು, ಅಜ್ಞಾನಕಲ್ಪಿತಗಳೆಂದು ತಾತ್ಪರ್ಯ.

**ತಸ್ಮಾನ್ನ ವಿಜ್ಞಾನಮೃತೇಽಸ್ತಿ ಕಿಂಚಿತ್**
**ಕ್ವಚಿತ್ಕದಾಚಿದ್‌ದ್ವಿಜ ವಸ್ತುಜಾತಮ್ ।**
**ವಿಜ್ಞಾನಮೇಕಂ ನಿಜಕರ್ಮಭೇದ-**
**ವಿಭಿನ್ನಚಿತ್ತೈರ್ಬಹುಧಾಭ್ಯುಪೇತಮ್ ॥** 43

**ಜ್ಞಾನಂ ವಿಶುದ್ಧಂ ವಿಮಲಂ ವಿಶೋಕ-**
**ಮಶೇಷಲೋಭಾದಿನಿರಸ್ತಸಂಗಮ್ ।**
**ಏವಂ ಸದೇಕಂ ಪರಮಃ ಪರೇಶಃ**
**ಸ ವಾಸುದೇವೋ ನ ಯತೋಽನ್ಯದಸ್ತಿ॥** 44

**ಸದ್ಭಾವ ಏವಂ ಭವತೋ ಮಯೋಕ್ತೋ**
**ಜ್ಞಾನಂ ಯಥಾ ಸತ್ಯಮಸತ್ಯಮನ್ಯತ್ ।**
**ಏತತ್ತು ಯತ್ ಸಂವ್ಯವಹಾರಭೂತಮ್ ।**
**ತತ್ರಾಪಿ ಚೋಕ್ತಂ ಭುವನಾಶ್ರಿತಂ ತೇ ॥** 45

---

ಆತ್ಮಜ್ಞಾನ ಉಂಟಾಗಿಲ್ಲವೋ ಆ ಜನರಿಗೆ ಗೋಚರಿಸುತ್ತದೆ. ಮಣ್ಣು ಮೊದಲಾದ ಈ ವಸ್ತುಗಳಲ್ಲಿ ಪರಮಾರ್ಥವಾದ ವಸ್ತು ಯಾವುದು? ಹೇಳು (42). ಆದ್ದರಿಂದ, ಮೈತ್ರೇಯ, ವಿಜ್ಞಾನದ ಹೊರತಾಗಿ ಇನ್ನೊಂದು ವಸ್ತು ಎಲ್ಲಿಯೂ ಯಾವಾಗಲೂ ಇಲ್ಲ. ತಮ್ಮ ತಮ್ಮ ಕರ್ಮಾನುಗುಣವಾಗಿ ಚಿತ್ತಭೇದವುಳ್ಳ ಜನರಿಂದ ಒಂದೇ ವಿಜ್ಞಾನವು (ಘಟ, ವೃಕ್ಷ, ಮೃಗ, ಮನುಷ್ಯ) ಎಂದು ನಾನಾ ಪ್ರಕಾರವಾಗಿ ತಿಳಿಯಲ್ಪಡುತ್ತಿದೆ (43). ಈ ವಿಜ್ಞಾನವು ಪರಿಶುದ್ಧವೂ ನಿರ್ಮಲವೂ ಶೋಕರಹಿತವೂ ಆದದ್ದು. ಲೋಭಾದಿ ದೋಷರಹಿತವಾಗಿ ನಿಃಸಂಗವಾದದ್ದು. ಹೀಗೆ ಸದ್ರೂಪವೂ ಏಕವೂ ಆದ ವಿಜ್ಞಾನವೇ ಪರಮನೂ ಪರೇಶನೂ ಆದ ವಾಸುದೇವ ಎನ್ನಿಸಿಕೊಂಡಿದೆ. ಆ ವಾಸುದೇವನಿಗಿಂತ ಬೇರೆ ಯಾವ ವಸ್ತುವೂ ಇಲ್ಲ (44). ಜ್ಞಾನ ಒಂದೇ ಸತ್ಯ, ಉಳಿದದ್ದು ಅಸತ್ಯ ಎಂಬ ಈ ಪರಮಾರ್ಥ ವನ್ನು ನಾನು ನಿನಗೆ ಹೇಳಿದ್ದೇನೆ. ಇನ್ನು ಕೇವಲ ವ್ಯವಹಾರ ಗೋಚರವಾಗಿ ಭುವನತ್ರಯದ ವಿಷಯವೇನುಂಟು ಅದನ್ನು ಕುರಿತು ಸಹ ಹೇಳಿದ್ದೇನೆ (45). ಅಲ್ಲದೆ ಕರ್ಮಮಾರ್ಗಕ್ಕೆ ಸಂಬಂಧಿಸಿದಂತೆ ಯಜ್ಞ, ಪಶು, ಅಗ್ನಿ,

**ಯಜ್ಞಃ ಪಶುರ್ವಹ್ನಿರಶೇಷಋತ್ವಿಕ್**
**ಸೋಮಃ ಸುರಾಃ ಸ್ವರ್ಗಮಯಶ್ಚ ಕಾಮಃ।**
**ಇತ್ಯಾದಿಕರ್ಮಾಶ್ರಿತಮಾರ್ಗದೃಷ್ಟಂ**
**ಭೂರಾದಿಭೋಗಾಶ್ಚ ಫಲಾನಿ ತೇಷಾಮ್॥** 46

**ಯಚ್ಚೈತದ್ಭುವನಗತಂ ಮಯಾ ತವೋಕ್ತಂ**
**ಸರ್ವತ್ರ ವ್ರಜತಿ ಹಿ ತತ್ರ ಕರ್ಮವಶ್ಯಃ।**
**ಜ್ಞಾತ್ವೈವಂ ಧ್ರುವಮಚಲಂ ಸದೈಕರೂಪಂ**
**ತತ್ ಕುರ್ಯಾದ್ವಿಶತಿ ಹಿ ಯೇನ ವಾಸುದೇವಮ್॥** 47

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ದ್ವಾದಶೋಽಧ್ಯಾಯಃ

---

ಋತ್ವಿಜರು, ಸೋಮ, ದೇವತೆಗಳು, ಸ್ವರ್ಗರೂಪವಾದ ಕಾಮನೆ, ಈ ಕರ್ಮಗಳಿಗೆ ದೊರಕತಕ್ಕ ಭೂಲೋಕಾದಿ ಫಲಭೋಗಗಳು—ಇವೆಲ್ಲವನ್ನೂ ಹೇಳಿದ್ದೇನೆ (46). ಮೈತ್ರೇಯ, ಲೋಕಗತವಾದ ಯಾವು ಯಾವುದನ್ನು ಹೇಳಿದೆನೋ ಅದೆಲ್ಲವೂ ಕರ್ಮವನ್ನು ಮಾಡಿ ಕರ್ಮಾಧೀನ ನಾದವನಿಗೆ ಲಭಿಸತಕ್ಕದ್ದು. ಇದೆಲ್ಲವನ್ನೂ ಮಾನವನು ಸರಿಯಾಗಿ ತಿಳಿದುಕೊಂಡು (ಕರ್ಮಮಾರ್ಗದಿಂದ ವಿರಕ್ತನಾಗಿ), ಶಾಶ್ವತನೂ ಅಚಲನೂ ಸದಾ ಏಕರೂಪನೂ ಆದ ವಾಸುದೇವನಲ್ಲಿ ಸೇರಿ ಹೋಗುವುದು ಹೇಗೋ ಹಾಗೆ ಆಚರಿಸಬೇಕು (47).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಹನ್ನೆರಡನೆಯ ಅಧ್ಯಾಯ ಮುಗಿಯಿತು.



## ತ್ರಯೋದಶೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಭಗವನ್ ಸಮ್ಯಗಾಖ್ಯಾತಂ ಯತ್ ಪೃಷ್ಟೋಽಸಿ ಮಯಾ ಕಿಲ।**
**ಭೂಸಮುದ್ರಾದಿಸರಿತಾಂ ಸಂಸ್ಥಾನಂ ಗ್ರಹಸಂಸ್ಥಿತಿಃ॥ 1**

**ವಿಷ್ಣ್ವಾಧಾರಂ ಯಥಾ ಚೈತತ್ ತ್ರೈಲೋಕ್ಯಂ ಸಮವಸ್ಥಿತಮ್।**
**ಪರಮಾರ್ಥಸ್ತು ತೇ ಪ್ರೋಕ್ತೋ ಯಥಾ ಜ್ಞಾನಂ ಪ್ರಧಾನತಃ॥ 2**

**ಯತ್ತ್ವೇ ತದ್ಭಗವಾನಾಹ ಭರತಸ್ಯ ಮಹೀಪತೇಃ।**
**ಶ್ರೋತುಮಿಚ್ಛಾಮಿ ಚರಿತಂ ತಸ್ಯ ಮಮಾಖ್ಯಾತುಮರ್ಹಸಿ॥ 3**

**ಭರತಃ ಸ ಮಹೀಪಾಲಃ ಶಾಲಗ್ರಾಮೇಽವಸತ್ ಕಿಲ।**
**ಯೋಗಯುಕ್ತಃ ಸಮಾಧಾಯ ವಾಸುದೇವೇ ಸದಾ ಮನಃ॥ 4**

---

## ಅಧ್ಯಾಯ 13

ಭರತನ ಚರಿತ್ರೆ. ಜಡಭರತ ಮತ್ತು ಸೌವೀರ ರಾಜರ ಸಂವಾದ

ಮೈತ್ರೇಯರು ಪರಾಶರ ಮುನಿಗಳಿಗೆ ಹೇಳಿದರು: "ಭಗವನ್, ನಾನು ಕೇಳಿದಂತೆ ಭೂಮಿ ಸಮುದ್ರ ನದೀ ಮುಂತಾದವನ್ನೂ ಗ್ರಹಸ್ಥಿತಿಯನ್ನೂ ಚೆನ್ನಾಗಿ ಹೇಳಿದಿರಿ. ತ್ರಿಲೋಕವೂ ವಿಷ್ಣುವನ್ನಾಶ್ರಯಿಸಿಕೊಂಡಿದೆಯೆಂಬುದನ್ನೂ ತಿಳಿಸಿದಿರಿ. ಅಲ್ಲದೆ ಪರಮಾರ್ಥವಾಗಿ ಜ್ಞಾನವೇ ಸರ್ವಸ್ವವೆಂದು ಮುಖ್ಯವಾಗಿ ತಿಳಿಸಿದಿರಿ (1-2). ಮಹಾರಾಜನಾದ ಭರತನ ವಿಷಯವನ್ನು ಹಿಂದೆ ಪ್ರಸ್ತಾಪಿಸಿದ್ದಿರಿ. ಆತನ ಚರಿತ್ರವನ್ನು ಕೇಳಲು ಬಯಸುತ್ತೇನೆ. ಅದನ್ನು ನನಗೆ ಹೇಳೋಣವಾಗಲಿ. ಭರತ ಮಹಾರಾಜನು ಯೋಗಯುಕ್ತನಾಗಿ ಸದಾ ವಾಸುದೇವನಲ್ಲಿ ಚಿತ್ತವನ್ನಿಟ್ಟು ಶಾಲಗ್ರಾಮದಲ್ಲಿ ವಾಸವಾಗಿದ್ದನಷ್ಟೆ (3-4). ಪುಣ್ಯದೇಶದ ಮಹಿಮೆ ಇದ್ದರೂ ಸರ್ವದಾ ವಾಸುದೇವನನ್ನು ಧ್ಯಾನಿಸುತ್ತಿದ್ದರೂ ಆತನಿಗೆ ಮುಕ್ತಿಯಾಗಲಿಲ್ಲವೇಕೆ?

**ಪುಣ್ಯದೇಶಪ್ರಭಾವೇನ ಧ್ಯಾಯತಶ್ಚ ಸದಾ ಹರಿಮ್।**
**ಕಥಂ ತು ನಾಭವನ್ಮುಕ್ತಿರ್ಯದಭೂತ್ ಸ ದ್ವಿಜಃ ಪುನಃ॥** 5

**ವಿಪ್ರತ್ವೇ ಚ ಕೃತಂ ತೇನ ಯದ್ ಭೂಯಃ ಸುಮಹಾತ್ಮನಾ।**
**ಭರತೇನ ಮುನಿಶ್ರೇಷ್ಠ ತತ್ಸರ್ವಂ ವಕ್ತುಮರ್ಹಸಿ॥** 6

*ಶ್ರೀಪರಾಶರ ಉವಾಚ:*

**ಶಾಲಗ್ರಾಮೇ ಮಹಾಭಾಗೋ ಭಗವನ್ನ್ಯಸ್ತಮಾನಸಃ।**
**ಸ ಉವಾಸ ಚಿರಂ ಕಾಲಂ ಮೈತ್ರೇಯ ಪೃಥಿವೀಪತಿಃ॥** 7

**ಅಹಿಂಸಾದಿಷ್ವಶೇಷೇಷು ಗುಣೇಷು ಗುಣಿನಾಂ ವರಃ।**
**ಅವಾಪ ಪರಮಾಂ ಕಾಷ್ಠಾಂ ಮನಸಶ್ಚಾಪಿ ಸಂಯಮೇ॥** 8

**ಯಜ್ಞೇಶಾಚ್ಯುತ ಗೋವಿಂದ ಮಾಧವಾನಂತ ಕೇಶವ।**
**ಕೃಷ್ಣ ವಿಷ್ಣೋ ಹೃಷೀಕೇಶ ವಾಸುದೇವ ನಮೋಽಸ್ತು ತೇ॥** 9

---

ಅವನು ಮತ್ತೆ ಒಬ್ಬ ಬ್ರಾಹ್ಮಣನಾಗಿ ಹುಟ್ಟಿದನಲ್ಲವೆ? (5). ಮಹರ್ಷಿಗಳೆ, ಆ ಮಹಾತ್ಮನು ಬ್ರಾಹ್ಮಣ ಜನ್ಮದಲ್ಲಿ ಇನ್ನೇನು ಮಾಡಿದನು. ಅದೆಲ್ಲವನ್ನೂ ನನಗೆ ಹೇಳಬೇಕು" (6). ಆಗ ಪರಾಶರರು ಹೇಳಿದರು: ಮೈತ್ರೇಯ, ಮಹಾಪುರುಷನಾದ ಆ ಭೂಪಾಲನು ಭಗವಂತನಲ್ಲಿ ಚಿತ್ತವನ್ನಿಟ್ಟು ಧ್ಯಾನಿಸುತ್ತ ಶಾಲಗ್ರಾಮದಲ್ಲಿ ಬಹಳ ಕಾಲ ಇದ್ದನು (7). ಆ ಗುಣಶಾಲಿಯು ಅಹಿಂಸಾದಿ ಸಮಸ್ತ ಸದ್ಗುಣಗಳಲ್ಲಿಯೂ ನಿರತನಾಗಿ ಚಿತ್ತಸಂಯಮದಲ್ಲಿ ಪರಮೋತ್ಕರ್ಷವನ್ನು ಪಡೆದನು. ಆ ರಾಜನು 'ಯಜ್ಞೇಶ ಅಚ್ಯುತ ಗೋವಿಂದ ಮಾಧವ ಅನಂತ ಕೇಶವ ಕೃಷ್ಣ ವಿಷ್ಣೋ ಹೃಷೀಕೇಶ ವಾಸುದೇವ—ನಮೋಽಸ್ತು ತೇ' ಎಂದು ಕೇವಲ ಶ್ರೀಹರಿಯ ನಾಮಗಳನ್ನು ಜಪಿಸುತ್ತಿದ್ದನು (8-9). ಮೈತ್ರೇಯ, ಸ್ವಪ್ನದಲ್ಲಿಯೂ ಸಹ ಭರತನು ಇನ್ನೊಂದು ಶಬ್ದವನ್ನು ಉಚ್ಚರಿಸುತ್ತಿರಲಿಲ್ಲ. ಈ ಶಬ್ದಗಳನ್ನೂ ಅವುಗಳ ಅರ್ಥವನ್ನೂ ಧ್ಯಾನಿಸುತ್ತಿದ್ದನೇ ಹೊರತು ಇನ್ನೊಂದನ್ನು ಚಿಂತಿಸುತ್ತಿರಲಿಲ್ಲ (10). ಆತನು ದೇವತಾರ್ಚನೆಗಾಗಿ ಸಮಿತ್ತು ಹೂ

**ಇತಿ ರಾಜಾಹ ಭರತೋ ಹರೇರ್ನಾಮಾನಿ ಕೇವಲಮ್।**
**ನಾನ್ಯಜ್ಜಗಾದ ಮೈತ್ರೇಯ ಕಿಂಚಿತ್ ಸ್ವಪ್ನಾಂತರೇಽಪಿ ಚ।**
**ಏತತ್ಪದಂತದರ್ಥಂ ಚ ವಿನಾ ನಾನ್ಯದಚಿಂತಯತ್॥** 10

**ಸಮಿತ್ ಪುಷ್ಪಕುಶಾದಾನಂ ಚಕ್ರೇ ದೇವಕ್ರಿಯಾಕೃತೇ।**
**ನಾನ್ಯಾನಿ ಚಕ್ರೇ ಕರ್ಮಾಣಿ ನಿಸ್ಸಂಗೋ ಯೋಗತಾಪಸಃ॥** 11

**ಜಗಾಮ ಸೋಽಭಿಷೇಕಾರ್ಥಮೇಕದಾ ತು ಮಹಾನದೀಮ್।**
**ಸಸ್ನೌ ತತ್ರ ತದಾ ಚಕ್ರೇ ಸ್ನಾನಸ್ಯಾನಂತರಕ್ರಿಯಾಃ॥** 12

**ಅಥಾಜಗಾಮ ತತ್ತೀರಂ ಜಲಂ ಪಾತುಂ ಪಿಪಾಸಿತಾ।**
**ಆಸನ್ನಪ್ರಸವಾ ಬ್ರಹ್ಮನ್ನೇಕೈವ ಹರಿಣೀ ವನಾತ್॥** 13

**ತತಃ ಸಮಭವತ್ತತ್ರ ಪೀತಪ್ರಾಯೇ ಜಲೇ ತಥಾ।**
**ಸಿಂಹಸ್ಯ ನಾದಃ ಸುಮಹಾನ್ ಸರ್ವಪ್ರಾಣಿಭಯಂಕರಃ॥** 14

**ತತಃ ಸಾ ಸಹಸಾ ತ್ರಾಸಾದಾಪ್ಲುತಾ ನಿಮ್ನಗಾತಟಮ್।**
**ಅಚ್ಯುಚ್ಚಾರೋಹಣೇನಾಸ್ಯಾ ನದ್ಯಾಂ ಗರ್ಭಃ ಪಪಾತ ಹ॥** 15

---

ದರ್ಭೆಗಳನ್ನು ತರುತ್ತಿದ್ದನು. ಅವುಗಳ ಹೊರತಾಗಿ ಇನ್ನೊಂದು ಕೆಲಸದಲ್ಲಿ ತೊಡಗಲಿಲ್ಲ. ಸದಾ ನಿಃಸಂಗನೂ ಯೋಗಯುಕ್ತನೂ ಆಗಿರುತ್ತಿದ್ದನು (11). ಒಂದು ದಿನ ಆತನು ಒಂದು ದೊಡ್ಡ ನದಿಯ ಬಳಿಗೆ ಹೋಗಿ ಸ್ನಾನಮಾಡಿ, ಸ್ನಾನಾನಂತರದ ಕರ್ತವ್ಯಗಳನ್ನು ಅನುಷ್ಠಾನಮಾಡಿದನು (12). ಆ ಸಮಯದಲ್ಲಿ ಮರಿ ಹಾಕಲಿದ್ದ ಗರ್ಭಿಣಿಯಾದ ಒಂದು ಹೆಣ್ಣುಜಿಂಕೆ ಬಾಯಾರಿಕೆಯಿಂದ ಬಳಲಿ ಕಾಡಿನಿಂದ ಒಂಟಿಯಾಗಿ ನದೀ ತೀರಕ್ಕೆ ಬಂದಿತು. ಆ ಜಿಂಕೆ, ಇನ್ನೇನು ನೀರನ್ನು ಕುಡಿದು ಮುಗಿಸುವಷ್ಟ ರಲ್ಲಿ , ಸರ್ವಪ್ರಾಣಿಭಯಂಕರವಾದ ಸಿಂಹದ ದೊಡ್ಡ ಗರ್ಜನೆ ಕೇಳಿಸಿತು (13-14). ಒಡನೆಯೇ ಹೆದರಿಕೆಯಿಂದ ತತ್ತರಿಸಿದ ಆ ಜಿಂಕೆ ನದೀತೀರಕ್ಕೆ ನೆಗೆಯಿತು. ದಡವು ಬಹಳ ಎತ್ತರವಿದ್ದುದರಿಂದ ಜಿಂಕೆಯ ಗರ್ಭವು ಸ್ರವಿಸಿ ನದಿಯಲ್ಲಿ ಬಿದ್ದಿತು! (15). ಜಿಂಕೆಯ ಗರ್ಭದಿಂದ ಬಿದ್ದು, ಅಲೆಗಳ ಸೆಳವಿಗೆ ಸಿಕ್ಕಿ ತೇಲಿಹೋಗುತ್ತಿದ್ದ ಆ ಮರಿಯನ್ನು ಭರತ ಮಹಾರಾಜನು

**ತಮೂಹ್ಯಮಾನಂ ವೇಗೇನ ವೀಚಿಮಾಲಾಪರಿಪ್ಲುತಮ್।**
**ಜಗ್ರಾಹ ಸ ನೃಪೋ ಗರ್ಭಾತ್ ಪತಿತಂ ಮೃಗಪೋತಕಮ್॥ 16**

**ಗರ್ಭಪ್ರಚ್ಯುತಿದೋಷೇಣ ಪ್ರೋತ್ತುಂಗಾಕ್ರಮಣೇನ ಚ।**
**ಮೈತ್ರೇಯ ಸಾಪಿ ಹರಿಣೀ ಪಪಾತ ಚ ಮಮಾರ ಚ॥ 17**

**ಹರಿಣೀಂ ತಾಂ ವಿಲೋಕ್ಯಾಥ ವಿಪನ್ನಾಂ ನೃಪತಾಪಸಃ।**
**ಮೃಗಪೋತಂ ಸಮಾದಾಯ ನಿಜಮಾಶ್ರಮಮಾಗತಃ॥ 18**

**ಚಕಾರಾನುದಿನಂ ಚಾಸೌ ಮೃಗಪೋತಸ್ಯ ವೈ ನೃಪಃ।**
**ಪೋಷಣಂ ಪುಷ್ಯಮಾಣಶ್ಚ ಸ ತೇನ ವವೃಧೇ ಮುನೇ॥ 19**

**ಚಚಾರಾಶ್ರಮಪರ್ಯಂತೇ ತೃಣಾನಿ ಗಹನೇಷು ಸಃ।**
**ದೂರಂ ಗತ್ವಾ ಚ ಶಾರ್ದೂಲತ್ರಾಸಾದಭ್ಯಾಯಯೌ ಪುನಃ॥ 20**

**ಪ್ರಾತರ್ಗತ್ವಾತಿದೂರಂ ಚ ಸಾಯಮಾಯಾತ್ಯಥಾಶ್ರಮಮ್।**
**ಪುನಶ್ಚ ಭರತಸ್ಯಾಭೂದಾಶ್ರಮಸ್ಯೋಟಜಾಜಿರೇ॥ 21**

---

ಹಿಡಿದುಕೊಂಡನು. ಎತ್ತರದ ದಡಕ್ಕೆ ನೆಗೆದದ್ದರಿಂದಲೂ ಗರ್ಭಸ್ರಾವವಾದ್ದರಿಂದಲೂ, ಮೈತ್ರೇಯ, ಆ ಹೆಣ್ಣುಜಿಂಕೆ ಉರುಳಿಬಿದ್ದಿತಲ್ಲದೆ ಪ್ರಾಣವನ್ನೂ ಬಿಟ್ಟಿತು (16-17). ಹೀಗೆ ಹೆಣ್ಣು ಜಿಂಕೆ ಸತ್ತುಹೋದದ್ದನ್ನು ಕಂಡು ತಪಸ್ವಿಯಾದ ರಾಜನು ಆ ಮರಿಯನ್ನು ಎತ್ತಿಕೊಂಡು ತನ್ನ ಆಶ್ರಮಕ್ಕೆ ಬಂದನು. ಅಲ್ಲದೆ ಪ್ರತಿದಿನವೂ ಮರಿಯ ಆರೈಕೆಯನ್ನು ನೋಡಿಕೊಳ್ಳತೊಡಗಿದನು. ರಾಜನ ಆರೈಕೆಯಲ್ಲಿ ಆ ಮರಿಯು ಆತನೊಡನೆ ಬೆಳೆಯಿತು (18-19). ಅದು ಆಶ್ರಮದ ಸಮೀಪದಲ್ಲಿದ್ದ ಕಾಡಿನಲ್ಲಿ ಹುಲ್ಲನ್ನು ಮೇಯುತ್ತಿತ್ತು. ಒಮ್ಮೊಮ್ಮೆ ಆಶ್ರಮದಿಂದ ದೂರಹೋಗಿ ಹುಲಿಯ ಹೆದರಿಕೆಯಿಂದ ಹಿಂದಕ್ಕೆ ಓಡಿಬರುತ್ತಿತ್ತು (20). ಬೆಳಿಗ್ಗೆ ಮೇಯುತ್ತ ದೂರ ಹೋಗಿ ಸಂಜೆ ವಾಪಸಾಗುತ್ತಿತ್ತು. ಭರತನ ಆಶ್ರಮದ ಅಂಗಳದಲ್ಲಿ ತಿರುಗಾಡಿಕೊಂಡಿತ್ತು (21). ಮೈತ್ರೇಯ, ಹೀಗೆ ಸಮೀಪದಲ್ಲಿ ಸುಳಿಯುತ್ತ ದೂರವೂ ಹೋಗುತ್ತ ಅಲೆದಾಡಿಕೊಂಡಿದ್ದ ಆ ಜಿಂಕೆಯಲ್ಲಿ ಭರತನ ಮನಸ್ಸು ಅನುರಕ್ತವಾಯಿತು. ರಾಜ್ಯವನ್ನೂ ಮಕ್ಕಳನ್ನೂ ಬಿಟ್ಟು

**ತಸ್ಯ ತಸ್ಮಿನ್ ಮೃಗೇ ದೂರಸಮೀಪಪರಿವರ್ತಿನಿ।**
**ಆಸೀಚ್ಚೇತಃ ಸಮಾಸಕ್ತಂ ನ ಯಯಾವನ್ಯತೋ ದ್ವಿಜ॥** 22

**ವಿಮುಕ್ತರಾಜ್ಯತನಯಃ ಪ್ರೋಜ್ಝಿತಾಶೇಷಬಾಂಧವಃ।**
**ಮಮತ್ವಂ ಸ ಚಕಾರೋಚ್ಚೈಸ್ತಸ್ಮಿನ್ ಹರಿಣಬಾಲಕೇ॥** 23

**ಕಿಂ ವೃಕೈರ್ಭಕ್ಷಿತೋ ವ್ಯಾಘ್ರೈಃ ಕಿಂ ಸಿಂಹೇನ ನಿಪಾತಿತಃ।**
**ಚಿರಾಯಮಾಣೇ ನಿಷ್ಕ್ರಾಂತೇ ತಸ್ಯಾಸೀದಿತಿ ಮಾನಸಮ್॥** 24

**ಏಷಾ ವಸುಮತೀ ತಸ್ಯಾ ಖುರಾಗ್ರಕ್ಷತಕರ್ಬುರಾ।**
**ಪ್ರೀತಯೇ ಮಮ ಜಾತೋಽಸೌ ಕ್ವ ಮಮೈಣಕಬಾಲಕಃ॥** 25

**ವಿಷಾಣಾಗ್ರೇಣ ಮದ್ಬಾಹುಂ ಕಂಡೂಯನಪರೋ ಹಿ ಸಃ।**
**ಕ್ಷೇಮೇಣಾಭ್ಯಾಗತೋಽರಣ್ಯಾದಪಿ ಮಾಂ ಸುಖಯಿಷ್ಯತಿ॥** 26

**ಏತೇ ಲೂನಶಿಖಾಸ್ತಸ್ಯ ದಶನೈರಚಿರೋದ್ಗತೈಃ।**
**ಕುಶಾಃ ಕಾಶಾ ವಿರಾಜಂತೇ ವಟವಃ ಸಾಮಗಾ ಇವ॥** 27

---

ಸಮಸ್ತ ಬಾಂಧವರನ್ನೂ ತೊರೆದು ಬಂದಿದ್ದ ಭರತ ಮಹಾರಾಜನಿಗೆ, ಆ ಜಿಂಕೆಯ ಮರಿಯಲ್ಲಿ ಅಗಾಧವಾದ ಮಮತ್ತ್ವ ತಲೆದೋರಿತು! (22-23). ಆ ಜಿಂಕೆ ಆಶ್ರಮಕ್ಕೆ ಬರುವುದು ತಡವಾದರೆ "ತೋಳಗಳೋ ಹುಲಿಗಳೋ ಅದನ್ನು ತಿಂದಿರಬಹುದೆ? ಸಿಂಹವೇನಾದರೂ ಕೊಂದು ಉರುಳಿಸಿರಬಹುದೆ?" ಎಂದು ಭರತನ ಮನಸ್ಸು ವ್ಯಾಕುಲಗೊಳ್ಳುತ್ತಿತ್ತು (24). "ಆಹಾ! ಅದರ ಖುರಾಗ್ರಗಳ ಗುರುತಿನಿಂದ ಈ ನೆಲ ಎಷ್ಟು ಚಿತ್ರವಿಚಿತ್ರವಾಗಿದೆ! ನನ್ನ ಸಂತೋಷಕ್ಕಾಗಿಯೇ ಅದು ಹುಟ್ಟಿದೆ! ನನ್ನ ಆ ಪುಟ್ಟ ಜಿಂಕೆ ಎಲ್ಲಿ ಹೋಯಿತು! (25). ತನ್ನ ಕೊಂಬಿನ ತುದಿಯಿಂದ ನನ್ನ ತೋಳನ್ನು ಕೆರೆಯುತ್ತಿತ್ತಲ್ಲವೆ! ಕಾಡಿನಿಂದ ಕ್ಷೇಮವಾಗಿ ಬಂದೀತೆ? ನನಗೆ ಸುಖವನ್ನು ತಂದೀತೆ! ತನ್ನ ಎಳೆ ಹಲ್ಲುಗಳಿಂದ ತುದಿಗಳನ್ನು ಕತ್ತರಿಸಿ ತಿನ್ನಲ್ಪಟ್ಟ ಆ ಕುಶಕಾಶಗಳು ಸಾಮಗಾನಮಾಡುವ* ವಟುಗಳಂತೆ

---

* ಸಾಮವೇದಿಗಳಾದ ವಟುಗಳು ಶಿಖೆಯನ್ನು ತೆಗೆಸುವ ಸಂಪ್ರದಾಯ ಉಂಟು.

**ಇತ್ಥಂ ಚಿರಗತೇ ತಸ್ಮಿನ್ ಸ ಚಕ್ರೇ ಮಾನಸಂ ಮುನಿಃ।**
**ಪ್ರೀತಿಪ್ರಸನ್ನವದನಃ ಪಾರ್ಶ್ವಸ್ಥೇ ಚಾಭವನ್ಮೃಗೇ॥ 28**

**ಸಮಾಧಿಭಂಗಸ್ತಸ್ಯಾಸೀತ್ತನ್ಮಯತ್ವಾದೃತಾತ್ಮನಃ।**
**ಸಂತ್ಯಕ್ತರಾಜ್ಯಭೋಗರ್ದ್ಧಿಸ್ವಜನಸ್ಯಾಪಿ ಭೂಪತೇಃ॥ 29**

**ಚಪಲಂ ಚಪಲೇ ತಸ್ಮಿನ್ ದೂರಗಂ ದೂರಗಾಮಿನಿ।**
**ಮೃಗಪೋತೇಽಭವಚ್ಚಿತ್ತಂ ಸ್ಥೈರ್ಯವತ್ತಸ್ಯ ಭೂಪತೇಃ॥ 30**

**ಕಾಲೇನ ಗಚ್ಛತಾ ಸೋಽಥ ಕಾಲಂ ಚಕ್ರೇ ಮಹೀಪತಿಃ।**
**ಪಿತಾವ ಸಾಸ್ರಂ ಪುತ್ರೇಣ ಮೃಗಪೋತೇನ ವೀಕ್ಷಿತಃ॥ 31**

**ಮೃಗಮೇವ ತದಾದ್ರಾಕ್ಷೀತ್ ತ್ಯಜನ್ ಪ್ರಾಣಾನಸಾವಪಿ।**
**ತನ್ಮಯತ್ವೇನ ಮೈತ್ರೇಯ ನಾನ್ಯತ್ ಕಿಂಚಿದಚಿಂತಯತ್॥ 32**

---

ಕಾಣುತ್ತವೆ!" (26-27). ಜಿಂಕೆಯು ಬರುವುದು ತಡವಾದಾಗ ಭರತ ಮುನಿಯ ಮನಸ್ಸು ಹೀಗೆ ಹೊಯ್ದಾಡುತ್ತಿತ್ತು. ಆ ಜಿಂಕೆ ಬಳಿಗೆ ಬಂದರೆ ಅವನ ಮುಖ ಸಂತೋಷದಿಂದ ಅರಳುತ್ತಿತ್ತು (28). ಹೀಗೆ ಭರತನು ವಾತ್ಸಲ್ಯದಿಂದ ಜಿಂಕೆಯನ್ನು ಕಾಣುತ್ತ ತನ್ಮಯನಾದ್ದರಿಂದ ಆತನ ಧ್ಯಾನ ಯೋಗಕ್ಕೆ ಭಂಗ ಉಂಟಾಯಿತು. ರಾಜಭೋಗಗಳನ್ನು ವೈರಾಗ್ಯದಿಂದ ತ್ಯಜಿಸಿ ಬಂದಿದ್ದವನಿಗೂ ಈ ಪರಿಸ್ಥಿತಿಯುಂಟಾಯಿತು (29). ರಾಜನ ಸ್ಥಿರವಾದ ಚಿತ್ತವೂ ಸಹ, ಜಿಂಕೆ ಚಾಪಲ್ಯದಿಂದ ಕುಣಿದಾಡುವಾಗ, ಕುಣಿಯುತ್ತಿತ್ತು! ಅದು ದೂರ ಹೋದರೆ ಚಿತ್ತವೂ ಅದರೊಡನೆ ದೂರ ಹೋಗುತ್ತಿತ್ತು! (30). ಕಾಲವು ಸರಿಯಿತು. ಸಾಯುವ ತಂದೆಯನ್ನು ಕಣ್ಣೀರುಸುರಿಸುತ್ತ ನೋಡುವ ಮಗನಂತೆ, ಜಿಂಕೆಯ ಮರಿ ಕಣ್ಣೀರು ತುಂಬಿಕೊಂಡು ನೋಡುತ್ತಿರುವಾಗ ಭರತರಾಜನು ಕಾಲವಶನಾದನು (31). ಆತನೂ ಸಹ, ಮೈತ್ರೇಯ, ಪ್ರಾಣವನ್ನು ಬಿಡುವಾಗ ತನ್ಮಯತೆ ಯಿಂದ ಜಿಂಕೆಯನ್ನೇ ನೋಡುತ್ತಿದ್ದನು. ಅದರ ವಿಷಯವನ್ನಲ್ಲದೆ ಬೇರೆ ಏನನ್ನೂ ಚಿಂತಿಸಲಿಲ್ಲ (32). ಆದ್ದರಿಂದ ಮರಣಕಾಲದ ತೀವ್ರ ಭಾವನೆಗೆ

**ತತಶ್ಚ ತತ್ಕಾಲಕೃತಾಂ ಭಾವನಾಂ ಪ್ರಾಪ್ಯ ತಾದೃಶೀಮ್ ।**
**ಜಂಬೂಮಾರ್ಗೇ ಮಹಾರಣ್ಯೇ ಜಾತೋ ಜಾತಿಸ್ಮರೋ ಮೃಗಃ ॥**

**ಜಾತಿಸ್ಮರತ್ವಾದುದ್ವಿಗ್ನಃ ಸಂಸಾರಸ್ಯ ದ್ವಿಜೋತ್ತಮ ।**
**ವಿಹಾಯ ಮಾತರಂ ಭೂಯಃ ಶಾಲಗ್ರಾಮಮುಪಾಯಯೌ ॥ 34**

**ಶುಷ್ಕೈಸ್ತೃಣೈಸ್ತಥಾ ಪರ್ಣೈಃ ಸ ಕುರ್ವನ್ನಾತ್ಮಪೋಷಣಮ್ ।**
**ಮೃಗತ್ವಹೇತುಭೂತಸ್ಯ ಕರ್ಮಣೋ ನಿಷ್ಕೃತಿಂ ಯಯೌ ॥ 35**

**ತತ್ರ ಚೋತ್ಸೃಷ್ಟದೇಹೋಽಸೌ ಜಜ್ಞೇ ಜಾತಿಸ್ಮರೋ ದ್ವಿಜಃ ।**
**ಸದಾಚಾರವತಾಂ ಶುದ್ಧೇ ಯೋಗಿನಾಂ ಪ್ರವರೇ ಕುಲೇ ॥ 36**

**ಸರ್ವವಿಜ್ಞಾನಸಂಪನ್ನಃ ಸರ್ವಶಾಸ್ತ್ರಾರ್ಥತತ್ತ್ವವಿತ್ ।**
**ಅಪಶ್ಯತ್ ಸ ಚ ಮೈತ್ರೇಯ ಆತ್ಮಾನಂ ಪ್ರಕೃತೇಃ ಪರಮ್ ॥ 37**

---

ಅನುಗುಣವಾಗಿ ಭರತನೂ ಜಂಬೂಮಾರ್ಗದ* ಒಂದು ಮಹಾರಣ್ಯದಲ್ಲಿ ಜನ್ಮಾಂತರ ಸ್ಮರಣೆಯುಳ್ಳ ಜಿಂಕೆಯಾಗಿ§ ಹುಟ್ಟಿದನು (33). ಮೈತ್ರೇಯ, ಆ ಜಿಂಕೆಗೆ ಜನ್ಮಾಂತರ ಸ್ಮರಣೆಯಿದ್ದುದರಿಂದ ಸಂಸಾರದಿಂದ ವಿರಕ್ತವಾಗಿ ತಾಯಿಯನ್ನು ಬಿಟ್ಟು ಶಾಲಗ್ರಾಮಕ್ಕೆ ಮತ್ತೆ ಬಂದಿತು (34). ಒಣಗಿದ ಹುಲ್ಲನ್ನೂ ಎಲೆಯನ್ನೂ ತಿಂದು ದೇಹಯಾತ್ರೆಯನ್ನು ನಡೆಸುತ್ತ, ಮೃಗಜನ್ಮಕ್ಕೆ ಕಾರಣವಾದ ಕರ್ಮವನ್ನು ಸವೆಸಿಕೊಂಡಿತು. ಶಾಲ ಗ್ರಾಮದಲ್ಲಿ ತನ್ನ ಮೃಗದೇಹವನ್ನು ತೊರೆದ ಭರತನು ಆಚಾರಶೀಲರೂ ಯೋಗಿಗಳೂ ಆದವರ ಶುದ್ಧವೂ ಶ್ರೇಷ್ಠವೂ ಆದ ವಂಶದಲ್ಲಿ ಒಬ್ಬ ವಿಪ್ರನಾಗಿ ಜನ್ಮತಾಳಿದನು (35-36). ಆ ವಿಪ್ರನು, ಸರ್ವವಿಜ್ಞಾನ ಸಂಪನ್ನನೂ ಸರ್ವಶಾಸ್ತ್ರಗಳ ಪರಮಾರ್ಥವನ್ನು ಅರಿತವನೂ ಆಗಿದ್ದು, ತಾನು ಪ್ರಕೃತಿಯ ಆಚೆಗಿರುವ ಆತ್ಮನೆಂದು ತಿಳಿದುಕೊಂಡನು (37).

---

* ಜಂಬೂಮಾರ್ಗವೆಂದರೆ ಭಾಗವತದ ಪ್ರಕಾರ ಕಾಲಂಜರಪರ್ವತ. ಅದು ಬುಂದೇಲಖಂಡದಲ್ಲಿರುವ ಕಾಲಂಜರವಾಗಿರಬಹುದು.

§ ನೋಡಿ:
ಯಂ ಯಂ ವಾಪಿ ಸ್ಮರನ್‌ಭಾವಂ ತ್ಯಜತ್ಯಂತೇ ಕಲೇವರಂ ।
ತಂತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ —ಭಗವದ್ಗೀತಾ

**ಆತ್ಮನೋಽಧಿಗತಜ್ಞಾನೋ ದೇವಾದೀನಿ ಮಹಾಮುನೇ।**
**ಸರ್ವಭೂತಾನ್ಯಭೇದೇನ ಸ ದದರ್ಶ ತದಾತ್ಮನಃ॥** 38

**ನ ಪಪಾಠ ಗುರುಪ್ರೋಕ್ತಂ ಕೃತೋಪನಯನಃ ಶ್ರುತಿಮ್।**
**ನ ದದರ್ಶ ಚ ಕರ್ಮಾಣಿ ಶಾಸ್ತ್ರಾಣಿ ಜಗೃಹೇ ನ ಚ॥** 39

**ಉಕ್ತೋಽಪಿ ಬಹುಶಃ ಕಿಂಚಿಜ್ಜಡವಾಕ್ಯಮಭಾಷತ।**
**ತದಪ್ಯಸಂಸ್ಕಾರಗುಣಂ ಗ್ರಾಮ್ಯವಾಕ್ಯೋಕ್ತಿಸಂಶ್ರಿತಮ್॥** 40

**ಅಪಧ್ವಸ್ತವಪುಃ ಸೋಽಪಿ ಮಲಿನಾಂಬರಧೃಗ್ ದ್ವಿಜಃ।**
**ಕ್ಲಿನ್ನದಂತಾಂತರಃ ಸರ್ವೈಃ ಪರಿಭೂತಃ ಸ ನಾಗರೈಃ॥** 41

**ಸಮ್ಮಾನನಾ ಪರಾಂ ಹಾನಿಂ ಯೋಗರ್ದ್ಧೇಃ ಕುರುತೇ ಯತಃ।**
**ಜನೇನಾವಮತೋ ಯೋಗೀ ಯೋಗಸಿದ್ಧಿಂ ಚ ವಿಂದತಿ॥** 42

---

ಆತ್ಮತತ್ತ್ವವನ್ನರಿತ ಆತನು ದೇವತೆಗಳೇ ಮೊದಲಾದ ಸಮಸ್ತ ಪ್ರಾಣಿಗಳೂ ಆತ್ಮಸ್ವರೂಪನಾದ ತನಗೆ ಅಭಿನ್ನರೆಂದು ಅರಿತಿದ್ದನು. ಅವನಿಗೆ ಉಪನಯನವಾಯಿತು. ಆದರೆ ಗುರುಪ್ರೋಕ್ತವಾದ ಏನನ್ನೂ ಓದಲಿಲ್ಲ. ವೇದವನ್ನು ಕಲಿಯಲಿಲ್ಲ. ಕರ್ಮಗಳನ್ನು ಆಚರಿಸುತ್ತಿರಲಿಲ್ಲ. ಶಾಸ್ತ್ರಗಳನ್ನು ಅಭ್ಯಾಸ ಮಾಡಲಿಲ್ಲ (38-39). ಯಾರಾದರೂ ಒತ್ತಾಯದಿಂದ ಮತ್ತೆ ಮತ್ತೆ ಕೇಳಿದಾಗ ಜಡಪುರುಷನಂತೆ ಅರ್ಥವಾಗದ ಏನೋ ಒಂದು ಮಾತನ್ನು ಹೇಳಿಬಿಡುತ್ತಿದ್ದನು. ಅದೂ ಸಹ ವ್ಯಾಕರಣ ಶುದ್ಧವಲ್ಲದ, ಗ್ರಾಮೀಣರು ಆಡುವಂತಹ ಒಂದು ಸೊಲ್ಲು (40). ಆ ಬ್ರಾಹ್ಮಣನ ದೇಹ ಯಾವಾಗಲೂ ಕೊಳೆ. ಬಟ್ಟೆ ಕೊಳಕು. ಬಾಯಿ ಹಲ್ಲುಗಳಿಂದ ಜೊಲ್ಲು ಸುರಿಯುತ್ತಿತ್ತು. ಎಲ್ಲ ನಾಗರಿಕರೂ ಆತನನ್ನು ಪೆದ್ದನೆಂದು ತಿರಸ್ಕರಿಸಿಬಿಟ್ಟರು (41). ಮೈತ್ರೇಯ, 'ಜನರ ಗೌರವ ಸತ್ಕಾರಗಳು ಯೋಗಸಿದ್ಧಿಗೆ ಮಹತ್ತರವಾದ ಹಾನಿಯನ್ನು ಉಂಟುಮಾಡುತ್ತವೆ. ಆದ್ದರಿಂದ ಯೋಗಿಯು ಜನರಿಂದ ತಿರಸ್ಕೃತನಾದರೆ ಯೋಗಸಿದ್ಧಿಯನ್ನು ಪಡೆಯುತ್ತಾನೆ (41-42). ಆದಕಾರಣ ಯೋಗಿಯಾದವನು, ಸಜ್ಜನರು ಆಚರಿಸುವ ಧರ್ಮವನ್ನು ದೂಷಿಸದೆಯೇ, ಜನರು ತನ್ನನ್ನು ಉಪೇಕ್ಷಿಸುವಂತೆಯೂ

**ತಸ್ಮಾಚ್ಚರೇತ ವೈ ಯೋಗೀ ಸತಾಂ ಧರ್ಮಮದೂಷಯನ್।**
**ಜನಾ ಯಥಾವಮನ್ಯೇರನ್ ಗಚ್ಛೇಯುರ್ನೈವ ಸಂಗತಿಮ್॥ 43**

**ಹಿರಣ್ಯಗರ್ಭವಚನಂ ವಿಚಿಂತ್ಯೇತ್ಥಂ ಮಹಾಮತಿಃ।**
**ಆತ್ಮಾನಂ ದರ್ಶಯಾಮಾಸ ಜಡೋಽನ್ಮತ್ತಾಕೃತಿಂ ಜನೇ॥ 44**

**ಭುಂಕ್ತೇ ಕುಲ್ಮಾಷವ್ರೀಹ್ಯಾದಿಶಾಕಂ ವನ್ಯಂ ಫಲಂ ಕಣಾನ್।**
**ಯದ್ಯದಾಪ್ನೋತಿ ಸುಬಹು ತದತ್ತೇ ಕಾಲಸಂಯಮಮ್॥ 45**

**ಪಿತರ್ಯುಪರತೇ ಸೋಽಥ ಭ್ರಾತೃಭ್ರಾತೃವ್ಯಬಾಂಧವೈಃ।**
**ಕಾರಿತಃ ಕ್ಷೇತ್ರಕರ್ಮಾದಿ ಕದನ್ನಾಹಾರಪೋಷಿತಃ॥ 46**

**ಸ ತೂಕ್ಷಪೀನಾವಯವೋ ಜಡಕಾರೀ ಚ ಕರ್ಮಣಿ।**
**ಸರ್ವಲೋಕೋಪಕರಣಂ ಬಭೂವಾಹಾರ ಚೇತನಃ॥ 47**

---

ತನ್ನ ಬಳಿಗೆ ಬಾರದಂತೆಯೂ ತನ್ನ ಪಾಡಿಗೆ ತಾನು ಇರಬೇಕು' (43). ಇದು ಹಿರಣ್ಯಗರ್ಭನು ಹೇಳಿದ ಅರ್ಥವತ್ತಾದ ನುಡಿ. ಮಹಾಪ್ರಾಜ್ಞನಾದ ಆ ವಿಪ್ರನು (ಭರತನು) ಈ ನುಡಿಯನ್ನು ಗ್ರಹಿಸಿ, ತಾನು ಪೆದ್ದನಂತೆಯೂ ಹುಚ್ಚನಂತೆಯೂ ಜನರಿಗೆ ತೋರಿಸಿಕೊಂಡನು (44). ಅರೆಬೆಂದ ಅಲಸಂದೆ, ಅಕ್ಕಿ, ಸಸ್ಯ, ನುಚ್ಚು, ಮೊದಲಾದ್ದನ್ನು ತಿನ್ನುತ್ತಿದ್ದನು. ಯಾವುದು ದೊರಕುತ್ತದೆಯೋ ಅದೇ ದೊಡ್ಡದೆಂದು ತಿಳಿದು ಕಾಲ ಯಾಪನೆಗಾಗಿ ಭಕ್ಷಿಸುತ್ತಿದ್ದನು (45). ಹೀಗಿರುವಾಗ ತಂದೆ ಸತ್ತು ಹೋಗಲು, ಸೋದರ, ಸೋದರಪುತ್ರ ಮೊದಲಾದ ಬಾಂಧವರು ಹೊಲಗದ್ದೆಗಳ ಕೆಲಸವನ್ನು ಮಾಡುವಂತೆ ಅವನನ್ನು ನಿಯಮಿಸಿ ಹೊಟ್ಟೆ ಪಾಡಿಗೆ ಕದನ್ನವನ್ನು ನೀಡುತ್ತಿದ್ದರು (46). ಆದರೆ ಆ ವಿಪ್ರನಿಗೆ (ಭರತನಿಗೆ) ಎತ್ತಿನಂತೆ ಸುಪುಷ್ಟವಾದ ಅಂಗಗಳಿದ್ದವು. ಕೆಲಸದಲ್ಲಿ ಮಾತ್ರ ಜಡ ನಾಗಿದ್ದನು. ಹೀಗಾಗಿ ಎಲ್ಲ ಜನರಿಗೂ ಆತನು ಆಹಾರವನ್ನು ಮಾತ್ರ ಕೊಟ್ಟು ಕೆಲಸ ಮಾಡಿಸಿಕೊಳ್ಳಬಹುದಾದ ಒಂದು ಜೀವಂತ ಪ್ರಾಣಿಯಾಗಿ ಬಿಟ್ಟನು (47). ಹೀಗೆ ಸಂಸ್ಕಾರಶೂನ್ಯನೂ ಬ್ರಾಹ್ಮಣವೇಷದ ವ್ಯವಹಾರ ವುಳ್ಳವನೂ ಆದ ಆತನನ್ನು ಪೃಷತರಾಜನ ಸೇವಕನು ಕಾಳಿಕಾದೇವಿಗೆ

ತಂ ತಾದೃಶಮಸಂಸ್ಕಾರಂ ವಿಪ್ರಾಕೃತಿವಿಚೇಷ್ಟಿತಮ್ ।
ಕ್ಷತ್ತಾ ಪೃಷತರಾಜಸ್ಯ ಕಾಲ್ಯೈ ಪಶುಮಕಲ್ಪಯತ್ ॥ 48

ರಾತ್ರೌ ತಂ ತಸಮಲಂಕೃತ್ಯ ವೈಶಸಸ್ಯ ವಿಧಾನತಃ ।
ಅಧಿಷ್ಠಿತಂ ಮಹಾಕಾಲೀ ಜ್ಞಾತ್ವಾ ಯೋಗೇಶ್ವರಂ ತಥಾ ॥ 49

ತತಃ ಖಡ್ಗಂ ಸಮಾದಾಯ ನಿಶಿತಂ ನಿಶಿ ಸಾ ತಥಾ ।
ಕ್ಷತ್ತಾರಂ ಕ್ರೂರಕರ್ಮಾಣಮಚ್ಛಿನತ್ ಕಂಠಮೂಲತಃ ।
ಸ್ವಪಾರ್ಷದಯುತಾ ದೇವೀ ಪಪೌ ರುಧಿರಮುಲ್ಬಣಮ್ ॥ 50

ತತಸ್ಸೌವೀರರಾಜಸ್ಯ ಪ್ರಯಾತಸ್ಯ ಮಹಾತ್ಮನಃ ।
ವಿಷ್ಟಿಕರ್ತಾಥ ಮನ್ಯೇತ ವಿಷ್ಟಿಯೋಗ್ಯೋಽಯಮಿತ್ಯಪಿ ॥ 51

ತಂ ತಾದೃಶಂ ಮಹಾತ್ಮಾನಂ ಭಸ್ಮಚ್ಛನ್ನಮಿವಾನಲಮ್ ।
ಕ್ಷತ್ತಾ ಸೌವೀರರಾಜಸ್ಯ ವಿಷ್ಟಿಯೋಗ್ಯಮಮನ್ಯತ ॥ 52

---

ಬಲಿಪಶುವಾಗಿ ಗೊತ್ತುಮಾಡಿದನು. ರಾತ್ರಿಯಲ್ಲಿ ಬಲಿವಿಧಿಯಂತೆ ಆ ವಿಪ್ರನನ್ನು ಅಲಂಕರಿಸಿ ಎದುರಿಗೆ ತಂದು ನಿಲ್ಲಿಸಲಾಗಿ, ಕಾಳಿಕಾದೇವಿಯು ಅವನು ಯೋಗೇಶ್ವರನೆಂಬುದನ್ನು ಅರಿತಳು (48-49). ಒಡನೆಯೇ ದೇವಿಯು ಹರಿತವಾದ ಖಡ್ಗವನ್ನು ಹಿರಿದು ಕ್ರೂರಕರ್ಮಿಯಾದ ರಾಜಸೇವಕನ ಕತ್ತನ್ನು ಕತ್ತರಿಸಿ ಹಾಕಿದಳು! ಅಲ್ಲದೆ ಪರಿವಾರ ಸಹಿತಳಾಗಿ ಕಾಳಿಕಾದೇವಿಯು ಅವನ ತೀಕ್ಷ್ಣ ರಕ್ತವನ್ನು ಕುಡಿದಳು (50). ಅನಂತರ ಎತ್ತಲೋ ಪ್ರಯಾಣ ಹೊರಟಿದ್ದ ಮಹಾತ್ಮನಾದ ಸೌವೀರರಾಜನ ಸೇವಕನು ಸಹ ಆ ವಿಪ್ರನನ್ನು ಬಿಟ್ಟಿಸೇವಕನೆಂದು ತಿಳಿದನು*" (51). ಬೂದಿ ಮುಚ್ಚಿದ ಕೆಂಡದಂತಿದ್ದ ಆ ಮಹಾತ್ಮನನ್ನು ಸೌವೀರರಾಜನ ಸೇವಕನು ಬಿಟ್ಟಿ ಚಾಕರಿಗೆ ಅರ್ಹನೆಂದು ಭಾವಿಸಿದನು (52). ಮೈತ್ರೇಯ,

---

* 48, 49, 50, 51ನೇ ಶ್ಲೋಕಗಳು ಬಹಳ ಪ್ರತಿಗಳಲ್ಲಿ ದೊರೆಯುವುದಿಲ್ಲ. ಇವು ಪ್ರಕ್ಷಿಪ್ತಗಳಾಗಿರಬಹುದು.

**ಸ ರಾಜಾ ಶಿಬಿಕಾರೂಢೋ ಗಂತುಂ ಕೃತಮತಿರ್ದ್ವಿಜ।**
**ಬಭೂವೇಕ್ಷುಮತೀತೀರೇ ಕಪಿಲರ್ಷೇರ್ವರಾಶ್ರಮಮ್॥ 53**

**ಶ್ರೇಯಃ ಕಿಮತ್ರ ಸಂಸಾರೇ ದುಃಖಪ್ರಾಯೇ ನೃಣಾಮಿತಿ।**
**ಪ್ರಷ್ಟುಂ ತಂ ಮೋಕ್ಷಧರ್ಮಜ್ಞಂ ಕಪಿಲಾಖ್ಯಂ ಮಹಾಮುನಿಮ್॥**

**ಉವಾಹ ಶಿಬಿಕಾಂ ತಸ್ಯ ಕ್ಷತ್ತುರ್ವಚನಚೋದಿತಃ।**
**ನೃಣಾಂ ವಿಷ್ಟಿಗೃಹೀತಾನಾಮನ್ಯೇಷಾಂ ಸೋಽಪಿ ಮಧ್ಯಗಃ॥ 55**

**ಗೃಹೀತೋ ವಿಷ್ಟಿನಾ ವಿಪ್ರಃ ಸರ್ವಜ್ಞಾನೈಕಭಾಜನಃ।**
**ಜಾತಿಸ್ಮರೋಽಸೌ ಪಾಪಸ್ಯ ಕ್ಷಯಕಾಮ ಉವಾಹ ತಾಮ್॥ 56**

**ಯಯೌ ಜಡಗತಿಃ ಸೋಥ ಯುಗಮಾತ್ರಾವಲೋಕನಮ್।**
**ಕುರ್ವನ್ಮತಿಮತಾಂ ಶ್ರೇಷ್ಠಸ್ತದನ್ಯೇ ತ್ವರಿತಂ ಯಯುಃ॥ 57**

---

ಆ ಸೌವೀರರಾಜನು ಇಕ್ಷುಮತೀ ತೀರದಲ್ಲಿದ್ದ ಕಪಿಲ ಮುನಿಯ ಆಶ್ರಮಕ್ಕೆ ಹೋಗಲು ನಿಶ್ಚಯಿಸಿ ಪಲ್ಲಕ್ಕಿಯನ್ನೇರಿದ್ದನು (53). ಮೋಕ್ಷಧರ್ಮಜ್ಞನಾದ ಕಪಿಲ ಮಹರ್ಷಿಯನ್ನು ಕುರಿತು "ದುಃಖಮಯವಾದ ಈ ಸಂಸಾರದಲ್ಲಿ ಮಾನವರಿಗೆ ಯಾವುದು ಶ್ರೇಷ್ಠವಾದ ಮಾರ್ಗ?" ಎಂದು ಕೇಳುವುದು ರಾಜನ ಉದ್ದೇಶವಾಗಿತ್ತು (54). ರಾಜಸೇವಕನ ಮಾತಿನಂತೆ ವಿಪ್ರನು ಪಲ್ಲಕ್ಕಿಯನ್ನು ಹೊರುತ್ತಿದ್ದ ಇತರ ಕೂಲಿ ಸೇವಕರ ನಡುವೆ ಸೇರಿಕೊಂಡು ರಾಜನ ಪಲ್ಲಕ್ಕಿಯನ್ನು ಹೊತ್ತನು. ಸರ್ವಜ್ಞಾನ ಸಂಪನ್ನನಾದ ಆ ವಿಪ್ರನು ಹೀಗೆ ಕೂಲಿಯಿಂದ* ನಿಯಾಜಿತನಾಗಿ, ಜನ್ಮಾಂತರ ಸ್ಮರಣೆಯುಳ್ಳವನಾದ್ದರಿಂದ ತನ್ನ ಪಾಪದ ಕ್ಷಯವಾಗಲೆಂದು ಪಲ್ಲಕ್ಕಿಯನ್ನು ಹೊತ್ತನು (55-56). ಜ್ಞಾನಿಗಳಲ್ಲಿ ಶ್ರೇಷ್ಠನಾದ ಆತನು ಜಡಗತಿಯಾಗಿದ್ದು ತನ್ನ ಮುಂದೆ ನಾಲ್ಕು ಮೊಳದಷ್ಟು ಮಾತ್ರ ದೂರವನ್ನು ನೋಡುತ್ತ (ಮೆಲ್ಲಗೆ) ನಡೆಯುತ್ತಿದ್ದನು.

---

* ಮೂಲದಲ್ಲಿ ವಿಷ್ಟಿ ಎಂಬ ಶಬ್ದವಿದೆ. ಇದಕ್ಕೆ ಕೂಲಿ, ಬಾಡಿಗೆ ಎಂದೂ ಬಿಟ್ಟಿ (unpaid labour) ಎಂದೂ ಅರ್ಥವಿದೆ. ಆದ್ದರಿಂದ 'ಬಿಟ್ಟಿಯಾಗಿ' ಎಂಬ ಅರ್ಥವನ್ನು ಇಲ್ಲಿ ಹೇಳಬಹುದು.

**ವಿಲೋಕ್ಯ ನೃಪತಿಃ ಸೋಽಥ ವಿಷಮಾಂ ಶಿಬಿಕಾಗತಿಮ್।**
**ಕಿಮೇತದಿತ್ಯಾಹ ಸಮಂ ಗಮ್ಯತಾಂ ಶಿಬಿಕಾವಹಾಃ॥** 58

**ಪುನಸ್ತಥೈವ ಶಿಬಿಕಾಂ ವಿಲೋಕ್ಯ ವಿಷಮಾಂ ಹಿ ಸಃ।**
**ನೃಪಃ ಕಿಮೇತದಿತ್ಯಾಹ ಭವದ್ಭಿರ್ಗಮ್ಯತೇಽನ್ಯಥಾ॥** 59

**ಭೂಪತೇರ್ವದತಸ್ತಸ್ಯ ಶ್ರುತ್ವೇತ್ಥಂ ಬಹುಶೋ ವಚಃ।**
**ಶಿಬಿಕಾವಾಹಕಾಃ ಪ್ರೋಚುರಯಂ ಯಾತೀತ್ಯಸತ್ವರಮ್॥** 60

*ರಾಜೋವಾಚ:*

**ಕಿಂ ಶ್ರಾಂತೋಽಸ್ಯಲ್ಪಮಧ್ವಾನಂ ತ್ವಯೋಢಾ ಶಿಬಿಕಾ ಮಮ।**
**ಕಿಮಾಯಾಸಸಹೋ ನ ತ್ವಂ ಪೀವಾನಸಿ ನಿರೀಕ್ಷ್ಯಸೇ॥** 61

*ಬ್ರಾಹ್ಮಣ ಉವಾಚ:*

**ನಾಹಂ ಪೀವಾನ್ನ ಚೈವೋಢಾ ಶಿಬಿಕಾ ಭವತೋ ಮಯಾ।**
**ನ ಶ್ರಾಂತೋಽಸ್ಮಿ ನ ಚಾಯಾಸೋ ಸೋಢವ್ಯೋಽಸ್ತಿ ಮಹೀಪತೇ॥**

---

ಉಳಿದ ಸೇವಕರು ಬೇಗಬೇಗನೆ ಹೋಗುತ್ತಿದ್ದರು (57). ಹೀಗಾದ್ದರಿಂದ ಏರುಪೇರಾಗಿ ಪಲ್ಲಕ್ಕಿಯು ಜಗ್ಗಾಡುವುದನ್ನು ಕಂಡು ರಾಜನು "ಇದೇನು? ಎಲೈ ಪಲ್ಲಕ್ಕಿ ಹೊತ್ತವರೆ, ಸಮನಾಗಿ ನಡೆಯಿರಿ" ಎಂದನು (58). ಅನಂತರವೂ ಪಲ್ಲಕ್ಕಿಯು ಹಾಗೆಯೇ ಹೊಯ್ದಾಡುವುದನ್ನು ಕಂಡು ರಾಜನು "ಇದೇನು? ನೀವು ತಪ್ಪಾಗಿ ನಡೆಯುತ್ತಿದ್ದೀರಲ್ಲ?" ಎಂದನು. ಈ ಪ್ರಕಾರ ರಾಜನು ಮತ್ತೆ ಮತ್ತೆ ಆಡುವುದನ್ನು ಕೇಳಿ ಪಲ್ಲಕ್ಕಿಯನ್ನು ಹೊತ್ತ ಇತರರು "ಇವನೊಬ್ಬನು ಬೇಗನೆ ನಡೆಯುತ್ತಿಲ್ಲ" ಎಂದರು (59-60). ಆಗ ಸೌವೀರರಾಜನು ಆ ವಿಪ್ರನನ್ನು ಕುರಿತು "ಏನಯ್ಯ ಬಳಲಿಹೋದೆಯಾ? ನನ್ನ ಪಲ್ಲಕ್ಕಿಯನ್ನು ಸ್ವಲ್ಪ ದೂರ ಮಾತ್ರ ಹೊತ್ತಿದ್ದೀಯೆ! ಶ್ರಮವನ್ನು ಸಹಿಸಲಾರೆಯಾ? ನೋಡಿದರೆ ಗಟ್ಟಿಮುಟ್ಟಾಗಿ ಕಾಣಿಸುತ್ತೀಯೆ!" ಎಂದು ಕೇಳಿದನು (61). ಅದಕ್ಕೆ ಆ ಬ್ರಾಹ್ಮಣನು "ನಾನು ಗಟ್ಟಿಮುಟ್ಟಾಗಿಯೂ ಇಲ್ಲ. ನಿನ್ನ ಪಲ್ಲಕ್ಕಿಯನ್ನು ಹೊರುತ್ತಲೂ ಇಲ್ಲ. ಮಹಾರಾಜ, ನಾನು ಬಳಲಿಯೂ ಇಲ್ಲ. ಆಯಾಸವನ್ನು

*ರಾಜೋವಾಚ:*

**ಪ್ರತ್ಯಕ್ಷಂ ದೃಶ್ಯಸೇ ಪೀವಾನದ್ಯಾಪಿ ಶಿಬಿಕಾ ತ್ವಯಿ।**
**ಶ್ರಮಶ್ಚ ಭಾರೋದ್ವಹನೇ ಭವತ್ಯೇವ ಹಿ ದೇಹಿನಾಮ್॥** 63

*ಬ್ರಾಹ್ಮಣ ಉವಾಚ:*

**ಪ್ರತ್ಯಕ್ಷಂ ಭವತಾ ಭೂಪ ಯದ್‌ದೃಷ್ಟಂ ಮಮ ತದ್ವದ।**
**ಬಲವಾನಬಲಶ್ಚೇತಿ ವಾಚ್ಯಂ ಪಶ್ಚಾದ್ವಿಶೇಷಣಮ್॥** 64

**ತ್ವಯೋಢಾ ಶಿಬಿಕಾ ಚೇತಿ ತ್ವಯ್ಯದ್ಯಾಪಿ ಚ ಸಂಸ್ಥಿತಾ।**
**ಮಿಥ್ಯೈತದತ್ರ ತು ಭವಾನ್ ಶೃಣೋತು ವಚನಂ ಮಮ॥** 65

**ಭೂಮೌ ಪಾದಯುಗಂ ತ್ವಾಸ್ತೇ ಜಂಘೇ ಪಾದದ್ವಯೇ ಸ್ಥಿತೇ।**
**ಊರೂಜಂಘಾದ್ವಯಾವಸ್ಥೌ ತದಾಧಾರಂ ತಥೋದರಮ್॥** 66

**ವಕ್ಷಸ್ಥಲಂ ತಥಾ ಬಾಹೂ ಸ್ಕಂದೌ ಚೋದರಸಂಸ್ಥಿತೌ।**
**ಸ್ಕಂಧಾಶ್ರಿತೇಯಂ ಶಿಬಿಕಾ ಮಮ ಭಾರೋಽತ್ರ ಕಿಂ ಕೃತಃ॥** 67

---

ಸಹಿಸಿಕೊಳ್ಳಬೇಕಾಗಿಯೂ ಇಲ್ಲ! ಎಂದನು (62). ರಾಜನು "ನೀನು ಗಟ್ಟಿಮುಟ್ಟಾಗಿರುವುದು ಪ್ರತ್ಯಕ್ಷವಾಗಿ ಕಾಣಿಸುತ್ತಿದೆ. ಈಗಲೂ ಪಲ್ಲಕ್ಕಿ ನಿನ್ನ ಮೇಲೆ ನಿಂತಿದೆ. ಭಾರವನ್ನು ಹೊತ್ತಾಗ ಮನುಷ್ಯರಿಗೆ ಆಯಾಸವಾಗಿಯೇ ಆಗುತ್ತದೆ!" ಎಂದನು (63). ಆಗ ಬ್ರಾಹ್ಮಣನು ಇಂತೆಂದನು: "ರಾಜ, ನೀನು ಪ್ರತ್ಯಕ್ಷವಾಗಿ ನೋಡಿದ್ದೇನು? ಅದನ್ನು ನನಗೆ ಹೇಳು. ಅನಂತರ ಗಟ್ಟಿಮುಟ್ಟ, ಬಲವಂತ, ದುರ್ಬಲ—ಎಂಬ ವಿಶೇಷಣವನ್ನು ಹೇಳಬಹುದು! (64). 'ನಿನ್ನಿಂದ ಪಲ್ಲಕ್ಕಿ ಹೊರಲ್ಪಟ್ಟಿದೆ, ಪಲ್ಲಕ್ಕಿ ನಿನ್ನ ಮೇಲೆ ನಿಂತಿದೆ' ಎಂದು ಹೇಳುತ್ತೀಯಲ್ಲ, ಇದು ಸುಳ್ಳು. ಈ ವಿಷಯವಾಗಿ ನಾನು ಹೇಳುವುದನ್ನು ಕೇಳು (65). ಎರಡು ಹೆಜ್ಜೆಗಳೇನೋ ನೆಲದ ಮೇಲಿವೆ. ಹೆಜ್ಜೆಗಳ ಮೇಲೆ ಮೊಳಕಾಲುಗಳೆರಡಿವೆ. ಅವುಗಳನ್ನವಲಂಬಿಸಿ ತೊಡೆಗಳಿವೆ. ತೊಡೆಗಳನ್ನಾಶ್ರಯಿಸಿಕೊಂಡು ಹೊಟ್ಟೆ ಇದೆ (66). ಇನ್ನು ಎದೆ, ಎರಡು ತೋಳು, ಎರಡು ಹೆಗಲು—ಇವು ಉದರ ಭಾಗವನ್ನಾಶ್ರಯಿಸಿಕೊಂಡಿವೆ. ಹೆಗಲಿನ ಮೇಲೆ ಪಲ್ಲಕ್ಕಿ ಇದೆ! ಹೀಗಿರು

**ಶಿಬಿಕಾಯಾಂ ಸ್ಥಿತಂ ಚೇದಂ ವಪುಸ್ತ್ವದುಪಲಕ್ಷಿತಮ್ ।**
**ತತ್ರ ತ್ವಥಮಹಮಪ್ಯತ್ರ ಪ್ರೋಚ್ಯತೇ ಚೇದಮನ್ಯಥಾ ॥ 68**

**ಅಹಂ ತ್ವಂ ಚ ತಥಾನ್ಯೇ ಚ ಭೂತೈರುಹ್ಯಾಮ ಪಾರ್ಥಿವ ।**
**ಗುಣಪ್ರವಾಹಪತಿತೋ ಭೂತವರ್ಗೋಽಪಿ ಯಾತ್ಯಯಮ್ ॥ 69**

**ಕರ್ಮವಶ್ಯಾ ಗುಣಾಶ್ಚೈತೇ ಸತ್ತ್ವಾದ್ಯಾಃ ಪೃಥಿವೀಪತೇ ।**
**ಅವಿದ್ಯಾಸಂಚಿತಂ ಕರ್ಮ ತಚ್ಚಾಶೇಷೇಷು ಜಂತುಷು ॥ 70**

**ಆತ್ಮಾ ಶುದ್ಧೋಽಕ್ಷರಃ ಶಾಂತೋ ನಿರ್ಗುಣಃ ಪ್ರಕೃತೇಃ ಪರಃ ।**
**ಪ್ರವೃದ್ಧ್ಯಪಚಯೌ ನಾಸ್ಯ ಏಕಸ್ಯಾಖಿಲಜಂತುಷು ॥ 71**

**ಯದಾ ನೋಪಚಯಸ್ತಸ್ಯ ನಚೈವಾಪಚಯೋ ನೃಪ ।**
**ತದಾ ಪೀವಾನಸೀತೀತ್ಥಂ ಕಯಾ ಯುಕ್ತ್ಯಾ ತ್ವಯೇರಿತಮ್ ॥ 72**

**ಭೂಪಾದಜಂಘಾಕಟ್ಯೂರುಜಠರಾದಿಷು ಸಂಸ್ಥಿತೇ ।**
**ಶಿಬಿಕೇಯಂ ಯಥಾ ಸ್ಕಂಧೇ ತಥಾ ಭಾರಃ ಸಮಸ್ತ್ವಯಾ ॥ 73**

---

ವಾಗ ನನಗೆ ಭಾರ ಹೇಗಾಯಿತು! (67). ನಿನ್ನದೆಂದು ಹೇಳಲಾಗುವ ದೇಹ ಪಲ್ಲಕ್ಕಿಯಲ್ಲಿದೆ! ದೇಹದಲ್ಲಿ ನೀನು, ನೆಲದಲ್ಲಿ ನಾನು—ಎಂದು ಹೇಳುವುದು ಮಿಥ್ಯೆ! (68). ರಾಜ, ನಾನೂ ನೀನೂ ಮತ್ತು ಉಳಿದ ಜೀವಗಳೂ ಪಂಚಭೂತಗಳಿಂದ ಸಾಗಿಸಲ್ಪಡುತ್ತಿದ್ದೇವೆ. ಪಂಚಭೂತಗಳೂ ಸಹ ಸತ್ತ್ವಾದಿ ಗುಣಪ್ರವಾಹಕ್ಕೆ ಸಿಕ್ಕಿ ಸಾಗುತ್ತಿವೆ (69). ಭೂಪಾಲ, ಆ ಸತ್ತ್ವಾದಿಗುಣಗಳೂ ಕರ್ಮಕ್ಕೆ ಅಧೀನವಾಗಿವೆ. ಕರ್ಮವು ಅವಿದ್ಯೆಯಿಂದ ಉಂಟಾದದ್ದು. ಹೀಗೆ ಅವಿದ್ಯಾಜನ್ಯವಾದ ಕರ್ಮವು ಸಮಸ್ತ ಪ್ರಾಣಿಗಳಲ್ಲಿಯೂ ಇರುತ್ತದೆ (70). ಈ ಪ್ರಕೃತಿಯ ಆಚೆಗಿರುವ ಆತ್ಮನಾದರೋ ಶುದ್ಧ, ಅವಿನಾಶಿ, ಶಾಂತ, ನಿರ್ಗುಣ. ಸಕಲ ಪ್ರಾಣಿಗಳಲ್ಲಿಯೂ ಏಕನಾಗಿರುವ ಈ ಆತ್ಮನಿಗೆ ಉಪಚಯಾಪಚಯಗಳಿಲ್ಲ (71). ಆತ್ಮನಿಗೆ ಉಪಚಯ (ವೃದ್ಧಿ), ಅಪಚಯ (ಹ್ರಾಸ) ಗಳಿಲ್ಲದಿರುವಾಗ ರಾಜ! 'ನೀನು ದಪ್ಪಪುಷ್ಟನಾಗಿದ್ದೀಯೆ' ಎಂದು ಯಾವ ಯುಕ್ತಿಯಿಂದ, ಹೇಳಿದ್ದು? (72). ಭೂಮಿ, ಪಾದ, ಮೊಳಕಾಲು, ಸೊಂಟ, ತೊಡೆ, ಹೊಟ್ಟೆ ಮೊದಲಾದುವುಗಳ ಮೇಲಿರುವ ಹೆಗಲಿನ ಮೇಲೆ ನಿಂತಿರುವ ಈ

**ತಥಾನ್ಯೈರ್ಜಂತುಭಿರ್ಭೂಪ ಶಿಬಿಕೋಢಾ ನ ಕೇವಲಮ್।**
**ಶೈಲದ್ರುಮಗೃಹೋತ್ಥೋಽಪಿ ಪೃಥಿವೀಸಂಭವೋಽಪಿ ವಾ॥ 74**

**ಯದಾ ಪುಂಸಃ ಪೃಥಗ್ಭಾವಃ ಪ್ರಾಕೃತೈಃ ಕಾರಣೈರ್ನೃಪ।**
**ಸೋಢವ್ಯಸ್ತು ತದಾಯಾಸಃ ಕಥಂ ವಾ ನೃಪತೇ ಮಯಾ॥ 75**

**ಯದ್ದ್ರವ್ಯಾ ಶಿಬಿಕಾ ಚೇಯಂ ತದ್ದ್ರವ್ಯೋ ಭೂತಸಂಗ್ರಹಃ।**
**ಭವತೋ ಮೇಽಖಿಲಸ್ಯಾಸ್ಯ ಮಮತ್ವೇನೋಪಬೃಂಹಿತಃ॥ 76**

*ಶ್ರೀಪರಾಶರ ಉವಾಚ:*

**ಏವಮುಕ್ತ್ವಾ ಭವನ್ಮೌನೀ ಸ ವಹನ್ ಶಿಬಿಕಾಂ ದ್ವಿಜ।**
**ಸೋಽಪಿ ರಾಜಾವತೀರ್ಯೋರ್ವ್ಯಾಂ ತತ್ಪಾದೌ ಜಗೃಹೇ ತ್ವರನ್॥**

*ರಾಜೋವಾಚ:*

**ಭೋ ಭೋ ವಿಸೃಜ್ಯ ಶಿಬಿಕಾಂ ಪ್ರಸಾದಂ ಕುರು ಮೇ ದ್ವಿಜ।**
**ಕಥ್ಯತಾಂ ಕೋ ಭವಾನತ್ರ ಜಾಲ್ಮರೂಪಧರಃ ಸ್ಥಿತಃ॥ 78**

---

ಪಲ್ಲಕ್ಕಿ ನನಗೆ ಭಾರವಾದರೆ ಸಮವಾಗಿ ನಿನಗೂ ಭಾರವಾಗುತ್ತದೆ! (73). ಹಾಗೆಯೇ, ಮಹಾರಾಜ, ಉಳಿದ ಈ ಜೀವಿಗಳು ಪಲ್ಲಕ್ಕಿಯನ್ನು ಮಾತ್ರ ಹೊತ್ತಿಲ್ಲ, ಪರ್ವತ ಮರ ಮನೆ ಕಡೆಗೆ ಈ ಪೃಥ್ವಿ—ಇವೆಲ್ಲವುಗಳ ಭಾರವನ್ನೂ ಹೊತ್ತಿದ್ದಾರೆ! (74). ಪ್ರಕೃತಿಜನ್ಯಗಳಾದ ಈ ಕಾರಣವಸ್ತುಗಳಿಗಿಂತ ಪುರುಷನು ಸರ್ವಥಾ ಭಿನ್ನನಾಗಿರುವಾಗ, ರಾಜ, ಆಯಾಸವನ್ನು ಸಹಿಸಿಕೊಳ್ಳಬೇಕಾದದ್ದು ನನಗೆ ಹೇಗಾದೀತು? (75). ಈ ಪಲ್ಲಕ್ಕಿ ಯಾವ ದ್ರವ್ಯದಿಂದ ಆಗಿದೆಯೋ ಹಾಗೆ ಎಲ್ಲ ಪ್ರಾಣಶರೀರವೂ ಅದೇ ದ್ರವ್ಯದಿಂದಾಗಿದೆ. ನಿನ್ನ ನನ್ನ ಎಲ್ಲರ ಶರೀರವೂ ನನ್ನದು ಎಂಬ ಮಮತ್ವದಿಂದ ವಿಜೃಂಭಿತವಾಗಿದೆ, ಅಷ್ಟೆ" ಎಂದನು (76). ಹೀಗೆ ಹೇಳಿ ಪಲ್ಲಕ್ಕಿಯನ್ನು ಹೊತ್ತಿದ್ದ ವಿಪ್ರನು ಸುಮ್ಮನಾದನು. ಒಡನೆಯೇ ಸೌವೀರರಾಜನು ಪಲ್ಲಕ್ಕಿಯಿಂದ ನೆಲಕ್ಕಿಳಿದು ವಿಪ್ರನ ಪಾದಗಳನ್ನು ಹಿಡಿದುಕೊಂಡನು (77). ರಾಜನು ಆತನನ್ನು ಕುರಿತು "ಓ ಬ್ರಾಹ್ಮಣೋತ್ತಮ, ಪಲ್ಲಕ್ಕಿಯನ್ನು ಬಿಡು. ನನ್ನಲ್ಲಿ ಪ್ರಸನ್ನನಾಗು. ಮೂಢನ ವೇಷದಲ್ಲಿರುವ ನೀನು ಯಾರು? ಹೇಳು.

**ಯೋ ಭವಾನ್ಯನ್ನಿಮಿತ್ತಂ ವಾ ಯದಾಗಮನಕಾರಣಮ್।**
**ತತ್ಸರ್ವಂ ಕಥ್ಯತಾಂ ವಿದ್ವನ್ ಮಹ್ಯಂ ಶುಶ್ರೂಷವೇ ತ್ವಯಾ॥ 79**

*ಬ್ರಾಹ್ಮಣ ಉವಾಚ:*

**ಶ್ರೂಯತಾಂ ಸೋಽಹಮಿತ್ಯೇತದ್ವಕ್ತುಂ ಭೂಪ ನ ಶಕ್ಯತೇ।**
**ಉಪಭೋಗನಿಮಿತ್ತಂ ಚ ಸರ್ವತ್ರಾಗಮನಕ್ರಿಯಾ॥ 80**

**ಸುಖದುಃಖೋಪಭೋಗೌ ತು ತೌ ದೇಹಾದ್ಯುಪಪಾದಕೌ।**
**ಧರ್ಮಾಧರ್ಮೋದ್ಭವೌ ಭೋಕ್ತುಂ ಜಂತುರ್ದೇಹಾದಿಮೃಚ್ಛತಿ॥ 81**

**ಸರ್ವಸ್ಯೈವ ಹಿ ಭೂಪಾಲ ಜಂತೋಃ ಸರ್ವತ್ರ ಕಾರಣಮ್।**
**ಧರ್ಮಾಧರ್ಮೌ ಯತಃ ಕಸ್ಮಾತ್ ಕಾರಣಂ ಪೃಚ್ಛ್ಯತೇ ತ್ವಯಾ॥**

*ರಾಜೋವಾಚ:*

**ಧರ್ಮಾಧರ್ಮೌ ನ ಸಂದೇಹಸ್ಸರ್ವಕಾರ್ಯೇಷು ಕಾರಣಮ್।**
**ಉಪಭೋಗನಿಮಿತ್ತಂ ಚ ದೇಹಾದ್ದೇಹಾಂತರಾಗಮಃ॥ 83**

---

ಯಾರು ನೀನು, ಯಾವ ಉದ್ದೇಶದಿಂದ ಆಗಮನ, ಅದಕ್ಕೆ ಕಾರಣವೇನು?—ಎಂಬುದೆಲ್ಲವನ್ನೂ, ಓ ಜ್ಞಾನಿಯೇ, ಶುಶ್ರೂಷುವಾದ ನನಗೆ ಹೇಳಬೇಕು" ಎಂದು ಪ್ರಾರ್ಥಿಸಿದನು (78-79). ಆಗ ಬ್ರಾಹ್ಮಣನು "ರಾಜ ಕೇಳು; ನಾನು ಯಾರು—ಎಂಬುದನ್ನು ಹೇಳಲು ಶಕ್ಯವಾಗುವುದಿಲ್ಲ. ಫಲಭೋಗದ ಉದ್ದೇಶದಿಂದ ಎಲ್ಲೆಡೆಯೂ ಆಗಮನಕ್ರಿಯೆ ನಡೆಯುತ್ತದೆ (80). ಸುಖ ದುಃಖಗಳ ಭೋಗಗಳು ದೇಹಾದಿಗಳನ್ನು ಉತ್ಪತ್ತಿ ಮಾಡುವುದಕ್ಕೆ ನಿಮಿತ್ತಗಳಾಗಿರುತ್ತವೆ. ಪುಣ್ಯ ಪಾಪಗಳಿಂದುಂಟಾಗುವ ಸುಖದುಃಖಗಳನ್ನು ಭೋಗಿಸುವುದಕ್ಕಾಗಿ ಜೀವನು ದೇಹಾದಿಗಳನ್ನು ಪಡೆಯುತ್ತಾನೆ (81). ಭೂಪಾಲ, ಧರ್ಮಾಧರ್ಮಗಳು ಸಕಲ ಜಂತುಗಳಿಗೂ ಸರ್ವವಿಷಯಗಳಲ್ಲಿಯೂ ಕಾರಣಗಳು. ಹೀಗಿರುವಾಗ ಕಾರಣವೇನೆಂದು ನೀನು ಕೇಳುವುದಾದರೂ ಏಕೆ?" ಎಂದು ಉತ್ತರಿಸಿದನು (82). ಅದಕ್ಕೆ ರಾಜನು "ಸರ್ವ ಕಾರ್ಯಗಳಿಗೂ ಧರ್ಮಾಧರ್ಮಗಳು ಕಾರಣವೆಂಬುದರಲ್ಲಿ ಸಂದೇಹವಿಲ್ಲ. ಫಲಭೋಗದ

**ಯಸ್ತ್ವೇತದ್ಭವತಾ ಪ್ರೋಕ್ತಂ ಸೋಽಹಮಿತ್ಯೇತದಾತ್ಮನಃ।**
**ವಕ್ತುಂ ನ ಶಕ್ಯತೇ ಶ್ರೋತುಂ ತನ್ಮಮೇಚ್ಛಾ ಪ್ರವರ್ತತೇ॥ 84**

**ಯೋಽಸ್ತಿ ಸೋಽಹಮಿತಿ ಬ್ರಹ್ಮನ್ ಕಥಂ ವಕ್ತುಂ ನ ಶಕ್ಯತೇ।**
**ಆತ್ಮನ್ಯೇಷ ನ ದೋಷಾಯ ಶಬ್ದೋಽಹಮಿತಿ ಯೋ ದ್ವಿಜ॥ 85**

*ಬ್ರಾಹ್ಮಣ ಉವಾಚ:*

**ಶಬ್ದೋಽಹಮಿತಿ ದೋಷಾಯ ನಾತ್ಮನ್ಯೇಷ ತಥೈವ ತತ್।**
**ಅನಾತ್ಮನ್ಯಾತ್ಮವಿಜ್ಞಾನಂ ಶಬ್ದೋ ವಾ ಭ್ರಾಂತಿಲಕ್ಷಣಃ॥ 86**

**ಜಿಹ್ವಾ ಬ್ರವೀತ್ಯಹಮಿತಿ ದಂತೋಷ್ಠೌ ತಾಲುಕೇ ನೃಪ।**
**ಏತೇ ನಾಹಂ ಯತಃ ಸರ್ವೇ ವಾಙ್ನಿಷ್ಪಾದನಹೇತವಃ॥ 87**

**ಕಿಂ ಹೇತುಭಿರ್ವದತ್ಯೇಷಾ ವಾಗೇವಾಹಮಿತಿ ಸ್ವಯಮ್।**
**ಅತಃ ಪೀವಾನಸೀತ್ಯೇತದ್ವಕ್ತುಮಿತ್ಥಂ ನ ಯುಜ್ಯತೇ॥ 88**

---

ಉದ್ದೇಶದಿಂದಲೇ ದೇಹದಿಂದ ದೇಹಾಂತರಕ್ಕೆ ಆಗಮಿಸುವುದೂ ಹೌದು (83). ಆದರೆ 'ನಾನು ಯಾರು—ಎಂಬುದನ್ನು ಹೇಳಲು ಶಕ್ಯವಾಗುವುದಿಲ್ಲ' ಎಂದು ಆತ್ಮವಿಷಯವಾಗಿ ಹೇಳಿದೆಯಲ್ಲ. ಆ ವಿಚಾರದಲ್ಲಿ ಕೇಳಲು ನನಗೆ ಇಚ್ಛೆಯಾಗುತ್ತಿದೆ (84). ತಾನು ಏನಾಗಿದ್ದಾನೋ ಅದನ್ನಿಟ್ಟುಕೊಂಡು 'ಅಂಥವನು ನಾನು' ಎಂದು ಹೇಳಲು ಏಕೆ ಶಕ್ಯವಾಗುವುದಿಲ್ಲ? ಓ ಬ್ರಾಹ್ಮಣೋತ್ತಮ, ತನ್ನ (ಆತ್ಮನ) ವಿಷಯದಲ್ಲಿ 'ನಾನು' ಎಂಬ ಶಬ್ದ ಪ್ರಯೋಗವು ಯಾವ ದೋಷಕ್ಕೂ ಕಾರಣವಾಗದು" ಎಂದನು (85). ಬ್ರಾಹ್ಮಣನು ಹೀಗೆಂದನು: "ತನ್ನ (ಆತ್ಮನ) ವಿಷಯದಲ್ಲಿ 'ನಾನು' ಎಂಬ ಶಬ್ದವನ್ನು ಬಳಸಿದರೆ ಯಾವ ದೋಷವೂ ಇಲ್ಲವೆಂಬುದೇನೋ ಸರಿ. ಆದರೆ ಅನಾತ್ಮನಲ್ಲಿ 'ನಾನು' ಎಂಬ ಜ್ಞಾನವಾಗಲಿ 'ನಾನು' ಎಂಬ ಶಬ್ದವಾಗಲಿ ಭ್ರಾಂತಿಯಿಂದ ಉಂಟಾಗುತ್ತದೆ (86). ನಾಲಿಗೆ 'ಅಹಂ' (ನಾನು) ಎಂದು ಹೇಳುತ್ತದೆ. ಹಲ್ಲು, ತುಟಿ, ತಾಲು—ಇವೂ ಹಾಗೆ ಹೇಳುತ್ತವೆ. ಆದರೆ 'ಅಹಂ' ಪದಾರ್ಥವಲ್ಲ. ರಾಜ, ಇವು ಕೇವಲ ಶಬ್ದೋಚ್ಚಾರಣೆಗೆ ಸಾಧನಗಳು (87). ಯಾವ ಕಾರಣಗಳಿಂದ ಈ

**ಪಿಂಡಃ ಪೃಥಗ್ಗತಃ ಪುಂಸಃ ಶಿರಃ ಪಾಣ್ಯಾದಿಲಕ್ಷಣಃ।**
**ತತೋಽಹಮಿತಿ ಕುತ್ರೈತಾಂ ಸಂಜ್ಞಾಂ ರಾಜನ್ ಕರೋಮ್ಯಹಮ್॥**

**ಯದ್ಯನ್ಯೋಽಸ್ತಿ ಪರಃ ಕೋಽಪಿಃ ಮತ್ತಃ ಪಾರ್ಥಿವಸತ್ತಮ।**
**ತದೈಷೋಽಹಮಯಂ ಚಾನ್ಯೋ ವಕ್ತುಮೇವಮಪೀಷ್ಯತೇ॥ 90**

**ಯದಾ ಸಮಸ್ತದೇಹೇಷು ಪುಮಾನೇಕೋ ವ್ಯವಸ್ಥಿತಃ।**
**ತದಾ ಹಿ ಕೋ ಭವಾನ್ ಸೋಽಹಮಿತ್ಯೇತದ್ವಿಫಲಂ ವಚಃ॥ 91**

**ತ್ವಂ ರಾಜಾ ಶಿಬಿಕಾ ಚೇಯಮಿಮೇ ವಾಹಾಃ ಪುರಃಸರಾಃ।**
**ಅಯಂ ಚ ಭವತೋ ಲೋಕೋ ನ ಸದೇತನ್ನೃಪೋಚ್ಯತೇ॥ 92**

**ವೃಕ್ಷಾದ್ದಾರು ತತಶ್ಚೇಯಂ ಶಿಬಿಕಾ ತ್ವದಧಿಷ್ಠಿತಾ।**
**ಕಿಂ ವೃಕ್ಷಸಂಜ್ಞಾ ವಾಸ್ಯಾಃ ಸ್ಯಾದ್ದಾರುಸಂಜ್ಞಾಥವಾ ನೃಪ॥ 93**

---

ವಾಗಿಂದ್ರಿಯವು ತನ್ನನ್ನು 'ಅಹಂ' ಎಂದು ಕರೆದುಕೊಳ್ಳುತ್ತದೆ*? ಆದ್ದರಿಂದ 'ನೀನು ಪುಷ್ಟನಾಗಿದ್ದೀಯೆ' ಎನ್ನುವುದು ಯುಕ್ತವಾದ್ದಲ್ಲ (88). ರಾಜ, ತಲೆ ಕೈ ಮೊದಲಾದವುಗಳಿಂದ ಕೂಡಿದ ಈ ದೇಹವು ಆತ್ಮನಿಗಿಂತ ಭಿನ್ನ ವಾದದ್ದು (ಅದು ಆತ್ಮವಲ್ಲ). ಹೀಗಿರುವಾಗ 'ಅಹಂ' ಎಂಬ ಸಂಜ್ಞೆಯಿಂದ ನಾನು ಯಾರನ್ನು ಕರೆಯಬೇಕು? (89). ನೃಪಶ್ರೇಷ್ಠ, ನನಗಿಂತ ಬೇರೆಯಾಗಿ ಇನ್ನೊಬ್ಬನು ಇದ್ದಿದ್ದರೆ, 'ಇವನು ನಾನು, ಅವನು ಅನ್ಯ' ಎಂದಾದರೂ ಹೇಳಲು ಬರುತ್ತಿತ್ತು. ಸಮಸ್ತ ದೇಹಗಳಲ್ಲಿಯೂ ಒಬ್ಬನೇ ಆತ್ಮನು ವ್ಯವಸ್ಥಿತನಾಗಿರುವಾಗ, 'ಯಾರು ನೀನು?' ಎಂಬ ಪ್ರಶ್ನೆಯಾಗಲಿ 'ನಾನು ಇಂಥವನು' ಎಂದು ಉತ್ತರಿಸುವುದಾಗಲಿ ಅರ್ಥಶೂನ್ಯವಾದ ನುಡಿ! (90-91). 'ನೀನು ರಾಜ, ಇದು ಪಲ್ಲಕ್ಕಿ, ಮುಂದಿರತಕ್ಕ ಇವರು ಪಲ್ಲಕ್ಕಿಯ ವಾಹಕರು, ಇವರು ನಿನ್ನ ಪ್ರಜೆಗಳು' ಹೀಗೆನ್ನುವುದು ಪರಮಾರ್ಥದಲ್ಲಿ ಸರಿಯಲ್ಲ (92). ವೃಕ್ಷದಿಂದ ಹಲಗೆ, ಹಲಗೆಯಿಂದ ನೀನು ಕುಳಿತಿದ್ದ ಪಲ್ಲಕ್ಕಿ ಆಗಿದೆ. ಈಗ ಪಲ್ಲಕ್ಕಿಗೆ ವೃಕ್ಷವೆಂಬ ಹೆಸರು

---

* 'ಅಹಂ' ಪದಾರ್ಥವು ಆತ್ಮವೇ ಆಗಬೇಕು. ವಾಕ್, ದೇಹ ಮೊದಲಾದವು ಆತ್ಮವಲ್ಲ. ಆದ್ದರಿಂದ ಅವನು 'ಅಹಂ' ಎಂದು ಗ್ರಹಿಸುವುದು ಭ್ರಾಂತಿ.

**ವೃಕ್ಷಾರೂಢೋ ಮಹಾರಾಜೋ ನಾಯಂ ವದತಿ ತೇ ಜನಃ।**
**ನ ಚ ದಾರುಣಿ ಸರ್ವಸ್ತ್ವಾಂ ಬ್ರವೀತಿ ಶಿಬಿಕಾಗತಮ್॥** 94

**ಶಿಬಿಕಾ ದಾರುಸಂಘಾತೋ ರಚನಾಸ್ಥಿತಿಸಂಸ್ಥಿತಃ।**
**ಅನ್ವಿಷ್ಯತಾಂ ನೃಪಶ್ರೇಷ್ಠ ತದ್ಭೇದೇ ಶಿಬಿಕಾ ತ್ವಯಾ॥** 95

**ಏವಂ ಛತ್ರಶಲಾಕಾನಾಂ ಪೃಥಗ್ಭಾವೇ ವಿಮೃಶ್ಯತಾಮ್।**
**ಕ್ವ ಯಾತಂ ಛತ್ರಮಿತ್ಯೇಷ ನ್ಯಾಯಸ್ತ್ವಯಿ ತಥಾ ಮಯಿ॥** 96

**ಪುಮಾನ್ ಸ್ತ್ರೀ ಗೌರಜೋ ವಾಜೀ ಕುಂಜರೋ ವಿಹಗಸ್ತರುಃ।**
**ದೇಹೇಷು ಲೋಕಸಂಜ್ಞೇಯಂ ವಿಜ್ಞೇಯಾ ಕರ್ಮಹೇತುಷು॥** 97

**ಪುಮಾನ್ನ ದೇವೋ ನ ನರೋ ನ ಪಶುರ್ನ ಚ ಪಾದಪಃ।**
**ಶರೀರಾಕೃತಿಭೇದಾಸ್ತು ಭೂಪೈತೇ ಕರ್ಮಯೋನಯಃ॥** 98

---

ಸರಿಯೋ, ಹಲಗೆಯೆಂದೊ? ನೀನು ಪಲ್ಲಕ್ಕಿಯಲ್ಲಿ ಕುಳಿತಾಗ ಪ್ರಜೆಗಳು 'ನಮ್ಮ ಮಹಾರಾಜನು ವೃಕ್ಷವನ್ನು ಹತ್ತಿದ್ದಾನೆ' ಎಂದಾಗಲಿ, 'ಹಲಗೆಯ ಮೇಲೆ ಕುಳಿತಿದ್ದಾನೆ' ಎಂದಾಗಲಿ ಹೇಳದೆ 'ಪಲ್ಲಕ್ಕಿಯಲ್ಲಿ ಕುಳಿತಿದ್ದಾನೆ' ಎಂದೇ ಹೇಳುತ್ತಾರೆ (93-94). ಶಿಲ್ಪರಚನಾ ವಿಶೇಷದಿಂದ ಹಲಗೆಯ ರಾಶಿಯೇ ಪಲ್ಲಕ್ಕಿ ಎನಿಸಿದೆ. ಈಗ, ಮಹಾರಾಜ, ಹಲಗೆಗಳಿಂದ ಬೇರೆ ಯಾಗಿ ಪಲ್ಲಕ್ಕಿ ಯಾವುದೆಂದು ಹುಡುಕಿನೋಡು! (95). ಹೀಗೆಯೇ ಈ ಕೊಡೆಯ ಕಡ್ಡಿಗಳೆಲ್ಲವನ್ನೂ ಬೇರೆ ತೆಗೆದಿಟ್ಟು, ಆಮೇಲೆ ಕೊಡೆ ಎಲ್ಲಿ ಹೋಯಿತೆಂದು ವಿಚಾರ ಮಾಡು! ಇದೇ ನ್ಯಾಯ ನಿನಗೂ ಅನ್ವಯಿಸುತ್ತದೆ, ನನಗೂ ಅನ್ವಯಿಸುತ್ತದೆ* (96). ಗಂಡಸು, ಹೆಂಗಸು, ಹಸು, ಮೇಕೆ, ಕುದುರೆ, ಆನೆ, ಹಕ್ಕಿ, ವೃಕ್ಷ—ಇವೆಲ್ಲ ದೇಹಗಳಲ್ಲಿ ಜನರು ಇಟ್ಟುಕೊಂಡಿರುವ ಸಂಜ್ಞೆಗಳು. ಈ ದೇಹಗಳು ಅವರವರ ಕರ್ಮಗಳಿಂದ ಬಂದಿರುತ್ತವೆ (97). ಆತ್ಮನಾದರೋ ದೇವತೆಯಲ್ಲ, ಮನುಷ್ಯನಲ್ಲ, ಪಶುವಲ್ಲ, ವೃಕ್ಷವಲ್ಲ. ದೇಹದ ಈ ಆಕೃತಿ ಭೇದಗಳು ಕರ್ಮದಿಂದ

---

* ಪಂಚಭೂತಗಳಿಂದಾದ ರಚನಾ ವಿಶೇಷವು ಶರೀರವೆನಿಸಿಕೊಳ್ಳುತ್ತದೆ. ಪಂಚಭೂತಗಳಿಂದ ಬೇರೆಯಾದ ಶರೀರವಿಲ್ಲ.

**ವಸ್ತು ರಾಜೇತಿ ಯಲ್ಲೋಕೇ ಯಚ್ಚ ರಾಜಭಟಾತ್ಮಕಮ್।**
**ತಥಾನ್ಯಚ್ಚ ನೃಪೇತ್ಥಂ ತನ್ನ ಸತ್ಸಂಕಲ್ಪನಾಮಯಮ್॥ 99**

**ಯತ್ತು ಕಾಲಾಂತರೇಣಾಪಿ ನಾನ್ಯಾಂ ಸಂಜ್ಞಾಮುಪೈತಿ ವೈ।**
**ಪರಿಣಾಮಾದಿ ಸಂಭೂತಾಂ ತದ್ವಸ್ತು ನೃಪ ತಚ್ಚ ಕಿಮ್॥ 100**

**ತ್ವಂ ರಾಜಾ ಸರ್ವಲೋಕಸ್ಯ ಪಿತುಃ ಪುತ್ರೋ ರಿಪೋ ರಿಪುಃ।**
**ಪತ್ನ್ಯಾಃ ಪತಿಃ ಪಿತಾ ಸೂನೋಃ ಕಿಂ ತ್ವಾಂ ಭೂಪ ವದಾಮ್ಯಹಮ್॥ 101**

**ತ್ವಂ ಕಿಮೇತಚ್ಛಿರಃ ಕಿಂ ನು ಗ್ರೀವಾ ತವ ತಥೋದರಮ್।**
**ಕಿಮು ಪಾದಾದಿಕಂ ತ್ವಂ ವಾ ತವೈತತ್ಕಿಂ ಮಹೀಪತೇ॥ 102**

**ಸಮಸ್ತಾವಯವೇಭ್ಯಸ್ತ್ವಂ ಪೃಥಗ್ಭೂಯ ವ್ಯವಸ್ಥಿತಃ।**
**ಕೋಽಹಮಿತ್ಯತ್ರ ನಿಪುಣೋ ಭೂತ್ವಾ ಚಿಂತಯ ಪಾರ್ಥಿವ॥ 103**

---

ಆದವುಗಳು (98). ಲೋಕದಲ್ಲಿ ಇವನು ರಾಜ, ಇವನು ರಾಜಭಟ—ಇತ್ಯಾದಿಯಾಗಿ ಇನ್ನೂ ಬೇರೆ ಬೇರೆ ವ್ಯವಹಾರ ಉಂಟಷ್ಟೆ. ಇದೆಲ್ಲವೂ ಪರಮಾರ್ಥವಲ್ಲ, ಕಲ್ಪನಾಮಯವಾದದ್ದು (99). ಯಾವುದು ಕಾಲಾಂತರದಲ್ಲಿಯೂ ಪರಿಣಾಮಾದಿಗಳಿಂದ (ವಿಕಾರವನ್ನು ಹೊಂದದೆ) ಬೇರೆ ಸಂಜ್ಞೆಯನ್ನು ಪಡೆಯುವುದೇ ಇಲ್ಲವೋ ಅದು ಪರಮಾರ್ಥ. ರಾಜ, ಅದು ಯಾವುದು? (100). ನೀನು ನಿನ್ನ ಎಲ್ಲ ಪ್ರಜೆಗಳಿಗೂ ರಾಜನೆನಿಸಿದ್ದೀಯೆ. ತಂದೆಗೆ ಪುತ್ರನೆನಿಸಿದ್ದೀಯೆ. ವೈರಿಗೆ ವೈರಿಯೆನಿಸಿ, ಪತ್ನಿಗೆ ಪತಿಯಾಗಿ, ಮಗನಿಗೆ ತಂದೆ ಎನಿಸಿದ್ದೀಯೆ. ಇವುಗಳಲ್ಲಿ ಯಾವ ಹೆಸರಿನಿಂದ ನಿನ್ನನ್ನು ನಾನು ಕರೆಯಬೇಕು? (101). ಈ ಶಿರಸ್ಸು ನೀನೆ? ಕುತ್ತಿಗೆ ನೀನೆ? ಹಾಗೆಯೇ ಪಾದಾದ್ಯವಯವಗಳು ನೀನೆ? ಭೂಪಾಲ, ನಿನಗೂ ಇವುಗಳಿಗೂ ಯಾವ ಸಂಬಂಧ ಉಂಟು? (ಇವು ನಿನಗೇನಾಗ ಬೇಕು?) (102). ಈ ಎಲ್ಲ ಅವಯವಗಳಿಗಿಂತ ನೀನು ಪೃಥಕ್ ಆಗಿ ಇದ್ದೀಯೆ. ರಾಜ, ಬುದ್ಧಿಶಾಲಿಯಾದ ನೀನು ಈಗ 'ನಾನು ಯಾರು?' ಎಂದು ಚಿಂತಿಸು. ಹೀಗೆ ವಸ್ತುತತ್ತ್ವವು ವ್ಯವಸ್ಥಿತವಾಗಿರಲಾಗಿ,

**ಏವಂ ವ್ಯವಸ್ಥಿತೇ ತತ್ತ್ವೇ ಮಯಾಹಮಿತಿ ಭಾಷಿತುಮ್ ।**
**ಪೃಥಕ್ಕರಣನಿಷ್ಪಾದ್ಯಂ ಶಕ್ಯತೇ ನೃಪತೇ ಕಥಮ್ ॥** 104

**ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ತ್ರಯೋದಶೋಽಧ್ಯಾಯಃ**

---

ಇವೆಲ್ಲವನ್ನು ಪೃಥಕ್ಕರಿಸಿ, ರಾಜ, 'ನಾನು ಇಂಥವನು' ಎಂದು ಹೇಗೆ ಹೇಳಲು ಸಾಧ್ಯ?" ಎಂದನು (103-104).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಹದಿಮೂರನೆಯ ಅಧ್ಯಾಯ ಮುಗಿಯಿತು.



## ಚತುರ್ದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ನಿಶಮ್ಯ ತಸ್ಯೇತಿ ವಚಃ ಪರಮಾರ್ಥಸಮನ್ವಿತಮ್।**
**ಪ್ರಶ್ರಯಾವನತೋ ಭೂತ್ವಾ ತಮಾಹ ನೃಪತಿರ್ದ್ವಿಜಮ್॥ 1**

*ರಾಜೋವಾಚ:*

**ಭಗವನ್ ಯತ್ತ್ವಯಾ ಪ್ರೋಕ್ತಂ ಪರಮಾರ್ಥಮಯಂ ವಚಃ।**
**ಶ್ರುತೇ ತಸ್ಮಿನ್ ಭ್ರಮಂತೀವ ಮನಸೋ ಮಮ ವೃತ್ತಯಃ॥ 2**

**ಏತದ್ವಿವೇಕವಿಜ್ಞಾನಂ ಯದಶೇಷೇಷು ಜಂತುಷು।**
**ಭವತಾ ದರ್ಶಿತಂ ವಿಪ್ರ ತತ್ಪರಂ ಪ್ರಕೃತೇರ್ಮಹತ್॥ 3**

**ನಾಹಂ ವಹಾಮಿ ಶಿಬಿಕಾಂ ಶಿಬಿಕಾ ನ ಮಯಿ ಸ್ಥಿತಾ।**
**ಶರೀರಮನ್ಯದಸ್ಮತ್ತೋ ಯೇನೇಯಂ ಶಿಬಿಕಾ ಧೃತಾ॥ 4**

---

## ಅಧ್ಯಾಯ 14

### ಜಡಭರತನಿಂದ ಪರಮಾರ್ಥದ ನಿರೂಪಣೆ

ಪರಾಶರರು ಹೇಳಿದರು: ವಿಪ್ರನ ಪರಮಾರ್ಥಯುಕ್ತವಾದ ಮಾತನ್ನು ಕೇಳಿ, ಸೌವೀರರಾಜನು ವಿನಯದಿಂದ ಆತನಿಗೆ ನಮಸ್ಕರಿಸಿ ಹೀಗೆ ಹೇಳಿದನು (1). "ಭಗವನ್, ಪರಮಾರ್ಥಮಯವಾದ ನಿನ್ನ ಮಾತನ್ನು ಕೇಳಿ ನನ್ನ ಮನೋವ್ಯಾಪಾರಗಳು ತಳಮಳದಿಂದ ಹೊಯ್ದಾಡುತ್ತಿವೆಯೋ ಎಂಬಂತಾಗಿದೆ (2). ಸಮಸ್ತ ಜಂತುಗಳಲ್ಲಿಯೂ ಬೇರೆಯಾದ ಅಸಂಗವಿಜ್ಞಾನವಿದೆಯೆಂದು ತೋರಿಸಿದ್ದೀಯೆ. ಬ್ರಾಹ್ಮಣೋತ್ತಮ, ಅದು ಪ್ರಕೃತಿಯ ಆಚೆಗಿರುವ ಮಹತ್ತರವಾದ ಬ್ರಹ್ಮವೆಂಬುದು ಸರಿ (3). ಆದರೆ 'ನಾನು ಪಲ್ಲಕ್ಕಿಯನ್ನು ಹೊರುತ್ತಿಲ್ಲ. ಪಲ್ಲಕ್ಕಿ ನನ್ನ ಮೇಲಿಲ್ಲ. ನಮಗಿಂತ ಶರೀರ ಬೇರೆ. ಶರೀರವು ಪಲ್ಲಕ್ಕಿಯನ್ನು ಹೊತ್ತಿದೆ. ಸತ್ತ್ವಾದಿ ಗುಣಗಳ

**ಗುಣಪ್ರವೃತ್ತ್ಯಾ ಭೂತಾನಾಂ ಪ್ರವೃತ್ತಿಃ ಕರ್ಮಚೋದಿತಾ।**
**ಪ್ರವರ್ತಂತೇ ಗುಣಾ ಹ್ಯೇತೇ ಕಿಂ ಮಮೇತಿ ತ್ವಯೋದಿತಮ್॥**

**ಏತಸ್ಮಿನ್ ಪರಮಾರ್ಥಜ್ಞ ಮಮ ಶ್ರೋತ್ರಪಥಂಗತೇ।**
**ಮನೋ ವಿಹ್ವಲತಾಮೇತಿ ಪರಮಾರ್ಥಾರ್ಥಿತಾಂ ಗತಮ್॥ 6**

**ಪೂರ್ವಮೇವ ಮಹಾಭಾಗಂ ಕಪಿಲರ್ಷಿಮಹಂ ದ್ವಿಜ।**
**ಪ್ರಷ್ಟುಮಭ್ಯುದ್ಯತೋ ಗತ್ವಾ ಶ್ರೇಯಃ ಕಿಂ ತ್ವತ್ರ ಶಂಸ ಮೇ॥ 7**

**ತದಂತರೇ ಚ ಭವತಾ ಯದೇತದ್ವಾಕ್ಯಮೀರಿತಮ್।**
**ತೇನೈವ ಪರಮಾರ್ಥಾರ್ಥಂ ತ್ವಯಿ ಚೇತಃ ಪ್ರಧಾವತಿ॥ 8**

**ಕಪಿಲರ್ಷಿರ್ಭಗವತಃ ಸರ್ವಭೂತಸ್ಯ ವೈ ದ್ವಿಜ।**
**ವಿಷ್ಣೋರಂಶೋ ಜಗನ್ಮೋಹನಾಶಾಯೋರ್ವೀಮುಪಾಗತಃ॥ 9**

**ಸ ಏವ ಭಗವಾನ್ ನೂನಮಸ್ಮಾಕಂ ಹಿತಕಾಮ್ಯಯಾ।**
**ಪ್ರತ್ಯಕ್ಷತಾಮತ್ರ ಗತೋ ಯಥೈತದ್ಭವತೋಚ್ಯತೇ॥ 10**

---

ಪ್ರವೃತ್ತಿಯಿಂದ ಪ್ರಾಣಿಗಳು ಕೆಲಸದಲ್ಲಿ ತೊಡಗುತ್ತವೆ. ಅದು ಕರ್ಮದಿಂದ ಪ್ರೇರಿತವಾದದ್ದು. ಗುಣಗಳು ಪ್ರವರ್ತಿಸುತ್ತವೆ. ಅದರಿಂದ ನನಗೇನಾಯಿತು?' ಎಂದು ನೀನು ಹೇಳಿದೆ (4-5). ಪರಮಾರ್ಥವನ್ನು ಬಲ್ಲ ಬ್ರಾಹ್ಮಣನೆ, ಈ ಮಾತು ನನ್ನ ಕಿವಿಗೆ ಬಿದ್ದುದರಿಂದ ಮನಸ್ಸು ತಳಮಳಿಸುತ್ತಿದೆ. ಪರಮಾರ್ಥವನ್ನು ತಿಳಿಯಲು ಬಯಸುತ್ತಿದೆ. ನಾನಾದರೋ ಮಹಾತ್ಮನಾದ ಕಪಿಲ ಮಹರ್ಷಿಯ ಬಳಿಗೆ ಹೋಗಿ 'ನನಗೆ ಶ್ರೇಯಸ್ಕರವಾದದ್ದು ಯಾವುದು? ನನಗೆ ತಿಳಿಸಿಕೊಡಿ' ಎಂದು ಕೇಳುವುದಕ್ಕಾಗಿ ಹೊರಟವನು (6-7). ಈ ನಡುವೆ ನೀನು ಈ ಪ್ರಕಾರ ಹೇಳಿದ್ದರಿಂದ ನಿನ್ನಲ್ಲಿಯೇ ಪರಮಾರ್ಥವನ್ನು ತಿಳಿಯಬೇಕೆಂದು ಮನಸ್ಸು ಹವಣಿಸುತ್ತಿದೆ. ಕಪಿಲಮುನಿಯಾದರೋ ಸರ್ವಭೂತಾತ್ಮಕನಾದ ಭಗವಾನ್ ವಿಷ್ಣುವಿನ ಅಂಶಾವತಾರ. ಜಗತ್ತಿನ ಅಜ್ಞಾನವನ್ನು ಹೋಗಲಾಡಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸಿದ್ದಾನೆ (8-9). ನೀನು ಮಾತಾಡುವುದನ್ನು ನೋಡಿದರೆ ಕಪಿಲಮುನಿಯೇ ಇಲ್ಲಿ ನನ್ನ ಹಿತಕ್ಕಾಗಿ

**ತನ್ಮಹ್ಯಂ ಪ್ರಣತಾಯ ತ್ವಂ ಯಚ್ಛ್ರೇಯಃ ಪರಮಂ ದ್ವಿಜ।**
**ತದ್ವದಾಖಿಲವಿಜ್ಞಾನಜಲವೀಚ್ಯುದಧಿರ್ಭವಾನ್॥ 11**

*ಬ್ರಾಹ್ಮಣ ಉವಾಚ:*

**ಭೂಪ ಪೃಚ್ಛಸಿ ಕಿಂ ಶ್ರೇಯಃ ಪರಮಾರ್ಥಂ ನು ಪೃಚ್ಛಸಿ।**
**ಶ್ರೇಯಾಂಸ್ಯಪರಮಾರ್ಥಾನಿ ಅಶೇಷಾಣಿ ಚ ಭೂಪತೇ॥ 12**

**ದೇವತಾರಾಧನಂ ಕೃತ್ವಾ ಧನಸಂಪದಮಿಚ್ಛತಿ।**
**ಪುತ್ರಾನಿಚ್ಛತಿ ರಾಜ್ಯಂ ಚ ಶ್ರೇಯಸ್ತಸ್ಯೈವ ತನ್ನೃಪ॥ 13**

**ಕರ್ಮ ಯಜ್ಞಾತ್ಮಕಂ ಶ್ರೇಯಃ ಫಲಂ ಸ್ವರ್ಗಾಪ್ತಿಲಕ್ಷಣಮ್।**
**ಶ್ರೇಯಃ ಪ್ರಧಾನಂ ಚ ಫಲೇ ತದೇವಾನಭಿಸಂಹಿತೇ॥ 14**

**ಆತ್ಮಾ ಧ್ಯೇಯಃ ಸದಾ ಭೂಪ ಯೋಗಯುಕ್ತೈಸ್ತಥಾ ಪರಮ್।**
**ಶ್ರೇಯಸ್ತಸ್ಯೈವ ಸಂಯೋಗಃ ಶ್ರೇಯೋ ಯಃ ಪರಮಾತ್ಮನಃ॥ 15**

---

ನಿನ್ನ ರೂಪದಲ್ಲಿ ಪ್ರತ್ಯಕ್ಷನಾಗಿದ್ದಾನೆಂದು ತಿಳಿಯುತ್ತೇನೆ (10). ಆದ್ದರಿಂದ, ಹೇ ವಿಪ್ರೋತ್ತಮ, ನಾನು ನಿನಗೆ ಶರಣಾಗಿದ್ದೇನೆ. ನನಗೆ ಪರಮ ಶ್ರೇಯಸ್ಸು ಯಾವುದು? ಹೇಳು. ಸಮಸ್ತ ವಿಜ್ಞಾನಜಲತರಂಗಗಳಿಂದ ಕೂಡಿದ ಮಹಾಸಮುದ್ರವೇ ಆಗಿದ್ದೀಯೆ" ಎಂದನು (11). ಆಗ ಬ್ರಾಹ್ಮಣನು (ಜಡಭರತನು) ಹೇಳಿದನು: "ರಾಜ, ನೀನು ಶ್ರೇಯಸ್ಸನ್ನು ಕೇಳುತ್ತೀಯೋ? ಪರಮಾರ್ಥವನ್ನೋ? ಶ್ರೇಯಸ್ಸೆಂಬುದು ಯಾವ ಯಾವುದುಂಟೋ ಅದೆಲ್ಲವೂ ಪರಮಾರ್ಥವೇ ಅಲ್ಲ! (12). ಒಬ್ಬನು ದೇವತಾರಾಧನೆಯನ್ನು ಮಾಡಿ ಧನಸಂಪತ್ತಿಯನ್ನು ಬಯಸುತ್ತಾನೆ. ಪುತ್ರರನ್ನು ಬಯಸುತ್ತಾನೆ. ರಾಜ್ಯವನ್ನಾದರೂ ಬಯಸುತ್ತಾನೆ. ಆತನ ಪಾಲಿಗೆ ಅದೇ ಶ್ರೇಯಸ್ಸು (13). ಸ್ವರ್ಗ ಮುಂತಾದ ಫಲವುಳ್ಳ ಯಜ್ಞಾತ್ಮಕ ಕರ್ಮವು ಶ್ರೇಯಸ್ಸು. ಅದೇ ಕರ್ಮವು ಫಲಾಪೇಕ್ಷೆಯಿಲ್ಲದಿದ್ದಾಗ ಪರಮ ಶ್ರೇಯಸ್ಕರ. ರಾಜ, ಯೋಗಯುಕ್ತವಾಗಿ ಸದಾ ಆತ್ಮಧ್ಯಾನದಲ್ಲಿರುವುದು ಶ್ರೇಯಸ್ಸು. ಆ ಪರಮಾತ್ಮನೊಡನೆ ಸಂಯೋಗ ಹೊಂದಿ ಐಕ್ಯವಾಗುವುದು

**ಶ್ರೇಯಾಂಸ್ಯೇವಮನೇಕಾನಿ ಶತಶೋಽಥ ಸಹಸ್ರಶಃ।**
**ಸಂತ್ಯತ್ರ ಪರಮಾರ್ಥಸ್ತು ನ ತ್ವೇತೇ ಶ್ರೂಯತಾಂ ಚ ಮೇ॥ 16**

**ಧರ್ಮಾಯ ತ್ಯಜ್ಯತೇ ಕಿನ್ನು ಪರಮಾರ್ಥೋ ಧನಂ ಯದಿ।**
**ವ್ಯಯಶ್ಚ ಕ್ರಿಯತೇ ಕಸ್ಮಾತ್ ಕಾಮಪ್ರಾಪ್ತ್ಯುಪಲಕ್ಷಣಃ॥ 17**

**ಪುತ್ರಶ್ಚೇತ್ಪರಮಾರ್ಥಃ ಸ್ಯಾತ್ ಸೋಽಪ್ಯನ್ಯಸ್ಯ ನರೇಶ್ವರ।**
**ಪರಮಾರ್ಥಭೂತಃ ಸೋಽನ್ಯಸ್ಯ ಪರಮಾರ್ಥೋ ಹಿ ತತ್ಪಿತಾ॥ 18**

**ಏವಂ ನ ಪರಮಾರ್ಥೋಽಸ್ತಿ ಜಗತ್ಯಸ್ಮಿನ್ ಚರಾಚರೇ।**
**ಪರಮಾರ್ಥೋ ಹಿ ಕಾರ್ಯಾಣಿ ಕಾರಣಾನಾಮಶೇಷತಃ॥ 19**

**ರಾಜ್ಯಾದಿಪ್ರಾಪ್ತಿರತ್ರೋಕ್ತಾ ಪರಮಾರ್ಥತಯಾ ಯದಿ।**
**ಪರಮಾರ್ಥಾ ಭವಂತ್ಯತ್ರ ನ ಭವಂತಿ ಚ ವೈ ತತಃ॥ 20**

---

ಹೆಚ್ಚಿನ ಶ್ರೇಯಸ್ಸು (14-15). ಹೀಗೆ ನೂರಾರು ಸಾವಿರಾರು ಶ್ರೇಯಸ್ಸುಗಳಿವೆ. ಇವೆಲ್ಲ ಪರಮಾರ್ಥವಲ್ಲ. ನನ್ನ ಮಾತನ್ನು ಕೇಳು, ಧರ್ಮ ಸಂಪಾದನೆಗಾಗಿ ಹಣವನ್ನು ವೆಚ್ಚ ಮಾಡಲಾಗುತ್ತದೆ. ಹಣವೇ ಮಾನವನ ಗುರಿಯಾಗಿದ್ದ ಪಕ್ಷದಲ್ಲಿ ಅದನ್ನು ವೆಚ್ಚ ಮಾಡುವುದೇಕೆ? ಹಾಗೆಯೇ ಸುಖಭೋಗಕ್ಕಾಗಿ ಖರ್ಚುಮಾಡುವುದೇಕೆ? (16-17). ಪುತ್ರನೇ ಪಡೆಯಬೇಕಾದ ಪರಮಾರ್ಥವಸ್ತುವಾಗಿದ್ದಲ್ಲಿ, ಪುತ್ರನನ್ನು ಬಯಸುವವನೇ ಅವನ ತಂದೆಗೆ ಪರಮಾರ್ಥವಸ್ತುವಾಗಿದ್ದನಲ್ಲವೆ! ಆತನ ತಂದೆ ಇನ್ನೊಬ್ಬನಿಗೆ ಪರಮಾರ್ಥವಾದನಲ್ಲವೆ? (18). ಆದ್ದರಿಂದ ಚರಾಚರಾತ್ಮಕವಾದ ಈ ಜಗತ್ತಿನಲ್ಲಿ ಪರಮಾರ್ಥವೆಂಬುದು ಯಾವುದೂ ಇಲ್ಲ. ಕಾರಣಗಳಿಗೆ ಅವುಗಳಿಂದ ಹುಟ್ಟುವ ಕಾರ್ಯಗಳು ಪರಮಾರ್ಥವೆಂದು ಲೋಕದಲ್ಲಿ ತಿಳಿಯಲಾಗುತ್ತಿದೆ (19). ರಾಜ್ಯಾದಿ ಪ್ರಾಪ್ತಿಯು ಪರಮಾರ್ಥವಾದರೆ, ಆ ಪರಮಾರ್ಥವು ಕೆಲವು ಕಾಲ ಲಭಿಸುತ್ತದೆ, ಆಮೇಲೆ ಕೈತಪ್ಪಿಹೋಗುತ್ತದೆ ಎಂದಾಗುವುದು (ಪರಮಾರ್ಥವು ನಿತ್ಯವಾಗಿರಬೇಕು. ಅನಿತ್ಯವಸ್ತು ಪರಮಾರ್ಥವಲ್ಲ) (20). ರಾಜ, ಋಗ್ಯಜುಃಸಾಮಗಳಿಂದ ನಿಷ್ಪನ್ನವಾಗುವ ಯಜ್ಞಕರ್ಮವು ಪರಮ ಸತ್ಯವೆಂದು ನಿನ್ನ ಅಭಿಪ್ರಾಯ

**ಋಗ್ಯಜುಃಸಾಮನಿಷ್ಪಾದ್ಯಂ ಯಜ್ಞಕರ್ಮ ಮತಂ ತವ।**
**ಪರಮಾರ್ಥಭೂತಂ ತತ್ರಾಪಿ ಶ್ರೂಯತಾಂ ಗದತೋ ಮಮ॥ 21**

**ಯತ್ತು ನಿಷ್ಪಾದ್ಯತೇ ಕಾರ್ಯಂ ಮೃದಾ ಕಾರಣಭೂತಯಾ।**
**ತತ್ಕಾರಣಾನುಗಮನಾಜ್ಜ್ಞಾಯತೇ ನೃಪ ಮೃಣ್ಮಯಮ್॥ 22**

**ಏವಂ ವಿನಾಶಿಭಿರ್ದ್ರವ್ಯೈಃ ಸಮಿದಾಜ್ಯಕುಶಾದಿಭಿಃ।**
**ನಿಷ್ಪಾದ್ಯತೇ ಕ್ರಿಯಾ ಯಾ ತು ಸಾ ಭವಿತ್ರೀ ವಿನಾಶಿನೀ॥ 23**

**ಅನಾಶೀ ಪರಮಾರ್ಥಶ್ಚ ಪ್ರಾಜ್ಞೈರಭ್ಯುಪಗಮ್ಯತೇ।**
**ತತ್ತು ನಾಶಿ ನ ಸಂದೇಹೋ ನಾಶಿದ್ರವ್ಯೋಪಪಾದಿತಮ್॥ 24**

**ತದೇವಾಫಲದಂ ಕರ್ಮ ಪರಮಾರ್ಥೋ ಮತಸ್ತವ।**
**ಮುಕ್ತಿಸಾಧನಭೂತತ್ವಾತ್ ಪರಮಾರ್ಥೋ ನ ಸಾಧನಮ್॥ 25**

---

ವಿದ್ದರೆ, ಆ ವಿಷಯದಲ್ಲಿಯೂ ನಾನು ಹೇಳುವುದನ್ನು ಕೇಳು (21). ಕಾರಣವಾದ ಮಣ್ಣಿನಿಂದ ಕಾರ್ಯವಾದ ಯಾವ ಗಡಿಗೆ ಹುಟ್ಟುತ್ತದೆಯೋ ಆ ಗಡಿಗೆ ಕಾರಣದ ಅನುಗಮನದಿಂದ* ಮಣ್ಣಿನ ಸ್ವರೂಪವೆಂದು ಗೊತ್ತಾಗುತ್ತದೆ (ಮಣ್ಣಿನ ಗುಣ ಗಡಿಗೆಯಲ್ಲಿ ಸೇರಿರುತ್ತದೆ) (22). ಆದ್ದರಿಂದ ಸಮಿತ್ತು, ತುಪ್ಪ, ದರ್ಭೆ ಮೊದಲಾದ ವಿನಾಶಿದ್ರವ್ಯಗಳಿಂದ ನಿಷ್ಪನ್ನವಾಗುವ ಯಜ್ಞಕರ್ಮವು ವಿನಾಶಿಯಾಗಲೇಬೇಕು. ಪರಮಾರ್ಥವಾದರೋ ನಾಶವಿಲ್ಲದ್ದೆಂದು ಜ್ಞಾನಿಗಳು ಒಪ್ಪಿಕೊಂಡಿದ್ದಾರೆ. ವಿನಾಶಿದ್ರವ್ಯಗಳಿಂದ ಹುಟ್ಟುವ ಯಜ್ಞಕರ್ಮವು ವಿನಾಶಿಯೆಂಬುದರಲ್ಲಿ ಸಂದೇಹವಿಲ್ಲ (23-24). ಫಲವನ್ನು ಕೊಡದಿರುವ ನಿಷ್ಕಾಮಕರ್ಮವು ಪರಮಾರ್ಥವೆಂದು ನೀನು ತಿಳಿದಿದ್ದರೆ ಅದೂ ಸರಿಯಲ್ಲ. ನಿಷ್ಕಾಮಕರ್ಮವು ಮುಕ್ತಿಗೆ ಸಾಧನವಾದದ್ದು. ಯಾವುದು ಸಾಧನವೋ ಅದು ಪರಮಾರ್ಥವಲ್ಲ (25). ಭೂಪಾಲ, ಪರಮಾರ್ಥ ಎಂಬ ಶಬ್ದದಿಂದ ಆತ್ಮನ ಧ್ಯಾನವನ್ನು ಗ್ರಹಿಸುವುದಾದರೆ, ಅದೂ ಸರಿಯಲ್ಲ. ಧ್ಯಾನವು (ಧ್ಯಾತೃ ಧ್ಯೇಯ ಎಂದು)

---

* 'ಕಾರಣಗುಣಾಃ ಕಾರ್ಯೇ ಸಂಕ್ರಮಂತಿ' ಎಂದು ನ್ಯಾಯವಿದೆ. ಕಾರಣ ಗುಣಗಳು ಕಾರ್ಯದಲ್ಲಿ ಸೇರಿಕೊಳ್ಳುತ್ತವೆ.

**ಧ್ಯಾನಂ ಚೈವಾತ್ಮನೋ ಭೂಪ ಪರಮಾರ್ಥಾರ್ಥಶಬ್ದಿತಮ್।**
**ಭೇದಕಾರಿ ಪರೇಭ್ಯಸ್ತು ಪರಮಾರ್ಥೋ ನ ಭೇದವಾನ್॥ 26**

**ಪರಮಾತ್ಮಾತ್ಮನೋರ್ಯೋಗಃ ಪರಮಾರ್ಥ ಇತೀಷ್ಯತೇ।**
**ಮಿಥ್ಯೈತದನ್ಯದ್‌ದ್ರವ್ಯಂ ಹಿ ನೈತಿ ತದ್‌ದ್ರವ್ಯತಾಂ ಯತಃ॥ 27**

**ತಸ್ಮಾತ್ ಶ್ರೇಯಾಂಸ್ಯಶೇಷಾಣಿ ನೃಪೈತಾನಿ ನ ಸಂಶಯಃ।**
**ಪರಮಾರ್ಥಸ್ತು ಭೂಪಾಲ ಸಂಕ್ಷೇಪಾತ್‌ಶ್ರೂಯತಾಂ ಮಮ॥**

**ಏಕೋ ವ್ಯಾಪೀ ಸಮಃ ಶುದ್ಧೋ ನಿರ್ಗುಣಃ ಪ್ರಕೃತೇಃ ಪರಃ।**
**ಜನ್ಮವೃದ್ಧ್ಯಾದಿರಹಿತ ಆತ್ಮಾ ಸರ್ವಗತೋಽವ್ಯಯಃ॥ 29**

**ಪರಜ್ಞಾನಮಯೋಽಸದ್ಭಿರ್ನಾಮಜಾತ್ಯಾದಿಭಿರ್ವಿಭುಃ।**
**ನ ಯೋಗವಾನ್ನ ಯುಕ್ತೋಽಭೂನ್ನೈವ ಪಾರ್ಥಿವ ಯೋಕ್ಷ್ಯತೇ॥**

---

ಬೇರೆ ವಸ್ತುವಿನಿಂದ ಭೇದವನ್ನು ಒಳಗೊಂಡಿರುತ್ತದೆ. ಪರಮಾರ್ಥದಲ್ಲಿ ಭೇದದ ಸೋಂಕು ಇಲ್ಲ (26). ಪರಮಾತ್ಮಜೀವಾತ್ಮರು ಸಂಯೋಗದಿಂದ ಐಕ್ಯವಾಗುವುದು ಪರಮಾರ್ಥವೆಂದು ಕೆಲವರ ಅಭಿಪ್ರಾಯವಿದೆ, ಅದೂ ಸುಳ್ಳು. ಬೇರೊಂದು ದ್ರವ್ಯವು ಯಾವ ಸಂದರ್ಭದಲ್ಲಿಯೂ ಇನ್ನೊಂದು ದ್ರವ್ಯವಾಗುವುದಿಲ್ಲ* (27). ಆದ್ದರಿಂದ, ರಾಜ, ಇವೆಲ್ಲವೂ ಶ್ರೇಯಸ್ಸುಗಳು ಹೌದು, ಸಂದೇಹವಿಲ್ಲ. ಆದರೆ ಪರಮಾರ್ಥವಲ್ಲ. ಪರಮಾರ್ಥ ಯಾವುದೆಂದು ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು (28). ಆತ್ಮನು ಒಬ್ಬನೇ. ಅವನು ವ್ಯಾಪಕ, ಸಮ, ಶುದ್ಧ, ನಿರ್ಗುಣ, ಪ್ರಕೃತಿಗೆ ಪರ; ಜನ್ಮ-ವೃದ್ಧಿ ಮೊದಲಾದ ಯಾವ ವಿಕಾರವೂ ಇಲ್ಲದವನು, ಸರ್ವಗತ, ಅವಿನಾಶಿ (29). ಆತ್ಮನು ಪರಮಜ್ಞಾನಸ್ವರೂಪ. ಆ ವಿಭುವಿಗೆ ಅಸದ್ವಸ್ತುಗಳಾದ ನಾಮ ಜಾತಿ—ಮುಂತಾದವುಗಳಿಂದ ಸಂಬಂಧವಿರುವುದಿಲ್ಲ. ಹಿಂದೆ ಸಂಬಂಧವಿರಲೂ ಇಲ್ಲ. ಮುಂದೆ ಆಗುವುದೂ ಇಲ್ಲ (30). ಆತನು

---

* ಜೀವಾತ್ಮನು ಪರಮಾತ್ಮನಿಗಿಂತ ಭಿನ್ನನೆಂದೂ ಮುಕ್ತಿದಶೆಯಲ್ಲಿ ಪರಮಾತ್ಮನೊಡನೆ ಏಕನಾಗುತ್ತಾನೆಂದೂ ಹೇಳುವ ಮತವನ್ನು ಇಲ್ಲಿ ದೂಷಿಸಲಾಗಿದೆ. ಜೀವಾತ್ಮನು ಪರಮಾತ್ಮನಿಗಿಂತ ಯಾವಾಗಲೂ ಭಿನ್ನನಾಗಿಯೇ ಇಲ್ಲವೆಂದು ಸಿದ್ಧಾಂತ.

**ತಸ್ಮಾತ್ಮಪರದೇಹೇಷು ಸತೋಽಪ್ಯೇಕಮಯಂ ಹಿ ಯತ್।**
**ವಿಜ್ಞಾನಂ ಪರಮಾರ್ಥೋಽಸೌ ದ್ವೈತಿನೋಽತಥ್ಯದರ್ಶಿನಃ॥ 31**

**ವೇಣುರಂಧ್ರಪ್ರಭೇದೇನ ಭೇದಃ ಷಡ್‌ಜಾದಿಸಂಜ್ಞಿತಃ।**
**ಅಭೇದವ್ಯಾಪಿನೋ ವಾಯೋಸ್ತಥಾಸ್ಯ ಪರಮಾತ್ಮನಃ॥ 32**

**ಏಕಸ್ವರೂಪಭೇದಶ್ಚ ಬಾಹ್ಯಕರ್ಮಪ್ರವೃತ್ತಿಜಃ।**
**ದೇವಾದಿಭೇದೇಽಪಧ್ವಸ್ತೇ ನಾಸ್ತ್ಯೇವಾವರಣೇ ಹಿ ಸಃ॥ 33**

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ಚತುರ್ದಶೋಽಧ್ಯಾಯಃ

---

ನಮ್ಮ ದೇಹದಲ್ಲಿಯೂ ಅನ್ಯರ ದೇಹಗಳಲ್ಲಿಯೂ ಇದ್ದರೂ ಒಬ್ಬನೇ ಆಗಿದ್ದಾನೆ. ಏಕಸ್ವರೂಪವಾದ ಆ ವಿಜ್ಞಾನವೊಂದೇ ಪರಮಾರ್ಥ. ದ್ವೈತಿಗಳು ಅಸತ್ಯದರ್ಶಿಗಳು (ಸತ್ಯವನ್ನು ಕಂಡವರಲ್ಲ) (31). ಯಾವ ರೀತಿ ಅಭಿನ್ನಭಾವದಿಂದ ಕೊಳಲಿನಲ್ಲಿ ವ್ಯಾಪಿಸಿಕೊಂಡಿರುವ ವಾಯುವಿಗೆ, ಕೊಳಲಿನ ರಂಧ್ರಗಳ ಭೇದದಿಂದ ಷಡ್ಜಾದಿ ಸ್ವರಭೇದವಾಗುವುದೋ ಹಾಗೆ ಆ ಪರಮಾತ್ಮನಿಗೂ (ಶರೀರಭೇದದಿಂದ) ಮನುಷ್ಯ ಮೃಗಾದಿ ಭೇದವುಂಟಾಗುವುದು (32). ಬಾಹ್ಯವಾದ ದೇಹಾದಿಗಳ ಕರ್ಮಪ್ರವೃತ್ತಿ ಗಳಿಂದ ಏಕಸ್ವರೂಪನಾದ ಆತ್ಮನಿಗೂ ಭೇದ ಕಾಣುತ್ತದೆ. ದೇವಾದಿ ಶರೀರ ಭೇದವನ್ನು (ಜ್ಞಾನದಿಂದ) ಹೋಗಲಾಡಿಸಿಕೊಂಡಾಗ ಭೇದ ಉಳಿಯುವುದೇ ಇಲ್ಲ. ಅವಿದ್ಯೆಯ ಆವರಣವಿದ್ದಾಗಲ್ಲವೆ ಅದು ಇರತಕ್ಕದ್ದು?" (33).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಇತ್ಯುಕ್ತೇ ಮೌನಿನಂ ಭೂಯಶ್ಚಿಂತಯಾನಂ ಮಹೀಪತಿಮ್।**
**ಪ್ರತ್ಯುವಾಚಾಥ ವಿಪ್ರೋಽಸಾವದ್ವೈತಾಂತರ್ಗತಾಂ ಕಥಾಮ್॥ 1**

*ಬ್ರಾಹ್ಮಣ ಉವಾಚ:*

**ಶ್ರೂಯತಾಂ ನೃಪಶಾರ್ದೂಲ ಯದ್ಗೀತಮೃಭುಣಾ ಪುರಾ।**
**ಅವಬೋಧಂ ಜನಯತಾ ನಿದಾಘಸ್ಯ ಮಹಾತ್ಮನಃ॥ 2**

**ಋಭುರ್ನಾಮಾಭವತ್ ಪುತ್ರೋ ಬ್ರಹ್ಮಣಃ ಪರಮೇಷ್ಠಿನಃ।**
**ವಿಜ್ಞಾತತತ್ತ್ವಸದ್ಭಾವೋ ನಿಸರ್ಗಾದೇವ ಭೂಪತೇ॥ 3**

**ತಸ್ಯ ಶಿಷ್ಯೋ ನಿದಾಘೋಽಭೂತ್ಪುಲಸ್ತ್ಯತನಯಃ ಪುರಾ।**
**ಪ್ರಾದಾದಶೇಷವಿಜ್ಞಾನಂ ಸ ತಸ್ಮೈ ಪರಯಾ ಮುದಾ॥ 4**

---

## ಅಧ್ಯಾಯ 15

### ಋಭುವಿನಿಂದ ನಿದಾಘನಿಗೆ ಅದ್ವೈತ ಜ್ಞಾನೋಪದೇಶ

ಪರಾಶರರು ಹೇಳಿದರು: ಮೈತ್ರೇಯ, ವಿಪ್ರನು ಈ ಪ್ರಕಾರವಾಗಿ ಹೇಳಲು ಸೌವೀರರಾಜನು ಮೌನವಾಗಿ ಚಿಂತಿಸತೊಡಗಿದನು. ಆಗ ವಿಪ್ರನು ಅದ್ವೈತ ಸಂಬಂಧಿಯಾದ ಒಂದು ಕಥೆಯನ್ನು ಹೇಳಿದನು (1). ಆ ವಿಪ್ರನು ಹೇಳಿದ್ದೇನೆಂದರೆ, "ನೃಪಶ್ರೇಷ್ಠ, ಪೂರ್ವದಲ್ಲಿ ಮಹಾತ್ಮನಾದ ನಿದಾಘನಿಗೆ ಜ್ಞಾನೋಪದೇಶವನ್ನು ಮಾಡುತ್ತ ಋಭು ಎಂಬುವನು ಹೇಳಿದ್ದನ್ನು ಕೇಳು (2). ಋಭು ಎಂಬುವನು ಪರಮೇಷ್ಠಿಯಾದ ಬ್ರಹ್ಮದೇವನ ಪುತ್ರ. ಅವನು ಸಹಜವಾಗಿಯೇ ಪರಮಾರ್ಥತತ್ತ್ವವನ್ನು ತಿಳಿದ ಜ್ಞಾನಿಯಾಗಿದ್ದನು. ಪುಲಸ್ತ್ಯ ಮುನಿಯ ತನಯನಾದ ನಿದಾಘನು ಋಭುವಿನ ಶಿಷ್ಯನಾಗಿದ್ದನು. ಆತನಿಗೆ ಋಭು ಪರಮ ಸಂತೋಷದಿಂದ ಸಮಸ್ತ ಜ್ಞಾನವನ್ನು ಉಪದೇಶಿಸಿದನು (3-4). ಹೀಗೆ ತತ್ತ್ವಜ್ಞಾನವನ್ನು

ಅವಾಪ್ತಜ್ಞಾನತಂತ್ರಸ್ಯ ನ ತಸ್ಯಾದ್ವೈತವಾಸನಾ।
ಸ ಋಭುಸ್ತರ್ಕಯಾಮಾಸ ನಿಧಾಘಸ್ಯ ನರೇಶ್ವರ॥ 5

ದೇವಿಕಾಯಾಸ್ತಟೇ ವೀರನಗರಂ ನಾಮ ವೈ ಪುರಮ್।
ಸಮೃದ್ಧಿಮತಿರಮ್ಯಂ ಚ ಪುಲಸ್ತ್ಯೇನ ನಿವೇಶಿತಮ್॥ 6

ರಮ್ಯೋಪವನಪರ್ಯಂತೇ ಸ ತಸ್ಮಿನ್ ಪಾರ್ಥಿವೋತ್ತಮ।
ನಿದಾಘೋ ನಾಮ ಯೋಗಜ್ಞ ಋಭುಶಿಷ್ಯೋಽವಸತ್ ಪುರಾ॥ 7

ದಿವ್ಯೇ ವರ್ಷಸಹಸ್ರೇ ತು ಸಮತೀತೇಽಸ್ಯ ತತ್ಪುರಮ್।
ಜಗಾಮ ಸ ಋಭುಃ ಶಿಷ್ಯಂ ನಿದಾಘಮವಲೋಕಕಃ॥ 8

ಸ ತಸ್ಯ ವೈಶ್ವದೇವಾಂತೇ ದ್ವಾರಾಲೋಕನಗೋಚರೇ।
ಸ್ಥಿತಸ್ತೇನ ಗೃಹೀತಾರ್ಘ್ಯೋ ನಿಜವೇಶ್ಮಪ್ರವೇಶಿತಃ॥ 9

ಪ್ರಕ್ಷಾಲಿತಾಂಘ್ರಿಪಾಣಿಂ ಚ ಕೃತಾಸನಪರಿಗ್ರಹಮ್।
ಉವಾಚ ಸ ದ್ವಿಜಶ್ರೇಷ್ಠೋ ಭುಜ್ಯತಾಮಿತಿ ಸಾದರಮ್॥ 10

---

ಪಡೆದರೂ ನಿದಾಘನಿಗೆ ಅದ್ವೈತದಲ್ಲಿ ನಿಷ್ಠೆಯುಂಟಾಗಲಿಲ್ಲವೆಂದು ಋಭು ಊಹಿಸಿದನು (5). ದೇವಿಕಾ ನದಿಯ ತೀರದಲ್ಲಿದ್ದ ವೀರನಗರವೆಂಬ ಸಮೃದ್ಧವೂ ರಮ್ಯವೂ ಆದ ಪಟ್ಟಣದಲ್ಲಿ ಹಿಂದೆ ಪುಲಸ್ತ್ಯ ಮುನಿ ವಾಸವಾಗಿದ್ದನು. ಸುಂದರವಾದ ಉಪವನಗಳಿಂದ ಕೂಡಿದ ಆ ನಗರದಲ್ಲಿ ಋಭುಶಿಷ್ಯನೂ ಯೋಗಿಯೂ ಆದ ನಿದಾಘನು ವಾಸಿಸುತ್ತಿದ್ದನು (6-7). ದಿವ್ಯವರ್ಷ ಸಹಸ್ರವು ಕಳೆದಮೇಲೆ ಋಭುವು ಶಿಷ್ಯನಾದ ನಿದಾಘನನ್ನು ನೋಡಬೇಕೆಂದು ಆ ಪಟ್ಟಣಕ್ಕೆ ಹೋದನು. ನಿದಾಘನು ವೈಶ್ವದೇವವನ್ನು ಮಾಡಿದ ಮೇಲೆ ಗೃಹದ್ವಾರದಿಂದ ನೋಡುವಷ್ಟು ದೂರದಲ್ಲಿ ಋಭು ನಿಂತಿದ್ದನು. ನಿದಾಘನು ಆತನಿಗೆ ಅರ್ಘ್ಯವನ್ನಿತ್ತು ತನ್ನ ಮನೆಗೆ ಕರೆದು ಕೊಂಡು ಹೋಗಿ ಕೈಕಾಲುಗಳನ್ನು ತೊಳೆದು ಪೀಠದ ಮೇಲೆ ಕುಳ್ಳಿರಿಸಿ, ಭೋಜನವನ್ನು ಮಾಡಬೇಕೆಂದು ಆದರ ಪೂರ್ವಕವಾಗಿ ನಿವೇದಿಸಿದನು (8-10). ಆಗ ಋಭು "ಹೇ ಬ್ರಾಹ್ಮಣೋತ್ತಮ, ನಿನ್ನ ಮನೆಯಲ್ಲಿ ನಾನು ಭುಂಜಿಸಬೇಕಾದ ಆಹಾರ ಯಾವುದೆಂದು ಹೇಳು. ಕದನ್ನದಲ್ಲಿ ನನಗೆ

*ಋಭುರುವಾಚ:*

**ಭೋ ವಿಪ್ರವರ್ಯ ಭೋಕ್ತವ್ಯಂ ಯದನ್ನಂ ಭವತೋ ಗೃಹೇ।**
**ತತ್ಕಥ್ಯತಾಂ ಕದನ್ನೇಷು ನ ಪ್ರೀತಿಃ ಸತತಂ ಮಮ॥ 11**

*ನಿದಾಘ ಉವಾಚ:*

**ಸಕ್ತುಯಾವಕವಾಟ್ಯಾನಾಮಪೂಪಾನಾಂ ಚ ಮೇ ಗೃಹೇ।**
**ಯದ್ರೋಚತೇ ದ್ವಿಜಶ್ರೇಷ್ಠ ತತ್ತ್ವಂ ಭುಂಕ್ಷ್ವ ಯಥೇಚ್ಛಯಾ॥ 12**

*ಋಭುರುವಾಚ:*

**ಕದನ್ನಾನಿ ದ್ವಿಜೈತಾನಿ ಮೃಷ್ಟಮನ್ನಂ ಪ್ರಯಚ್ಛ ಮೇ।**
**ಸಂಯಾವಪಾಯಸಾದೀನಿ ದ್ರಪ್ಸಫಾಣಿತವಂತಿ ಚ॥ 13**

*ನಿದಾಘ ಉವಾಚ:*

**ಹೇ ಹೇ ಶಾಲಿನಿ ಮದ್ಗೇಹೇ ಯತ್ಕಿಂಚಿದತಿಶೋಭನಮ್।**
**ಭಕ್ಷ್ಯೋಪಸಾಧನಂ ಮೃಷ್ಟಂ ತೇನಾಸ್ಯಾನ್ನಂ ಪ್ರಸಾಧಯ॥ 14**

---

ಯಾವಾಗಲೂ ಪ್ರೀತಿ ಇಲ್ಲ" ಎಂದನು (11). ನಿದಾಘನು "ದ್ವಿಜಶ್ರೇಷ್ಠ, ನನ್ನ ಮನೆಯಲ್ಲಿ ಹುರಿಹಿಟ್ಟು, ಜವೆಗೋಧಿ, ವಾಟ್ಯ, (ಕಂದಮೂಲ ಫಲಾದಿ), ಮತ್ತು ರೊಟ್ಟಿಗಳೂ ಇವೆ. ಇವುಗಳಲ್ಲಿ ನಿನಗೆ ಇಷ್ಟವಾದ್ದನ್ನು ಬೇಕಾದಷ್ಟು ತಿನ್ನಬಹುದು" ಎಂದನು (ನಿದಾಘನಿಗೆ ಋಭು ಯಾರೆಂದು ತಿಳಿಯಲಿಲ್ಲ) (12). ಅದಕ್ಕೆ ಋಭು "ಓ ವಿಪ್ರ, ಇವೆಲ್ಲ ಕದನ್ನಗಳು! ನನಗೆ ಮೃಷ್ಟಾನ್ನವನ್ನು ಬಡಿಸು. ಗೋಧಿ ಶಾವಿಗೆ, ಪಾಯಸ, ಮೊಸರು, ಬೂರಾಸಕ್ಕರೆ—ಇಂತಹ ಆಹಾರ ಬೇಕು" ಎಂದನು (13). ಆಗ ನಿದಾಘನು ತನ್ನ ಪತ್ನಿಯನ್ನು ಕುರಿತು "ಹೇ ಶಾಲಿನಿ, ಶಾಲಿನಿ, ಮನೆಯಲ್ಲಿ ಭಕ್ಷ್ಯವನ್ನು ಮಾಡಲು ಶ್ರೇಷ್ಠವಾದ ಯಾವ ಪದಾರ್ಥವಿದೆಯೋ ಅದರಿಂದ ಈತನಿಗೆ ಉತ್ತಮವಾದ ಭೋಜನವನ್ನು ಸಿದ್ಧಪಡಿಸು" ಎಂದು ಹೇಳಿದನು (14). ನಿದಾಘನ ಪತ್ನಿಯು ತನ್ನ ಪತಿಯ ಮಾತಿಗೆ ಗೌರವ

*ಬ್ರಾಹ್ಮಣ ಉವಾಚ:*

**ಇತ್ಯುಕ್ತಾ ತೇನ ಸಾ ಪತ್ನೀ ಮೃಷ್ಟಮನ್ನಂ ದ್ವಿಜಸ್ಯ ಯತ್।**
**ಪ್ರಸಾಧಿತವತೀ ತದ್ವೈ ಭರ್ತುರ್ವಚನಗೌರವಾತ್॥** 15

**ತಂ ಭುಕ್ತವಂತಮಿಚ್ಛಾತೋ ಮೃಷ್ಟಮನ್ನಂ ಮಹಾಮುನಿಮ್।**
**ನಿದಾಘಃ ಪ್ರಾಹ ಭೂಪಾಲ ಪ್ರಶ್ರಯಾವನತಃ ಸ್ಥಿತಃ॥** 16

*ನಿದಾಘ ಉವಾಚ:*

**ಅಪಿ ತೇ ಪರಮಾ ತೃಪ್ತಿರುತ್ಪನ್ನಾ ತುಷ್ಟಿರೇವ ಚ।**
**ಅಪಿ ತೇ ಮಾನಸಂ ಸ್ವಸ್ಥಮಾಹಾರೇಣ ಕೃತಂ ದ್ವಿಜ॥** 17

**ಕ್ವ ನಿವಾಸೋ ಭವಾನ್ ವಿಪ್ರ ಕ್ವ ಚ ಗಂತು ಸಮುದ್ಯತಃ।**
**ಆಗಮ್ಯತೇ ಚ ಭವತಾ ಯತಸ್ತಚ್ಚ ದ್ವಿಜೋಚ್ಯತಾಮ್॥** 18

*ಋಭುರುವಾಚ:*

**ಕ್ಷುದ್ಯಸ್ಯ ತಸ್ಯ ಭುಕ್ತೇಽನ್ನೇ ತೃಪ್ತಿರ್ಬ್ರಾಹ್ಮಣ ಜಾಯತೇ।**
**ನ ಮೇ ಕ್ಷುನ್ನಾಭವತ್ತೃಪ್ತಿಃ ಕಸ್ಮಾನ್ಮಾಂ ಪರಿಪೃಚ್ಛಸಿ॥** 19

---

ವನ್ನು ಕೊಟ್ಟು ಮನೆಯಲ್ಲಿದ್ದ ಉತ್ತಮ ಪದಾರ್ಥಗಳಿಂದ ಭೋಜನವನ್ನು ಸಿದ್ಧಪಡಿಸಿದಳು (15). ಅನಂತರ ತನ್ನ ಇಷ್ಟಾನುಸಾರವಾಗಿ ಭೋಜನ ಮಾಡಿದ ಆ ಮಹರ್ಷಿಗೆ ನಿದಾಘನು ವಿನಯದಿಂದ ನಮಸ್ಕರಿಸಿ "ಬ್ರಾಹ್ಮಣೋತ್ತಮ, ನಿನಗೆ ಪೂರ್ಣವಾಗಿ ತೃಪ್ತಿಯಾಯಿತೆ? ಸಂತೋಷ ವಾಯಿತೆ? ಭೋಜನದಿಂದ ಮನಸ್ಸು ಸ್ವಸ್ಥವಾಯಿತೇ? (16-17). ನಿನ್ನ ವಾಸಸ್ಥಳ ಯಾವುದು? ಎಲ್ಲಿಗೆ ಹೋಗಲು ಹೊರಟಿದ್ದೀಯೆ? ದ್ವಿಜಶ್ರೇಷ್ಠ, ಈಗ ಎಲ್ಲಿಂದ ಬರೋಣವಾಯಿತು?" ಎಂದು ಕೇಳಿದನು (18). ಅದಕ್ಕೆ ಋಭು ಹೀಗೆಂದನು: "ಬ್ರಾಹ್ಮಣ, ಯಾರಿಗೆ ಹಸಿವಾಗಿರುತ್ತದೆಯೋ ಅವರಿಗೆ ಅನ್ನವನ್ನು ತಿಂದರೆ ತೃಪ್ತಿಯಾಗುತ್ತದೆ! ನನಗೆ ಹಸಿವೂ ಆಗಲಿಲ್ಲ, ತೃಪ್ತಿಯೂ ಆಗಲಿಲ್ಲ! ನನ್ನನ್ನೇಕೆ ಕೇಳುವೆ? (19). ಜಠರಾಗ್ನಿಯು ಪೃಥಿವೀ ಸಂಬಂಧಿಯಾದ ದ್ರವ್ಯವನ್ನು ಸುಟ್ಟು ಕ್ಷಯಗೊಳಿಸಿದಾಗ ಹಸಿವು ತಲೆ

**ವಹ್ನಿನಾ ಪಾರ್ಥಿವೇ ಧಾತೌ ಕ್ಷಪಿತೇ ಕ್ಷುತ್ಸಮುದ್ಭವಃ।**
**ಭವತ್ಯಂಭಸಿ ಚ ಕ್ಷೀಣೇ ನೃಣಾಂ ತೃಡಪಿ ಜಾಯತೇ॥ 20**

**ಕ್ಷುತ್ತೃಷ್ಣೇ ದೇಹಧರ್ಮಾಖ್ಯೇ ನ ಮಮೈತೇ ಯತೋ ದ್ವಿಜ।**
**ತತಃ ಕ್ಷುತ್ಸಂಭವಾಭಾವಾತ್ ತೃಪ್ತಿರಸ್ತ್ಯೇವ ಮೇ ಸದಾ॥ 21**

**ಮನಸಃ ಸ್ವಸ್ಥತಾ ತುಷ್ಟಿಶ್ಚಿತ್ತಧರ್ಮಾವಿಮೌ ದ್ವಿಜ।**
**ಚೇತಸೋ ಯಸ್ಯ ತತ್ ಪೃಚ್ಛ ಪುಮಾನೇಭಿರ್ನ ಯುಜ್ಯತೇ॥ 22**

**ಕ್ವ ನಿವಾಸಸ್ತವೇತ್ಯುಕ್ತಂ ಕ್ವ ಗಂತಾಸಿ ಚ ಯತ್ತ್ವಯಾ।**
**ಕುತಶ್ಚಾಗಮ್ಯತೇ ತತ್ರ ತ್ರಿತಯೇಽಪಿ ನಿಬೋಧ ಮೇ॥ 23**

**ಪುಮಾನ್ ಸರ್ವಗತೋ ವ್ಯಾಪೀ ಆಕಾಶವದಯಂ ಯತಃ।**
**ಕುತಃ ಕುತ್ರ ಕ್ವ ಗಂತಾಸೀತ್ಯೇತದಪ್ಯರ್ಥವತ್ಕಥಮ್॥ 24**

---

ದೋರುತ್ತದೆ. ಹಾಗೆಯೇ ನೀರನ್ನು ಕ್ಷಯಗೊಳಿಸಿದಾಗ ಬಾಯಾರಿಕೆಯೂ ಹುಟ್ಟುತ್ತದೆ (20). ಹಸಿವು ಬಾಯಾರಿಕೆಗಳು ದೇಹಧರ್ಮಗಳು. ಅವು ನನಗಿಲ್ಲ. ಆದ ಕಾರಣ ಹಸಿವು ನನಗೆ ಆಗುವ ಸಂಭವವೇ ಇಲ್ಲವಾದ್ದರಿಂದ ನನಗೆ ಯಾವಾಗಲೂ ತೃಪ್ತಿಯೇ ಇರುತ್ತದೆ! (21). ಇನ್ನು ಮನಸ್ಸಿನ ಸ್ವಸ್ಥತೆ, ಸಂತೋಷ—ಎಂಬಿವು ಚಿತ್ತಧರ್ಮಗಳು. ಯಾರಿಗೆ ಚಿತ್ತ ಉಂಟೋ ಅವನಿಗೆ ಈ ಪ್ರಶ್ನೆಯನ್ನು ಕೇಳು! ಪುರುಷನಿಗೆ ಇವಾವುದರ ಸಂಬಂಧವೂ ಇಲ್ಲ (22). ಆಮೇಲೆ 'ನಿನ್ನ ವಾಸಸ್ಥಳ ಯಾವುದು? ಎಲ್ಲಿಗೆ ಹೋಗತಕ್ಕವನಿದ್ದೀಯೆ? ಎಲ್ಲಿಂದ ಬರೋಣವಾಯಿತು?' ಎಂದು ಕೇಳಿದೆಯಲ್ಲ; ಈ ಮೂರು ಪ್ರಶ್ನೆಗಳಿಗೂ ಉತ್ತರವನ್ನು ಕೇಳು (23). ಪುರುಷನು (ಆತ್ಮನು) ಸರ್ವಗತನಾಗಿ ಆಕಾಶದಂತೆ ಸರ್ವವ್ಯಾಪಿ ಯಾಗಿದ್ದಾನೆ. ಹೀಗಿರುವಾಗ—ಎಲ್ಲಿಂದ ಬಂದೆ, ಎಲ್ಲಿ ವಾಸಸ್ಥಳ, ಎಲ್ಲಿಗೆ ಹೋಗುವೆ—ಎಂಬ ಪ್ರಶ್ನೆ ಹೇಗೆತಾನೆ ಅರ್ಥವತ್ತಾದೀತು? (24). ನಾನು ಹೋಗುವವನೂ ಅಲ್ಲ, ಬರುವವನೂ ಅಲ್ಲ, ಯಾವುದೋ ಪರಿಮಿತ ಸ್ಥಳದಲ್ಲಿ ವಾಸವಾಗಿರತಕ್ಕವನೂ ಅಲ್ಲ! ನೀನೂ ಹೀಗೆಯೇ! ಅನ್ಯರೂ ಹೀಗೆಯೇ! ವಾಸ್ತವದಲ್ಲಿ ನೀನು ನೀನೂ ಅಲ್ಲ , ಅನ್ಯರು ಅನ್ಯರೂ ಅಲ್ಲ,

**ಸೋಽಹಂ ಗಂತಾ ನ ಚಾಗಂತಾ ನೈಕದೇಶನಿಕೇತನಃ।**
**ತ್ವಂ ಚಾನ್ಯೋ ಚ ನ ಚ ತ್ವಂ ಚ ನಾನ್ಯೋ ನೈವಾಹಮಪ್ಯಹಮ್॥**

**ಮೃಷ್ಟಂ ನ ಮೃಷ್ಟಮಪ್ಯೇಷಾ ಜಿಜ್ಞಾಸಾ ಮೇ ಕೃತಾ ತವ।**
**ಕಿಂ ವಕ್ಷ್ಯಸೀತಿ ತತ್ರಾಪಿ ಶ್ರೂಯತಾಂ ದ್ವಿಜಸತ್ತಮ॥** 26

**ಕಿಮಸ್ವಾದ್ವಥ ವಾ ಮೃಷ್ಟಂ ಭುಂಜತೋಽಸ್ತಿ ದ್ವಿಜೋತ್ತಮ।**
**ಮೃಷ್ಟಮೇವ ಯದಾಮೃಷ್ಟಂ ತದೇವೋದ್ವೇಗಕಾರಕಮ್॥** 27

**ಅಮೃಷ್ಟಂ ಜಾಯತೇ ಮೃಷ್ಟಂ ಮೃಷ್ಟಾದುದ್ವಿಜತೇ ಜನಃ।**
**ಆದಿಮಧ್ಯಾವಸಾನೇಷು ಕಿಮನ್ನಂ ರುಚಿಕಾರಕಮ್॥** 28

**ಮೃಣ್ಮಯಂ ಹಿ ಗೃಹಂ ಯದ್ವನ್ಮೃದಾಲಿಪ್ತಂ ಸ್ಥಿರಂ ಭವೇತ್।**
**ಪಾರ್ಥಿವೋಽಯಂ ತಥಾ ದೇಹಃ ಪಾರ್ಥಿವೈಃ ಪರಮಾಣುಭಿಃ॥** 29

---

ನಾನು ನಾನೂ ಅಲ್ಲ! (25). 'ಮೃಷ್ಟಾನ್ನ-ಕದನ್ನ' ಎಂದು ನಾನು ಮಾತನಾಡಿದೆನಲ್ಲ, ಆ ವಿಷಯವಾಗಿ ನೀನು ಏನು ಹೇಳುತ್ತೀಯೆ?— ಎಂಬ ಜಿಜ್ಞಾಸೆಗಾಗಿ ನಾನು ಹಾಗೆ ಹೇಳಿದ್ದು. ಆ ವಿಷಯದಲ್ಲಿಯೂ, ದ್ವಿಜೋತ್ತಮ, ನಾನು ಹೇಳುವುದನ್ನು ಕೇಳು (26). ಊಟಮಾಡ ತಕ್ಕವನಿಗೆ 'ಅಸ್ವಾದು-ಸ್ವಾದು' ಎಂಬುದೇನುಂಟು? ಯಾವುದು ಸ್ವಾದುವಾಗಿದೆಯೋ ಅದೇ ಕಾಲಾಂತರದಲ್ಲಿ ಅಸ್ವಾದುವಾಗಿ ಉದ್ವೇಗ ವನ್ನುಂಟುಮಾಡುತ್ತದೆ! (27). ಹೀಗೆಯೇ ಈಗ ಅಸ್ವಾದುವಾದದ್ದು ಕಾಲಾಂತರದಲ್ಲಿ ರುಚಿಕರವಾಗುತ್ತದೆ*. ಮೃಷ್ಟಾನ್ನದಿಂದಲೂ ಜನರು (ಅತಿ ಯಾಗಿ ತಿಂದಾಗ) ಉದ್ವೇಗ ಪಡುತ್ತಾರೆ. ಆದ್ದರಿಂದ ಆದಿಮಧ್ಯಾವಸಾನ ಗಳಲ್ಲಿ ಒಂದೇ ಪ್ರಕಾರ ರುಚಿಕರವಾದ ವಸ್ತು ಯಾವುದಿದೆ? (28). ಮಣ್ಣಿನಿಂದ ತೊಡೆಯುತ್ತಿದ್ದರೆ ಮಣ್ಣಿನ ಮನೆಯು ಹೇಗೆ ಗಟ್ಟಿಯಾಗಿ ಉಳಿಯುತ್ತದೆಯೋ ಹಾಗೆ ಪೃಥಿವೀಪರಮಾಣುಗಳನ್ನು ಸೇರಿಸುತ್ತಿದ್ದರೆ ಪೃಥಿವೀಜನ್ಯವಾದ ಈ ದೇಹ ಗಟ್ಟಿಯಾಗಿ ಉಳಿಯುತ್ತದೆ (29). ಯವ,

* ಹುಳಿಯಾದ ಮಾವಿನ ಕಾಯಿ ಸಿಹಿಯಾದ ಹಣ್ಣಾಗುವಂತೆ.

**ಯವಗೋಧೂಮಮುದ್‌ಗಾದಿ ಘೃತಂ ತೈಲಂ ಪಯೋ ದಧಿ।**
**ಗುಡಂ ಫಲಾದೀನಿ ತಥಾ ಪಾರ್ಥಿವಾಃ ಪರಮಾಣವಃ॥ 30**

**ತದೇತದ್ಭವತಾ ಜ್ಞಾತ್ವಾ ಮೃಷ್ಟಾಮೃಷ್ಟವಿಚಾರಿ ಯತ್।**
**ತನ್ಮನಸ್ಸಮತಾಲಂಬಿ ಕಾರ್ಯಂ ಸಾಮ್ಯಂ ಹಿ ಮುಕ್ತಯೇ॥ 31**

*ಬ್ರಾಹ್ಮಣ ಉವಾಚ:*

**ಇತ್ಯಾಕರ್ಣ್ಯ ವಚಸ್ತಸ್ಯ ಪರಮಾರ್ಥಾಶ್ರಿತಂ ನೃಪ।**
**ಪ್ರಣಿಪತ್ಯ ಮಹಾಭಾಗೋ ನಿದಾಘೋ ವಾಕ್ಯಮಬ್ರವೀತ್॥ 32**

**ಪ್ರಸೀದ ಮದ್ಧಿತಾರ್ಥಾಯ ಕಥ್ಯತಾಂ ಯತ್ತ್ವಮಾಗತಃ।**
**ನಷ್ಟೋ ಮೋಹಸ್ತವಾಕರ್ಣ್ಯ ವಚಾಂಸ್ಯೇತಾನಿ ಮೇ ದ್ವಿಜ॥ 33**

*ಋಭುರುವಾಚ:*

**ಋಭುರಸ್ಮಿ ತವಾಚಾರ್ಯಃ ಪ್ರಜ್ಞಾದಾನಾಯ ತೇ ದ್ವಿಜ।**
**ಇಹಾಗತೋಽಹಂ ಯಾಸ್ಯಾಮಿ ಪರಮಾರ್ಥಸ್ತವೋದಿತಃ॥ 34**

---

ಗೋದಿ, ಹೆಸರು ಮೊದಲಾದ ಧಾನ್ಯವೂ ತುಪ್ಪ ತೈಲ ಹಾಲು ಮೊಸರು ಬೆಲ್ಲ ಹಣ್ಣು ಮೊದಲಾದವೂ ಪೃಥಿವೀ ಪರಮಾಣುಗಳೇ (30). ಇದರ ಸಾರವೇನೆಂಬುದನ್ನು ನೀನು ಗ್ರಹಿಸಿ, ಸ್ವಾದು ಅಸ್ವಾದು ಎಂದು ವಿಮರ್ಶಿಸ ತಕ್ಕ ಮನಸ್ಸನ್ನು ನೀನು ಸಮದರ್ಶಿಯಾಗಿ ಸಾಮ್ಯಸ್ಥಿತಿಗೆ ತಂದುಕೊಳ್ಳ ಬೇಕು. ಸಾಮ್ಯವು ಮುಕ್ತಿಗೆ ಕಾರಣ" ಎಂದನು (31). ಋಭುವಿನ ಪರಮಾರ್ಥ ವಿಷಯಕವಾದ ಈ ಮಾತನ್ನಾಲಿಸಿ ಮಹಾಭಾಗನಾದ ನಿದಾಘನು ಆತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ "ದ್ವಿಜೋತ್ತಮ, ಪ್ರಸನ್ನನಾಗು. ನನ್ನ ಹಿತಕ್ಕಾಗಿ ಆಗಮಿಸಿರುವ ನೀನು ಯಾರು? ನಿನ್ನ ಈ ವಚನಗಳನ್ನಾಲಿಸಿದ್ದರಿಂದ ನನ್ನ ಅಜ್ಞಾನ ಹೋಯಿತು" ಎಂದನು (32-33). ಆಗ ಋಭು "ಬ್ರಾಹ್ಮಣ, ನಾನು ನಿನ್ನ ಆಚಾರ್ಯನಾದ ಋಭು. ನಿನಗೆ ಜ್ಞಾನೋಪದೇಶಮಾಡಬೇಕೆಂದು ಇಲ್ಲಿಗೆ ಬಂದೆ. ಇನ್ನು ಹೊರಡುವೆನು. ಪರಮಾರ್ಥವನ್ನು ನಿನಗೆ ತಿಳಿಸಿದ್ದೇನೆ (34). ಹೀಗೆ

**ಏವಮೇಕಮಿದಂ ವಿದ್ಧಿ ನ ಭೇದಿ ಸಕಲಂ ಜಗತ್ ।**
**ವಾಸುದೇವಾಭಿಧೇಯಸ್ಯ ಸ್ವರೂಪಂ ಪರಮಾತ್ಮನಃ ॥ 35**

*ಬ್ರಾಹ್ಮಣ ಉವಾಚ:*

**ತಥ್ಯೇತ್ಯುಕ್ತ್ವಾ ನಿದಾಘೇನ ಪ್ರಣಿಪಾತಪುರಃಸರಮ್ ।**
**ಪೂಜಿತಃ ಪರಯಾ ಭಕ್ತ್ಯಾ ಇಚ್ಛಾತಃ ಪ್ರಯಯಾವೃಭುಃ ॥ 36**

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇऽಂಶೇ ಪಂಚದಶೋऽಧ್ಯಾಯಃ

---

ವಿಚಾರಮಾಡಿ ಈ ಸಮಸ್ತ ಜಗತ್ತು ವಾಸುದೇವನೆಂಬ ಪರಮಾತ್ಮನ ಏಕಮೇವಾದ್ವಿತೀಯ ಸ್ವರೂಪವೆಂದೂ ಭೇದಸ್ವರೂಪವಲ್ಲವೆಂದೂ ನಿಶ್ಚಯಿಸು" ಎಂದನು (35). ನಿದಾಘನು "ಹಾಗೆಯೇ ಆಗಲಿ" ಎಂದು ನುಡಿದು ಸಾಷ್ಟಾಂಗ ನಮಸ್ಕಾರ ಮಾಡಿ ಪರಮಭಕ್ತಿಯಿಂದ ಆಚಾರ್ಯನನ್ನು ಪೂಜಿಸಿದನು. ಅನಂತರ ಋಭು ತನ್ನ ಇಷ್ಟಾನುಸಾರವಾಗಿ ಹೊರಟುಹೋದನು (36).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಹದಿನೈದನೆಯ ಅಧ್ಯಾಯ ಮುಗಿಯಿತು.



## ಷೋಡಶೋಽಧ್ಯಾಯಃ

*ಬ್ರಾಹ್ಮಣ ಉವಾಚ:*

**ಋಭುರ್ವರ್ಷಸಹಸ್ರೇ ತು ಸಮತೀತೇ ನರೇಶ್ವರ।**
**ನಿದಾಘಜ್ಞಾನದಾನಾಯ ತದೇವ ನಗರಂ ಯಯೌ॥** 1

**ನಗರಸ್ಯ ಬಹಿಃ ಸೋಽಥ ನಿದಾಘಂ ದದೃಶೇ ಮುನಿಃ।**
**ಮಹಾಬಲಪರೀವಾರೇ ಪುರಂ ವಿಶತಿ ಪಾರ್ಥಿವೇ॥** 2

**ದೂರೇ ಸ್ಥಿತಂ ಮಹಾಭಾಗಂ ಜನಸಮ್ಮರ್ದವರ್ಜಕಮ್।**
**ಕ್ಷುತ್‌ಕ್ಷಾಮಕಂಠಮಾಯಾಂತಮರಣ್ಯಾತ್ ಸಸಮಿತ್ಕುಶಮ್॥** 3

**ದೃಷ್ಟ್ವಾ ನಿದಾಘಂ ಸ ಋಭುರುಪಗಮ್ಯಾಭಿವಾದ್ಯ ಚ।**
**ಉವಾಚ ಕಸ್ಮಾದೇಕಾಂತೇ ಸ್ಥೀಯತೇ ಭವತಾ ದ್ವಿಜ॥** 4

---

## ಅಧ್ಯಾಯ 16

ನಿದಾಘನ ಬಳಿಗೆ ಋಭುಮುನಿಯು ಪುನಃ ಬಂದು
ಜ್ಞಾನೋಪದೇಶವನ್ನು ಮಾಡುವುದು.

ವಿಪ್ರನು (ಜಡಭರತನು) ಮುಂದುವರಿಸಿದನು: "ಸೌವೀರರಾಜ, ಆಮೇಲೆ ಒಂದು ಸಾವಿರ ವರ್ಷ ಕಳೆಯಿತು. ಋಭುಮುನಿಯು ನಿದಾಘನಿಗೆ ಜ್ಞಾನೋಪದೇಶ ಮಾಡುವುದಕ್ಕಾಗಿ ಅದೇ ವೀರನಗರಕ್ಕೆ ಹೋದನು (1). ನಗರದ ಹೊರಗಡೆ ನಿದಾಘನಿರುವುದನ್ನು ಋಭು ಮುನಿಯು ಕಂಡನು. ಆ ಸಮಯದಲ್ಲಿ ಅಲ್ಲಿಯ ರಾಜನು ದೊಡ್ಡ ಸೇನೆಯಿಂದ ಪರಿವೃತನಾಗಿ ನಗರ ಪ್ರವೇಶ ಮಾಡುತ್ತಿದ್ದುದರಿಂದ, ಜನ ಸಂಮರ್ದವನ್ನು ತೊರೆದು ನಿದಾಘನು ದೂರದಲ್ಲಿ ನಿಂತುಕೊಂಡಿದ್ದನು. ಆತನು ಆಗತಾನೆ ಅರಣ್ಯದಿಂದ ಸಮಿತ್‌ಕುಶಗಳನ್ನು ತೆಗೆದುಕೊಂಡು ಹಿಂದಿರುಗಿ ಬಂದಿದ್ದು ಹಸಿವಿನಿಂದ ಬಳಲಿದ್ದನು (2-3). ಹಾಗೆ ನಿಂತಿದ್ದ ನಿದಾಘನನ್ನು ನೋಡಿ ಋಭು ಅವನ ಸಮೀಪಕ್ಕೆ ಹೋಗಿ ಅಭಿವಾದನೆ

*ನಿದಾಘ ಉವಾಚ:*

**ಭೋ ವಿಪ್ರ ಜನಸಮ್ಮರ್ದೋ ಮಹಾನೇಷ ನರೇಶ್ವರಃ।**
**ಪ್ರವಿವಿಕ್ಷುಃ ಪುರಂ ರಮ್ಯಂ ತೇನಾತ್ರ ಸ್ಥೀಯತೇ ಮಯಾ॥** 5

*ಋಭುರುವಾಚ:*

**ನರಾಧಿಪೋಽತ್ರ ಕತಮಃ ಕತಮಶ್ಚೇತರೋ ಜನಃ।**
**ಕಥ್ಯತಾಂ ಮೇ ದ್ವಿಜಶ್ರೇಷ್ಠ ತ್ವಮಭಿಜ್ಞೋ ಮತೋ ಮಮ॥** 6

*ನಿದಾಘ ಉವಾಚ:*

**ಯೋಽಯಂ ಗಜೇಂದ್ರಮುನ್ಮತ್ತಮದ್ರಿಶೃಂಗಸಮುಚ್ಛ್ರಿತಮ್।**
**ಅಧಿರೂಢೋ ನರೇಂದ್ರೋಽಯಂ ಪರಿಲೋಕಸ್ತಥೇತರಃ॥** 7

*ಋಭುರುವಾಚ:*

**ಏತೌ ಹಿ ಗಜರಾಜಾನೌ ಯುಗಪದ್ದರ್ಶಿತೌ ಮಮ।**
**ಭವತಾ ನ ವಿಶೇಷೇಣ ಪೃಥಕ್‌ಚಿಹ್ನೋಪಲಕ್ಷಣೌ॥** 8

---

ಮಾಡಿ "ಬ್ರಾಹ್ಮಣ, ಇದೇಕೆ ಒಂಟಿಯಾಗಿ ನಿಂತಿದ್ದೀಯೆ?" ಎಂದು ಕೇಳಿದನು (4). ಅದಕ್ಕೆ ನಿದಾಘನು "ಹೇ ವಿಪ್ರ, ಈ ಜನಸಂಮರ್ದವು ಬಹಳ ದೊಡ್ಡದಾಗಿದೆ. ನೃಪಾಲನು ರಮ್ಯವಾದ ನಗರವನ್ನು ಪ್ರವೇಶಿಸಲಿದ್ದಾನೆ. ಆದ್ದರಿಂದ ನಾನು ಇಲ್ಲಿ ನಿಂತುಕೊಂಡೆನು" ಎಂದನು (5). ಆಗ ಋಭು "ಹೇ ದ್ವಿಜೋತ್ತಮ, ಇವರಲ್ಲಿ ರಾಜನು ಯಾರು? ಇತರರು ಯಾರು?—ಎಂಬುದನ್ನು ಹೇಳು. ನಿನಗೆ ಇವರ ಪರಿಚಯವಿದೆಯೆಂದು ನಾನು ಭಾವಿಸಿದ್ದೇನೆ" ಎಂದು ಹೇಳಿದನು (6). ನಿದಾಘನು "ಅಲ್ಲಿ ನೋಡು; ಬೆಟ್ಟದ ಶಿಖರದಂತೆ ಎತ್ತರವಾದ ಮದ್ದಾನೆಯ ಮೇಲೆ ಕುಳಿತವನು ರಾಜ; ಉಳಿದವರು ಅವನ ಪರಿವಾರದವರು" ಎಂದು ಉತ್ತರಿಸಿದನು (7). ಆಗ ಋಭು "ಬ್ರಾಹ್ಮಣ, ಆನೆ ರಾಜ—ಇಬ್ಬರನ್ನೂ ನೀನು ಒಟ್ಟಿಗೆ ತೋರಿಸಿದೆ, ಅದರಲ್ಲಿ ಆನೆ ಯಾವುದು, ರಾಜ ಯಾರು—

**ತತ್ಕಥ್ಯತಾಂ ಮಹಾಭಾಗ ವಿಶೇಷೋ ಭವತಾನಯೋಃ।**
**ಜ್ಞಾತುಮಿಚ್ಛಾಮ್ಯಹಂ ಕೋಽತ್ರ ಗಜಃ ಕೋ ವಾ ನರಾಧಿಪಃ॥ 9**

*ನಿದಾಘ ಉವಾಚ:*

**ಗಜೋ ಯೋಽಯಮಧೋ ಬ್ರಹ್ಮನ್ನುಪರ್ಯಸ್ಯೈಷ ಭೂಪತಿಃ।**
**ವಾಹ್ಯವಾಹಕಸಂಬಂಧಂ ಕೋ ನ ಜಾನಾತಿ ವೈ ದ್ವಿಜ॥ 10**

*ಋಭುರುವಾಚ:*

**ಜಾನಾಮ್ಯಹಂ ಯಥಾ ಬ್ರಹ್ಮಂಸ್ತಥಾ ಮಾಮವಬೋಧಯ।**
**ಅಧಃ ಶಬ್ದನಿಗದ್ಯಂ ಹಿ ಕಿಂ ಚೋರ್ಧ್ವಮಭಿಧೀಯತೇ॥ 11**

*ಬ್ರಾಹ್ಮಣ ಉವಾಚ:*

**ಇತ್ಯುಕ್ತಃ ಸಹಸಾರುಹ್ಯ ನಿದಾಘಃ ಪ್ರಾಹ ತಮೃಭುಮ್।**
**ಶ್ರೂಯತಾಂ ಕಥಯಾಮ್ಯೇಷ ಯನ್ಮಾಂ ತ್ವಂ ಪರಿಪೃಚ್ಛಸಿ॥ 12**

---

ಎಂದು ವಿಶೇಷವಾದ ಬೇರೆ ಬೇರೆ ಗುರುತೇನನ್ನೂ ನೀನು ಹೇಳಲಿಲ್ಲ! ಆದ್ದರಿಂದ, ಮಹಾಭಾಗ, ಇದರಲ್ಲಿ ಆನೆ ಯಾವುದು, ರಾಜನು ಯಾರು —ಎಂದು ತಿಳಿಯಲಪೇಕ್ಷಿಸುತ್ತೇನೆ" ಎಂದನು (8-9). ನಿದಾಘನು, "ಬ್ರಾಹ್ಮಣ, ಕೆಳಗಿರುವುದು ಆನೆ, ಮೇಲೆ ಕುಳಿತಿರತಕ್ಕವನು ರಾಜ! ವಾಹನ, ಸವಾರ—ಇವರ ಕೆಳಗು ಮೇಲಿನ ಸಂಬಂಧವು ಯಾರಿಗೆ ತಾನೆ ಗೊತ್ತಿರುವುದಿಲ್ಲ?" ಎಂದು ಹೇಳಿದನು (10). ಋಭು ಮುನಿಯು "ಓ ಬ್ರಾಹ್ಮಣ, ನನಗೆ ಅರ್ಥವಾಗುವಂತೆ ತಿಳಿಸು! ಕೆಳಗೆ, ಮೇಲೆ—ಎಂದು ಹೇಳುತ್ತೀಯಲ್ಲ, ಕೆಳಗೆ ಎಂದರೇನು? ಮೇಲೆ ಎಂದರೇನು?" ಎಂದು ಕೇಳಿದನು (11). ಒಡನೆಯೇ ನಿದಾಘನು ಋಭುವಿನ ಕತ್ತಿನ ಮೇಲೆ ಹತ್ತಿ ಕುಳಿತು "ನಿನ್ನ ಪ್ರಶ್ನೆಗೆ ಉತ್ತರ ಹೇಳುತ್ತೇನೆ, ಕೇಳು. ನಾನು ರಾಜನಂತೆ ಮೇಲೆ ಇದ್ದೇನೆ! ನೀನು ಆನೆಯಂತೆ ಕೆಳಗೆ ಇದ್ದೀಯೆ! ನಿನಗೆ ಸರಿಯಾಗಿ ಗೊತ್ತಾಗಲೆಂದು ಈ ದೃಷ್ಟಾಂತವನ್ನು ಮಾಡಿ ತೋರಿಸಿದೆನು!" ಎಂದು

**ಉಪರ್ಯಹಂ ಯಥಾ ರಾಜಾ ತ್ವಮಧಃ ಕುಂಜರೋ ಯಥಾ।**
**ಅವಬೋಧಾಯ ತೇ ಬ್ರಹ್ಮನ್ ದೃಷ್ಟಾಂತೋ**
**ದರ್ಶಿತೋ ಮಯಾ॥** 13

*ಋಭುರುವಾಚ:*

**ತ್ವಂ ರಾಜೇವ ದ್ವಿಜಶ್ರೇಷ್ಠ ಸ್ಥಿತೋಽಹಂ ಗಜವದ್ಯದಿ।**
**ತದೇತತ್ತ್ವಂ ಸಮಾಚಕ್ಷ್ವ ಕತಮಸ್ತ್ವಮಹಂ ತಥಾ॥** 14

*ಬ್ರಾಹ್ಮಣ ಉವಾಚ:*

**ಇತ್ಯುಕ್ತಃ ಸತ್ವರಂ ತಸ್ಯ ಪ್ರಗೃಹ್ಯ ಚರಣಾವುಭೌ।**
**ನಿದಘಾಸ್ತ್ವಾಹ ಭಗವಾನಾಚಾರ್ಯಸ್ತ್ವಮೃಭುರ್ಧ್ರುವಮ್॥** 15

**ನಾನ್ಯಸ್ಯಾದ್ವೈತಸಂಸ್ಕಾರಸಂಸ್ಕೃತಂ ಮಾನಸಂ ತಥಾ।**
**ಯಥಾಚಾರ್ಯಸ್ಯ ತೇನ ತ್ವಾಂ ಮನ್ಯೇ ಪ್ರಾಪ್ತಮಹಂ**
**ಗುರುಮ್॥** 16

---

ಹೇಳಿದನು (12-13). ಆಗ ಋಭು "ದ್ವಿಜೋತ್ತಮ, ನೀನು ರಾಜನಂತೆಯೂ ನಾನು ಆನೆಯಂತೆಯೂ ಇದ್ದೇವೆಂದು ಹೇಳಿದೆಯಷ್ಟೆ. ಈ ಮಾತಿನಲ್ಲಿ ನೀನು ಎಂದರೆ ಯಾರು, ನಾನು ಎಂದರೆ ಯಾರು—ಇದನ್ನು ತಿಳಿಸಿಕೊಡು" ಎಂದನು (14). ಹೀಗೆ ಹೇಳಿದೊಡನೆ ನಿದಾಘನು ಆ ಬ್ರಾಹ್ಮಣನ ಪಾದಗಳನ್ನು ಹಿಡಿದುಕೊಂಡು "ಓಹೋ! ನೀವು ಆಚಾರ್ಯರಾದ ಭಗವಾನ್ ಋಭುಮುನಿಗಳೇ ಸರಿ. ಈ ಪ್ರಕಾರವಾಗಿ ಇನ್ನಾರ ಮನಸ್ಸೂ ಅದ್ವೈತ ಸಂಸ್ಕಾರದಿಂದ ಪರಿಷ್ಕೃತವಾಗಿಲ್ಲ. ನನ್ನ ಆಚಾರ್ಯರಿಗೆ ಮಾತ್ರ ಇಂತಹ ಚಿತ್ತಸಂಸ್ಕಾರವಿದೆ. ಆದ್ದರಿಂದ ಇಲ್ಲಿಗೆ ಬಂದ ನೀವು ನನ್ನ ಗುರುಗಳೇ ಹೌದು" ಎಂದನು (15-16). ಆಗ ಋಭುಮುನಿಯು "ನಿಧಾಘ, ನನ್ನನ್ನು ನೀನು ವಿಶೇಷವಾಗಿ ಹಿಂದೆ ಶುಶ್ರೂಷೆ ಮಾಡಿದ್ದೀಯೆ. ಗುರುವಿಗಿರ ಬೇಕಾದ ಶಿಷ್ಯಸ್ನೇಹಕ್ಕೆ ವಶನಾಗಿ ನಿನಗೆ ಜ್ಞಾನೋಪದೇಶವನ್ನು

*ಋಭುರುವಾಚ:*

**ತವೋಪದೇಶದಾನಾಯ ಪೂರ್ವಶುಶ್ರೂಷಣಾದೃತಃ ।**
**ಗುರುಸ್ನೇಹಾದೃಭುರ್ನಾಮ ನಿದಾಘ ಸಮುಪಾಗತಃ ॥ 17**

**ತದೇತದುಪದಿಷ್ಟಂ ತೇ ಸಂಕ್ಷೇಪೇಣ ಮಹಾಮತೇ ।**
**ಪರಮಾರ್ಥಸಾರಭೂತಂ ಯತ್ ತದದ್ವೈತಮಶೇಷತಃ ॥ 18**

*ಬ್ರಾಹ್ಮಣ ಉವಾಚ:*

**ಏವಮುಕ್ತ್ವಾ ಯಯೌ ವಿದ್ವಾನ್ನಿದಾಘಂ ಸ ಋಭುರ್ಗುರುಃ ।**
**ನಿದಾಘೋಽಪ್ಯುಪದೇಶೇನ ತೇನಾದ್ವೈತಪರೋಽಭವತ್ ॥ 19**

**ಸರ್ವಭೂತಾನ್ಯಭೇದೇನ ದದೃಶೇ ಸ ತದಾತ್ಮನಃ ।**
**ಯಥಾ ಬ್ರಹ್ಮಪರೋ ಮುಕ್ತಿಮವಾಪ ಪರಮಾಂ ದ್ವಿಜಃ ॥ 20**

**ತಥಾ ತ್ವಮಪಿ ಧರ್ಮಜ್ಞ ತುಲ್ಯಾತ್ಮರಿಪುಬಾಂಧವಃ ।**
**ಭವ ಸರ್ವಗತಂ ಜಾನನ್ನಾತ್ಮಾನಮವನೀಪತೇ ॥ 21**

---

ಮಾಡಲು ಆಗಮಿಸಿದೆನು. ನಾನು ಋಭು ಹೌದು (17). ಹೇ ಮಹಾಪ್ರಾಜ್ಞ, (ನೀನು ಬುದ್ಧಿವಂತನಾದ್ದರಿಂದ ತಿಳಿದುಕೊಳ್ಳಬಲ್ಲೆ). ನಿನಗೆ ಸಂಕ್ಷೇಪವಾಗಿ ಈ ಪ್ರಕಾರ ಉಪದೇಶಿಸಿದ್ದೇನೆ. ಸರ್ವವೂ ಅದ್ವೈತಮಯವೆಂಬುದು ಪರಮಾರ್ಥದ ಸಾರ" ಎಂದನು (18). ಈ ರೀತಿ ನಿದಾಘನಿಗೆ ತಿಳಿಸಿ ಜ್ಞಾನಿಯೂ ಗುರುವೂ ಆದ ಋಭುಮುನಿಯು ಹೊರಟು ಹೋದನು. ಅನಂತರ ನಿದಾಘನು ಗುರುವಿನ ಉಪದೇಶಬಲದಿಂದ ಅದ್ವೈತಪರನಾದನು (19). ತನಗೂ ಸಕಲ ಭೂತಗಳಿಗೂ ಅಭೇದವನ್ನು ನಿಶ್ಚಯಿಸಿಕೊಂಡನು. ಹೀಗೆ ಆ ದ್ವಿಜನು ಬ್ರಹ್ಮನಿಷ್ಠನಾಗಿ ಪರಮಮುಕ್ತಿಯನ್ನೈದಿದನು. ಹಾಗೆಯೇ ಧರ್ಮಜ್ಞ—ಸೌವೀರರಾಜ, ನೀನು ಸಹ ಆತ್ಮ, ಶತ್ರು, ಬಾಂಧವರಲ್ಲಿ ಸಮದರ್ಶಿಯಾಗಿ, ಸರ್ವಗತವಾದದ್ದು ಆತ್ಮ ಒಂದೇ ಎಂದು ತಿಳಿದಿರು (20-21). ಒಂದೇ ಆಕಾಶವು ಭ್ರಾಂತಿ

**ಸಿತನೀಲಾದಿಭೇದೇನ ಯಥೈಕಂ ದೃಶ್ಯತೇ ನಭಃ।**
**ಭ್ರಾಂತಿದೃಷ್ಟಿಭಿರಾತ್ಮಾಪಿ ತಥೈಕಃ ಸನ್ ಪೃಥಕ್ ಪೃಥಕ್॥** 22

**ಏಕಃ ಸಮಸ್ತಂ ಯದಿಹಾಸ್ತಿ ಕಿಂಚಿತ್-**
**ತದಚ್ಯುತೋ ನಾಸ್ತಿ ಪರಂ ತತೋಽನ್ಯತ್।**
**ಸೋಽಹಂ ಸ ಚ ತ್ವಂ ಸ ಚ ಸರ್ವಮೇತ-**
**ದಾತ್ಮಸ್ವರೂಪಂ ತ್ಯಜ ಭೇದಮೋಹಮ್॥** 23

*ಶ್ರೀಪರಾಶರ ಉವಾಚ:*

**ಇತೀರಿತಸ್ತೇನ ಸ ರಾಜವರ್ಯ-**
**ಸ್ತತ್ಯಾಜ ಭೇದಂ ಪರಮಾರ್ಥದೃಷ್ಟಿಃ।**
**ಸ ಚಾಪಿ ಜಾತಿಸ್ಮರಣಾಪ್ತಬೋಧ-**
**ಸ್ತತ್ರೈವ ಜನ್ಮನ್ಯಪವರ್ಗಮಾಪ॥** 24

---

ದೃಷ್ಟಿಯವರಿಗೆ ಬಿಳುಪು, ಕಪ್ಪು—ಮುಂತಾದ ಭೇದವುಳ್ಳದ್ದಾಗಿ ಹೇಗೆ ಕಾಣುವುದೋ ಹಾಗೆ ಒಬ್ಬನೇ ಆತ್ಮನು ಬೇರೆಬೇರೆಯಾಗಿ ಭ್ರಾಂತರಿಗೆ ತೋರಿಬರುತ್ತಾನೆ (22). ಈ ಜಗತ್ತಿನಲ್ಲಿ ಏನಿದೆಯೋ ಅದೆಲ್ಲವೂ ಒಬ್ಬನೇ ಅಚ್ಯುತನು. ಆತನಿಗಿಂತ ಭಿನ್ನವಾದ ವಸ್ತು ಇನ್ನೊಂದು ಇಲ್ಲ. ಆ ಅಚ್ಯುತನೇ ನಾನು, ಆತನೇ ನೀನು, ಆತನೇ ಸಮಸ್ತವೂ. ಎಲ್ಲವೂ ಆತ್ಮಸ್ವರೂಪವೇ. ಭೇದಜ್ಞಾನವೆಂಬ ಮೋಹವನ್ನು ತೊರೆದುಬಿಡು" ಎಂದು ಜಡಭರತನು ನುಡಿದನು (23). ಮೈತ್ರೇಯ, ಹೀಗೆ ಆ ವಿಪ್ರನು ನುಡಿಯಲಾಗಿ ಸೌವೀರ ರಾಜನು ಪರಮಾರ್ಥ ದೃಷ್ಟಿಯುಳ್ಳವನಾಗಿ ಭೇದ ಜ್ಞಾನವನ್ನು ತೊರೆದನು. ಜನ್ಮಾಂತರ ಸ್ಮರಣಬಲದಿಂದ ಜ್ಞಾನಿಯಾಗಿದ್ದ ಆ ಬ್ರಾಹ್ಮಣನೂ ಸಹ ಆ ಜನ್ಮದಲ್ಲಿಯೇ ಮುಕ್ತಿಯನ್ನೈದಿದನು (24). ಮೈತ್ರೇಯ, ಜಡಭರತನಿಗೂ ಸೌವೀರರಾಜನಿಗೂ ನಡೆದ ಈ ಸಂವಾದ ವನ್ನು ಭಕ್ತಿಯಿಂದ ಯಾವನು ಹೇಳುತ್ತಾನೋ, ಯಾವನು ಕೇಳುತ್ತಾನೋ

**ಇತಿ ಭರತನರೇಂದ್ರಸಾರವೃತ್ತಂ**
**ಕಥಯತಿ ಯಶ್ಚ ಶೃಣೋತಿ ಭಕ್ತಿಯುಕ್ತಃ।**
**ಸ ವಿಮಲಮತಿರೇತಿ ನಾತ್ಮಮೋಹಂ**
**ಭವತಿ ಚ ಸಂಸರಣೇಷು ಮುಕ್ತಿಯೋಗ್ಯಃ॥** 25

ಇತಿ ಶ್ರೀವಿಷ್ಣುಪುರಾಣೇ ದ್ವಿತೀಯೇಽಂಶೇ ಷೋಡಶೋಽಧ್ಯಾಯಃ॥

**ಇತಿ ಶ್ರೀಪರಾಶರಮುನಿವಿರಚಿತೇ ಶ್ರೀವಿಷ್ಣುಪರತ್ವನಿರ್ಣಾಯಕೇ ಶ್ರೀಮತಿ ವಿಷ್ಣುಮಹಾಪುರಾಣೇ ದ್ವಿತೀಯೋಽಂಶಃ ಸಮಾಪ್ತಃ॥**

---

ಆತನು ಶುದ್ಧಬುದ್ಧಿಯವನಾಗುತ್ತಾನೆ. ಆತ್ಮವಿಷಯದಲ್ಲಿ ಮೋಹವನ್ನು ಹೊಂದುವುದಿಲ್ಲ. ಸಂಸಾರದಲ್ಲಿದ್ದರೂ ಮುಕ್ತಿಯೋಗ್ಯನಾಗುತ್ತಾನೆ (25).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಹದಿನಾರನೆಯ ಅಧ್ಯಾಯ ಮುಗಿಯಿತು.

**ದ್ವಿತೀಯಾಂಶ ಸಮಾಪ್ತಿ**



# ತೃತೀಯಾಂಶಃ

## ಪ್ರಥಮೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಕಥಿತಾ ಗುರುಣಾ ಸಮ್ಯಗ್‌ಭೂಸಮುದ್ರಾದಿಸಂಸ್ಥಿತಿಃ।**
**ಸೂರ್ಯಾದೀನಾಂ ಚ ಸಂಸ್ಥಾನಂ ಜ್ಯೋತಿಷಾಂ ಚಾತಿವಿಸ್ತರಾತ್॥** 1

**ದೇವಾದೀನಾಂ ಚಥಾ ಸೃಷ್ಟಿರ್ಋಷೀಣಾಂ ಚಾಪಿ ವರ್ಣಿತಾ।**
**ಚಾತುರ್ವರ್ಣ್ಯಸ್ಯ ಚೋತ್ಪತ್ತಿಸ್ತಿರ್ಯಗ್ಯೋನಿಗತಸ್ಯ ಚ॥** 2

**ಧ್ರುವಪ್ರಹ್ಲಾದಚರಿತಂ ವಿಸ್ತರಾಚ್ಚ ತ್ವಯೋದಿತಮ್।**
**ಮನ್ವಂತರಾಣ್ಯಶೇಷಾಣಿ ಶ್ರೋತುಮಿಚ್ಛಾಮ್ಯನುಕ್ರಮಾತ್॥** 3

---

# ತೃತೀಯಾಂಶ

## ಅಧ್ಯಾಯ 1

ಮೊದಲನೆಯ ಏಳು ಮನ್ವಂತರಗಳಲ್ಲಿದ್ದ ಮನು, ಇಂದ್ರ, ದೇವತೆ, ಸಪ್ತರ್ಷಿಗಳು ಮತ್ತು ಮನುಪುತ್ರರು—ಇವರ ವರ್ಣನೆ.

ಮೈತ್ರೇಯರು ಪರಾಶರ ಮುನಿಗಳನ್ನು ಕುರಿತು "ಗುರುಗಳೆ, ಇದು ವರೆಗೆ ಭೂಮಿ ಸಮುದ್ರಾದಿಗಳ ಸ್ಥಿತಿಯನ್ನೂ ಸೂರ್ಯಾದಿ ಜ್ಯೋತಿಗಳ ಸಂಸ್ಥಾನವನ್ನೂ ವಿಸ್ತಾರವಾಗಿ ಹೇಳಿದ್ದೀರಿ (1). ಅಲ್ಲದೆ ದೇವಗಂಧರ್ವಾದಿಗಳ ಮತ್ತು ಋಷಿಗಳ ಸೃಷ್ಟಿಯನ್ನೂ ಚಾತುರ್ವರ್ಣ್ಯದ ವಿಚಾರವನ್ನೂ ತಿರ್ಯಗ್‌ಜಂತುಗಳ ಉತ್ಪತ್ತಿ ಕ್ರಮವನ್ನೂ ಧ್ರುವ ಪ್ರಹ್ಲಾದರ ಚರಿತ್ರೆಯನ್ನೂ ಸಹ ವಿಸ್ತಾರವಾಗಿಯೇ ವರ್ಣಿಸಿದ್ದೀರಿ. ಈಗ ಎಲ್ಲ ಮನ್ವಂತರಗಳ ವಿಷಯವನ್ನೂ ಕೇಳಿ ತಿಳಿದುಕೊಳ್ಳಲು ಬಯಸುತ್ತೇನೆ (2-3). ಹಾಗೆಯೇ ಆಯಾ ಮನ್ವಂತರಾಧಿಪತಿಗಳನ್ನೂ ಆ ಸಮಯದಲ್ಲಿರುವ ಇಂದ್ರ

**ಮನ್ವಂತರಾಧಿಪಾಂಶ್ಚೈವ ಶಕ್ರದೇವಪುರೋಗಮಾನ್।**
**ಭವತಾ ಕಥಿತಾನೇತಾನ್ ಶ್ರೋತುಮಿಚ್ಛಾಮ್ಯಹಂ ಗುರೋ॥ 4**

*ಶ್ರೀಪರಾಶರ ಉವಾಚ:*

**ಅತೀತಾನಾಗತಾನೀಹ ಯಾನಿ ಮನ್ವಂತರಾಣಿ ವೈ।**
**ತಾನ್ಯಹಂ ಭವತಃ ಸಮ್ಯಕ್ಕಥಯಾಮಿ ಯಥಾಕ್ರಮಮ್॥ 5**

**ಸ್ವಾಯಂಭುವೋ ಮನುಃ ಪೂರ್ವಂ ಪರಃ ಸ್ವಾರೋಚಿಷಸ್ತಥಾ।**
**ಉತ್ತಮಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ॥ 6**

**ಷಡೇತೇ ಮನವೋಽತೀತಾಸ್ಸಾಂಪ್ರತಂ ತು ರವೇಸ್ಸುತಃ।**
**ವೈವಸ್ವತೋಽಯಂ ಯಸ್ಯೈತತ್ಸಪ್ತಮಂ ವರ್ತತೇಽಂತರಮ್॥ 7**

**ಸ್ವಾಯಂಭುವಂ ತು ಕಥಿತಂ ಕಲ್ಪಾದಾವಂತರಂ ಮಯಾ।**
**ದೇವಾಸ್ಸಪ್ತರ್ಷಯಶ್ಚೈವ ಯಥಾವತ್ಕಥಿತಾ ಮಯಾ॥ 8**

---

ದೇವತಾದಿಗಳನ್ನೂ ನೀವು ಹೇಳಬೇಕೆಂದು ಅದೆಲ್ಲವನ್ನೂ ನಾನು ಕೇಳಬೇಕೆಂದೂ ಅಪೇಕ್ಷೆಯಾಗಿದೆ" ಎಂದರು (4). ಆಗ ಪರಾಶರರು ಹೇಳಿದರು: ಮೈತ್ರೇಯ, ಹಿಂದೆ ಕಳೆದುಹೋದ ಮನ್ವಂತರಗಳನ್ನೂ ಮುಂದೆ ಬರತಕ್ಕವನ್ನೂ ಕ್ರಮವರಿತು ಸರಿಯಾಗಿ ಹೇಳುತ್ತೇನೆ. ಮೊದಲನೆಯ ಮನು ಸ್ವಾಯಂಭುವ. ಆಮೇಲೆ ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ—ಎಂಬ ಆರು ಮನುಗಳು ಕಳೆದುಹೋದರು. ಈಗ ಏಳನೆಯದಾದ ವೈವಸ್ವತಮನ್ವಂತರವು ನಡೆಯುತ್ತಿದೆ. ವೈವಸ್ವತನು ಸೂರ್ಯನ ಮಗ (5-7). ನಾನು ಹಿಂದೆಯೇ ಸ್ವಾಯಂಭುವ ಮನ್ವಂತರವನ್ನೂ ಆಗಿನ ದೇವತೆಗಳನ್ನೂ ಸಪ್ತರ್ಷಿಗಳನ್ನೂ ಕುರಿತು ಹೇಳಿದ್ದೇನೆ.* ಇದಾದ ಮೇಲೆ ಸ್ವಾರೋಚಿಷಮನ್ವಂತರದ ಮನ್ವಂತರಾಧಿಪತಿ, ದೇವತೆ

---

* ಸ್ವಾಯಂಭುವಮನ್ವಂತರದಲ್ಲಿ ದೇವತೆಗಳು ಯಾಮರು, ಋಷಿಗಳು ಮರೀಚಿ, ಅಂಗಿರಸ್—ಮೊದಲಾದವರು, ಮನುಪುತ್ರರು ಪ್ರಿಯವ್ರತ ಮತ್ತು ಉತ್ತಾನಪಾದ (ಅಂಶ 1, ಅಧ್ಯಾಯ 7).

ಅತ ಊರ್ಧ್ವಂ ಪ್ರವಕ್ಷ್ಯಾಮಿ ಮನೋಸ್ಸ್ವಾರೋಚಿಷಸ್ಯ ತು।
ಮನ್ವಂತರಾಧಿಪಾನ್ ಸಮ್ಯಗ್ದೇವರ್ಷೀಸ್ತತ್ಸುತಾಂಸ್ತಥಾ॥ 9

ಪಾರಾವತಾಸ್ಸತುಷಿತಾ ದೇವಾಸ್ಸ್ವಾರೋಚಿಷೇಽಂತರೇ।
ವಿಪಶ್ಚಿತ್ತತ್ರ ದೇವೇಂದ್ರೋ ಮೈತ್ರೇಯಾಸೀನ್ಮಹಾಬಲಃ॥ 10

ಊರ್ಜಃಸ್ತಂಭಸ್ತಥಾ ಪ್ರಾಣೋ ವಾತೋಽಥ ಪೃಷಭಸ್ತಥಾ।
ನಿರಯಶ್ಚ ಪರೀವಾಂಶ್ಚ ತತ್ರ ಸಪ್ತರ್ಷಯೋಽಭವನ್॥ 11

ಚೈತ್ರಕಿಂಪುರುಷಾದ್ಯಾಶ್ಚ ಸುತಾಸ್ಸ್ವಾರೋಚಿಷಸ್ಯ ತು।
ದ್ವಿತೀಯಮೇತದ್ವ್ಯಾಖ್ಯಾತಮಂತರಂ ಶೃಣು ಚೋತ್ತಮಮ್॥ 12

ತೃತೀಯೇಽಪ್ಯಂತರೇ ಬ್ರಹ್ಮನ್ನುತ್ತಮೋ ನಾಮ ಯೋ ಮನುಃ।
ಸುಶಾಂತಿರ್ನಾಮ ದೇವೇಂದ್ರೋ ಮೈತ್ರೇಯಾಸೀತ್ಸುರೇಶ್ವರಃ॥ 13

ಸುಧಾಮಾನಸ್ತಥಾ ಸತ್ಯಾ ಜಪಾಶ್ಚಾಥ ಪ್ರತರ್ದನಾಃ।
ವಶವರ್ತಿನಶ್ಚ ಪಂಚೈತೇ ಗಣಾ ದ್ವಾದಶಕಾಸ್ಸ್ಮೃತಾಃ॥ 14

---

ಗಳು, ಋಷಿಗಳು ಮತ್ತು ಮನುಪುತ್ರರ ವಿಷಯವನ್ನೂ ಹೇಳುತ್ತೇನೆ (8-9). ಸ್ವಾರೋಚಿಷಮನ್ವಂತರದಲ್ಲಿ ಪಾರಾವತರು ಮತ್ತು ತುಷಿತರು ದೇವತೆಗಳು. ವಿಪಶ್ಚಿತ್ ಎಂಬುವನು ಬಲಾಢ್ಯನಾದ ಇಂದ್ರ. ಊರ್ಜ, ಸ್ತಂಭ, ಪ್ರಾಣ, ವಾತ, ಪೃಷಭ, ನಿರಯ, ಪರೀವಾನ್—ಎಂಬುವರು ಸಪ್ತರ್ಷಿಗಳು (10-11). ಚೈತ್ರ, ಕಿಂಪುರುಷ—ಮುಂತಾದವರು ಸ್ವಾರೋಚಿಷ ಮನುವಿನ ಪುತ್ರರು. ಹೀಗೆ ಎರಡನೆಯ ಮನ್ವಂತರದ ವಿಷಯವನ್ನು ಹೇಳಿದ್ದಾಯಿತು. ಇನ್ನು ಉತ್ತಮ ಎಂಬ ಮನ್ವಂತರದ ವಿಷಯವನ್ನು ಆಲಿಸು (12). ಮೂರನೆಯ ಈ ಉತ್ತಮ ಮನ್ವಂತರದಲ್ಲಿ ಉತ್ತಮನೆಂಬವನು ಮನು. ಸುಶಾಂತಿಯೆಂಬವನು ದೇವೇಂದ್ರ. ಸುಧಾಮ, ಸತ್ಯ, ಜಪ, ಪ್ರತರ್ದನ, ವಶವರ್ತಿ—ಎಂಬ ದೇವತಾಗಣಗಳು ದೇವತೆಗಳು. ಈ ಹೆಸರಿನ ಒಂದೊಂದು ಗಣದಲ್ಲಿ ಹನ್ನೆರಡು ದೇವತೆಗಳಿರುತ್ತಾರೆ (13-14). ವಸಿಷ್ಠ ತನಯರಾದ ಏಳು ಮಂದಿ ಸಪ್ತರ್ಷಿಗಳಾಗಿದ್ದರು. ಅಜ,

**ವಸಿಷ್ಠತನಯಾ ಹ್ಯೇತೇ ಸಪ್ತ ಸಪ್ತರ್ಷಯೋಽಭವನ್।**
**ಅಜಃ ಪರಶುದೀಪ್ತಾದ್ಯಾಸ್ತಥೋತ್ತಮಮನೋಸ್ಸುತಾಃ॥ 15**

**ತಾಮಸಸ್ಯಾಂತರೇ ದೇವಾಸ್ಸುಪಾರಾ ಹರಯಸ್ತಥಾ।**
**ಸತ್ಯಾಶ್ಚ ಸುಧಿಯಶ್ಚೈವ ಸಪ್ತವಿಂಶತಿಕಾ ಗಣಾಃ॥ 16**

**ಶಿಬಿರಿಂದ್ರಸ್ತಥಾ ಚಾಸೀತ್ ಶತಯಜ್ಞೋಪಲಕ್ಷಣಃ।**
**ಸಪ್ತರ್ಷಯಶ್ಚ ಯೇ ತೇಷಾಂ ತೇಷಾಂ ನಾಮಾನಿ ಮೇ ಶೃಣು॥ 17**

**ಜ್ಯೋತಿರ್ಧಾಮಾ ಪೃಥುಃ ಕಾವ್ಯಶ್ಚೈತ್ರೋಽಗ್ನಿರ್ವನಕಸ್ತಥಾ।**
**ಪೀವರಶ್ಚರ್ಷಯೋ ಹ್ಯೇತೇ ಸಪ್ತ ತತ್ರಾಪಿ ಚಾಂತರೇ॥ 18**

**ನರಃ ಖ್ಯಾತಿಃ ಕೇತುರೂಪೋ ಜಾನುಜಂಘಾದಯಸ್ತಥಾ।**
**ಪುತ್ರಾಸ್ತು ತಾಮಸಸ್ಯಾಸನ್ ರಾಜಾನಸ್ಸುಮಹಾಬಲಾಃ॥ 19**

**ಪಂಚಮೇ ವಾಪಿ ಮೈತ್ರೇಯ ರೈವತೋ ನಾಮ ನಾಮತಃ।**
**ಮನುರ್ವಿಭುಶ್ಚ ತತ್ರೇಂದ್ರೋ ದೇವಾಂಶ್ಚಾತ್ರಾಂತರೇ ಶೃಣು॥ 20**

**ಅಮಿತಾಭಾ ಭೂತರಯಾ ವೈಕುಂಠಾಸ್ಸಸುಮೇಧಸಃ।**
**ಏತೇ ದೇವಗಣಾಸ್ತತ್ರ ಚತುರ್ದಶ ಚತುರ್ದಶ॥ 21**

---

ಪರಶು, ದೀಪ್ತ ಮೊದಲಾದವರು ಉತ್ತಮಮನುವಿನ ಮಕ್ಕಳು (15). ತಾಮಸಮನ್ವಂತರದಲ್ಲಿ ಸುಪಾರ, ಹರಿ, ಸತ್ಯ, ಸುಧೀ ಎಂಬ ನಾಲ್ಕು ದೇವತಾಗಣಗಳು. ಒಂದೊಂದು ಗಣದಲ್ಲಿ ಇಪ್ಪತ್ತೇಳು ದೇವತೆಗಳು. ನೂರು ಯಜ್ಞಗಳನ್ನು ಮಾಡಿದ ಶಿಬಿ ಎಂಬವನು ದೇವೇಂದ್ರ. ಇನ್ನು ಸಪ್ತರ್ಷಿಗಳ ಹೆಸರುಗಳನ್ನು ಕೇಳು (16-17). ಜ್ಯೋತಿರ್ಧಾಮ, ಪೃಥು, ಕಾವ್ಯ, ಚೈತ್ರ, ಅಗ್ನಿ, ವನಕ, ಪೀವರ—ಎಂಬವರು ತಾಮಸಮನ್ವಂತರದ ಸಪ್ತರ್ಷಿಗಳು. ನರ, ಖ್ಯಾತಿ, ಕೇತುರೂಪ, ಜಾನುಜಂಘ—ಮುಂತಾದ ಬಲಿಷ್ಠರಾದ ರಾಜರು ತಾಮಸಮನುವಿನ ಪುತ್ರರು (18-19). ಇನ್ನು ಐದನೆಯ ಮನ್ವಂತರದಲ್ಲಿ ರೈವತ ಎಂಬುವನು ಮನು. ವಿಭು ಎಂಬುವನು ಇಂದ್ರ. ಆಗಿನ ದೇವತೆಗಳನ್ನು ಕೇಳು. ಆಗ ಅಮಿತಾಭ, ಭೂತರಯ, ವೈಕುಂಠ, ಸುಮೇಧಸ್—ಎಂಬ ದೇವತಾ ಗಣಗಳಿದ್ದವು.

**ಹಿರಣ್ಯರೋಮಾ ವೇದಶ್ರೀರೂರ್ಧ್ವಬಾಹುಸ್ತಥಾಪರಃ।**
**ವೇದಬಾಹುಸ್ಸುಧಾಮಾ ಚ ಪರ್ಜನ್ಯಶ್ಚ ಮಹಾಮುನಿಃ।**
**ಏತೇ ಸಪ್ತರ್ಷಯೋ ವಿಪ್ರ ತತ್ರಾಸನ್ ರೈವತೇऽಂತರೇ॥** 22

**ಬಲಬಂಧುಶ್ಚ ಸಂಭಾವ್ಯಸ್ಸತ್ಯಕಾದ್ಯಾಶ್ಚ ತತ್ಸುತಾಃ।**
**ನರೇಂದ್ರಾಶ್ಚ ಮಹಾವೀರ್ಯಾ ಬಭೂವುರ್ಮುನಿಸತ್ತಮ॥** 23

**ಸ್ವಾರೋಚಿಷಶ್ಚೋತ್ತಮಶ್ಚ ತಾಮಸೋ ರೈವತಸ್ತಥಾ।**
**ಪ್ರಿಯವ್ರತಾನ್ವಯಾ ಹ್ಯೇತೇ ಚತ್ವಾರೋ ಮನವಸ್ಸ್ಮೃತಾಃ॥** 24

**ವಿಷ್ಣುಮಾರಾಧ್ಯ ತಪಸಾ ಸ ರಾಜರ್ಷಿಃ ಪ್ರಿಯವ್ರತಃ।**
**ಮನ್ವಂತರಾಧಿಪಾನೇತಾನ್ ಲಬ್ಧವಾನಾತ್ಮವಂಶಜಾನ್॥** 25

**ಷಷ್ಠೇ ಮನ್ವಂತರೇ ಚಾಸೀಚ್ಚಾಕ್ಷುಷಾಖ್ಯಸ್ತಥಾ ಮನುಃ।**
**ಮನೋಜವಸ್ತಥೈವೇಂದ್ರೋ ದೇವಾನಪಿ ನಿಬೋಧ ಮೇ॥** 26

**ಆಪ್ಯಾಃ ಪ್ರಸೂತಾ ಭವ್ಯಾಶ್ಚ ಪೃಥುಕಾಶ್ಚ ದಿವೌಕಸಃ।**
**ಮಹಾನುಭಾವಾ ಲೇಖಾಶ್ಚ ಪಂಚೈತೇ ಹ್ಯಷ್ಟಕಾ ಗಣಾಃ॥** 27

---

ಒಂದೊಂದು ಗಣದಲ್ಲಿ ಹದಿನಾಲ್ಕು ಹದಿನಾಲ್ಕು ದೇವತೆಗಳು (20-21). ರೈವತಮನ್ವಂತರದಲ್ಲಿ ಹಿರಣ್ಯರೋಮ, ವೇದಶ್ರೀ, ಊರ್ಧ್ವಬಾಹು, ವೇದಬಾಹು, ಸುಧಾಮ, ಪರ್ಜನ್ಯ, ಮಹಾಮುನಿ—ಎಂಬವರು ಸಪ್ತರ್ಷಿಗಳು. ಮೈತ್ರೇಯ, ಆಗ ಬಲಬಂಧು, ಸಂಭಾವ್ಯ, ಸತ್ಯಕ—ಮೊದಲಾದ ಬಲಶಾಲಿಗಳಾದ ರಾಜರು ರೈವತಮನುವಿನ ಪುತ್ರರಾಗಿದ್ದರು (22-23). ಸ್ವಾರೋಚಿಷ, ಉತ್ತಮ, ತಾಮಸ, ರೈವತ—ಈ ನಾಲ್ವರು ಪ್ರಿಯವ್ರತನ ವಂಶದಲ್ಲಿ ಹುಟ್ಟಿದ ಮನುಗಳು. ರಾಜರ್ಷಿಯಾದ ಪ್ರಿಯವ್ರತನು ತಪಸ್ಸಿನಿಂದ ವಿಷ್ಣುವನ್ನು ಆರಾಧಿಸಿ ತನ್ನ ವಂಶದಲ್ಲಿ ಮನ್ವಂತರಾಧಿಪತಿಗಳಾದ ಇವರನ್ನು ಪಡೆದಿದ್ದನು (24-25). ಆರನೆಯ ಮನ್ವಂತರದಲ್ಲಿ ಚಾಕ್ಷುಷನು ಮನುವಾಗಿದ್ದನು. ಆಗ ಮನೋಜವನು ದೇವೇಂದ್ರ. ಆಗಿನ ದೇವತೆಗಳನ್ನು ಕೇಳು. ಆಗ ಆಪ್ಯ, ಪ್ರಸೂತ, ಭವ್ಯ, ಪೃಥುಕ, ಲೇಖ ಎಂಬ ಮಹಾನುಭಾವರಾದ ದೇವತೆಗಳಿದ್ದರು. ಆ

**ಸುಮೇಧಾ ವಿರಜಾಶ್ಚೈವ ಹವಿಷ್ಮಾನುತ್ತಮೋ ಮಧುಃ।**
**ಅತಿನಾಮಾ ಸಹಿಷ್ಣುಶ್ಚ ಸಪ್ತಾಸನ್ನಿತಿ ಚರ್ಷಯಃ॥** 28

**ಊರುಃ ಪೂರುಶ್ಶತದ್ಯುಮ್ನಪ್ರಮುಖಾಸ್ಸುಮಹಾಬಲಾಃ।**
**ಚಾಕ್ಷುಷಸ್ಯ ಮನೋಃ ಪುತ್ರಾಃ ಪೃಥಿವೀಪತಯೋಽಭವನ್॥** 29

**ವಿವಸ್ವತಸ್ಸುತೋ ವಿಪ್ರ ಶ್ರಾದ್ಧದೇವೋ ಮಹಾದ್ಯುತಿಃ।**
**ಮನುಸ್ಸಂವರ್ತತೇ ಧೀಮಾನ್ ಸಾಂಪ್ರತಂ ಸಪ್ತಮೇಽಂತರೇ॥** 30

**ಆದಿತ್ಯವಸುರುದ್ರಾದ್ಯಾ ದೇವಾಶ್ಚಾತ್ರ ಮಹಾಮುನೇ।**
**ಪುರಂದರಸ್ತಥೈವಾತ್ರ ಮೈತ್ರೇಯ ತ್ರಿದಶೇಶ್ವರಃ॥** 31

**ವಸಿಷ್ಠಃ ಕಾಶ್ಯಪೋಽಥಾತ್ರಿರ್ಜಮದಗ್ನಿಸ್ಸಗೌತಮಃ।**
**ವಿಶ್ವಾಮಿತ್ರಭರದ್ವಾಜೌ ಸಪ್ತ ಸಪ್ತರ್ಷಯೋಽಭವನ್॥** 32

**ಇಕ್ಷ್ವಾಕುಶ್ಚ ನೃಗಶ್ಚೈವ ಧೃಷ್ಟಃ ಶರ್ಯಾತಿರೇವ ಚ।**
**ನರಿಷ್ಯಂತಶ್ಚ ವಿಖ್ಯಾತೋ ನಾಭಾಗೋಽರಿಷ್ಟ ಏವ ಚ॥** 33

---

ಹೆಸರಿನ ಐದು ಗಣಗಳಲ್ಲಿ ಒಂದೊಂದರಲ್ಲಿಯೂ ಎಂಟು ದೇವತೆಗಳು (26-27). ಸುಮೇಧ, ವಿರಜ, ಹವಿಷ್ಮಾನ್, ಉತ್ತಮ, ಮಧು, ಅತಿ ನಾಮ, ಸಹಿಷ್ಣು—ಎಂಬ ಸಪ್ತರ್ಷಿಗಳಿದ್ದರು (28). ಊರು, ಪೂರು, ಶತದ್ಯುಮ್ನ—ಮೊದಲಾದವರು ಚಾಕ್ಷುಷ ಮನುವಿನ ಪುತ್ರರಾಗಿ ಬಲಾಢ್ಯ ರಾದ ಪೃಥಿವೀಪತಿಗಳಾಗಿದ್ದರು. ಮೈತ್ರೇಯ, ಪ್ರಕೃತ ನಡೆಯುತ್ತಿರುವ ಮನ್ವಂತರದಲ್ಲಿ ವಿವಸ್ವಂತನ (ಸೂರ್ಯನ) ಪುತ್ರನಾದ ಶಾದ್ಧದೇವನೆಂಬ ತೇಜಸ್ವಿಯಾದ ಧೀಮಂತನು ಮನುವಾಗಿದ್ದಾನೆ. ಆದಿತ್ಯ, ವಸು, ರುದ್ರ—ಮೊದಲಾದವರು ದೇವತೆಗಳು. ಈ ಮನ್ವಂತರದಲ್ಲಿ ಪುರಂದರ ಎಂಬವನು ದೇವೇಂದ್ರ (29-31). ವಸಿಷ್ಠ, ಕಾಶ್ಯಪ, ಅತ್ರಿ, ಜಮದಗ್ನಿ, ಗೌತಮ, ವಿಶ್ವಾಮಿತ್ರ, ಭರದ್ವಾಜ ಎಂಬವರು ಸಪ್ತರ್ಷಿಗಳು. ಈ ವೈವಸ್ವತ ಮನುವಿಗೆ ಇಕ್ಷ್ವಾಕು, ನೃಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ಅರಿಷ್ಟ, ಕರೂಷ, ಪೃಷಧ್ರ—ಎಂಬ ಲೋಕವಿಖ್ಯಾತರಾದ

**ಕರೂಷಶ್ಚ ಪೃಷಧ್ರಶ್ಚ ಸುಮಹಾನ್ ಲೋಕವಿಶ್ರುತಃ।**
**ಮನೋರ್ವೈವಸ್ವತಸ್ಯೈತೇ ನವಪುತ್ರಾಃ ಸುಧಾರ್ಮಿಕಾಃ॥ 34**

**ವಿಷ್ಣುಶಕ್ತಿರನೌಪಮ್ಯಾ ಸತ್ತ್ವೋದ್ರಿಕ್ತಾ ಸ್ಥಿತೌ ಸ್ಥಿತಾ।**
**ಮನ್ವಂತರೇಷ್ವಶೇಷೇಷು ದೇವತ್ವೇನಾಧಿತಿಷ್ಠತಿ॥ 35**

**ಅಂಶೇನ ತಸ್ಯಾ ಜಜ್ಞೇಽಸೌ ಯಜ್ಞಸ್ಸ್ವಾಯಂಭುವೇಽಂತರೇ।**
**ಆಕೂತ್ಯಾಂ ಮಾನಸೋ ದೇವ ಉತ್ಪನ್ನಃ ಪ್ರಥಮೇಽಂತರೇ॥ 36**

**ತತಃ ಪುನಃ ಸ ವೈ ದೇವಃ ಪ್ರಾಪ್ತೇ ಸ್ವಾರೋಚಿಷೇಽಂತರೇ।**
**ತುಷಿತಾಯಾಂ ಸಮುತ್ಪನ್ನೋ ಹ್ಯಜಿತಸ್ತುಷಿತೈಃ ಸಹ॥ 37**

**ಔತ್ತಮೇಽಪ್ಯಂತರೇ ದೇವಸ್ತುಷಿತಸ್ತು ಪುನಸ್ಸ ವೈ।**
**ಸತ್ಯಾಯಾಮಭವತ್ಸತ್ಯಃ ಸತ್ಯೈಸ್ಸಹ ಸುರೋತ್ತಮೈಃ॥ 38**

**ತಾಮಸಸ್ಯಾಂತರೇ ಚೈವ ಸಂಪ್ರಾಪ್ತೇ ಪುನರೇವ ಹಿ।**
**ಹರ್ಯಾಯಾಂ ಹರಿಭಿಸ್ಸಾರ್ಧಂ ಹರಿರೇವ ಬಭೂವ ಹ॥ 39**

---

ಒಂಬತ್ತು ಧಾರ್ಮಿಕರಾದ ಪುತ್ರರು (32-34). ಈ ಸಮಸ್ತಮನ್ವಂತರಗಳಲ್ಲಿಯೂ ಸತ್ತ್ವಪ್ರಧಾನವೂ ಅಸದೃಶ್ಯವೂ ಆದ ವಿಷ್ಣುಶಕ್ತಿಯು ಅಧಿಷ್ಠಾತೃದೇವತೆಯಾಗಿ ಜಗತ್ತಿನ ರಕ್ಷಣೆಗೋಸ್ಕರ ನಿಂತಿರುತ್ತದೆ (35). ಮೊದಲನೆಯ ಸ್ವಾಯಂಭುವಮನ್ವಂತರದಲ್ಲಿ ಯಜ್ಞನೆಂಬ ದೇವನು ಆಕೂತಿಯಲ್ಲಿ ಮಾನಸಪುತ್ರನಾಗಿ ಜನಿಸಿದನು. ಆಮೇಲೆ ಸ್ವಾರೋಚಿಷ ಮನ್ವಂತರವು ಬಂದಾಗ ಆ ಯಜ್ಞದೇವನೇ ತುಷಿತೆಯಲ್ಲಿ ತುಷಿತದೇವತೆಗಳೊಡನೆ ಅಜಿತ ಎಂಬ ಹೆಸರಿನಿಂದ ಹುಟ್ಟಿದನು (36-37). ಉತ್ತಮಮನ್ವಂತರದಲ್ಲಿ ಆ ಅಜಿತನು ಸತ್ಯೆಯಲ್ಲಿ ಸತ್ಯರೆಂಬ ದೇವತೆಗಳೊಡನೆ ಸತ್ಯ ಎಂಬ ಹೆಸರಿನಿಂದ ಉದ್ಭವಿಸಿದನು. ತಾಮಸಮನ್ವಂತರದಲ್ಲಿ ಮತ್ತೆ ಆತನು ಹರ್ಯೆಯಲ್ಲಿ ಹರಿ ಎಂಬ ದೇವತೆಗಳೊಡನೆ ಹರಿಯಾಗಿ ಅವತರಿಸಿದನು (38-39). ಅನಂತರ ರೈವತಮನ್ವಂತರದಲ್ಲಿ ಆ ಹರಿಯು ಸಂಭೂತಿಯಲ್ಲಿ ಆ ಕಾಲದ ದೇವತೆಗಳೊಡನೆ ಮಾನಸ ಎಂಬ ಹೆಸರಿನಿಂದ ಅವತರಿಸಿದನು. ಚಾಕ್ಷುಷಮನ್ವಂತರದಲ್ಲಿ

**ರೈವತೇಽಪ್ಯಂತರೇ ದೇವಸ್ಸಂಭೂತ್ಯಾಂ ಮಾನಸೋ ಹರಿಃ।**
**ಸಂಭೂತೋ ರೈವತೈಸ್ಸಾರ್ಧಂ ದೇವೈರ್ದೇವವರೋ ಹರಿಃ॥ 40**

**ಚಾಕ್ಷುಷೇ ಚಾಂತರೇ ದೇವೋ ವೈಕುಂಠಃ ಪುರುಷೋತ್ತಮಃ।**
**ವಿಕುಂಠಾಯಾಮಸೌ ಜಜ್ಞೇ ವೈಕುಂಠೈರ್ದೈವತೈಃ ಸಹ॥ 41**

**ಮನ್ವಂತರೇಽತ್ರ ಸಂಪ್ರಾಪ್ತೇ ತಥಾ ವೈವಸ್ವತೇ ದ್ವಿಜ।**
**ವಾಮನಃ ಕಶ್ಯಪಾದ್ವಿಷ್ಣುರದಿತ್ಯಾಂ ಸಂಬಭೂವ ಹ॥ 42**

**ತ್ರಿಭಿಃ ಕ್ರಮೈರಿಮಾನ್ ಲೋಕಾಂಜಿತ್ವಾ ಯೇನ ಮಹಾತ್ಮನಾ।**
**ಪುರಂದರಾಯ ತ್ರೈಲೋಕ್ಯಂ ದತ್ತಂ ನಿಹತಕಂಟಕಮ್॥ 43**

**ಇತ್ಯೇತಾಸ್ತನವಸ್ತಸ್ಯ ಸಪ್ತಮನ್ವಂತರೇಷು ವೈ।**
**ಸಪ್ತಸ್ವೇವಾಭವನ್ ವಿಪ್ರ ಯಾಭಿಃ ಸಂವರ್ಧಿತಾಃ ಪ್ರಜಾಃ॥ 44**

**ಯಸ್ಮಾದ್ವಿಷ್ಟಮಿದಂ ವಿಶ್ವಂ ತಸ್ಯ ಶಕ್ತ್ಯಾ ಮಹಾತ್ಮನಃ।**
**ತಸ್ಮಾತ್ಸಾ ಪ್ರೋಚ್ಯತೇ ವಿಷ್ಣುರ್ವಿಶೇರ್ಧಾತೋಃ ಪ್ರವೇಶನಾತ್॥ 45**

---

ಪುರುಷೋತ್ತಮನಾದ ಹರಿಯು ವಿಕುಂಠೆಯ ಗರ್ಭದಲ್ಲಿ ವೈಕುಂಠದೇವತೆಗಳೊಡನೆ ವೈಕುಂಠನೆಂಬ ನಾಮದಿಂದ ಆವಿರ್ಭವಿಸಿದನು (40-41). ಮೈತ್ರೇಯ, ಈಗ ನಡೆಯುವ ವೈವಸ್ವತಮನ್ವಂತರವು ಪ್ರಾಪ್ತವಾಗಲಾಗಿ ವಿಷ್ಣುವು ಅದಿತಿಯ ಗರ್ಭದಲ್ಲಿ ಕಶ್ಯಪನಿಂದ ವಾಮನ ಎಂಬ ಹೆಸರಿನಿಂದ ಅವತರಿಸಿದನು (42). ಈ ಮಹಾತ್ಮನು ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಜಯಿಸಿ ನಿಷ್ಕಂಟಕವಾದ ಲೋಕತ್ರಯವನ್ನು ಪುರಂದರನೆಂಬ ದೇವೇಂದ್ರನಿಗೆ ವಹಿಸಿಕೊಟ್ಟನು (43). ಮೈತ್ರೇಯ, ಈ ಪ್ರಕಾರವಾಗಿ ಸಪ್ತಮನ್ವಂತರಗಳಲ್ಲಿ ವಿಷ್ಣುವು ಸಪ್ತ ಶರೀರಗಳನ್ನು ಧರಿಸಿ ಅವತರಿಸಿದ್ದಾನೆ. ಅದರಿಂದ ಪ್ರಜೆಗಳ ಅಭಿವೃದ್ಧಿಯಾಯಿತು (44). ಮೈತ್ರೇಯ, 'ವಿಶ್' ಧಾತುವಿಗೆ ಪ್ರವೇಶ ಎಂದು ಅರ್ಥ. ಆ ಮಹಾತ್ಮನ ವೈಷ್ಣವೀ ಶಕ್ತಿಯು ವಿಶ್ವವನ್ನೇ ಪ್ರವೇಶಮಾಡಿರುವ ಕಾರಣ 'ವಿಶ್' ಧಾತುವಿನಿಂದಾದ ವಿಷ್ಣು ಎಂಬುದು ಆತನ ಹೆಸರಾಗಿದೆ (45). ಸಮಸ್ತ

**ಸರ್ವೇ ಚ ದೇವಾ ಮನವಸ್ಸಮಸ್ತಾ-**
**ಸ್ಸಪ್ತರ್ಷಯೋ ಯೇ ಮನುಸೂನವಶ್ಚ।**
**ಇಂದ್ರಶ್ಚ ಯೋಽಯಂ ತ್ರಿದಶೇಶಭೂತೋ**
**ವಿಷ್ಣೋರಶೇಷಾಸ್ತು ವಿಭೂತಯಸ್ತಾಃ॥** 46

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಪ್ರಥಮೋಽಧ್ಯಾಯಃ

---

ದೇವತೆಗಳೂ ಮನುಗಳೂ ಸಪ್ತರ್ಷಿಗಳೂ ಮನುಪುತ್ರರೂ ದೇವೇಶ್ವರನಾದ ಇಂದ್ರನೂ—ಎಲ್ಲರೂ ವಿಷ್ಣುವಿನ ವಿಭೂತಿಗಳು (46).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಒಂದನೆಯ ಅಧ್ಯಾಯ ಮುಗಿಯಿತು.



## ದ್ವಿತೀಯೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಪ್ರೋಕ್ತಾನ್ಯೇತಾನಿ ಭವತಾ ಸಪ್ತಮನ್ವಂತರಾಣಿ ವೈ।**
**ಭವಿಷ್ಯಾಣ್ಯಪಿ ವಿಪ್ರರ್ಷೇ ಮಮಾಖ್ಯಾತುಂ ತ್ವಮರ್ಹಸಿ॥** 1

*ಶ್ರೀಪರಾಶರ ಉವಾಚ:*

**ಸೂರ್ಯಸ್ಯ ಪತ್ನೀ ಸಂಜ್ಞಾಭೂತ್ತನಯಾ ವಿಶ್ವಕರ್ಮಣಃ।**
**ಮನುರ್ಯಮೋ ಯಮೀ ಚೈವ ತದಪತ್ಯಾನಿ ವೈ ಮುನೇ॥** 2

**ಅಸಹಂತೀ ತು ಸಾ ಭರ್ತುಸ್ತೇಜಶ್ಛಾಯಾಂ ಯುಯೋಜ ವೈ।**
**ಭರ್ತೃಶುಶ್ರೂಷಣೇಽರಣ್ಯಂ ಸ್ವಯಂ ಚ ತಪಸೇ ಯಯೌ॥** 3

---

## ಅಧ್ಯಾಯ 2

ಸಾರ್ವಣಿಮನುವಿನ ಉತ್ಪತ್ತಿ, ಮುಂದೆ ಬರುವ ಏಳು ಮನ್ವಂತರಗಳ ಮನುಗಳು, ಮನುಪುತ್ರರು, ಸಪ್ತರ್ಷಿಗಳು ಮತ್ತು ಇಂದ್ರ—ಇವರ ವರ್ಣನೆ.

ಮೈತ್ರೇಯರು, “ಬ್ರಹ್ಮರ್ಷಿಗಳೆ, ಹೀಗೆ ಏಳು ಮನ್ವಂತರಗಳ ವಿಚಾರವನ್ನು ಹೇಳಿದಿರಿ. ಮುಂದೆ ಬರಲಿರುವ ಏಳು ಮನ್ವಂತರಗಳ ವಿಷಯವನ್ನೂ ಹೇಳಿರಿ” ಎಂದು ಕೇಳಿದರು (1). ಪರಾಶರರು ಹೇಳಿದರು: ವಿಶ್ವಕರ್ಮನ ಮಗಳಾದ ಸಂಜ್ಞೆಯು ಸೂರ್ಯನ ಪತ್ನಿ. ಅವಳಿಗೆ ಮನು*, ಯಮ, ಯಮಿ ಎಂಬ ಮೂವರು ಮಕ್ಕಳು ಹುಟ್ಟಿದರು (2). ಸಂಜ್ಞೆಯು ತನ್ನ ಪತಿಯಾದ ಸೂರ್ಯನ ತೇಜಸ್ಸನ್ನು ತಡೆದುಕೊಳ್ಳಲಾರದೆ ಛಾಯೆಯನ್ನು ಪತಿಯ ಸೇವೆಗೆ ನಿಯಮಿಸಿ, ತಪಸ್ಸಿಗಾಗಿ ಅರಣ್ಯಕ್ಕೆ ಹೊರಟುಹೋದಳು (3). ಸೂರ್ಯನು ಛಾಯೆಯನ್ನೇ (ಒಂದೇ ರೂಪವಿದ್ದುದರಿಂದ) ಸಂಜ್ಞೆಯೆಂದು ತಿಳಿದು, ಅವಳಲ್ಲಿ ಶನೈಶ್ಚರ,

* ಈತನೇ ಶ್ರಾದ್ಧದೇವನೆಂಬ ವೈವಸ್ವತಮನು.

**ಸಂಜ್ಞೇಯಮಿತ್ಯಥಾರ್ಕಶ್ಚ ಛಾಯಾಯಾಮಾತ್ಮಜತ್ರಯಮ್।**
**ಶನೈಶ್ಚರಂ ಮನುಂ ಚಾನ್ಯಂ ತಪತೀಂ ಚಾಪ್ಯಜೀಜನತ್॥ 4**

**ಛಾಯಾಸಂಜ್ಞಾ ದದೌ ಶಾಪಂ ಯಮಾಯ ಕುಪಿತಾ ಯದಾ।**
**ತದಾನ್ಯೇಯಮಸೌ ಬುದ್ಧಿರಿತ್ಯಾಸೀದ್ಯಮಸೂರ್ಯಯೋಃ॥ 5**

**ತತೋ ವಿವಸ್ವಾನಾಖ್ಯಾತೇ ತಯೈವಾರಣ್ಯಸಂಸ್ಥಿತಾಮ್।**
**ಸಮಾಧಿದೃಷ್ಟ್ಯಾ ದದೃಶೇ ತಾಮಶ್ವಾಂ ತಪಸಿ ಸ್ಥಿತಾಮ್॥ 6**

**ವಾಜಿರೂಪಧರಃ ಸೋಽಥ ತಸ್ಯಾಂ ದೇವಾವಥಾಶ್ವಿನೌ।**
**ಜನಯಾಮಾಸ ರೇವಂತಂ ರೇತಸೋಽಂತೇ ಚ ಭಾಸ್ಕರಃ॥ 7**

**ಆನಿನ್ಯೇ ಚ ಪುನಃ ಸಂಜ್ಞಾಂ ಸ್ವಸ್ಥಾನಂ ಭಗವಾನ್ ರವಿಃ।**
**ತೇಜಸಶ್ಶಮನಂ ಚಾಸ್ಯ ವಿಶ್ವಕರ್ಮಾ ಚಕಾರ ಹ॥ 8**

**ಭ್ರಮಮಾರೋಪ್ಯ ಸೂರ್ಯಂ ತು ತಸ್ಯ ತೇಜೋನಿಶಾತನಮ್।**
**ಕೃತವಾನಷ್ಟಮಂ ಭಾಗಂ ಸ ವ್ಯಶಾತಯದವ್ಯಯಮ್॥ 9**

---

ಇನ್ನೊಬ್ಬ ಮನು ಮತ್ತು ತಪತೀ ಎಂಬ ಕನ್ಯೆ—ಇವರನ್ನು ಮಕ್ಕಳಾಗಿ ಪಡೆದನು (4). ಒಂದು ಸಲ ಸಂಜ್ಞಾರೂಪದಲ್ಲಿದ್ದ ಛಾಯೆಯು ಕುಪಿತಳಾಗಿ ಯಮನನ್ನು ಶಪಿಸಿದಳು. ಆಗ ಯಮನಿಗೂ ಸೂರ್ಯನಿಗೂ ಅವಳು ಸಂಜ್ಞೆಯಲ್ಲವೆಂದೂ ಬೇರೊಬ್ಬಳೆಂದೂ ಗೊತ್ತಾಯಿತು! (5). ಆಗ ಸಂಜ್ಞೆಯು ಅರಣ್ಯಕ್ಕೆ ಹೋಗಿದ್ದಾಳೆಂದು ಛಾಯೆಯೇ ಸೂರ್ಯನಿಗೆ ತಿಳಿಸಲಾಗಿ ಸೂರ್ಯನು ಸಮಾಧಿದೃಷ್ಟಿಯಿಂದ ನೋಡಿ ಸಂಜ್ಞೆಯು ಹೆಣ್ಣು ಕುದುರೆಯ ರೂಪದಲ್ಲಿ ತಪೋನಿರತಳಾಗಿದ್ದಾಳೆಂದು ತಿಳಿದುಕೊಂಡನು (6). ಭಾಸ್ಕರನು ಸ್ವಯಂ ಗಂಡುಕುದುರೆಯ ರೂಪವನ್ನು ಧರಿಸಿ ಸಂಜ್ಞೆಯನ್ನು ಭೋಗಿಸಿ ಇಬ್ಬರು ಅಶ್ವಿನೀದೇವತೆಗಳನ್ನೂ ರೇವಂತನೆಂಬ ಇನ್ನೊಬ್ಬ ಪುತ್ರನನ್ನೂ ಪಡೆದನು (7). ಅನಂತರ ಭಗವಾನ್ ಭಾಸ್ಕರನು ಸಂಜ್ಞೆಯನ್ನು ಪುನಃ ತನ್ನ ಬಳಿಗೆ ಕರೆತಂದನು. ಆಮೇಲೆ ವಿಶ್ವಕರ್ಮನು ಸೂರ್ಯನ ತೇಜಸ್ಸನ್ನು ಕಡಿಮೆ ಮಾಡಿದನು (8). ಆತನು ಸೂರ್ಯನನ್ನು ಸಾಣೆಯ ಕಲ್ಲಿನ ಯಂತ್ರದ ಮೇಲಿಟ್ಟು ಸವೆಸಿ, ಅಕ್ಷುಣ್ಣವಾದ ಆತನ

**ಯತ್ತಸ್ಮಾದ್ವೈಷ್ಣವಂ ತೇಜಶ್ಶಾತಿತಂ ವಿಶ್ವಕರ್ಮಣಾ।**
**ಜಾಜ್ವಲ್ಯಮಾನಮಪತತ್ ತದ್ಭೂಮೌ ಮುನಿಸತ್ತಮ॥** 10

**ತ್ವಷ್ಟೈವ ತೇಜಸಾ ತೇನ ವಿಷ್ಣೋಶ್ಚಕ್ರಮಕಲ್ಪಯತ್।**
**ತ್ರಿಶೂಲಂ ಚೈವ ಶರ್ವಸ್ಯ ಶಿಬಿಕಾಂ ಧನದಸ್ಯ ಚ॥** 11

**ಶಕ್ತಿಂ ಗುಹಸ್ಯ ದೇವಾನಾಮನ್ಯೇಷಾಂ ಚ ಯದಾಯುಧಮ್।**
**ತತ್ಸರ್ವಂ ತೇಜಸಾ ತೇನ ವಿಶ್ವಕರ್ಮಾ ವ್ಯವರ್ಧಯತ್॥** 12

**ಛಾಯಾಸಂಜ್ಞಾಸುತೋ ಯೋಽಸೌ ದ್ವಿತೀಯಃ ಕಥಿತೋ ಮನುಃ।**
**ಪೂರ್ವಜಸ್ಯ ಸುವರ್ಣೋಽಸೌ ಸಾವರ್ಣಿಸ್ತೇನ ಕಥ್ಯತೇ॥** 13

**ತಸ್ಯ ಮನ್ವಂತರಂ ಹ್ಯೇತತ್ಸಾವರ್ಣಿಕಮಥಾಷ್ಟಮಮ್।**
**ತಚ್ಛೃಣುಷ್ವ ಮಹಾಭಾಗ ಭವಿಷ್ಯತ್ಕಥಯಾಮಿ ತೇ॥** 14

**ಸಾವರ್ಣಿಸ್ತು ಮನುರ್ಯೋಽಸೌ ಮೈತ್ರೇಯ ಭವಿತಾ ತತಃ।**
**ಸುತಪಾಶ್ಚಾಮಿತಾಭಾಶ್ಚ ಮುಖ್ಯಾಶ್ಚಾಪಿ ತಥಾ ಸುರಾಃ॥** 15

---

ತೇಜಸ್ಸಿನಲ್ಲಿ ಎಂಟನೆಯ ಒಂದು ಭಾಗವನ್ನು ಮಾತ್ರ ಶಮನ ಮಾಡಿದನು (9). ವಿಶ್ವಕರ್ಮನು ಸೂರ್ಯನ ವೈಷ್ಣವ ತೇಜಸ್ಸಿನ ಒಂದಂಶವನ್ನು ಹೀಗೆ ಕತ್ತರಿಸಲು, ಅದು ಜಾಜ್ವಲ್ಯಮಾನವಾಗಿ ಬೆಳಗುತ್ತ ಭೂಮಿಯ ಮೇಲೆ ಬಿದ್ದಿತು (10). ವಿಶ್ವಕರ್ಮನು ಆ ತೇಜೋಂಶದಿಂದ ವಿಷ್ಣುವಿಗೆ ಸುದರ್ಶನ ಚಕ್ರವನ್ನೂ ಶಿವನಿಗೆ ತ್ರಿಶೂಲವನ್ನೂ ಷಣ್ಮುಖನಿಗೆ ಶಕ್ತ್ಯಾಯುಧವನ್ನೂ ಹಾಗೆಯೇ ಇತರ ದೇವತೆಗಳಿಗೆ ಬೇರೆ ಬೇರೆ ಆಯುಧಗಳನ್ನೂ ನಿರ್ಮಿಸಿ ಕೊಟ್ಟನು (11-12). ಮೈತ್ರೇಯ, ಸಂಜ್ಞೆಯಂತೆಯೇ ಇದ್ದ ಛಾಯೆಗೆ ಇನ್ನೊಬ್ಬ 'ಮನು' ಪುತ್ರನಾಗಿ ಜನಿಸಿದನೆಂದು ಹೇಳಿದೆನಷ್ಟೆ. ಆತನು ತನ್ನ ಅಗ್ರಜನಾದ ಮನುವಿಗೆ ಸವರ್ಣ (ಸಮಾನರೂಪ) ನಾದ್ದರಿಂದ ಸಾವರ್ಣಿ ಯೆಂದು ಹೆಸರಾಯಿತು (13). ಆತನ ಆಧಿಪತ್ಯಕ್ಕೆ ಒಳಪಟ್ಟ ಎಂಟನೆಯ ಮನ್ವಂತರವು ಸಾವರ್ಣಿ ಎನಿಸಿಕೊಂಡಿದೆ. ಮುಂದೆ ನಡೆಯಲಿರುವ ಈ ಸಾವರ್ಣಿಮನ್ವಂತರದ ವಿಷಯವನ್ನು ನಿನಗೆ ಹೇಳುತ್ತೇನೆ, ಕೇಳು (14). ಮೈತ್ರೇಯ, ಈ ಸಾವರ್ಣಿಯು ಆ ಸಮಯದಲ್ಲಿ ಮನುವಾಗುವನು.

**ತೇಷಾಂ ಗಣಶ್ಚ ದೇವಾನಾಮೇಕೈಕೋ ವಿಂಶಕಃ ಸ್ಮೃತಃ।**
**ಸಪ್ತರ್ಷೀನಪಿ ವಕ್ಷ್ಯಾಮಿ ಭವಿಷ್ಯಾನ್ಮುನಿಸತ್ತಮ॥ 16**

**ದೀಪ್ತಿಮಾನ್ ಗಾಲವೋ ರಾಮಃ ಕೃಪೋ ದ್ರೌಣಿಸ್ತಥಾ ಪರಃ।**
**ಮತ್ಪುತ್ರಶ್ಚ ತಥಾ ವ್ಯಾಸ ಋಷ್ಯಶೃಂಗಶ್ಚ ಸಪ್ತಮಃ॥ 17**

**ವಿಷ್ಣುಪ್ರಸಾದಾದನಘಃ ಪಾತಾಲಾಂತರಗೋಚರಃ।**
**ವಿರೋಚನಸುತಸ್ತೇಷಾಂ ಬಲಿರಿಂದ್ರೋ ಭವಿಷ್ಯತಿ॥ 18**

**ವಿರಜಾಶ್ಚೋರ್ವರೀವಾಂಶ್ಚ ನಿರ್ಮೋಕಾದ್ಯಾಸ್ತಥಾಪರೇ।**
**ಸಾವರ್ಣೇಸ್ತು ಮನೋಃ ಪುತ್ರಾ ಭವಿಷ್ಯಂತಿ ನರೇಶ್ವರಾಃ॥ 19**

**ನವಮೋ ದಕ್ಷಸಾವರ್ಣಿರ್ಭವಿಷ್ಯತಿ ಮುನೇ ಮನುಃ।**
**ಪಾರಾ ಮರೀಚಿಗರ್ಭಾಶ್ಚ ಸುಧರ್ಮಾಣಸ್ತಥಾ ತ್ರಿಧಾ॥ 20**

**ಭವಿಷ್ಯಂತಿ ತಥಾ ದೇವಾ ಹ್ಯೇಕೈಕೋ ದ್ವಾದಶೋ ಗಣಃ।**
**ತೇಷಾಮಿಂದ್ರೋ ಮಹಾವೀರ್ಯೋ ಭವಿಷ್ಯತ್ಯದ್ಭುತೋ ದ್ವಿಜ॥ 21**

---

ಸುತಪ, ಅಮಿತಾಭ, ಮುಖ್ಯ—ಎಂಬ ದೇವತಾಗಣಗಳು ದೇವತೆಗಳಾಗುತ್ತಾರೆ. ಒಂದೊಂದು ದೇವತಾಗಣವು ಇಪ್ಪತ್ತು ದೇವತೆಗಳಿಂದ ಯುಕ್ತವಾದುದು. ಮುಂದೆ ಬರುವ ಸಪ್ತರ್ಷಿಗಳನ್ನೂ ಹೇಳುವೆನು (15-16). ದೀಪ್ತಿಮಾನ, ಗಾಲವ, ರಾಮ (ಜಾಮದಗ್ನ್ಯ), ಕೃಪ, ದ್ರೋಣಪುತ್ರನಾದ ಅಶ್ವತ್ಥಾಮ, ನನ್ನ ಪುತ್ರನಾದ ವ್ಯಾಸ, ಋಷ್ಯಶೃಂಗ—ಇವರು ಸಪ್ತರ್ಷಿಗಳೆನಿಸುವರು (17). ಪಾತಾಳಲೋಕವಾಸಿಯೂ ವಿರೋಚನಪುತ್ರನೂ ಆದ ಬಲಿಚಕ್ರವರ್ತಿಯು ವಿಷ್ಣುಪ್ರಸಾದದಿಂದ ಆ ಮನ್ವಂತರದಲ್ಲಿ ದೇವೇಂದ್ರನಾಗುವನು. ವಿರಜ, ಉರ್ವರೀವಾನ್, ನಿರ್ಮೋಕ—ಮೊದಲಾದ ಮನುಪುತ್ರರು ರಾಜರಾಗುವರು (18-19). ದಕ್ಷಸಾವರ್ಣಿಯು ಒಂಬತ್ತನೆಯ ಮನುವಾಗುವನು. ಪಾರ, ಮರೀಚಿಗರ್ಭ, ಸುಧರ್ಮ—ಎಂಬ ಹನ್ನೆರಡು ಹನ್ನೆರಡು ದೇವತೆಗಳುಳ್ಳ ಮೂರು ದೇವಗಣಗಳು ಆ ಕಾಲದ ದೇವತೆಗಳು. ಮಹಾವೀರನಾದ ಅದ್ಭುತ ಎಂಬವನು ಇಂದ್ರನಾಗುವನು (20-21). ಸವನ, ದ್ಯುತಿಮಾನ್, ಭವ್ಯ,

**ಸವನೋ ದ್ಯುತಿಮಾನ್ ಭವ್ಯೋ ವಸುರ್ಮೇಧಾತಿಥಿಸ್ತಥಾ।**
**ಜ್ಯೋತಿಷ್ಮಾನ್ ಸಪ್ತಮಃ ಸತ್ಯಸ್ತತ್ರೈತೇ ಚ ಮಹರ್ಷಯಃ॥ 22**

**ಧೃತಕೇತುರ್ದೀಪ್ತಿಕೇತುಃ ಪಂಚಹಸ್ತನಿರಾಮಯೌ।**
**ಪೃಥುಶ್ರವಾದ್ಯಾಶ್ಚ ತಥಾ ದಕ್ಷಸಾವರ್ಣಿಕಾತ್ಮಜಾಃ॥ 23**

**ದಶಮೋ ಬ್ರಹ್ಮಸಾವರ್ಣಿರ್ಭವಿಷ್ಯತಿ ಮುನೇ ಮನುಃ।**
**ಸುಧಾಮಾನೋ ವಿಶುದ್ಧಾಶ್ಚ ಶತಸಂಖ್ಯಾಸ್ತಥಾ ಸುರಾಃ॥ 24**

**ತೇಷಾಮಿಂದ್ರಶ್ಚ ಭವಿತಾ ಶಾಂತಿರ್ನಾಮ ಮಹಾಬಲಃ।**
**ಸಪ್ತರ್ಷಯೋ ಭವಿಷ್ಯಂತಿ ಯೇ ತಥಾ ತಾನ್ ಶೃಣುಷ್ವ ಹ॥ 25**

**ಹವಿಷ್ಮಾನ್ ಸುಕೃತಸ್ಸತ್ಯಸ್ತಪೋಮೂರ್ತಿಸ್ತಥಾ ಪರಃ।**
**ನಾಭಾಗೋಽಪ್ರತಿಮೌಜಾಶ್ಚ ಸತ್ಯಕೇತುಸ್ತಥೈವ ಚ॥ 26**

**ಸುಕ್ಷೇತ್ರಶ್ಚೋತ್ತಮೌಜಾಶ್ಚ ಭೂರಿಷೇಣಾದಯೋ ದಶ।**
**ಬ್ರಹ್ಮಸಾವರ್ಣಿಪುತ್ರಾಸ್ತು ರಕ್ಷಿಷ್ಯಂತಿ ವಸುಂಧರಾಮ್॥ 27**

---

ವಸು, ಮೇಧಾತಿಥಿ, ಜ್ಯೋತಿಷ್ಮಾನ್, ಸತ್ಯ—ಎಂಬುವರು ಆ ಕಾಲದ ಸಪ್ತರ್ಷಿಗಳು. ಧೃತಕೇತು, ದೀಪ್ತಿಕೇತು, ಪಂಚಹಸ್ತ, ನಿರಾಮಯ, ಪೃಥುಶ್ರವ ಮೊದಲಾದವರು ದಕ್ಷಸಾವರ್ಣಿಯ ಪುತ್ರರು. ಅವರು ನರಪತಿಗಳಾಗುವರು (22-23). ಮೈತ್ರೇಯ, ಬ್ರಹ್ಮಸಾವರ್ಣಿಯು ಹತ್ತನೆಯ ಮನು. ಸುಧಾಮ, ವಿಶುದ್ಧ ಎಂಬ ನೂರು ನೂರು ಸಂಖ್ಯೆಯುಳ್ಳ ದೇವಗಣಗಳು ಆ ಕಾಲದ ದೇವತೆಗಳು. ಶಾಂತಿ ಎಂಬ ಬಲಾಢ್ಯನು ದೇವೇಂದ್ರನಾಗುವನು. ಇನ್ನು ಯಾರು ಸಪ್ತರ್ಷಿಗಳಾಗುವರೆಂಬುದನ್ನು ಹೇಳುತ್ತೇನೆ, ಕೇಳು (24-25). ಹವಿಷ್ಮಾನ್, ಸುಕೃತ, ಸತ್ಯ, ತಪೋಮೂರ್ತಿ, ನಾಭಾಗ, ಅಪ್ರತಿಮೌಜ, ಸತ್ಯಕೇತು—ಎಂಬವರು ಸಪ್ತರ್ಷಿಗಳು. ಸುಕ್ಷೇತ್ರ, ಉತ್ತಮೌಜ, ಭೂರಿಷೇಣ—ಮೊದಲಾದ ಹತ್ತು ಮಂದಿ ಬ್ರಹ್ಮಸಾವರ್ಣಿಪುತ್ರರು ರಾಜರಾಗಿ ಭೂಮಿಯನ್ನು ಪಾಲಿಸುವರು (26-27). ಹನ್ನೊಂದನೆಯ ಮನು ಧರ್ಮಸಾವರ್ಣಿ. ದೇವತೆಗಳಲ್ಲಿ ವಿಹಂಗಮ, ಕಾಮಗಮ, ನಿರ್ವಾಣರತಿ—ಎಂಬ ಮುಖ್ಯವಾದ

**ಏಕಾದಶಶ್ಚ ಭವಿತಾ ಧರ್ಮಸಾವರ್ಣಿಕೋ ಮನುಃ।**
**ವಿಹಂಗಮಾ ಕಾಮಗಮಾ ನಿರ್ವಾಣರತಯಸ್ತಥಾ॥ 28**

**ಗಣಾಸ್ತ್ವೇತೇ ತದಾ ಮುಖ್ಯಾ ದೇವಾನಾಂ ಚ ಭವಿಷ್ಯತಾಮ್।**
**ಏಕೈಕಸ್ತ್ರಿಂಶಕಸ್ತೇಷಾಂ ಗಣಶ್ಚೇಂದ್ರಶ್ಚ ವೈ ವೃಷಃ॥ 29**

**ನಿಃಸ್ವರಶ್ಚಾಗ್ನಿ ತೇಜಾಶ್ಚ ವಪುಷ್ಮಾನ್ ಘೃಣಿರಾರುಣಿಃ।**
**ಹವಿಷ್ಮಾನನಘಶ್ಚೈವ ಭಾವ್ಯಾಃ ಸಪ್ತರ್ಷಯಸ್ತಥಾ॥ 30**

**ಸರ್ವತ್ರಗಸ್ಸುಧರ್ಮಾ ಚ ದೇವಾನೀಕಾದಯಸ್ತಥಾ।**
**ಭವಿಷ್ಯಂತಿ ಮನೋಸ್ತಸ್ಯ ತನಯಾಃ ಪೃಥಿವೀಶ್ವರಾಃ॥ 31**

**ರುದ್ರಪುತ್ರಸ್ತು ಸಾವರ್ಣಿರ್ಭವಿತಾ ದ್ವಾದಶೋ ಮನುಃ।**
**ಋತುಧಾಮಾ ಚ ತತ್ರೇಂದ್ರೋ ಭವಿತಾ ಶೃಣು ಮೇ ಸುರಾನ್॥**

**ಹರಿತಾ ರೋಹಿತಾ ದೇವಾಸ್ತಥಾ ಸುಮನಸೋ ದ್ವಿಜ।**
**ಸುಕರ್ಮಾಣಃ ಸುರಾಪಾಶ್ಚ ದಶಕಾಃ ಪಂಚ ವೈ ಗಣಾಃ॥ 33**

**ತಪಸ್ವೀ ಸುತಪಾಶ್ಚೈವ ತಪೋಮೂರ್ತಿಸ್ತಪೋರತಿಃ।**
**ತಪೋಧೃತಿರ್ದ್ಯುತಿಶ್ಚಾನ್ಯಃ ಸಪ್ತಮಸ್ತು ತಪೋಧನಃ॥ 34**

---

ದೇವಗಣಗಳಿರುತ್ತವೆ. ಒಂದೊಂದು ಗಣದಲ್ಲಿ ಮೂವತ್ತು ದೇವತೆಗಳು. ವೃಷ ಎಂಬವನು ಆಗ ದೇವೇಂದ್ರನಾಗುವನು (28-29). ನಿಃಸ್ವರ, ಅಗ್ನಿ ತೇಜ, ವಪುಷ್ಮಾನ್, ಘೃಣಿ, ಆರುಣಿ, ಹವಿಷ್ಮಾನ್, ಅನಘ—ಎಂಬವರು ಆ ಸಮಯದಲ್ಲಿ ಆಗುವ ಸಪ್ತರ್ಷಿಗಳು. ಸರ್ವತ್ರಗ, ಸುಧರ್ಮ, ದೇವಾನೀಕ—ಮೊದಲಾದ ಮನುಪುತ್ರರು ಆಗಿನ ಭೂಪಾಲರು (30-31). ರುದ್ರಪುತ್ರನಾದ ಸಾವರ್ಣಿಯು ಹನ್ನೆರಡನೆ ಮನುವಾಗುವನು. ಋತುಧಾಮ ಎಂಬವನು ಆ ಕಾಲದ ದೇವೇಂದ್ರನಾಗುವನು. ಇನ್ನು ದೇವತೆಗಳನ್ನು ಕೇಳು. ಆಗ ಹತ್ತು ಹತ್ತು ದೇವತೆಗಳುಳ್ಳ ಹರಿತ, ರೋಹಿತ, ಸುಮನ, ಸುಕರ್ಮ, ಸುರಾಪ—ಎಂಬ ಐದು ದೇವಗಣ ಗಳಿರುತ್ತವೆ (32-33). ತಪಸ್ವಿ, ಸುತಪ, ತಪೋಮೂರ್ತಿ, ತಪೋರತಿ, ತಪೋಧೃತಿ, ದ್ಯುತಿ, ತಪೋಧನ—ಎಂಬವರು ಆಗ ಸಪ್ತರ್ಷಿಗಳು. ರುದ್ರ

**ಸಪ್ತರ್ಷಯಸ್ತ್ವಿಮೇ ತಸ್ಯ ಪುತ್ರಾನಪಿ ನಿಬೋಧ ಮೇ।**
**ದೇವವಾನುಪದೇವಶ್ಚ ದೇವಶ್ರೇಷ್ಠಾದಯಸ್ತಥಾ॥** 35

**ಮನೋಸ್ತಸ್ಯ ಮಹಾವೀರ್ಯಾ ಭವಿಷ್ಯಂತಿ ಮಹಾನೃಪಾಃ।**
**ತ್ರಯೋದಶೋ ರುಚಿರ್ನಾಮಾ ಭವಿಷ್ಯತಿ ಮುನೇ ಮನುಃ॥** 36

**ಸುತ್ರಾಮಾಣಃ ಸುಕರ್ಮಾಣಃ ಸುಧರ್ಮಾಣಸ್ತಥಾಮರಾಃ।**
**ತ್ರಯಸ್ತ್ರಿಂಶದ್ವಿಭೇದಾಸ್ತೇ ದೇವಾನಾಂ ಯತ್ರ ವೈ ಗಣಾಃ॥** 37

**ದಿವಸ್ಪತಿರ್ಮಹಾವೀರ್ಯಸ್ತೇಷಾಮಿಂದ್ರೋ ಭವಿಷ್ಯತಿ।**
**ನಿರ್ಮೋಹಸ್ತತ್ತ್ವದರ್ಶೀ ಚ ನಿಷ್ಪ್ರಕಂಪ್ಯೋ ನಿರುತ್ಸುಕಃ॥** 38

**ಧೃತಿಮಾನವ್ಯಯಶ್ಚಾನ್ಯಸ್ಸಪ್ತಮಸ್ಸುತಪಾ ಮುನಿಃ।**
**ಸಪ್ತರ್ಷಯಸ್ತ್ವಮೀ ತಸ್ಯ ಪುತ್ರಾನಪಿ ನಿಬೋಧ ಮೇ॥** 39

**ಚಿತ್ರಸೇನವಿಚಿತ್ರಾದ್ಯಾ ಭವಿಷ್ಯಂತಿ ಮಹೀಕ್ಷಿತಃ।**
**ಭೌಮಶ್ಚತುರ್ದಶಶ್ಚಾತ್ರ ಮೈತ್ರೇಯ ಭವಿತಾ ಮನುಃ॥** 40

---

ಸಾವರ್ಣಿಯ ಪುತ್ರರ ಹೆಸರನ್ನು ಕೇಳು. ದೇವವಾನ್, ಉಪದೇವ, ದೇವಶ್ರೇಷ್ಠ—ಮೊದಲಾದವರು ಮನುಪುತ್ರರಾಗಿ ರಾಜರಾಗುವರು. ಅನಂತರ ರುಚಿ ಎಂಬುವನು ಹದಿಮೂರನೆಯ ಮನುವಾಗುವನು (34-36). ಸುತ್ರಾಮ, ಸುಕರ್ಮ, ಸುಧರ್ಮ—ಎಂಬ ದೇವಗಣಗಳಿರುತ್ತವೆ ಒಂದೊಂದು ಗಣದಲ್ಲಿ ಮೂವತ್ತಮೂರು ದೇವತೆಗಳು. ಮಹಾ ವೀರನಾದ ದಿವಸ್ಪತಿಯು ಆಗ ದೇವೇಂದ್ರನಾಗುವನು. ನಿರ್ಮೋಹ, ತತ್ತ್ವದರ್ಶಿ, ನಿಷ್ಪ್ರಕಂಪ್ಯ, ನಿರುತ್ಸುಕ, ಧೃತಿಮಾನ್, ಅವ್ಯಯ, ಸುತಪ—ಎಂಬವರು ಸಪ್ತರ್ಷಿಗಳಾಗುವರು, ರುಚಿಮನುವಿನ ಪುತ್ರರು ಯಾರೆಂಬುದನ್ನು ಕೇಳು (37-39). ಚಿತ್ರಸೇನ, ವಿಚಿತ್ರ—ಮೊದಲಾದವರು ಆತನ ಪುತ್ರರು. ಅವರು ಮಹೀಪತಿಗಳಾಗುವರು. ಮೈತ್ರೇಯ, ಭೌಮನು ಹದಿನಾಲ್ಕನೆಯ ಮನುವಾಗುವನು. ಶುಚಿ ಎಂಬವನು ದೇವೇಂದ್ರ. ಆಗ ಐದು ದೇವಗಣಗಳಿರುತ್ತವೆ. ಚಾಕ್ಷುಷ, ಪವಿತ್ರ, ಕನಿಷ್ಠ, ಭ್ರಾಜಿಕ,

**ಶುಚಿರಿಂದ್ರಸ್ಸುರಗಣಾಸ್ತತ್ರ ಪಂಚ ಶೃಣುಷ್ವ ತಾನ್।**
**ಚಾಕ್ಷುಷಾಶ್ಚ ಪವಿತ್ರಾಶ್ಚ ಕನಿಷ್ಠಾ ಭ್ರಾಜಿಕಾಸ್ತಥಾ॥ 41**

**ವಾಚಾವೃದ್ಧಾಶ್ಚ ವೈ ದೇವಾಸ್ಸಪ್ತರ್ಷೀನಪಿ ಮೇ ಶೃಣು।**
**ಅಗ್ನಿಬಾಹುಃ ಶುಚಿಃ ಶುಕ್ರೋ ಮಾಗಧೋಽಗ್ನಿಧ್ರ ಏವ ಚ॥ 42**

**ಯುಕ್ತಸ್ತಥಾ ಜಿತಶ್ಚಾನ್ಯೋ ಮನುಪುತ್ರಾನತಃ ಶೃಣು।**
**ಊರುಗಂಭೀರಬುದ್ಧ್ಯಾದ್ಯಾ ಮನೋಸ್ತಸ್ಯ ಸುತಾ ನೃಪಾಃ॥ 43**

**ಕಥಿತಾ ಮುನಿಶಾರ್ದೂಲ ಪಾಲಯಿಷ್ಯಂತಿ ಯೇ ಮಹೀಮ್॥ 44**

**ಚತುರ್ಯುಗಾಂತೇ ವೇದಾನಾಂ ಜಾಯತೇ ಕಿಲ ವಿಪ್ಲವಃ।**
**ಪ್ರವರ್ತಯಂತಿ ತಾನೇತ್ಯ ಭುವಂ ಸಪ್ತರ್ಷಯೋ ದಿವಃ। 45**

**ಕೃತೇ ಕೃತೇ ಸ್ಮೃತೇರ್ವಿಪ್ರ ಪ್ರಣೇತಾ ಜಾಯತೇ ಮನುಃ।**
**ದೇವ ಯಜ್ಞಭುಜಸ್ತೇ ತು ಯಾವನ್ಮನ್ವಂತರಂ ತು ತತ್॥ 46**

**ಭವಂತಿ ಯೇ ಮನೋಃ ಪುತ್ರಾ ಯಾವನ್ಮನ್ವಂತರಂ ತು ತೈಃ।**
**ತದನ್ವಯೋದ್ಭವೈಶ್ಚೈವ ತಾವದ್ಭೂಃ ಪರಿಪಾಲ್ಯತೇ॥ 47**

---

ವಾಚಾವೃದ್ಧ—ಎಂದು ಆ ದೇವಗಣಗಳ ಹೆಸರುಗಳು (40-41). ಸಪ್ತರ್ಷಿಗಳು ಯಾರೆಂದರೆ ಅಗ್ನಿಬಾಹು, ಶುಚಿ, ಶುಕ್ರ, ಮಾಗಧ, ಅಗ್ನಿಧ್ರ, ಯುಕ್ತ, ಜಿತ—ಎಂಬವರು. ಊರು, ಗಂಭೀರ, ಬುದ್ಧಿ—ಮುಂತಾದ ಮನುಪುತ್ರರು ಆಗ ಭೂಮಿಯನ್ನು ಪಾಲಿಸುವರು (42-44). ಮೈತ್ರೇಯ, ಪ್ರತಿಯೊಂದು ಚತುರ್ಯುಗದ ಕೊನೆಯಲ್ಲಿ ವೇದಗಳಿಗೆ ಲೋಪ ವಾಗುತ್ತದೆ. ಆಗ ಸಪ್ತರ್ಷಿಗಳು ದೇವಲೋಕದಿಂದ ಭೂಲೋಕಕ್ಕೆ ಬಂದು ವೇದಗಳನ್ನು ಪ್ರವರ್ತಿಸುವರು (45). ಪ್ರತಿಯೊಂದು ಕೃತಯುಗದಲ್ಲಿಯೂ ಧರ್ಮಶಾಸ್ತ್ರವನ್ನು ರಚಿಸತಕ್ಕ ಮನುವಿನ ಪ್ರಾದುರ್ಭಾವವಾಗುತ್ತದೆ. ಒಂದು ಮನ್ವಂತರವು ಕಳೆಯುವವರೆಗೂ ಆಯಾ ದೇವತೆಗಳು ಯಜ್ಞದ ಹವಿರ್ಭಾಗವನ್ನು ಭುಂಜಿಸುತ್ತಾರೆ (46). ಇನ್ನು ಮನುಪುತ್ರರು ಯಾರಿದ್ದಾರೋ ಅವರೂ ಅವರ ವಂಶಜರೂ ಆ ಮನ್ವಂತರವು ಕಳೆಯುವವರೆಗೆ ಭೂಮಿಯನ್ನು ಪರಿಪಾಲಿಸುತ್ತಾರೆ. ಹೀಗೆ ಒಂದೊಂದು

**ಮನುಸ್ಸಪ್ತರ್ಷಯೋ ದೇವಾ ಭೂಪಾಲಾಶ್ಚ ಮನೋಃ ಸುತಾಃ।**
**ಮನ್ವಂತರೇ ಭವಂತ್ಯೇತೇ ಶಕ್ರಶ್ಚೈವಾಧಿಕಾರಿಣಃ॥ 48**

**ಚತುರ್ದಶಭಿರೇತೈಸ್ತು ಗತೈರ್ಮನ್ವಂತರೈರ್ದ್ವಿಜ।**
**ಸಹಸ್ರಯುಗಪರ್ಯಂತಃ ಕಲ್ಪೋ ನಿಶ್ಶೇಷ ಉಚ್ಯತೇ॥ 49**

**ತಾವತ್ಪ್ರಮಾಣಾ ಚ ನಿಶಾ ತತೋ ಭವತಿ ಸತ್ತಮ।**
**ಬ್ರಹ್ಮರೂಪಧರಶ್ಶೇತೇ ಶೇಷಾಹಾವಂಭುಸಂಪ್ಲವೇ॥ 50**

**ತ್ರೈಲೋಕ್ಯಮಖಿಲಂ ಗ್ರಸ್ತ್ವಾ ಭಗವಾನಾದಿಕೃದ್ವಿಭುಃ।**
**ಸ್ವಮಾಯಾಸಂಸ್ಥಿತೋ ವಿಪ್ರ ಸರ್ವಭೂತೋ ಜನಾರ್ದನಃ॥ 51**

**ತತಃ ಪ್ರಬುದ್ಧೋ ಭಗವಾನ್ ಯಥಾ ಪೂರ್ವಂ ತಥಾ ಪುನಃ।**
**ಸೃಷ್ಟಿಂ ಕರೋತ್ಯವ್ಯಯಾತ್ಮಾ ಕಲ್ಪೇ ಕಲ್ಪೇ ರಜೋಗುಣಃ॥ 52**

---

ಮನ್ವಂತರಕ್ಕೆ ಮನು, ಸಪ್ತರ್ಷಿಗಳು, ದೇವತೆಗಳು, ಮನುಪುತ್ರರು ಮತ್ತು ದೇವೇಂದ್ರ—ಇವರು ಅಧಿಕಾರಪುರುಷರಾಗಿರುತ್ತಾರೆ (47-48). ಮೈತ್ರೇಯ, ಹೀಗೆ ಹದಿನಾಲ್ಕು ಮನ್ವಂತರಗಳಿಂದ ಕೂಡಿ ಒಂದು ಸಾವಿರ ಚತುರ್ಯುಗ*ಪರ್ಯಂತವಾದ ಕಾಲವು ಸಂಪೂರ್ಣವಾಗಿ ಒಂದು ಕಲ್ಪವೆನಿಸುತ್ತದೆ (ಇದು ಬ್ರಹ್ಮನ ಹಗಲು). ಅನಂತರ ಅಷ್ಟೇ ಕಾಲ ಪರಿಣಾಮವುಳ್ಳ ರಾತ್ರಿಯಾಗುತ್ತದೆ. ಬ್ರಹ್ಮರೂಪವನ್ನು ಧರಿಸಿದ್ದ ವಿಷ್ಣುವು ಆಗ ಪ್ರಳಯಕಾಲದಲ್ಲಿ ಆದಿಶೇಷನ ಮೇಲೆ ಜಲದಲ್ಲಿ ಪವಡಿಸುತ್ತಾನೆ (49-50). ಆದಿಕರ್ತನೂ ಸರ್ವವ್ಯಾಪಿಯೂ ಭಗವಂತನೂ ಆದ ಜನಾರ್ದನನು ಹೀಗೆ ಮೂರು ಲೋಕಗಳನ್ನೂ ನುಂಗಿ ತನ್ನ ಮಾಯೆಯಲ್ಲಿ ಸೇರಿಕೊಂಡಿರುತ್ತಾನೆ. (ಪ್ರಳಯ ರಾತ್ರಿಯು ಕಳೆದ ಮೇಲೆ) ಪುನಃ ಎಚ್ಚೆತ್ತು ರಜೋಗುಣವನ್ನು ಆಶ್ರಯಿಸಿ ಅವ್ಯಯನಾದ ಆ ಭಗವಂತನು ಸೃಷ್ಟಿಯನ್ನು

---

* ಮೂಲದಲ್ಲಿ 'ಸಹಸ್ರಯುಗಪರ್ಯಂತಃ' ಎಂದಿದೆ. ಯುಗವೆಂದರೆ ನಾಲ್ಕು ಯುಗಗಳ ಸಮೂಹವೆಂದು ಅರ್ಥ ಮಾಡಬೇಕಾಗಿದೆ (ನೋಡಿ ಅಂಶ 1, ಅಧ್ಯಾಯ 3, ಶ್ಲೋಕ 15). ಬ್ರಹ್ಮನ ಒಂದು ದಿನಕ್ಕೆ (ಹಗಲಿಗೆ) ಕಲ್ಪವೆಂದು ಹೆಸರು. (ಈ ಗಣನೆಯಲ್ಲಿ ಮತಭೇದವಿದೆ).

**ಮನವೋ ಭೂಭುಜಸ್ಸೇಂದ್ರಾ ದೇವಾಸ್ಸಪ್ತರ್ಷಯಸ್ತಥಾ।**
**ಸಾತ್ತ್ವಿಕೋಽಂಶಃ ಸ್ಥಿತಿಕರೋ ಜಗತೋ ದ್ವಿಜಸತ್ತಮ॥** 53

**ಚತುರ್ಯುಗೇಽಪ್ಯಸೌ ವಿಷ್ಣುಃ ಸ್ಥಿತಿವ್ಯಾಪಾರಲಕ್ಷಣಃ।**
**ಯುಗವ್ಯವಸ್ಥಾಂ ಕುರುತೇ ಯಥಾ ಮೈತ್ರೇಯ ತಚ್ಛೃಣು॥** 54

**ಕೃತೇ ಯುಗೇ ಪರಂ ಜ್ಞಾನಂ ಕಪಿಲಾದಿಸ್ವರೂಪಧೃಕ್।**
**ದದಾತಿ ಸರ್ವಭೂತಾತ್ಮಾ ಸರ್ವಭೂತಹಿತೇ ರತಃ॥** 55

**ಚಕ್ರವರ್ತಿಸ್ವರೂಪೇಣ ತ್ರೇತಾಯಾಮಪಿ ಸ ಪ್ರಭುಃ।**
**ದುಷ್ಟಾನಾಂ ನಿಗ್ರಹಂ ಕುರ್ವನ್ ಪರಿಪಾತಿ ಜಗತ್ತ್ರಯಮ್॥** 56

**ವೇದಮೇಕಂ ಚತುರ್ಭೇದಂ ಕೃತ್ವಾ ಶಾಖಾಶತೈರ್ವಿಭುಃ।**
**ಕರೋತಿ ಬಹುಲಂ ಭೂಯೋ ವೇದವ್ಯಾಸಸ್ವರೂಪಧೃಕ್॥** 57

**ವೇದಾಂಸ್ತು ದ್ವಾಪರೇ ವ್ಯಸ್ಯ ಕಲೇರಂತೇ ಪುನರ್ಹರಿಃ।**
**ಕಲ್ಕಿಸ್ವರೂಪೀ ದುರ್ವೃತ್ತಾನ್ಮಾರ್ಗೇ ಸ್ಥಾಪಯತಿ ಪ್ರಭುಃ॥** 58

---

ಮಾಡುತ್ತಾನೆ (51-52). ಎಲೈ ಮೈತ್ರೇಯ, ಮನುಗಳೂ ರಾಜರೂ ಇಂದ್ರರೂ ದೇವತೆಗಳೂ ಸಪ್ತರ್ಷಿಗಳೂ ಸಹ ಜಗತ್ತಿನ ಸ್ಥಿತಿಯನ್ನು ನೋಡಿಕೊಳ್ಳತಕ್ಕ ಭಗವಂತನ ಸಾತ್ತ್ವಿಕಾಂಶವಾಗಿರುತ್ತಾರೆ. ಸ್ಥಿತಿಯನ್ನು ಮಾಡತಕ್ಕ ವಿಷ್ಣುವು ನಾಲ್ಕು ಯುಗಗಳಲ್ಲಿ ಹೇಗೆ ವ್ಯವಸ್ಥೆ ಮಾಡುತ್ತಾನೆಂಬುದನ್ನು ಕೇಳು (53-54). ಸರ್ವಭೂತಗಳ ಹಿತದಲ್ಲಿ ನಿರತನಾದ ಆ ಸರ್ವಭೂತಾತ್ಮನು ಕೃತಯುಗದಲ್ಲಿ ಕಪಿಲಾದಿ ಜ್ಞಾನಿಗಳ ಸ್ವರೂಪವನ್ನು ಧರಿಸಿ ಪರಮಾರ್ಥಜ್ಞಾನವನ್ನು ಉಪದೇಶಿಸುತ್ತಾನೆ (55). ತ್ರೇತಾಯುಗದಲ್ಲಿ ಚಕ್ರವರ್ತಿ ರೂಪವನ್ನು ಧರಿಸಿ ದುಷ್ಟರನ್ನು ನಿಗ್ರಹಿಸುತ್ತ ಮೂರು ಲೋಕಗಳನ್ನು ಪಾಲಿಸುತ್ತಾನೆ. ದ್ವಾಪರಯುಗದಲ್ಲಿ ವೇದವ್ಯಾಸನಾಗಿ ಅವತರಿಸಿ ಒಂದೇ ಆದ ವೇದವನ್ನು ನಾಲ್ಕು ಭೇದಗಳನ್ನಾಗಿ ವಿಂಗಡಿಸಿ ಮತ್ತೆ ನೂರಾರು ಶಾಖೆಗಳನ್ನಾಗಿ ವಿಭಜಿಸಿ ಬೆಳೆಸುತ್ತಾನೆ (56-57). ಹೀಗೆ ದ್ವಾಪರದಲ್ಲಿ ವೇದಗಳನ್ನು ವಿಭಜಿಸಿ ಕಲಿಯುಗದ ಕಡೆಯಲ್ಲಿ ಕಲ್ಕಿರೂಪಧರನಾಗಿ ದುಷ್ಟರನ್ನು ದಂಡಿಸಿ ಸನ್ಮಾರ್ಗದಲ್ಲಿ ನಿಯಮಿಸುತ್ತಾನೆ (58).

**ಏವಮೇತಜ್ಜಗತ್ಸರ್ವಂ ಶಶ್ವತ್ ಪಾತಿ ಕರೋತಿ ಚ।**
**ಹಂತಿ ಚಾಂತೇಷ್ವನಂತಾತ್ಮಾ ನಾಸ್ತ್ಯಸ್ಮಾದ್ವ್ಯತಿರೇಕಿ ಯತ್॥** 59

**ಭೂತಂ ಭವ್ಯಂ ಭವಿಷ್ಯಂ ಚ ಸರ್ವಭೂತಾನ್ಮಹಾತ್ಮನಃ।**
**ತದತ್ರಾನ್ಯತ್ರ ವಾ ವಿಪ್ರ ಸದ್ಭಾವಃ ಕಥಿತಸ್ತವ॥** 60

**ಮನ್ವಂತರಾಣ್ಯಶೇಷಾಣಿ ಕಥಿತಾನಿ ಮಯಾ ತವ।**
**ಮನ್ವಂತರಾಧಿಪಾಂಶ್ಚೈವ ಕಿಮನ್ಯತ್ಕಥಯಾಮಿ ತೇ॥** 61

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ದ್ವಿತೀಯೋಽಧ್ಯಾಯಃ

---

ಹೀಗೆ ಅನಂತಾತ್ಮನಾದ ಶ್ರೀಹರಿಯು ಸರ್ವಜಗತ್ತನ್ನು ಪಾಲಿಸುತ್ತಾನೆ. ನಿರ್ಮಿಸುತ್ತಾನೆ. ಪ್ರಳಯಕಾಲಗಳಲ್ಲಿ ನಾಶಮಾಡುತ್ತಾನೆ. ಆತನಿಗಿಂತ ಬೇರೆಯಾದ ಯಾವ ವಸ್ತುವೂ ಇಲ್ಲ (59). ಮೈತ್ರೇಯ, ಈ ಲೋಕ ದಲ್ಲಾಗಲಿ ಪರಲೋಕದಲ್ಲಾಗಲಿ, ಸರ್ವಸ್ವರೂಪನೂ ಮಹಾತ್ಮನೂ ಆದ ವಿಷ್ಣುವಿಗಿಂತ ಭಿನ್ನವಾದ ಭೂತ, ವರ್ತಮಾನ, ಭವಿಷ್ಯತ್ತಿನ ಯಾವ ವಸ್ತುವೂ ಇಲ್ಲ. ನಿನಗೆ ಆ ಪರಮಾರ್ಥವನ್ನು ಹೇಳಿದ್ದೇನೆ (60). (ನೀನು ಕೇಳಿದಂತೆ) ಸಮಸ್ತ ಮನ್ವಂತರಗಳನ್ನೂ ಮನ್ವಂತರಾಧಿಪರನ್ನೂ ನಿನಗೆ ತಿಳಿಸಿದ್ದಾಯಿತು. ಇನ್ನು ಯಾವುದನ್ನು ನಿನಗೆ ಹೇಳಲಿ? (61).

ಇಲ್ಲಿಗೆ ಶ್ರೀವಿಷ್ಣುಪುರಾಣದ ದ್ವಿತೀಯಾಂಶದಲ್ಲಿ
ಎರಡನೆಯ ಅಧ್ಯಾಯ ಮುಗಿಯಿತು.



## ತೃತೀಯೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಜ್ಞಾತಮೇತನ್ಮಯಾ ತ್ವತ್ತೋ ಯಥಾ ಸರ್ವಮಿದಂ ಜಗತ್।**
**ವಿಷ್ಣುರ್ವಿಷ್ಣೌ ವಿಷ್ಣುತಶ್ಚ ನ ಪರಂ ವಿದ್ಯತೇ ತತಃ॥ 1**

**ಏತತ್ತು ಶ್ರೋತುಮಿಚ್ಛಾಮಿ ವ್ಯಸ್ತಾ ವೇದಾ ಮಹಾತ್ಮನಾ।**
**ವೇದವ್ಯಾಸಸ್ವರೂಪೇಣ ತಥಾ ತೇನ ಯುಗೇ ಯುಗೇ॥ 2**

**ಯಸ್ಮಿನ್ಯಸ್ಮಿನ್ಯುಗೇ ವ್ಯಾಸೋ ಯೋ ಯ ಆಸೀನ್ಮಹಾಮುನೇ।**
**ತಂ ತಮಾಚಕ್ಷ್ವ ಭಗವಾನ್ ಶಾಖಾ ಭೇದಾಂಶ್ಚ ಮೇ ವದ॥ 3**

---

## ಅಧ್ಯಾಯ 3

ಚತುರ್ಯುಗಾನುಸಾರವಾಗಿ ಉದ್ಭವಿಸಿದ ಬೇರೆಬೇರೆ ವ್ಯಾಸರು;
ಬ್ರಹ್ಮಜ್ಞಾನದ ಮಹಾತ್ಮ್ಯ.

ಮೈತ್ರೇಯರು "ಮಹರ್ಷಿಗಳೆ, ಈ ಜಗತ್ತೆಲ್ಲವೂ ವಿಷ್ಣುವೇ ಎಂದೂ ವಿಷ್ಣುವಿನಲ್ಲಿ ಇದೆಯೆಂದೂ ವಿಷ್ಣುವಿನಿಂದ ಜನಿಸಿದೆ ಎಂದೂ ವಿಷ್ಣುವಿಗಿಂತ ಬೇರೆಯಾಗಿ ಯಾವುದೂ ಇಲ್ಲವೆಂದೂ ನಿಮ್ಮಿಂದ ನಾನು ತಿಳಿದಿದ್ದೇನೆ (1). ಈಗ ನಾನು ಕೇಳಬೇಕೆಂದು ಇಚ್ಛಿಸುವುದೇನೆಂದರೆ, ಮಹಾತ್ಮನಾದ ವಿಷ್ಣುವು ವೇದವ್ಯಾಸರೂಪನಾಗಿ ಯುಗಯುಗದಲ್ಲಿಯೂ ವೇದಗಳನ್ನು ವಿಭಜಿಸುತ್ತಾನೆಂದು ಹೇಳಿದಿರಷ್ಟೆ. ಯಾವಯಾವ ಯುಗದಲ್ಲಿ ಯಾವ ಯಾವ ಹೆಸರಿನ ವ್ಯಾಸನಾಗಿ ಅವತರಿಸಿದನೆಂಬುದನ್ನು ಹೇಳಿರಿ. ಅಲ್ಲದೆ ವೇದಗಳ ಶಾಖಾಭೇದಗಳನ್ನೂ ನನಗೆ ತಿಳಿಸಿರಿ" ಎಂದು ಕೇಳಿದರು (2-3). ಆಗ ಪರಾಶರರು ನುಡಿದರು: ಮೈತ್ರೇಯ, ವೇದವೆಂಬ ವೃಕ್ಷಕ್ಕೆ ಸಾವಿರಾರು ಶಾಖಾಭೇದಗಳಿವೆ. ಅವೆಲ್ಲವನ್ನೂ ವಿಸ್ತಾರವಾಗಿ ಹೇಳಲಾರೆ.

*ಶ್ರೀಪರಾಶರ ಉವಾಚ:*

**ವೇದದ್ರುಮಸ್ಯ ಮೈತ್ರೇಯ ಶಾಖಾಭೇದಾಸ್ಸಹಸ್ರಶಃ।**
**ನ ಶಕ್ತೋ ವಿಸ್ತರಾದ್ವಕ್ತುಂ ಸಂಕ್ಷೇಪೇಣ ಶೃಣುಷ್ವ ತಮ್॥ 4**

**ದ್ವಾಪರೇ ದ್ವಾಪರೇ ವಿಷ್ಣುರ್ವ್ಯಾಸರೂಪೀ ಮಹಾಮುನೇ।**
**ವೇದಮೇಕಂ ಸುಬಹುಧಾ ಕುರುತೇ ಜಗತೋ ಹಿತಃ॥ 5**

**ವೀರ್ಯಂ ತೇಜೋ ಬಲಂ ಚಾಲ್ಪಂ ಮನುಷ್ಯಾಣಾಮವೇಕ್ಷ್ಯ ಚ।**
**ಹಿತಾಯ ಸರ್ವಭೂತಾನಾಂ ವೇದಭೇದಾನ್ ಕರೋತಿ ಸಃ॥ 6**

**ಯಯಾಸೌ ಕುರುತೇ ತನ್ವಾ ವೇದಮೇಕಂ ಪೃಥಕ್ ಪ್ರಭುಃ।**
**ವೇದವ್ಯಾಸಾಭಿಧಾನಾ ತು ಸಾ ಚ ಮೂರ್ತಿರ್ಮಧುದ್ವಿಷಃ॥ 7**

**ಯಸ್ಮಿನ್ಮನ್ವಂತರೇ ವ್ಯಾಸಾ ಯೇ ಯೇ ಸ್ಯುಸ್ತಾನ್ನಿಬೋಧ ಮೇ।**
**ಯಥಾ ಚ ಭೇದಶ್ಶಾಖಾನಾಂ ವ್ಯಾಸೇನ ಕ್ರಿಯತೇ ಮುನೇ॥ 8**

**ಅಷ್ಟಾವಿಂಶತಿಕೃತ್ವೋ ವೈ ವೇದೋ ವ್ಯಸ್ತೋ ಮಹರ್ಷಿಭಿಃ।**
**ವೈವಸ್ವತೇಽಂತರೇ ತಸ್ಮಿನ್ ದ್ವಾಪರೇಷು ಪುನಃ ಪುನಃ॥ 9**

---

ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು (4). ಜಗತ್ತಿಗೆ ಹಿತವನ್ನು ಮಾಡಬೇಕೆಂದು ವಿಷ್ಣುವು ಪ್ರತಿಯೊಂದು ದ್ವಾಪರಯುಗದಲ್ಲಿಯೂ ವ್ಯಾಸರೂಪಿಯಾಗಿ ಒಂದೇ ಆದ ವೇದವನ್ನು ಬಹುಮುಖವಾಗಿ ವಿಂಗಡಿಸುತ್ತಾನೆ (5). ಮಾನವರ ವೀರ್ಯತೇಜೋಬಲಗಳು ಅಲ್ಪವೆಂದರಿತು ಸಕಲ ಜೀವಿಗಳ ಶ್ರೇಯಸ್ಸಿಗಾಗಿ ಆತನು ವೇದಗಳ ವಿಭಾಗವನ್ನು ಮಾಡುತ್ತಾನೆ. ಯಾವ ಮೂರ್ತಿಯನ್ನು ಧರಿಸಿ ಆ ಪ್ರಭು ವೇದದ ವ್ಯಾಸ (ವಿಭಾಗ) ವನ್ನು ಮಾಡುತ್ತಾನೋ ಆ ಮೂರ್ತಿಗೆ ವೇದವ್ಯಾಸ ಎಂದು ಹೆಸರು (6-7). ಯಾವ ಮನ್ವಂತರದಲ್ಲಿ ಯಾವ ಯಾವ ವ್ಯಾಸರಾಗುತ್ತಾರೆಂಬುದನ್ನೂ ವ್ಯಾಸನು ಯಾವ ರೀತಿಯಲ್ಲಿ ವೇದದ ಶಾಖಾಭೇದಗಳನ್ನು ಮಾಡುತ್ತಾನೆಂಬುದನ್ನೂ ತಿಳಿಸುತ್ತೇನೆ, ಕೇಳು (8). ಈ ವೈವಸ್ವತ ಮನ್ವಂತರದ ದ್ವಾಪರಯುಗಗಳಲ್ಲಿ ವ್ಯಾಸಮಹರ್ಷಿಗಳು ಇಪ್ಪತ್ತೆಂಟು ಬಾರಿ ಮತ್ತೆ ಮತ್ತೆ ವೇದವನ್ನು ವಿಭಜಿಸಿದ್ದಾರೆ. ಹೀಗೆ ಈ ಮನ್ವಂತರದಲ್ಲಿ ಇಪ್ಪತ್ತೆಂಟು

**ವೇದವ್ಯಾಸಾ ವ್ಯತೀತಾ ಯೇ ಹ್ಯಷ್ಟಾವಿಂಶತಿ ಸತ್ತಮ।**
**ಚತುರ್ಧಾ ಯೈಃ ಕೃತೋ ವೇದೋ ದ್ವಾಪರೇಷು ಪುನಃ ಪುನಃ॥ 10**

**ದ್ವಾಪರೇ ಪ್ರಥಮೇ ವ್ಯಸ್ತಸ್ಸ್ವಯಂ ವೇದಃ ಸ್ವಯಂಭುವಾ।**
**ದ್ವಿತೀಯೇ ದ್ವಾಪರೇ ಚೈವ ವೇದವ್ಯಾಸಃ ಪ್ರಜಾಪತಿಃ॥ 11**

**ತೃತೀಯೇ ಚೋಶನಾ ವ್ಯಾಸಶ್ಚತುರ್ಥೇ ಚ ಬೃಹಸ್ಪತಿಃ।**
**ಸವಿತಾ ಪಂಚಮೇ ವ್ಯಾಸಃ ಷಷ್ಠೇ ಮೃತ್ಯುಸ್ಸ್ಮೃತಃ ಪ್ರಭುಃ॥ 12**

**ಸಪ್ತಮೇ ಚ ತಥೈವೇಂದ್ರೋ ವಸಿಷ್ಠಶ್ಚಾಷ್ಟಮೇ ಸ್ಮೃತಃ।**
**ಸಾರಸ್ವತಶ್ಚ ನವಮೇ ತ್ರಿಧಾಮಾ ದಶಮೇ ಸ್ಮೃತಃ॥ 13**

**ಏಕಾದಶೇ ತು ತ್ರಿಶಿಖೋ ಭರದ್ವಾಜಸ್ತತಃ ಪರಃ।**
**ತ್ರಯೋದಶೇ ಚಾಂತರಿಕ್ಷೋ ವರ್ಣೀ ಚಾಪಿ ಚತುರ್ದಶೇ॥ 14**

---

ವ್ಯಾಸರು ಗತಿಸಿಹೋದರು! ಅವರು ಮತ್ತೆ ಮತ್ತೆ ದ್ವಾಪರ ಯುಗದಲ್ಲಿ ವೇದವನ್ನು ನಾಲ್ಕು ವಿಭಾಗ ಮಾಡಿದ್ದಾರೆ (9-10). ಮೊದಲನೆಯ ದ್ವಾಪರಯುಗದಲ್ಲಿ ಸ್ವಯಂ ಬ್ರಹ್ಮದೇವನೇ ವೇದವಿಭಾಗವನ್ನು ಮಾಡಿದನು. ಎರಡನೆಯ ದ್ವಾಪರಯುಗದಲ್ಲಿ ಪ್ರಜಾಪತಿಯು (-ಮನು) ವ್ಯಾಸನಾದನು. ಮೂರನೆಯ ದ್ವಾಪರದಲ್ಲಿ ಶುಕ್ರ, ನಾಲ್ಕನೆಯದರಲ್ಲಿ ಬೃಹಸ್ಪತಿ, ಐದನೆಯದರಲ್ಲಿ ಸೂರ್ಯ, ಆರನೆಯದರಲ್ಲಿ ಪ್ರಭುವಾದ ಮೃತ್ಯು ವ್ಯಾಸರಾದರು (11-12). ಏಳನೆಯ ದ್ವಾಪರದಲ್ಲಿ ಇಂದ್ರನೂ ಎಂಟನೆಯದರಲ್ಲಿ ವಸಿಷ್ಠನೂ ಒಂಬತ್ತನೆಯದರಲ್ಲಿ ಸಾರಸ್ವತನೂ ಹತ್ತನೆಯದರಲ್ಲಿ ತ್ರಿಧಾಮನೂ ವ್ಯಾಸರಾದರು. ಹನ್ನೊಂದನೆಯ ದ್ವಾಪರ ಯುಗದಲ್ಲಿ ವಿಶಿಖ, ಆಮೇಲೆ ಹನ್ನೆರಡನೆಯದರಲ್ಲಿ ಭರದ್ವಾಜ, ಹದಿಮೂರನೆಯದರಲ್ಲಿ ಅಂತರಿಕ್ಷ, ಹದಿನಾಲ್ಕನೆಯದರಲ್ಲಿ ವರ್ಣಿ ಇವರು ವ್ಯಾಸರಾದರು (13-14). ಹದಿನೈದನೆಯ ದ್ವಾಪರದಲ್ಲಿ ತ್ರಯ್ಯಾರುಣನೂ ಹದಿನಾರನೆಯದರಲ್ಲಿ ಧನಂಜಯನೂ ಹದಿನೇಳನೆಯ

**ತ್ರಯ್ಯಾರುಣಃ ಪಂಚದಶೇ ಷೋಡಸೇ ತು ಧನಂಜಯಃ।**
**ಕೃತುಂಜಯಃ ಸಪ್ತದಶೇ ತದೂರ್ಧ್ವಂ ಚ ಜಯಸ್ಸ್ಮೃತಃ॥ 15**

**ತತೋ ವ್ಯಾಸೋ ಭರದ್ವಾಜೋ ಭರದ್ವಾಜಾಚ್ಚ ಗೌತಮಃ।**
**ಗೌತಮಾದುತ್ತರೋ ವ್ಯಾಸೋ ಹರ್ಯಾತ್ಮಾ**
**ಯೋಽಭಿಧೀಯತೇ॥ 16**

**ಅಥ ಹರ್ಯಾತ್ಮನೋಽಂತೇ ಚ ಸ್ಮೃತೋ ವಾಜಶ್ರವಾ ಮುನಿಃ।**
**ಸೋಮಶುಷ್ಮಾಯಣಸ್ತಸ್ಮಾತ್ ತೃಣಬಿಂದುರಿತಿ ಸ್ಮೃತಃ॥ 17**

**ಋಕ್ಷೋಽಭೂದ್ಭಾರ್ಗವಸ್ತಸ್ಮಾದ್ವಾಲ್ಮೀಕಿರ್ಯೋಽಭಿಧೀಯತೇ।**
**ತಸ್ಮಾದಸ್ಮತ್ಪಿತಾ ಶಕ್ತಿರ್ವ್ಯಾಸಸ್ತಸ್ಮಾದಹಂ ಮುನೇ॥ 18**

**ಜಾತುಕರ್ಣೋಽಭವನ್ಮತ್ತಃ ಕೃಷ್ಣದ್ವೈಪಾಯನಸ್ತತಃ।**
**ಅಷ್ಟಾವಿಂಶತಿರಿತ್ಯೇತೇ ವೇದವ್ಯಾಸಾಃ ಪುರಾತನಾಃ॥ 19**

**ಏಕೋ ವೇದಶ್ಚತುರ್ಧಾ ತು ತೈಃ ಕೃತೋ ದ್ವಾಪರಾದಿಷು॥ 20**

---

ದರಲ್ಲಿ ಕ್ರತುಂಜಯನೂ ಹದಿನೆಂಟನೆಯದರಲ್ಲಿ ಜಯನೂ ವ್ಯಾಸರಾದರು (15). ಆಮೇಲೆ ಭರಧ್ವಾಜನೂ ಅನಂತರ ಗೌತಮನೂ ಅವನಾದಮೇಲೆ ಹರ್ಯಾತ್ಮನೂ ವ್ಯಾಸರೆನಿಸಿದ್ದಾರೆ. ಹರ್ಯಾತ್ಮನಾದ ಮೇಲೆ ವಾಜಶ್ರವಸ್ಸೆಂಬ ಮುನಿಯೂ ತರುವಾಯ ಸೋಮಶುಷ್ಮಾಯಣನೂ ಆಮೇಲೆ ತೃಣಬಿಂದುವೂ ವ್ಯಾಸರೆನಿಸಿದರು (16-17). ಭೃಗುವಂಶೀಯನಾದ ಋಕ್ಷನು ಅನಂತರ (ಇಪ್ಪತ್ತುನಾಲ್ಕನೆಯ) ವ್ಯಾಸನಾದನು. ಆತನಿಗೆ ವಾಲ್ಮೀಕಿಯೆಂದೂ ಹೆಸರಿತ್ತು. (ಇಪ್ಪತ್ತೈದನೆಯ) ವ್ಯಾಸನು ನಮ್ಮ ತಂದೆಯಾದ ಶಕ್ತಿ. ಅನಂತರ, ಮೈತ್ರೇಯ, ನಾನು ವ್ಯಾಸನಾದೆನು. ನಾನಾದ ಮೇಲೆ ಜಾತುಕರ್ಣನು (ಇಪ್ಪತ್ತೇಳನೆಯ) ವ್ಯಾಸ. ಆಮೇಲೆ (ಇಪ್ಪತ್ತೆಂಟನೆಯ) ವ್ಯಾಸನು ಕೃಷ್ಣದ್ವೈಪಾಯನ. ಈ ರೀತಿಯಲ್ಲಿ ಇಪ್ಪತ್ತೆಂಟು ಪ್ರಾಚೀನ ವೇದವ್ಯಾಸರನ್ನು ಕೀರ್ತಿಸಿದ್ದೇನೆ. (18-19). ದ್ವಾಪರಯುಗಗಳ ಆದಿಭಾಗದಲ್ಲಿ ಅವರು ಒಂದೇ ವೇದವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದರು. ನನ್ನ ಪುತ್ರನಾದ ಕೃಷ್ಣದ್ವೈಪಾಯನನ

ಭವಿಷ್ಯೇ ದ್ವಾಪರೇ ಚಾಪಿ ದ್ರೌಣಿರ್ವ್ಯಾಸೋ ಭವಿಷ್ಯತಿ।
ವ್ಯತೀತೇ ಮಮ ಪುತ್ರೇಽಸ್ಮಿನ್ ಕೃಷ್ಣದ್ವೈಪಾಯನೇ ಮುನೇ॥ 21

ಧ್ರುವಮೇಕಾಕ್ಷರಂ ಬ್ರಹ್ಮ ಓಮಿತ್ಯೇವ ವ್ಯವಸ್ಥಿತಮ್।
ಬೃಹತ್ತ್ವಾದ್ ಬೃಂಹಣತ್ವಾಚ್ಚ ತದ್ ಬ್ರಹ್ಮೇತ್ಯಭಿಧೀಯತೇ॥ 22

ಪ್ರಣವಾವಸ್ಥಿತಂ ನಿತ್ಯಂ ಭೂರ್ಭುವಸ್ಸ್ವರಿತೀರ್ಯತೇ।
ಋಗ್ಯಜುಸ್ಸಾಮಾಥರ್ವಾಣೋ ಯತ್ತಸ್ಮೈ ಬ್ರಹ್ಮಣೇ ನಮಃ॥ 23

ಜಗತಃ ಪ್ರಲಯೋತ್ಪತ್ತ್ಯೋರ್ಯತ್ತತ್ಕಾರಣಸಂಜ್ಞಿತಮ್।
ಮಹತಃ ಪರಮಂ ಗುಹ್ಯಂ ತಸ್ಮೈ ಸುಬ್ರಹ್ಮಣೇ ನಮಃ॥ 24

ಅಗಾಧಾಪಾರಮಕ್ಷಯ್ಯಂ ಜಗತ್ಸಮ್ಮೋಹನಾಲಯಮ್।
ಸ್ವಪ್ರಕಾಶಪ್ರವೃತ್ತಿಭ್ಯಾಂ ಪುರುಷಾರ್ಥಪ್ರಯೋಜನಮ್॥ 25

---

ತರುವಾಯ ಮುಂದೆ ಬರುವ ದ್ವಾಪರದಲ್ಲಿ ದ್ರೋಣಪುತ್ರನಾದ ಅಶ್ವತ್ಥಾಮನು ವ್ಯಾಸನಾಗುವನು (20-21). ಓಂ ಎಂಬ ಅವಿನಾಶಿಯಾದ ಏಕಾಕ್ಷರವು ಬ್ರಹ್ಮವಾಗಿದೆ. ಅದು ಬೃಹತ್ತಾದ್ದರಿಂದಲೂ ಬೃಂಹಣ (ವೃದ್ಧಿ) ಶೀಲವಾದ್ದರಿಂದಲೂ ಬ್ರಹ್ಮವೆನಿಸಿದೆ. (ಓಂಕಾರರೂಪವಾದ) ಈ ಪ್ರಣವದಲ್ಲಿ ಭೂಃ ಭುವಃ ಸ್ವಃ (ಸುವಃ)—ಎಂಬ ವ್ಯಾಹೃತಿಗಳು (ಮೂರು ಲೋಕಗಳು) ನಿತ್ಯವೂ ನೆಲೆಸಿವೆ. ಋಗ್ಯಜುಃಸಾಮಾರ್ಥವೇದರೂಪವಾದ ಓಂಕಾರಬ್ರಹ್ಮಕ್ಕೆ ನಮಸ್ಕಾರ (22-23). ಜಗತ್ತಿನ ಪ್ರಳಯ ಮತ್ತು ಉತ್ಪತ್ತಿಗಳಿಗೆ ಕಾರಣವೂ ಮಹತ್ತಿಗೆ ಪರವಾಗಿ ಪರಮವೂ ಗುಹ್ಯವೂ ಆದ ಆ ಓಂಕಾರಬ್ರಹ್ಮಕ್ಕೆ ನಮಸ್ಕಾರ (24). ಆ ಬ್ರಹ್ಮವು ಅಗಾಧವೂ ಅಪಾರವೂ ಅಕ್ಷಯವೂ ಆಗಿ ಜಗತ್ತಿನ ಸಂಮೋಹಕ್ಕೆ ಕಾರಣವಾದ ತಮೋಗುಣಕ್ಕೆ ಆಶ್ರಯವಾದದ್ದು. ಸ್ವಪ್ರಕಾಶ (ಸತ್ವಗುಣ) ದಿಂದಲೂ ಪ್ರವೃತ್ತಿಕಾರಣ (ರಜೋಗುಣ) ವಾದ್ದರಿಂದಲೂ ಪುರುಷಾರ್ಥವನ್ನು ಉಂಟುಮಾಡತಕ್ಕದ್ದು (25). ಸಾಂಖ್ಯಜ್ಞಾನಿಗಳಿಗೆ ಪರಾಯಣವೂ ಶಮದಮಾದಿ ಗುಣಶಾಲಿ ಗಳಿಗೆ ಗತಿಯೂ ಅವ್ಯಕ್ತವೂ ಅಮೃತವೂ ಪ್ರವೃತ್ತಿಶೀಲವಾದ

**ಸಾಂಖ್ಯಜ್ಞಾನವತಾಂ ನಿಷ್ಠಾ ಗತಿಶ್ಶಮದಮಾತ್ಮನಾಮ್ ।**
**ಯತ್ತದವ್ಯಕ್ತಮಮೃತಂ ಪ್ರವೃತ್ತಿರ್ಬ್ರಹ್ಮ ಶಾಶ್ವತಮ್ ॥ 26**

**ಪ್ರಧಾನಮಾತ್ಮಯೋನಿಶ್ಚ ಗುಹಾಸಂಸ್ಥಂ ಚ ಶಬ್ದ್ಯತೇ ।**
**ಅವಿಭಾಗಂ ತಥಾ ಶುಕ್ರಮಕ್ಷಯಂ ಬಹುಧಾತ್ಮಕಮ್ ॥ 27**

**ಪರಮಬ್ರಹ್ಮಣೇ ತಸ್ಮೈ ನಿತ್ಯಮೇವ ನಮೋ ನಮಃ ।**
**ಯದ್ರೂಪಂ ವಾಸುದೇವಸ್ಯ ಪರಮಾತ್ಮಸ್ವರೂಪಿಣಃ ॥ 28**

**ಏತದ್‌ಬ್ರಹ್ಮ ತ್ರಿಧಾ ಭೇದಮಭೇದಮಪಿ ಸ ಪ್ರಭುಃ ।**
**ಸರ್ವಭೇದೇಷ್ವಭೇದೋಽಸೌ ಭಿದ್ಯತೇ ಭಿನ್ನಬುದ್ಧಿಭಿಃ ॥ 29**

**ಸ ಋಙ್‌ಮಯಸ್ಸಾಮಮಯಃ ಸರ್ವಾತ್ಮಾ ಸ ಯಜುರ್ಮಯಃ ।**
**ಋಗ್ಯಜುಸ್ಸಾಮಸಾರಾತ್ಮಾ ಸ ಏವಾತ್ಮಾ ಶರೀರಿಣಾಮ್ ॥ 30**

---

(ಸಗುಣವಾದ) ಶಾಶ್ವತ ಬ್ರಹ್ಮವೂ ಆಗಿದೆ (26). ಅದು ಪ್ರಧಾನವೆಂದೂ ಆತ್ಮಯೋನಿಯೆಂದೂ ಗುಹಾಸಂಸ್ಥವೆಂದೂ ಹೇಳಲ್ಪಡುತ್ತದೆ. ಅದು ವಿಭಾಗವಿಲ್ಲದ್ದು, ದೀಪ್ತಿಶಾಲಿಯೂ ಅಕ್ಷಯವೂ ಆದದ್ದು, ಬಹು ಸ್ವರೂಪವುಳ್ಳದ್ದು (27). ಆ ಪರಮಬ್ರಹ್ಮಕ್ಕೆ ಸದಾ ನಮೋ ನಮಃ. ಪರಮಾತ್ಮನಾದ ವಾಸುದೇವನ ರೂಪವೇ ಅದು. ಈ ಬ್ರಹ್ಮವು ಅಭಿನ್ನವಾದರೂ (ಅಕಾರ, ಉಕಾರ, ಮಕಾರ ರೂಪಗಳಿಂದ) ಮೂರು ಭೇದವುಳ್ಳದ್ದಾಗಿ ಕಾಣಿಸುತ್ತದೆ. ಆ ಪ್ರಭು ಸರ್ವಭೇದಗಳಿರುವಂತೆ ಕಂಡರೂ ಅಭಿನ್ನವೇ ಸರಿ. ದ್ವೈತಬುದ್ಧಿಯವರಿಗೆ ಭಿನ್ನವಾಗಿ ಕಾಣಿಸುತ್ತಾನೆ (28-29). ಆ ಸರ್ವಾತ್ಮನಾದ ಪ್ರಣವಸ್ವರೂಪನು ಋಙ್ಮಯನೂ ಯಜುರ್ಮಯನೂ ಸಾಮಮಯನೂ ಆಗಿದ್ದಾನೆ. ಋಗ್ಯಜುಃಸಾಮಗಳ ಸಾರವೇ ಆಗಿದ್ದಾನೆ. ದೇಹಿಗಳಲ್ಲಿ ಆತನೇ ಆತ್ಮನಾಗಿದ್ದಾನೆ (30). ವೇದಮಯವಾದ ಆತನು ಋಗಾದಿಭೇದಗಳಿಂದ ಅನೇಕವಾಗುತ್ತಾನೆ. ಶಾಖಾಯುಕ್ತವಾಗಿ ತನ್ನದೇ ಆದ ವೇದವನ್ನು ಬಹುಭೇದಗಳಿಂದ ವಿಂಗಡಿಸುತ್ತಾನೆ. ವೇದಶಾಖೆಗಳನ್ನು

**ಸ ಭಿದ್ಯತೇ ವೇದಮಯಸ್ಸ್ವವೇದಂ**
**ಕರೋತಿ ಭೇದೈರ್ಬಹುಭಿಸ್ಸಶಾಖಮ್ ।**
**ಶಾಖಾಪ್ರಣೇತಾ ಸ ಸಮಸ್ತಶಾಖಾ-**
**ಜ್ಞಾನಸ್ವರೂಪೋ ಭಗವಾನಸಂಗಃ ॥** 31

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ತೃತೀಯೋಽಧ್ಯಾಯಃ

---

ರಚಿಸತಕ್ಕವನೂ ಆತನೇ. ಆ ಭಗವಂತನು ನಿಃಸಂಗನಾಗಿ ಸಮಸ್ತ ವೇದ ಶಾಖೆಗಳಿಂದ ಪ್ರತಿಪಾದ್ಯವಾದ ಜ್ಞಾನದ ಸ್ವರೂಪನಾಗಿದ್ದಾನೆ (31).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಮೂರನೆಯ ಅಧ್ಯಾಯ ಮುಗಿಯಿತು.



## ಚತುರ್ಥೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಆದ್ಯೋ ವೇದಶ್ಚತುಷ್ಪಾದಃ ಶತಸಾಹಸ್ರಸಮ್ಮಿತಃ।**
**ತತೋ ದಶಗುಣಃ ಕೃತ್ಸ್ನೋ ಯಜ್ಞೋಽಯಂ**
**ಸರ್ವಕಾಮಧುಕ್॥** 1

**ತತೋಽತ್ರ ಮತ್ಸುತೋ ವ್ಯಾಸೋ ಅಷ್ಟಾವಿಂಶತಿಮೇಽಂತರೇ।**
**ವೇದಮೇಕಂ ಚತುಷ್ಪಾದಂ ಚತುರ್ಧಾ ವ್ಯಭಜತ್ಪ್ರಭುಃ॥** 2

**ಯಥಾ ಚ ತೇನ ವೈ ವ್ಯಸ್ತಾ ವೇದವ್ಯಾಸೇನ ಧೀಮತಾ।**
**ವೇದಾಸ್ತಥಾ ಸಮಸ್ತೈಸ್ತೈರ್ವ್ಯಸ್ತಾ ವ್ಯಾಸೈಸ್ತಥಾ ಮಯಾ॥** 3

---

## ಅಧ್ಯಾಯ 4

ಋಗ್ವೇದಶಾಖೆಗಳ ವರ್ಣನೆ.

ಪರಾಶರರು ನುಡಿದರು: (ಸೃಷ್ಟಿಯ ಆದಿಯಲ್ಲಿ ಈಶ್ವರನಿಂದ ಆವಿರ್ಭೂತವಾದ) ಆದ್ಯವೇದವು ನಾಲ್ಕು ಪಾದಗಳಿಂದ ಯುಕ್ತವಾಗಿ ಒಂದು ಲಕ್ಷ ಮಂತ್ರಗಳಿಂದ ಕೂಡಿತ್ತು. ಆದರಿಂದ ಸಮಸ್ತ ಕಾಮನೆಗಳನ್ನೂ ಪೂರೈಸುವ ಸರ್ವಯಜ್ಞವೂ ಹತ್ತು* ಬಗೆಯಲ್ಲಿ ಪ್ರಕಾಶಿತವಾಯಿತು (1). ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ನನ್ನ ಪುತ್ರನಾದ ವ್ಯಾಸನು ನಾಲ್ಕು ಪಾದಗಳಿದ್ದ ಒಂದು ವೇದವನ್ನು (ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ) ಎಂದು ನಾಲ್ಕು ವೇದಗಳನ್ನಾಗಿ ವಿಂಗಡಿಸಿದನು. ಧೀಮಂತನಾದ ವೇದವ್ಯಾಸನು ವೇದವನ್ನು ವಿಂಗಡಿಸಿದಂತೆಯೇ ಹಿಂದೆ ಹೇಳಿದ ಇತರ ವ್ಯಾಸರೂ ನಾನೂ ಪೂರ್ವ

---

*ಅಗ್ನಿಹೋತ್ರ, ದರ್ಶಪೂರ್ಣಮಾಸ, ಅಶ್ವಮೇಧ, ಚಾತುರ್ಮಾಸ್ಯ, ಸೋಮಯಜ್ಞ—ಇವು ಐದು ಪ್ರಕೃತಿರೂಪ ಯಜ್ಞಗಳು, ಇವುಗಳ ವಿಕೃತಿರೂಪಗಳು ಐದು ಸೇರಿ ಒಟ್ಟು ಹತ್ತು ಯಜ್ಞಗಳು.

**ತದನೇನ್ನೈವ ವೇದಾನಾಂ ಶಾಖಾಭೇದಾನ್ ದ್ವಿಜೋತ್ತಮ।**
**ಚತುರ್ಯುಗೇಷು ಪಠಿತಾನ್ ಸಮಸ್ತೇಷ್ವವಧಾರಯ॥ 4**

**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್।**
**ಕೋ ಹ್ಯನ್ಯೋ ಭುವಿ ಮೈತ್ರೇಯ ಮಹಾಭಾರತಕೃದ್ಭವೇತ್॥ 5**

**ತೇನ ವ್ಯಸ್ತಾ ಯಥಾ ವೇದಾ ಮತ್ಪುತ್ರೇಣ ಮಹಾತ್ಮನಾ।**
**ದ್ವಾಪರೇ ಹ್ಯತ್ರ ಮೈತ್ರೇಯ ತಸ್ಮಿನ್ ಶೃಣು ಯಥಾತಥಮ್॥ 6**

**ಬ್ರಹ್ಮಣಾ ಚೋದಿತೋ ವ್ಯಾಸೋ ವೇದಾನ್ವ್ಯಸ್ತುಂ ಪ್ರಚಕ್ರಮೇ।**
**ಅಥ ಶಿಷ್ಯಾನ್ಸ ಜಗ್ರಾಹ ಚತುರೋ ವೇದಪಾರಗಾನ್॥ 7**

**ಋಗ್ವೇದಪಾಠಕಂ ಪೈಲಂ ಜಗ್ರಾಹ ಸ ಮಹಾಮುನಿಃ।**
**ವೈಶಂಪಾಯನನಾಮಾನಂ ಯಜುರ್ವೇದಸ್ಯ ಚಾಗ್ರಹೀತ್॥ 8**

**ಜೈಮಿನಿಂ ಸಾಮವೇದಸ್ಯ ತಥೈವಾಥರ್ವವೇದವಿತ್।**
**ಸುಮಂತುಸ್ತಸ್ಯ ಶಿಷ್ಯೋಽಭೂದ್ವೇದವ್ಯಾಸಸ್ಯ ಧೀಮತಃ॥ 9**

---

ದಲ್ಲಿ ವಿಭಾಗಿಸಿದ್ದೆವು (2-3). ಈ ವ್ಯಾಸನು ಹೇಗೆ ಶಾಖಾಭೇದಗಳನ್ನು ವಿಭಜಿಸಿದನೋ ಅದೇ ಪ್ರಕಾರ ಹಿಂದಿನ ಎಲ್ಲ ಚತುರ್ಯುಗಗಳಲ್ಲಿ ಬರುವ ದ್ವಾಪರದಲ್ಲಿಯೂ ವಿಭಕ್ತವಾಗಿ ಅಧ್ಯಯನಮಾಡಲ್ಪಡುತ್ತಿದ್ದ ವೆಂದು ತಿಳಿ (4). ಮೈತ್ರೇಯ, ಕೃಷ್ಣದ್ವೈಪಾಯನ ವ್ಯಾಸನು ಸ್ವಾಮಿಯಾದ ಶ್ರೀಮನ್ನಾರಾಯಣನೆಂದೇ ತಿಳಿದುಕೊ. ಅವನಲ್ಲದೆ ಬೇರಾವನು ಈ ಜಗತ್ತಿನಲ್ಲಿ ಮಹಾಭಾರತವನ್ನು ರಚಿಸಲು ಶಕ್ತನಾದಾನು? (5). ನನ್ನ ಪುತ್ರನಾದ ಆ ಮಹಾತ್ಮನು ಈ ದ್ವಾಪರಯುಗದಲ್ಲಿ ವೇದವನ್ನು ಯಾವ ಪ್ರಕಾರವಾಗಿ ವಿಭಾಗಿಸಿದ್ದಾನೋ ಅದನ್ನು ಕ್ರಮವಾಗಿ ಹೇಳುತ್ತೇನೆ, ಕೇಳು (6). ಬ್ರಹ್ಮದೇವನಿಂದ ಪ್ರೇರಿತನಾದ ವ್ಯಾಸನು ವೇದಗಳನ್ನು ವಿಭಜಿಸಲು ಆರಂಭಿಸಿದನು, ಅದರ ಪ್ರಚಾರಕ್ಕಾಗಿ ವೇದ ಪಾರಂಗತರಾದ ನಾಲ್ವರು ಶಿಷ್ಯರನ್ನು ಮೊದಲು ಸ್ವೀಕರಿಸಿದನು (7). ಆ ಶಿಷ್ಯರಲ್ಲಿ ಮಹರ್ಷಿ ಪೈಲ ನನ್ನು ಋಗ್ವೇದದ ಪಾಠಕನೆಂದೂ ವೈಶಂಪಾಯನನನ್ನು ಯಜುರ್ವೇದದ ಪಾಠಕನೆಂದೂ ಜೈಮಿನಿಯು ಸಾಮವೇದದ ಪಾಠಕನೆಂದೂ ಗೊತ್ತು

**ರೋಮಹರ್ಷಣನಾಮಾನಂ ಮಹಾಬುದ್ಧಿಂ ಮಹಾಮುನಿಃ।**
**ಸೂತಂ ಜಗ್ರಾಹ ಶಿಷ್ಯಂ ಸ ಇತಿಹಾಸಪುರಾಣಯೋಃ॥ 10**

**ಏಕ ಆಸೀದ್ಯಜುರ್ವೇದಸ್ತಂ ಚತುರ್ಧಾ ವ್ಯಕಲ್ಪಯತ್।**
**ಚಾತುರ್ಹೋತ್ರಮಭೂತ್ತಸ್ಮಿಂಸ್ತೇನ ಯಜ್ಞಮಥಾಕರೋತ್॥ 11**

**ಆಧ್ವರ್ಯವಂ ಯಜುರ್ಭಿಸ್ತು ಋಗ್ಭಿರ್ಹೋತ್ರಂ ತಥಾ ಮುನಿಃ।**
**ಔದ್‌ಗಾತ್ರಂ ಸಾಮಭಿಶ್ಚಕ್ರೇ ಬ್ರಹ್ಮತ್ವಂ ಚಾಪ್ಯಥರ್ವಭಿಃ॥ 12**

**ತತಸ್ಸ ಋಚ ಉದ್‌ಧೃತ್ಯ ಋಗ್ವೇದಂ ಕೃತವಾನ್ ಮುನಿಃ।**
**ಯಜೂಂಷಿ ಚ ಯಜುರ್ವೇದಂ ಸಾಮವೇದಂ ಚ ಸಾಮಭಿಃ॥ 13**

---

ಮಾಡಿದನು. ಧೀಮಂತನಾದ ವೇದವ್ಯಾಸನಿಗೆ ಸುಮಂತುವು ಅಥರ್ವ ವೇದವನ್ನು ಬಲ್ಲ ಪಾಠಕನಾದ* ಶಿಷ್ಯನಾದನು (8-9). ವ್ಯಾಸಮುನಿಯು ರೋಮಹರ್ಷಣನೆಂಬ ಮಹಾಬುದ್ಧಿಶಾಲಿಯಾದ ಸೂತಜಾತಿಯ ಶಿಷ್ಯನನ್ನು ಇತಿಹಾಸ ಪುರಾಣಗಳ ಪಾಠಕನನ್ನಾಗಿ ಸ್ವೀಕರಿಸಿದನು (10). (ಯಜ್ಞ ವಿಧಿಯಲ್ಲಿ) ಮೊದಲು ಯಜುರ್ವೇದ ಒಂದೇ ಆಗಿತ್ತು. ವ್ಯಾಸನು ಅದನ್ನು ನಾಲ್ಕು ಭಾಗ ಮಾಡಿ ನಾಲ್ವರು ಯಾಜಕರುಳ್ಳ ಚಾತುರ್ಹೋತ್ರ ಪದ್ಧತಿಯನ್ನು ತಂದು ಯಜ್ಞವಿಧಾನವನ್ನು ಗೊತ್ತುಪಡಿಸಿದನು (11). ಯಜುರ್‌ಗಳಿಂದ ಅಧ್ವರ್ಯುವಿನ, ಋಕ್ಕುಗಳಿಂದ ಹೋತೃವಿನ, ಸಾಮಗಳಿಂದ ಉದ್ಗಾತೃವಿನ, ಅಥರ್ವ ಮಂತ್ರಗಳಿಂದ ಬ್ರಹ್ಮನ ಕರ್ಮವನ್ನು ಯಜ್ಞದಲ್ಲಿ ಗೊತ್ತುಮಾಡಿದನು (12). ವ್ಯಾಸಮುನಿಯು ವೇದದಿಂದ ಋಕ್ಕುಗಳನ್ನು ಪೃಥಕ್ಕರಿಸಿ ಋಗ್ವೇದವನ್ನೂ ಯಜುಸ್ಸುಗಳಿಂದ ಯಜುರ್ವೇದವನ್ನೂ ಸಾಮಗಳಿಂದ ಸಾಮವೇದವನ್ನೂ ನಿರ್ಮಿಸಿದನು (13). ಅಥರ್ವವೇದದಿಂದ ರಾಜರ ಸಮಸ್ತ ಕರ್ಮಗಳನ್ನೂ ಬ್ರಹ್ಮತ್ವವನ್ನೂ ಗೊತ್ತುಪಡಿಸಿ

---

* ಈ ನಾಲ್ವರು ಶಿಷ್ಯರೂ ಎಲ್ಲ ವೇದಗಳಲ್ಲಿ ಪಾರಂಗತರಾಗಿದ್ದರು; ಋಗ್ವೇದಾದಿ ವಿಭಾಗವು ಮಾತ್ರ ಅವರಿಗೆ ತಿಳಿದಿರಲಿಲ್ಲ; ವೇದವ್ಯಾಸರು ವಿಭಾಗವನ್ನು ಮಾಡಿ ಆಯಾ ವೇದಭಾಗವನ್ನು ಪೈಲಾದಿ ಶಿಷ್ಯರು ತಮ್ಮ ಶಿಷ್ಯರಿಗೆ ಕಲಿಸಿ ಬೆಳೆಸಬೇಕೆಂದು ಗೊತ್ತುಮಾಡಿದರು—ಎಂದು ತಾತ್ಪರ್ಯ.

**ರಾಜ್ಞಾಂ ಚಾಥರ್ವವೇದೇನ ಸರ್ವಕರ್ಮಾಣಿ ಚ ಪ್ರಭುಃ।**
**ಕಾರಯಾಮಾಸ ಮೈತ್ರೇಯ ಬ್ರಹ್ಮತ್ವಂ ಚ ಯಥಾಸ್ಥಿತಿ॥** 14

**ಸೋಽಯಮೇಕೋ ಯಥಾ ವೇದಸ್ತರುಸ್ತೇನ ಪೃಥಕ್ಕೃತಃ।**
**ಚತುರ್ಧಾಥ ತತೋ ಜಾತಂ ವೇದಪಾದಪಕಾನನಮ್॥** 15

**ಬಿಭೇದ ಪ್ರಥಮಂ ವಿಪ್ರ ಪೈಲೋ ಋಗ್ವೇದಪಾದಪಮ್।**
**ಇಂದ್ರಪ್ರಮಿತಯೇ ಪ್ರಾದಾತ್ ಬಾಷ್ಕಲಾಯ ಚ ಸಂಹಿತೇ॥** 16

**ಚತುರ್ಧಾ ಸ ಬಿಭೇದಾಥ ಭಾಷ್ಕಲೋಽಪಿ ಚ ಸಂಹಿತಾಮ್।**
**ಬೋಧ್ಯಾದಿಭ್ಯೋ ದದೌ ತಾಶ್ಚ ಶಿಷ್ಯೇಭ್ಯಸ್ಸ ಮಹಾಮುನಿಃ॥** 17

**ಬೋಧ್ಯಾಗ್ನಿಮಾಢಕೌ ತದ್ವದ್ಯಾಜ್ಞವಲ್ಕ್ಯಪರಾಶರೌ।**
**ಪ್ರತಿಶಾಖಾಸ್ತು ಶಾಖಾಯಾಸ್ತಸ್ಯಾಸ್ತೇ ಜಗೃಹುರ್ಮುನೇ॥** 18

**ಇಂದ್ರಪ್ರಮಿತಿರೇಕಾಂ ತು ಸಂಹಿತಾಂ ಸ್ವಸುತಂ ತತಃ।**
**ಮಾಂಡುಕೇಯಂ ಮಹಾತ್ಮಾನಂ ಮೈತ್ರೇಯಾಧ್ಯಾಪಯತ್ತದಾ॥** 19

---

ದನು. ಹೀಗೆ ಒಂದು ವೇದವೃಕ್ಷವನ್ನು ವ್ಯಾಸನು ಪೃಥಕ್ಕರಿಸಿ ನಾಲ್ಕು ವೇದವೃಕ್ಷಗಳನ್ನು ಮಾಡಿದನು. ಅಲ್ಲಿಂದ ಮುಂದೆ ವೇದವೃಕ್ಷಗಳ ಒಂದು ಅರಣ್ಯವೇ ನಿರ್ಮಿತವಾಯಿತು! (14-15). ಮೊದಲು ಪೈಲನು ಋಗ್ವೇದ ವೃಕ್ಷವನ್ನು ಎರಡಾಗಿ ವಿಂಗಡಿಸಿ ಒಂದು ಸಂಹಿತೆಯನ್ನು ಇಂದ್ರಪ್ರಮಿತಿಗೂ ಇನ್ನೊಂದು ಸಂಹಿತೆಯನ್ನು ಬಾಷ್ಕಲನಿಗೂ ಉಪದೇಶಿಸಿದನು. ಬಾಷ್ಕಲ ಮುನಿಯು ತನ್ನ ಸಂಹಿತೆಯನ್ನು ನಾಲ್ಕು ಭಾಗಗಳಾಗಿ (ಪ್ರತಿಶಾಖೆಗಳಾಗಿ) ವಿಂಗಡಿಸಿ ಬೋಧಿ ಮುಂತಾದ ಶಿಷ್ಯರಿಗೆ ಕಲಿಸಿದನು (16-17). ಆ ಶಿಷ್ಯರು ಯಾರೆಂದರೆ: ಬೋಧಿ, ಅಗ್ನಿಮಾಢಕ, ಯಾಜ್ಞವಲ್ಕ್ಯ ಮತ್ತು ಪರಾಶರ*. ಈ ಶಿಷ್ಯರು ಋಗ್ವೇದಶಾಖೆಯ ನಾಲ್ಕು ಪ್ರತಿಶಾಖೆಗಳನ್ನು ಅಧ್ಯಯನ ಮಾಡಿದರು (18). ಇಂದ್ರಪ್ರಮಿತಿಯಾದರೋ ತನ್ನ ಶಾಖೆ ಯನ್ನು ತನ್ನ ಮಗನೂ ಮಹಾತ್ಮನೂ ಆದ ಮಾಂಡುಕೇಯನಿಗೆ ಅಧ್ಯಾಪನ

---

* ಈತನು ವ್ಯಾಸನ ತಂದೆಯಾದ ಪರಾಶರನಲ್ಲ.

**ತಸ್ಯ ಶಿಷ್ಯಪ್ರಶಿಷ್ಯೇಭ್ಯಃ ಪುತ್ರಶಿಷ್ಯಕ್ರಮಾದ್ಯಯೌ।**
**ವೇದಮಿತ್ರಸ್ತು ಶಾಕಲ್ಯಃ ಸಂಹಿತಾಂ ತಾಮಧೀತವಾನ್॥ 20**

**ಚಕಾರ ಸಂಹಿತಾಃ ಪಂಚ ಶಿಷ್ಯೇಭ್ಯಃ ಪ್ರದದೌ ಚ ತಾಃ।**
**ತಸ್ಯ ಶಿಷ್ಯಾಸ್ತು ಯೇ ಪಂಚ ತೇಷಾಂ ನಾಮಾನಿ ಮೇ ಶೃಣು॥ 21**

**ಮುದ್ಗಲೋ ಗೋಮುಖಶ್ಚೈವ ವಾತ್ಸ್ಯಶ್ಶಾಲೀಯ ಏವ ಚ।**
**ಶಿಶಿರಃ ಪಂಚಮಶ್ಚಾಸೀನ್ಮೈತ್ರೇಯ ಸುಮಹಾಮತಿಃ॥ 22**

**ಸಂಹಿತಾತ್ರಿತಯಂ ಚಕ್ರೇ ಶಾಕಪೂರ್ಣಿಸ್ತಥೇತರಃ।**
**ನಿರುಕ್ತಮಕರೋತ್ತದ್ವಚ್ಚತುರ್ಥಂ ಮುನಿಸತ್ತಮ॥ 23**

---

ಮಾಡಿದನು. ಆ ಶಾಖೆಯು ಶಿಷ್ಯ, ಪ್ರಶಿಷ್ಯ, ಪುತ್ರ, ಶಿಷ್ಯ—ಕ್ರಮದಲ್ಲಿ ಮುಂದುವರಿಯಿತು. ಆ ಕ್ರಮದಲ್ಲಿ ವೇದಮಿತ್ರನೆಂಬ ಶಾಕಲ್ಯನು ಇಂದ್ರ ಪ್ರಮಿತಿಯ ಸಂಹಿತೆಯನ್ನು ಅಧ್ಯಯನ ಮಾಡಿದನು (19-20). ಆ ಶಾಕಲ್ಯನು ತಾನು ಕಲಿತ ಸಂಹಿತೆಯನ್ನು ಐದು ವಿಭಾಗ ಮಾಡಿ ಐವರು ಶಿಷ್ಯರಿಗೆ ಉಪದೇಶಿಸಿದನು. ಆ ಶಿಷ್ಯರ ಹೆಸರನ್ನು ಕೇಳು: ಮುದ್ಗಲ, ಗೋಮುಖ, ವಾತ್ಸ್ಯ, ಶಾಲೀಯ ಮತ್ತು ಮಹಾತೇಜಸ್ವಿಯಾದ ಶಿಶಿರ (21-22). ಶಾಕಪೂರ್ಣಿ ಎಂಬ ಶಿಷ್ಯನು ಶಾಕಲ್ಯ ಸಂಹಿತೆಯ (ಐದು* ವಿಭಾಗಗಳಲ್ಲಿ ಒಂದೊಂದನ್ನೂ) ಮೂರು ಸಂಹಿತೆಗಳನ್ನಾಗಿ ವಿಂಗಡಿಸಿದನು. ಇನ್ನೊಬ್ಬ ಶಿಷ್ಯನು (ಇವನ ಹೆಸರು ರಥಂತರ ಎಂದು ವಾಯುಪುರಾಣ) ನಾಲ್ಕನೆಯದಾಗಿ ನಿರುಕ್ತ (ಶಬ್ದಾರ್ಥಕೋಶ) ವನ್ನು ರಚಿಸಿದನು (23). ನಿರುಕ್ತಕಾರರಾದ ಇನ್ನು ಮೂವರು ಕ್ರೌಂಚ, ವೈತಾಲಿಕ, ಬಲಾಕ. (ಇವರು ಶಾಕಪೂರ್ಣಿಯ ಮೂರು ಸಂಹಿತೆಗಳನ್ನು ಅಧ್ಯಯನ ಮಾಡಿದ ಶಿಷ್ಯರು ಎಂದು ಟೀಕಾಕಾರರು ಹೇಳಿದ್ದಾರೆ.) ನಾಲ್ಕನೆಯ

---

*ಕಂಸದಲ್ಲಿ ಬರೆದಂತೆ ಅಧ್ಯಾಹಾರ ಮಾಡಿಕೊಳ್ಳುವುದು ಯುಕ್ತವೆಂದು ನಮಗೆ ತೋರುತ್ತದೆ. ಇದರ ಪ್ರಕಾರ ಶಾಕಲ್ಯ ಸಂಹಿತೆಯಲ್ಲಿ ಹದಿನೈದು ಶಾಖೆಗಳು. ಬಾಷ್ಕಲ ಸಂಹಿತೆಯಲ್ಲಿ ಹಿಂದೆ ಹೇಳಿದ ಮೂರು ಮುಂದೆ ಹೇಳುವ ಮೂರು ಸೇರಿ ಆರು ಶಾಖೆಗಳಾಗುತ್ತವೆ. ಹೀಗೆ ಋಗ್ವೇದದಲ್ಲಿ ಒಟ್ಟು ಇಪ್ಪತ್ತೊಂದು ಶಾಖೆಗಳಾಗುತ್ತವೆ. "ಏಕವಿಂಶತಿಧಾ ಬಾಹ್ವೃಚ್ಯಂ"—ವ್ಯಾಕರಣ ಮಹಾಭಾಷ್ಯ (ಪಸ್ಪಶಾಹ್ನಿಕ).

**ಕ್ರೌಂಚೋ ವೈತಾಲಿ ಕಸ್ತದ್ವದ್ ಬಲಾಕಶ್ಚ ಮಹಾಮುನಿಃ।**
**ನಿರುಕ್ತಕೃಚ್ಚತುರ್ಥೋಽಭೂದ್ವೇದವೇದಾಂಗಪಾರಗಃ॥** 24

**ಇತ್ಯೇತಾಃ ಪ್ರತಿಶಾಖಾಭ್ಯೋ ಹ್ಯನುಶಾಖಾ ದ್ವಿಜೋತ್ತಮ।**
**ಬಾಷ್ಕಲಶ್ಚಾಪರಾಸ್ತಿಸ್ರಸ್ಸಂಹಿತಾಃ ಕೃತವಾನ್ ದ್ವಿಜ॥** 25

**ತಿಷ್ಯಃ ಕಾಲಾಯನಿರ್ಗಾರ್ಗ್ಯಸ್ತೃತೀಯಶ್ಚ ಕಥಾಜವಃ।**
**ಇತ್ಯೇತೇ ಬಹ್‌ವೃಚಾಃ ಪ್ರೋಕ್ತಾಃ ಸಂಹಿತಾಃ ಯೈಃ**
**ಪ್ರವರ್ತಿತಾಃ॥** 26

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಚತುರ್ಥೋಽಧ್ಯಾಯಃ

---

ನಿರುಕ್ತಕಾರನು ವೇದವೇದಾಂಗಪಾರಂಗತನಾದ ಇನ್ನೊಬ್ಬನು (ಅವನ ಹೆಸರು ರಥಂತರ). ಮೈತ್ರೇಯ, ಇವೆಲ್ಲವೂ ಪ್ರತಿಶಾಖೆಗಳಿಂದ ಹುಟ್ಟಿದ ಅನುಶಾಖೆಗಳು. ಬಾಷ್ಕಲಿ ಎಂಬ ಇನ್ನೊಬ್ಬನು (ಶಾಕಪೂರ್ಣಿಯು ಹೇಳಿದ ಮೂರಲ್ಲದೆ) ಇನ್ನೂ ಮೂರು ಸಂಹಿತೆಗಳನ್ನು ನಿರ್ಮಿಸಿದನು. ಅವನ್ನು ಕಲಿತ ಶಿಷ್ಯರು ಕಾಲಾಯನಿ, ಗಾರ್ಗ್ಯ, ಕಥಾಜವ. ಇವರೆಲ್ಲರು ಋಗ್ವೇದ ಸಂಹಿತೆಗಳನ್ನು ಪ್ರವರ್ತಿಸಿದ ಬಹ್ವೃಚರು (24-26).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚಮೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಯಜುರ್ವೇದತರೋಶ್ಶಾಖಾಸ್ಸಪ್ತವಿಂಶನ್ಮಹಾಮುನಿಃ।**
**ವೈಶಂಪಾಯನನಾಮಾಸೌ ವ್ಯಾಸಶಿಷ್ಯಶ್ಚಕಾರ ವೈ॥** 1

**ಶಿಷ್ಯೇಭ್ಯಃ ಪ್ರದದೌ ತಾಶ್ಚ ಜಗೃಹುಸ್ತೇಽಪ್ಯನುಕ್ರಮಾತ್।**
**ಯಾಜ್ಞವಲ್ಕ್ಯಸ್ತು ತತ್ರಾಭೂದ್ ಬ್ರಹ್ಮರಾತಸುತೋ ದ್ವಿಜ॥** 2

**ಶಿಷ್ಯಃ ಪರಮಧರ್ಮಜ್ಞೋ ಗುರುವೃತ್ತಿಪರಸ್ಸದಾ।**
**ಋಷಿರ್ಯೋಽದ್ಯ ಮಹಾಮೇರೋ ಸಮಾಜೇ ನಾಗಮಿಷ್ಯತಿ॥** 3

**ತಸ್ಯ ವೈ ಸಪ್ತರಾತ್ರಾತ್ತು ಬ್ರಹ್ಮಹತ್ಯಾ ಭವಿಷ್ಯತಿ।**
**ಪೂರ್ವಮೇವಂ ಮುನಿಗಣೈಸ್ಸಮಯೋ ಯಃ ಕೃತೋ ದ್ವಿಜ॥** 4

---

## ಅಧ್ಯಾಯ 5

ಶುಕ್ಲಯಜುರ್ವೇದ ಮತ್ತು ತೈತ್ತಿರೀಯ ಯಜುಃಶಾಖೆಗಳ ವರ್ಣನೆ.

ಪರಾಶರರು ಹೇಳಿದರು: ವ್ಯಾಸಶಿಷ್ಯನಾದ ವೈಶಂಪಾಯನನು ಯಜುರ್ವೇದವೃಕ್ಷವನ್ನು ಇಪ್ಪತ್ತೇಳು ಶಾಖೆಗಳನ್ನಾಗಿ ವಿಂಗಡಿಸಿದನು (1). ಅವನ್ನು ತನ್ನ ಶಿಷ್ಯರಿಗೆ ಬೋಧಿಸಲಾಗಿ ಅವರು ಅನುಕ್ರಮವಾಗಿ ಆ ಶಾಖೆಗಳನ್ನು ಕಲಿತರು. ಆ ಶಿಷ್ಯರಲ್ಲಿ ಬ್ರಹ್ಮರಾತನ ಮಗನಾದ ಯಾಜ್ಞವಲ್ಕ್ಯ ಎಂಬ ಶಿಷ್ಯನಿದ್ದನು. ಆತನು ಪರಮಧರ್ಮಜ್ಞನೂ ಗುರು ಸೇವಾನಿರತನೂ ಆಗಿದ್ದನು. ಮೈತ್ರೇಯ, ಒಂದು ಸಲ ಮಹಾಮೇರುವಿನಲ್ಲಿ ಮುನಿಗಳೆಲ್ಲರೂ ಸಭೆ ಸೇರಬೇಕೆಂದು ಗೊತ್ತಾಗಿತ್ತು (2-3). ಈ ಸಭೆಗೆ ಏಳು ರಾತ್ರಿಗಳಲ್ಲಿ ಯಾವನು ಬರುವುದಿಲ್ಲವೋ ಆತನಿಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗುವುದೆಂದು ಋಷಿಗಳು ನಿಯಮ ಮಾಡಿದ್ದರು. ಏಳು ರಾತ್ರಿಗಳು ಕಳೆದರೂ ವೈಶಂಪಾಯನನೊಬ್ಬನಿಗೆ ಸಭೆಗೆ ಹೋಗಲಾಗಲಿಲ್ಲ. ಏಕೆಂದರೆ, ಅವನು ಆಕಸ್ಮಾತ್ತಾಗಿ ತನ್ನ

ವೈಶಂಪಾಯನ ಏಕಸ್ತು ತಂ ವ್ಯತಿಕ್ರಾಂತವಾಂಸ್ತದಾ।
ಸ್ವಸ್ರೀಯಂ ಬಾಲಕಂ ಸೋಽಥ ಪದಾ ಸ್ಪೃಷ್ಟಮಘಾತಯತ್॥ 5

ಶಿಷ್ಯಾನಾಹ ಸ ಭೋಃ ಶಿಷ್ಯಾ ಬ್ರಹ್ಮಹತ್ಯಾಪಹಂ ವ್ರತಮ್।
ಚರಧ್ವಂ ಮತ್ಕೃತೇ ಸರ್ವೇ ನ ವಿಚಾರ್ಯಮಿದಂ ತಥಾ॥ 6

ಅಥಾಹ ಯಾಜ್ಞವಲ್ಕ್ಯಸ್ತು ಕಿಮೇಭಿರ್ಭಗವನ್ ದ್ವಿಜೈಃ।
ಕ್ಲೇಶಿತೈರಲ್ಪತೇಜೋಭಿಶ್ಚರಿಷ್ಯೇಽಹಮಿದಂ ವ್ರತಮ್॥ 7

ತತಃ ಕ್ರುದ್ಧೋ ಗುರುಃ ಪ್ರಾಹ ಯಾಜ್ಞವಲ್ಕ್ಯಂ ಮಹಾಮುನಿಮ್।
ಮುಚ್ಯತಾಂ ಯತ್ತ್ವಯಾಧೀತಂ ಮತ್ತೋ ವಿಪ್ರಾವಮಾನಕ॥ 8

ನಿಸ್ತೇಜಸೋ ವದಸ್ಯೇನಾನ್ ಯತ್ತ್ವಂ ಬ್ರಾಹ್ಮಣಪುಂಗವಾನ್।
ತೇನ ಶಿಷ್ಯೇಣ ನಾರ್ಥೋಽಸ್ತಿ ಮಮಾಜ್ಞಾಭಂಗಕಾರಿಣಾ॥ 9

ಯಾಜ್ಞವಲ್ಕ್ಯಸ್ತತಃ ಪ್ರಾಹ ಭಕ್ತ್ಯಾ ತತ್ತೇ ಮಯೋದಿತಮ್।
ಮಮಾಪ್ಯಲಂ ತ್ವಯಾಧೀತಂ ಯನ್ಮಯಾ ತದಿದಂ ದ್ವಿಜ॥ 10

---

ಸೋದರಿಯ ಮಗುವನ್ನು ಕಾಲಿಂದ ತುಳಿಯಲಾಗಿ ಮಗು ಸತ್ತು ಹೋಯಿತು (4-5). ಆಗ ವೈಶಂಪಾಯನನು ತನ್ನ ಶಿಷ್ಯರನ್ನು ಕರೆದು "ಎಲೈ ಶಿಷ್ಯರೆ, ನಾನು ಬ್ರಹ್ಮಹತ್ಯಾದೋಷಕ್ಕೆ ಒಳಗಾಗಿದ್ದೇನೆ. ಇದರ ಪರಿಹಾರಕ್ಕಾಗಿ ನೀವೆಲ್ಲರೂ ಸೇರಿ ವ್ರತವನ್ನಾಚರಿಸಿರಿ. ಬೇರೆ ವಿಚಾರ ಬೇಡ" ಎಂದು ತಿಳಿಸಿದನು (6). ಆಗ ಯಾಜ್ಞವಲ್ಕ್ಯನು "ಗುರುಗಳೆ, ಇವರೆಲ್ಲರೂ ಸೇರಿ ವ್ರತನಿಷ್ಠರಾಗುವುದೇಕೆ? ಅಲ್ಪತೇಜಸ್ಕರಾದ ಈ ದ್ವಿಜರಿಗೆ ಕಷ್ಟವನ್ನು ಕೊಡುವುದೇಕೆ? ನಾನೊಬ್ಬನೇ ಈ ವ್ರತವನ್ನು ನಡೆಸುತ್ತೇನೆ!" ಎಂದನು (7). ಆಗ ವೈಶಂಪಾಯನನು ಕ್ರುದ್ಧನಾಗಿ ಯಾಜ್ಞವಲ್ಕ್ಯ ಮುನಿಯನ್ನು ಕುರಿತು "ಎಲೈ, ಈ ಬ್ರಾಹ್ಮಣರನ್ನು ಅವಮಾನಗೊಳಿಸುತ್ತೀಯಾ? ಅಯೋಗ್ಯ, ನನ್ನಿಂದ ಕಲಿತ ವೇದವನ್ನು ಕಕ್ಕಿಬಿಡು! (8). ಈ ಬ್ರಾಹ್ಮಣೋತ್ತಮರನ್ನು ತೇಜೋಹೀನರೆಂದು ಧಿಕ್ಕರಿಸುವೆಯಾ? ನನ್ನ ಆಜ್ಞೆಗೆ ವಿರುದ್ಧವಾಗಿ ನುಡಿಯುವ ನಿನ್ನಂಥ ಶಿಷ್ಯನಿಂದ ನನಗೆ ಆಗಬೇಕಾದ್ದೇನೂ ಇಲ್ಲ" ಎಂದು ಅಬ್ಬರಿಸಿದನು (9).

*ಶ್ರೀಪರಾಶರ ಉವಾಚ:*

**ಇತ್ಯುಕ್ತೋ ರುಧಿರಾಕ್ತಾನಿ ಸರೂಪಾಣಿ ಯಜೂಂಷಿ ಸಃ।**
**ಛರ್ದಯಿತ್ವಾ ದದೌ ತಸ್ಮೈ ಯಯೌ ಸ ಸ್ವೇಚ್ಛಯಾ ಮುನಿಃ॥**

**ಯಜೂಂಷ್ಯಥ ವಿಸೃಷ್ಟಾನಿ ಯಾಜ್ಞವಲ್ಕ್ಯೇನ ವೈ ದ್ವಿಜ।**
**ಜಗೃಹುಸ್ತಿತ್ತಿರಾ ಭೂತ್ವಾ ತೈತ್ತಿರೀಯಾಸ್ತು ತೇ ತತಃ॥ 12**

**ಬ್ರಹ್ಮಹತ್ಯಾವ್ರತಂ ಚೀರ್ಣಂ ಗುರುಣಾ ಚೋದಿತೈಸ್ತು ಯ್ಯೆಃ।**
**ಚರಕಾಧ್ವರ್ಯವಸ್ತೇ ತು ಚರಣಾನ್ ಮುನಿಸತ್ತಮ॥ 13**

**ಯಾಜ್ಞವಲ್ಕ್ಯೋಽಪಿ ಮೈತ್ರೇಯ ಪ್ರಾಣಾಯಾಮಪರಾಯಣಃ।**
**ತುಷ್ಟಾವ ಪ್ರಯತಸ್ಸೂರ್ಯಂ ಯಜೂಂಷ್ಯಭಿಲಷಂಸ್ತತಃ॥ 14**

*ಯಾಜ್ಞವಲ್ಕ್ಯ ಉವಾಚ:*

**ನಮಸ್ಸವಿತ್ರೇ ದ್ವಾರಾಯ ಮುಕ್ತೇರಮಿತತೇಜಸೇ।**
**ಋಗ್ಯಜುಸ್ಸಾಮಭೂತಾಯ ತ್ರಯೀಧಾಮ್ನೇ ಚ ತೇ ನಮಃ॥ 15**

---

ಆಗ ಯಾಜ್ಞವಲ್ಕ್ಯನು "ನನಗೆ ನಿಮ್ಮಲ್ಲಿದ್ದ ಭಕ್ತಿಯಿಂದ ಈ ಮಾತನ್ನು ಹೇಳಿದೆನು. ನಿಮ್ಮಿಂದ ಕಲಿತದ್ದು ನನಗೂ ಬೇಕಾಗಿಲ್ಲ" ಎಂದು ನುಡಿದು, ರುಧಿರಾಕ್ತಗಳೂ ಮೂರ್ತಿಮಂತಗಳೂ ಆದ ಯಜಸ್ಸುಗಳನ್ನು ವಾಂತಿ ಮಾಡಿ ವೈಶಂಪಾಯನನಿಗೆ ಒಪ್ಪಿಸಿ ಸ್ವೇಚ್ಛೆಯಾಗಿ ಹೊರಟುಹೋದನು (10-11). ಹೀಗೆ ಯಾಜ್ಞವಲ್ಕ್ಯನಿಂದ ಪರಿತ್ಯಕ್ತಗಳಾದ ಯಜುಸ್ಸುಗಳನ್ನು ಅನ್ಯಶಿಷ್ಯರು ತಿತ್ತಿರಿ ಪಕ್ಷಿಗಳಾಗಿ ಸ್ವೀಕರಿಸಿದರು. ಆದ್ದರಿಂದ ಆ ಯಜುಸ್ಸುಗಳು ತೈತ್ತಿರೀಯ ಎನಿಸಿದವು (12). ಯಾವ ಶಿಷ್ಯರು ಗುರುವಿನಿಂದ ಪ್ರೇರಿತರಾಗಿ ಬ್ರಹ್ಮಹತ್ಯಾನಿವಾರಣಾರ್ಥವಾದ ವ್ರತವನ್ನು ಆಚರಿಸಿದರೋ ಅವರು 'ಚರಣ' ಮಾಡಿದ್ದರಿಂದ ಚರಕಾಧ್ವರ್ಯುಗಳೆನಿಸಿದರು (13). ಮೈತ್ರೇಯ, ಇತ್ತ ಯಾಜ್ಞವಲ್ಕ್ಯನು ಯಜುಸ್ಸುಗಳನ್ನು ಪಡೆಯಬೇಕೆಂಬ ಉದ್ದೇಶದಿಂದ ಶುಚಿಯಾಗಿ ಪ್ರಾಣಾಯಾಮನಿಷ್ಠೆಯಿಂದ ಇದ್ದು ಸೂರ್ಯನನ್ನು ಸ್ತೋತ್ರ ಮಾಡಿದನು (14). "ಮುಕ್ತಿಗೆ ದ್ವಾರಸ್ವರೂಪನೂ ಅಸದೃಶ ತೇಜಸ್ವಿಯೂ ಋಗ್ಯಜುಃಸಾಮವೇದಸ್ವರೂಪನೂ ವೇದತ್ರಯಗಳಿಗೆ

ನಮೋಽಗ್ನಿಷೋಮಭೂತಾಯ ಜಗತಃ ಕಾರಣಾತ್ಮನೇ।
ಭಾಸ್ಕರಾಯ ಪರಂ ತೇಜಸ್ಸೌಷುಮ್ನಮುರುಬಿಭ್ರತೇ॥ 16

ಕಲಾಕಾಷ್ಠಾನಿಮೇಷಾದಿಕಾಲಜ್ಞಾನಾತ್ಮರೂಪಿಣೇ।
ಧ್ಯೇಯಾಯ ವಿಷ್ಣುರೂಪಾಯ ಪರಮಾಕ್ಷರರೂಪಿಣೇ॥ 17

ಬಿಭರ್ತಿ ಯಸ್ಸುರಗಣಾನಾಪ್ಯಾಯೇಂದುಂ ಸ್ವರಶ್ಮಿಭಿಃ।
ಸ್ವಧಾಮೃತೇನ ಚ ಪಿತೄಂಸ್ತಸ್ಮೈ ತೃಪ್ತ್ಯಾತ್ಮನೇ ನಮಃ॥ 18

ಹಿಮಾಂಬುಘರ್ಮವೃಷ್ಟೀನಾಂ ಕರ್ತಾ ಭರ್ತಾ ಚ ಯಃ ಪ್ರಭುಃ।
ತಸ್ಮೈ ತ್ರಿಕಾಲರೂಪಾಯ ನಮಸ್ಸೂರ್ಯಾಯ ವೇಧಸೇ॥ 19

ಅಪಹಂತಿ ತಮೋ ಯಶ್ಚ ಜಗತೋಽಸ್ಯ ಜಗತ್ಪತಿಃ।
ಸತ್ತ್ವಧಾಮಧರೋ ದೇವೋ ನಮಸ್ತಸ್ಮೈ ವಿವಸ್ವತೇ॥ 20

---

ಆಕರನೂ ಆದ ಸವಿತೃದೇವನಿಗೆ ನಮಸ್ಕಾರ ಮಾಡುತ್ತೇನೆ (15). ಅಗ್ನಿ ಮತ್ತು ಚಂದ್ರರ ಸ್ವರೂಪನೂ ಜಗತ್ತಿಗೆ ಕಾರಣನೂ ಸುಷುಮ್ನಾ ಕಿರಣದ ಪರಮ ತೇಜಸ್ಸನ್ನು ಧಾರಣ ಮಾಡಿರತಕ್ಕವನೂ ಆದ ಭಾಸ್ಕರನಿಗೆ ನಮಸ್ಕಾರ (16). ಕಲಾ, ಕಾಷ್ಠಾ, ನಿಮೇಷ—ಮುಂತಾದ ಕಾಲ ಭೇದಗಳನ್ನರಿಯಲು ಕಾರಣಾತ್ಮನೂ ಧ್ಯೇಯನೂ ಪ್ರಣವಸ್ವರೂಪನೂ ವಿಷ್ಣು ಸ್ವರೂಪನೂ ಆದ ಸೂರ್ಯದೇವನಿಗೆ ನಮಸ್ಕಾರ (17). ಯಾವಾತನು ತನ್ನ ಕಿರಣಗಳಿಂದ ಚಂದ್ರನನ್ನು ಆಪ್ಯಾಯನಗೊಳಿಸಿ ದೇವತೆಗಳನ್ನು ಪೋಷಿಸುವನೋ ಸ್ವಧಾಮೃತದಿಂದ ಪಿತೃಗಳನ್ನು ತೃಪ್ತಿಗೊಳಿಸುವನೋ ಅಂತಹ ತೃಪ್ತಿಸ್ವರೂಪನಾದ ಸೂರ್ಯದೇವನಿಗೆ ನಮಸ್ಕಾರ (18). ಚಳಿ, ಮಂಜು, ಸೆಕೆ, ಮಳೆ—ಇವುಗಳಿಗೆ ಕರ್ತನಾಗಿ ಜಗತ್ತಿಗೆ ಭರ್ತನಾಗಿರುವ ಸ್ವಾಮಿಯೂ ತ್ರಿಕಾಲ ಸ್ವರೂಪನೂ ಆದ ಸೂರ್ಯಭಗವಂತನಿಗೆ ನಮಸ್ಕಾರ (19). ಜಗತ್ಪಾಲಕನಾಗಿ ಜಗತ್ತಿನ ಕತ್ತಲೆಯನ್ನು ನಾಶಮಾಡುತ್ತಾ ಸತ್ವಗುಣಶಾಲಿಯಾದ ಸೂರ್ಯದೇವನಿಗೆ ನಮಸ್ಕಾರ. ಯಾವಾತನು ಉದಿತನಾಗದಿದ್ದರೆ ಜನರಿಗೆ ಶಾಸ್ತ್ರೀಯ ಪುಣ್ಯ ಕರ್ಮವನ್ನು ಮಾಡಲು ಯೋಗ್ಯತೆಯೇ ಬರುವುದಿಲ್ಲವೋ ಜಲವು (ಸ್ನಾನ

**ಸತ್ಕರ್ಮಯೋಗ್ಯೋ ನ ಜನೋ ನೈವಾಪಃ ಶುದ್ಧಿಕಾರಣಮ್ ।**
**ಯಸ್ಮಿನ್ನನುದಿತೇ ತಸ್ಮೈ ನಮೋ ದೇವಾಯ ಭಾಸ್ವತೇ ॥ 21**

**ಸ್ಪೃಷ್ಟೋ ಯದಂಶುಭಿರ್ಲೋಕಃ ಕ್ರಿಯಾಯೋಗ್ಯೋ ಹಿ ಜಾಯತೇ ।**
**ಪವಿತ್ರತಾಕಾರಣಾಯ ತಸ್ಮೈ ಶುದ್ಧಾತ್ಮನೇ ನಮಃ ॥ 22**

**ನಮಃ ಸವಿತ್ರೇ ಸೂರ್ಯಾಯ ಭಾಸ್ಕರಾಯ ವಿವಸ್ವತೇ ।**
**ಆದಿತ್ಯಾಯಾದಿಭೂತಾಯ ದೇವಾದೀನಾಂ ನಮೋ ನಮಃ ॥ 23**

**ಹಿರಣ್ಮಯಂ ರಥಂ ಯಸ್ಯ ಕೇತವೋಽಮೃತವಾಜಿನಃ ।**
**ವಹಂತಿ ಭುವನಾಲೋಕಿಚಕ್ಷುಷಂ ತಂ ನಮಾಮ್ಯಹಮ್ ॥ 24**

*ಶ್ರೀಪರಾಶರ ಉವಾಚ:*

**ಇತ್ಯೇವಮಾದಿಭಿಸ್ತೇನ ಸ್ತೂಯಮಾನಸ್ಸ ವೈ ರವಿಃ ।**
**ವಾಜಿರೂಪಧರಃ ಪ್ರಾಹ ವ್ರಿಯತಾಮಿತಿ ವಾಂಛಿತಮ್ ॥ 25**

---

ದಿಂದ) ಶುದ್ಧಿಗೆ ಕಾರಣವೂ ಆಗುವುದಿಲ್ಲವೋ ಅಂತಹ ತೇಜಸ್ವಿಯಾದ ದೇವನಿಗೆ ನಮಸ್ಕಾರ ಮಾಡುತ್ತೇನೆ (20-21). ಯಾವಾತನ ಕಿರಣಗಳ ಸ್ಪರ್ಶವಾದಾಗ ಜನರು ಕ್ರಿಯೆಗೆ ಅರ್ಹರಾಗುತ್ತಾರೋ ಅಂತಹ ಪವಿತ್ರತೆಗೆ ಕಾರಣನೂ ಶುದ್ಧಾತ್ಮನೂ ಆದ ಸೂರ್ಯದೇವನಿಗೆ ನಮಸ್ಕಾರ (22). ದೇವಾದಿಗಳಿಗೆ ಆದಿಭೂತನಾಗಿ ಸವಿತಾ, ಸೂರ್ಯ, ಭಾಸ್ಕರ, ವಿವಸ್ವಾನ್, ಆದಿತ್ಯ—ಎಂದು ಪ್ರಸಿದ್ಧನಾಗಿರುವ ಸ್ವಾಮಿಗೆ ನಮಃ ನಮಃ ನಮಃ (23). ಯಾವಾತನ ರಥವು ಹಿರಣ್ಮಯ (ಪ್ರಜ್ಞಾರೂಪ) ವಾಗಿದೆಯೋ ಯಾವಾತನಿಗೆ (ಛಂದೋಮಯರಾದ) ಅಮರ ಅಶ್ವಗಣ ಗಳು ಧ್ವಜಗಳಾಗಿವೆಯೋ ಈ ರಥಾಶ್ವಗಳು ಜಗಚ್ಚಕ್ಷುವಾದ ಯಾವಾತ ನನ್ನು ಹೊರುತ್ತಿವೆಯೋ ಆ ದೇವನನ್ನು ನಾನು ನಮಸ್ಕರಿಸುತ್ತೇನೆ" (24). ಹೀಗೆ ನಾನಾ ಪ್ರಕಾರವಾಗಿ ಯಾಜ್ಞವಲ್ಕ್ಯನು ಸ್ತುತಿಸಲು, ಸೂರ್ಯ ದೇವನು ಅಶ್ವರೂಪದಿಂದ ಪ್ರತ್ಯಕ್ಷನಾಗಿ "ಇಷ್ಟವಾದ ವರವನ್ನು ಬೇಡಿಕೊ" ಎಂದನು (25). ಆಗ ಯಾಜ್ಞವಲ್ಕ್ಯನು ಸೂರ್ಯನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ "ನನ್ನ ಗುರುವಿಗೆ ಗೊತ್ತಿಲ್ಲದಂತಹ

**ಯಾಜ್ಞವಲ್ಕ್ಯಸ್ತದಾ ಪ್ರಾಹ ಪ್ರಣಿಪತ್ಯ ದಿವಾಕರಮ್।**
**ಯಜೂಂಷಿ ತಾನಿ ಮೇ ದೇಹಿ ಯಾನಿ ಸಂತಿ ನ ಮೇ ಗುರೌ॥**

**ಏವಮುಕ್ತೋ ದದೌ ತಸ್ಮೈ ಯಜೂಂಷಿ ಭಗವಾನ್ ರವಿಃ।**
**ಅಯಾತಯಾಮಸಂಜ್ಞಾನಿ ಯಾನಿ ವೇತ್ತಿ ನ ತದ್‌ಗುರುಃ॥** 27

**ಯಜೂಂಷಿ ಯೈರಧೀತಾನಿ ತಾನಿ ವಿಪ್ರೈರ್ದ್ವಿಜೋತ್ತಮ।**
**ವಾಜಿನಸ್ತೇ ಸಮಾಖ್ಯಾತಾಃ ಸೂರ್ಯೋಽಪ್ಯಶ್ವೋಽಭವದ್ಯತಃ॥** 28

**ಶಾಖಾಭೇದಾಸ್ತು ತೇಷಾಂ ವೈ ದಶ ಪಂಚ ಚ ವಾಜಿನಾಮ್।**
**ಕಾಣ್ವಾದ್ಯಾಸ್ಸುಮಹಾಭಾಗ ಯಾಜ್ಞವಲ್ಕ್ಯಾಃ ಪ್ರಕೀರ್ತಿತಾಃ॥** 29

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಪಂಚಮೋಽಧ್ಯಾಯಃ

---

ಯಜುಸ್ಸುಗಳನ್ನು ನನಗೆ ಉಪದೇಶಿಸು" ಎಂದು ಕೇಳಿಕೊಂಡನು (26). ಆಗ ಭಗವಾನ್ ಸೂರ್ಯದೇವನು ಯಾಜ್ಞವಲ್ಕ್ಯನಿಗೆ 'ಅಯಾತಯಾಮ*' ಗಳೆನಿಸಿದ, ಆದ್ದರಿಂದಲೇ ಆತನ ಗುರುವಾದ ವೈಶಂಪಾಯನನಿಗೆ ಗೊತ್ತಿಲ್ಲದ ಯಜುಸ್ಸುಗಳನ್ನು ಉಪದೇಶಿಸಿದನು (27). ಈ ಯಜುಸ್ಸುಗಳನ್ನು ಯಾರು ಅಧ್ಯಯನ ಮಾಡಿದರೋ ಅವರು 'ವಾಜಿ'ಗಳೆಂದು ಪ್ರಸಿದ್ಧರಾದರು. ಏಕೆಂದರೆ, ಸೂರ್ಯನು ವಾಜಿ (ಅಶ್ವ) ರೂಪಧರನಾಗಿ ಅವನ್ನು ಉಪದೇಶಿಸಿದನು (28). ಈ ವಾಜಿಯಜುಸ್ಸುಗಳಲ್ಲಿ ಕಾಣ್ವ ಮುಂತಾದ ಹದಿನೈದು ಶಾಖಾಭೇದಗಳಿವೆ. ಇವೆಲ್ಲವೂ ಯಾಜ್ಞವಲ್ಕ್ಯ ಮುನಿಯಿಂದ ಪ್ರವೃತ್ತವಾದವು§ (29).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಐದನೆಯ ಅಧ್ಯಾಯ ಮುಗಿಯಿತು.

---

* ಅಯಾತಯಾಮ—ಹಳಸದೆ ಇರುವ; ಪ್ರಕೃತದಲ್ಲಿ, ಇತರರಿಗೆ ಗೊತ್ತಿಲ್ಲದ ಎಂದು ತಾತ್ಪರ್ಯ.

§ ಈ ಶಾಖೆಗಳಿಗೆ ಶುಕ್ಲಯಜುರ್ವೇದವೆಂದೂ ವಾಜಸನೇಯ ಎಂದೂ ಹೆಸರಿದೆ. ಹಿಂದೆ ಹೇಳಿದ ತೈತ್ತಿರೀಯವು ಕೃಷ್ಣಯಜುರ್ವೇದವೆನಿಸಿದೆ. ಒಟ್ಟು ಯಜುರ್ವೇದದಲ್ಲಿ ನೂರೊಂದು ಶಾಖೆಗಳಿದ್ದವು. 'ಏಕಶತಮಧ್ವರ್ಯುಶಾಖಾಃ'.
—ವ್ಯಾ. ಮಹಾಭಾಷ್ಯ

## ಷಷ್ಠೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ಸಾಮವೇದತರೋಶ್ಶಾಖಾ ವ್ಯಾಸಶಿಷ್ಯಸ್ಸ ಜೈಮಿನಿಃ।**
**ಕ್ರಮೇಣ ಯೇನ ಮೈತ್ರೇಯ ಬಿಭೇದ ಶೃಣು ತನ್ಮಮ॥** 1

**ಸುಮಂತುಸ್ತಸ್ಯ ಪುತ್ರೋಽಭೂತ್ಸುಕರ್ಮಾಸ್ಯಾಪ್ಯಭೂತ್ಸುತಃ।**
**ಅಧೀತವಂತೌ ಚೈಕೈಕಾಂ ಸಂಹಿತಾಂ ತೌ ಮಹಾಮತೀ॥** 2

**ಸಹಸ್ರಸಂಹಿತಾಭೇದಂ ಸುಕರ್ಮಾ ತತ್ಸುತಸ್ತತಃ।**
**ಚಕಾರ ತಂ ಚ ತಚ್ಛಿಷ್ಯೌ ಜಗೃಹಾತೇ ಮಹಾವ್ರತೌ॥** 3

**ಹಿರಣ್ಯನಾಭಃ ಕೌಸಲ್ಯಃ ಪೌಷ್ಯಿಂಜಿಶ್ಚ ದ್ವಿಜೋತ್ತಮ।**
**ಉದೀಚ್ಯಾಸ್ಸಾಮಗಾಶ್ಶಿಷ್ಯಾಸ್ತಸ್ಯ ಪಂಚಶತಂ ಸ್ಮೃತಾಃ॥** 4

---

### ಅಧ್ಯಾಯ 6

ಸಾಮವೇದ, ಅಥರ್ವಣವೇದ, ಪುರಾಣ ಮತ್ತು ವಿದ್ಯೆಗಳ ವಿಭಾಗವರ್ಣನೆ.

ಪರಾಶರರು ಹೇಳಿದರು: ಮೈತ್ರೇಯ, ವ್ಯಾಸಶಿಷ್ಯನಾದ ಜೈಮಿನಿಯು ಸಾಮವೇದವೃಕ್ಷದ ಶಾಖೆಗಳನ್ನು ಕ್ರಮವಾಗಿ ಹೇಗೆ ವಿಭಾಗಿಸಿದನೆಂಬುದನ್ನು ಹೇಳುತ್ತೇನೆ, ಕೇಳು (1). ಜೈಮಿನಿಯ ಮಗ ಸುಮಂತು. ಸುಮಂತುವಿನ ಮಗ ಸುಕರ್ಮ. ಮಹಾಪ್ರಾಜ್ಞರಾದ ಅವರಿಬ್ಬರೂ ಸಾಮವೇದದ ಒಂದೊಂದು ಸಂಹಿತೆಯನ್ನು ಅಭ್ಯಾಸ ಮಾಡಿದರು. ಅನಂತರ ಸುಮಂತುವಿನ ಮಗನಾದ ಸುಕರ್ಮನು ಆ ಸಂಹಿತೆಯನ್ನು ಸಾವಿರಭೇದಗಳುಳ್ಳದ್ದನ್ನಾಗಿ ವಿಂಗಡಿಸಿದನು. ಆತನ ವ್ರತ ನಿಷ್ಠರಾದ ಇಬ್ಬರು ಶಿಷ್ಯರು ಅವನ್ನು ಕಲಿತರು (2-3). ಅವರಲ್ಲೊಬ್ಬನು ಕೋಸಲ ದೇಶದ ಹಿರಣ್ಯನಾಭ. ಇನ್ನೊಬ್ಬನ ಹೆಸರು ಪೌಷ್ಯಿಂಜಿ. ಅಲ್ಲದೆ ಸುಕರ್ಮನಿಗೆ ಐದು ನೂರು ಶಿಷ್ಯರಿದ್ದರು. ಸಾಮವೇದವನ್ನು ಕಲಿತ ಅವರು ಉದೀಚ್ಯಸಾಮಗರೆಂದು ಪ್ರಸಿದ್ಧರಾದರು. (4). ಹಿರಣ್ಯನಾಭ

**ಹಿರಣ್ಯನಾಭಾತ್ತಾವತ್ಯಸ್ಸಂಹಿತಾ ಯೈರ್ದ್ವಿಜೋತ್ತಮೈಃ।**
**ಗೃಹೀತಾಸ್ತೇಽಪಿ ಚೋಚ್ಯಂತೇ ಪಂಡಿತೈಃ ಪ್ರಾಚ್ಯಸಾಮಗಾಃ॥ 5**

**ಲೋಕಾಕ್ಷಿರ್ನೌಧಮಿಶ್ಚೈವ ಕಕ್ಷೀವಾನ್ ಲಾಂಗಲಿಸ್ತಥಾ।**
**ಪೌಷ್ಯಂಜಿಶಿಷ್ಯಾಸ್ತದ್ಭೇದೈಸ್ಸಂಹಿತಾ ಬಹುಲೀಕೃತಾಃ॥ 6**

**ಹಿರಣ್ಯನಾಭಶಿಷ್ಯಸ್ತು ಚತುರ್ವಿಂಶತಿಸಂಹಿತಾಃ।**
**ಪ್ರೋವಾಚ ಕೃತಿನಾಮಾಸೌ ಶಿಷ್ಯೇಭ್ಯಶ್ಚ ಮಹಾಮುನಿಃ॥ 7**

**ತೈಶ್ಚಾಪಿ ಸಾಮವೇದೋಽಸೌ ಶಾಖಾಭಿರ್ಬಹುಲೀಕೃತಃ।**
**ಅಥರ್ವಣಾಮಥೋ ವಕ್ಷ್ಯೇ ಸಂಹಿತಾನಾಂ ಸಮುಚ್ಚಯಮ್॥ 8**

**ಅಥರ್ವವೇದಂ ಸ ಮುನಿಸ್ಸುಮಂತುರಮಿತದ್ಯುತಿಃ।**
**ಶಿಷ್ಯಮಧ್ಯಾಪಯಾಮಾಸ ಕಬಂಧಂ ಸೋಽಪಿ ತಂ ದ್ವಿಧಾ।**
**ಕೃತ್ವಾ ತು ದೇವದರ್ಶಾಯ ತಥಾ ಪಥ್ಯಾಯ ದತ್ತವಾನ್॥ 9**

**ದೇವದರ್ಶಸ್ಯ ಶಿಷ್ಯಾಸ್ತು ಮೇಧೋ ಬ್ರಹ್ಮಬಲಿಸ್ತಥಾ।**
**ಶೌಲ್ಕಾಯನಿಃ ಪಿಪ್ಪಲಾದಸ್ತಥಾನ್ಯೋ ದ್ವಿಜಸತ್ತಮ॥ 10**

---

ನಿಂದ ಆ ಐದುನೂರು ಸಂಹಿತೆಗಳನ್ನು ಕಲಿತ ಶಿಷ್ಯರನ್ನು ಪ್ರಾಚ್ಯಸಾಮಗರೆಂದು ಕರೆಯುತ್ತಾರೆ. ಪೌಷ್ಯಂಜಿಗೆ ಲೋಕಾಕ್ಷಿ, ನೌಧಮಿ, ಕಕ್ಷೀವಾನ್ ಮತ್ತು ಲಾಂಗಲಿ ಎಂಬ ಶಿಷ್ಯರಿದ್ದರು. ಅವರು ತಮ್ಮ ಸಂಹಿತೆಯನ್ನು ಇನ್ನೂ ವಿಭಾಗಿಸಿ ಅವುಗಳ ಸಂಖ್ಯೆಯನ್ನು ಬೆಳೆಸಿದರು (5-6). ಹಿರಣ್ಯನಾಭನ ಶಿಷ್ಯನಾದ ಕೃತಿ ಎಂಬ ಮಹರ್ಷಿಯು ತನ್ನ ಶಿಷ್ಯರಿಗೆ ಸಾಮವೇದದ ಇಪ್ಪತ್ತುನಾಲ್ಕು ಸಂಹಿತೆಗಳನ್ನು ಅಧ್ಯಾಪನ ಮಾಡಿದನು. ಆ ಶಿಷ್ಯರಿಂದಲೂ ಸಹ ಸಾಮವೇದವು ನಾನಾ ಶಾಖೆಗಳಿಂದ ವಿಸ್ತೃತವಾಯಿತು. ಇನ್ನು ಅಥರ್ವವೇದ ಸಂಹಿತೆಗಳ ಸಮುಚ್ಚಯವನ್ನು ಹೇಳುವೆನು (7-8). ಮಹಾತೇಜಸ್ವಿಯಾದ ಆ ಸುಮಂತುಮುನಿಯು ತನ್ನ ಶಿಷ್ಯನಾದ ಕಬಂಧ ಎಂಬವನಿಗೆ ಅಥರ್ವವೇದವನ್ನು ಅಧ್ಯಯನ ಮಾಡಿಸಿದನು. ಕಬಂಧನು ಅದನ್ನು ಎರಡು ವಿಭಾಗ ಮಾಡಿ ದೇವದರ್ಶ ಮತ್ತು ಪಥ್ಯ ಎಂಬವರಿಗೆ ಕಲಿಸಿದನು (9). ದೇವದರ್ಶನಿಗೆ ಮೇಧ,

ಪಥ್ಯಸ್ಯಾಪಿ ತ್ರಯಶ್ಶಿಷ್ಯಾಃ ಕೃತಾ ಯೈರ್ದ್ವಿಜ ಸಂಹಿತಾಃ।
ಜಾಬಾಲಿಃ ಕುಮುದಾದಿಶ್ಚ ತೃತೀಯಶ್ಶೌನಕೋ ದ್ವಿಜ॥ 11

ಶೌನಕಸ್ತು ದ್ವಿಧಾ ಕೃತ್ವಾ ದದಾವೇಕಾಂ ತು ಬಭ್ರುವೇ।
ದ್ವಿತೀಯಾಂ ಸಂಹಿತಾಂ ಪ್ರಾದಾತ್ ಸೈಂಧವಾಯ ಚ ಸಂಜ್ಞಿನೇ॥

ಸೈಂಧವಾನ್ ಮುಂಜಿಕೇಶಶ್ಚ ದ್ವೇಧಾ ಭಿನ್ನಾಸ್ತ್ರಿಧಾ ಪುನಃ।
ನಕ್ಷತ್ರಕಲ್ಪೋ ವೇದಾನಾಂ ಸಂಹಿತಾನಾಂ ತಥೈವ ಚ॥ 13

ಚತುರ್ಥಸ್ಸ್ಯಾದಾಂಗಿರಸಶ್ಶಾಂತಿಕಲ್ಪಶ್ಚ ಪಂಚಮಃ।
ಶ್ರೇಷ್ಠಾಸ್ತ್ವಥರ್ವಣಾಮೇತೇ ಸಂಹಿತಾನಾಂ ವಿಕಲ್ಪಕಾಃ॥ 14

ಆಖ್ಯಾನೈಶ್ಚಾಪ್ಯುಪಾಖ್ಯಾನೈರ್ಗಾಥಾಭಿಃ ಕಲ್ಪಶುದ್ಧಿಭಿಃ।
ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ॥ 15

---

ಬ್ರಹ್ಮಬಲಿ, ಶೌಲ್ಕಾಯನಿ ಮತ್ತು ಪಿಪ್ಪಲಾದ ಎಂಬ ನಾಲ್ವರು ಶಿಷ್ಯರಿದ್ದರು. ಪಥ್ಯನಿಗೂ ಸಹ ಜಾಬಾಲಿ, ಕುಮದಾದಿ ಮತ್ತು ಶೌನಕ ಎಂಬ ಮೂವರು ಶಿಷ್ಯರಿದ್ದರು. ಅವರು ಈ ಅಥರ್ವಸಂಹಿತೆಯನ್ನು ವಿಭಾಗ ಮಾಡಿದರು (10-11). ಶೌನಕನು ತನ್ನ ಸಂಹಿತೆಯನ್ನು ಎರಡಾಗಿ ವಿಂಗಡಿಸಿ ಒಂದನ್ನು ಬಭ್ರುವಿಗೂ ಇನ್ನೊಂದನ್ನು ಸೈಂಧವ ಎಂಬವನಿಗೂ ಉಪದೇಶಿಸಿದನು. ಅನಂತರ ಸೈಂಧವನಿಂದ ಅದನ್ನು ಅಧ್ಯಯನ ಮಾಡಿದ ಮುಂಜಿಕೇಶನು ಮೊದಲು ಎರಡಾಗಿ ವಿಂಗಡಿಸಿ ಆಮೇಲೆ ಮೂರಾಗಿ ಒಟ್ಟು ಐದು ವಿಭಾಗ ಮಾಡಿದನು. ನಕ್ಷತ್ರಕಲ್ಪ, ವೇದಕಲ್ಪ, ಸಂಹಿತಾಕಲ್ಪ, ಆಂಗಿರಸಕಲ್ಪ, ಶಾಂತಿಕಲ್ಪ—ಎಂಬೀ ಐದು ಸಂಹಿತೆಗಳು ಅಥರ್ವಣ ವೇದದಲ್ಲಿ ಶ್ರೇಷ್ಠವಾದವುಗಳು* (12-14). ಅನಂತರ ಪುರಾಣಾರ್ಥ ವಿಶಾರದನಾದ ವ್ಯಾಸನು ಆಖ್ಯಾನ, ಉಪಾಖ್ಯಾನ, ಗಾಥಾ (ಶಿವಗೀತೆ, ಕಪಿಲಗೀತೆ ಮೊದಲಾದದ್ದು), ಕಲ್ಪಸಿದ್ಧಿ (ಬ್ರಾಹ್ಮಕಲ್ಪ, ವಾರಾಹಕಲ್ಪ ಮುಂತಾದವುಗಳ ವಿಚಾರ) ಇವುಗಳಿಂದ ಕೂಡಿದ ಪುರಾಣಸಂಹಿತೆಯನ್ನು ವಿರಚಿಸಿದನು

---

* ಅಥರ್ವವೇದದಲ್ಲಿ ಒಂಬತ್ತು ಶಾಖೆಗಳಿದ್ದವು. 'ನವಧಾಥರ್ವಣೋವೇದಃ'
—ವ್ಯಾ. ಮಹಾಭಾಷ್ಯ

ಪ್ರಖ್ಯಾತೋ ವ್ಯಾಸಶಿಷ್ಯೋಽಭೂತ್ಸೂತೋ ವೈ ರೋಮಹರ್ಷಣಃ।
ಪುರಾಣಸಂಹಿತಾಂ ತಸ್ಮೈ ದದೌ ವ್ಯಾಸೋ ಮಹಾಮತಿಃ॥ 16

ಸುಮತಿಶ್ಚಾಗ್ನಿವರ್ಚಾಶ್ಚ ಮಿತ್ರಾಯುಶ್ಶಾಂಸಪಾಯನಃ।
ಅಕೃತವ್ರಣಸಾವರ್ಣೀ ಷಟ್ ಶಿಷ್ಯಾಸ್ತಸ್ಯ ಚಾಭವನ್॥ 17

ಕಾಶ್ಯಪಃ ಸಂಹಿತಾಕರ್ತಾ ಸಾವರ್ಣಿಶ್ಶಾಂಸಪಾಯನಃ।
ರೋಮಹರ್ಷಣಿಕಾ ಚಾನ್ಯಾ ತಿಸೃಣಾಂ ಮೂಲಸಂಹಿತಾ॥ 18

ಚತುಷ್ಟಯೇನ ಭೇದೇನ ಸಂಹಿತಾನಾಮಿದಂ ಮುನೇ॥ 19

ಆದ್ಯಂ ಸರ್ವಪುರಾಣಾನಾಂ ಪುರಾಣಂ ಬ್ರಾಹ್ಮಮುಚ್ಯತೇ।
ಅಷ್ಟಾದಶಪುರಾಣಾನಿ ಪುರಾಣಜ್ಞಾಃ ಪ್ರಚಕ್ಷತೇ॥ 20

ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ।
ತಥಾನ್ಯನ್ನಾರದೀಯಂ ಚ ಮಾರ್ಕಂಡೇಯಂ ಚ ಸಪ್ತಮಮ್॥ 21

ಆಗ್ನೇಯಮಷ್ಟಮಂ ಚೈವ ಭವಿಷ್ಯನ್ನವಮಂ ಸ್ಮೃತಮ್।
ದಶಮಂ ಬ್ರಹ್ಮವೈವರ್ತಂ ಲೈಂಗಮೇಕಾದಶಂ ಸ್ಮೃತಮ್॥ 22

---

(15). ವ್ಯಾಸನಿಗೆ ರೋಮಹರ್ಷಣನೆಂಬ ಸೂತಜಾತಿಯ ಪ್ರಖ್ಯಾತ ಶಿಷ್ಯನೊಬ್ಬನಿದ್ದನು. ಬುದ್ಧಿಶಾಲಿಯಾದ ವ್ಯಾಸನು ಆ ಶಿಷ್ಯನಿಗೆ ಪುರಾಣಗಳನ್ನು ಕಲಿಸಿದನು. ಆ ರೋಮಹರ್ಷಣನಿಗೆ ಸುಮತಿ, ಅಗ್ನಿವರ್ಚಸ್, ಮಿತ್ರಾಯು, ಶಾಂಸಪಾಯನ, ಅಕೃತವ್ರಣ, ಸಾವರ್ಣಿ—ಎಂಬ ಆರು ಮಂದಿ ಶಿಷ್ಯರಿದ್ದರು (16-17). ಇವರಲ್ಲಿ ಕಶ್ಯಪ ಗೋತ್ರದವನಾದ ಅಕೃತವ್ರಣ ಮತ್ತು ಸಾವರ್ಣಿ, ಶಾಂಸಪಾಯನ—ಎಂಬ ಮೂವರು ಮೂರು ಪುರಾಣಸಂಹಿತೆಗಳನ್ನು ರಚಿಸಿದರು. ಈ ಸಂಹಿತೆಗಳಿಗೆ ರೋಮಹರ್ಷಣನ ಪುರಾಣ ಸಂಹಿತೆಯೇ ಆಧಾರವಾಯಿತು (18). ಹೀಗೆ ಪುರಾಣಸಂಹಿತೆಗಳ ನಾಲ್ಕು ಭೇದಗಳಿಂದ ರಚಿತವಾದ ಸಕಲ ಪುರಾಣಗಳಿಗೂ ಮೊದಲನೆಯದೆಂದು ಬ್ರಹ್ಮಪುರಾಣವು ಹೇಳಲ್ಪಟ್ಟಿದೆ. ಒಟ್ಟು ಹದಿನೆಂಟು ಪುರಾಣಗಳಿವೆಯೆಂದು ಪುರಾಣಜ್ಞರು ಹೇಳುತ್ತಾರೆ (19-20). ಅವು ಯಾವುವೆಂದರೆ—ಬ್ರಾಹ್ಮ, ಪಾದ್ಮ, ವೈಷ್ಣವ (ವಿಷ್ಣುಪುರಾಣ),

**ವಾರಾಹಂ ದ್ವಾದಶಂ ಚೈವ ಸ್ಕಾಂದಂ ಚಾತ್ರ ತ್ರಯೋದಶಮ್।**
**ಚತುರ್ದಶಂ ವಾಮನಂ ಚ ಕೌರ್ಮಂ ಪಂಚದಶಂ ತಥಾ॥** 23

**ಮಾತ್ಸ್ಯಂ ಚ ಗಾರುಡಂ ಚೈವ ಬ್ರಹ್ಮಾಂಡಂ ಚ ತತಃ ಪರಮ್।**
**ಮಹಾಪುರಾಣಾನ್ಯೇತಾನಿ ಹ್ಯಷ್ಟಾದಶ ಮಹಾಮುನೇ॥** 24

**ತಥಾ ಚೋಪಪುರಾಣಾನಿ ಮುನಿಭಿಃ ಕಥಿತಾನಿ ಚ।**
**ಸರ್ಗಶ್ಚ ಪ್ರತಿಸರ್ಗಶ್ಚ ವಂಶಮನ್ವಂತರಾಣಿಚ।**
**ಸರ್ವೇಷ್ವೇತೇಷು ಕಥ್ಯಂತೇ ವಂಶಾನುಚರಿತಂ ಚ ಯತ್॥** 25

**ಯದೇತತ್ತವ ಮೈತ್ರೇಯ ಪುರಾಣಂ ಕಥ್ಯತೇ ಮಯಾ।**
**ಏತದ್ವೈಷ್ಣವಸಂಜ್ಞಂ ವೈ ಪಾದ್ಮಸ್ಯ ಸಮನಂತರಮ್॥** 26

**ಸರ್ಗೇ ಚ ಪ್ರತಿಸರ್ಗೇಚ ವಂಶಮನ್ವಂತರಾದಿಷು।**
**ಕಥ್ಯತೇ ಭಗವಾನ್ ವಿಷ್ಣುರಶೇಷೇಷ್ವೇವ ಸತ್ತಮ॥** 27

**ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ।**
**ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಹ್ಯೇತಾಶ್ಚತುರ್ದಶ॥** 28

---

ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಎಂಟನೆಯದಾದ ಆಗ್ನೇಯ, ಒಂಬತ್ತನೆಯದಾದ ಭವಿಷ್ಯತ್, ಬ್ರಹ್ಮವೈವರ್ತ, ಲೈಂಗ, ವಾರಾಹ, ಹದಿಮೂರನೆಯದಾದ ಸ್ಕಾಂದ, ವಾಮನ, ಕೌರ್ಮ, ಮಾತ್ಸ್ಯ, ಗಾರುಡ ಮತ್ತು ಬ್ರಹ್ಮಾಂಡ. ಇವು ಅಷ್ಟಾದಶ ಪುರಾಣಗಳು (21-24). ಹೀಗೆಯೇ ಮುನಿಗಳು ಅನೇಕ ಉಪಪುರಾಣಗಳನ್ನು ಹೇಳಿದ್ದಾರೆ. ಈ ಎಲ್ಲ ಪುರಾಣಗಳಲ್ಲಿಯೂ ಸರ್ಗ, ಪ್ರತಿಸರ್ಗ (ಪ್ರಳಯ), ವಂಶ, ಮನ್ವಂತರ ಮತ್ತು ವಂಶಾನುಚರಿತಗಳು ಹೇಳಲ್ಪಡುತ್ತವೆ (25). ಮೈತ್ರೇಯ, ಈಗ ನಾನು ನಿನಗೆ ಹೇಳುತ್ತಿರುವುದು ವಿಷ್ಣುಪುರಾಣ. ಇದು ಪದ್ಮಪುರಾಣವಾದ ಮೇಲೆ ಕಥಿತವಾದದ್ದು. ಈ ವಿಷ್ಣುಪುರಾಣದ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರಾದಿಗಳು—ಎಲ್ಲ ಸ್ಥಳಗಳಲ್ಲಿಯೂ ಭಗವಾನ್ ವಿಷ್ಣು ಸಂಕೀರ್ತಿತನಾಗಿದ್ದಾನೆ (26-27). (ಆರು) ವೇದಾಂಗ ಗಳು, ನಾಲ್ಕು ವೇದಗಳು, ಮೀಮಾಂಸಾ, ನ್ಯಾಯಶಾಸ್ತ್ರ, ಪುರಾಣ ಮತ್ತು

**ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೈವ ತೇ ತ್ರಯಃ।**
**ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶೈವ ತಾಃ॥ 29**

**ಜ್ಞೇಯಾ ಬ್ರಹ್ಮರ್ಷಯಃ ಪೂರ್ವಂ ತೇಭ್ಯೋ ದೇವರ್ಷಯಃ ಪುನಃ।**
**ರಾಜರ್ಷಯಃ ಪುನಸ್ತೇಭ್ಯ ಋಷಿಪ್ರಕೃತಯಸ್ತ್ರಯಃ॥ 30**

**ಇತಿ ಶಾಖಾಸ್ಸಮಾಖ್ಯಾತಾಶ್ಶಾಖಾಭೇದಾಸ್ತಥೈವ ಚ।**
**ಕರ್ತಾರಶ್ಚೈವ ಶಾಖಾನಾಂ ಭೇದಹೇತುಸ್ತಥೋದಿತಃ॥ 31**

**ಸರ್ವಮನ್ವಂತರೇಷ್ವೇವಂ ಶಾಖಾಭೇದಾಸ್ಸಮಾಃ ಸ್ಮೃತಾಃ।**
**ಪ್ರಾಜಾಪತ್ಯಾ ಶ್ರುತಿರ್ನಿತ್ಯಾ ತದ್ವಿಕಲ್ಪಾಸ್ತ್ವಿಮೇ ದ್ವಿಜ॥ 32**

**ಏತತ್ತೇ ಕಥಿತಂ ಸರ್ವಂ ಯತ್ಪೃಷ್ಟೋಽಹಮಿಹ ತ್ವಯಾ।**
**ಮೈತ್ರೇಯ ವೇದಸಂಬಂಧಃ ಕಿಮನ್ಯತ್ಕಥಯಾಮಿ ತೇ॥ 33**

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಷಷ್ಠೋಽಧ್ಯಾಯಃ

---

ಧರ್ಮಶಾಸ್ತ್ರ—ಹೀಗೆ ವಿದ್ಯೆಗಳು ಹದಿನಾಲ್ಕು ಇವೆ (28). ಇವುಗಳೊಡನೆ ಆಯುರ್ವೇದ, ಧನುರ್ವೇದ, ಗಾಂಧರ್ವವೇದ ಮತ್ತು ನಾಲ್ಕನೆಯದಾದ ಅರ್ಥಶಾಸ್ತ್ರ—ಇವು ಸೇರಿದರೆ ಹದಿನೆಂಟು ವಿದ್ಯೆಗಳಾಗುತ್ತವೆ (29). ಋಷಿಗಳಲ್ಲಿ ಬ್ರಹ್ಮರ್ಷಿ, ದೇವರ್ಷಿ, ರಾಜರ್ಷಿ—ಎಂದು ಮೂರು ಭೇದಗಳುಂಟು. ಮೈತ್ರೇಯ, ಈ ಪ್ರಕಾರವಾಗಿ ನಿನಗೆ ವೇದಶಾಖೆಗಳನ್ನೂ ಶಾಖಾಭೇದಗಳನ್ನೂ ಶಾಶೆಗಳ ಕರ್ತೃಗಳನ್ನೂ ಶಾಖಾಭೇದಗಳಿಗೆ ಕಾರಣವನ್ನೂ ಹೇಳಿದ್ದೇನೆ (30-31). ಸಕಲ ಮನ್ವಂತರಗಳಲ್ಲಿಯೂ ಈ ಶಾಖಾಭೇದಗಳು ಒಂದೇ ರೀತಿ ಇರುತ್ತವೆ. ಏಕೆಂದರೆ, ಬ್ರಹ್ಮನಿಂದ ಉಪದಿಷ್ಟವಾದ ಶ್ರುತಿಯು ನಿತ್ಯವಾದದ್ದು. ಈ ಶಾಖೆಗಳೆಲ್ಲವೂ ಶ್ರುತಿಯ ವಿವಿಧ ವಿಭಾಗಗಳು (32). ಮೈತ್ರೇಯ, ನೀನು ಕೇಳಿದಂತೆ ವೇದಸಂಬಂಧಿಯಾದ ವಿಷಯವೆಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನೇನು ಹೇಳಲಿ? (33).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಆರನೆಯ ಅಧ್ಯಾಯ ಮುಗಿಯಿತು.

---

## ಸಪ್ತಮೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಯಥಾವತ್ಕಥಿತಂ ಸರ್ವಂ ಯತ್ಪೃಷ್ಟೋಽಸಿ ಮಯಾ ಗುರೋ।**
**ಶ್ರೋತುಮಿಚ್ಛಾಮ್ಯಹಂ ತ್ವೇಕಂ ತದ್ಭವಾನ್ ಪ್ರಬ್ರವೀತು ಮೇ॥ 1**

**ಸಪ್ತದ್ವೀಪಾನಿ ಪಾತಾಲವಿಧಯಶ್ಚ ಮಹಾಮುನೇ।**
**ಸಪ್ತಲೋಕಾಶ್ಚ ಯೇಽಂತಃಸ್ಥಾ ಬ್ರಹ್ಮಾಂಡಸ್ಯಾಸ್ಯ ಸರ್ವತಃ॥ 2**

**ಸ್ಥೂಲೈಃ ಸೂಕ್ಷ್ಮೈಸ್ತಥಾ ಸೂಕ್ಷ್ಮಸೂಕ್ಷ್ಮಾತ್ ಸೂಕ್ಷ್ಮತರೈಸ್ತಥಾ।**
**ಸ್ಥೂಲಾತ್ ಸ್ಥೂಲತರೈಶ್ಚೈವ ಸರ್ವಪ್ರಾಣಿಭಿರಾವೃತಮ್॥ 3**

**ಅಂಗುಲಸ್ಯಾಷ್ಟಭಾಗೋಽಪಿ ನ ಸೋಽಸ್ತಿ ಮುನಿಸತ್ತಮ।**
**ನ ಸಂತಿ ಪ್ರಾಣಿನೋ ಯತ್ರ ಕರ್ಮಬಂಧನಿಬಂಧನಾಃ॥ 4**

---

### ಅಧ್ಯಾಯ 7

#### ಯಮಗೀತೆ

ಮೈತ್ರೇಯರು ಪ್ರಶ್ನೆ ಮಾಡಿದರು: "ಗುರುಗಳೆ, ನಾನು ಕೇಳಿದುದೆಲ್ಲವನ್ನೂ ಯಥಾವತ್ತಾಗಿ ಹೇಳಿದ್ದೀರಿ. ಇನ್ನೊಂದು ವಿಷಯವನ್ನು ಕೇಳಬೇಕೆಂದಿದ್ದೇನೆ. ಅದನ್ನು ತಾವು ಹೇಳಬೇಕು (1). ಈ ಬ್ರಹ್ಮಾಂಡದೊಳಗೆ ಸಪ್ತದ್ವೀಪಗಳು, ಪಾತಾಳಗಳು, ಸಪ್ತಲೋಕಗಳು ಯಾವುವುಂಟೋ ಅವೆಲ್ಲವುಗಳಲ್ಲಿಯೂ ಜೀವಿಗಳು ತುಂಬಿಕೊಂಡಿವೆ. ಸ್ಥೂಲ, ಸೂಕ್ಷ್ಮ, ಸೂಕ್ಷ್ಮತರ, ಸೂಕ್ಷ್ಮಾತಿಸೂಕ್ಷ್ಮ ಪ್ರಾಣಿಗಳಿಂದಲೂ ಸ್ಥೂಲತರ, ಸ್ಥೂಲತಮ ಪ್ರಾಣಿಗಳಿಂದಲೂ ಸರ್ವಸ್ಥಳಗಳೂ ವ್ಯಾಪ್ತವಾಗಿವೆ (2-3). ಮಹಾಮುನಿಗಳೆ, ಕರ್ಮಬಂಧದಲ್ಲಿ ಸಿಕ್ಕಿಕೊಂಡಿರುವ ಈ ಪ್ರಾಣಿಗಳಿಲ್ಲದಿರುವ, ಒಂದು ಅಂಗುಲದ ಎಂಟರಲ್ಲೊಂದಂಶದ ಸ್ಥಳವೂ ವಿಶ್ವದಲ್ಲಿಲ್ಲ. ಹೇ ಭಗವನ್, ಇವುಗಳೆಲ್ಲವೂ ಆಯುಸ್ಸು ಕಳೆದ

**ಸರ್ವೇ ಚೈತೇ ವಶಂ ಯಾಂತಿ ಯಮಸ್ಯ ಭಗವಾನ್ ಕಿಲ।**
**ಆಯುಷೋಽಂತೇ ತಥಾ ಯಾಂತಿ ಯಾತನಾಸ್ತತ್ಪ್ರಚೋದಿತಾಃ॥ 5**

**ಯಾತನಾಭ್ಯಃ ಪರಿಭ್ರಷ್ಟಾ ದೇವಾದ್ಯಾಸ್ವಥ ಯೋನಿಷು।**
**ಜಂತವಃ ಪರಿವರ್ತಂತೇ ಶಾಸ್ತ್ರಾಣಾಮೇಷ ನಿರ್ಣಯಃ॥ 6**

**ಸೋಽಹಮಿಚ್ಛಾಮಿ ತಚ್ಛ್ರೋತುಂ ಯಮಸ್ಯ ವಶವರ್ತಿನಃ।**
**ನ ಭವಂತಿ ನರಾ ಯೇನ ತತ್ಕರ್ಮ ಕಥಯಸ್ವ ಮೇ॥ 7**

*ಶ್ರೀಪರಾಶರ ಉವಾಚ:*

**ಅಯಮೇವ ಮುನೇ ಪ್ರಶ್ನೋ ನಕುಲೇನ ಮಹಾತ್ಮನಾ।**
**ಪೃಷ್ಟಃ ಪಿತಾಮಹಃ ಪ್ರಾಹ ಭೀಷ್ಮೋ ಯತ್ತಚ್ಛೃಣುಷ್ವ ಮೇ॥ 8**

*ಭೀಷ್ಮ ಉವಾಚ:*

**ಪುರಾ ಮಮಾಗತೋ ವತ್ಸ ಸಖಾ ಕಾಲಿಂಗಕೋ ದ್ವಿಜಃ।**
**ಸ ಮಾಮುವಾಚ ಪೃಷ್ಟೋ ವೈ ಮಯಾ ಜಾತಿಸ್ಮರೋ ಮುನಿಃ॥**

---

ಮೇಲೆ ಯಮನ ವಶಕ್ಕೆ ಒಳಗಾಗಿ, ಆತನು ಕೊಡುವ ಯಾತನೆಗಳಿಗೆ ಒಳಗಾಗುತ್ತವೆಯಲ್ಲವೆ? (4-5). ಅನಂತರ ಯಾತನೆಗಳು ಕಳೆದ ಮೇಲೆ ದೇವಾದಿ ಯೋನಿಗಳಲ್ಲಿ ಈ ಜೀವಿಗಳು ಮತ್ತೆ ಸುತ್ತಾಡುತ್ತವೆ ಎಂಬುದು ಶಾಸ್ತ್ರೀಯ ಸಿದ್ಧಾಂತವಾಗಿದೆ. ಆದ್ದರಿಂದ, ಯಾವ ಕರ್ಮವನ್ನಾಚರಿಸಿದರೆ ಜನರು ಯಮನ ವಶವರ್ತಿಗಳಾಗುವುದಿಲ್ಲವೋ, ಆ ಕರ್ಮವು ಯಾವುದೆಂದು ಕೇಳಲು ನಾನು ಬಯಸುತ್ತೇನೆ. ಅದನ್ನು ದಯಮಾಡಿ ಹೇಳಬೇಕು" ಎಂದರು (6-7). ಪರಾಶರರು ಹೇಳಿದರು: ಮೈತ್ರೇಯ, ಇದೇ ಪ್ರಶ್ನೆಯನ್ನು ಮಹಾತ್ಮನಾದ ನಕುಲನು ಪಿತಾಮಹನಾದ ಭೀಷ್ಮನನ್ನು ಕುರಿತು ಕೇಳಿದ್ದನು. ಅದಕ್ಕೆ ಭೀಷ್ಮನು ಏನು ಹೇಳಿದ್ದನೆಂಬುದನ್ನು ಕೇಳು (8). ಭೀಷ್ಮನು ಹೇಳಿದ್ದೇನೆಂದರೆ: "ವತ್ಸ-ನಕುಲ, ನನ್ನ ಮಿತ್ರನಾದ ಕಳಿಂಗ ದೇಶದ ಬ್ರಾಹ್ಮಣನೊಬ್ಬನು ಒಮ್ಮೆ ನನ್ನ ಬಳಿಗೆ ಬಂದಿದ್ದನು. ಅವನಿಗೆ ನಾನೊಂದು ಪ್ರಶ್ನೆಯನ್ನು ಹಾಕಲಾಗಿ, ಆ ಬ್ರಾಹ್ಮಣನು "ಜನ್ಮಾಂತರ ಸ್ಮರಣೆಯುಳ್ಳ ಒಬ್ಬ ಮುನಿಯು ಇದೆಲ್ಲವೂ ಹೀಗಿರುತ್ತದೆ, ಹೀಗೆ ನಡೆಯು

**ತೇನಾಖ್ಯಾತಮಿದಂ ಸರ್ವಮಿತ್ಥಂ ಚೈತದ್ಭವಿಷ್ಯತಿ।**
**ತಥಾಚ ತದಭೂದ್ವತ್ಸ ಯಥೋಕ್ತಂ ತೇನ ಧೀಮತಾ॥** 10

**ಸ ಪೃಷ್ಟಶ್ಚ ಮಯಾ ಭೂಯಃ ಶ್ರದ್ಧಧಾನೇನ ವೈ ದ್ವಿಜಃ।**
**ಯದ್ಯದಾಹ ನ ತದ್‌ದೃಷ್ಟಮನ್ಯಥಾ ಹಿ ಮಯಾ ಕ್ವಚಿತ್॥** 11

**ಏಕದಾ ತು ಮಯಾ ಪೃಷ್ಟಮೇತದ್ಯದ್ಭವತೋದಿತಮ್।**
**ಪ್ರಾಹ ಕಾಲಿಂಗಕೋ ವಿಪ್ರಃ ಸ್ಮೃತ್ವಾ ತಸ್ಯ ಮುನೇರ್ವಚಃ॥** 12

**ಜಾತಿಸ್ಮರೇಣ ಕಥಿತೋ ರಹಸ್ಯಃ ಪರಮೋ ಮಮ।**
**ಯಮಕಿಂಕರಯೋರ್ಯೋಽಭೂತ್ ಸಂವಾದಸ್ತಂ ಬ್ರವೀಮಿ ತೇ॥**

*ಕಾಲಿಂಗ ಉವಾಚ:*

**ಸ್ವಪುರುಷಮಭಿವೀಕ್ಷ್ಯ ಪಾಶಹಸ್ತಂ**
**ವದತಿ ಯಮಃ ಕಿಲ ತಸ್ಯ ಕರ್ಣಮೂಲೇ।**
**ಪರಿಹರ ಮಧುಸೂದನಪ್ರಪನ್ನಾನ್**
**ಪ್ರಭುರಹಮನ್ಯನೃಣಾಮವೈಷ್ಣವಾನಾಮ್॥** 14

---

ತ್ತದೆ—ಎಂದು ಹೇಳಿದ್ದಾನೆ" ಎಂದು ಉತ್ತರ ಕೊಟ್ಟನು. ವತ್ಸ-ನಕುಲ, ಆ ಬುದ್ಧಿಶಾಲಿಯು ಹೇಳಿದಂತೆಯೇ ಎಲ್ಲವೂ ನಡೆದುಹೋಯಿತು (9-10). ಅದರಿಂದ ಆತನ ಮಾತಿನಲ್ಲಿ ಶ್ರದ್ಧೆಯುಂಟಾಗಿ ಇನ್ನೂ ಕೆಲವು ಪ್ರಶ್ನೆಗಳನ್ನು ಕೇಳಿದೆನು. ಅದಕ್ಕೆ ಆ ಬ್ರಾಹ್ಮಣನು ಉತ್ತರ ಕೊಟ್ಟಂತೆಯೇ ಮುಂದೆ ನಡೆಯಿತು. ಒಂದೂ ಸುಳ್ಳಾಗಲಿಲ್ಲ (11). ಒಂದು ಸಲ, ನಕುಲ, ನೀನೀಗ ಕೇಳಿದ ಪ್ರಶ್ನೆಯನ್ನೇ ನಾನು ಆ ಬ್ರಾಹ್ಮಣನಿಗೆ ಹಾಕಿದೆನು. ಆಗ ಕಳಿಂಗ ದೇಶದ ಆ ವಿಪ್ರನು ಜನ್ಮಾಂತರಸ್ಮರಣೆಯಿದ್ದ ಮುನಿಯ ಮಾತನ್ನು ಸ್ಮರಿಸಿ ಕೊಂಡು ಹೀಗೆಂದನು: "ಭೀಷ್ಮ, ಜಾತಿಸ್ಮರನಾದ ಆ ಮುನಿಯು ಒಂದು ಪರಮರಹಸ್ಯವನ್ನು ನನಗೆ ಹೇಳಿದ್ದಾನೆ. ಯಮನಿಗೂ ಆತನ ದೂತನಿಗೂ ನಡೆದ ಸಂವಾದವದು. ಅದನ್ನು ನಿನಗೆ ಹೇಳುತ್ತೇನೆ" (12-13) ಎಂದು ನುಡಿದು, ಕಳಿಂಗದೇಶದ ವಿಪ್ರನು ಹೇಳಿದ್ದೇನೆಂದರೆ: ಯಮನು ಪಾಶಹಸ್ತ ನಾಗಿದ್ದ ತನ್ನ ಸೇವಕನನ್ನು ನೋಡಿ, ಆತನ ಕಿವಿಯಲ್ಲಿ ಹೀಗೆ ನುಡಿದನು

**ಅಹಮಮರವರಾರ್ಚಿತೇನ ಧಾತ್ರಾ**
**ಯಮ ಇತಿ ಲೋಕಹಿತಾಹಿತೇ ನಿಯುಕ್ತಃ।**
**ಹರಿಗುರುವಶಗೋಽಸ್ಮಿ ನ ಸ್ವತಂತ್ರಃ**
**ಪ್ರಭವತಿ ಸಂಯಮನೇ ಮಮಾಪಿ ವಿಷ್ಣುಃ॥** 15

**ಕಟಕಮುಕುಟಕರ್ಣಿಕಾದಿಭೇದೈಃ**
**ಕನಕಮಭೇದಮಪೀಷ್ಯತೇ ಯಥೈಕಮ್।**
**ಸುರಪಶುಮನುಜಾದಿಕಲ್ಪನಾಭಿ-**
**ರ್ಹರಿರಖಿಲಾಭಿರುದೀರ್ಯತೇ ತಥೈಕಃ॥** 16

**ಕ್ಷಿತಿತಲಪರಮಾಣವೋಽನಿಲಾಂತೇ**
**ಪುನರುಪಯಾಂತಿ ಯಥೈಕತಾಂ ಧರಿತ್ರ್ಯಾಃ।**
**ಸುರಪಶುಮನುಜಾದಯಸ್ತಥಾಂತೇ**
**ಗುಣಕಲುಷೇಣ ಸನಾತನೇನ ತೇನ॥** 17

---

"ದೂತ, ಶ್ರೀ ವಿಷ್ಣುವಿಗೆ ಶರಣಾದ ಜನರನ್ನು ಬಿಟ್ಟುಬಿಡು. ವಿಷ್ಣು ಭಕ್ತರಲ್ಲದ ಜನರ ಮೇಲೆ ಮಾತ್ರ ನಾನು ಅಧಿಕಾರಿಯಾಗಿದ್ದೇನೆ (14). ದೇವೇಂದ್ರನಿಂದ ಪೂಜಿತನಾದ ಬ್ರಹ್ಮದೇವನು ಲೋಕದ ಪಾಪಪುಣ್ಯ ಗಳನ್ನು ನಿಯಮಿಸಬೇಕೆಂದು ನನ್ನನ್ನು ಯಮಪದವಿಯಲ್ಲಿ ನಿಯೋಜಿ ಸಿದ್ದಾನೆ. ನಾನಾದರೋ ಶ್ರೀಹರಿಯೆಂಬ ಗುರುವಿಗೆ ಅಧೀನನಾದವನು, ಸ್ವತಂತ್ರನಲ್ಲ. ವಿಷ್ಣುವು ನನ್ನನ್ನೂ ನಿಯಂತ್ರಿಸಲು ಸಮರ್ಥನಾಗಿದ್ದಾನೆ (15). ಚಿನ್ನವು ಭೇದರಹಿತವಾಗಿ ಒಂದೇ ಆಗಿದ್ದರೂ ಬಳೆ, ಕಿರೀಟ, ಓಲೆ—ಮುಂತಾದ ಭೇದಗಳಿಂದ ನಾನಾ ರೂಪವಾಗಿ ಹೇಗೆ ತೋರು ವುದೋ, ಹಾಗೆ ಒಬ್ಬನೇ ಆದ ಶ್ರೀಹರಿಯು ದೇವತೆ, ಪಶು, ಮನುಷ್ಯ— ಮುಂತಾದ ಸಮಸ್ತ ಕಲ್ಪಿತಭೇದಗಳಿಂದ ನಾನಾ ರೂಪವಾಗಿ ತೋರುತ್ತಾನೆ (16). ಬೀಸುವ ಗಾಳಿಯು ಶಾಂತವಾದ ಮೇಲೆ ಭೂಮಿಯಿಂದ ಮೇಲೆದ್ದ ಧೂಳಿಯ ಕಣಗಳು ಭೂಮಿಯಲ್ಲಿ ಮತ್ತೆ ಸೇರಿ ಹೇಗೆ ಒಂದಾಗಿ ಬಿಡುತ್ತವೋ ಹಾಗೆ ಗುಣತ್ರಯಗಳ ಕ್ಷೋಭೆಯಿಂದ ಉಂಟಾದ ದೇವ, ಪಶು, ಮನುಷ್ಯಾದಿಗಳು ಕಡೆಯಲ್ಲಿ ಸನಾತನನಾದ ಪರಮಾತ್ಮನಲ್ಲಿ ಕೂಡಿ

**ಹರಿಮಮರವರಾರ್ಚಿತಾಂಘ್ರಿಪದ್ಮಂ**
**ಪ್ರಣಮತಿ ಯಃ ಪರಮಾರ್ಥತೋ ಹಿ ಮರ್ತ್ಯಃ।**
**ತಮಪಗತಸಮಸ್ತಪಾಪಬಂಧಂ**
**ವ್ರಜ ಪರಿಹೃತ್ಯ ಯಥಾಗ್ನಿಮಾಜ್ಯಸಿಕ್ತಮ್॥** 18

**ಇತಿ ಯಮವಚನಂ ನಿಶಮ್ಯ ಪಾಶೀ**
**ಯಮಪುರುಷಸ್ತಮುವಾಚ ಧರ್ಮರಾಜಮ್।**
**ಕಥಯ ಮಮ ವಿಭೋ ಸಮಸ್ತಧಾತು-**
**ರ್ಭವತಿ ಹರೇಃ ಖಲು ಯಾದೃಶೋಽಸ್ಯ ಭಕ್ತಃ॥** 19

*ಯಮ ಉವಾಚ:*

**ನ ಚಲತಿ ನಿಜವರ್ಣಧರ್ಮತೋ ಯಃ**
**ಸಮಮತಿರಾತ್ಮಸುಹೃದ್ವಿಪಕ್ಷಪಕ್ಷೇ।**
**ನ ಹರತಿ ನ ಚ ಹಂತಿ ಕಿಂಚಿದುಚ್ಚೈಃ**
**ಸಿತಮನಸಂ ತಮವೇಹಿ ವಿಷ್ಣುಭಕ್ತಮ್॥** 20

---

ಹೋಗುತ್ತಾರೆ (17). ದೇವೇಂದ್ರನಿಂದ ಅರ್ಚಿತವಾದ ಪಾದಪದ್ಮವುಳ್ಳ ಶ್ರೀಹರಿಯನ್ನು ಯಾವ ಮನುಷ್ಯನು ಪರಮಾರ್ಥ ಬುದ್ಧಿಯಿಂದ ನಮಸ್ಕರಿಸುತ್ತಾನೋ ಅವನು ಸಮಸ್ತ ಪಾಪಬಂಧಗಳಿಂದಲೂ ಬಿಡುಗಡೆ ಹೊಂದಿರುತ್ತಾನೆ. ಆದ್ದರಿಂದ, ದೂತ, ಆಜ್ಯಾಹುತಿಯಿಂದ ಪ್ರಜ್ವಲಿತವಾದ ಅಗ್ನಿಯಂತಿರುವ ಆ ಮನುಷ್ಯನನ್ನು ಬಿಟ್ಟು ದೂರ ಹೋಗು!" (18). ಈ ಪ್ರಕಾರವಾದ ಯಮನ ಮಾತನ್ನು ಕೇಳಿ ಪಾಶಧಾರಿಯಾಗಿದ್ದ ಯಮದೂತನು ಯಮಧರ್ಮರಾಜನನ್ನು ಕುರಿತು "ಸ್ವಾಮಿ, ಸಮಸ್ತ ವಸ್ತುಗಳಿಗೂ ವಿಧಾತನಾದ ಶ್ರೀಹರಿಯ ಭಕ್ತನು ಯಾರು, ಅವನು ಹೇಗಿರುತ್ತಾನೆ—ಎಂಬುದನ್ನು ತಿಳಿಸಬೇಕು" ಎಂದು ಕೇಳಿದನು (19). ಆಗ ಯಮನು ಹೀಗೆಂದನು: "ಯಾವಾತನು ತನ್ನ ವರ್ಣಧರ್ಮಗಳಿಂದ ವಿಚಲಿತನಾಗುವುದಿಲ್ಲವೋ, ತನ್ನ ಮಿತ್ರರಲ್ಲಿಯೂ, ಶತ್ರುಗಳಲ್ಲಿಯೂ ಸಮಭಾವದಿಂದ ನಡೆದುಕೊಳ್ಳುತ್ತಾನೋ, ಬಲಾತ್ಕಾರವಾಗಿ ಇನ್ನೊಬ್ಬರ ಸ್ವತ್ತನ್ನು ಅಪಹರಿಸುವುದಿಲ್ಲವೋ, ಯಾರನ್ನೂ ಹಿಂಸಿಸುವುದಿಲ್ಲವೋ ಶುದ್ಧ

ಕಲಿಕಲುಷಮಲೇನ ಯಸ್ಯ ನಾತ್ಮಾ
ವಿಮಲಮತೇರ್ಮಲಿನೀಕೃತಸ್ತಮೇನಮ್ ।
ಮನಸಿ ಕೃತಜನಾರ್ದನಂ ಮನುಷ್ಯಂ
ಸತತಮವೇಹಿ ಹರೇರತೀವಭಕ್ತಮ್ ॥ 21

ಕನಕಮಪಿ ರಹಸ್ಯವೇಕ್ಷ್ಯಬುದ್ಧ್ಯಾ
ತೃಣಮಿವ ಯಸ್ಸಮವೈತಿ ವೈ ಪರಸ್ವಮ್ ।
ಭವತಿ ಚ ಭಗವತ್ಯನನ್ಯ ಚೇತಾಃ
ಪುರುಷವರಂ ತಮವೇಹಿ ವಿಷ್ಣುಭಕ್ತಮ್ ॥ 22

ಸ್ಫಟಿಕಗಿರಿಶಿಲಾಮಲಃ ಕ್ವ ವಿಷ್ಣು-
ರ್ಮನಸಿ ನೃಣಾಂ ಕ್ವ ಚ ಮತ್ಸರಾದಿದೋಷಃ ।
ನ ಹಿ ತುಹಿನಮಯೂಖರಶ್ಮಿಪುಂಜೇ
ಭವತಿ ಹುತಾಶನದೀಪ್ತಿಜಃ ಪ್ರತಾಪಃ ॥ 23

ವಿಮಲಮತಿರಮತ್ಸರಃ ಪ್ರಶಾಂತ-
ಶ್ಶುಚಿಚರಿತೋಽಖಿಲಸತ್ತ್ವಮಿತ್ರಭೂತಃ ।

---

ಚಿತ್ತನಾದ ಆತನನ್ನು ವಿಷ್ಣುಭಕ್ತನೆಂದು ತಿಳಿ (20). ಯಾವ ನಿರ್ಮಲಚಿತ್ತನ ಮನಸ್ಸು ಕಲಿಕಲ್ಮಷವೆಂಬ ಮಲದಿಂದ ಮಲಿನವಾಗಿಲ್ಲವೋ, ಯಾವಾತನು ಹೃದಯದಲ್ಲಿ ವಿಷ್ಣುವನ್ನು ಸದಾ ಧ್ಯಾನಿಸುತ್ತಿರುವನೋ ಆತನನ್ನು ವಿಷ್ಣುವಿನ ಅಂತರಂಗಭಕ್ತನೆಂದು ತಿಳಿ (21). ಯಾರೂ ಇಲ್ಲದೆಡೆಯಲ್ಲಿ ಪರಕೀಯವಾದ ಬಂಗಾರವನ್ನು ಕಂಡರೂ ಅದೊಂದು ಹುಲ್ಲುಕಡ್ಡಿಯೋ ಎಂಬಂತೆ ಯಾವಾತನು ತನ್ನ ಬುದ್ಧಿಯಿಂದ ನಿರ್ಧರಿಸಿಕೊಳ್ಳುತ್ತಾನೋ, ಭಗವಂತನಲ್ಲಿ ಅನನ್ಯಚಿತ್ತನಾಗಿರುತ್ತಾನೋ ಅಲ್ಲಿ ಮಾತ್ಸರ್ಯಾದಿದೋಷವೆಲ್ಲಿಂದ ಬರುತ್ತದೆ? ಶೀತಕಿರಣನಾದ ಚಂದ್ರನ ರಶ್ಮಿಜಾಲದಲ್ಲಿ (ಬೆಳದಿಂಗಳಿನಲ್ಲಿ) ಅಗ್ನಿತೇಜದಿಂದಾಗುವ ಉರಿ ಇರುವುದಿಲ್ಲವಷ್ಟೇ! (22-23). ಯಾವ ಮನುಷ್ಯನು ಶುದ್ಧಚಿತ್ತನೂ ಮಾತ್ಸರ್ಯವಿಲ್ಲದವನೂ ಪ್ರಶಾಂತನೂ ಶುದ್ಧಾಚಾರನೂ ಸಕಲಪ್ರಾಣಿಗಳ ಮಿತ್ರನೂ ಪ್ರಿಯಹಿತವಚನನೂ ವಂಚನೆ

**ಪ್ರಿಯಹಿತವಚನೋಽಸ್ತಮಾನಮಾಯೋ**
**ವಸತಿ ಸದಾ ಹೃದಿ ತಸ್ಯ ವಾಸುದೇವಃ ॥** 24

**ವಸತಿ ಹೃದಿ ಸನಾತನೇ ಚ ತಸ್ಮಿನ್**
**ಭವತಿ ಪುಮಾಂಜಗತೋಽಸ್ಯ ಸೌಮ್ಯರೂಪಃ ।**
**ಕ್ಷಿತಿರಸಮತಿರಮ್ಯಮಾತ್ಮನೋಽಂತಃ ।**
**ಕಥಯತಿ ಚಾರುತಯೈವ ಶಾಲಪೋತಃ ॥** 25

**ಯಮನಿಯಮವಿಧೂತಕಲ್ಮಷಾಣಾ-**
**ಮನುದಿನಮಚ್ಯುತಸಕ್ತಮಾನಸಾನಾಮ್ ।**
**ಅಪಗತಮದಮಾನಮತ್ಸರಾಣಾಂ**
**ತ್ಯಜ ಭಟ ದೂರತರೇಣ ಮಾನವಾನಾಮ್ ॥** 26

**ಹೃದಿ ಯದಿ ಭಗವಾನನಾದಿರಾಸ್ತೇ**
**ಹರಿರಸಿಶಂಖಗದಾಧರೋಽವ್ಯಯಾತ್ಮಾ ।**
**ತದಘಮಘವಿಘಾತಕರ್ತೃಭಿನ್ನಂ**
**ಭವತಿ ಕಥಂ ಸತಿ ಚಾಂಧಕಾರಮರ್ಕೇ ॥** 27

---

ಯನ್ನರಿಯದವನೂ ಆಗಿರುತ್ತಾನೋ ಆತನ ಹೃದಯದಲ್ಲಿ ವಾಸುದೇವನು ಸದಾ ನೆಲೆಸಿರುತ್ತಾನೆ (24). ಸನಾತನನಾದ ವಾಸುದೇವನು ಹೃದಯದಲ್ಲಿ ನೆಲೆಸಲಾಗಿ, ಆ ಮನುಷ್ಯನು ಈ ಜಗತ್ತಿಗೆ ಸೌಮ್ಯರೂಪವಾಗಿ ಕಾಣಿಸುತ್ತಾನೆ. ತನ್ನೊಳಗೆ ಅತಿರಮ್ಯವಾದ ಪಾರ್ಥಿವರಸವಿದೆಯೆಂಬುದನ್ನು ಸಾಲವೃಕ್ಷದ ಸಸಿಯು ತನ್ನ ರಮಣೀಯತೆಯಿಂದಲೇ ಪ್ರಕಟಿಸುತ್ತದೆ (25). ಯಮನಿಯಮಗಳಿಂದ ಪಾಪವನ್ನು ತೊಡೆದುಹಾಕಿ, ಅನುದಿನವೂ ಅಚ್ಯುತನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ, ಮದಮಾನಮತ್ಸರಗಳಿಂದ ದೂರವಿರುವ ಮಾನವರನ್ನು, ಎಲೈ ಭಟನೆ, ಅತಿ ದೂರದಿಂದಲೇ ಬಿಟ್ಟು ಹೋಗು (26). ಅನಾದಿಯೂ ಅವ್ಯಯನೂ ಖಡ್ಗಶಂಖ ಗದಾಧರನೂ ಆದ ಭಗವಾನ್ ಶ್ರೀಹರಿಯು ಯಾವನ ಹೃದಯದಲ್ಲಿರುವನೋ ಆತನು ಪಾಪಿಯಲ್ಲ. ಪಾಪವಿಧ್ವಂಸಕನಾದ ಶ್ರೀಹರಿಯಿಂದ ಆತನ ಪಾಪವು

**ಹರತಿ ಪರಧನಂ ನಿಹಂತಿ ಜಂತೂನ್**
**ವದತಿ ತಥಾನೃತನಿಷ್ಠುರಾಣಿ ಯಶ್ಚ।**
**ಅಶುಭಜನಿತದುರ್ಮದಸ್ಯ ಪುಂಸಃ**
**ಕಲುಷಮತೇರ್ಹೃದಿ ತಸ್ಯ ನಾಸ್ತ್ಯನಂತಃ॥** 28

**ನ ಸಹತಿ ಪರಸಂಪದಂ ವಿನಿಂದಾಂ**
**ಕಲುಷಮತಿಃ ಕುರುತೇ ಸತಾಮಸಾಧುಃ।**
**ನ ಯಜತಿ ನ ದದಾತಿ ಯಶ್ಚ ಸಂತಂ**
**ಮನಸಿ ನ ತಸ್ಯ ಜನಾರ್ದನೋಽಧಮಸ್ಯ॥** 29

**ಪರಮಸುಹೃದಿ ಬಾಂಧವೇ ಕಲತ್ರೇ**
**ಸುತತನಯಾಪಿತೃಮಾತೃಭೃತ್ಯವರ್ಗೇ।**
**ಶಠಮತಿರುಪಯಾತಿ ಯೋಽರ್ಥತೃಷ್ಣಾಂ**
**ತಮಧಮಚೇಷ್ಟಮವೇಹಿ ನಾಸ್ಯ ಭಕ್ತಮ್॥** 30

---

ಧ್ವಸ್ತವಾಗಿರುತ್ತದೆ. ಸೂರ್ಯನು ಬೆಳಗುತ್ತಿರುವಾಗ ಕತ್ತಲೆ ಹೇಗೆ ಇದ್ದೀತು? (27). ಯಾವನು ಪರಧನವನ್ನು ಅಪಹರಿಸುವನೋ ಪ್ರಾಣಿಗಳನ್ನು ಕೊಲ್ಲುವನೋ ಸುಳ್ಳನ್ನು ಹೇಳುವನೋ ಕಠೋರವಾಕ್ಯಗಳನ್ನಾಡುವನೋ ಆತನು ಅಶುಭಕರ್ಮಗಳಿಂದ ಮದಾಂಧನೂ ದುಷ್ಟನೂ ಆಗಿದ್ದಾನೆಂದು ತಿಳಿಯಬೇಕು. ಅಂಥವನ ಹೃದಯದಲ್ಲಿ ಅನಂತನಾದ ಶ್ರೀಹರಿಯು ನೆಲೆಸುವುದಿಲ್ಲ (28). ಕಲುಷಮತಿಯಾದ ಯಾವ ದುರ್ಮಾರ್ಗಿಯು ಪರರ ಸಂಪತ್ತನ್ನು ನೋಡಿ ಸಹಿಸಲಾರನೋ, ಸಜ್ಜನರ ನಿಂದೆಯನ್ನು ಮಾಡುವನೋ, ಯಜ್ಞ ಮಾಡುವುದಿಲ್ಲವೋ, ಸತ್ಪುರುಷನಿಗೆ ದಾನ ಮಾಡುವುದಿಲ್ಲವೋ ಅಂತಹ ಅಧಮನ ಹೃದಯದಲ್ಲಿ ಜನಾರ್ದನನು ಇರುವುದಿಲ್ಲ (29). ಪರಮ ಮಿತ್ರ, ಬಾಂಧವ, ಮಡದಿ, ಮಗ, ಮಗಳು, ತಂದೆ, ತಾಯಿ ಮತ್ತು ಭೃತ್ಯವರ್ಗಗಳಲ್ಲಿ ಯಾವಾತನು ಕುತ್ಸಿತ ಬುದ್ಧಿಯುಳ್ಳವನಾಗಿ ಹಣದ ಆಸೆಯನ್ನು ಮಾತ್ರ ಇಟ್ಟುಕೊಂಡಿರುವನೋ ಅಂತಹ ದುರುಳನು ವಿಷ್ಣುಭಕ್ತನಲ್ಲವೆಂದು ತಿಳಿ (30). ದುರ್ಬುದ್ಧಿಯವನು, ಸದಾ ದುರ್ಮಾರ್ಗದಲ್ಲಿ ನಿರತನು, ಅನಾರ್ಯರಾದ

**ಅಶುಭಮತಿರಸತ್ಪ್ರವೃತ್ತಿ ಸಕ್ತ-**
**ಸ್ಸತತಮನಾರ್ಯಕುಶೀಲಸಂಗಮತ್ತಃ।**
**ಅನುದಿನಕೃತಪಾಪಬಂಧಯುಕ್ತಃ**
**ಪುರುಷಪಶುರ್ನ ಹಿ ವಾಸುದೇವಭಕ್ತಃ॥** 31

**ಸಕಲಮಿದಮಹಂ ಚ ವಾಸುದೇವಃ**
**ಪರಮಪುಮಾನ್‌ಪರಮೇಶ್ವರಸ್ಸ ಏಕಃ।**
**ಇತಿ ಮತಿರಚಲಾ ಭವತ್ಯನಂತೇ**
**ಹೃದಯಗತೇ ವ್ರಜ ತಾನ್ವಿಹಾಯ ದೂರಾತ್॥** 32

**ಕಮಲನಯನ ವಾಸುದೇವ ವಿಷ್ಣೋ**
**ಧರಣಿಧರಾಚ್ಯುತ ಶಂಖಚಕ್ರಪಾಣೇ।**
**ಭವಶರಣಮಿತೀರಯಂತಿ ಯೇ ವೈ**
**ತ್ಯಜ ಭಟ ದೂರತರೇಣ ತಾನಪಾಪಾನ್॥** 33

---

ದುಃಶೀಲರ ಸಹವಾಸದಿಂದ ಮದಿಸಿದವನು, ಪ್ರತಿದಿನವೂ ಒಂದಲ್ಲ ಒಂದು ಪಾಪಕಾರ್ಯವನ್ನು ಮಾಡತಕ್ಕವನು—ಇಂತಹ ನರಪಶುವು ಎಂದಿಗೂ ವಿಷ್ಣುಭಕ್ತನಲ್ಲ (31). 'ಈ ಎಲ್ಲ ವಿಶ್ವವೂ ನಾನೂ ವಾಸುದೇವನೇ. ಪರಮಪುರುಷನೂ ಪರಮೇಶ್ವರನೂ ಆದ ವಾಸುದೇವನು ಅದ್ವಿತೀಯನಾಗಿ ಒಬ್ಬನೇ ಇದ್ದಾನೆ' ಎಂದು ನಿಶ್ಚಲವಾದ ಬುದ್ಧಿಯು ಹೃದಯಗತನಾದ ಅನಂತನಲ್ಲಿ ಯಾರಿಗಿರುವುದೋ ಅವರನ್ನು ತ್ಯಜಿಸಿ ದೂರ ಹೊರಟುಹೋಗು (32). ಎಲೈ ಭಟನೆ, ಯಾರು 'ಹೇ ಕಮಲ ನಯನ, ವಾಸುದೇವ, ವಿಷ್ಣೋ, ಧರಣಿಧರ, ಅಚ್ಯುತ, ಶಂಖಚಕ್ರ ಪಾಣಿಯೆ, ನನಗೆ ಆಶ್ರಯದಾತನಾಗು' ಎಂದು ಹೇಳುತ್ತಿರುವರೋ ಅಂತಹ ಪುಣ್ಯಾತ್ಮರನ್ನು ದೂರದಲ್ಲಿ ಬಿಟ್ಟು ಹೊರಟುಹೋಗು (33). ಯಾವ ಪುರುಷಶ್ರೇಷ್ಠನ ಮನಸ್ಸಿನಲ್ಲಿ ಅವ್ಯಯನಾದ ವಿಷ್ಣುವು ನೆಲೆಸಿರುತ್ತಾನೋ ಆತನ ದೃಷ್ಟಿಪಥದಲ್ಲಿ ಹೋಗಲು ನನಗಾಗಲಿ ನಿನಗಾಗಲಿ ಗತಿಸಾಮರ್ಥ್ಯವೇ ಇಲ್ಲ. ನಮ್ಮ ಬಲವೀರ್ಯಗಳು ವಿಷ್ಣುಚಕ್ರದಿಂದ

**ವಸತಿ ಮನಸಿ ಯಸ್ಯ ಸೋಽವ್ಯಯಾತ್ಮಾ**
**ಪುರುಷವರಸ್ಯ ನ ತಸ್ಯ ದೃಷ್ಟಿಪಾತೇ।**
**ತವ ಗತಿರಥವಾ ಮಮಾಸ್ತಿ ಚಕ್ರ-**
**ಪ್ರತಿಹತವೀರ್ಯಬಲಸ್ಯ ಸೋಽನ್ಯಲೋಕ್ಯಃ॥ 34**

*ಕಾಲಿಂಗ ಉವಾಚ:*

**ಇತಿ ನಿಜಭಟಶಾಸನಾಯ ದೇವೋ**
**ರವಿತನಯಸ್ಸ ಕಿಲಾಹ ಧರ್ಮರಾಜಃ।**
**ಮಮ ಕಥಿತಮಿದಂ ಚ ತೇನ ತುಭ್ಯಂ**
**ಕುರುವರ ಸಮ್ಯಗಿದಂ ಮಯಾಪಿ ಚೋಕ್ತಮ್॥ 35**

*ಶ್ರೀಭೀಷ್ಮ ಉವಾಚ:*

**ನಕುಲೈತನ್ಮಮಾಖ್ಯಾತಂ ಪೂರ್ವಂ ತೇನ ದ್ವಿಜನ್ಮನಾ।**
**ಕಲಿಂಗದೇಶಾದಭ್ಯೇತ್ಯ ಪ್ರೀತೇನ ಸುಮಹಾತ್ಮನಾ॥ 36**

**ಮಯಾಪ್ಯೇತದ್ಯಥಾನ್ಯಾಯಂ ಸಮ್ಯಗ್ವತ್ಸ ತವೋದಿತಮ್।**
**ಯಥಾ ವಿಷ್ಣುಮೃತೇ ನಾನ್ಯತ್ತ್ರಾಣಂ ಸಂಸಾರಸಾಗರೇ॥ 37**

---

ಪ್ರತಿಹತವಾಗಿಬಿಡುತ್ತವೆ. ಆ ಪುರುಷಶ್ರೇಷ್ಠನು ವೈಕುಂಠಾದಿ ಲೋಕಗಳಿಗೆ ಹೋಗತಕ್ಕವನು" (34). ಈ ರೀತಿಯಾಗಿ ಸೂರ್ಯಪುತ್ರನಾದ ಯಮಧರ್ಮರಾಜನು ತನ್ನ ಭಟರನ್ನು ನಿಯಂತ್ರಿಸುವುದಕ್ಕಾಗಿ ಹೇಳಿದ್ದಾನಂತೆ. ಈ ವಿಷಯವನ್ನು ಜಾತಿಸ್ಮರನಾದ ಮುನಿಯು ನನಗೆ ಹೇಳಿದನು. ಹೇ ಭೀಷ್ಮ, ಇದನ್ನು ನಾನೂ ಸಹ ನಿನಗೆ ಹೇಳಿದ್ದೇನೆ" (35). ನಕುಲ, ಈ ಪ್ರಕಾರವಾಗಿ ಹಿಂದೆ ಕಳಿಂಗ ದೇಶದಿಂದ ಬಂದಿದ್ದ ಮಹಾತ್ಮನಾದ ವಿಪ್ರನು ಸಂತುಷ್ಟನಾಗಿ ನನಗೆ ತಿಳಿಸಿದ್ದನು. ವತ್ಸ-ನಕುಲ, ಅದೇ ಪ್ರಕಾರ ನಾನೂ ಸಹ ಈ ವಿಷಯವನ್ನು ಸ್ಪಷ್ಟವಾಗಿ ನಿನಗೆ ತಿಳಿಸಿದ್ದೇನೆ. ಈ ಸಂಸಾರ ಸಾಗರದಲ್ಲಿ ವಿಷ್ಣುವನ್ನು ಬಿಟ್ಟರೆ ಇನ್ನೊಬ್ಬ ರಕ್ಷಕನಿಲ್ಲ (36-37). ಯಾವನ ಹೃದಯವು ನಿರಂತರವಾಗಿ ಭಗವಂತನನ್ನು ಧ್ಯಾನಿಸು

**ಕಿಂಕರಾಃ ಪಾಶದಂಡಾಶ್ಚ ನ ಯಮೋ ನ ಚ ಯಾತನಾಃ।**
**ಸಮರ್ಥಾಸ್ತಸ್ಯ ಯಸ್ಯಾತ್ಮಾ ಕೇಶವಾಲಂಬನಸ್ಸದಾ॥** 38

*ಶ್ರೀಪರಾಶರ ಉವಾಚ:*

**ಏತನ್ಮುನೇ ಸಮಾಖ್ಯಾತಂ ಗೀತಂ ವೈವಸ್ವತೇನ ಯತ್।**
**ತ್ವತ್ಪ್ರಶ್ನಾನುಗತಂ ಸಮ್ಯಕ್ಕಿಮನ್ಯತ್ಶ್ರೋತುಮಿಚ್ಛಸಿ॥** 39

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಸಪ್ತಮೋಽಧ್ಯಾಯಃ

---

ತ್ತಿರುವುದೋ ಆತನನ್ನು ಯಮಕಿಂಕರರಾಗಲಿ, ಪಾಶದಂಡಗಳಾಗಲಿ, ಯಮನಾಗಲಿ, ಯಮಯಾತನೆಗಳಾಗಲಿ ಏನೂ ಮಾಡಲಾರವು" (38). ಮೈತ್ರೇಯ, ನಿನ್ನ ಪ್ರಶ್ನೆಯನ್ನನುಸರಿಸಿ ಯಮನು ಹೇಳಿದ್ದನ್ನು ನಿನಗೆ ತಿಳಿಸಿದ್ದೇನೆ. ಇನ್ನೇನನ್ನು ಕೇಳಲು ಬಯಸುವೆ? (39).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಏಳನೆಯ ಅಧ್ಯಾಯ ಮುಗಿಯಿತು.



## ಅಷ್ಟಮೋಽಧ್ಯಾಯಃ

*ಶ್ರೀಮೈತ್ರೇಯ ಉವಾಚ:*

**ಭಗವನ್ ಭಗವಾನ್ ದೇವಃ ಸಂಸಾರವಿಜಿಗೀಷುಭಿಃ।**
**ಸಮಾಖ್ಯಾಹಿ ಜಗನ್ನಾಥೋ ವಿಷ್ಣುರಾರಾಧ್ಯತೇ ಯಥಾ॥** 1

**ಆರಾಧಿತಾಶ್ಚ ಗೋವಿಂದಾದಾರಾಧನಪರೈರ್ನರೈಃ।**
**ಯತ್ಪ್ರಾಪ್ಯತೇ ಫಲಂ ಶ್ರೋತುಂ ತಚ್ಚೇಚ್ಛಾಮಿ ಮಹಾಮುನೇ॥** 2

*ಶ್ರೀಪರಾಶರ ಉವಾಚ:*

**ಯತ್ ಪೃಚ್ಛತಿ ಭವಾನೇತತ್ಸಗರೇಣ ಮಹಾತ್ಮನಾ।**
**ಔರ್ವಃ ಪ್ರಾಹ ಯಥಾ ಪೃಷ್ಟಸ್ತಸ್ಮೈ ನಿಗದತಶ್ಶೃಣು॥** 3

---

## ಅಧ್ಯಾಯ 8

ವಿಷ್ಣುವಿನ ಆರಾಧನ ಕ್ರಮ. ಆರಾಧನೆಯ ಫಲ. ಚಾತುರ್ವರ್ಣ್ಯದ ಧರ್ಮ.

ಮೈತ್ರೇಯರು ಪರಾಶರಮುನಿಗಳನ್ನು ಕುರಿತು “ಭಗವನ್, ಸಂಸಾರವನ್ನು ಗೆದ್ದು ದಾಟಬೇಕೆಂದು ಬಯಸತಕ್ಕವರು ಜಗನ್ನಾಥನಾದ ಭಗವಾನ್ ವಿಷ್ಣುದೇವನನ್ನು ಯಾವ ರೀತಿ ಆರಾಧಿಸಬೇಕೆಂಬುದನ್ನು ಹೇಳಿರಿ. ಅಲ್ಲದೆ, ಮಹರ್ಷಿಗಳೆ, ಆರಾಧಿಸತಕ್ಕ ಭಕ್ತಜನರು ಆರಾಧಿತನಾದ ಗೋವಿಂದನಿಂದ ಯಾವ ಫಲವನ್ನು ಪಡೆಯುತ್ತಾರೆ ಎಂಬುದನ್ನೂ ಕೇಳಲು ಬಯಸುತ್ತೇನೆ” ಎಂದರು (1-2). ಪರಾಶರರು ಹೇಳಿದರು: ಮೈತ್ರೇಯ, ನೀನು ಕೇಳುತ್ತಿರುವುದನ್ನು ಮಹಾತ್ಮನಾದ ಸಗರನು ಔರ್ವನನ್ನು ಕುರಿತು ಕೇಳಿದ್ದನ್ನು. ಆಗ ಔರ್ವನು ಹೇಳಿದ್ದನ್ನು ನಿನಗೆ ಹೇಳುತ್ತೇನೆ, ಕೇಳು (3). ಸಗರ ಚಕ್ರವರ್ತಿಯು ಭೃಗುವಂಶದ ಔರ್ವಮುನಿಗೆ ನಮಸ್ಕಾರ ಮಾಡಿ ವಿಷ್ಣುವಿನ ಆರಾಧನ ಮಾರ್ಗವನ್ನೂ

**ಸಗರಃ ಪ್ರಣಿಪತ್ಯೈನಮೌರ್ವಂ ಪಪ್ರಚ್ಛ ಭಾರ್ಗವಮ್।**
**ವಿಷ್ಣೋರಾರಾಧನೋಪಾಯಸಂಬಂಧಂ ಮುನಿಸತ್ತಮ॥ 4**

**ಫಲಂ ಚಾರಾಧಿತೇ ವಿಷ್ಣೌ ಯತ್ಪುಂಸಾಮಭಿಜಾಯತೇ।**
**ಸ ಚಾಹ ಪೃಷ್ಟೋ ಯತ್ನೇನ ತಸ್ಮೈ ತನ್ಮೇಽಖಿಲಂ ಶೃಣು॥ 5**

*ಔರ್ವ ಉವಾಚ:*

**ಭೌಮಂ ಮನೋರಥಂ ಸ್ವರ್ಗಂ ಸ್ವರ್ಗಿವಂದ್ಯಂ ಚ ಯತ್ಪದಮ್।**
**ಪ್ರಾಪ್ನೋತ್ಯಾರಾಧಿತೇ ವಿಷ್ಣೌ ನಿರ್ವಾಣಮಪಿ ಚೋತ್ತಮಮ್॥ 6**

**ಯದ್ಯದಿಚ್ಛತಿ ಯಾವಚ್ಚ ಫಲಮಾರಾಧಿತೇಽಚ್ಯುತೇ।**
**ತತ್ತದಾಪ್ನೋತಿ ರಾಜೇಂದ್ರ ಭೂರಿ ಸ್ವಲ್ಪಮಥಾಪಿ ವಾ॥ 7**

**ಯತ್ತು ಪೃಚ್ಛಸಿ ಭೂಪಾಲ ಕಥಾಮಾರಾಧ್ಯತೇ ಹರಿಃ।**
**ತದಹಂ ಸಕಲಂ ತುಭ್ಯಂ ಕಥಯಾಮಿ ನಿಬೋಧ ಮೇ॥ 8**

---

ಹಾಗೆ ಆರಾಧಿಸಿದ್ದರಿಂದ ಜನರಿಗೆ ದೊರೆಯುವ ಫಲವನ್ನೂ ಹೇಳಬೇಕೆಂದು ಕೇಳಿದನು. ಅದಕ್ಕೆ ಔರ್ವನು ಶ್ರಮವಹಿಸಿ ಹೇಳಿದ ಉತ್ತರವೆಲ್ಲವನ್ನೂ ಹೇಳುತ್ತೇನೆ, ಕೇಳು (4-5). ಔರ್ವನು ಹೇಳಿದ್ದೇನೆಂದರೆ: "ವಿಷ್ಣುವನ್ನು ಆರಾಧಿಸಿದರೆ ಈ ಭೂಮಂಡಲದಲ್ಲಿ ದೊರಕಬಹುದಾದ ಸಕಲ ಮನೋರಥವೂ ಸ್ವರ್ಗವೂ ಸ್ವರ್ಗವಾಸಿಗಳಿಗೆ ಸಹ ಪೂಜ್ಯವಾದ ಬ್ರಹ್ಮಪದವೂ ಸರ್ವೋತ್ತಮವಾದ ಮೋಕ್ಷವೂ ಸಹ ಮಾನವನಿಗೆ ದೊರೆಯುತ್ತದೆ (6). ಮಹಾರಾಜ-ಸಗರ, ಮಾನವನು ಅಚ್ಯುತನನ್ನು ಆರಾಧಿಸಿದರೆ, ತಾನು ಏನೇನನ್ನು ಬಯಸುತ್ತಾನೋ, ಅದು ಅಲ್ಪವಾಗಿರಲಿ ಭೂರಿಯಾಗಿರಲಿ, ಅದನ್ನು ಪಡೆಯುತ್ತಾನೆ. ರಾಜೇಂದ್ರ, ಇನ್ನು ಶ್ರೀಹರಿಯನ್ನು ಹೇಗೆ ಆರಾಧಿಸಬೇಕೆಂದು ಕೇಳುತ್ತೀಯಲ್ಲ, ಅದೆಲ್ಲವನ್ನೂ ವಿವರಿಸುತ್ತೇನೆ, ತಿಳಿದುಕೊ (7-8). ಯಾವನು ವರ್ಣಾಶ್ರಮಾಚಾರವನ್ನು ಸರಿಯಾಗಿ ಪಾಲಿಸುತ್ತಾನೋ ಅವನು ವಿಷ್ಣುವನ್ನು ಆರಾಧಿಸುತ್ತಿದ್ದಾನೆ, ಎಂದು ತಿಳಿ. ಆ ಪರಮ ಪುರುಷನಿಗೆ ಸಂತೋಷವನ್ನುಂಟುಮಾಡುವ

**ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್।**
**ವಿಷ್ಣುರಾರಾಧ್ಯತೇ ಪಂಥಾ ನಾನ್ಯಸ್ತತ್ತೋಷಕಾರಕಃ॥** 9

**ಯಜನ್ ಯಜ್ಞಾನ್ ಯಜತ್ಯೇನಂ ಜಪತ್ಯೇನಂ ಜಪನ್ ನೃಪ।**
**ನಿಘ್ನನ್ನನ್ಯಾನ್ ಹಿನಸ್ತ್ಯೇನಂ ಸರ್ವಭೂತೋ ಯತೋ ಹರಿಃ॥** 10

**ತಸ್ಮಾತ್ ಸದಾಚಾರವತಾ ಪುರುಷೇಣ ಜನಾರ್ದನಃ।**
**ಆರಾಧ್ಯತೇ ಸ್ವವರ್ಣೋಕ್ತಧರ್ಮಾನುಷ್ಠಾನಕಾರಿಣಾ॥** 11

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚ ಪೃಥಿವೀಪತೇ।**
**ಸ್ವಧರ್ಮತತ್ಪರೋ ವಿಷ್ಣುಮಾರಾಧಯತಿ ನಾನ್ಯಥಾ॥** 12

**ಪರಾಪವಾದಂ ಪೈಶುನ್ಯಮನೃತಂ ಚ ನ ಭಾಷತೇ।**
**ಅನ್ಯೋದ್ವೇಗಕರಂ ವಾಪಿ ತೋಷ್ಯತೇ ತೇನ ಕೇಶವಃ॥** 13

**ಪರದಾರಪರದ್ರವ್ಯಪರಹಿಂಸಾಸು ಯೋ ರತಿಮ್।**
**ನ ಕರೋತಿ ಪುಮಾನ್ ಭೂಪ ತೋಷ್ಯತೇ ತೇನ ಕೇಶವಃ॥** 14

---

ಇನ್ನೊಂದು ದಾರಿ ಇಲ್ಲ (9). ಪೂಜಿಸತಕ್ಕವನು ವಿಷ್ಣುವನ್ನೇ ಪೂಜಿಸುತ್ತಾನೆ. ಜಪಿಸತಕ್ಕವನು ವಿಷ್ಣುನಾಮವನ್ನೇ ಜಪಿಸುತ್ತಾನೆ. ಅನ್ಯರನ್ನು ಪೀಡಿಸತಕ್ಕವನು ವಿಷ್ಣುವನ್ನೇ ಪೀಡಿಸುತ್ತಾನೆ. ಏಕೆಂದರೆ, ವಿಷ್ಣುವೇ ಸರ್ವಸ್ವರೂಪನಾಗಿದ್ದಾನೆ (10). ಆದ್ದರಿಂದ ತನ್ನ ವರ್ಣಾಶ್ರಮಗಳಿಗೆ ವಿಹಿತವಾದ ಧರ್ಮವನ್ನು ಅನುಷ್ಠಾನ ಮಾಡತಕ್ಕ ಸದಾಚಾರಶೀಲನಾದ ಪುರುಷನು ವಿಷ್ಣುವನ್ನು ಆರಾಧಿಸುತ್ತಲೇ ಇರುತ್ತಾನೆ—ಎಂದು ತಿಳಿಯಬೇಕು (11). ರಾಜ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಸ್ವಧರ್ಮತತ್ಪರರಾಗಿದ್ದರೆ ವಿಷ್ಣುವನ್ನು ಆರಾಧಿಸಿದಂತೆ, ಬೇರೆ ದಾರಿ ಇಲ್ಲ. ಪರನಿಂದೆ, ಚಾಡಿ, ಸುಳ್ಳು, ಇತರರಿಗೆ ಖೇದವಾಗುವ ಮಾತು—ಇವುಗಳನ್ನಾಡದಿದ್ದರೆ ಕೇಶವನ ಆರಾಧನೆಯಾಗುತ್ತದೆ (12-13). ಪರಸ್ತ್ರೀ, ಪರದ್ರವ್ಯ, ಪರಹಿಂಸೆ—ಇವುಗಳಲ್ಲಿ ಯಾವನು ಇಚ್ಛೆಯನ್ನು ತಳೆಯುವುದಿಲ್ಲವೋ, ರಾಜ, ಆ ಮನುಷ್ಯನಿಂದ ಕೇಶವನು ಸಂತುಷ್ಟನಾಗುತ್ತಾನೆ (14). ಯಾವ ಮನುಷ್ಯನು ಪ್ರಾಣಿಗಳನ್ನಾಗಲಿ, ಅನ್ಯ ವೃಕ್ಷಾದಿಸ್ಥಾವರಗಳನ್ನಾಗಲಿ

**ನ ತಾಡಯತಿ ನೋ ಹಂತಿ ಪ್ರಾಣಿನೋಽನ್ಯಾಂಶ್ಚ ದೇಹಿನಃ।**
**ಯೋ ಮನುಷ್ಯೋ ಮನುಷ್ಯೇಂದ್ರ ತೋಷ್ಯತೇ ತೇನ ಕೇಶವಃ॥**

**ದೇವದ್ವಿಜಗುರೂಣಾಂ ಚ ಶುಶ್ರೂಷಾಸು ಸದೋದ್ಯತಃ।**
**ತೋಷ್ಯತೇ ತೇನ ಗೋವಿಂದಃ ಪುರುಷೇಣ ನರೇಶ್ವರ॥** 16

**ಯಥಾತ್ಮನಿ ಚ ಪುತ್ರೇ ಚ ಸರ್ವಭೂತೇಷು ಯಸ್ತಥಾ।**
**ಹಿತಕಾಮೋ ಹರಿಸ್ತೇನ ಸರ್ವದಾ ತೋಷ್ಯತೇ ಸುಖಮ್॥** 17

**ಯಸ್ಯ ರಾಗಾದಿದೋಷೇಣ ನ ದೃಷ್ಟಂ ನೃಪ ಮಾನಸಮ್।**
**ವಿಶುದ್ಧ ಚೇತಸಾ ವಿಷ್ಣುಸ್ತೋಷ್ಯತೇ ತೇನ ಸರ್ವದಾ॥** 18

**ವರ್ಣಾಶ್ರಮೇಷು ಯೇ ಧರ್ಮಾಶ್ಶಾಸ್ತ್ರೋಕ್ತಾ ನೃಪಸತ್ತಮ।**
**ತೇಷು ತಿಷ್ಠನ್ನರೋ ವಿಷ್ಣುಮಾರಾಧಯತಿ ನಾನ್ಯಥಾ॥** 19

---

ಬಡಿಯುವುದಿಲ್ಲವೋ ಕಡಿಯುವುದಿಲ್ಲವೋ ಅವನಿಂದ, ನರೇಂದ್ರ, ಕೇಶವನು ಸಂತುಷ್ಟನಾಗುತ್ತಾನೆ (15). ದೇವ ದ್ವಿಜ ಗುರುಗಳ ಶುಶ್ರೂಷೆ ಯಲ್ಲಿ ಯಾವನು ಸದಾ ತೊಡಗಿರುತ್ತಾನೋ ಅವನು, ನರೇಶ್ವರ, ಗೋವಿಂದನನ್ನು ಸಂತೋಷಪಡಿಸುತ್ತಾನೆ. ತನ್ನ ಮತ್ತು ತನ್ನ ಪುತ್ರನ ಹಿತಚಿಂತನೆಯನ್ನು ಮಾಡುವಂತೆ ಯಾವ ಮನುಷ್ಯನು ಸಕಲಭೂತಗಳ ಹಿತಚಿಂತನೆಯನ್ನೂ ಸದಾ ಮಾಡುತ್ತಿರುವನೋ ಆತನು ಸುಲಭವಾಗಿ ಶ್ರೀಹರಿಯನ್ನು ಸಂತೋಷಪಡಿಸುವನು (16-17). ರಾಜ, ಯಾರ ಮನಸ್ಸು ರಾಗಾದಿದೋಷಗಳಿಂದ ಕಲುಷಿತವಾಗಿಲ್ಲವೋ ಅಂತಹ ಶುದ್ಧಚಿತ್ತನಿಂದ ವಿಷ್ಣುವು ಸದಾ ಆರಾಧಿತನಾಗುತ್ತಾನೆ. ವರ್ಣಾಶ್ರಮಗಳ ವಿಷಯದಲ್ಲಿ ಶಾಸ್ತ್ರವು ಯಾವ ಧರ್ಮಗಳನ್ನು ವಿಧಿಸಿದೆಯೋ ಅವುಗಳನ್ನು ಅನುಷ್ಠಾನಮಾಡುವುದರಿಂದ ವಿಷ್ಣುವು ಆರಾಧಿತನಾಗುತ್ತಾನೆ, ಬೇರೊಂದ ರಿಂದಲ್ಲ" ಎಂದನು (18-19). ಆಗ ಸಗರ ಚಕ್ರವರ್ತಿಯು "ದ್ವಿಜೋ ತ್ತಮರೆ, ಹಾಗಾದರೆ ನಾನು ವರ್ಣಧರ್ಮಗಳನ್ನೂ ಆಶ್ರಮಧರ್ಮಗಳನ್ನೂ ಪೂರ್ಣವಾಗಿ ತಿಳಿದುಕೊಳ್ಳಬೇಕೆಂದಿದ್ದೇನೆ. ಅವನ್ನು ನನಗೆ ಹೇಳಿರಿ"

*ಸಗರ ಉವಾಚ:*

**ತದಹಂ ಶ್ರೋತುಮಿಚ್ಛಾಮಿ ವರ್ಣಧರ್ಮಾನಶೇಷತಃ।**
**ತಥೈವಾಶ್ರಮಧರ್ಮಾಂಶ್ಚ ದ್ವಿಜವರ್ಯ ಬ್ರವೀಹಿ ತಾನ್॥ 20**

*ಔರ್ವ ಉವಾಚ:*

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಯಥಾಕ್ರಮಮ್।**
**ತ್ವಮೇಕಾಗ್ರಮತಿರ್ಭೂತ್ವಾ ಶೃಣು ಧರ್ಮಾನ್ ಮಯೋದಿತಾನ್॥**

**ದಾನಂ ದದ್ಯಾದ್ಯಜೇದ್ದೇವಾನ್ ಯಜ್ಞೈಃಸ್ವಾಧ್ಯಾಯತತ್ಪರಃ।**
**ನಿತ್ಯೋದಕೀ ಭವೇದ್ವಿಪ್ರಃ ಕುರ್ಯಾಚ್ಚಾಗ್ನಿಪರಿಗ್ರಹಮ್॥ 22**

**ವೃತ್ತ್ಯರ್ಥಂ ಯಾಜಯೇಚ್ಚಾನ್ಯಾನನ್ಯಾನಧ್ಯಾಪಯೇತ್ತಥಾ।**
**ಕುರ್ಯಾತ್ ಪ್ರತಿಗ್ರಹಾದಾನಂ ಶುಕ್ಲಾರ್ಥಾನ್ ನ್ಯಾಯತೋ ದ್ವಿಜಃ॥**

**ಸರ್ವಭೂತಹಿತಂ ಕುರ್ಯಾನ್ನಾಹಿತಂ ಕಸ್ಯಚಿದ್ ದ್ವಿಜಃ।**
**ಮೈತ್ರೀ ಸಮಸ್ತಭೂತೇಷು ಬ್ರಾಹ್ಮಣಸ್ಯೋತ್ತಮಂ ಧನಮ್॥ 24**

---

ಎಂದನು (20). ಆಗ ಔರ್ವಮುನಿಯು ಹೇಳಿದನು: "ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಮತ್ತು ಶೂದ್ರರ ಧರ್ಮಗಳನ್ನು ಯಥಾಕ್ರಮವಾಗಿ ನಿರೂಪಿಸುತ್ತೇನೆ. ಏಕಾಗ್ರಚಿತ್ತನಾಗಿ ಅದನ್ನು ಕೇಳು (21). ಬ್ರಾಹ್ಮಣನು ದಾನ ಮಾಡಬೇಕು. ದೇವತಾರ್ಚನೆ ಮಾಡಬೇಕು. ಯಜ್ಞವೇದಾಧ್ಯಯನಗಳಲ್ಲಿ ತತ್ಪರನಾಗಿರಬೇಕು. ಅವನು ನಿತ್ಯವೂ ಸ್ನಾನಮಾಡುತ್ತ ತರ್ಪಣಗಳನ್ನು ಕೊಡುತ್ತ ಇರಬೇಕಲ್ಲದೆ ಆಗ್ನ್ಯಾಧಾನಾದಿ ಕರ್ಮಗಳನ್ನು ಮಾಡಬೇಕು (22). ವಿಪ್ರನು ಜೀವನ ನಿರ್ವಾಹಕ್ಕಾಗಿ ಪೌರೋಹಿತ್ಯಾದಿ ಯಜ್ಞಕರ್ಮಗಳನ್ನು ನಿರ್ವಹಿಸಬಹುದು. ಜೀವನಕ್ಕಾಗಿ ಅಧ್ಯಾಪನ ವೃತ್ತಿಯನ್ನು ನಡೆಸಬಹುದು. ಹಾಗೆಯೇ ವಿಧಿವತ್ತಾಗಿ ಪರಿಶುದ್ಧ ಧನವನ್ನು ಪ್ರತಿಗ್ರಹವಾಗಿ ಸ್ವೀಕರಿಸಬಹುದು (23). ದ್ವಿಜನಾದವನು ಸರ್ವಭೂತಗಳಿಗೂ ಹಿತವನ್ನು ಆಚರಿಸಬೇಕಲ್ಲದೆ ಅಹಿತವನ್ನು ಯಾರಿಗೂ, ಎಂದಿಗೂ ಮಾಡತಕ್ಕದ್ದಲ್ಲ. ಸಮಸ್ತ ಪ್ರಾಣಿಗಳಲ್ಲಿ ಮೈತ್ರಿಯು ಬ್ರಾಹ್ಮಣನ ಉತ್ತಮ ಧನ. ಕಲ್ಲಿ

**ಗ್ರಾವ್ಣಿ ರತ್ನೇ ಚ ಪಾರಕ್ಯೇ ಸಮಬುದ್ಧಿರ್ಭವೇದ್ ದ್ವಿಜಃ।**
**ಋತಾವಭಿಗಮಃ ಪತ್ನ್ಯಾಂ ಶಸ್ಯತೇ ಚಾಸ್ಯ ಪಾರ್ಥಿವ॥** 25

**ದಾನಾನಿ ದದ್ಯಾದಿಚ್ಛಾತೋ ದ್ವಿಜೇಭ್ಯಃ ಕ್ಷತ್ರಿಯೋಽಪಿ ವಾ।**
**ಯಜೇಚ್ಚ ವಿವಿಧೈರ್ಯಜ್ಞೈರಧೀಯೀತ ಚ ಪಾರ್ಥಿವಃ॥** 26

**ಶಸ್ತ್ರಾಜೀವೋ ಮಹೀರಕ್ಷಾ ಪ್ರವರಾ ತಸ್ಯ ಜೀವಿಕಾ।**
**ತತ್ರಾಪಿ ಪ್ರಥಮಃ ಕಲ್ಪಃ ಪೃಥಿವೀಪರಿಪಾಲನಮ್॥** 27

**ಧರಿತ್ರೀಪಾಲನೇನೈವ ಕೃತಕೃತ್ಯಾ ನರಾಧಿಪಾಃ।**
**ಭವಂತಿ ನೃಪತೇರಂಶಾ ಯತೋ ಯಜ್ಞಾದಿಕರ್ಮಣಾಮ್॥** 28

**ದುಷ್ಟಾನಾಂ ಶಾಸನಾದ್ರಾಜಾ ಶಿಷ್ಟಾನಾಂ ಪರಿಪಾಲನಾತ್।**
**ಪ್ರಾಪ್ನೋತ್ಯಭಿಮತಾನ್‌ಲೋಕಾನ್ ವರ್ಣಸಂಸ್ಥಾಂ ಕರೋತಿ ಯಃ॥**

**ಪಾಶುಪಾಲ್ಯಂ ಚ ವಾಣಿಜ್ಯಂ ಕೃಷಿಂ ಚ ಮನುಜೇಶ್ವರ।**
**ವೈಶ್ಯಾಯ ಜೀವಿಕಾಂ ಬ್ರಹ್ಮಾ ದದೌ ಲೋಕಪಿತಾಮಹಃ॥** 30

---

ನಲ್ಲಿಯೂ ಪರಕೀಯರ ರತ್ನದಲ್ಲಿಯೂ ಬ್ರಾಹ್ಮಣನು ಸಮಾನ ದೃಷ್ಟಿಯನ್ನಿಟ್ಟಿರಬೇಕು. ರಾಜ, ಋತುಕಾಲದಲ್ಲಿ ಮಾತ್ರ ಪತ್ನಿಯೊಡನೆ ಸಂಗಮ ಪ್ರಶಸ್ತವಾದದ್ದು (24-25). ಕ್ಷತ್ರಿಯನಾದರೋ ತನ್ನ ಇಚ್ಛಾನುಸಾರವಾಗಿ ದ್ವಿಜರಿಗೆ ದಾನಗಳನ್ನೀಯಬೇಕು. ವಿವಿಧ ಯಜ್ಞಗಳನ್ನಾಚರಿಸಬೇಕು. ವೇದಾಧ್ಯಯನಮಾಡಬೇಕು. ಶಸ್ತ್ರಧಾರಣೆ ಮಾಡಿ ಯುದ್ಧ ಮಾಡುವುದು ಮತ್ತು ರಾಜ್ಯ ರಕ್ಷಣೆ—ಇವು ಕ್ಷತ್ರಿಯನಿಗೆ ಪ್ರಶಸ್ತವಾದ ಜೀವನವೃತ್ತಿಗಳು. ಅದರಲ್ಲಿಯೂ ರಾಜ್ಯರಕ್ಷಣೆಯು ಉತ್ಕೃಷ್ಟತರವಾದದ್ದು (26-27). ಏಕೆಂದರೆ, ರಾಜ್ಯಪಾಲನೆಯಿಂದಲೇ ರಾಜರು ಕೃತಕೃತ್ಯರಾಗುತ್ತಾರೆ. ರಾಜ್ಯದಲ್ಲಿ ನಡೆಯುವ ಯಜ್ಞಾದಿಕರ್ಮಗಳ ಪುಣ್ಯಾಂಶಗಳು ರಾಜನಿಗೆ ಸೇರುತ್ತವೆ (28). ಯಾವ ರಾಜನು ವರ್ಣಧರ್ಮಗಳನ್ನು ರಾಜ್ಯದಲ್ಲಿ ನೆಲೆಗೊಳಿಸಿ ದುಷ್ಟರನ್ನು ದಂಡಿಸಿ ಶಿಷ್ಟರನ್ನು ಪರಿಪಾಲಿಸುತ್ತಾನೋ ಅವನು ಅಭೀಷ್ಟಲೋಕಗಳನ್ನು ಪಡೆಯುತ್ತಾನೆ (29). ಮಹಾರಾಜ, ಪಶುಪಾಲನೆ ವಾಣಿಜ್ಯ ಕೃಷಿ—ಇವನ್ನು ಲೋಕಪಿತಾಮಹನಾದ ಬ್ರಹ್ಮನು ಜೀವನವೃತ್ತಿ

**ತಸ್ಯಾಪ್ಯಧ್ಯಯನಂ ಯಜ್ಞೋ ದಾನಂ ಧರ್ಮಶ್ಚ ಶಸ್ಯತೇ।**
**ನಿತ್ಯನೈಮಿತ್ತಿಕಾದೀನಾಮನುಷ್ಠಾನಂ ಚ ಕರ್ಮಣಾಮ್॥ 31**

**ದ್ವಿಜಾತಿಸಂಶ್ರಿತಂ ಕರ್ಮ ತಾದರ್ಥ್ಯಂ ತೇನ ಪೋಷಣಮ್।**
**ಕ್ರಯವಿಕ್ರಯಜೈರ್ವಾಪಿ ಧನೈಃ ಕಾರೂದ್ಭವೇನ ವಾ॥ 32**

**ಶೂದ್ರಸ್ಯ ಸನ್ನತಿಶ್ಶೌಚಂ ಸೇವಾ ಸ್ವಾಮಿನ್ಯಮಾಯಯಾ।**
**ಅಮಂತ್ರಯಜ್ಞೋ ಹ್ಯಸ್ತೇಯಂ ತತ್ಸಂಗೋ ವಿಪ್ರರಕ್ಷಣಮ್॥ 33**

**ದಾನಂ ಚ ದದ್ಯಾಚ್ಛೂದ್ರೋಽಪಿ ಪಾಕಯಜ್ಞೈರ್ಯಜೇತ ಚ।**
**ಪಿತ್ರ್ಯಾದಿಕಂ ಚ ತತ್ಸರ್ವಂ ಶೂದ್ರಃ ಕುರ್ವೀತ ತೇನ ವೈ॥ 34**

**ಭೃತ್ಯಾದಿಭರಣಾರ್ಥಾಯ ಸರ್ವೇಷಾಂ ಚ ಪರಿಗ್ರಹಃ।**
**ಋತುಕಾಲೇಽಭಿಗಮನಂ ಸ್ವದಾರೇಷು ಮಹೀಪತೇ॥ 35**

---

ಗಳಿಂದು ವೈಶ್ಯನಿಗೆ ಗೊತ್ತು ಮಾಡಿದನು. ವೈಶ್ಯನಿಗೆ ವೇದಾಧ್ಯಯನ, ಯಜ್ಞ, ದಾನಗಳು ಪ್ರಶಸ್ತ ಧರ್ಮಗಳು. ನಿತ್ಯನೈಮಿತ್ತಿಕಾದಿ ಕರ್ಮಗಳ ಅನುಷ್ಠಾನವೂ ಆತನ ಧರ್ಮ (30-31). ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ದ್ವಿಜಾತಿಗಳಿಗೋಸ್ಕರ ಕೆಲಸ ಮಾಡುವುದೂ ಅದರಿಂದ ತನ್ನನ್ನು ಪೋಷಿಸಿ ಕೊಳ್ಳುವುದೂ ಶೂದ್ರನ ಧರ್ಮವಾಗಿರುತ್ತದೆ. ಅಥವಾ ಕ್ರಯವಿಕ್ರಯ ಗಳಿಂದಲೂ ಶಿಲ್ಪಕರ್ದಿಂದಲೂ ಬರುವ ಧನವನ್ನು ಆತನು ಬಳಸಬಹುದು (32). ವಿನಯ, ಶುಚಿತ್ವ, ನಿರ್ವಂಚನೆಯಿಂದ ಸ್ವಾಮಿಸೇವೆ, ವೇದಮಂತ್ರ ರಹಿತವಾದ ಯಜ್ಞ, ಅಸ್ತೇಯ, ವಿಪ್ರರಕ್ಷಣೆ—ಇವು ಶೂದ್ರನ ಕರ್ತವ್ಯಗಳು (33). ಶೂದ್ರನೂ ದಾನಮಾಡಬೇಕು. ಪಾಕಯಜ್ಞಗಳನ್ನು (ಅಮಂತ್ರಕವಾಗಿ) ನಡೆಸಬೇಕು. ಪಿತೃದೇವತಾಸಂಬಂಧಿಯಾದ ಕರ್ಮ ವನ್ನೂ ಆತನು ಮಾಡಬೇಕು (34). (ಈ ವಿಶೇಷ ಧರ್ಮಗಳಲ್ಲದೆ ನಾಲ್ಕು ವರ್ಣದವರೂ ಆಚರಿಸಬೇಕಾದ ಸಾಮಾನ್ಯ ಧರ್ಮಗಳುಂಟು. ಅವು ಯಾವುವೆಂದರೆ) ಆಶ್ರಿತರಾದ ಮಡದಿ ಮಕ್ಕಳು ಮೊದಲಾದವರ ಪೋಷಣೆಗಾಗಿ ನಾಲ್ಕು ವರ್ಣದವರೂ ಪ್ರತಿಗ್ರಹ ಮಾಡಬಹುದು. ಎಲ್ಲರಿಗೂ ಋತುಕಾಲದಲ್ಲಿ ತಮ್ಮ ಮಡದಿಯರ ಸಂಗ ವಿಹಿತವಾಗಿದೆ

**ದಯಾಸಮಸ್ತಭೂತೇಷು ತಿತಿಕ್ಷಾ ನಾತಿಮಾನಿತಾ।**
**ಸತ್ಯಂ ಶೌಚಮನಾಯಾಸೋ ಮಂಗಲಂ ಪ್ರಿಯವಾದಿತಾ॥ 36**

**ಮೈತ್ರ್ಯಸ್ಪೃಹಾ ತಥಾ ತದ್ವದಕಾರ್ಪಣ್ಯಂ ನರೇಶ್ವರ।**
**ಅನಸೂಯಾ ಚ ಸಾಮಾನ್ಯವರ್ಣಾನಾಂ ಕಥಿತಾ ಗುಣಾಃ॥ 37**

**ಆಶ್ರಮಾಣಾಂ ಚ ಸರ್ವೇಷಾಮೇತೇ ಸಾಮಾನ್ಯಲಕ್ಷಣಾಃ।**
**ಗುಣಾಂಸ್ತಥಾಪದ್ಧರ್ಮಾಂಶ್ಚ ವಿಪ್ರಾದೀನಾಮಿಮಾನ್ ಶೃಣು॥ 38**

**ಕ್ಷಾತ್ರಂ ಕರ್ಮ ದ್ವಿಜಸ್ಯೋಕ್ತಂ ವೈಶ್ಯಂ ಕರ್ಮ ತಥಾಪದಿ।**
**ರಾಜನ್ಯಸ್ಯ ಚ ವೈಶ್ಯೋಕ್ತಂ ಶೂದ್ರಕರ್ಮ ನ ಚೈತಯೋಃ॥ 39**

**ಸಾಮರ್ಥ್ಯೇ ಸತಿ ತತ್ತ್ಯಾಜ್ಯಮುಭಾಭ್ಯಾಮಪಿ ಪಾರ್ಥಿವ।**
**ತದೇವಾಪದಿ ಕರ್ತವ್ಯಂ ನ ಕುರ್ಯಾತ್ಕರ್ಮಸಂಕರಮ್॥ 40**

---

(35). ಸಮಸ್ತ ಪ್ರಾಣಿಗಳಲ್ಲಿಯೂ ದಯೆ, ತಾಳ್ಮೆ, ಅಹಂಕಾರರಾಹಿತ್ಯ, ಸತ್ಯ, ಶೌಚ, ತೃಪ್ತಿ, ಕಲ್ಯಾಣಕರವಾದ ನಡತೆ, ಪ್ರಿಯವಾದ ಸಂಭಾಷಣೆ, ಸ್ನೇಹ, ದುರಾಸೆಯಿಲ್ಲದಿರುವುದು, ಔದಾರ್ಯ, ಕರುಬದೆ ಇರುವುದು— ಇವು ಎಲ್ಲ ವರ್ಣದವರಿಗೂ ಹೇಳಿಸಿದ ಸಾಮಾನ್ಯ ಧರ್ಮಗಳು (36-37). ಇವುಗಳೇ ಬ್ರಹ್ಮಚರ್ಯಾದಿ ಸಮಸ್ತ ಆಶ್ರಮಗಳಿಗೂ ಇರಬೇಕಾದ ಸಾಮಾನ್ಯ ಗುಣಗಳು. ಇನ್ನು ಬ್ರಾಹ್ಮಣಾದಿಗಳ ಆಪದ್ಧರ್ಮಗಳನ್ನೂ ಗುಣ ಗಳನ್ನೂ ಆಲಿಸು (38). ಆಪತ್ಕಾಲದಲ್ಲಿ ಬ್ರಾಹ್ಮಣನು ಕ್ಷತ್ರಿಯ ಧರ್ಮವನ್ನೂ ವೈಶ್ಯಧರ್ಮವನ್ನೂ ಅನುಸರಿಸಬಹುದು. ಕ್ಷತ್ರಿಯನು ವೈಶ್ಯ ಕರ್ಮಗಳನ್ನು ಮಾಡಬಹುದು. ಆದರೆ ಬ್ರಾಹ್ಮಣ ಕ್ಷತ್ರಿಯರು ಶೂದ್ರವೃತ್ತಿ ಯನ್ನು ಮಾತ್ರ ನಡೆಸಬಾರದು (39). ಮಹಾರಾಜ, ಬೇರೆ ರೀತಿಯಲ್ಲಿ ನಿರ್ವಾಹಮಾಡಲು ಸಾಮರ್ಥ್ಯವಿದ್ದರೆ, ಇವರು ಆಪದ್ಧರ್ಮವನ್ನು ಅನುಸರಿಸಬಾರದು. ಆಪತ್ಕಾಲದಲ್ಲಿ ಮಾತ್ರ ಅನ್ಯರ ಕರ್ಮವನ್ನು ಮಾಡಬಹುದೇ ಹೊರತು ಸ್ವೇಚ್ಛೆಯಿಂದ ಕರ್ಮಸಾಂಕರ್ಯವನ್ನು ಮಾಡಬಾರದು (40). ಹೇ ಸಗರ ಮಹಾರಾಜ, ಈ ರೀತಿಯಾಗಿ

**ಇತ್ಯೇತೇ ಕಥಿತಾ ರಾಜನ್ ವರ್ಣಧರ್ಮಾ ಮಯಾ ತವ।**
**ಧರ್ಮಾನಾಶ್ರಮಿಣಾಂ ಸಮ್ಯಗ್‌ಬ್ರುವತೋ ಮೇ ನಿಶಾಮಯ ॥ 41**

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಅಷ್ಟಮೋಽಧ್ಯಾಯಃ

---

ವರ್ಣಧರ್ಮಗಳನ್ನು ಹೇಳಿದ್ದೇನೆ. ಇನ್ನು ಆಶ್ರಮಧರ್ಮಗಳನ್ನು ಹೇಳುವೆನು, ಸರಿಯಾಗಿ ಕೇಳು" (41).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಎಂಟನೆಯ ಅಧ್ಯಾಯ ಮುಗಿಯಿತು.



## ನವಮೋऽಧ್ಯಾಯಃ

*ಔರ್ವ ಉವಾಚ:*

**ಬಾಲಃ ಕೃತೋಪನಯನೋ ವೇದಾಹರಣ ತತ್ಪರಃ।**
**ಗುರುಗೇಹೇ ವಸೇದ್ ಭೂಪ ಬ್ರಹ್ಮಚಾರೀ ಸಮಾಹಿತಃ॥** 1

**ಶೌಚಾಚಾರವ್ರತಂ ತತ್ರ ಕಾರ್ಯಂ ಶುಶ್ರೂಷಣಂ ಗುರೋಃ।**
**ವ್ರತಾನಿ ಚರತಾ ಗ್ರಾಹ್ಯೋ ವೇದಶ್ಚ ಕೃತಬುದ್ಧಿನಾ॥** 2

**ಉಭೇ ಸಂಧ್ಯೇ ರವಿಂ ಭೂಪ ತಥೈವಾಗ್ನಿಂ ಸಮಾಹಿತಃ।**
**ಉಪತಿಷ್ಠೇತ್ತದಾ ಕುರ್ಯಾದ್ ಗುರೋರಪ್ಯಭಿವಾದನಮ್॥** 3

**ಸ್ಥಿತೇ ತಿಷ್ಠೇದ್ ವ್ರಜೇದ್ ಯಾತೇ ನೀಚೈರಾಸೀತ ಚಾಸತಿ।**
**ಶಿಷ್ಯೋ ಗುರೋರ್ನೃಪಶ್ರೇಷ್ಠ ಪ್ರತಿಕೂಲಂ ನ ಸಂಚರೇತ್॥** 4

---

### ಅಧ್ಯಾಯ 9

ಬ್ರಹ್ಮಚರ್ಯಾದಿ ಚತುರಾಶ್ರಮಗಳ ಧರ್ಮಗಳು

ಆಮೇಲೆ ಔರ್ವಮುನಿಯು ಹೀಗೆಂದನು: "ಮಹಾರಾಜ, ಬಾಲಕನು ಉಪನಯನ ಸಂಸ್ಕಾರವಾದಮೇಲೆ ವೇದಾಧ್ಯಯನದಲ್ಲಿ ತತ್ಪರನಾಗಿ ಗುರುಕುಲದಲ್ಲಿ ವಾಸಮಾಡಬೇಕು. ಆತನು ಬ್ರಹ್ಮಚಾರಿಯಾಗಿ ಸಾವಧಾನತೆಯಿಂದಿರಬೇಕು (1). ಅಲ್ಲಿ ಶೌಚವನ್ನೂ ಸದಾಚಾರವನ್ನೂ ವ್ರತವಾಗಿ ನಡೆಸುತ್ತ ಗುರುಶುಶ್ರೂಷೆಯನ್ನು ಮಾಡಬೇಕು. ತನ್ನ ವ್ರತ ಗಳನ್ನು ನಡೆಸುತ್ತ ಸ್ಥಿರಬುದ್ಧಿಯಿಂದ ವೇದವನ್ನು ಅಧ್ಯಯನಮಾಡಬೇಕು (2). ಎರಡು ಸಂಧ್ಯಾಕಾಲಗಳಲ್ಲಿಯೂ (ಪ್ರಾತಃಕಾಲ ಮತ್ತು ಸಾಯಂಕಾಲ) ಸೂರ್ಯಾಗ್ನಿಗಳನ್ನು ಸಮಾಹಿತನಾಗಿ ಉಪಸ್ಥಾನಮಾಡಿ ಗುರುವಿಗೆ ಅಭಿವಾದನೆಯನ್ನು ಮಾಡಬೇಕು (3). ಗುರುವು ನಿಂತಿದ್ದರೆ ಶಿಷ್ಯನು ನಿಂತಿರಬೇಕು. ಅವನು ಹೋದರೆ ಈತನೂ ಜೊತೆಗೆ ಹೋಗಬೇಕು. ಅವನು ಕುಳಿತರೆ ಕೆಳಬದಿಯಲ್ಲಿ ಈತನು ಕುಳಿತುಕೊಳ್ಳ

**ತೇನೈವೋಕ್ತಂ ಪಠೇದ್ವೇದಂ ನಾನ್ಯಚಿತ್ತಃ ಪುರಸ್ಸ್ಥಿತಃ।**
**ಅನುಜ್ಞಾತಶ್ಚ ಭಿಕ್ಷಾನ್ನಮಶ್ನೀಯಾದ್ ಗುರುಣಾ ತತಃ॥** 5

**ಅವಗಾಹೇದಪಃ ಪೂರ್ವಮಾಚಾರ್ಯೇಣಾವಗಾಹಿತಃ।**
**ಸಮಿಜ್ಜಲಾದಿಕಂ ಚಾಸ್ಯ ಕಲ್ಯಂ ಕಲ್ಯಮುಪಾನಯೇತ್॥** 6

**ಗೃಹೀತಗ್ರಾಹ್ಯವೇದಶ್ಚ ತತೋಽನುಜ್ಞಾಮವಾಪ್ಯ ಚ।**
**ಗಾರ್ಹಸ್ಥ್ಯಮಾವಿಶೇತ್ ಪ್ರಾಜ್ಞೋ ನಿಷ್ಪನ್ನಗುರುನಿಷ್ಕೃತಿಃ॥** 7

**ವಿಧಿನಾವಾಪ್ತದಾರಸ್ತು ಧನಂ ಪ್ರಾಪ್ಯ ಸ್ವಕರ್ಮಣಾ।**
**ಗೃಹಸ್ಥಕಾರ್ಯಮಖಿಲಂ ಕುರ್ಯಾದ್ ಭೂಪಾಲ ಶಕ್ತಿತಃ॥** 8

**ನಿವಾಪೇನ ಪಿತೄನರ್ಚನ್ ಯಜ್ಞೈರ್ದೇವಾಂಸ್ತಥಾತಿಥೀನ್।**
**ಅನ್ನೈರ್ಮುನೀಂಶ್ಚ ಸ್ವಾಧ್ಯಾಯೈರಪತ್ಯೇನ ಪ್ರಜಾಪತಿಮ್॥** 9

---

ಬೇಕು. ಶಿಷ್ಯನಾದವನು ಗುರುವಿಗೆ ಪ್ರತಿಕೂಲವಾಗಿ ಏನನ್ನೂ ಆಚರಿಸಬಾರದು (4). ಶಿಷ್ಯನು ಏಕಾಗ್ರಚಿತ್ತದಿಂದ ಎದುರಿಗೆ ಕುಳಿತು ಗುರುವಿನಿಂದಲೇ ಪಾಠಿತವಾದ ವೇದವನ್ನು ಪಠಿಸಬೇಕು. ಅನಂತರ ಗುರುವಿನ ಅನುಜ್ಞೆಯನ್ನು ಪಡೆದು ಭಿಕ್ಷಾನ್ನವನ್ನು ತಂದು ಊಟಮಾಡಬೇಕು (5). ಆಚಾರ್ಯನು ಮೊದಲು ಸ್ನಾನಮಾಡಿದ (ನದೀತಟಾಕಾದಿ) ಜಲದಲ್ಲಿ ಈತನು ಸ್ನಾನಮಾಡಬೇಕು. ಪ್ರತಿದಿನ ಪ್ರಾತಃಕಾಲದಲ್ಲಿ ಶಿಷ್ಯನು ಆಚಾರ್ಯನಿಗೆ ಬೇಕಾದ ಸಮಿತ್ತು, ಜಲಾದಿಗಳನ್ನು ತಂದುಕೊಡಬೇಕು (6). ಈ ರೀತಿಯಾಗಿ ಅಭಿಮತವೇದವನ್ನು ಕಲಿತಮೇಲೆ ಬ್ರಹ್ಮಚಾರಿಯು ಗುರುವಿನ ಅನುಜ್ಞೆಯನ್ನು ಪಡೆದು ಆತನಿಗೆ ಗುರುದಕ್ಷಿಣೆಯನ್ನರ್ಪಿಸಿದ ಮೇಲೆ ಗೃಹಸ್ಥಧರ್ಮವನ್ನು ಸ್ವೀಕರಿಸಬೇಕು (7). ಆತನು ವಿಧಿಪೂರ್ವಕವಾಗಿ ಪತ್ನಿಯನ್ನು ಪಡೆದು, ತನ್ನ ವೃತ್ತಿಯಿಂದ ಧನವನ್ನಾರ್ಜಿಸಿ ಸಕಲ ಗೃಹಸ್ಥಕಾರ್ಯಗಳನ್ನೂ ಯಥಾಶಕ್ತಿ ನಡೆಸುತ್ತಿರಬೇಕು (8). ಪಿಂಡಪ್ರದಾನ ತರ್ಪಣಗಳಿಂದ ಪಿತೃಗಳನ್ನೂ ಯಜ್ಞಗಳಿಂದ ದೇವತೆಗಳನ್ನೂ ಅನ್ನದಾನದಿಂದ ಅತಿಥಿಗಳನ್ನೂ ವೇದಾಧ್ಯಯನಗಳಿಂದ ಋಷಿಗಳನ್ನೂ ಸಂತಾನೋತ್ಪತ್ತಿಯಿಂದ ಪ್ರಜಾಪತಿಯಾದ ಬ್ರಹ್ಮನನ್ನೂ ಬಲಿಗಳಿಂದ

**ಭೂತಾನಿ ಬಲಿಭಿಶ್ಚೈವ ವಾತ್ಸಲ್ಯೇನಾಖಿಲಂ ಜಗತ್।**
**ಪ್ರಾಪ್ನೋತಿ ಲೋಕಾನ್ ಪುರುಷೋ ನಿಜಕರ್ಮಸಮಾರ್ಜಿತಾನ್॥**

**ಭಿಕ್ಷಾಭುಜಶ್ಚ ಯೇ ಕೇಚಿತ್ ಪರಿವ್ರಾಡ್ಬ್ರಹ್ಮಚಾರಿಣಃ।**
**ತೇಽಪ್ಯತ್ರೈವ ಪ್ರತಿಷ್ಠಂತೇ ಗಾರ್ಹಸ್ಥ್ಯಂ ತೇನ ವೈ ಪರಮ್॥** 11

**ವೇದಾಹರಣಕಾರ್ಯಾಯ ತೀರ್ಥಸ್ನಾನಾಯ ಚ ಪ್ರಭೋ।**
**ಅಟಂತಿ ವಸುಧಾಂ ವಿಪ್ರಾಃ ಪೃಥಿವೀದರ್ಶನಾಯ ಚ॥** 12

**ಅನಿಕೇತಾ ಹ್ಯನಾಹಾರಾ ಯತ್ರ ಸಾಯಂಗೃಹಾಶ್ಚ ಯೇ।**
**ತೇಷಾಂ ಗೃಹಸ್ಥಃ ಸರ್ವೇಷಾಂ ಪ್ರತಿಷ್ಠಾ ಯೋನಿರೇವ ಚ॥** 13

**ತೇಷಾಂ ಸ್ವಾಗತದಾನಾದಿ ವಕ್ತವ್ಯಂ ಮಧುರಂ ನೃಪ।**
**ಗೃಹಾಗತಾನಾಂ ದದ್ಯಾಚ್ಚ ಶಯನಾಸನಭೋಜನಮ್॥** 14

**ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ ಪ್ರತಿನಿವರ್ತತೇ।**
**ಸ ದತ್ವಾ ದುಷ್ಕೃತಂ ತಸ್ಮೈ ಪುಣ್ಯಮಾದಾಯ ಗಚ್ಛತಿ॥** 15

---

ಭೂತಗಣಗಳನ್ನೂ, ವಾತ್ಸಲ್ಯದಿಂದ ಸಮಸ್ತ ಜಗತ್ತನ್ನೂ ಸತ್ಕರಿಸುವ ಪುರುಷನು ತನ್ನ ಪುಣ್ಯಕರ್ಮದಿಂದ ಆರ್ಜಿಸಿದ ಉತ್ತಮ ಲೋಕಗಳನ್ನು ಪಡೆಯುತ್ತಾನೆ (9-10). ಭಿಕ್ಷಾನ್ನವನ್ನು ಭುಂಜಿಸುವ ಯಾವ ಸಂನ್ಯಾಸಿಗಳೂ ಬ್ರಹ್ಮಚಾರಿಗಳೂ ಇದ್ದಾರೋ ಅವರಿಗೆ ಗೃಹಸ್ಥಾಶ್ರಮವು ಆಶ್ರಯವನ್ನೀಯುತ್ತದೆ. ಆದ್ದರಿಂದ ಗೃಹಸ್ಥಾಶ್ರಮವು ಶ್ರೇಷ್ಠವಾದದ್ದು (11). ರಾಜ, ವೇದಾಧ್ಯಯನಕ್ಕಾಗಿಯೂ ತೀರ್ಥಸ್ನಾನಕ್ಕಾಗಿಯೂ ದೇಶವೀಕ್ಷಣೆಗಾಗಿಯೂ ವಿಪ್ರರು ಭೂಮಿಯಲ್ಲಿ ತಿರುಗುತ್ತ ಇರುತ್ತಾರೆ. ತಂಗಲು ಕೆಲವರಿಗೆ ವಾಸಸ್ಥಳವಿರುವುದಿಲ್ಲ, ಆಹಾರವಿರುವುದಿಲ್ಲ. ಎಲ್ಲಿ ಸಾಯಂಕಾಲವಾಗುತ್ತದೆಯೋ ಅಲ್ಲಿಯೇ ಉಳಿಯತಕ್ಕವರಾಗಿರುತ್ತಾರೆ. ಅವರೆಲ್ಲರಿಗೂ ಗೃಹಸ್ಥನೇ ಅವಲಂಬನ, ತಂದೆಯಂತಿರತಕ್ಕವನು (12-13). ಅಂತಹ ಜನರು ಮನೆಗೆ ಬಂದಾಗ, ಮಹಾರಾಜ, ಗೃಹಸ್ಥನು ಅವರನ್ನು ಸ್ವಾಗತಿಸಿ ಬೇಕಾದ್ದನ್ನು ಕೊಟ್ಟು ಮಧುರವಾಗಿ ಮಾತಾಡಬೇಕು. ಶಯನ, ಆಸನ, ಭೋಜನಗಳನ್ನು ನೀಡಬೇಕು (14). ಅತಿಥಿಯು ಯಾವ

**ಅವಜ್ಞಾನಮಹಂಕಾರೋ ದಂಭಶ್ಚೈವ ಗೃಹೇ ಸತಃ।**
**ಪರಿತಾಪೋಪಘಾತೌ ಚ ಪಾರುಷ್ಯಂ ಚ ನ ಶಸ್ಯತೇ॥ 16**

**ಯಸ್ತು ಸಮ್ಯಕ್ಕರೋತ್ಯೇವಂ ಗೃಹಸ್ಥಃ ಪರಮಂ ವಿಧಿಮ್।**
**ಸರ್ವಬಂಧವಿನಿರ್ಮುಕ್ತೋ ಲೋಕಾನಾಪ್ನೋತ್ಯನುತ್ತಮಾನ್॥ 17**

**ವಯಃ ಪರಿಣತೋ ರಾಜನ್ ಕೃತಕೃತ್ಯೋ ಗೃಹಾಶ್ರಮೀ।**
**ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ವನಂ ಗಚ್ಛೇತ್ಸಹೈವ ವಾ॥ 18**

**ಪರ್ಣಮೂಲಫಲಾಹಾರಃ ಕೇಶಶ್ಮಶ್ರುಜಟಾಧರಃ।**
**ಭೂಮಿಶಾಯೀ ಭವೇತ್ತತ್ರ ಮುನಿಸ್ಸರ್ವಾತಿಥಿರ್ನೃಪ॥ 19**

**ಚರ್ಮಕಾಶಕುಶೈಃ ಕುರ್ಯಾತ್ ಪರಿಧಾನೋತ್ತರೀಯಕೇ।**
**ತದ್ವತ್ತ್ರಿಷವಣಂ ಸ್ನಾನಂ ಶಸ್ತಮಸ್ಯ ನರೇಶ್ವರ॥ 20**

---

ಗೃಹದಿಂದ ನಿರಾಶನಾಗಿ ವಾಪಸು ಹೋಗುವನೋ ಆ ಗೃಹಸ್ಥನಿಗೆ ತನ್ನ ಪಾಪವನ್ನು ಕೊಟ್ಟು ಆತನ ಪುಣ್ಯವನ್ನು ಅವನು ಒಯ್ಯುತ್ತಾನೆ (15). ಅತಿಥಿಯನ್ನು ಅವಮಾನಗೊಳಿಸುವುದು, ಅಹಂಕಾರ, ದರ್ಪ, ಅತಿಥಿಯು ಬಂದನೆಂದು ಸಂಕಟಪಡುವುದು, ಹಿಂಸೆಪಡಿಸುವುದು, ಕಟುವಾದ ಮಾತಾಡುವುದು—ಇವು ಗೃಹಸ್ಥನಿಗೆ ಯೋಗ್ಯವಲ್ಲ (16). ಇವೆಲ್ಲವನ್ನೂ ತಿಳಿದು ಯಾವ ಗೃಹಸ್ಥನು ಶ್ರೇಷ್ಠವಾದ ತನ್ನ ಧರ್ಮವನ್ನು ಸರಿಯಾಗಿ ಆಚರಿಸುತ್ತಾನೋ ಅವನು ಸರ್ವಬಂಧಗಳಿಂದಲೂ ಮುಕ್ತನಾಗಿ ಅತ್ಯುತ್ತಮ ಲೋಕಗಳನ್ನು ಪಡೆಯುತ್ತಾನೆ (17). ವಯಸ್ಸಾದ ಮೇಲೆ ಗೃಹಸ್ಥಾಶ್ರಮಿಯು ತನ್ನ ಗೃಹಕೃತ್ಯಗಳನ್ನು ಮುಗಿಸಿ, ಪತ್ನಿಯನ್ನು ಪುತ್ರರ ಪಾಲನೆಗೆ ಒಪ್ಪಿಸಿ ವನಕ್ಕೆ ಹೊರಟುಹೋಗಬೇಕು. ಅಥವಾ ಪತ್ನೀಸಹಿತ ನಾಗಿ ವನಕ್ಕೆ ಹೋಗಬಹುದು (18). ವನದಲ್ಲಿ ಪತ್ರ ಮೂಲ ಫಲಗಳನ್ನು ಸೇವಿಸುತ್ತ ಕೂದಲನ್ನೂ ಗಡ್ಡಮೀಸೆಗಳನ್ನೂ ಬೆಳೆಸಿ ಜಟೆಯನ್ನು ಧರಿಸಿ ನೆಲದ ಮೇಲೆ ಮಲಗುತ್ತಿರಬೇಕು. ವನದಲ್ಲಿರುವ ಸರ್ವರನ್ನೂ ಅತಿಥಿ ಗಳೆಂದು ತಿಳಿಯಬೇಕು (19). ಚರ್ಮ, ಕಾಶ, ಕುಶಗಳಿಂದ ಉಡುವ ಮತ್ತು ಹೊದೆಯುವ ವಸ್ತ್ರಗಳನ್ನು ಮಾಡಿಕೊಳ್ಳಬೇಕು. ಸಗರಚಕ್ರವರ್ತಿ, ಆ ವಾನಪ್ರಸ್ಥನು ದಿನಕ್ಕೆ ಮೂರು ಸಲ ತ್ರಿಷವಣಸ್ನಾನ ಮಾಡುವುದು

**ದೇವತಾಭ್ಯರ್ಚನಂ ಹೋಮಸ್ಸರ್ವಾಭ್ಯಾಗತಪೂಜನಮ್।**
**ಭಿಕ್ಷಾ ಬಲಿಪ್ರದಾನಂ ಚ ಶಸ್ತಮಸ್ಯ ನರೇಶ್ವರ॥ 21**

**ವನ್ಯಸ್ನೇಹೇನ ಗಾತ್ರಾಣಾಮಭ್ಯಂಗಶ್ಚಾಸ್ಯ ಶಸ್ಯತೇ।**
**ತಪಶ್ಚ ತಸ್ಯ ರಾಜೇಂದ್ರ ಶೀತೋಷ್ಣಾದಿಸಹಿಷ್ಣುತಾ॥ 22**

**ಯಸ್ತ್ವೇತಾಂ ನಿಯತಶ್ಚರ್ಯಾಂ ವಾನಪ್ರಸ್ಥಶ್ಚರೇನ್ಮುನಿಃ।**
**ಸ ದಹತ್ಯಗ್ನಿವದ್ದೋಷಾಂಜಯೇಲ್ಲೋಕಾಂಶ್ಚ ಶಾಶ್ವತಾನ್॥ 23**

**ಚತುರ್ಥಾಶ್ಚಾಶ್ರಮೋ ಭಿಕ್ಷೋಃ ಪ್ರೋಚ್ಯತೇ ಯೋ ಮನೀಷಿಭಿಃ।**
**ತಸ್ಯ ಸ್ವರೂಪಂ ಗದತೋ ಮಮ ಶ್ರೋತುಂ ನೃಪಾರ್ಹಸಿ॥ 24**

**ಪುತ್ರದ್ರವ್ಯಕಲತ್ರೇಷು ತ್ಯಕ್ತಸ್ನೇಹೋ ನರಾಧಿಪ।**
**ಚತುರ್ಥಮಾಶ್ರಮಸ್ಥಾನಂ ಗಚ್ಛೇನ್ನಿರ್ಧೂತಮತ್ಸರಃ॥ 25**

**ತ್ರೈವರ್ಗಿಕಾಂಸ್ತ್ಯಜೇತ್ ಸರ್ವಾನಾರಂಭಾನವನೀಪತೇ।**
**ಮಿತ್ರಾದಿಷು ಸಮೋ ಮೈತ್ರಸ್ಸಮಸ್ತೇಷ್ವೇವ ಜಂತುಷು॥ 26**

---

ಪ್ರಶಸ್ತವಾದದ್ದು (20). ದೇವತಾರ್ಚನೆ, ಹೋಮ, ಅತಿಥಿ ಸತ್ಕಾರ, ಭಿಕ್ಷೆ, ಬಲಿಹರಣಗಳು ಆತನಿಗೆ ವಿಹಿತವಾದ ವಾನಪ್ರಸ್ಥ ಧರ್ಮಗಳು (21). ರಾಜೇಂದ್ರ, ಕಾಡಿನಲ್ಲಿ ದೊರೆಯುವ ಎಣ್ಣೆಯನ್ನು ಮೈಗೆ ಲೇಪಿಸಿಕೊಳ್ಳ ಬಹುದು. ಚಳಿ, ಸೆಕೆ—ಮೊದಲಾದವನ್ನು ಸಹಿಸಿಕೊಳ್ಳುವುದು ಅವನ ತಪಸ್ಸಾಗಿರುತ್ತದೆ (22). ವಾನಪ್ರಸ್ಥನಾದ ಯಾವ ಮುನಿಯು ನಿಯತಿ ಯಿಂದ ಈ ರೀತಿ ನಡೆದುಕೊಳ್ಳುತ್ತಾನೋ ಅವನು ಅಗ್ನಿಯಂತೆ ತನ್ನ ಕರ್ಮದೋಷಗಳನ್ನು ಸುಟ್ಟುಹಾಕಿ ಶಾಶ್ವತವಾದ ಪುಣ್ಯಲೋಕಗಳನ್ನು ಪಡೆಯುತ್ತಾನೆ (23). ರಾಜ, ಪಂಡಿತರು ಯಾವ ನಾಲ್ಕನೆಯ ಆಶ್ರಮ ವನ್ನು ಭಿಕ್ಷುವಿನ ಆಶ್ರಮ-ಸಂನ್ಯಾಸ ಎಂದು ಕರೆಯುತ್ತಾರೋ ಅದರ ಸ್ವರೂಪವನ್ನು ಹೇಳುತ್ತೇನೆ ಕೇಳು (24). ಮಕ್ಕಳು, ಆಸ್ತಿ, ಮಡದಿ— ಇವರಲ್ಲಿ ಸ್ನೇಹವನ್ನು ತೊರೆದವನು ಮಾತ್ಸರ್ಯವನ್ನು ದೂರಮಾಡಿ ನಾಲ್ಕನೆಯ ಆಶ್ರಮವನ್ನು ಸ್ವೀಕರಿಸಬೇಕು (25). ಧರ್ಮ, ಅರ್ಥ, ಕಾಮ —ಎಂಬ ತ್ರಿವರ್ಗಗಳಿಗೆ ಸಂಬಂಧಿಸಿದ ಸಮಸ್ತ ಕರ್ಮಗಳನ್ನೂ

**ಜರಾಯುಜಾಂಡಜಾದೀನಾಂ ವಾಙ್ಮನಃಕಾಯಕರ್ಮಭಿಃ।**
**ಯುಕ್ತಃ ಕುರ್ವೀತ ನ ದ್ರೋಹಂ ಸರ್ವಸಂಗಾಂಶ್ಚ ವರ್ಜಯೇತ್॥**

**ಏಕರಾತ್ರಸ್ಥಿತಿರ್ಗ್ರಾಮೇ ಪಂಚರಾತ್ರಸ್ಥಿತಿಃ ಪುರೇ।**
**ತಥಾ ತಿಷ್ಠೇದ್ಯಥಾ ಪ್ರೀತಿರ್ದ್ವೇಷೋ ವಾ ನಾಸ್ಯ ಜಾಯತೇ॥** 28

**ಪ್ರಾಣಯಾತ್ರಾನಿಮಿತ್ತಂ ಚ ವ್ಯಂಗಾರೇ ಭುಕ್ತವಜ್ಜನೇ।**
**ಕಾಲೇ ಪ್ರಶಸ್ತವರ್ಣಾನಾಂ ಭಿಕ್ಷಾರ್ಥಂ ಪರ್ಯಟೇದ್ ಗೃಹಾನ್॥**

**ಕಾಮಃ ಕ್ರೋಧಸ್ತಥಾ ದರ್ಪಮೋಹಲೋಭಾದಯಶ್ಚ ಯೇ।**
**ತಾಂಸ್ತು ಸರ್ವಾನ್ಪರಿತ್ಯಜ್ಯ ಪರಿವ್ರಾಡ್ ನಿರ್ಮಮೋ ಭವೇತ್॥** 30

**ಅಭಯಂ ಸರ್ವಭೂತೇಭ್ಯೋ**
**ದತ್ತ್ವಾ ಯಶ್ಚರತೇ ಮುನಿಃ।**
**ತಸ್ಯಾಪಿ ಸರ್ವಭೂತೇಭ್ಯೋ**
**ನ ಭಯಂ ವಿದ್ಯತೇ ಕ್ವಚಿತ್॥** 31

---

ಸಂನ್ಯಾಸಿಯು ತ್ಯಜಿಸತಕ್ಕದ್ದು. ಮಿತ್ರ-ಶತ್ರು ಮೊದಲಾದವರಲ್ಲಿ ಸಮಭಾವದಿಂದ ವರ್ತಿಸುತ್ತ ಸಕಲ ಜೀವಿಗಳಲ್ಲಿಯೂ ಸ್ನೇಹದೃಷ್ಟಿಯನ್ನು ಇರಿಸತಕ್ಕದ್ದು (26). ಸಂನ್ಯಾಸಿಯು ಸಮಾಹಿತಚಿತ್ತನಾಗಿ ಜರಾಯುಜ, ಅಂಡಜ—ಮುಂತಾದ ಸಮಸ್ತ ಜೀವಿಗಳಿಗೆ ಮಾತು ಮನಸ್ಸು ದೇಹ—ಇವುಗಳಿಂದ ಯಾವ ಬಗೆಯ ದ್ರೋಹವನ್ನೂ ಆಚರಿಸಕೂಡದು. ಸರ್ವವಿಧವಾದ ಆಸಕ್ತಿಯನ್ನೂ ತ್ಯಜಿಸಬೇಕು (27). ಆತನು ಗ್ರಾಮದಲ್ಲಿ ಒಂದು ರಾತ್ರಿ, ನಗರದಲ್ಲಿ ಐದು ರಾತ್ರಿ ವಾಸವಾಗಿರಬಹುದು. ಆ ಸಮಯದಲ್ಲಿ ಯಾರೊಡನೆಯೂ ಸ್ನೇಹವಾಗಲಿ ದ್ವೇಷವನ್ನಾಗಲಿ ಬೆಳೆಸಬಾರದು (28). ಯಾವಾಗ ಮನೆಗಳಲ್ಲಿ ಅಗ್ನಿಯು ಆರಿರುವುದೋ, ಜನರು ಊಟಮಾಡಿ ಮುಗಿಸಿರುತ್ತಾರೋ ಆಗ ಸಂನ್ಯಾಸಿಯು ಪ್ರಾಣಯಾತ್ರೆಗಾಗಿ ಉತ್ತಮ ವರ್ಣದವರ ಮನೆಗೆ ಭಿಕ್ಷೆಗೆ ಹೋಗಬೇಕು (29). ಪರಿವ್ರಾಜಕನು ಕಾಮ, ಕ್ರೋಧ, ದರ್ಪ, ಮೋಹ, ಲೋಭಾದಿ ದುರ್ಗುಣಗಳೆಲ್ಲವನ್ನೂ ವರ್ಜಿಸಿ ನಿರ್ಮಮತಾಭಾವದಲ್ಲಿರಬೇಕು. ಯಾವ ಮುನಿಯು ಸರ್ವಭೂತಗಳಿಗೂ ಅಭಯವನ್ನಿತ್ತು ಸಂಚರಿಸುವನೋ ಆತನಿಗೂ ಯಾವ ಪ್ರಾಣಿಯಿಂದಲೂ

**ಕೃತ್ವಾಗ್ನಿಹೋತ್ರಂ ಸ್ವಶರೀರಸಂಸ್ಥಂ**
**ಶರೀರಮಗ್ನಿಂ ಸ್ವಮುಖೇ ಜುಹೋತಿ।**
**ವಿಪ್ರಸ್ತು ಭೈಕ್ಷ್ಯೋಪಹಿತೈರ್ಹವಿರ್ಭಿ-**
**ಶ್ಚಿತಾಗ್ನಿಕಾನಾಂ ವ್ರಜತಿ ಸ್ಮ ಲೋಕಾನ್॥** 32

**ಮೋಕ್ಷಾಶ್ರಮಂ ಯಶ್ಚರತೇ ಯಥೋಕ್ತಂ**
**ಶುಚಿಸ್ಸುಖಂ ಕಲ್ಪಿತಬುದ್ಧಿಯುಕ್ತಃ।**
**ಅನಿಂಧನಂ ಜ್ಯೋತಿರಿವ ಪ್ರಶಾಂತಃ**
**ಸ ಬ್ರಹ್ಮಲೋಕಂ ಶ್ರಯತೇ ದ್ವಿಜಾತಿಃ** ॥ 33

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ನವಮೋಽಧ್ಯಾಯಃ

---

ಎಂದಿಗೂ ಭಯವಿರುವುದಿಲ್ಲ (30-31). ಯಾವ ವಿಪ್ರನು ಸಂನ್ಯಾಸಿಯಾಗಿ ತನ್ನ ಶರೀರದಲ್ಲಿರುವ ಜಠರಾಗ್ನಿಯನ್ನು ಅಗ್ನಿಹೋತ್ರವೆಂದು ತಿಳಿದು ಭಿಕ್ಷಾನ್ನವೆಂಬ ಹವಿಸ್ಸಿನಿಂದ ಹೋಮ ಮಾಡುತ್ತಾನೋ ಆತನು ಅಗ್ನಿಹೋತ್ರಿಗಳು ಪಡೆಯುವ ಉತ್ತಮ ಲೋಕಗಳನ್ನು ಸೇರುತ್ತಾನೆ (32). ಯಾವ ದ್ವಿಜನು (ಜಗತ್ತೆಲ್ಲವೂ ವಿಷ್ಣುಸಂಕಲ್ಪದಿಂದ) ಕಲ್ಪಿತವೆಂಬ ಬುದ್ಧಿಯಿಂದ ಕೂಡಿ ಶುಚಿಯಾಗಿದ್ದು ಮೋಕ್ಷಾಶ್ರಮವೆನಿಸಿದ ಚತುರ್ಥಾಶ್ರಮದ ಧರ್ಮವನ್ನು ಹಿಂದೆ ಹೇಳಿದಂತೆ ಆಚರಿಸುತ್ತಾನೋ ಆತನು ಇಂಧನ*ವಿಲ್ಲದ ಅಗ್ನಿಯಂತೆ ಶಾಂತನಾಗಿ ಬ್ರಹ್ಮಲೋಕವನ್ನೈದುವನು" (33).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಒಂಬತ್ತನೆಯ ಅಧ್ಯಾಯ ಮುಗಿಯಿತು.



---

* ಪಾಪಪುಣ್ಯಗಳು ಇಂಧನವಿದ್ದಂತೆ. ಅವು ಇಲ್ಲವಾಗಲು ಪುನರ್ಜನ್ಮಕ್ಕೆ ನಿಮಿತ್ತವಿಲ್ಲವಾದ್ದರಿಂದ ಮುಕ್ತನಾಗುತ್ತಾನೆ.

## ದಶಮೋಽಧ್ಯಾಯಃ

*ಸಗರ ಉವಾಚ:*

**ಕಥಿತಂ ಚಾತುರಾಶ್ರಮ್ಯಂ ಚಾತುರ್ವರ್ಣ್ಯಕ್ರಿಯಾಸ್ತಥಾ।**
**ಪುಂಸಃ ಕ್ರಿಯಾಮಹಂ ಶ್ರೋತುಮಿಚ್ಛಾಮಿ ದ್ವಿಜಸತ್ತಮ॥ 1**

**ನಿತ್ಯನೈಮಿತ್ತಿಕಾಃ ಕಾಮ್ಯಾಃ ಕ್ರಿಯಾಃ ಪುಂಸಾಮಶೇಷತಃ।**
**ಸಮಾಖ್ಯಾಹಿ ಭೃಗುಶ್ರೇಷ್ಠ ಸರ್ವಜ್ಞೋ ಹ್ಯಸಿ ಮೇ ಮತಃ॥ 2**

*ಔರ್ವ ಉವಾಚ:*

**ಯದೇತದುಕ್ತಂ ಭವತಾ ನಿತ್ಯನೈಮಿತ್ತಿಕಾಶ್ರಯಮ್।**
**ತದಹಂ ಕಥಯಿಷ್ಯಾಮಿ ಶೃಣುಷ್ವೈಕಮನಾ ಮಮ॥ 3**

**ಜಾತಸ್ಯ ಜಾತಕರ್ಮಾದಿಕ್ರಿಯಾಕಾಂಡಮಶೇಷತಃ।**
**ಪುತ್ರಸ್ಯ ಕುರ್ವೀತ ಪಿತಾ ಶ್ರಾದ್ಧಂ ಚಾಭ್ಯುದಯಾತ್ಮಕಮ್॥ 4**

---

## ಅಧ್ಯಾಯ 10

### ಜಾತಕರ್ಮ, ನಾಮಕರಣ ಮತ್ತು ವಿವಾಹಸಂಸ್ಕಾರಗಳ ವಿಧಿ

ಸಗರ ಚಕ್ರವರ್ತಿಯು ಔರ್ವಮುನಿಯನ್ನು ಕುರಿತು "ಬ್ರಾಹ್ಮಣೋತ್ತಮರೆ, ನಾಲ್ಕು ಆಶ್ರಮಗಳ ಮತ್ತು ನಾಲ್ಕು ವರ್ಣಗಳ ಕರ್ತವ್ಯಗಳನ್ನು ತಿಳಿಸಿದಿರಿ. ಈಗ ಮನುಷ್ಯರ (ಷೋಡಶಸಂಸ್ಕಾರಗಳಿಗೆ ಸಂಬಂಧಿಸಿದ) ಕರ್ಮಗಳನ್ನು ಕೇಳಲಿಚ್ಛಿಸುತ್ತೇನೆ. ಅಲ್ಲದೆ ನಿತ್ಯ ನೈಮಿತ್ತಿಕ ಕಾಮ್ಯಕರ್ಮಗಳು ಯಾವುವೆಂಬುದನ್ನು ತಿಳಿಸಿರಿ. ಭೃಗುಶ್ರೇಷ್ಠರೇ, ನೀವು ಸರ್ವಜ್ಞರೆಂದು ನಾನು ನಂಬಿದ್ದೇನೆ" ಎಂದನು (1-2). ಔರ್ವನು ಹೀಗೆಂದನು: "ನಿತ್ಯ ನೈಮಿತ್ತಿಕ ಕರ್ಮಗಳು ಯಾವುವೆಂದು ಕೇಳಿದೆಯಷ್ಟೆ. ಅವನ್ನು ಹೇಳುತ್ತೇನೆ, ಏಕಾಗ್ರತೆಯಿಂದ ಕೇಳು. ಪುತ್ರನು ಜನಿಸಿದಾಗ ಜಾತಕರ್ಮಾದಿ ಕ್ರಿಯಾಕಲಾಪಗಳನ್ನೂ ಆಭ್ಯುದಯಿಕವಾದ ಶ್ರಾದ್ಧವನ್ನೂ ತಂದೆಯು ಮಾಡಬೇಕು (3-4). ಇಬ್ಬರು ಬ್ರಾಹ್ಮಣರನ್ನು ಪೂರ್ವಾಭಿ

**ಯುಗ್ಮಾಂಸ್ತು ಪ್ರಾಙ್ಮುಖಾನ್ವಿಪ್ರಾನ್ ಭೋಜಯೇನ್ಮನುಜೇಶ್ವರ।**
**ಯಥಾ ವೃತ್ತಿಸ್ತಥಾ ಕುರ್ಯಾದ್ದೈವಂ ಪಿತ್ರ್ಯಂ ದ್ವಿಜನ್ಮನಾಮ್॥ 5**

**ದಧ್ನಾ ಯವೈಃ ಸಬದರೈರ್ಮಿಶ್ರಾನ್ ಪಿಂಡಾನ್ಮುದಾ ಯುತಃ।**
**ನಾಂದೀಮುಖೇಭ್ಯಸ್ತೀರ್ಥೇನ ದದ್ಯಾದ್ ದೈವೇನ ಪಾರ್ಥಿವ॥ 6**

**ಪ್ರಾಜಾಪತ್ಯೇನ ವಾ ಸರ್ವಮುಪಚಾರಂ ಪ್ರದಕ್ಷಿಣಮ್।**
**ಕುರ್ವೀತ ತತ್ತಥಾಶೇಷವೃದ್ಧಿಕಾಲೇಷು ಭೂಪತೇ॥ 7**

**ತತಶ್ಚ ನಾಮ ಕುರ್ವೀತ ಪಿತೈವ ದಶಮೇಽಹನಿ।**
**ದೇವಪೂರ್ವಂ ನರಾಖ್ಯಂ ಹಿ ಶರ್ಮವರ್ಮಾದಿ ಸಂಯುತಮ್॥ 8**

**ಶರ್ಮೇತಿ ಬ್ರಾಹ್ಮಣಸ್ಯೋಕ್ತಂ ವರ್ಮೇತಿ ಕ್ಷತ್ರಸಂಶ್ರಯಮ್।**
**ಗುಪ್ತದಾಸಾತ್ಮಕಂ ನಾಮ ಪ್ರಶಸ್ತಂ ವೈಶ್ಯಶೂದ್ರಯೋಃ॥ 9**

---

ಮುಖವಾಗಿ ಕುಳ್ಳಿರಿಸಿ ಭೋಜನ ಮಾಡಿಸಬೇಕಲ್ಲದೆ, ದ್ವಿಜರ ವ್ಯವಹಾರಕ್ಕೆ ಅನುಗುಣವಾಗಿ ದೇವತೆಗಳನ್ನೂ ಪಿತೃಗಳನ್ನೂ ಉದ್ದೇಶಿಸಿ ವೃದ್ಧಿ (ನಾಂದೀ) ಶ್ರಾದ್ಧವನ್ನು ಮಾಡಬೇಕು (5). ಮಹಾರಾಜ, ಮೊಸರು ಯವ ಮತ್ತು ಬದರೀಫಲಗಳಿಂದ ಮಿಶ್ರವಾದ ಪಿಂಡಗಳನ್ನು ನಾಂದೀಮುಖ ಪಿತೃ ದೇವತೆಗಳಿಗೆ ಸಂತುಷ್ಟವಾಗಿ ದೈವ*ತೀರ್ಥದಿಂದ ಅರ್ಪಿಸಬೇಕು ಅಥವಾ ಪ್ರಾಜಾಪತ್ಯತೀರ್ಥದಿಂದ ಅರ್ಪಿಸಿ ಪ್ರದಕ್ಷಿಣಪೂರ್ವಕವಾಗಿ ಸರ್ವೋಪಚಾರಗಳನ್ನು ಮಾಡಬೇಕು. ಹೀಗೆ ಎಲ್ಲ ವೃದ್ಧಿಕಾಲಗಳಲ್ಲಿಯೂ (ಕನ್ಯಾ ವಿವಾಹಾದಿಗಳಲ್ಲಿ) ವೃದ್ಧಿಶ್ರಾದ್ಧವನ್ನು ಮಾಡಬೇಕು (6-7). ಅನಂತರ ತಂದೆಯು (ಪುತ್ರೋತ್ಪತ್ತಿಯ ದಿನವನ್ನು ಬಿಟ್ಟು) ಹತ್ತನೆಯ ದಿನ ಪುತ್ರನಿಗೆ ನಾಮಕರಣ ಮಾಡತಕ್ಕದ್ದು. ಗಂಡುಮಗುವಿಗೆ ಪುರುಷ ವಾಚಕಶಬ್ದವಿದ್ದು, ಅದು ಯಾವುದಾದರೂ ದೇವತಾವಾಚಕವಾಗಿದ್ದು, ಕಡೆಯಲ್ಲಿ ಶರ್ಮ-ವರ್ಮ ಮುಂತಾದ ಅಂಕಿತಗಳಿರಬೇಕು (8). ಬ್ರಾಹ್ಮಣನಿಗೆ ಶರ್ಮ, ಕ್ಷತ್ರಿಯನಿಗೆ ವರ್ಮ, ವೈಶ್ಯನಿಗೆ ಗುಪ್ತ, ಶೂದ್ರನಿಗೆ ದಾಸ—ಎಂಬ

* ದೈವತೀರ್ಥ—ಅಂಗುಲಿಗಳ ಅಗ್ರಭಾಗ. ಪ್ರಾಜಾಪತ್ಯತೀರ್ಥ—ಕಿರುಬೆರಳಿನ ಮೂಲಭಾಗ. ಅಂಗುಲ್ಯಗ್ರೇ ತೀರ್ಥಂ ದೈವಂ, ಸ್ವಲ್ಪಾಂಗುಲ್ಯೋರ್ಮೂಲೇ ಕಾಯಂ (ಅಮರ) ಕಾಯ-ಪ್ರಾಜಾಪತ್ಯ.

**ನಾರ್ಥಹೀನಂ ಚ ಚಾಶಸ್ತಂ ನಾಪಶಬ್ದಯುತಂ ತಥಾ।**
**ನಾಮಂಗಲ್ಯಂ ಜುಗುಪ್ಸ್ಯಂ ವಾ ನಾಮ ಕುರ್ಯಾತ್ಸಮಾಕ್ಷರಮ್॥**

**ನಾತಿದೀರ್ಘಂ ನಾತಿಹ್ರಸ್ವಂ ನಾತಿಗುರ್ವಕ್ಷರಾನ್ವಿತಮ್।**
**ಸುಖೋಚ್ಚಾರ್ಯಂ ತು ತನ್ನಾಮ ಕುರ್ಯಾದ್ಯತ್**
**ಪ್ರವಣಾಕ್ಷರಮ್॥** 11

**ತತೋಽನಂತರಸಂಸ್ಕಾರಸಂಸ್ಕೃತೋ ಗುರುವೇಶ್ಮನಿ।**
**ಯಥೋಕ್ತವಿಧಿಮಾಶ್ರಿತ್ಯ ಕುರ್ಯಾದ್ವಿದ್ಯಾಪರಿಗ್ರಹಮ್॥** 12

**ಗೃಹೀತವಿದ್ಯೋ ಗುರವೇ ದತ್ತ್ವಾ ಚ ಗುರುದಕ್ಷಿಣಾಮ್।**
**ಗಾರ್ಹಸ್ಥ್ಯಮಿಚ್ಛನ್ ಭೂಪಾಲ ಕುರ್ಯಾದ್ದಾರಪರಿಗ್ರಹಮ್॥** 13

**ಬ್ರಹ್ಮಚರ್ಯೇಣ ವಾ ಕಾಲಂ ಕುರ್ಯಾತ್ಸಂಕಲ್ಪಪೂರ್ವಕಮ್।**
**ಗುರೋಶ್ಶುಶ್ರೂಷಣಂ ಕುರ್ಯಾತ್ ತತ್ಪುತ್ರಾದೇರಥಾಪಿ ವಾ॥** 14

---

ಅಂಕಿತಗಳು ಪ್ರಶಸ್ತವಾದವು. ಮಗುವಿನ ಹೆಸರು ಅರ್ಥಹೀನವೂ ಅಪ್ರಶಸ್ತವೂ ಅಪಶಬ್ದವೂ ಆಗಿರಬಾರದು. ಅಮಂಗಳಕರವೂ ಜುಗುಪ್ಸನೀಯವೂ ಆಗಿರಬಾರದು. ಹೆಸರಿನಲ್ಲಿ ಸಮಸಂಖ್ಯೆಯ ಅಕ್ಷರಗಳಿರಬೇಕು (9-10). ಹೆಸರು ಬಹಳ ಉದ್ದವಾಗಿಯೂ ಬಹಳ ಚಿಕ್ಕದಾಗಿಯೂ ಬಹಳ ಗುರುವರ್ಣಗಳಿಂದ ಕೂಡಿದ್ದಾಗಿಯೂ ಇರಬಾರದು. ಉಚ್ಚಾರಣೆಗೆ ಸುಖವಾಗಿದ್ದು ಮುಂದುಮುಂದಿನ ವರ್ಣಗಳು ಲಘುವಾಗಿರುವ ನಾಮವಾಗಿರಬೇಕು (11). ಅನಂತರ ಬಾಲಕನು ಉಪನಯನ ಸಂಸ್ಕಾರವನ್ನು ಪಡೆದಮೇಲೆ ಆಚಾರ್ಯಗೃಹದಲ್ಲಿದ್ದು ಶಾಸ್ತ್ರೋಕ್ತವಿಧಿಪೂರ್ವಕವಾಗಿ ವಿದ್ಯಾರ್ಜನೆಯನ್ನು ಮಾಡತಕ್ಕದ್ದು (12). ವಿದ್ಯಾಭ್ಯಾಸ ಮುಗಿದ ಮೇಲೆ ಗುರುವಿಗೆ ಗುರುದಕ್ಷಿಣೆಯನ್ನಿತ್ತು, ಗೃಹಸ್ಥನಾಗಲು ಬಯಸುವುದಾದರೆ ಪಾಣಿಗ್ರಹಣವನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಸಂಕಲ್ಪಪೂರ್ವಕವಾಗಿ ನೈಷ್ಠಿಕಬ್ರಹ್ಮಚರ್ಯವನ್ನು ಸ್ವೀಕರಿಸಿ ಗುರುವನ್ನೋ ಅಥವಾ ಗುರುಪುತ್ರಾದಿಗಳನ್ನೋ ಸೇವಿಸುತ್ತ ಕಾಲವನ್ನು ಕಳೆಯಬಹುದು (13-14). ಅಥವಾ ತನ್ನ ಇಚ್ಛಾನುಸಾರವಾಗಿ ವಾನಪ್ರಸ್ಥನೋ ಸಂನ್ಯಾಸಿಯೋ ಆಗಬಹುದು.

**ವೈಖಾನಸೋ ವಾಪಿ ಭವೇತ್ ಪರಿವ್ರಾಡಥವೇಚ್ಛಯಾ।**
**ಪೂರ್ವಸಂಕಲ್ಪಿತಂ ಯಾದೃಕ್ ತಾದೃಕ್ಕುರ್ಯಾನ್ನರಾಧಿಪ॥ 15**

**ವರ್ಷೈರೇಕಗುಣಾಂ ಭಾರ್ಯಾಮುದ್ವಹೇತ್ತ್ರಿಗುಣಸ್ಸ್ವಯಮ್।**
**ನಾತಿಕೇಶಾಮಕೇಶಾಂ ವಾ ನಾತಿಕೃಷ್ಣಾಂ ನ ಪಿಂಗಲಾಮ್॥ 16**

**ನಿಸರ್ಗತೋಽಧಿಕಾಂಗೀಂ ವಾ ನ್ಯೂನಾಂಗೀಮಪಿ ನೋದ್ವಹೇತ್।**
**ನಾವಿಶುದ್ಧಾಂ ಸರೋಮಾಂ ವಾಕುಲಜಾಂ ವಾಪಿ ರೋಗಿಣೀಮ್॥**

**ನ ದುಷ್ಟಾಂ ದುಷ್ಟವಾಕ್ಯಾಂ ವಾ ವ್ಯಂಗಿನೀಂ ಪಿತೃಮಾತೃತಃ।**
**ನ ಶ್ಮಶ್ರುವ್ಯಂಜನವತೀಂ ನ ಚೈವ ಪುರುಷಾಕೃತಿಮ್॥ 18**

**ನ ಘರ್ಘರಸ್ವರಾಂ ಕ್ಷಾಮಾಂ ತಥಾ ಕಾಕಸ್ವರಾಂ ನ ಚ।**
**ನಾನಿಬಂಧೇಕ್ಷಣಾಂ ತದ್ವದ್ ವೃತ್ತಾಕ್ಷೀಂ ನೋದ್ವಹೇದ್ ಬುಧಃ॥**

---

ಮಹಾರಾಜ, ತನ್ನ ಪೂರ್ವಸಂಕಲ್ಪವು ಹೇಗಿರುತ್ತದೆಯೋ ಹಾಗೆ ಮಾಡಬೇಕು. (ಗೃಹಸ್ಥನಾಗಬೇಕೆನ್ನುವ ಇಚ್ಛೆಯಿದ್ದರೆ) ತನ್ನ ಮೂರನೆಯ ಒಂದಂಶ ವಯಸ್ಸಿನ ಕನ್ಯೆಯನ್ನು ಮದುವೆಯಾಗಬೇಕು. ಅತಿಯಾಗಿ ತಲೆಕೂದಲುಳ್ಳವಳನ್ನೂ ಬಹಳ ಕಡಮೆ ತಲೆಕೂದಲುಳ್ಳವಳನ್ನೂ ತುಂಬ ಕಪ್ಪಾದವಳನ್ನೂ ಕಂದುಹಳದಿಬಣ್ಣದವಳನ್ನೂ ವಿವಾಹವಾಗಬಾರದು (15-16). ಯಾರಿಗೆ ಜನ್ಮತಃ ಅಧಿಕವಾದ ಅಥವಾ ನ್ಯೂನವಾದ ಅಂಗವಿದೆಯೋ ಅವಳನ್ನು ಮದುವೆಯಾಗಬಾರದು. ಹಾಗೆಯೇ ಅಪವಿತ್ರಳನ್ನೂ ದೇಹದಲ್ಲಿ ಹೆಚ್ಚಾಗಿ ರೋಮವುಳ್ಳವಳನ್ನೂ ಕುಲಹೀನಳನ್ನೂ ರೋಗಿಣಿಯನ್ನೂ ಸ್ವೀಕರಿಸತಕ್ಕದ್ದಲ್ಲ (17). ಹಾಗೆಯೇ ದುಷ್ಟಸ್ವಭಾವದವಳು, ಕೆಟ್ಟ ಮಾತಾಡತಕ್ಕವಳು, ತಂದೆ ತಾಯಿಗಳಿಂದ ಯಾವುದಾದರೊಂದು ಅಂಗದೋಷವನ್ನು ಪಡೆದವಳು, ಗಡ್ಡಮೀಸೆಗಳ ಚಿಹ್ನೆಯುಳ್ಳವಳು, ಗಂಡಸಿನ ಆಕಾರದವಳು—ಇಂತಹವಳನ್ನು ವರಿಸಬಾರದು (18). ಹಾಗೆಯೇ ಗೊಗ್ಗರ ದನಿಯವಳು, ಬಡಕಲು ಮೈಯವಳು, ಕಾಗೆಯಂತೆ ಕಟು ಧ್ವನಿಯವಳು, ರೆಪ್ಪೆ ಕೂದಲಿಲ್ಲದವಳು, ದುಂಡು ಕಣ್ಣಿನವಳು—ಇಂತಹವಳನ್ನೂ ಪ್ರಾಜ್ಞನಾದವನು ವರಿಸಬಾರದು

**ಯಸ್ಯಾಶ್ಚ ರೋಮಶೇ ಜಂಘೇ ಗುಲ್ಫೌ ಯಸ್ಯಾಸ್ತಥೋನ್ನತೌ।**
**ಗಂಡಯೋಃ ಕೂಪರೌ ಯಸ್ಯಾ ಹಸಂತ್ಯಾಸ್ತಾಂ ನ ಚೋದ್ವಹೇತ್॥**

**ನಾತಿರೂಕ್ಷಚ್ಛವಿಂ ಪಾಂಡುಕರಜಾಮರುಣೇಕ್ಷಣಾಮ್।**
**ಆಪೀನಹಸ್ತಪಾದಾಂ ಚ ನ ಕನ್ಯಾಮುದ್ವಹೇದ್ ಬುಧಃ॥ 21**

**ನ ವಾಮನಾಂ ನಾತಿದೀರ್ಘಾಂ ನೋದ್ವಹೇತ್ಸಂಹತಭ್ರುವಮ್।**
**ನ ಚಾತಿಚ್ಛಿದ್ರದಶನಾಂ ನ ಕರಾಲಮುಖೀಂ ನರಃ॥ 22**

**ಪಂಚಮೀಂ ಮಾತೃಪಕ್ಷಾಚ್ಚ ಪಿತೃಪಕ್ಷಾಚ್ಚ ಸಪ್ತಮೀಮ್।**
**ಗೃಹಸ್ಥಶ್ಚೋದ್ವಹೇತ್ಕನ್ಯಾಂ ನ್ಯಾಯೇನ ವಿಧಿನಾ ನೃಪ॥ 23**

**ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ।**
**ಗಾಂಧರ್ವರಾಕ್ಷಸೌ ಚಾನ್ಯೌ ಪೈಶಾಚಶ್ಚಾಷ್ಟಮೋ ಮತಃ॥ 24**

---

(19). ಯಾವ ಹೆಣ್ಣಿನ ಮೊಳಕಾಲಿನಲ್ಲಿ ರೋಮಗಳು ಬೆಳೆದಿರುತ್ತದೆಯೋ ಪಾದಗಳ ಗಂಟು (ಹರಟು) ದೊಡ್ಡದಾಗಿ ಚಾಚಿರುತ್ತದೆಯೋ, ನಗುವಾಗ ಯಾರ ಕೆನ್ನೆಗಳಲ್ಲಿ ಗುಳಿಗಳು ಬೀಳುತ್ತವೆಯೋ ಅಂಥವಳನ್ನು ವಿವಾಹ ವಾಗಕೂಡದು (20). ಒರಟಾದ ಚರ್ಮಕಾಂತಿಯವಳನ್ನೂ ಬಿಳಿಯ ಉಗುರಿನವಳನ್ನೂ ಕೆಂಗಣ್ಣಿನವಳನ್ನೂ ದಪ್ಪ ದಪ್ಪ ಕೈಕಾಲಿನವಳನ್ನೂ ವಿದ್ವಾಂಸನು ಮದುವೆಯಾಗಬಾರದು (21). ಬಹಳ ಕುಳ್ಳಿಯನ್ನೂ ಬಹಳ ಎತ್ತರದವಳನ್ನೂ ಎರಡು ಹುಬ್ಬುಗಳೂ ಕೂಡಿಹೋದವಳನ್ನೂ ಸಂದು ಬಿಟ್ಟ ಹಲ್ಲಿನವಳನ್ನೂ ವಿಕಾರವಾದ ಮೋರೆಯವಳನ್ನೂ ಮದುವೆಯಾಗ ಬಾರದು (22). ಸಗರರಾಜ, ಗೃಹಸ್ಥನಾಗತಕ್ಕವನು ತನ್ನ ತಾಯಿಯ ಕಡೆಯಿಂದ ಕನಿಷ್ಠಪಕ್ಷ ಐದು ತಲೆಗಳ ಸಂಬಂಧವಿರದ ಮತ್ತು ತಂದೆಯ ಕಡೆಯಿಂದ ಏಳುತಲೆಗಳ ಸಂಬಂಧವಿರದ ಕನ್ಯೆಯನ್ನು ವಿಧಿವತ್ತಾಗಿ ವಿವಾಹವಾಗಬೇಕು (23). ವಿವಾಹದಲ್ಲಿ ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚ—ಎಂದು ಎಂಟು ಭೇದಗಳಿವೆ. ಇವುಗಳಲ್ಲಿ ಯಾವ ವರ್ಣದವನಿಗೆ ಯಾವ ಬಗೆಯ ವಿವಾಹವು ಮಹರ್ಷಿಗಳಿಂದ ಉಕ್ತವಾಗಿದೆಯೋ ಆ ಬಗೆಯ ವಿವಾಹ

**ಏತೇಷಾಂ ಯಸ್ಯ ಯೋ ಧರ್ಮೋ ವರ್ಣಸ್ಯೋಕ್ತೋ ಮಹರ್ಷಿಭಿಃ।**
**ಕುರ್ವೀತ ದಾರಗ್ರಹಣಂ ತೇನಾನ್ಯಂ ಪರಿವರ್ಜಯೇತ್॥ 25**

**ಸಧರ್ಮಚಾರಿಣೀಂ ಪ್ರಾಪ್ಯ ಗಾರ್ಹಸ್ಥ್ಯಂ ಸಹಿತಸ್ತಯಾ।**
**ಸಮುದ್ವಹೇದ್ದದಾತ್ಯೇತತ್ ಸಮ್ಯಗೂಢಂ ಮಹಾಫಲಮ್॥ 26**

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ದಶಮೋಽಧ್ಯಾಯಃ

---

ವಿಧಿಯಿಂದ ಮದುವೆಯಾಗಬೇಕು. ಉಳಿದ ಬಗೆಯನ್ನು ತ್ಯಜಿಸಬೇಕು (24-25). ಈ ಪ್ರಕಾರವಾಗಿ ಸಹಧರ್ಮಿಣಿಯನ್ನು ಪಡೆದು ಅವಳೊಡನೆ ಗೃಹಸ್ಥಧರ್ಮವನ್ನು ಪಾಲಿಸಬೇಕು. ಹಾಗೆ ಪಾಲಿಸಿದರೆ ಗಾರ್ಹಸ್ಥ್ಯವು ಮಹತ್ತರವಾದ ಫಲವನ್ನೀಯುತ್ತದೆ (26).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹತ್ತನೆಯ ಅಧ್ಯಾಯ ಮುಗಿಯಿತು.



## ಏಕಾದಶೋಽಧ್ಯಾಯಃ

*ಸಗರ ಉವಾಚ:*

**ಗೃಹಸ್ಥಸ್ಯ ಸದಾಚಾರಂ ಶ್ರೋತುಮಿಚ್ಛಾಮ್ಯಹಂ ಮುನೇ।**
**ಲೋಕಾದಸ್ಮಾತ್ಪರಸ್ಮಾಚ್ಚ ಯಮಾತಿಷ್ಠನ್ನ ಹೀಯತೇ॥** 1

*ಔರ್ವ ಉವಾಚ:*

**ಶ್ರೂಯತಾಂ ಪೃಥಿವೀಪಾಲ ಸದಾಚಾರಸ್ಯ ಲಕ್ಷಣಮ್।**
**ಸದಾಚಾರವತಾ ಪುಂಸಾ ಜಿತೌ ಲೋಕಾವುಭಾವಪಿ॥** 2

**ಸಾಧವಃ ಕ್ಷೀಣದೋಷಾಸ್ತು ಸಚ್ಛಬ್ದಃ ಸಾಧುವಾಚಕಃ।**
**ತೇಷಾಮಾಚರಣಂ ಯತ್ತು ಸದಾಚಾರಸ್ಸ ಉಚ್ಯತೇ॥** 3

**ಸಪ್ತರ್ಷಯೋಽಥ ಮನವಃ ಪ್ರಜಾನಾಂ ಪತಯಸ್ತಥಾ।**
**ಸದಾಚಾರಸ್ಯ ವಕ್ತಾರಃ ಕರ್ತಾರಶ್ಚ ಮಹೀಪತೇ॥** 4

---

## ಅಧ್ಯಾಯ 11

### ಗೃಹಸ್ಥನಿಗೆ ಸಂಬಂಧಿಸಿದ ಸದಾಚಾರಗಳ ವರ್ಣನೆ

ಅನಂತರ ಸಗರನೃಪಾಲನು "ಮುನಿಗಳೇ, ಗೃಹಸ್ಥನು ಯಾವುದನ್ನಾಚರಿಸಿದರೆ ಇಹಪರಲೋಕಗಳಿಗೆ ಚ್ಯುತಿಯಾಗುವುದಿಲ್ಲವೋ ಅಂತಹ ಸದಾಚಾರವನ್ನು ಕೇಳಲಿಚ್ಛಿಸುತ್ತೇನೆ" ಎಂದು ನುಡಿದನು (1). ಅದಕ್ಕೆ ಔರ್ವಮುನಿಯು ಹೇಳಿದನು: "ಭೂಪಾಲ, ಸದಾಚಾರದ ಲಕ್ಷಣವನ್ನು ಕೇಳು. ಸದಾಚಾರದಲ್ಲಿರುವ ಪುರುಷನು ಇಹಲೋಕ ಪರಲೋಕಗಳೆರಡನ್ನೂ ಜಯಿಸುತ್ತಾನೆ (2). ಯಾರು ದೋಷರಹಿತರಾಗಿದ್ದರೋ ಅವರು ಸಾಧುಗಳು. 'ಸತ್' ಶಬ್ದವು ಸಾಧು ಎಂಬ ಅರ್ಥವನ್ನು ಬೋಧಿಸುತ್ತದೆ. ಅಂತಹ ಸತ್ಪುರುಷರ ಆಚರಣೆ ಯಾವುದೋ ಅದಕ್ಕೆ ಸದಾಚಾರವೆಂದು ಹೆಸರು (3). ಸಪ್ತರ್ಷಿಗಳು, ಮನುಗಳು ಮತ್ತು ಪ್ರಜಾಪತಿಗಳು ಸದಾಚಾರವನ್ನು ಬೋಧಿಸತಕ್ಕವರೂ ಆಚರಿಸತಕ್ಕವರೂ

ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಮನಸಾ ಮತಿಮಾನ್ ನೃಪ।
ಪ್ರಬುದ್ಧಶ್ಚಿಂತಯೇದ್ಧರ್ಮಮರ್ಥಂ ಚಾಪ್ಯವಿರೋಧಿನಮ್॥ 5

ಅಪೀಡಯಾ ತಯೋಃ ಕಾಮಮುಭಯೋರಪಿ ಚಿಂತಯೇತ್।
ದೃಷ್ಟಾದೃಷ್ಟವಿನಾಶಾಯ ತ್ರಿವರ್ಗೇ ಸಮದರ್ಶಿತಾ॥ 6

ಪರಿತ್ಯಜೇದರ್ಥಕಾಮೌ ಧರ್ಮಪೀಡಾಕರೌ ನೃಪ।
ಧರ್ಮಮಪ್ಯಸುಖೋದರ್ಕಂ ಲೋಕವಿದ್ವಿಷ್ಟಮೇವ ಚ॥ 7

ತತಃ ಕಲ್ಯಂ ಸಮುತ್ಥಾಯ ಕುರ್ಯಾನ್ಮೂತ್ರಂ ನರೇಶ್ವರ।
ನೈರ್ಋತ್ಯಾಮಿಷುವಿಕ್ಷೇಪಮತೀತ್ಯಾಭ್ಯಧಿಕಂ ಭುವಃ॥ 8

---

ಆಗಿದ್ದಾರೆ. ಮಹೀಪತಿ, ಪ್ರಾಜ್ಞನಾದ ಗೃಹಸ್ಥನು ಬ್ರಾಹ್ಮ* ಮೂಹೂರ್ತದಲ್ಲೆದ್ದು ಧರ್ಮವನ್ನೂ ಅದಕ್ಕೆ ಅವಿರುದ್ಧವಾದ ಅರ್ಥ (ಧನ) ವನ್ನೂ ಕುರಿತು ಮನಸ್ಸಿನಲ್ಲಿ ಆಲೋಚಿಸಬೇಕು (4-5). ಧರ್ಮಾರ್ಥಗಳಿಗೆ ವಿರುದ್ಧವಲ್ಲದ ಕಾಮವನ್ನೂ ಚಿಂತಿಸಬೇಕು. ದೃಷ್ಟ ಮತ್ತು ಅದೃಷ್ಟವಾದ ದೋಷಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಧರ್ಮಾರ್ಥಕಾಮಗಳೆಂಬ ತ್ರಿವರ್ಗದಲ್ಲಿ ಗೃಹಸ್ಥನು ಸಮದರ್ಶಿಯಾಗಿರಬೇಕು (6). ಧರ್ಮಕ್ಕೆ ವಿರುದ್ಧವಾದ ಅರ್ಥಕಾಮಗಳನ್ನೆಂದಿಗೂ ಆಚರಿಸತಕ್ಕದ್ದಲ್ಲ. ಪರಿಣಾಮದಲ್ಲಿ ಸುಖವನ್ನು ಕೊಡದಿದ್ದರೆ ಮತ್ತು ಲೋಕವಿದ್ವಿಷ್ಟವಾಗಿದ್ದರೆ ಅಂತಹ ಧರ್ಮವನ್ನೂ§ ಪರಿತ್ಯಜಿಸಬೇಕು (7). ಅನಂತರ ಪ್ರಾತಃಕಾಲದಲ್ಲೆದ್ದು, ಬಾಣ ಹೊಡೆದರೆ ಎಷ್ಟು ದೂರ ಹೋಗುವುದೋ ಅದಕ್ಕಿಂತ ಹೆಚ್ಚು ದೂರ ಹೋಗಿ ನೈಋತ್ಯ ದಿಕ್ಕಿನಲ್ಲಿ ಮೂತ್ರವಿಸರ್ಜನೆ ಮಾಡಬೇಕು. ಗೃಹಕ್ಕೆ ಬಹುದೂರದಲ್ಲಿ ಮಲಮೂತ್ರಗಳನ್ನು ವಿಸರ್ಜಿಸಬೇಕು. ಕಾಲುತೊಳೆದು

---

* ಬ್ರಾಹ್ಮಮುಹೂರ್ತ—ಸೂರ್ಯೋದಯಕ್ಕೆ ಹಿಂದಿನ ಮುಹೂರ್ತ (48 ನಿಮಿಷ)

§ ಉದಾ—ಆರೋಗ್ಯವನ್ನು ಕೆಡಿಸುವ ಧರ್ಮಕಾರ್ಯ; ಮೊಸಳೆಗಳಿರುವ ನದಿಯಲ್ಲಿ ತೀರ್ಥಸ್ನಾನ. ಮದ್ಯಮಾಂಸಗಳನ್ನು ಸೇವಿಸಬಹುದಾದ ಯಾಗವು ಶಾಸ್ತ್ರವಿಹಿತವಾದರೂ ಲೋಕವಿದ್ವಿಷ್ಟವಾದ್ದರಿಂದ ತ್ಯಾಜ್ಯ.

**ದೂರಾದಾವಸಥಾನ್ಮೂತ್ರಂ ಪುರೀಷಂ ಚ ವಿಸರ್ಜಯೇತ್ ।**
**ಪಾದಾವನೇಜನೋಚ್ಛಿಷ್ಟೇ ಪ್ರಕ್ಷಿಪೇನ್ನ ಗೃಹಾಂಗಣೇ ॥** 9

**ಆತ್ಮಚ್ಛಾಯಾಂ ತರುಚ್ಛಾಯಾಂ ಗೋಸೂರ್ಯಾಗ್ನ್ಯನಿಲಾಂಸ್ತಥಾ ।**
**ಗುರುದ್ವಿಜಾದೀಂಸ್ತು ಬುಧೋ ನಾಧಿಮೇಹೇತ್ಕದಾಚನ ॥** 10

**ನ ಕೃಷ್ಟೇ ಶಸ್ಯಮಧ್ಯೇ ವಾ ಗೋವ್ರಜೇ ಜನಸಂಸದಿ ।**
**ನ ವರ್ತಮನಿ ನ ನದ್ಯಾದಿತೀರ್ಥೇಷು ಪುರುಷರ್ಷಭ ॥** 11

**ನಾಪ್ಸು ನೈವಾಂಭಸಸ್ತೀರೇ ಶ್ಮಶಾನೇ ನ ಸಮಾಚರೇತ್ ।**
**ಉತ್ಸರ್ಗಂ ವೈ ಪುರೀಷಸ್ಯ ಮೂತ್ರಸ್ಯ ಚ ವಿಸರ್ಜನಮ್ ॥** 12

**ಉದಙ್ಮುಖೋ ದಿವಾ ಮೂತ್ರಂ ವಿಪರೀತಮುಖೋ ನಿಶಿ ।**
**ಕುರ್ವೀತಾನಾಪದಿ ಪ್ರಾಜ್ಞೋ ಮೂತ್ರೋತ್ಸರ್ಗಂ ಚ ಪಾರ್ಥಿವ ॥**

**ತೃಣೈರಾಸ್ತೀರ್ಯ ವಸುಧಾಂ ವಸ್ತ್ರಪ್ರಾವೃತಮಸ್ತಕಃ ।**
**ತಿಷ್ಠೇನ್ನಾತಿಚಿರಂ ತತ್ರ ನೈವ ಕಿಂಚಿದುದೀರಯೇತ್ ॥** 14

---

ಮಿಕ್ಕ ನೀರನ್ನೂ ಎಂಜಲು ನೀರನ್ನೂ ಗೃಹಾಂಗಣದಲ್ಲಿ ಚೆಲ್ಲಬಾರದು (8-9). ತನ್ನ ನೆರಳಿನ ಮೇಲೆ, ವೃಕ್ಷದ ನೆರಳಿನಲ್ಲಿ ಮತ್ತು ಗೋವು ಸೂರ್ಯ ಅಗ್ನಿ ವಾಯು ಗುರು ದ್ವಿಜ—ಮುಂತಾದವರಿಗೆ ಅಭಿಮುಖವಾಗಿ ಬುದ್ಧಿಶಾಲಿಯು ಎಂದೂ ಮಲಮೂತ್ರಗಳನ್ನು ವಿಸರ್ಜಿಸಕೂಡದು (10). ಮತ್ತು ಉತ್ತ ಹೊಲದಲ್ಲಿ, ಬೆಳೆಯಿರುವ ನೆಲದಲ್ಲಿ, ಕೊಟ್ಟಿಗೆಯಲ್ಲಿ, ಜನಸಂಮರ್ದದ ಸ್ಥಳದಲ್ಲಿ, ದಾರಿಯಲ್ಲಿ, ನದ್ಯಾದಿ ತೀರ್ಥಗಳಲ್ಲಿ, ನೀರಲ್ಲಿ, ಜಲಾಶಯದ ತೀರದಲ್ಲಿ ಮತ್ತು ಶ್ಮಶಾನದಲ್ಲಿ ಮಲಮೂತ್ರಗಳ ವಿಸರ್ಜನೆಯನ್ನು ಮಾಡಕೂಡದು (11-12). ಹೇ ರಾಜ, ಆಪತ್ತಿನ ಸಂದರ್ಭವನ್ನು ಬಿಟ್ಟು ಉಳಿದ ಸಮಯದಲ್ಲಿ ಹಗಲು ಉತ್ತರ ದಿಕ್ಕಿಗೂ ರಾತ್ರಿ ದಕ್ಷಿಣ ದಿಕ್ಕಿಗೂ ಅಭಿಮುಖವಾಗಿ ಮೂತ್ರ ವಿಸರ್ಜನೆ ಮಾಡಬೇಕು (13). ತಲೆಗೆ ಮುಸುಕುಹಾಕಿಕೊಂಡು ಮಲವಿಸರ್ಜನೆ ಮಾಡಿ ಆ ಸ್ಥಳವನ್ನು ಹುಲ್ಲುಗಳಿಂದ ಮುಚ್ಚಬೇಕಲ್ಲದೆ, ಅಲ್ಲಿ ಹೆಚ್ಚು ಹೊತ್ತು ನಿಲ್ಲಬಾರದು; ಮಾತಾಡಬಾರದು (14). ಶೌಚಕ್ಕಾಗಿ

**ವಲ್ಮೀಕಮೂಷಿಕೋದ್‌ಭೂತಾಂ ಮೃದಂ ನಾಂತರ್ಜಲಾಂ ತಥಾ।**
**ಶೌಚಾವಶಿಷ್ಟಾಂ ಗೇಹಾಚ್ಚ ನಾದದ್ಯಾಲ್ಲೇಪಸಂಭವಾಮ್॥** 15

**ಅಣುಪ್ರಾಣ್ಯುಪಪನ್ನಾಂ ಚ ಹಲೋತ್ಖಾತಾಂ ಚ ಪಾರ್ಥಿವ।**
**ಪರಿತ್ಯಜೇನ್ಮೃದೋ ಹ್ಯೇತಾಸ್ಸಕಲಾಶ್ಶೌಚಕರ್ಮಣಿ॥** 16

**ಏಕಾ ಲಿಂಗೇ ಗುದೇ ತಿಸ್ರೋ ದಶ ವಾಮಕರೇ ನೃಪ।**
**ಹಸ್ತದ್ವಯೇ ಚ ಸಪ್ತ ಸ್ಯುರ್ಮೃದಶ್ಶೌಚೋಪಪಾದಿಕಾಃ॥** 17

**ಅಚ್ಛೇನಾಗಂಧಲೇಪೇನ ಜಲೇನಾಬುದ್ಬುದೇನ ಚ।**
**ಆಚಾಮೇಚ್ಚ ಮೃದಂ ಭೂಯಸ್ತಥಾದದ್ಯಾತ್ಸಮಾಹಿತಃ॥** 18

**ನಿಷ್ಪಾದಿತಾಂಘ್ರಿಶೌಚಸ್ತು ಪಾದಾವಭ್ಯುಕ್ಷ್ಯ ತೈಃ ಪುನಃ।**
**ತ್ರಿಃ ಪಿಬೇತ್ಸಲಿಲಂ ತೇನ ತಥಾ ದ್ವಿಃ ಪರಿಮಾರ್ಜಯೇತ್॥** 19

**ಶೀರ್ಷಣ್ಯಾನಿ ತತಃ ಖಾನಿ ಮೂರ್ಧಾನಂ ಚ ಸಮಾಲಭೇತ್।**
**ಬಾಹೂ ನಾಭಿಂ ಚ ತೋಯೇನ ಹೃದಯಂ ಚಾಪಿ ಸಂಸ್ಪೃಶೇತ್॥**

---

ಹುತ್ತದ ಮಣ್ಣನ್ನೂ ಇಲಿಗಳ ಬಿಲದ ಮಣ್ಣನ್ನೂ ನೀರಿನಲ್ಲಿ ಇರುವ ಮಣ್ಣನ್ನೂ ಬಳಸಬಾರದು. ಶೌಚಕ್ಕೆ ಬಳಸಿ ಉಳಿದಿದ್ದ ಮಣ್ಣನ್ನಾಗಲಿ ಮನೆಯ ಗೋಡೆಯ ಮಣ್ಣನ್ನಾಗಲಿ ಉಪಯೋಗಿಸಬಾರದು (15). ಸಗರ ರಾಜ, (ಇರುವೆ ಮುಂತಾದ) ಚಿಕ್ಕ ಜಂತುಗಳು ತಂದುಹಾಕಿದ ಮಣ್ಣನ್ನೂ ನೇಗಿಲಿನಿಂದ ಕೀಳಲ್ಪಟ್ಟ ಮಣ್ಣನ್ನೂ ಶೌಚಕ್ಕೆ ಬಳಸಬಾರದು (16). ಶಿಶ್ನದಲ್ಲೊಂದು ಸಲ, ಗುದಕ್ಕೆ ಮೂರು ಸಲ, ಎಡಹಸ್ತಕ್ಕೆ ಹತ್ತು ಸಲ, ಮತ್ತೆ ಎರಡೂ ಕೈಗಳಿಗೆ ಏಳು ಸಲ ಮಣ್ಣನ್ನು ಹಚ್ಚಿ ತೊಳೆಯುವುದರಿಂದ ಶೌಚವು ನೆರವೇರುತ್ತದೆ (17). ಅನಂತರ ವಾಸನೆಯೂ ನೊರೆಯೂ ಇಲ್ಲದ ಸ್ವಚ್ಛಜಲದಿಂದ ಬಾಯಿ ಮುಕ್ಕಳಿಸಿ, ಸಾವಧಾನವಾಗಿ ಮತ್ತೆ ಮಣ್ಣನ್ನು ತೆಗೆದುಕೊಂಡು ಪಾದಗಳಿಗೆ ಶೌಚಕ್ರಿಯೆಯನ್ನು ಮಾಡಿ ಕಾಲು ತೊಳೆದುಕೊಂಡು ಮೂರು ಸಲ ಆಚಮನ ಮಾಡಿ ಎರಡು ಸಲ ಪರಿ ಮಾರ್ಜನೆ ಮಾಡಿಕೊಳ್ಳಬೇಕು (18-19). ಅನಂತರ ಶಿರಸ್ಸಿನಲ್ಲಿರುವ ಕಿವಿ—ಮುಂತಾದ ಇಂದ್ರಿಯಗಳನ್ನೂ ತಲೆಯನ್ನೂ ತೋಳು ನಾಭಿ

**ಸ್ವಾಚಾಂತಸ್ತು ತತಃ ಕುರ್ಯಾತ್ಪುಮಾನ್ಕೇಶಪ್ರಸಾಧನಮ್ ।**
**ಆದರ್ಶಾಂಜನಮಾಂಗಲ್ಯಂ ದೂರ್ವಾದ್ಯಾಲಂಬನಾನಿ ಚ ॥** 21

**ತತಸ್ಸ್ವವರ್ಣಧರ್ಮೇಣ ವೃತ್ತ್ಯರ್ಥಂ ಚ ಧನಾರ್ಜನಮ್ ।**
**ಕುರ್ವೀತ ಶ್ರದ್ಧಾಸಂಪನ್ನೋ ಯಜೇಚ್ಚ ಪೃಥಿವೀಪತೇ ॥** 22

**ಸೋಮಸಂಸ್ಥಾ ಹವಿಸ್ಸಂಸ್ಥಾಃ ಪಾಕಸಂಸ್ಥಾಸ್ತು ಸಂಸ್ಥಿತಾಃ ।**
**ಧನೇ ಯತೋ ಮನುಷ್ಯಾಣಾಂ ಯತೇತಾತೋ ಧನಾರ್ಜನೇ ॥** 23

**ನದೀನದತಟಾಕೇಷು ದೇವಖಾತಜಲೇಷು ಚ ।**
**ನಿತ್ಯಕ್ರಿಯಾರ್ಥಂ ಸ್ನಾಯೀತ ಗಿರಿಪ್ರಸ್ರವಣೇಷು ಚ ॥** 24

**ಕೂಪೇಷೂದ್ಧೃತತೋಯೇನ ಸ್ನಾನಂ ಕುರ್ವೀತ ವಾ ಭುವಿ ।**
**ಗೃಹೇಷೂದ್ಧೃತತೋಯೇನ ಹ್ಯಥವಾ ಭುವ್ಯಸಂಭವೇ ॥** 25

---

ಹೃದಯಗಳನ್ನೂ ನೀರಿನಿಂದ ಮುಟ್ಟಿ ಒರಸಿಕೊಳ್ಳಬೇಕು (20). ಆಮೇಲೆ ಆಚಮನ ಮಾಡಿ ಕೇಶವನ್ನು ಸರಿಪಡಿಸಿಕೊಂಡು ಕನ್ನಡಿ, ಅಂಜನ, ದೂರ್ವಾದಿ ಮಂಗಳದ್ರವ್ಯಗಳನ್ನು ಉಪಯೋಗಿಸತಕ್ಕದ್ದು (21). ತರುವಾಯ ತನ್ನ ವರ್ಣಧರ್ಮವನ್ನನುಸರಿಸಿ ಜೀವಿತಾರ್ಥವಾಗಿ ಧನಾರ್ಜನೆಯ ಉದ್ಯಮದಲ್ಲಿ ತೊಡಗಬೇಕು. ಮಹಾರಾಜ, ಶ್ರದ್ಧಾ ಸಂಪನ್ನನಾಗಿ ಗೃಹಸ್ಥನು ಯಜ್ಞವನ್ನು ಮಾಡಬೇಕಾಗಿದೆ (22). ಸೋಮಸಂಸ್ಥ, ಹವಿಃಸಂಸ್ಥ, ಪಾಕಸಂಸ್ಥ* ಯಾಗಗಳೂ ಹಣದ ಮೇಲೆ ನಿಂತಿವೆ. ಆದ್ದರಿಂದ ಜನರು ಧನಾರ್ಜನೆಗಾಗಿ ಪ್ರಯತ್ನಿಸಬೇಕು (23). ಶಾಸ್ತ್ರೀಯವಾದ ನಿತ್ಯಕರ್ಮಗಳನ್ನು ಮಾಡುವಾಗ ಮೊದಲು ಸ್ನಾನಮಾಡ ತಕ್ಕದ್ದು. ನದಿ, ಹಳ್ಳ, ಸರಸ್ಸುಗಳಲ್ಲಿಯೂ ಸ್ವತಃಸಿದ್ಧವಾದ ಜಲಾಶಯ ಗಳಲ್ಲಿಯೂ ಗಿರಿ ಝುರಿಗಳಲ್ಲಿಯೂ ಮೀಯುವುದು ವಿಹಿತವಾಗಿದೆ (24). ಅಥವಾ ಬಾವಿಗಳಿಂದ ನೀರನ್ನೆತ್ತಿ ನೆಲದ ಮೇಲೆ ನಿಂತು ಸ್ನಾನಮಾಡ

---

* ಸೋಮಸಂಸ್ಥ—ಅಗ್ನಿಷ್ಟೋಮಾದಿ ಸಪ್ತಯಾಗಗಳು
ಹವಿಃಸಂಸ್ಥ—ದಶಪೂರ್ಣಮಾಸಾದಿ ಸಪ್ತಯಾಗಗಳು
ಪಾಕಸಂಸ್ಥ—ಔಪಾಸನಾದಿ ಸಪ್ತ ಯಾಗಗಳು.

**ಶುಚಿವಸ್ತ್ರಧರಃ ಸ್ನಾತೋ ದೇವರ್ಷಿಪಿತೃತರ್ಪಣಮ್ ।**
**ತೇಷಾಮೇವ ಹಿ ತೀರ್ಥೇನ ಕುರ್ವೀತ ಸುಸಮಾಹಿತಃ ॥ 26**

**ತ್ರಿರಪಃ ಪ್ರೀಣನಾರ್ಥಾಯ ದೇವಾನಾಮುಪವರ್ಜಯೇತ್ ।**
**ಋಷೀಣಾಂ ಚ ಯಥಾನ್ಯಾಯಂ ಸಕೃಚ್ಚಾಪಿ ಪ್ರಜಾಪತೇಃ ॥ 27**

**ಪಿತೄಣಾಂ ಪ್ರೀಣನಾರ್ಥಾಯ ತ್ರಿರಪಃ ಪೃಥಿವೀ ಪತೇ ।**
**ಪಿತಾಮಹೇಭ್ಯಶ್ಚ ತಥಾ ಪ್ರೀಣಯೇತ್ ಪ್ರಪಿತಾಮಹಾನ್ ॥ 28**

**ಮಾತಾಮಹಾಯ ತತ್ಪಿತ್ರೇ ತತ್ಪಿತ್ರೇ ಚ ಸಮಾಹಿತಃ ।**
**ದದ್ಯಾತ್ ಪೈತ್ರೇಣ ತೀರ್ಥೇನ ಕಾಮ್ಯಂ ಚಾನ್ಯಚ್ಛೃಣುಷ್ವ ಮೇ ॥**

**ಮಾತ್ರೇ ಪ್ರಮಾತ್ರೇ ತನ್ಮಾತ್ರೇ ಗುರುಪತ್ನ್ಯೈ ತಥಾ ನೃಪ ।**
**ಗುರೂಣಾಂ ಮಾತುಲಾನಾಂ ಚ ಸ್ನಿಗ್ಧಮಿತ್ರಾಯ ಭೂಭುಜೇ ॥ 30**

---

ಬೇಕು. ಅದು ಆಗದಿದ್ದರೆ ಎತ್ತಿದ ನೀರನ್ನು ಮನೆಗೆ ತಂದು ಸ್ನಾನಮಾಡಬಹುದು. ಸ್ನಾನವಾದ ಮೇಲೆ ಶುಚಿಯಾದ ವಸ್ತ್ರವನ್ನು ಧರಿಸಿ ದೇವರ್ಷಿಪಿತೃಗಳಿಗೆ ಕ್ರಮವಾಗಿ ದೈವಾದಿತೀರ್ಥಗಳಿಂದ ತರ್ಪಣವನ್ನೀಯತಕ್ಕದ್ದು (25-26). ದೇವತೆಗಳ ಪ್ರೀತಿಗಾಗಿ ಮೂರು ಸಲವೂ* ಅದೇ ರೀತಿಯಲ್ಲಿ ಋಷಿಗಳಿಗೂ ಪ್ರಜಾಪತಿಗಾಗಿ ಒಂದು ಸಲವೂ ಜಲವನ್ನು ಬಿಡಬೇಕು. ರಾಜ, ಪಿತೃ-ಪಿತಾಮಹ-ಪ್ರಪಿತಾಮಹರ ಪ್ರೀಣನಕ್ಕಾಗಿ ಮೂರು ಸಲ ತರ್ಪಣವನ್ನೀಯಬೇಕು. ಹಾಗೆಯೇ ಮಾತಾಮಹ, ಮಾತುಃಪಿತಾಮಹ, ಮಾತುಃಪ್ರಪಿತಾಮಹರಿಗೂ ಸಹ ಸಮಾಹಿತವಾಗಿ ಪಿತೃತೀರ್ಥದಿಂದ ತರ್ಪಣವನ್ನೀಯಬೇಕು. ಇನ್ನೊಂದು ವಿಷಯವನ್ನು ಕೇಳು (27-29). ಮಾತೃ, ಮಾತಾಮಹಿ, ಮಾತುಃಪಿತಾಮಹಿ, ಗುರುಪತ್ನಿ, ಗುರು, ಸೋದರಮಾವ, ಆಪ್ತಮಿತ್ರ, ರಾಜ—ಇವರಿಗೂ ತರ್ಪಣವನ್ನು ಕೊಡಬೇಕು. ಅಲ್ಲದೆ ದೇವಾದಿತರ್ಪಣಗಳನ್ನಿತ್ತ ಮೇಲೆ ಭೂತಗಳ ಉಪಕಾರಕ್ಕಾಗಿ ತನ್ನ ಇಚ್ಛಾನುಸಾರವಾಗಿ ಉಳಿದವರಿಗೂ ಮುಂದಿನ ಮಂತ್ರಗಳನ್ನು

---

*ಭೂಃ, ಭುವಃ, ಸುವಃ—ಎಂಬುದಾಗಿ ಮೂರು ಸಲ.

**ಇದಂ ಚಾಪಿ ಜಪೇದಂಬು ದದ್ಯಾದಾತ್ಮೇಚ್ಛಯಾ ನೃಪ।**
**ಉಪಕಾರಾಯ ಭೂತಾನಾಂ ಕೃತದೇವಾದಿತರ್ಪಣಮ್॥ 31**

**ದೇವಾಸುರಾಸ್ತಥಾ ಯಕ್ಷಾ ನಾಗಗಂಧರ್ವರಾಕ್ಷಸಾಃ।**
**ಪಿಶಾಚಾ ಗುಹ್ಯಕಾಸ್ಸಿದ್ಧಾಃ ಕೂಷ್ಮಾಂಡಾಃ ಪಶವಃ ಖಗಾಃ॥ 32**

**ಜಲೇಚರಾ ಭೂನಿಲಯಾ ವಾಹ್ವಾಹಾರಾಶ್ಚ ಜಂತವಃ।**
**ತೃಪ್ತಿಮೇತೇನ ಯಾಂತ್ವಾಶು ಮದ್ದತ್ತೇನಾಂಬುನಾಖಿಲಾಃ॥ 33**

**ನರಕೇಷು ಸಮಸ್ತೇಷು ಯಾತನಾಸು ಚ ಯೇ ಸ್ಥಿತಾಃ।**
**ತೇಷಾಮಾಪ್ಯಾಯನಾಯೈತದ್ದೀಯತೇ ಸಲಿಲಂ ಮಯಾ॥ 34**

**ಯೇಽಬಾಂಧವಾ ಬಾಂಧವಾ ವಾ ಯೇಽನ್ಯಜನ್ಮನಿ ಬಾಂಧವಾಃ।**
**ತೇ ತೃಪ್ತಿಮಖಿಲಾ ಯಾಂತು ಯೇ ಚಾಸ್ಮತ್ತೋಯಕಾಂಕ್ಷಿಣಃ॥ 35**

**ಯತ್ರ ಕ್ವಚನಸಂಸ್ಥಾನಾಂ ಕ್ಷುತ್ತೃಷ್ಣೋಪಹತಾತ್ಮನಾಮ್।**
**ಇದಮಾಪ್ಯಾಯನಾಯಾಸ್ತು ಮಯಾ ದತ್ತಂ ತಿಲೋದಕಮ್॥ 36**

---

ಜಪಿಸುತ್ತ ಜಲತರ್ಪಣವನ್ನೀಯಬಹುದು (30-31). (32 ರಿಂದ 36ನೆಯ ಶ್ಲೋಕ ಪೂರ್ತಿಯಾಗಿ ಜಪಿಸತಕ್ಕ ಮಂತ್ರ.) "ದೇವತೆಗಳು, ಅಸುರರು, ಯಕ್ಷರು, ನಾಗ ಗಂಧರ್ವರಾಕ್ಷಸರು, ಪಿಶಾಚಗಳು, ಗುಹ್ಯಕರು, ಸಿದ್ಧರು, ಕೂಷ್ಮಾಂಡಗಣಗಳು, ಪಶುಪಕ್ಷಿಗಳು, ಜಲಚರ ಸ್ಥಲಚರಗಳು, ವಾತ ಭಕ್ಷಕಗಳಾದ ಜೀವಿಗಳು—ಇವರೆಲ್ಲರೂ ನಾನು ಅರ್ಪಿಸಿದ ಈ ಜಲದಿಂದ ಶೀಘ್ರವಾಗಿ ತೃಪ್ತಿಯನ್ನೈದಲಿ (32-33). ಸಮಸ್ತ ನರಕಗಳಲ್ಲಿ ನಾನಾವಿಧ ಯಾತನೆಗಳನ್ನನುಭವಿಸುತ್ತ ಯಾರಿದ್ದಾರೋ ಅವರಿಗೆ ಆಪ್ಯಾಯನವಾಗ ಲೆಂದು ಈ ಜಲವನ್ನು ಕೊಡುತ್ತಿದ್ದೇನೆ (34). ನಾನು ಕೊಡುವ ಜಲವನ್ನು ಬಯಸುತ್ತಿರುವ ಬಂಧುಗಳು, ಅಬಂಧುಗಳು, ಜನ್ಮಾಂತರ ಬಂಧುಗಳು —ಎಲ್ಲರೂ ಈ ಜಲದಿಂದ ತೃಪ್ತಿಯನ್ನು ಪಡೆಯಲಿ (35). ಹಸಿವು ಬಾಯಾರಿಕೆಗಳಿಂದ ಬಳಲಿಹೋದ ಜೀವಿಗಳು ಎಲ್ಲಿಯಾದರೂ ಇರಲಿ, ಅವರೆಲ್ಲರಿಗೂ ತೃಪ್ತಿಯಾಗಲೆಂದು ನಾನು ಈ ತಿಲೋದಕವನ್ನು ಬಿಟ್ಟಿದ್ದೇನೆ" (36). ರಾಜ, ಕಾಮ್ಯವಾದ ಈ ತರ್ಪಣಪ್ರಕಾರವನ್ನು ನಿನಗೆ

ಕಾಮ್ಯೋದಕಪ್ರದಾನಂ ತೇ ಮಯ್ಯೈತತ್ಕಥಿತಂ ನೃಪ।
ಯದ್ದತ್ತ್ವಾ ಪ್ರೀಣಯತ್ಯೇತನ್ಮನುಷ್ಯಸ್ಸಕಲಂ ಜಗತ್॥ 37

ಜಗದಾಪ್ಯಾಯನೋದ್‌ಭೂತಂ ಪುಣ್ಯಮಾಪ್ನೋತಿ ಚಾನಘ।
ದತ್ತ್ವಾ ಕಾಮ್ಯೋದಕಂ ಸಮ್ಯಗೇತೇಭ್ಯಃ ಶ್ರದ್ಧಯಾನ್ವಿತಃ॥ 38

ಆಚಮ್ಯ ಚ ತತೋ ದದ್ಯಾತ್ ಸೂರ್ಯಾಯ ಸಲಿಲಾಂಜಲಿಮ್।
ನಮೋ ವಿವಸ್ವತೇ ಬ್ರಹ್ಮಭಾಸ್ವತೇ ವಿಷ್ಣುತೇಜಸೇ॥ 39

ಜಗತ್ಸವಿತ್ರೇ ಶುಚಯೇ ಸವಿತ್ರೇ ಕರ್ಮಸಾಕ್ಷಿಣೇ।
ತತೋ ಗೃಹಾರ್ಚನಂ ಕುರ್ಯಾದಭೀಷ್ಟಸುರಪೂಜನಮ್॥ 40

ಜಲಾಭಿಷೇಕೈಃ ಪುಷ್ಪೈಶ್ಚ ಧೂಪಾದ್ಯೈಶ್ಚ ನಿವೇದನಮ್।
ಅಪೂರ್ವಮಗ್ನಿಹೋತ್ರಂ ಚ ಕುರ್ಯಾತ್ ಪ್ರಾಗ್‌ಬ್ರಹ್ಮಣೇ ನೃಪ॥

ಪ್ರಜಾಪತಿಂ ಸಮುದ್ದಿಶ್ಯ ದದ್ಯಾದಾಹುತಿಮಾದರಾತ್।
ಗೃಹ್ಯಾಭ್ಯಃ ಕಾಶ್ಯಪಾಯಾಥ ತತೋಽನುಮತಯೇ ಕ್ರಮಾತ್॥ 42

---

ಹೇಳಿದ್ದೇನೆ. ಈ ತರ್ಪಣದಿಂದ ಮನುಷ್ಯನು ಸಕಲ ಜಗತ್ತನ್ನೂ ಸಂತೋಷ ಪಡಿಸುತ್ತಾನೆ (37). ಶ್ರದ್ಧಾಪೂರ್ವಕವಾಗಿ ಯಾವಾತನು ಈ ಕಾಮ್ಯೋದಕ ತರ್ಪಣವನ್ನು ಸರಿಯಾಗಿ ಕೊಡುತ್ತಿರುವನೋ ಆತನು ಸಕಲ ಜಗತ್ತನ್ನೂ ಸಂತೋಷಪಡಿಸಿದ ಪುಣ್ಯವನ್ನು ಪಡೆಯುತ್ತಾನೆ (38). ಅನಂತರ ಆಚಮನಮಾಡಿ ಬೊಗಸೆಯಲ್ಲಿ ನೀರಿನ ಅರ್ಘ್ಯವನ್ನು ಸೂರ್ಯನಿಗೆ ಅರ್ಪಿಸಬೇಕು. "ವೇದವೇದ್ಯನೂ ವಿಷ್ಣುವಿನ ತೇಜೋರೂಪನೂ ವಿಶ್ವದ ಸೃಷ್ಟಿಕರ್ತನೂ ಶುಚಿಯೂ ಸವಿತೃವೂ ಕರ್ಮಸಾಕ್ಷಿಯೂ ಆದ ವಿವಸ್ವಂತ ನಿಗೆ ನಮಸ್ಕಾರ" ಎಂದು ಹೇಳಬೇಕು. ಅನಂತರ ಗೃಹದಲ್ಲಿ ಇಷ್ಟ ದೇವತಾರ್ಚನೆಯನ್ನು ಮಾಡತಕ್ಕದ್ದು (39-40). ಜಲಾಭಿಷೇಕ, ಹೂಗಳು, ಧೂಪ ಮುಂತಾದವನ್ನು ಅರ್ಪಿಸಿ ದೇವಪೂಜೆಯನ್ನು ಮಾಡ ಬೇಕು. ಮೊದಲು ಮಾಡದಿದ್ದಲ್ಲಿ ಈಗ ಅಗ್ನಿಹೋತ್ರವನ್ನು ನಡೆಸಬೇಕು. ಅಲ್ಲಿ ಮೊದಲು ಬ್ರಹ್ಮನಿಗೆ, ಅನಂತರ ಕ್ರಮವಾಗಿ ಪ್ರಜಾಪತಿ, ಗೃಹ್ಯದೇವತೆ ಗಳು, ಕಾಶ್ಯಪ, ಅನುಮತಿ—ಇವರಿಗೆ ಆಹುತಿಯನ್ನರ್ಪಿಸಬೇಕು (41-

**ತಚ್ಛೇಷಂ ಮಣಿಕೇ ಪೃಥ್ವೀ ಪರ್ಜನ್ಯೇಭ್ಯಃ ಕ್ಷಿಪೇತ್ತತಃ।**
**ದ್ವಾರೇ ಧಾತುರ್ವಿಧಾತುಶ್ಚ ಮಧ್ಯೇ ಚ ಬ್ರಹ್ಮಣೇ ಕ್ಷಿಪೇತ್।**
**ಗೃಹಸ್ಯ ಪುರುಷವ್ಯಾಘ್ರ ದಿಗ್ದೇವಾನಪಿ ಮೇ ಶೃಣು॥ 43**

**ಇಂದ್ರಾಯ ಧರ್ಮರಾಜಾಯ ವರುಣಾಯ ತಥೇಂದವೇ।**
**ಪ್ರಾಚ್ಯಾದಿಷು ಬುಧೋ ದದ್ಯಾದ್‌ಧುತಶೇಷಾತ್ಮಕಂ ಬಲಿಮ್॥ 44**

**ಪ್ರಾಗುತ್ತರೇ ಚ ದಿಗ್ಭಾಗೇ ಧನ್ವಂತರಿಬಲಿಂ ಬುಧಃ।**
**ನಿರ್ವಪೇದ್ವೈಶ್ವದೇವಂ ಚ ಕರ್ಮ ಕುರ್ಯಾದತಃ ಪರಮ್॥ 45**

**ವಾಯವ್ಯಾಂ ವಾಯವೇ ದಿಕ್ಷು ಸಮಸ್ತಾಸು ಯಥಾದಿಶಮ್।**
**ಬ್ರಹ್ಮಣೇ ಚಾಂತರಿಕ್ಷಾಯ ಭಾನವೇ ಚ ಕ್ಷಿಪೇದ್ಬಲಿಮ್॥ 46**

**ವಿಶ್ವೇದೇವಾನ್ ವಿಶ್ವಭೂತಾನಥ ವಿಶ್ವಪತೀನ್ ಪಿತೄನ್।**
**ಯಕ್ಷಾಣಾಂ ಚ ಸಮುದ್ದಿಶ್ಯ ಬಲಿಂ ದದ್ಯಾನ್ನರೇಶ್ವರ॥ 47**

---

42). ಆಮೇಲೆ ಆಹುತಿಶೇಷವನ್ನು ಪೃಥ್ವೀಪರ್ಜನ್ಯ ದೇವತೆಗಳ ಉದ್ದೇಶದಿಂದ 'ಮಣಿಕ' ಎಂಬ* ಪಾತ್ರೆಯಲ್ಲಿ ಹಾಕಬೇಕು. ಆಹುತಿ ಶೇಷದ ಇನ್ನೊಂದು ಭಾಗವನ್ನು ಗೃಹದ್ವಾರದಲ್ಲಿ ಧಾತೃವಿಧಾತೃಗಳಿಗಾಗಿಯೂ ಗೃಹ ಮಧ್ಯದಲ್ಲಿ ಬ್ರಹ್ಮನಿಗಾಗಿಯೂ ಅರ್ಪಿಸತಕ್ಕದ್ದು. ಭೂಪಾಲ, ಈಗ ನಾನು ದಿಕ್ಪಾಲದೇವತೆಗಳ ವಿಷಯವಾಗಿ ಹೇಳುತ್ತೇನೆ ಕೇಳು (43). ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಕ್ರಮವಾಗಿ ಇಂದ್ರ, ಯಮ ಧರ್ಮರಾಜ, ವರುಣ ಮತ್ತು ಚಂದ್ರ—ಇವರಿಗೆ ಹುತಶೇಷದಿಂದ ಬಲಿಯನ್ನರ್ಪಿಸಬೇಕು. ವಿದ್ವಾಂಸನಾದವನು ಈಶಾನ್ಯದಿಗ್ಭಾಗದಲ್ಲಿ ಧನ್ವಂತರಿ ಬಲಿಯನ್ನರ್ಪಿಸಿ, ಅನಂತರ ವೈಶ್ವದೇವವನ್ನು ಮಾಡಬೇಕು (44-45). ಆಗ ವಾಯವ್ಯದಿಕ್ಕಿನಲ್ಲಿ ವಾಯುವಿಗೂ ಹೀಗೆ ಉಳಿದ ದಿಗ್ಭಾಗಗಳಲ್ಲಿಯೂ (ಅಗ್ನಿ, ನೈರ್ಋತಿ, ಈಶಾನರಿಗೆ) ಬಲಿಯನ್ನರ್ಪಿಸಬೇಕಲ್ಲದೆ, ಬ್ರಹ್ಮ ಅಂತರಿಕ್ಷ ಸೂರ್ಯರಿಗೂ ಬಲಿಯನ್ನರ್ಪಿಸತಕ್ಕದ್ದು (46). ವಿಶ್ವೇದೇವರು, ವಿಶ್ವಭೂತಗಳು, ವಿಶ್ವಪತಿಗಳು, ಪಿತೃಗಳು, ಯಕ್ಷರು—ಇವರನ್ನು

---

* ಅಗ್ನಿಹೋತ್ರ ಮಾಡುವಾಗ ಬಳಿಯಲ್ಲಿಟ್ಟಿರುವ ಒಂದು ಶೇಷಪಾತ್ರೆ.

**ತತೋಽನ್ಯದನ್ನಮಾದಾಯ ಭೂಮಿಭಾಗೇ ಶುಚೌ ಬುಧಃ।**
**ದದ್ಯಾದಶೇಷಭೂತೇಭ್ಯಃ ಸ್ವೇಚ್ಛಯಾ ಸುಸಮಾಹಿತಃ॥** 48

**ದೇವಾಮನುಷ್ಯಾಃ ಪಶವೋ ವಯಾಂಸಿ**
**ಸಿದ್ಧಾಸ್ಸಯಕ್ಷೋರಗದೈತ್ಯಸಂಘಾಃ।**
**ಪ್ರೇತಾಃ ಪಿಶಾಚಾಸ್ತರವಸ್ಸಮಸ್ತಾ**
**ಯೇ ಚಾನ್ನಮಿಚ್ಛಂತಿ ಮಯಾತ್ರ ದತ್ತಮ್॥** 49

**ಪಿಪೀಲಿಕಾಃ ಕೀಟಪತಂಗಕಾದ್ಯಾ**
**ಬುಭುಕ್ಷಿತಾಃ ಕರ್ಮನಿಬಂಧಬದ್ಧಾಃ।**
**ಪ್ರಯಾಂತು ತೇ ತೃಪ್ತಿಮಿದಂ ಮಯಾನ್ನಂ**
**ತೇಭ್ಯೋ ವಿಸೃಷ್ಟಂ ಸುಖಿನೋ ಭವಂತು॥** 50

**ಯೇಷಾಂ ನ ಮಾತಾ ನ ಪಿತಾ ನ ಬಂಧು-**
**ರ್ನೈವಾನ್ನಸಿದ್ಧಿರ್ನ ತಥಾನ್ನಮಸ್ತಿ।**
**ತತ್ತೃಪ್ತಯೇಽನ್ನಂ ಭುವಿ ದತ್ತಮೇತತ್**
**ತೇ ಯಾಂತು ತೃಪ್ತಿಂ ಮುದಿತಾ ಭವಂತು॥** 51

---

ಉದ್ದೇಶಿಸಿಯೂ ಬಲಿಯನ್ನರ್ಪಿಸಬೇಕು. ಆಮೇಲೆ ಬೇರೆ ಅನ್ನವನ್ನು ತೆಗೆದುಕೊಂಡು ಸಾವಧಾನಚಿತ್ತನಾಗಿ ಸಮಸ್ತ ಭೂತಗಳಿಗೂ ಬಲಿಪ್ರದಾನ ವನ್ನು ಸ್ವೇಚ್ಛೆಯಿಂದ ಮಾಡತಕ್ಕದ್ದು (47-48). (ಆ ಸಮಯದಲ್ಲಿ ಈ ಪ್ರಕಾರ ಹೇಳಬೇಕು). "ದೇವತೆಗಳು, ಮನುಷ್ಯರು, ಪಶುಪಕ್ಷಿಗಳು, ಸಿದ್ಧಯಕ್ಷೋರಗ ದೈತ್ಯರು, ಪ್ರೇತಗಳು, ಪಿಶಾಚಗಳು, ಸಮಸ್ತ ವೃಕ್ಷಗಳು —ಯಾರು ಯಾರು ಅನ್ನವನ್ನು ಬಯಸುತ್ತಾರೋ ಅವರಿಗೆ ನಾನು ಅನ್ನ ವನ್ನು ನೀಡಿದ್ದೇನೆ (49). ಕರ್ಮಬಂಧಕ್ಕೆ ಒಳಗಾಗಿರುವ ಇರುವೆಗಳು, ಕೀಟಗಳು, ಪತಂಗಾದಿಗಳು ಯಾವಯಾವುವು ಹಸಿದಿವೆಯೋ ಅವೆಲ್ಲವೂ ತೃಪ್ತಿಯನ್ನೈದಲಿ. ಅವುಗಳಿಗಾಗಿ ಅನ್ನವನ್ನು ನೀಡಿದ್ದೇನೆ. ಅವರು ಸುಖಿಗಳಾಗಲಿ (50). ಯಾರಿಗೆ ತಾಯಿ ತಂದೆಗಳಾಗಲಿ ಬಂಧು ಗಳಾಗಲಿ ಇಲ್ಲವೋ ಅನ್ನಕ್ಕೆ ಸಾಧನವಾಗಲಿ ಅನ್ನವಾಗಲಿ ಇಲ್ಲವೋ ಅವರ ತೃಪ್ತಿಗಾಗಿ ನಾನು ಅನ್ನವನ್ನು ಹಾಕಿದ್ದೇನೆ. ಅವರು ತೃಪ್ತರಾಗಲಿ; ಸಂತುಷ್ಟ

**ಭೂತಾನಿ ಸರ್ವಾಣಿ ತಥಾನ್ನಮೇತ-**
**ದಹಂ ಚ ವಿಷ್ಣುರ್ನ ತತೋಽನ್ಯದಸ್ತಿ।**
**ತಸ್ಮಾದಹಂ ಭೂತನಿಕಾಯಭೂತ-**
**ಮನ್ನಂ ಪ್ರಯಚ್ಛಾಮಿ ಭವಾಯ ತೇಷಾಮ್॥** 52

**ಚತುರ್ದಶೋ ಭೂತಗಣೋ ಯ ಏಷ**
**ತತ್ರ ಸ್ಥಿತಾ ಯೇಽಖಿಲಭೂತಸಂಘಾಃ।**
**ತೃಪ್ತ್ಯರ್ಥಮನ್ನಂ ಹಿ ಮಯಾ ವಿಸೃಷ್ಟಂ**
**ತೇಷಾಮಿದಂ ತೇ ಮುದಿತಾ ಭವಂತು॥** 53

**ಇತ್ಯುಚ್ಚಾರ್ಯ ನರೋ ದದ್ಯಾದನ್ನಂ ಶ್ರದ್ಧಾಸಮನ್ವಿತಃ।**
**ಭುವಿ ಸರ್ವೋಽಪಕಾರಾಯ ಗೃಹೀ ಸರ್ವಾಶ್ರಯೋ ಯತಃ॥** 54

**ಶ್ವಚಾಂಡಾಲವಿಹಂಗಾನಾಂ ಭುವಿ ದದ್ಯಾನ್ನರೇಶ್ವರ।**
**ಯೇ ಚಾನ್ಯೇ ಪತಿತಾಃ ಕೇಚಿದಪುತ್ರಾಃ ಸಂತಿ ಮಾನವಾಃ॥** 55

---

ರಾಗಲಿ (51). ಸಮಸ್ತ ಭೂತಗಳೂ ಈ ಅನ್ನವೂ ನಾನೂ ಸಹ ವಿಷ್ಣುವೇ. ವಿಷ್ಣುವಿಗಿಂತ ಅನ್ಯವಸ್ತು ಯಾವುದೂ ಇಲ್ಲ. ಆದ್ದರಿಂದ ಆ ಭೂತಗಳ ಪೋಷಣೆಗಾಗಿ ಭೂತಶರೀರರೂಪವಾದ ಅನ್ನವನ್ನು ಕೊಡುತ್ತೇನೆ (52). ಹದಿನಾಲ್ಕು* ಬಗೆಯ ಭೂತಗಣಗಳಲ್ಲಿ ಸೇರಿರುವ ಯಾವ ಯಾವ ಭೂತಗಳಿವೆಯೋ ಅವರೆಲ್ಲರ ತೃಪ್ತಿಗಾಗಿ ಈ ಅನ್ನವನ್ನು ನೀಡಿದ್ದೇನೆ. ಎಲ್ಲರೂ ಸಂತೋಷವನ್ನೈದಲಿ" (53). ಹೀಗೆ ಹೇಳಿ ಗೃಹಸ್ಥನು ಶ್ರದ್ಧೆಯಿಂದ ಸರ್ವಜೀವಿಗಳ ಉಪಕಾರಕ್ಕಾಗಿ ನೆಲದ ಮೇಲೆ ಅನ್ನವನ್ನು ಹಾಕಬೇಕು. ಏಕೆಂದರೆ ಗೃಹಸ್ಥಾಶ್ರಮವು ಸರ್ವರಿಗೂ ಆಶ್ರಯದಾತೃವಾಗಿದೆ (54). ಅನಂತರ ನಾಯಿ ಚಂಡಾಲ ಪಕ್ಷಿಗಳಿಗೂ ಪತಿತರಿಗೂ ಪುತ್ರಹೀನ

---

* ದೇವಯೋನಿಗಳು ಎಂಟು: ಸಿದ್ಧ, ಗುಹ್ಯಕ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗ (ಸರ್ಪ), ವಿದ್ಯಾಧರ, ಪಿಶಾಚ. ತಿರ್ಯಗ್ಯೋನಿಗಳು ಐದು: ಹರಿದಾಡುವ ಹಾವು ಮೊದಲಾದ ಸರೀಸೃಪ, ವಾನರ, ಅಶ್ವಾದಿಪಶು, ವ್ಯಾಘ್ರಾದಿ ಮೃಗ, ಪಕ್ಷಿ. ಮನುಷ್ಯಯೋನಿ ಒಂದು: ಮಾನವ. ಹೀಗೆ ಹದಿನಾಲ್ಕು ಭೂತಗಣಗಳು.

**ತತೋ ಗೋದೋಹಮಾತ್ರಂ ವೈಕಾಲಂ ತಿಷ್ಠೇದ್ಗೃಹಾಂಗಣೇ।**
**ಅತಿಥಿಗ್ರಹಣಾರ್ಥಾಯ ತದೂರ್ಧ್ವಂ ತು ಯಥೇಚ್ಛಯಾ॥** 56

**ಅತಿಥಿಂ ತತ್ರ ಸಂಪ್ರಾಪ್ತಂ ಪೂಜಯೇತ್ ಸ್ವಾಗತಾದಿನಾ।**
**ತಥಾಸನಪ್ರದಾನೇನ ಪಾದಪ್ರಕ್ಷಾಲನೇನ ಚ॥** 57

**ಶ್ರದ್ಧಯಾ ಚಾನ್ನದಾನೇನ ಪ್ರಿಯಪ್ರಶ್ನೋತ್ತರೇಣ ಚ।**
**ಗಚ್ಛತಶ್ಚಾನುಯಾನೇನ ಪ್ರೀತಿಮುತ್ಪಾದಯೇದ್ ಗೃಹೀ॥** 58

**ಅಜ್ಞಾತಕುಲನಾಮಾನಮನ್ಯದೇಶಾದುಪಾಗತಮ್।**
**ಪೂಜಯೇದತಿಥಿಂ ಸಮ್ಯಙ್ನೈಕಗ್ರಾಮನಿವಾಸಿನಮ್॥** 59

**ಅಕಿಂಚನಮಸಂಬಂಧಮಜ್ಞಾತಕುಲಶೀಲಿನಮ್।**
**ಅಸಂಪೂಜ್ಯಾತಿಥಿಂ ಭುಕ್ತ್ವಾ ಭೋಕ್ತುಕಾಮಂ ವ್ರಜತ್ಯಧಃ॥** 60

---

ರಾಗಿ ದುರ್ಗತಿಯಲ್ಲಿರತಕ್ಕವರಿಗೂ ತೃಪ್ತಿಯಾಗಲೆಂದು ಭೂಮಿಯಲ್ಲಿ ಹಾಕತಕ್ಕದ್ದು. ಆಮೇಲೆ ಗೋವನ್ನು ಕರೆಯುವಷ್ಟು ಹೊತ್ತಿನವರೆಗೆ ತನ್ನ ಗೃಹಾಂಗಣದಲ್ಲಿ ಅತಿಥಿಯನ್ನು ಸ್ವಾಗತಿಸುವುದಕ್ಕಾಗಿ ಕಾದಿರಬೇಕು. ಇಷ್ಟಾನುಸಾರ ಅದಕ್ಕೂ ಹೆಚ್ಚು ಹೊತ್ತು ಕಾಯಬಹುದು (55-56). ಅತಿಥಿಯು ಆಗಮಿಸಿದರೆ ಆತನನ್ನು ಸ್ವಾಗತಿಸಿ ಪೀಠವನ್ನಿತ್ತು ಕಾಲು ತೊಳೆದು ಸತ್ಕರಿಸಬೇಕು. ಅತಿಥಿಗೆ ಶ್ರದ್ಧೆಯಿಂದ ಅನ್ನವಿತ್ತು ಭೋಜನ ಮಾಡಿಸಿ ಪ್ರಿಯವಾದ ಪ್ರಶ್ನೋತ್ತರಗಳಿಂದಲೂ ಅವನು ಹೋಗುವಾಗ ಕಳಿಸುತ್ತ ಹಿಂದೆ ಹೋಗಿಯೂ ಗೃಹಸ್ಥನು ಸಂತೋಷಪಡಿಸಬೇಕು (57-58). ಯಾರ ಕುಲವಾಗಲಿ ಹೆಸರಾಗಲಿ ಗೊತ್ತಿಲ್ಲವೋ ಅನ್ಯದೇಶದಿಂದ ಬಂದಿರುತ್ತಾನೋ ಅವನು ಅತಿಥಿಯೆಂದು ತಿಳಿದು ಚೆನ್ನಾಗಿ ಸತ್ಕರಿಸಬೇಕು. ತನ್ನ ಗ್ರಾಮದಲ್ಲಿಯೇ ಇರತಕ್ಕವನನ್ನು ಅತಿಥಿಯೆಂದು ಸತ್ಕರಿಸಬೇಕಾಗಿಲ್ಲ (59). ಯಾರ ಬಳಿ ಭೋಜನಸಾಮಗ್ರಿ ಇಲ್ಲವೋ ಯಾರು ತನಗೆ ಸಂಬಂಧಿಯಲ್ಲವೋ ಯಾರ ಕುಲಶೀಲಗಳು ತಿಳಿದಿಲ್ಲವೋ ಯಾವಾತನು ಊಟ ಮಾಡಲು ಬಯಸುತ್ತಾನೋ ಅಂತಹ ಅತಿಥಿಯನ್ನು ಬಿಟ್ಟು ಯಾವ ಗೃಹಸ್ಥನು ಊಟ ಮಾಡುತ್ತಾನೋ ಅವನು ದುರ್ಗತಿಯನ್ನು ಹೊಂದುತ್ತಾನೆ (60). ಮನೆಗೆ ಬಂದ ಅತಿಥಿಯೊಡನೆ ಆತನ ವೇದಾಧ್ಯಯನ, ಗೋತ್ರ,

**ಸ್ವಾಧ್ಯಾಯಗೋತ್ರಾಚರಣಮಪೃಷ್ಟ್ವಾ ಚ ತಥಾ ಕುಲಮ್।**
**ಹಿರಣ್ಯಗರ್ಭಬುದ್ಧ್ಯಾ ತಂ ಮನ್ಯೇತಾಭ್ಯಾಗತಂ ಗೃಹೀ॥ 61**

**ಪಿತ್ರರ್ಥಂ ಚಾಪರಂ ವಿಪ್ರಮೇಕಮಪ್ಯಾಶಯೇನ್ನೃಪ।**
**ತದ್ದೇಶ್ಯಂ ವಿದಿತಾಚಾರಸಂಭೂತಿಂ ಪಾಂಚಯಜ್ಞಿಕಮ್॥ 62**

**ಅನ್ನಾಗ್ರಂಚ ಸಮುದ್ಧೃತ್ಯ ಹಂತಕಾರೋಪಕಲ್ಪಿತಮ್।**
**ನಿವಾಪಭೂತಂ ಭೂಪಾಲ ಶ್ರೋತ್ರಿಯಾಯೋಪಪಾದಯೇತ್॥ 63**

**ದತ್ತ್ವಾ ಚ ಭಿಕ್ಷಾತ್ರಿತಯಂ ಪರಿವ್ರಾಡ್ ಬ್ರಹ್ಮಚಾರಿಣಾಮ್।**
**ಇಚ್ಛಯಾ ಚ ಬುಧೋ ದದ್ಯಾದ್ ವಿಭವೇ ಸತ್ಯವಾರಿತಮ್॥ 64**

**ಇತ್ಯೇತೇಽತಿಥಯಃ ಪ್ರೋಕ್ತಾಃ ಪ್ರಾಗುಕ್ತಾ ಭಿಕ್ಷವಶ್ಚ ಯೇ।**
**ಚತುರಃ ಪೂಜಯಿತ್ವೈತಾನ್ ನೃಪ ಪಾಪಾತ್ ಪ್ರಮುಚ್ಯತೇ॥ 65**

---

ಆಚಾರಕುಲಗಳನ್ನಾಗಲಿ ಕುಲವನ್ನಾಗಲಿ ಕೇಳದೆ, ಆತನು ಬ್ರಹ್ಮದೇವನೇ ಎಂಬ ಬುದ್ಧಿಯಿಂದ ಗೃಹಸ್ಥನಾದವನು ಆದರಿಸಬೇಕು (61). ರಾಜ, ಅಲ್ಲದೆ ಯಾರ ಆಚಾರಕುಲಗಳು ಗೊತ್ತಿವೆಯೋ ಪಂಚಯಜ್ಞಗಳನ್ನು ಪ್ರತಿದಿನವೂ ಮಾಡುವ ಅಂತಹ ತನ್ನ ಪ್ರಾಂತದ ಇನ್ನೊಬ್ಬ ವಿಪ್ರನಿಗೆ ಪಿತೃಗಳ ತೃಪ್ತಿಗಾಗಿ ಭೋಜನವನ್ನು ಮಾಡಿಸಬೇಕು (62). ಭೂಪಾಲ, (ಮನುಷ್ಯಯಜ್ಞವಿಧಿಯಿಂದ) 'ಮನುಷ್ಯೇಭ್ಯೋ ಹಂತ' ಎಂಬುದಾಗಿ ಮೊದಲು ಯಾವ ಅನ್ನವನ್ನು ನಿವಾಪವಾಗಿ ಇಡಲಾಗಿತ್ತೋ ಅದರಿಂದ ಅನ್ನಭಾಗವನ್ನು ತಂದು ಆ ಶ್ರೋತ್ರಿಯನಿಗೆ ಭೋಜನವನ್ನು ನೀಡಬೇಕು (63). ಸಂನ್ಯಾಸಿ ಮತ್ತು ಬ್ರಹ್ಮಚಾರಿಗಳಿಗೆ ಮೂರು ಹಿಡಿ ಭಿಕ್ಷೆಯನ್ನು ಕೊಡಬೇಕು. ಸಾಮರ್ಥ್ಯವಿದ್ದರೆ ಇಷ್ಟಾನುಸಾರ ಎಷ್ಟಾದರೂ ಕೊಡಬಹುದು (64). ರಾಜ, ಈ ಪ್ರಕಾರವಾಗಿ ಅತಿಥಿ, ಶ್ರೋತ್ರಿಯ, ಸಂನ್ಯಾಸಿ, ಬ್ರಹ್ಮಚಾರಿ—ಈ ನಾಲ್ವರನ್ನು ಸತ್ಕರಿಸತಕ್ಕವನು ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ (65). ಯಾರ ಮನೆಯಿಂದ ಅತಿಥಿಯು ಆಶಾಭಂಗ ಹೊಂದಿ ಹಿಂದಿರುಗುವನೋ ಆ ಗೃಹಸ್ಥನಿಗೆ ತನ್ನ ಪಾಪವನ್ನು ಕೊಟ್ಟು ಅವನ ಪುಣ್ಯವನ್ನು ತೆಗೆದುಕೊಂಡು ಆ ಅತಿಥಿಯು ಹೋಗುತ್ತಾನೆ

**ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ ಪ್ರತಿನಿವರ್ತತೇ ।**
**ಸ ತಸ್ಮೈ ದುಷ್ಕೃತಂ ದತ್ತ್ವಾ ಪುಣ್ಯಮಾದಾಯ ಗಚ್ಛತಿ ॥** 66

**ಧಾತಾ ಪ್ರಜಾಪತಿಃ ಶಕ್ರೋ ವಹ್ನಿರ್ವಸುಗಣೋಽರ್ಯಮಾ ।**
**ಪ್ರವಿಶ್ಯಾತಿಥಿಮೇತೇ ವೈ ಭುಂಜಂತೇಽನ್ನಂ ನರೇಶ್ವರ ॥** 67

**ತಸ್ಮಾದತಿಥಿಪೂಜಾಯಾಂ ಯತೇತ ಸತತಂ ನರಃ ।**
**ಸ ಕೇವಲಮಘಂ ಭುಂಕ್ತೇ ಯೋ ಭುಂಕ್ತೇ ಹ್ಯತಿಥಿಂ ವಿನಾ ॥** 68

**ತತಃ ಸುವಾಸಿನೀದುಃಖಿಗರ್ಭಿಣೀವೃದ್ಧಬಾಲಕಾನ್ ।**
**ಭೋಜಯೇತ್ ಸಂಸ್ಕೃತಾನ್ನೇನ ಪ್ರಥಮಂ ಚರಮಂ ಗೃಹೀ ॥** 69

**ಅಭುಕ್ತವತ್ಸು ಚೈತೇಷು ಭುಂಜನ್ ಭುಂಕ್ತೇ ಸ ದುಷ್ಕೃತಮ್ ।**
**ಮೃತಶ್ಚ ಗತ್ವಾ ನರಕಂ ಶ್ಲೇಷ್ಮಭುಗ್ಜಾಯತೇ ನರಃ ॥** 70

**ಅಸ್ನಾತಾಶೀ ಮಲಂಭುಂಕ್ತೇ ಹ್ಯಜಪೀ ಪೂಯಶೋಣಿತಮ್ ।**
**ಅಸಂಸ್ಕೃತಾನ್ನಭುಙ್ಮೂತ್ರಂ ಬಾಲಾದಿಪ್ರಥಮಂ ಶಕೃತ್ ॥** 71

---

(66). ಧಾತ, ಪ್ರಜಾಪತಿ, ಇಂದ್ರ, ಅಗ್ನಿ, ಅಷ್ಟವಸುಗಳು, ಸೂರ್ಯ—ಇವರು ಅತಿಥಿಯ ದೇಹವನ್ನು ಪ್ರವೇಶಿಸಿ ಅನ್ನವನ್ನು ಭುಂಜಿಸುತ್ತಾರೆ. ಆದ್ದರಿಂದ ಮಾನವನು ಅತಿಥಿಪೂಜೆಯಲ್ಲಿ ಯಾವಾಗಲೂ ಆಸಕ್ತಿಯನ್ನಿಡಬೇಕು. ಯಾವನು ಅತಿಥಿಯನ್ನು ಬಿಟ್ಟು ಭೋಜನ ಮಾಡುತ್ತಾನೋ ಅವನು ಕೇವಲ ಪಾಪವನ್ನು ಭೋಗಿಸುತ್ತಾನೆ (67-68). ಅನಂತರ ಸುವಾಸಿನಿ (ತವರು ಮನೆಗೆ ಬಂದ ವಿವಾಹಿತ ಹೆಣ್ಣುಮಗಳು—ಇತ್ಯಾದಿ), ದುಃಖಿ, ಗರ್ಭಿಣಿ, ವೃದ್ಧರು, ಬಾಲಕರು—ಇವರಿಗೆ ಸಂಸ್ಕಾರಗೊಂಡ ಅನ್ನದಿಂದ ಮೊದಲು ಭೋಜನ ಮಾಡಿಸಿ ಕಡೆಯಲ್ಲಿ ತಾನು ಊಟ ಮಾಡಬೇಕು (69). ಇವರೆಲ್ಲರೂ ಊಟ ಮಾಡದಿರುವಾಗ ಯಾವನು ತಾನೇ ಮೊದಲು ಊಟ ಮಾಡುತ್ತಾನೋ ಅವನು ಪಾಪಿಯಾಗಿ ಸತ್ತ ಮೇಲೆ ನರಕಕ್ಕೆ ಹೋಗುತ್ತಾನಲ್ಲದೆ ಶ್ಲೇಷ್ಮವನ್ನು ತಿನ್ನುವ ಕ್ರಿಮಿಯಾಗಿ ಹುಟ್ಟುತ್ತಾನೆ (70). ಸ್ನಾನ ಮಾಡದೆ ಊಟಮಾಡತಕ್ಕವನು ಮಲವನ್ನು ತಿನ್ನುತ್ತಾನೆ. ಜಪ ಮಾಡದೆ ಉಣ್ಣತಕ್ಕವನು ಕೀವು ರಕ್ತಗಳನ್ನೂ ಸಂಸ್ಕಾರ

**ಅಹೋಮೀ ಚ ಕೃಮೀನ್ ಭುಂಕ್ತೇ ಅದತ್ತ್ವಾ ವಿಷಮಶ್ನುತೇ।**
**ತಸ್ಮಾಚ್ಛೃಣುಷ್ವ ರಾಜೇಂದ್ರ ಯಥಾ ಭುಂಜೀತ ವೈ ಗೃಹೀ॥ 72**

**ಭುಂಜತಶ್ಚ ಯಥಾ ಪುಂಸಃ ಪಾಪಬಂಧೋ ನ ಜಾಯತೇ।**
**ಇಹ ಚಾರೋಗ್ಯಮತುಲಂ ಬಲವೃದ್ಧಿಸ್ತಥಾ ನೃಪ॥ 73**

**ಭವತ್ಯರಿಷ್ಟಶಾಂತಿಶ್ಚ ವೈರಿಪಕ್ಷಾಭಿಚಾರಿಕಾ।**
**ಸ್ನಾತೋ ಯಥಾವತ್ ಕೃತ್ವಾ ಚ ದೇವರ್ಷಿಪಿತೃತರ್ಪಣಮ್॥ 74**

**ಪ್ರಶಸ್ತರತ್ನಪಾಣಿಸ್ತು ಭುಂಜೀತ ಪ್ರಯತೋ ಗೃಹೀ।**
**ಕೃತೇ ಜಪೇ ಹುತೇ ವಹ್ನೌ ಶುದ್ಧವಸ್ತ್ರಧರೋ ನೃಪ॥ 75**

**ದತ್ತ್ವಾತಿಥಿಭ್ಯೋ ವಿಪ್ರೇಭ್ಯೋ ಗುರುಭ್ಯಸ್ಸಂಶ್ರಿತಾಯ ಚ।**
**ಪುಣ್ಯಗಂಧಶ್ಶಸ್ತಮಾಲ್ಯಧಾರೀ ಚೈವ ನರೇಶ್ವರ॥ 76**

---

ಗೊಳಿಸದ ಅನ್ನವನ್ನು ತಿನ್ನತಕ್ಕವನು ಮೂತ್ರವನ್ನೂ ಬಾಲಕರೇ ಮೊದಲಾದವರನ್ನು ಬಿಟ್ಟು ಉಣ್ಣತಕ್ಕವನು ಪಾಯಖಾನೆಯನ್ನೂ ಭುಂಜಿಸತಕ್ಕವರು (71). ಹೋಮ ಮಾಡದವನು ಕ್ರಿಮಿಗಳನ್ನೂ ಅನ್ನದಾನಮಾಡದವನು ವಿಷವನ್ನೂ ತಿನ್ನತಕ್ಕವರು. ಆದ್ದರಿಂದ, ರಾಜೇಂದ್ರ, ಗೃಹಸ್ಥನು ಹೇಗೆ ಭೋಜನಮಾಡಬೇಕೆಂಬುದನ್ನು ಕೇಳು (72). ಹೇಗೆ ಭುಂಜಿಸಿದರೆ ಪಾಪವು ತಗುಲುವುದಿಲ್ಲವೋ ಉತ್ತಮವಾದ ಆರೋಗ್ಯವೂ ಬಲವೃದ್ಧಿಯೂ ಆಗುವುದೋ ಅರಿಷ್ಟಶಮನವಾಗಿ ವೈರಿಪಕ್ಷವು ಕ್ಷಯಿಸುತ್ತದೆಯೋ ಆ ಪ್ರಕಾರವನ್ನು ಕೇಳು. ಸ್ನಾನಮಾಡಿ ಯಥಾವತ್ತಾಗಿ ದೇವರ್ಷಿಪಿತೃ ತರ್ಪಣಗಳನ್ನಾಚರಿಸಬೇಕು (73-74). ಅನಂತರ ಗೃಹಸ್ಥನು ಪ್ರಶಸ್ತವಾದ ರತ್ನಾಭರಣವನ್ನು ಕೈಗೆ ಹಾಕಿಕೊಂಡು ಊಟ ಮಾಡಬೇಕು. ಆತನು ಜಪಮಾಡಿ ಅಗ್ನಿಯಲ್ಲಿ ಹೋಮಮಾಡಿ ಶುದ್ಧವಾದ ವಸ್ತ್ರವನ್ನು ಧರಿಸಬೇಕು (75). ಅತಿಥಿಗಳಿಗೂ ಬ್ರಾಹ್ಮಣರಿಗೂ ಗುರುಹಿರಿಯರಿಗೂ ಆಶ್ರಿತ ಜನರಿಗೂ ಊಟಮಾಡಿಸಿ ಉತ್ತಮವಾದ ಗಂಧಮಾಲ್ಯಗಳನ್ನು ಧರಿಸಿ ಭೋಜನ ಮಾಡಬೇಕು. ಏಕವಸ್ತ್ರಧರನಾಗಿಯೂ, ಕೈಕಾಲುಗಳನ್ನು ಒದ್ದೆಮಾಡಿಕೊಂಡೂ ಊಟಮಾಡಬಾರದು. ಸಂತೋಷ

**ನೈಕವಸ್ತ್ರಧರೋऽನಾರ್ದ್ರಪಾಣಿಪಾದೋ ಮಹೀಪತೇ।**
**ವಿಶುದ್ಧವದನಃ ಪ್ರೀತೋ ಭುಂಜೀತ ನ ವಿದಿಙ್ಮುಖಃ॥ 77**

**ಪ್ರಾಙ್ಮುಖೋದಙ್ಮುಖೋ ವಾಪಿ ನ ಚೈವಾನ್ಯಮನಾ ನರಃ।**
**ಅನ್ನಂ ಪ್ರಶಸ್ತಂ ಪಥ್ಯಂ ಚ ಪ್ರೋಕ್ಷಿತಂ ಪ್ರೋಕ್ಷಣೋದಕೈಃ॥ 78**

**ನ ಕುತ್ಸಿತಾಹೃತಂ ನೈವ ಜುಗುಪ್ಸಾವದಸಂಸ್ಕೃತಮ್॥ 79**

**ದತ್ತ್ವಾ ತು ಭಕ್ತಂ ಶಿಷ್ಯೇಭ್ಯಃ ಕ್ಷುಧಿತೇಭ್ಯಸ್ತಥಾ ಗೃಹೀ।**
**ಪ್ರಶಸ್ತಶುದ್ಧಪಾತ್ರೇ ತು ಭುಂಜೀತಾಕುಪಿತೋ ನೃಪ॥ 80**

**ನಾಸಂದೀಸಂಸ್ಥಿತೇ ಪಾತ್ರೇ ನಾದೇಶೇ ಚ ನರೇಶ್ವರ।**
**ನಾಕಾಲೇ ನಾತಿಸಂಕೀರ್ಣೇ ದತ್ತ್ವಾಗ್ರಂ ಚ ನರೋऽಗ್ನಯೇ॥ 81**

**ಮಂತ್ರಾಭಿಮಂತ್ರಿತಂ ಶಸ್ತಂ ನ ಚ ಪರ್ಯುಷಿತಂ ನೃಪ।**
**ಅನ್ಯತ್ರ ಫಲಮೂಲೇಭ್ಯಶ್ಶುಷ್ಕಶಾಕಾದಿಕಾತ್ತಥಾ॥ 82**

---

ದಿಂದ ಭೋಜನ ಮಾಡಬೇಕು. ಆಗ ಮೂಲೆ ದಿಕ್ಕುಗಳಿಗೆ ಅಭಿಮುಖ ನಾಗಿರಬಾರದು (76-77). ಪೂರ್ವ ಅಥವಾ ಉತ್ತರ ದಿಕ್ಕಿಗೆ ಅಭಿಮುಖ ನಾಗಿ ಕುಳಿತು ಪ್ರಶಸ್ತವೂ ಹಿತಕರವೂ ಪ್ರೋಕ್ಷಣೋದಕದಿಂದ ಪ್ರೋಕ್ಷಿತವೂ ಆದ ಆಹಾರವನ್ನು ತಿನ್ನಬೇಕು. ಅನ್ಯಮನಸ್ಕನಾಗಿ ತಿನ್ನಬಾರದು. ದುರಾ ಚಾರಿಯು ಬಡಿಸಿದ್ದನ್ನೂ ಜುಗುಪ್ಸಾಕರವೂ ಸಂಸ್ಕಾರ ಹೀನವೂ ಆದದ್ದನ್ನೂ ತಿನ್ನಬಾರದು (78-79). ರಾಜ, ಗೃಹಸ್ಥನು ಶಿಷ್ಯರಿಗೂ ಹಸಿದವರಿಗೂ ಅನ್ನವನ್ನು ನೀಡಿ ಪ್ರಶಸ್ತವಾದ ಶುದ್ಧ ಪಾತ್ರೆಯಲ್ಲಿ ಭುಂಜಿಸತಕ್ಕದ್ದು. ಆ ಸಮಯದಲ್ಲಿ ಕೋಪದಿಂದ ಇರಬಾರದು (80). (ಮೇಜು ಮುಂತಾದ) ಆಸನದ ಮೇಲಿಟ್ಟು ಪಾತ್ರೆಯಲ್ಲಿಯೂ ನಿಂದ್ಯಸ್ಥಳದಲ್ಲಿಯೂ ಅಕಾಲ ದಲ್ಲಿಯೂ ಇಕ್ಕಟ್ಟಾದ ಸ್ಥಳದಲ್ಲಿಯೂ ಅಗ್ನಿಗೆ ಆಹುತಿಯನ್ನೀಯದೆಯೂ ಊಟ ಮಾಡಬಾರದು (81). ನೃಪಾಲ, ಮಂತ್ರದಿಂದ ಅಭಿಮಂತ್ರಿತವೂ ಪ್ರಶಸ್ತವೂ ಆದದ್ದನ್ನು ತಿನ್ನಬೇಕು. (ಒಂದು ರಾತ್ರಿ ಕಳೆದು) ಪರ್ಯುಷಿತ ವಾದದ್ದನ್ನು ತಿನ್ನಬಾರದು. ಆದರೆ ಫಲಮೂಲಗಳಿಗೂ ನೀರಿಲ್ಲದೆ ಪಕ್ವ ವಾದ ಧಾನ್ಯಾದಿಶಾಕಗಳಿಗೂ ಆಳಲೆಕಾಯಿ ಉಪ್ಪಿನಕಾಯಿ ಮೊದಲಾದವು

**ತದ್ವದ್ಧಾರೀತಕೇಭ್ಯಶ್ಚ ಗುಡಭಕ್ಷ್ಯೇಭ್ಯ ಏವ ಚ।**
**ಭುಂಜೀತೋದ್‌ಧೃತಸಾರಾಣಿ ನ ಕದಾಪಿ ನರೇಶ್ವರ॥ 83**

**ನಾಶೇಷಂ ಪುರುಷೋಽಶ್ನೀಯಾದನ್ಯತ್ರ ಜಗತೀಪತೇ।**
**ಮಧ್ವಂಬುದಧಿಸರ್ಪಿಭ್ಯಸ್ಸಕ್ತುಭ್ಯಶ್ಚ ವಿವೇಕವಾನ್॥ 84**

**ಅಶ್ನಿಯಾತ್ತನ್ಮನೋ ಭೂತ್ವಾ ಪೂರ್ವಂ ತು ಮಧುರಂ ರಸಮ್।**
**ಲವಣಾಮ್ಲೌ ತಥಾ ಮಧ್ಯೇ ಕಟುತಿಕ್ತಾದಿಕಾಂಸ್ತತಃ॥ 85**

**ಪ್ರಾಗ್ದ್ರವಂ ಪುರುಷೋಽಶ್ನೀಯಾನ್ಮಧ್ಯೇ ಕಠಿನಭೋಜನಃ।**
**ಅಂತೇ ಪುನರ್ದ್ರವಾಶೀ ತು ಬಲಾರೋಗ್ಯೇ ನ ಮುಂಚತಿ॥ 86**

**ಅನಿಂದ್ಯಂ ಭಕ್ಷಯೇದಿತ್ಥಂ ವಾಗ್ಯತೋಽನ್ನಮಕುತ್ಸಯನ್।**
**ಪಂಚಗ್ರಾಸಂ ಮಹಾಮೌನಂ ಪ್ರಾಣಾದ್ಯಾಪ್ಯಾಯನಂ ಹಿ ತತ್॥ 87**

**ಭುಕ್ತ್ವಾ ಸಮ್ಯಗಥಾಚಮ್ಯ ಪ್ರಾಙ್ಮುಖೋದಙ್ಮುಖೋಽಪಿ ವಾ।**
**ಯಥಾವತ್ ಪುನರಾಚಾಮೇತ್ ಪಾಣೀ ಪ್ರಕ್ಷಾಲ್ಯ ಮೂಲತಃ॥ 88**

---

ಗಳಿಗೂ ಬೆಲ್ಲದ ಭಕ್ಷ್ಯಗಳಿಗೂ ಈ ನಿಷೇಧವು ಅನ್ವಯಿಸುವುದಿಲ್ಲ. ಸಾರವನ್ನು ತೆಗೆದು ಹಾಕಿದ ವಸ್ತುವನ್ನು ಎಂದಿಗೂ ತಿನ್ನಬಾರದು (82-83). ವಿವೇಕಿಯಾದವನು ಜೇನುತುಪ್ಪ, ಮೊಸರು, ತುಪ್ಪ, ಹಿಟ್ಟು—ಇವುಗಳನ್ನು ಬಿಟ್ಟು ಉಳಿದದ್ದನ್ನು ನಿಃಶೇಷವಾಗಿ ತಿನ್ನಬಾರದು (ಸ್ವಲ್ಪ ಅನ್ನವನ್ನು ಭೋಜನ ಪಾತ್ರೆಯಲ್ಲಿ ಉಳಿಸಬೇಕು) (84). ತನ್ಮಯನಾಗಿ ಭೋಜನ ಮಾಡಬೇಕು. ಊಟದ ಮೊದಲು ಮಧುರವಾದದ್ದನ್ನೂ ನಡುವೆ ಉಪ್ಪು ಹುಳಿಯಾದ್ದನ್ನೂ ಕಡೆಯಲ್ಲಿ ಖಾರ, ಕಹಿ, ಒಗರು—ಮೊದಲಾದ್ದನ್ನೂ ತಿನ್ನಬೇಕು (85). ಮನುಷ್ಯನು ಮೊದಲು ದ್ರವವಸ್ತುವನ್ನೂ ನಡುವೆ ಗಟ್ಟಿಯಾದ್ದನ್ನೂ ಕಡೆಯಲ್ಲಿ ದ್ರವವಸ್ತುವನ್ನೂ ತಿಂದರೆ, ಬಲಾರೋಗ್ಯಗಳನ್ನು ಕಳೆದುಕೊಳ್ಳುವುದಿಲ್ಲ (86). ಈ ಪ್ರಕಾರ ಪ್ರಶಸ್ತವಾದ ಅನ್ನವನ್ನು ಮೌನಿಯಾಗಿ ಭುಂಜಿಸಬೇಕು. ಅನ್ನವನ್ನು ನಿಂದಿಸಬಾರದು. ಮೊದಲು ಮೌನದಿಂದ ಪಂಚಪ್ರಾಣಗಳಿಗೆ ಆಹುತಿಯನ್ನರ್ಪಿಸಬೇಕು. ಅದು ಪ್ರಾಣಗಳಿಗೆ ತೃಪ್ತಿಯನ್ನುಂಟುಮಾಡುತ್ತದೆ (87). ಊಟ ಮಾಡಿ ಚೆನ್ನಾಗಿ ಬಾಯಿ

**ಸ್ವಸ್ಥಃ ಪ್ರಶಾಂತಚಿತ್ತಸ್ತು ಕೃತಾಸನಪರಿಗ್ರಹಃ।**
**ಅಭೀಷ್ಟದೇವತಾನಾಂ ತು ಕುರ್ವೀತ ಸ್ಮರಣಂ ನರಃ॥ 89**

**ಅಗ್ನಿರಾಪ್ಯಾಯಯೇದ್ಧಾತುಂ ಪಾರ್ಥಿವಂ ಪವನೇರಿತಃ।**
**ದತ್ತಾವಕಾಶಂ ನಭಸಾ ಜರಯತ್ವಸ್ತು ಮೇ ಸುಖಮ್॥ 90**

**ಅನ್ನಂ ಬಲಾಯ ಮೇ ಭೂಮೇರಪಾಮಗ್ನ್ಯನಿಲಸ್ಯ ಚ।**
**ಭವತ್ವೇತತ್ಪರಿಣತಂ ಮಮಾಸ್ತ್ವವ್ಯಾಹತಂ ಸುಖಮ್॥ 91**

**ಪ್ರಾಣಾಪಾನಸಮಾನಾನಾಮುದಾನವ್ಯಾನಯೋಸ್ತಥಾ।**
**ಅನ್ನಂ ಪುಷ್ಟಿಕರಂ ಚಾಸ್ತು ಮಮಾಪ್ಯವ್ಯಾಹತಂ ಸುಖಮ್॥ 92**

**ಅಗಸ್ತಿರಗ್ನಿರ್ಬಡವಾನಲಶ್ಚ**
**ಭುಕ್ತಂ ಮಯಾನ್ನಂ ಜರಯತ್ವಶೇಷಮ್।**
**ಸುಖಂ ಚ ಮೇ ತತ್ಪರಿಣಾಮಸಂಭವಂ**
**ಯಚ್ಛಂತ್ವರೋಗೋ ಮಮ ಚಾಸ್ತು ದೇಹೇ॥ 93**

---

ಮುಕ್ಕಳಿಸಿ ಎರಡು ಕೈಗಳನ್ನೂ ಬುಡದಿಂದ ತೊಳೆದುಕೊಂಡು, ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖನಾಗಿ ಮತ್ತೆ ಆಚಮನ ಮಾಡಬೇಕು (88). ಹೀಗೆ ಭೋಜನವಾದಮೇಲೆ ತೃಪ್ತನಾಗಿ ಶಾಂತಮನಸ್ಸಿನಿಂದ ಆಸನದಲ್ಲಿ ಕುಳಿತುಕೊಂಡು ಇಷ್ಟದೇವತೆಗಳ ಸ್ಮರಣೆಮಾಡಬೇಕು ಮತ್ತು ಹೀಗೆ ಹೇಳಿಕೊಳ್ಳಬೇಕು (89). ಆಕಾಶವು (ಹೊಟ್ಟೆಯಲ್ಲಿ) ಅವಕಾಶವನ್ನಿತ್ತು ಪಾರ್ಥಿವವಾದ ಈ ಆಹಾರಧಾತುವನ್ನು ಸ್ವೀಕರಿಸಿದೆ. ಇದನ್ನು ಪ್ರಾಣವಾಯುಪ್ರೇರಿತವಾದ ಜಠರಾಗ್ನಿಯು ಜೀರ್ಣಮಾಡಲಿ. ನನಗೆ ಸುಖವಾಗಲಿ(90). ಈ ಆಹಾರವು ಜೀರ್ಣವಾಗಿ ನನ್ನ ದೇಹದಲ್ಲಿರುವ ಭೂಮಿ, ಜಲ, ಅಗ್ನಿ, ವಾಯುಗಳಿಗೆ ಬಲವನ್ನುಂಟುಮಾಡಲಿ. ನನಗೆ ನಿರಂತರ ಸುಖವಾಗಲಿ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳಿಗೆ ಈ ಅನ್ನವು ಪುಷ್ಟಿಕರವಾಗಲಿ. ನನಗೆ ನಿರಂತರ ಸುಖವಾಗಲಿ (91-92). ಅಗಸ್ತಿ (ಅಗಸ್ತ್ಯ), ಅಗ್ನಿ, ವಡವಾನಲ—ಇವರು ನಾನು ತಿಂದ ಆಹಾರವನ್ನು ಪೂರ್ತಿಯಾಗಿ ಅರಗಿಸಲಿ. ಅದರ ಪರಿಣಾಮದಿಂದಾಗುವ ಸುಖವನ್ನು ಅವರು ನನಗೆ ಕೊಡಲಿ. ನನ್ನ ದೇಹದಲ್ಲಿ ಆರೋಗ್ಯವಿರಲಿ (93).

**ವಿಷ್ಣುಸ್ಸಮಸ್ತೇಂದ್ರಿಯ ದೇಹದೇಹೀ**
**ಪ್ರಧಾನಭೂತೋ ಭಗವಾನ್ ಯಥೈಕಃ।**
**ಸತ್ಯೇನ ತೇನಾತ್ತಮಶೇಷಮನ್ನ-**
**ಮಾರೋಗ್ಯದಂ ಮೇ ಪರಿಣಾಮಮೇತು॥ 94**

**ವಿಷ್ಣುರತ್ತಾ ತಥೈವಾನ್ನಂ ಪರಿಣಾಮಶ್ಚ ವೈ ತಥಾ।**
**ಸತ್ಯೇನ ತೇನ ಮದ್ಭುಕ್ತಂ ಜೀರ್ಯತ್ವನ್ನಮಿದಂ ತಥಾ॥ 95**

**ಇತ್ಯುಚ್ಚಾರ್ಯ ಸ್ವಹಸ್ತೇನ ಪರಿಮೃಜ್ಯ ತಥೋದರಮ್।**
**ಅನಾಯಾಸಪ್ರದಾಯೀನಿ ಕುರ್ಯಾತ್ಕರ್ಮಾಣ್ಯತಂದ್ರಿತಃ॥ 96**

**ಸಚ್ಛಾಸ್ತ್ರಾದಿವಿನೋದೇನ ಸನ್ಮಾರ್ಗಾದವಿರೋಧಿನಾ।**
**ದಿನಂ ನಯೇತ್ತತಸ್ಸಂಧ್ಯಾಮುಪತಿಷ್ಠೇತ್ ಸಮಾಹಿತಃ॥ 97**

**ದಿನಾಂತಸಂಧ್ಯಾಂ ಸೂರ್ಯೇಣ ಪೂರ್ವಾಮೃಕ್ಷೈರ್ಯುತಾಂ ಬುಧಃ।**
**ಉಪತಿಷ್ಠೇದ್ಯಥಾ ನ್ಯಾಯ್ಯಂ ಸಮ್ಯಗಾಚಮ್ಯ ಪಾರ್ಥಿವ॥ 98**

---

ಪ್ರಧಾನಭೂತನಾದ ಭಗವಾನ್ ವಿಷ್ಣುವು ಸಮಸ್ತ ಇಂದ್ರಿಯಗಳಿಗೂ ದೇಹಗಳಿಗೂ ಆತ್ಮನೂ ಅದ್ವಿತೀಯನೂ ಆಗಿರುವುದು ಹೇಗೆ ಸತ್ಯವೋ ಹಾಗೆ ಆ ಸತ್ಯಬಲದಿಂದ, ನಾನು ಭುಂಜಿಸಿದ ಎಲ್ಲ ಅನ್ನವೂ ನನಗೆ ಆರೋಗ್ಯಪ್ರದವಾಗಿ ಜೀರ್ಣವಾಗಲಿ (94). ಭೋಜನ ಮಾಡತಕ್ಕವನು, ಅನ್ನ, ಅದರ ಪರಿಪಾಕ ಎಲ್ಲವೂ ವಿಷ್ಣುವೇ. ನಾನು ಭುಂಜಿಸಿದ ಈ ಅನ್ನವು ಆ ಸತ್ಯಬಲದಿಂದ ಜೀರ್ಣವಾಗಲಿ!" (95) ಎಂದು ನುಡಿದು ತನ್ನ ಕೈಯಿಂದ ಹೊಟ್ಟೆಯನ್ನು ಸವರಿಕೊಂಡು ಹೆಚ್ಚು ಆಯಾಸಕಾರಿಯಲ್ಲದ ಕೆಲಸಗಳಲ್ಲಿ ಆಲಸ್ಯವಿಲ್ಲದೆ ತೊಡಗಬೇಕು (96). ಸನ್ಮಾರ್ಗಕ್ಕೆ ವಿರುದ್ಧವಾಗದಂತೆ ಸಚ್ಛಾಸ್ತ್ರಾದಿಗಳಲ್ಲಿ ವಿನೋದಿಸುತ್ತ ಹಗಲನ್ನು ಕಳೆದು ಸಾಯಂಕಾಲದಲ್ಲಿ ಏಕಾಗ್ರತೆಯಿಂದ ಸಂಧ್ಯೋಪಾಸನೆಯನ್ನು ಮಾಡತಕ್ಕದ್ದು (97). ರಾಜ-ಸಗರ, ಸೂರ್ಯನಿರುವಾಗ ಸಾಯಂಸಂಧ್ಯೆಯನ್ನೂ ನಕ್ಷತ್ರಗಳಿರುವಾಗ ಪ್ರಾತಃಸಂಧ್ಯೆಯನ್ನೂ ವಿಧಿವತ್ತಾಗಿ ಆಚಮನ ಮಾಡಿ ಉಪಾಸನೆ ಮಾಡಬೇಕು (98). ಸೂತಕ—ಎಂದರೆ ಜಾತಾಶೌಚ, ಮೃತಾಶೌಚ,

**ಸರ್ವಕಾಲಮುಪಸ್ಥಾನಂ ಸಂಧ್ಯಯೋಃ ಪಾರ್ಥಿವೇಷ್ಯತೇ।**
**ಅನ್ಯತ್ರ ಸೂತಕಾಶೌಚವಿಭ್ರಮಾತುರಭೀತಿತಃ॥** 99

**ಸೂರ್ಯೇಣಾಭ್ಯುದಿತೋ ಯಶ್ಚ ತ್ಯಕ್ತಃ ಸೂರ್ಯೇಣ ವಾ ಸ್ವಪನ್।**
**ಅನ್ಯತ್ರಾತುರಭಾವಾತ್ತು ಪ್ರಾಯಶ್ಚಿತ್ತೀ ಭವೇನ್ನರಃ॥** 100

**ತಸ್ಮಾದನುದಿತೇ ಸೂರ್ಯೇ ಸಮುತ್ಥಾಯ ಮಹೀಪತೇ।**
**ಉಪತಿಷ್ಠೇನ್ನರಸ್ಸಂಧ್ಯಾಮಸ್ವಪಂಶ್ಚ ದಿನಾಂತಜಾಮ್॥** 101

**ಉಪತಿಷ್ಠಂತಿ ವೈ ಸಂಧ್ಯಾಂ ಯೇ ನ ಪೂರ್ವಾಂ ನ ಪಶ್ಚಿಮಾಮ್।**
**ವ್ರಜಂತಿ ತೇ ದುರಾತ್ಮಾನಸ್ತಾಮಿಸ್ರಂ ನರಕಂ ನೃಪ॥** 102

**ಪುನಃ ಪಾಕಮುಪಾದಾಯ ಸಾಯಮಪ್ಯವನೀಪತೇ।**
**ವೈಶ್ವದೇವನಿಮಿತ್ತಂ ವೈ ಪತ್ನ್ಯಮಂತ್ರಂ ಬಲಿಂ ಹರೇತ್॥** 103

**ತತ್ರಾಪಿ ಶ್ವಪಚಾದಿಭ್ಯಸ್ತಥೈವಾನ್ನವಿಸರ್ಜನಮ್।**
**ಅತಿಥಿಂ ಚಾಗತಂ ತತ್ರ ಸ್ವಶಕ್ತ್ಯಾ ಪೂಜಯೇದ್ ಬುಧಃ॥** 104

---

ಉನ್ಮಾದ, ರೋಗ, ಯಾವುದಾದರೂ ಭೀತಿ—ಇವುಗಳಿಲ್ಲದಿದ್ದರೆ ಎರಡು ಸಂಧ್ಯಾವಂದನೆಗಳನ್ನೂ ತಪ್ಪದೇ ಆಚರಿಸಬೇಕು (99). ರೋಗವಿಲ್ಲದ ಸಂದರ್ಭದಲ್ಲಿ ಸೂರ್ಯನು ಹುಟ್ಟುವಾಗಲೂ ಮುಳುಗುವಾಗಲೂ ಯಾವಾತನು ಮಲಗಿರುತ್ತಾನೋ ಅವನು ಪ್ರಾಯಶ್ಚಿತ್ತಕ್ಕೆ ಅರ್ಹನಾಗುತ್ತಾನೆ (100). ಆದ್ದರಿಂದ ಸೂರ್ಯೋದಯಕ್ಕೆ ಮೊದಲೇ ಎದ್ದು ಪ್ರಾತಃಕಾಲದಲ್ಲಿಯೂ, ಸೂರ್ಯನು ಮುಳುಗುವಾಗ ಮಲಗದೆ ಸಾಯಂಕಾಲದಲ್ಲಿಯೂ ಸಂಧ್ಯಾವಂದನೆಯನ್ನು ಮಾಡಬೇಕು (101). ಯಾರು ಪ್ರಾತಃಸಂಧ್ಯೆಯನ್ನೂ ಸಾಯಂಸಂಧ್ಯೆಯನ್ನೂ ಉಪಾಸನೆ ಮಾಡುವುದಿಲ್ಲವೋ ಆ ದುರಾತ್ಮರು ತಾಮಿಸ್ರನರಕವನ್ನೈದುವರು (102). ಮತ್ತೆ ಸಾಯಂಕಾಲ ಪಕ್ವವಾದ ಅನ್ನವನ್ನು ತೆಗೆದುಕೊಂಡು ಗೃಹಸ್ಥನ ಪತ್ನಿಯು ವೈಶ್ವದೇವನಿಮಿತ್ತವಾಗಿ ಮಂತ್ರವಿಲ್ಲದೆಯೇ ಬಲಿಯನ್ನು ಹಾಕಬೇಕು (103). ಆಗಲೂ ಮಧ್ಯಾಹ್ನದಂತೆಯೇ ಚಂಡಾಲಾದಿಗಳಿಗೆ ಅನ್ನವನ್ನು ನೀಡಬೇಕು. ಮನೆಗೆ ಬಂದ ಅತಿಥಿಯನ್ನು ತನ್ನ ಶಕ್ತ್ಯನುಸಾರವಾಗಿ

**ಪಾದಶೌಚಾಸನಪ್ರಹ್ವಸ್ವಾಗತೋಕ್ತ್ಯಾ ಚ ಪೂಜನಮ್।**
**ತತಶ್ಚಾನ್ನಪ್ರದಾನೇನ ಶಯನೇನ ಚ ಪಾರ್ಥಿವ॥ 105**

**ದಿವಾತಿಥೌ ತು ವಿಮುಖೇ ಗತೇ ಯತ್ಪಾತಕಂ ನೃಪ।**
**ತದೇವಾಷ್ಟಗುಣಂ ಪುಂಸಸ್ಸೂರ್ಯೋಢೇ ವಿಮುಖೇ ಗತೇ॥ 106**

**ತಸ್ಮಾತ್ಸ್ವಶಕ್ತ್ಯಾ ರಾಜೇಂದ್ರ ಸೂರ್ಯೋಢಮತಿಥಿಂ ನರಃ।**
**ಪೂಜಯೇತ್ ಪೂಜಿತೇ ತಸ್ಮಿನ್ ಪೂಜಿತಾಸ್ಸರ್ವದೇವತಾಃ॥ 107**

**ಅನ್ನಶಾಕಾಂಬುದಾನೇನ ಸ್ವಶಕ್ತ್ಯಾ ಪೂಜಯೇತ್ಪುಮಾನ್।**
**ಶಯನಪ್ರಸ್ತರಮಹೀಪ್ರದಾನೈರಥವಾಪಿ ತಮ್॥ 108**

**ಕೃತಪಾದಾದಿಶೌಚಸ್ತು ಭುಕ್ತ್ವಾ ಸಾಯಂ ತತೋ ಗೃಹೀ।**
**ಗಚ್ಛೇತ್ ಶಯ್ಯಾಮಸ್ಫುಟಿತಾಮಪಿ ದಾರುಮಯೀಂ ನೃಪ॥ 109**

---

ಸತ್ಕರಿಸಬೇಕು. ಪಾದವನ್ನು ತೊಳೆದು ಪೀಠವನ್ನಿತ್ತು ನಮಸ್ಕರಿಸಿ ಸ್ವಾಗತ ಹೇಳಿ ಆದರಿಸಬೇಕು: ಆಮೇಲೆ ಊಟವನ್ನು ಹಾಕಿ ಮಲಗುವುದಕ್ಕೆ ಅನುಕೂಲ ಮಾಡಿಕೊಡಬೇಕು (104-105). ಹಗಲು ಹೊತ್ತು ಅತಿಥಿಯು ನಿರಾಶೆಯಿಂದ ವಿಮುಖನಾಗಿ ಹೋದರೆ ಯಾವ ಪಾತಕ ಬರುತ್ತದೆಯೋ ಅದರ ಎಂಟರಷ್ಟು ಪಾತಕವು ಸೂರ್ಯನು ಮುಳುಗಿದ ಮೇಲೆ ಅತಿಥಿಯು ವಿಮುಖನಾಗಿ ಹೋದರೆ ಪುರುಷನಿಗೆ ಬರುತ್ತದೆ (106). ಆದ್ದರಿಂದ, ರಾಜೇಂದ್ರ, ಸೂರ್ಯನು ಅಸ್ತಂಗನಾದಮೇಲೆ ಬಂದ ಅತಿಥಿಯನ್ನು ತನ್ನ ಶಕ್ತ್ಯನುಗುಣವಾಗಿ ಸತ್ಕರಿಸಬೇಕು. ಅವನನ್ನು ಸತ್ಕರಿಸಿದರೆ ಎಲ್ಲ ದೇವತೆಗಳನ್ನೂ ಪೂಜಿಸಿದಂತಾಗುವುದು (107). ಮನುಷ್ಯನು ಅತಿಥಿಗೆ ತನ್ನ ಶಕ್ತ್ಯನುಸಾರ ಅನ್ನ, ಶಾಕ ಅಥವಾ ನೀರನ್ನಾದರೂ ಕೊಟ್ಟು ಹಾಸಿಗೆ, ಚಾಪೆ ಅಥವಾ ಮಲಗಲು ಸ್ಥಳನ್ನಾದರೂ ಕೊಟ್ಟು ಅತಿಥಿಯನ್ನು ಪೂಜಿಸಬೇಕು (108). ಅನಂತರ ತಾನು ಊಟಮಾಡಿ ಪಾದಾದಿಗಳನ್ನು ತೊಳೆದುಕೊಂಡು ಛಿದ್ರಾದಿಗಳಿಲ್ಲದ ಮರದ ಮಂಚದ ಮೇಲಿನ ಹಾಸಿಗೆಯನ್ನು ಸೇರಬೇಕು (109). ಹಾಸಿಗೆ ಬಹಳ ದೊಡ್ಡದಾಗಿರಬಾರದು. ಅದು ಹರುಕುಮುರುಕಾಗಿಯೂ ಏರುತಗ್ಗುಳ್ಳದ್ದೂ ಕೊಳಕಾದದ್ದೂ ಆಗಿರ

**ನಾವಿಶಾಲಾಂ ನ ವೈ ಭಗ್ನಾಂ ನಾಸಮಾಂ ಮಲಿನಾಂ ನ ಚ।**
**ನ ಚ ಜಂತುಮಯೀಂ ಶಯ್ಯಾಮಧಿತಿಷ್ಠೇದನಾಸ್ತೃತಾಮ್॥ 110**

**ಪ್ರಾಚ್ಯಾಂ ದಿಶಿ ಶಿರಶ್ಶಸ್ತಂ ಯಾಮ್ಯಾಯಾಮಥವಾ ನೃಪ।**
**ಸದೈವ ಸ್ವಪತಃ ಪುಂಸೋ ವಿಪರೀತಂ ತು ರೋಗದಮ್॥ 111**

**ಋತಾವುಪಗಮಶ್ಶಸ್ತಃ ಸ್ವಪತ್ನ್ಯಾಮವನೀಪತೇ।**
**ಪುನ್ನಾಮರ್ಕ್ಷೇ ಶುಭೇ ಕಾಲೇ ಜ್ಯೇಷ್ಠಾಯುಗ್ಮಾಸು ರಾತ್ರಿಷು॥ 112**

**ನಾದ್ಯೂನಾಂ ತು ಸ್ತ್ರಿಯಂ ಗಚ್ಛೇನ್ನಾತುರಾಂ ನ ರಜಸ್ವಲಾಮ್।**
**ನಾನಿಷ್ಟಾಂ ನ ಪ್ರಕುಪಿತಾಂ ನ ತ್ರಸ್ತಾಂ ನ ಚ ಗರ್ಭಿಣೀಮ್॥ 113**

---

ಬಾರದು. (ತಿಗಣೆ ಮುಂತಾದ) ಕೀಟಗಳಿರಬಾರದು, ಮೇಲುಹಾಸಿಗೆ ಇಲ್ಲದ್ದೂ ಆಗಿರಬಾರದು (110). ಮಲಗತಕ್ಕ ಪುರುಷನ ಶಿರಸ್ಸು ಪೂರ್ವ ದಿಕ್ಕಿಗೆ ಅಥವಾ ದಕ್ಷಿಣದಿಕ್ಕಿಗೆ ಇರುವುದು ಒಳ್ಳೆಯದು. ಇದಕ್ಕೆ ವಿಪರೀತ ವಾಗಿದ್ದರೆ ರೋಗಪ್ರದವಾಗುತ್ತದೆ (111). ಋತುಕಾಲದಲ್ಲಿ* ಪುಂನಾಮ ನಕ್ಷತ್ರಯೋಗವಿರುವಾಗ ಸಮಸಂಖ್ಯೆಯ ರಾತ್ರಿಗಳ ಶುಭಕಾಲದಲ್ಲಿ ತನ್ನ ಪತ್ನಿಯೊಡನೆ ಸಂಗ ಮಾಡುವುದು ಶ್ರೇಯಸ್ಕರ. ಮುಂದುಮುಂದಿನ ಸಮರಾತ್ರಿಗಳು ಪೂರ್ವಪೂರ್ವ ಸಮರಾತ್ರಿಗಳಿಗಿಂತ ಪ್ರಶಸ್ತವಾದವು (112). ಸ್ತ್ರೀಯು ಅಪ್ರಸನ್ನಳಾಗಿದ್ದರೆ, ರೋಗಿಣಿಯಾಗಿದ್ದರೆ, ರಜಸ್ವಲೆ ಯಾಗಿದ್ದರೆ ಅವಳ ಸಂಗವನ್ನು ಮಾಡಬಾರದು. ಅಪ್ರಿಯಳನ್ನೂ ಕುಪಿತೆ ಯನ್ನೂ ಹೆದರಿದವಳನ್ನೂ ಗರ್ಭಿಣಿಯನ್ನೂ ಸೇರತಕ್ಕದ್ದಲ್ಲ (113). ಋಜುಸ್ವಭಾವವಿಲ್ಲದವಳು, ಅನ್ಯರಲ್ಲಿ ಆಸಕ್ತಿಯಿಟ್ಟವಳು, ಕಾಮರಹಿತಳು, ಪರಸ್ತ್ರೀ, ಹಸಿದವಳು, ಹೊಟ್ಟೆಬಿರಿಯುವಂತೆ ಊಟಮಾಡಿದವಳು—

---

*ರಜೋದರ್ಶನವಾದ ದಿನದಿಂದ ಹದಿನಾರು ದಿನಗಳವರೆಗೆ ಋತುಕಾಲ. ಅಶ್ವಿನೀ, ರೋಹಿಣೀ, ಕೃತ್ತಿಕಾ, ಪುನರ್ವಸು, ಪುಷ್ಯ, ಹಸ್ತ, ಅನುರಾಧಾ, ಶ್ರವಣ, ಪೂರ್ವಾಭಾದ್ರ, ಉತ್ತರಾಭಾದ್ರ—ಈ ಹತ್ತು ನಕ್ಷತ್ರಗಳಿಗೆ ಪುಂನಾಮ ನಕ್ಷತ್ರಗಳೆಂದು ಸಂಕೇತ (ಬೃಹಸ್ಪತಿಯಿಂದ ಉಕ್ತ). ರಜೋದರ್ಶನವಾದಮೇಲೆ 6, 8, 10, 12, 14, 16 ನೆಯ ರಾತ್ರಿಗಳು ಸಂಗಯೋಗ್ಯವಾದ ಸಮಸಂಖ್ಯೆಯ ರಾತ್ರಿಗಳು.

**ನಾದಕ್ಷಿಣಾಂ ನಾನ್ಯಕಾಮಾಂ ನಾಕಾಮಾಂ ನಾನ್ಯಯೋಷಿತಮ್।**
**ಕ್ಷುತ್‌ಕ್ಷಾಮಾಂ ನಾತಿಭುಕ್ತಾಂ ವಾ ಸ್ವಯಂ ಚೈಭಿರ್ಗುಣೈರ್ಯುತಃ॥**

**ಸ್ನಾತಃ ಸ್ರಗ್ಗಂಧಧೃಕ್ ಪ್ರೀತೋ ನಾಧ್ಮಾತಃ ಕ್ಷುಧಿತೋಽಪಿ ವಾ।**
**ಸಕಾಮಸ್ಸಾನುರಾಗಶ್ಚ ವ್ಯವಾಯಂ ಪುರುಷೋ ವ್ರಜೇತ್॥** 115

**ಚತುರ್ದಶ್ಯಷ್ಟಮೀ ಚೈವ ತಥಾಮಾ ಚಾಥ ಪೂರ್ಣಿಮಾ।**
**ಪರ್ವಾಣ್ಯೇತಾನಿ ರಾಜೇಂದ್ರ ರವಿಸಂಕ್ರಾಂತಿರೇವ ಚ॥** 116

**ತೈಲಸ್ತ್ರೀಮಾಂಸಸಂಭೋಗೀ ಸರ್ವೇಷ್ವೇತೇಷು ವೈ ಪುಮಾನ್।**
**ವಿಣ್ಮೂತ್ರಭೋಜನಂ ನಾಮ ಪ್ರಯಾತಿ ನರಕಂ ಮೃತಃ॥** 117

**ಅಶೇಷಪರ್ವಸ್ವೇತೇಷು ತಸ್ಮಾತ್ ಸಂಯಮಿಭಿರ್ಬುಧೈಃ।**
**ಭಾವ್ಯಂ ಸಚ್ಛಾಸ್ತ್ರದೇವೇಜ್ಯಾಧ್ಯಾನಜಪ್ಯಪರೈರ್ನರೈಃ॥** 118

**ನಾನ್ಯಯೋನಾವಯೋನೌ ವಾ ನೋಪಯುಕ್ತೌಷಧಸ್ತಥಾ।**
**ದ್ವಿಜದೇವಗುರೂಣಾಂ ಚ ವ್ಯವಾಯೀ ನಾಶ್ರಮೀ ಭವೇತ್॥** 119

---

ಇಂತಹವರನ್ನು ವರ್ಜಿಸಬೇಕು. ತಾನೂ ಸಹ ಈ ದೋಷಗಳಿಲ್ಲದೆ ಗುಣಮುಕ್ತನಾಗಿರಬೇಕು (114). ಸ್ನಾನ ಮಾಡಿ ಗಂಧ ಮಾಲ್ಯಗಳನ್ನು ಧರಿಸಿ ಸಂತುಷ್ಟನಾಗಿ ಕಾಮಾನುರಾಗಗಳಿಂದ ಕೂಡಿದ ಪುರುಷನು ಮೈಥುನವನ್ನಾಚರಿಸಬೇಕು. ಆ ಸಮಯದಲ್ಲಿ ಅತಿ ಭೋಜನವನ್ನು ಮಾಡಿರಬಾರದು; ಹಸಿದಿರಬಾರದು (115). ಚತುರ್ದಶಿ, ಅಷ್ಟಮಿ, ಅಮಾವಾಸ್ಯೆ, ಹುಣ್ಣಿಮೆ, ಸೂರ್ಯಸಂಕ್ರಾಂತಿ—ಇವು ಪರ್ವದಿನಗಳು. ಈ ದಿನಗಳಲ್ಲಿ ತೈಲಾಭ್ಯಂಗ, ಸ್ತ್ರೀ, ಮಾಂಸ—ಇವನ್ನು ಸೇವಿಸತಕ್ಕವನು ಸತ್ತಮೇಲೆ ಮಲಮೂತ್ರ ಭೋಜನವೆಂಬ ನರಕವನ್ನು ಸೇರುತ್ತಾನೆ (116-117). ಆದ್ದರಿಂದ ಈ ಎಲ್ಲ ಪರ್ವದಿನಗಳಲ್ಲಿಯೂ ವಿದ್ವಾಂಸರಾದವರು ಸಂಯಮಿಗಳಾಗಿ ಸಚ್ಛಾಸ್ತ್ರಪರಿಶೀಲನೆ, ದೇವತಾರ್ಚನೆ, ಧ್ಯಾನ, ಜಪ ಗಳಲ್ಲಿ ನಿರತರಾಗಿರಬೇಕು (118). (ಗೋವು ಮೇಕೆ ಮೊದಲಾದ) ಅನ್ಯ ಯೋನಿಗಳಲ್ಲಿಯೂ ಅಯೋನಿಗಳಲ್ಲಿಯೂ ರಸಾಯನಾದಿ ಔಷಧಗಳನ್ನು ಸೇವಿಸಿದಾಗಲೂ ದ್ವಿಜದೇವಗುರುಗಳ ಆಶ್ರಮದಲ್ಲಿಯೂ ಮೈಥುನ

**ಚೈತ್ಯಚತ್ವರತೀರ್ಥೇಷು ನೈವ ಗೋಷ್ಠೇ ಚತುಷ್ಪಥೇ।**
**ನೈವ ಶ್ಮಶಾನೋಪವನೇ ಸಲಿಲೇಷು ಮಹೀಪತೇ॥ 120**

**ಪ್ರೋಕ್ತಪರ್ವಸ್ವಶೇಷೇಷು ನೈವ ಭೂಪಾಲ ಸಂಧ್ಯಯೋಃ।**
**ಗಚ್ಛೇದ್ವ್ಯವಾಯಂ ಮತಿಮಾನ್ ನಮೂತ್ರೋಚ್ಚಾರಪೀಡಿತಃ॥ 121**

**ಪರ್ವಸ್ವಭಿಗಮೋಽಧನ್ಯೋ ದಿವಾ ಪಾಪಪ್ರದೋ ನೃಪ।**
**ಭುವಿ ರೋಗಾವಹೋ ನೄಣಾಮಪ್ರಶಸ್ತೋ ಜಲಾಶಯೇ॥ 122**

**ಪರದಾರಾನ್ನಗಚ್ಛೇಚ್ಚ ಮನಸಾಪಿ ಕಥಂಚನ।**
**ಕಿಮುವಾಚಾಸ್ಥಿಬಂಧೋಽಪಿ ನಾಸ್ತಿ ತೇಷು ವ್ಯವಾಯಿನಾಮ್॥ 123**

**ಮೃತೋ ನರಕಮಭ್ಯೇತಿ ಹೀಯತೇಽತ್ರಾಪಿ ಚಾಯುಷಃ।**
**ಪರದಾರರತಿಃ ಪುಂಸಾಮಿಹ ಚಾಮುತ್ರ ಭೀತಿದಾ॥ 124**

---

ವನ್ನಾಚರಿಸಬಾರದು (119). ಅಶ್ವತ್ಥಾದಿ ಚೈತ್ಯವೃಕ್ಷದ ಅಡಿಯಲ್ಲಿ, ಅಂಗಳದಲ್ಲಿ, ತೀರ್ಥಕ್ಷೇತ್ರದಲ್ಲಿ, ಕೊಟ್ಟಿಗೆಯಲ್ಲಿ, ರಸ್ತೆಗಳ ಚೌಕದಲ್ಲಿ, ಶ್ಮಶಾನದ ತೋಟದಲ್ಲಿ ಅಥವಾ ನೀರಿನಲ್ಲಿ ಕಾಮಾಪೂರ್ತಿಯನ್ನು ಮಾಡಿಕೊಳ್ಳಬಾರದು (120). ರಾಜ, ಹಿಂದೆ ಹೇಳಿದ ಎಲ್ಲ ಪರ್ವದಿನ ಗಳಲ್ಲಿಯೂ ಎರಡು ಸಂಧ್ಯಾಕಾಲಗಳಲ್ಲಿಯೂ ಬುದ್ಧಿಶಾಲಿಯು ಸ್ತ್ರೀಸಂಗ ಮಾಡಬಾರದು. ಮಲಮೂತ್ರಗಳ ವೇಗವಿದ್ದಾಗಲೂ ಕೂಡದು (121). ಪರ್ವದಿನಗಳಲ್ಲಿ ಸ್ತ್ರೀಗಮನವು ಧನಹಾನಿಕರವಾದದ್ದು. ಹಗಲು ಹೊತ್ತು ಪಾಪಪ್ರದ. ನೆಲದಮೇಲೆ ರೋಗಪ್ರದ. ನೀರಿನಲ್ಲಿ ಮೈಥುನವು ಅಮಂಗಳಕಾರಿ (122). ಪರಸ್ತ್ರೀಯರನ್ನು ಎಂದಿಗೂ ಮನಸ್ಸಿನಲ್ಲಿ ಸಹ ಕಾಮಿಸಬಾರದು. ಅವರ ಸಂಗವನ್ನು ಮಾಡಿದರೆ ಇನ್ನು ಮಾತಿನಿಂದೇನು? ಅಂಥವರಿಗೆ ಮೂಳೆಯಿಲ್ಲದ ಕ್ರಿಮಿಜನ್ಮ ಉಂಟಾಗುತ್ತದೆ (123). ಪರಸ್ತ್ರೀ ಗಾಮಿಯು ಮೃತನಾದಮೇಲೆ ನರಕವನ್ನೈದುವನು. ಇಲ್ಲಿಯೂ ಅವನಿಗೆ ಆಯುಸ್ಸು ಕ್ಷೀಣವಾಗುತ್ತದೆ. ಪರಸ್ತ್ರೀಗಮನವು ಇಹಪರಗಳೆರಡರಲ್ಲಿಯೂ ಭೀತಿಪ್ರದವಾದದ್ದು (124). ಆದ್ದರಿಂದ ಪ್ರಾಜ್ಞನಾದವನು ಪೂರ್ವೋಕ್ತ ದೋಷಗಳಿಲ್ಲದ ಸಮಯದಲ್ಲಿ ತನ್ನ ಪತ್ನಿಯ ಋತುಕಾಲದಲ್ಲಿ, ಅವಳ

**ಇತಿ ಮತ್ವಾ ಸ್ವದಾರೇಷು ಋತುಮತ್ಸು ಬುಧೋ ವ್ರಜೇತ್।**
**ಯಥೋಕ್ತ ದೋಷಹೀನೇಷು ಸಕಾಮೇಷ್ವನೃತಾವಪಿ॥ 125**

ಇತಿ ಶ್ರೀವಿಷ್ಣುಪುರಾಣೇ ತೃತೀಯೇऽಂಶೇ ಏಕಾದಶೋऽಧ್ಯಾಯಃ

---

ಸಂಗವನ್ನು ಮಾಡತಕ್ಕದ್ದು. ಪತ್ನಿಯು ಅಪೇಕ್ಷಿಸಿದರೆ ಋತುಕಾಲವಲ್ಲದಿದ್ದರೂ ಸಂಗವನ್ನು ಮಾಡಬಹುದು” (125).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹನ್ನೊಂದನೆಯ ಅಧ್ಯಾಯ ಮುಗಿಯಿತು.



## ದ್ವಾದಶೋಽಧ್ಯಾಯಃ

*ಔರ್ವ ಉವಾಚ:*

**ದೇವಗೋಬ್ರಾಹ್ಮಣಾನ್ ಸಿದ್ಧಾನ್**
**ವೃದ್ಧಾಚಾರ್ಯಾಂಸ್ತಥಾರ್ಚಯೇತ್।**
**ದ್ವಿಕಾಲಂ ಚ ನಮೇತ್ ಸಂಧ್ಯಾಮಗ್ನೀನುಪಚರೇತ್ತಥಾ॥** 1

**ಸದಾನುಪಹತೇ ವಸ್ತ್ರೇ ಪ್ರಶಸ್ತಾಶ್ಚ ಮಹೌಷಧೀಃ।**
**ಗಾರುಡಾನಿ ಚ ರತ್ನಾನಿ ಬಿಭೃಯಾತ್ ಪ್ರಯತೋ ನರಃ॥** 2

**ಪ್ರಸ್ನಿಗ್ಧಾಮಲಕೇಶಶ್ಚ ಸುಗಂಧಶ್ಚಾರುವೇಷಧೃಕ್।**
**ಸಿತಾಸ್ಸುಮನಸೋ ಹೃದ್ಯಾ ಬಿಭೃಯಾಚ್ಚ ನರಸ್ಸದಾ॥** 3

---

### ಅಧ್ಯಾಯ 12

ಗೃಹಸ್ಥನಿಗೆ ಸಂಬಂಧಿಸಿದ ಸಾಮಾನ್ಯಧರ್ಮಗಳ ನಿರೂಪಣೆ

ಪರಾಶರರು ಹೇಳಿದರು: ಅನಂತರ ಔರ್ವಮುನಿಯು ಹೇಳಿದ್ದೇನೆಂದರೆ, "ಗೃಹಸ್ಥನು ದೇವ ಗೋ ಬ್ರಾಹ್ಮಣರನ್ನೂ ಸಿದ್ಧಪುರುಷರನ್ನೂ ವಯೋವೃದ್ಧರನ್ನೂ ಆಚಾರ್ಯರನ್ನೂ ಪೂಜಿಸಬೇಕಲ್ಲದೆ, ಪ್ರಾತಃಕಾಲ ಸಾಯಂಕಾಲಗಳಲ್ಲಿ ಸಂಧ್ಯಾವಂದನೆಯನ್ನು ಮಾಡಿ ಅಗ್ನಿಹೋತ್ರವನ್ನಾಚರಿಸಬೇಕು (1). ಗೃಹಸ್ಥನು ಸದಾ ಶುಚಿಯಾಗಿದ್ದು, ಬೇರೆಯವರು ಮೊದಲು ಧರಿಸದಿರುವ ಎರಡು ವಸ್ತ್ರಗಳನ್ನು ಧರಿಸಿರಬೇಕು. ಪ್ರಶಸ್ತವಾದ (ದೂರ್ವೆ, ವಿಷ್ಣುಕ್ರಾಂತ) ಮೊದಲಾದ ಔಷಧಿಗಳನ್ನೂ ವಿಷಹರಗಳಾದ ಮರಕತಾದಿರತ್ನಗಳನ್ನೂ ಧರಿಸಬೇಕು (2). ಅವನ ಕೇಶಗಳು ತೈಲದಿಂದ ನಯವಾಗಿ ಸ್ವಚ್ಛವಾಗಿರಬೇಕು. ಸುಗಂಧವನ್ನೂ ಸುಂದರವಾದ ವೇಷ ಭೂಷಣಗಳನ್ನೂ ಬಳಸಬೇಕು. ಬಿಳಿಯ ಬಣ್ಣದ ಮನೋಹರವಾದ ಹೂಗಳನ್ನು ಧರಿಸಬೇಕು (3). ಇನ್ನೊಬ್ಬರ ವಸ್ತುವನ್ನು ಸ್ವಲ್ಪವಾಗಿದ್ದರೂ

**ಕಿಂಚಿತ್ಪರಸ್ವಂ ನ ಹರೇನ್ನಾಲ್ಪಮಪ್ಯಪ್ರಿಯಂ ವದೇತ್।**
**ಪ್ರಿಯಂ ಚ ನಾನೃತಂ ಬ್ರೂಯಾನ್ನಾನ್ಯದೋಷಾನುದೀರಯೇತ್ ॥ 4**

**ನಾನ್ಯಸ್ತ್ರಿಯಂ ತಥಾ ವೈರಂ ರೋಚಯೇತ್ಪುರುಷರ್ಷಭ।**
**ನ ದುಷ್ಟಂ ಯಾನಮಾರೋಹೇತ್ ಕೂಲಚ್ಛಾಯಾಂ ನ ಸಂಶ್ರಯೇತ್ ॥ 5**

**ವಿದ್ವಿಷ್ಟಪತಿತೋನ್ಮತ್ತಬಹುವೈರಾತಿಕೀಟಕೈಃ।**
**ಬಂಧಕೀ ಬಂಧಕೀಭರ್ತ್ರಾ ಕ್ಷುದ್ರಾನೃತಕಥೈಸ್ಸಹ ॥ 6**

**ತಥಾತಿವ್ಯಯಶೀಲೈಶ್ಚ ಪರಿವಾದರತೈಶ್ಶಠೈಃ।**
**ಬುಧೋ ಮೈತ್ರೀಂ ನ ಕುರ್ವೀತ ನೈಕಃ ಪಂಥಾನಮಾಶ್ರಯೇತ್ ॥ 7**

**ನಾವಗಾಹೇಜ್ಜಲೌಘಸ್ಯ ವೇಗಮಗ್ರೇ ನರೇಶ್ವರ।**
**ಪ್ರದೀಪ್ತಂ ವೇಶ್ಮ ನ ವಿಶೇನ್ನಾರೋಹೇಚ್ಛಿಖರಂ ತರೋಃ ॥ 8**

---

ಅಪಹರಿಸತಕ್ಕದ್ದಲ್ಲ. ಸಣ್ಣದಾದರೂ ಅಪ್ರಿಯವಾಕ್ಯವನ್ನು ನುಡಿಯತಕ್ಕದ್ದಲ್ಲ. ಪ್ರಿಯವಾದರೂ ಸುಳ್ಳಾದ್ದನ್ನು ಹೇಳತಕ್ಕದ್ದಲ್ಲ. ಇನ್ನೊಬ್ಬರಲ್ಲಿರುವ ದೋಷಗಳನ್ನು ಉಸಿರತಕ್ಕದ್ದಲ್ಲ (4). ಪುರುಷಶ್ರೇಷ್ಠ—ಸಗರ, ಪರಸ್ತ್ರೀಯನ್ನೂ ಅನ್ಯರೊಡನೆ ವೈರವನ್ನೂ ಬಯಸಬಾರದು. ನಿಂದಿತವಾದ ಯಾನವನ್ನು ಹತ್ತಬಾರದು. ನದೀತೀರದ ನೆರಳಿನಲ್ಲಿ ವಿಶ್ರಮಿಸಬಾರದು (5). ಲೋಕವಿದ್ವಿಷ್ಟನಾದವನು, ಪತಿತ, ಬಹುಜನರ ವೈರವುಳ್ಳವನು, ಕೀಟಗಳಂತೆ ಪೀಡಿಸತಕ್ಕವನು, ಜಾರೆ, ಜಾರೆಯ ಗಂಡ, ಕೀಳುದರ್ಜೆಯ ಮನುಷ್ಯ, ಸುಳ್ಳುಗಾರ—ಇವರೊಡನೆ ಪಂಡಿತನಾದವನು ಸ್ನೇಹವನ್ನು ಬೆಳೆಸಬಾರದು (6). ಅಲ್ಲದೆ ದುಂದುವೆಚ್ಚಮಾಡತಕ್ಕವರು, ಪರನಿಂದಕರು, ವಂಚಕರು—ಇವರೊಡನೆಯೂ ಸ್ನೇಹವನ್ನು ಮಾಡಬಾರದು. ಏಕಾಕಿಯಾಗಿ ದೂರಮಾರ್ಗದಲ್ಲಿ ಹೋಗಬಾರದು (7). ಪ್ರವಾಹದ ವೇಗಕ್ಕೆ ಅಭಿಮುಖವಾಗಿ ನಿಂತು ಸ್ನಾನಮಾಡಬಾರದು. ಬೆಂಕಿ ಹತ್ತಿ ಉರಿಯುವ ಮನೆಯೊಳಗೆ ಹೋಗಬಾರದು. ಮರದ ತುದಿಗೆ ಹತ್ತ

**ನ ಕುರ್ಯಾದ್ದಂತಸಂಘರ್ಷಂ ಕುಷ್ಣೀಯಾಚ್ಚ ನ ನಾಸಿಕಾಮ್।**
**ನಾಸಂವೃತಮುಖೋ ಜೃಂಭೇತ್ ಶ್ವಾಸಕಾಸೌ ವಿಸರ್ಜಯೇತ್॥ 9**

**ನೋಚ್ಚೈರ್ಹಸೇತ್ಸಶಬ್ದಂ ಚ ನ ಮುಂಚೇತ್ ಪವನಂ ಬುಧಃ।**
**ನಖಾನ್ನ ಖಾದಯೇಚ್ಛಿಂದ್ಯಾನ್ನ ತೃಣಂ ನ ಮಹೀಂ ಲಿಖೇತ್॥ 10**

**ನ ಶ್ಮಶ್ರು ಭಕ್ಷಯೇಲ್ಲೋಷ್ಟಂ ನ ಮೃದ್ನೀಯಾದ್ವಿಚಕ್ಷಣಃ।**
**ಜ್ಯೋತೀಂಷ್ಯಮೇಧ್ಯಶಸ್ತಾನಿ ನಾಭಿವೀಕ್ಷೇತ ಚ ಪ್ರಭೋ॥ 11**

**ನಗ್ನಾಂ ಪರಸ್ತ್ರಿಯಂ ಚೈವ ಸೂರ್ಯಂ ಚಾಸ್ತಮಯೋದಯೇ।**
**ನ ಹುಂಕುರ್ಯಾಚ್ಛವಂ ಗಂಧಂ ಶವಗಂಧೋ ಹಿ ಸೋಮಜಃ॥**

**ಚತುಷ್ಪಥಂ ಚೈತ್ಯತರುಂ ಶ್ಮಶಾನೋಪವನಾನಿ ಚ।**
**ದುಷ್ಟಸ್ತ್ರೀಸನ್ನಿಕರ್ಷಂ ಚ ವರ್ಜಯೇನ್ನಿಶಿ ಸರ್ವದಾ॥ 13**

---

ಬಾರದು (8). ಹಲ್ಲನ್ನು ಕಟಕಟನೆ ಕಡಿಯಕೂಡದು. ಮೂಗನ್ನು ಹಿಸುಕಕೂಡದು. ಬಾಯಿಯನ್ನು (ಕರವಸ್ತ್ರಗಳಿಂದ) ಮುಚ್ಚಿಕೊಳ್ಳದೆ ಆಕಳಿಸಕೂಡದು. ಆದರೆ ಉಬ್ಬಸ ಕೆಮ್ಮುಗಳಲ್ಲಿ ಬಾಯಿಯನ್ನು ಮುಚ್ಚಿಕೊಳ್ಳಬಾರದು (9). ಗಟ್ಟಿಯಾಗಿ ನಗಬಾರದು. ಶಬ್ದವಾಗುವಂತೆ ಅಧೋವಾಯುವನ್ನು ಬಿಡಬಾರದು. ಉಗುರು ಕಚ್ಚುವುದನ್ನೂ ಹುಲ್ಲನ್ನು ಕತ್ತರಿಸುವುದನ್ನೂ ನೆಲವನ್ನು ಉಗುರಿನಿಂದ ಕೆರೆಯುವುದನ್ನೂ ತ್ಯಜಿಸಬೇಕು (10). ಗಡ್ಡಮೀಸೆಯ ಕೂದಲನ್ನು ತಿನ್ನಬಾರದು. ಮಣ್ಣು ಹೆಂಟೆಯನ್ನು ಒಂದಕ್ಕೊಂದು ಹೊಡೆಯಬಾರದು. ರಾಜ, ವಿಚಕ್ಷಣನಾದವನು ಅಪವಿತ್ರಗಳೂ ನಿಂದಿತಗಳೂ ಆದ ಜ್ಯೋತಿಗಳನ್ನು ನೋಡಬಾರದು (11). ಬತ್ತಲೆಯಾದ ಪರಸ್ತ್ರೀಯನ್ನೂ ಉದಯಾಸ್ತಕಾಲಗಳಲ್ಲಿ ಸೂರ್ಯನನ್ನೂ ನೋಡತಕ್ಕದ್ದಲ್ಲ. ಹೆಣವನ್ನು ಸುಟ್ಟು ವಾಸನೆ ಬಂದಾಗ ಹೇಸಿಕೊಳ್ಳಬಾರದು. ಏಕೆಂದರೆ ಹೆಣದ ಗಂಧವು ಸೋಮಾಂಶ*ವಾಗಿದೆ (12).

---

* ಶರೀರವು ಅಗ್ನೀಷೋಮಾತ್ಮಕವಾದದ್ದು. ಮೃತನಾದಾಗ ಅಗ್ನಿಯ ಉಷ್ಣಾಂಶವು ಹೋದಮೇಲೆ, ಸೋಮಾಂಶವು ಶರೀರದಲ್ಲಿ ಉಳಿದಿರುತ್ತದೆ.

**ಪೂಜ್ಯದೇವದ್ವಿಜಜ್ಯೋತಿಶ್ಛಾಯಾಂ ನಾತಿಕ್ರಮೇದ್ ಬುಧಃ।**
**ನೈಕಶ್ಶೂನ್ಯಾಟವೀಂ ಗಚ್ಛೇತ್ತಥಾ ಶೂನ್ಯಗೃಹೇ ವಸೇತ್॥ 14**

**ಕೇಶಾಸ್ಥಿಕಂಟಕಾಮೇಧ್ಯಬಲಿಭಸ್ಮತುಷಾಂಸ್ತಥಾ।**
**ಸ್ನಾನಾರ್ದ್ರಧರಣೀಂ ಚೈವ ದೂರತಃ ಪರಿವರ್ಜಯೇತ್॥ 15**

**ನಾನಾರ್ಯಾನಾಶ್ರಯೇತ್ಕಾಂಶ್ಚಿನ್ನ ಜಿಹ್ಮಂ ರೋಚಯೇದ್ ಬುಧಃ।**
**ಉಪಸರ್ಪೇನ್ನ ವೈ ವ್ಯಾಲಂ ಚಿರಂ ತಿಷ್ಠೇನ್ನ ಚೋತ್ಥಿತಃ॥ 16**

**ಅತೀವ ಜಾಗರಸ್ವಪ್ನೇ ತದ್ವತ್ ಸ್ನಾನಾಸನೇ ಬುಧಃ।**
**ನ ಸೇವೇತ ತಥಾ ಶಯ್ಯಾಂ ವ್ಯಾಯಾಮಂ ಚ ನರೇಶ್ವರ॥ 17**

---

ರಾತ್ರಿಯಾದಾಗ ನಾಲ್ಕು ರಸ್ತೆಗಳು ಸೇರುವ ಚೌಕವನ್ನೂ ಚೈತ್ಯವೃಕ್ಷ*ವನ್ನೂ ಶ್ಮಶಾನದ ತೋಟಗಳನ್ನೂ ದುಷ್ಟಸ್ತ್ರೀಯರ ಸಾಮೀಪ್ಯವನ್ನೂ ಸತತವಾಗಿ ವರ್ಜಿಸಬೇಕು (13). ಪೂಜ್ಯರು, ದೇವತೆಗಳು, ಬ್ರಾಹ್ಮಣರು, ದೀಪಗಳು —ಇವುಗಳ ನೆರಳನ್ನು ವಿವೇಕಿಯಾದವನು ಹಾಯಬಾರದು. ಏಕಾಕಿಯಾಗಿ ಶೂನ್ಯವಾದ ಕಾಡಿಗೆ ಹೋಗಬಾರದು. ಹಾಗೆಯೇ ಶೂನ್ಯಗೃಹದಲ್ಲಿ ಒಂಟಿಯಾಗಿ ವಾಸಮಾಡಬಾರದು (14). ಕೂದಲು, ಮೂಳೆ, ಮುಳ್ಳು, ಅಪವಿತ್ರವಸ್ತು, ಬಲಿ, ಬೂದಿ, ಹೊಟ್ಟು, ಸ್ನಾನಮಾಡಿದ್ದರಿಂದ ಒದ್ದೆಯಾದ ನೆಲ—ಇವನ್ನು ದೂರದಿಂದ ವರ್ಜಿಸಬೇಕು. ಅಯೋಗ್ಯರನ್ನು ಆಶ್ರಯಿಸುವುದೂ ಕುಟಿಲ ಮನುಷ್ಯನನ್ನು ಪ್ರೀತಿಸುವುದೂ ಕೂಡದು. ಸರ್ಪ ಅಥವಾ ಆನೆಯ ಎದುರಿಗೆ ಹೋಗಕೂಡದು. ಮಲಗಿ ಎದ್ದ ಮೇಲೆ ಅಲ್ಲಿ ಹೆಚ್ಚು ಹೊತ್ತು ಕುಳಿರಬಾರದು (15-16). ರಾಜ, ಜಾಗರಣೆ, ನಿದ್ರೆ, ಸ್ನಾನ, ಕುಳಿತಿರುವುದು—ಇವನ್ನು ಅತಿಯಾಗಿ ಮಾಡಬಾರದು. ಬಹಳ ಹೊತ್ತು ಹಾಸಿಗೆಯಲ್ಲಿ ಮಲಗಿರುವುದೂ ಸರಿಯಲ್ಲ. ವ್ಯಾಯಾಮವನ್ನೂ ಅತಿಯಾಗಿ ಮಾಡತಕ್ಕದ್ದಲ್ಲ (17). ಕೋರೆ ಹಲ್ಲು ಮತ್ತು ಕೊಂಬುಗಳುಳ್ಳ ಪ್ರಾಣಿಗಳನ್ನು ಪ್ರಾಜ್ಞನು ದೂರದಲ್ಲಿ ಇರಿಸಬೇಕು. ಮಂಜು, ಎದುರುಗಾಳಿ, ಬಿಸಿಲು—ಇವನ್ನು ವರ್ಜಿಸಬೇಕು

---

* ಕಟ್ಟೆಕಟ್ಟಿರುವ ಅಶ್ವತ್ಥಾದಿ ವೃಕ್ಷ.

**ದಂಷ್ಟ್ರಿಣಶ್ಶೃಂಗಿಣಶ್ಚೈವ ಪ್ರಾಜ್ಞೋ ದೂರೇಣ ವರ್ಜಯೇತ್।**
**ಅವಶ್ಯಾಯಂ ಚ ರಾಜೇಂದ್ರ ಪುರೋವಾತಾತಪೌ ತಥಾ॥ 18**

**ನ ಸ್ನಾಯಾನ್ನ ಸ್ವಪೇನ್ನಗ್ನೋ ನ ಚೈವೋಪಸ್ಪೃಶೇದ್ ಬುಧಃ।**
**ಮುಕ್ತಕೇಶಶ್ಚ ನಾಚಾಮೇದ್ದೇವಾದ್ಯರ್ಚಾಂ ಚ ವರ್ಜಯೇತ್॥ 19**

**ಹೋಮದೇವಾರ್ಚನಾದ್ಯಾಸು ಕ್ರಿಯಾಸ್ವಾಚಮನೇ ತಥಾ।**
**ನೈಕವಸ್ತ್ರಃ ಪ್ರವರ್ತೇತ ದ್ವಿಜವಾಚನಿಕೇ ಜಪೇ॥ 20**

**ನಾಸಮಂಜಸಶೀಲೈಸ್ತು ಸಹಾಸೀತ ಕಥಂಚನ।**
**ಸದ್ವೃತ್ತಸನ್ನಿಕರ್ಷೋ ಹಿ ಕ್ಷಣಾರ್ಧಮಪಿ ಶಸ್ಯತೇ॥ 21**

**ವಿರೋಧಂ ನೋತ್ತಮೈರ್ಗಚ್ಛೇನ್ನಾಧಮೈಶ್ಚ ಸದಾ ಬುಧಃ।**
**ವಿವಾಹಶ್ಚ ವಿವಾದಶ್ಚ ತುಲ್ಯಶೀಲೈರ್ನೃಪೇಷ್ಯತೇ॥ 22**

**ನಾರಭೇತ ಕಲಿಂ ಪ್ರಾಜ್ಞಶ್ಶುಷ್ಕವೈರಂ ಚ ವರ್ಜಯೇತ್।**
**ಅಪ್ಯಲ್ಪಹಾನಿಸ್ಸೋಢವ್ಯಾ ವೈರೇಣಾರ್ಥಾಗಮಂ ತ್ಯಜೇತ್॥ 23**

---

(18). ಬತ್ತಲೆಯಾಗಿ ಸ್ನಾನಮಾಡಬಾರದು, ಮಲಗಬಾರದು ಮತ್ತು ಆಚಮನ ಮಾಡಬಾರದು. ಶಿಖೆಯನ್ನು ಬಿಚ್ಚಿಕೊಂಡು ಆಚಮನ ಮಾಡುವುದನ್ನೂ ದೇವತಾದಿಗಳ ಅರ್ಚನೆ ಮಾಡುವುದನ್ನೂ ವರ್ಜಿಸಬೇಕು (19). ಹೋಮ ದೇವತಾರ್ಚನಾದಿ ಪುಣ್ಯಕರ್ಮಗಳಲ್ಲಿಯೂ ಆಚಮನದಲ್ಲಿಯೂ ಪುಣ್ಯಾಹವಾಚನ ಮತ್ತು ಜಪಗಳಲ್ಲಿಯೂ ಒಂಟಿ ಬಟ್ಟೆಯನ್ನುಟ್ಟು ಪ್ರವರ್ತಿಸತಕ್ಕದ್ದಲ್ಲ (20). ದುರ್ಜನರ ಜೊತೆಗೆ ಎಂದಿಗೂ ಇರಬಾರದು. ಅರ್ಧಕ್ಷಣವೇ ಆದರೂ ಸಜ್ಜನರ ಸಂಗವು ಪ್ರಶಸ್ತವಾದದ್ದು. ತನಗಿಂತ ಉತ್ತಮರಲ್ಲಾಗಲಿ ಕೆಳಮಟ್ಟದವರಲ್ಲಾಗಲಿ ವಿರೋಧವನ್ನು ಕಟ್ಟಿಕೊಳ್ಳಬಾರದು. ರಾಜ, ವಿವಾಹ ವಿವಾದ—ಇವೆರಡೂ ಸಮಾನಶೀಲರೊಡನೆ ಆಗಬೇಕಾದ್ದು ಅಪೇಕ್ಷಿತ (21-22). ಬುದ್ಧಿಶಾಲಿಯು ಜಗಳವನ್ನು ಆರಂಭಿಸಬಾರದು. ನಿಷ್ಫಲವಾದ ವೈರವನ್ನು ವರ್ಜಿಸಬೇಕು. ಸ್ವಲ್ಪ ನಷ್ಟವಾದರೂ ಸಹಿಸಿಕೊಳ್ಳಬೇಕಲ್ಲದೆ ಜಗಳದಿಂದ ಧನಾಗಮವನ್ನು ಬಯಸಬಾರದು (23). ಸ್ನಾನಮಾಡಿದಮೇಲೆ ಸ್ನಾನಕಾಲದಲ್ಲುಟ್ಟ ವಸ್ತ್ರದಿಂದಾಗಲಿ

**ಸ್ನಾತೋ ನಾಂಗಾನಿ ಸಮ್ಮಾರ್ಜೀತ್ ಸ್ನಾನಶಾಟ್ಯಾ ನ ಪಾಣಿನಾ।**
**ನ ಚ ನಿರ್ಧೂತಯೇತ್ಕೇಶಾನ್ನಾಚಾಮೇಚ್ಚೈವ ಚೋತ್ಥಿತಃ॥ 24**

**ಪಾದೇನ ನಾಕ್ರಮೇತ್ಪಾದಂ ನ ಪೂಜ್ಯಾಭಿಮುಖಂ ನಯೇತ್।**
**ನೋಚ್ಚಾಸನಂ ಗುರೋರಗ್ರೇ ಭಜೇತಾವಿನಯಾನ್ವಿತಃ॥ 25**

**ಅಪಸವ್ಯಂ ನ ಗಚ್ಛೇಚ್ಚ ದೇವಾಗಾರಚತುಷ್ಪಥಾನ್।**
**ಮಾಂಗಲ್ಯಪೂಜ್ಯಾಂಶ್ಚ ತಥಾ ವಿಪರೀತಾನ್ನ ದಕ್ಷಿಣಮ್॥ 26**

**ಸೋಮಾರ್ಕಾಗ್ನ್ಯಂಬುವಾಯೂನಾಂ ಪೂಜ್ಯಾನಾಂ ಚ ನ ಸಮ್ಮುಖಮ್।**
**ಕುರ್ಯಾನ್ನಿಷ್ಠೀವವಿಣ್ಮೂತ್ರಸಮುತ್ಸರ್ಗಂ ಚ ಪಂಡಿತಃ॥ 27**

**ತಿಷ್ಠನ್ನ ಮೂತ್ರಯೇತ್ತದ್ವತ್ ಪಥಿಷ್ವಪಿ ನ ಮೂತ್ರಯೇತ್।**
**ಶ್ಲೇಷ್ಮವಿಣ್ಮೂತ್ರರಕ್ತಾನಿ ಸರ್ವದೈವ ನ ಲಂಘಯೇತ್॥ 28**

---

ಬರಿಯಕೈಯಿಂದಾಗಲಿ ದೇಹವನ್ನು ಒರೆಸಿಕೊಳ್ಳಬಾರದು. ತಲೆಗೂದಲನ್ನು ಒದರಬಾರದು. ನಿಂತುಕೊಂಡು ಆಚಮನ ಮಾಡಬಾರದು (24). ಕಾಲಿಂದ ತನ್ನ ಕಾಲನ್ನು ತುಳಿಯಬಾರದು. ಪೂಜ್ಯರೆದುರಿಗೆ ಕಾಲನ್ನು ನೀಡಬಾರದು. ಅವಿನೀತನಾಗಿ ಗುರುವಿನೆದುರಿಗೆ ಉನ್ನತವಾದ ಆಸನದಲ್ಲಿ ಕುಳಿತುಕೊಳ್ಳಬಾರದು (25). ದೇವಾಲಯವನ್ನೂ ಚೌಕವನ್ನೂ ಹಾಗೆಯೇ ಮಂಗಳವಸ್ತುಗಳನ್ನೂ ಪೂಜ್ಯರನ್ನೂ ಅಪಸವ್ಯವಾಗಿ ದಾಟಬಾರದು. ಇದಕ್ಕೆ ವಿರುದ್ಧವಾದ ಹೀನರನ್ನು ಪ್ರದಕ್ಷಿಣಾಕಾರವಾಗಿಯೂ ದಾಟಬಾರದು. (26). ಚಂದ್ರ, ಸೂರ್ಯ, ಅಗ್ನಿ, ಜಲ, ವಾಯುಗಳಿಗೆ ಅಭಿಮುಖವಾಗಿಯೂ ಗುರುಹಿರಿಯರೆದುರಿಗೂ ಉಗುಳಬಾರದು ಮತ್ತು ಮಲಮೂತ್ರಗಳನ್ನು ವಿಸರ್ಜಿಸಬಾರದು (27). ನಿಂತುಕೊಂಡಾಗಲಿ ದಾರಿಯಲ್ಲಾಗಲಿ ಮೂತ್ರ ವಿಸರ್ಜನೆ ಮಾಡತಕ್ಕದ್ದಲ್ಲ. ಶ್ಲೇಷ್ಮ, ಮಲ, ಮೂತ್ರ, ರಕ್ತಗಳನ್ನು ಯಾವಾಗಲೂ ದಾಟಿ ಹೋಗಬಾರದು (28). ಭೋಜನ, ದೇವಪೂಜೆ, ಮಂಗಳಕಾರ್ಯ, ಜಪ, ಹೋಮಾದಿಗಳ ಸಮಯದಲ್ಲಿ ಕಫವನ್ನು ಉಗುಳುವುದಾಗಲಿ, ಸಿಂಬಳವನ್ನು ತೆಗೆಯುವು

**ಶ್ಲೇಷ್ಮಶಿಂಘಾಣಿಕೋತ್ಸರ್ಗೋ ನಾನ್ನಕಾಲೇ ಪ್ರಶಸ್ಯತೇ।**
**ಬಲಿಮಂಗಲಜಪ್ಯಾದೌ ನ ಹೋಮೇ ನ ಮಹಾಜನೇ॥ 29**

**ಯೋಷಿತೋ ನಾವಮನ್ಯೇತ ನ ಚಾಸಾಂ ವಿಶ್ವಸೇದ್ ಬುಧಃ।**
**ನ ಚೈವೇರ್ಷ್ಯಾ ಭವೇತ್ತಾಸು ನ ಧಿಕ್ಕುರ್ಯಾತ್ಕದಾಚನ॥ 30**

**ಮಾಂಗಲ್ಯಪುಷ್ಪರತ್ನಾಜ್ಯಪೂಜ್ಯಾನನಭಿವಾದ್ಯ ಚ।**
**ನ ನಿಷ್ಕ್ರಮೇದ್ ಗೃಹಾತ್ ಪ್ರಾಜ್ಞಸ್ಸದಾಚಾರಪರೋ ನರಃ॥ 31**

**ಚತುಷ್ಪಥಾನ್ನಮಸ್ಕುರ್ಯಾತ್ ಕಾಲೇ ಹೋಮಪರೋ ಭವೇತ್।**
**ದೀನಾನಭ್ಯುದ್ಧರೇತ್ಸಾಧೂನುಪಾಸೀತ ಬಹುಶ್ರುತಾನ್॥ 32**

**ದೇವರ್ಷಿಪೂಜಕಸ್ಸಮ್ಯಕ್ ಪಿತೃಪಿಂಡೋದಕಪ್ರದಃ।**
**ಸತ್ಕರ್ತಾ ಚಾತಿಥೀನಾಂ ಯಃ ಸ ಲೋಕಾನುತ್ತಮಾನ್ ವ್ರಜೇತ್॥**

**ಹಿತಂ ಮಿತಂ ಪ್ರಿಯಂ ಕಾಲೇ ವಶ್ಯಾತ್ಮಾ ಯೋಽಭಿಭಾಷತೇ।**
**ಸ ಯಾತಿ ಲೋಕಾನಾಹ್ಲಾದಹೇತುಭೂತಾನ್ನೃಪಾಕ್ಷಯಾನ್॥ 34**

---

ದಾಗಲಿ ಯೋಗ್ಯವಲ್ಲ (29). ಸ್ತ್ರೀಯರನ್ನು ಅವಮಾನಪಡಿಸಬಾರದು. ವಿದ್ವಾಂಸನು ಅವರನ್ನು ಹೆಚ್ಚು ನಂಬಲೂ ಬಾರದು. ಸ್ತ್ರೀಯರನ್ನು ಮಾತ್ಸರ್ಯದಿಂದ ನೋಡುವುದಾಗಲಿ, ಧಿಕ್ಕಾರದಿಂದ ನಿಂದಿಸುವುದಾಗಲಿ ಸಲ್ಲದು (30). ಸದಾಚಾರಶೀಲನಾದ ಪ್ರಾಜ್ಞಮನುಷ್ಯನು ಮಂಗಳದ್ರವ್ಯ, ಹೂ, ರತ್ನ, ತುಪ್ಪ, ಪೂಜ್ಯರಾದ ಜನರು—ಇವರಿಗೆ ಗೌರವವನ್ನು ಸಲ್ಲಿಸದೆ ಮನೆಯಿಂದ ಹೊರಗೆ ಹೋಗಬಾರದು. ನಾಲ್ಕು ರಸ್ತೆಗಳು ಸೇರುವ ಚೌಕವನ್ನು ವಂದಿಸಬೇಕು. ಸರಿಯಾದ ಕಾಲದಲ್ಲಿ ಹೋಮತತ್ಪರ ನಾಗಬೇಕು. ದೀನರಿಗೆ ಉಪಕಾರ ಮಾಡಬೇಕು. ವಿದ್ವಾಂಸರಾದ ಸಜ್ಜನರನ್ನು ವಂದಿಸಬೇಕು (31-32). ಯಾವಾತನು ದೇವತೆಗಳನ್ನೂ ಋಷಿಗಳನ್ನೂ ಪೂಜಿಸುತ್ತಾನೋ ಪಿತೃಗಳಿಗೆ ಪಿಂಡೋದಕಗಳನ್ನು ಸರಿಯಾಗಿ ಸಲ್ಲಿಸುತ್ತಾನೋ ಮತ್ತು ಅತಿಥಿಗಳನ್ನು ಸತ್ಕರಿಸುತ್ತಾನೋ ಅವನು ಉತ್ತಮ ಲೋಕಗಳನ್ನು ಪಡೆಯುತ್ತಾನೆ (33). ಯಾವಾತನು ಜಿತೇಂದ್ರಿಯನಾಗಿದ್ದು ಕಾಲಾನುಗುಣವಾಗಿ ಹಿತವಾಗಿಯೂ ಮಿತ

**ಧೀಮಾನ್ ಹ್ರೀಮಾನ್ ಕ್ಷಮಾಯುಕ್ತೋ ಹ್ಯಾಸ್ತಿಕೋ ವಿನಯಾನ್ವಿತಃ।**
**ವಿದ್ಯಾಭಿಜನವೃದ್ಧಾನಾಂ ಯಾತಿ ಲೋಕಾನನುತ್ತಮಾನ್॥ 35**

**ಅಕಾಲಗರ್ಜಿತಾದೌ ಚ ಪರ್ವಸ್ವಾಶೌಚಕಾದಿಷು।**
**ಅನಧ್ಯಾಯಂ ಬುಧಃ ಕುರ್ಯಾದುಪರಾಗಾದಿಕೇ ತಥಾ॥ 36**

**ಶಮಂ ನಯತಿ ಯಃ ಕ್ರುದ್ಧಾನ್ ಸರ್ವಬಂಧುರಮತ್ಸರೀ।**
**ಭೀತಾಶ್ವಾಸನಕೃತ್ಸಾಧುಸ್ಸ್ವರ್ಗಸ್ತಸ್ಯಾಲ್ಪಕಂ ಫಲಮ್॥ 37**

**ವರ್ಷಾತಪಾದಿಷುಚ್ಛತ್ರೀ ದಂಡೀ ರಾತ್ರ್ಯಟವೀಷು ಚ।**
**ಶರೀರತ್ರಾಣಕಾಮೋ ವೈ ಸೋಪಾನತ್ಕಸ್ಸದಾ ವ್ರಜೇತ್॥ 38**

**ನೋರ್ಧ್ವಂ ನ ತಿರ್ಯಗ್ದೂರಂ ವಾ ನ ಪಶ್ಯನ್ಪರ್ಯಟೇದ್ಬುಧಃ।**
**ಯುಗಮಾತ್ರಂ ಮಹೀಪೃಷ್ಠಂ ನರೋ ಗಚ್ಛೇದ್ವಿಲೋಕಯನ್॥ 39**

---

ವಾಗಿಯೂ ಪ್ರಿಯವಾಗಿಯೂ ಮಾತಾಡುತ್ತಾನೋ ಆತನು, ರಾಜ ಸಗರ, ಆನಂದಕರವಾದ ಅಕ್ಷಯ ಲೋಕವನ್ನು ಸೇರುತ್ತಾನೆ (34). ಧೀಮಂತನೂ ಹ್ರೀಮಂತನೂ ಕ್ಷಮಾಶೀಲನೂ ಆಸ್ತಿಕನೂ ವಿನಯಾನ್ವಿತನೂ ಆದ ಮನುಷ್ಯನು ಜ್ಞಾನವೃದ್ಧರೂ ಉತ್ತಮ ಕುಲದವರೂ ಸೇರುವ ಲೋಕವನ್ನು ಸೇರುತ್ತಾನೆ (35). ಅಕಾಲದಲ್ಲಿ ಮೇಘಗರ್ಜನೆಯಾದಾಗ, ಪರ್ವ ಕಾಲದಲ್ಲಿ, ಅಶೌಚ ಬಂದಾಗ ಮತ್ತು ಗ್ರಹಣಕಾಲ ಮೊದಲಾದ ಸಂದರ್ಭದಲ್ಲಿ ವಿವೇಕಿಯು ವೇದಾಧ್ಯಯನವನ್ನು ಮಾಡತಕ್ಕದ್ದಲ್ಲ (36). ಸರ್ವರಿಗೂ ಬಂಧುವಿನಂತೆ ನಡೆಯುತ್ತ, ಮಾತ್ಸರ್ಯರಹಿತನಾಗಿದ್ದು, ಕೋಪಗೊಂಡವರನ್ನು ಸಂತೈಸುತ್ತ, ಹೆದರಿದವರಿಗೆ ಧೈರ್ಯ ಹೇಳುತ್ತ ಇರುವ ಸಾಧುಪುರುಷನಿಗೆ ಸ್ವರ್ಗವೂ ಸಹ ಅತ್ಯಲ್ಪವಾದ ಫಲ (37). ಗೃಹಸ್ಥನು ಮಳೆ ಬಿಸಿಲುಗಳಲ್ಲಿ ಛತ್ರಿಯನ್ನು ಧರಿಸಬೇಕು. ರಾತ್ರಿಯಲ್ಲಿಯೂ ಕಾಡಿನಲ್ಲಿಯೂ ದೊಣ್ಣೆಯನ್ನು ಹಿಡಿದಿರಬೇಕು. ನಡೆಯುವಾಗ ಕಾಲಿಗೆ ಚಪ್ಪಲಿಯನ್ನು ಹಾಕಿರಬೇಕು. ಇದೆಲ್ಲವೂ ದೇಹರಕ್ಷಣೆಗಾಗಿ (38). ಪಂಡಿತನು ಒಂದು ಮಾರಿನವರೆಗೆ (ಸ್ವಲ್ಪದೂರ ಮಾತ್ರ)

**ದೋಷಹೇತೂನಶೇಷಾಂಶ್ಚ ವಶ್ಯಾತ್ಮಾ ಯೋ ನಿರಸ್ಯತಿ।**
**ತಸ್ಯ ಧರ್ಮಾರ್ಥಕಾಮಾನಾಂ ಹಾನಿರ್ನಾಲ್ಪಾಪಿ ಜಾಯತೇ॥ 40**

**ಸದಾಚಾರರತಃ ಪ್ರಾಜ್ಞೋ ವಿದ್ಯಾವಿನಯಶಿಕ್ಷಿತಃ।**
**ಪಾಪೇಽಪ್ಯಪಾಪಃ ಪರುಷೇ ಹ್ಯಭಿಧತ್ತೇ ಪ್ರಿಯಾಣಿ ಯಃ।**
**ಮೈತ್ರೀದ್ರವಾಂತಃ ಕರಣಸ್ತಸ್ಯ ಮುಕ್ತಿಃ ಕರೇ ಸ್ಥಿತಾ॥ 41**

**ಯೇ ಕಾಮಕ್ರೋಧಲೋಭಾನಾಂ ವೀತರಾಗಾ ನ ಗೋಚರೇ।**
**ಸದಾಚಾರಸ್ಥಿತಾಸ್ತೇಷಾಮನುಭಾವೈರ್ಧೃತಾ ಮಹೀ॥ 42**

**ತಸ್ಮಾತ್ಸತ್ಯಂ ವದೇತ್ ಪ್ರಾಜ್ಞೋ ಯತ್ಪರಪ್ರೀತಿಕಾರಣಮ್।**
**ಸತ್ಯಂ ಯತ್ಪರದುಃಖಾಯ ತದಾ ಮೌನಪರೋ ಭವೇತ್॥ 43**

**ಪ್ರಿಯಮುಕ್ತಂ ಹಿತಂ ನೈತದಿತಿ ಮತ್ವಾ ನ ತದ್ವದೇತ್।**
**ಶ್ರೇಯಸ್ತತ್ರ ಹಿತಂ ವಾಚ್ಯಂ ಯದ್ಯಪ್ಯತ್ಯಂತಮಪ್ರಿಯಮ್॥ 44**

---

ನೋಡುತ್ತ ಸಂಚರಿಸಬೇಕು. ಮೇಲಾಗಲಿ ಅಡ್ಡವಾಗಲಿ ಬಹಳ ದೂರವಾಗಲಿ ನೋಡುತ್ತ ಹೋಗಬಾರದು (39). ಹೀಗೆ ದೋಷಕ್ಕೆ ಕಾರಣಗಳಾದ ಸಮಸ್ತ ವಿಷಯಗಳನ್ನೂ ಯಾವ ಜಿತೇಂದ್ರಿಯನು ದೂರ ಮಾಡುತ್ತಾನೋ ಆತನ ಧರ್ಮಾರ್ಥಕಾಮಗಳಿಗೆ ಸ್ವಲ್ಪವಾದರೂ ಚ್ಯುತಿಯಾಗುವುದಿಲ್ಲ (40). ಯಾವ ಪ್ರಾಜ್ಞನು ಸದಾಚಾರ ನಿರತನೂ ವಿದ್ಯಾವಿನಯಭೂಷಿತನೂ ಆಗಿ, ಪಾಪಿಯಾದವನಿಗೂ ಕೆಟ್ಟದ್ದನ್ನು ಮಾಡದೆ ಒಳ್ಳೆಯ ಮಾತುಗಳನ್ನಾಡುತ್ತಾನೋ, ಯಾರ ಅಂತಃಕರಣವು ಸ್ನೇಹದಿಂದ ಕರಗಿರುತ್ತದೆಯೋ ಆತನ ಕೈಯಲ್ಲಿಯೇ ಮೋಕ್ಷವಿರುತ್ತದೆ (41). ವೀತರಾಗರೂ ಕಾಮಕ್ರೋಧ ಲೋಭಗಳಿಗೆ ಒಳಗಾಗದವರೂ ಸದಾಚಾರ ಶೀಲರೂ ಆದ ಮಹಾಪುರುಷರ ಪ್ರಭಾವದಿಂದ ಈ ಭೂಮಿಯು ನಿಂತಿದೆ. ಆದ್ದರಿಂದ ಪ್ರಾಜ್ಞನು ಪರರಿಗೆ ಪ್ರೀತಿಯನ್ನುಂಟು ಮಾಡುವ ಸತ್ಯವನ್ನು ನುಡಿಯಬೇಕು. ಸತ್ಯವು ಪರರಿಗೆ ನೋವನ್ನುಂಟು ಮಾಡುವುದಾದರೆ, ಆಗ ಮೌನವನ್ನು ಅವಲಂಬಿಸಬೇಕು (42-43). ಪ್ರಿಯವಾದರೂ ಹಿತಕಾರಿಯಲ್ಲವಾದರೆ ಅದನ್ನು ಹೇಳಬಾರದು. ಬಹಳ

**ಪ್ರಾಣಿನಾಮುಪಕಾರಾಯ ಯಥೈವೇಹ ಪರತ್ರ ಚ।**
**ಕರ್ಮಣಾ ಮನಸಾ ವಾಚಾ ತದೇವ ಮತಿಮಾನ್ಭಜೇತ್॥** 45

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ದ್ವಾದಶೋಽಧ್ಯಾಯಃ

---

ಅಪ್ರಿಯವಾದರೂ ಹಿತಕಾರಿಯಾದರೆ ಆ ಮಾತನ್ನು ಹೇಳಬೇಕು. ಯಾವ ಕಾರ್ಯವು ಇಹಲೋಕ ಪರಲೋಕಗಳಲ್ಲಿ ಪ್ರಾಣಿಗಳಿಗೆ ಉಪಕಾರಿಯಾಗುವುದೋ ಅಂತಹ ಕಾರ್ಯವನ್ನೇ ಬುದ್ಧಿಶಾಲಿಯಾದವನು ಮನಸ್ಸು, ಮಾತು ಮತ್ತು ಕ್ರಿಯೆಗಳಿಂದ ಆಚರಿಸಬೇಕು (44-45)."

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹನ್ನೆರಡನೆಯ ಅಧ್ಯಾಯ ಮುಗಿಯಿತು.



## ತ್ರಯೋದಶೋಽಧ್ಯಾಯಃ

*ಔರ್ವ ಉವಾಚ:*

**ಸಚೈಲಸ್ಯ ಪಿತುಃ ಸ್ನಾನಂ ಜಾತೇ ಪುತ್ರೇ ವಿಧೀಯತೇ।**
**ಜಾತಕರ್ಮ ತದಾ ಕುರ್ಯಾತ್ ಶ್ರಾದ್ಧಮಭ್ಯುದಯೇ ಚ ಯತ್॥**

**ಯುಗ್ಮಾನ್ ದೇವಾಂಶ್ಚ ಪಿತ್ರ್ಯಾಂಶ್ಚ ಸಮ್ಯಕ್ಸವ್ಯಕ್ರಮಾದ್ ದ್ವಿಜಾನ್।**
**ಪೂಜಯೇದ್ಭೋಜಯೇಚ್ಚೈವ ತನ್ಮನಾ ನಾನ್ಯಮಾನಸಃ॥ 2**

**ದಧ್ಯಕ್ಷತೈಸ್ಸಬದರೈಃ ಪ್ರಾಙ್ಮುಖೋದಙ್ಮುಖೋಽಪಿವಾ।**
**ದೇವತೀರ್ಥೇನ ವೈ ಪಿಂಡಾನ್ ದದ್ಯಾತ್ಕಾಯೇನ ವಾ ನೃಪ॥ 3**

**ನಾಂದೀಮುಖಃ ಪಿತೃಗಣಸ್ತೇನ ಶ್ರಾದ್ಧೇನ ಪಾರ್ಥಿವ।**
**ಪ್ರೀಯತೇ ತತ್ತು ಕರ್ತವ್ಯಂ ಪುರುಷೈಸ್ಸರ್ವವೃದ್ಧಿಷು॥ 4**

---

## ಅಧ್ಯಾಯ 13

### ನಾಂದೀಶ್ರಾದ್ಧ, ಪ್ರೇತಕರ್ಮ, ಪಿತೃಶ್ರಾದ್ಧಾದಿಗಳ ವಿಚಾರ

ಪರಾಶರಮುನಿಗಳು ಹೇಳಿದರು: ಮತ್ತೆ ಔರ್ವನು ಹೇಳಿದ್ದೇನೆಂದರೆ "ಪುತ್ರನು ಹುಟ್ಟಿದಾಗ ತಂದೆಯು ಸಚೇಲಸ್ನಾನಮಾಡಬೇಕು. ಅನಂತರ ಜಾತಕರ್ಮಸಂಸ್ಕಾರವನ್ನೂ ಆಭ್ಯುದಯಿಕಶ್ರಾದ್ಧವನ್ನೂ ಮಾಡತಕ್ಕದ್ದು (1). ಆತನು ತನ್ಮಯನಾಗಿ ಏಕಾಗ್ರಚಿತ್ತದಿಂದ ದೇವಗಣ ಪಿತೃಗಣ ಗಳೆರಡನ್ನೂ ಪ್ರದಕ್ಷಿಣ ಕ್ರಮದಿಂದ ಪೂಜಿಸಬೇಕಲ್ಲದೆ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ದಧಿ, ಅಕ್ಷತೆ, ಬದರೀಫಲಗಳಿಂದ ಕೂಡಿದ ಪಿಂಡಗಳನ್ನು ಪೂರ್ವಾಭಿಮುಖನಾಗಿ ಅಥವಾ ಉತ್ತರಾಭಿಮುಖ ನಾಗಿ ಕುಳಿತು ದೇವತೀರ್ಥದಿಂದಲೋ ಅಥವಾ ಪ್ರಾಜಾಪತ್ಯತೀರ್ಥ ದಿಂದಲೋ ಹಾಕಬೇಕು (2-3). ಈ ಶ್ರಾದ್ಧದಿಂದ ನಾಂದೀಮುಖ ಪಿತೃಗಣವು ಸಂತೃಪ್ತವಾಗುತ್ತದೆ. ಆದ್ದರಿಂದ ಎಲ್ಲ ಅಭ್ಯುದಯ ಕಾರ್ಯ ಗಳಲ್ಲಿಯೂ ಈ ನಾಂದೀಶ್ರಾದ್ಧವನ್ನು ಮಾಡಬೇಕು (4). ಮಗಳ ಮತ್ತು

**ಕನ್ಯಾಪುತ್ರವಿವಾಹೇಷು ಪ್ರವೇಶೇಷು ಚ ವೇಶ್ಮನಃ।**
**ನಾಮಕರ್ಮಣಿ ಬಾಲಾನಾಂ ಚೂಡಾಕರ್ಮಾದಿಕೇ ತಥಾ॥ 5**

**ಸೀಮಂತೋನ್ನಯನೇ ಚೈವ ಪುತ್ರಾದಿಮುಖದರ್ಶನೇ।**
**ನಾಂದೀಮುಖಂ ಪಿತೃಗಣಂ ಪೂಜಯೇತ್ ಪ್ರಯತೋ ಗೃಹೀ॥**

**ಪಿತೃಪೂಜಾಕ್ರಮಃ ಪ್ರೋಕ್ತೋ ವೃದ್ಧಾವೇಷ ಸನಾತನಃ।**
**ಶ್ರೂಯತಾಮವನೀಪಾಲ ಪ್ರೇತಕರ್ಮಕ್ರಿಯಾವಿಧಿಃ॥ 7**

**ಪ್ರೇತದೇಹಂ ಶುಭೈಃ ಸ್ನಾನೈಃ ಸ್ನಾಪಿತಂ ಸ್ರಗ್ವಿಭೂಷಿತಮ್।**
**ದಗ್ಧ್ವಾ ಗ್ರಾಮದ್ಬಹಿಃ ಸ್ನಾತ್ವಾ ಸಚೈಲಸ್ಸಲಿಲಾಶಯೇ॥ 8**

**ಯತ್ರ ತತ್ರ ಸ್ಥಿತಾಯೈತದಮುಕಾಯೇತಿ ವಾದಿನಃ।**
**ದಕ್ಷಿಣಾಭಿಮುಖಾ ದದ್ಯುರ್ಬಾಂಧವಾಸ್ಸಲಿಲಾಂಜಲೀನ್॥ 9**

**ಪ್ರವಿಷ್ಟಾಶ್ಚ ಸಮಂ ಗೋಭಿರ್ಗ್ರಾಮಂ ನಕ್ಷತ್ರದರ್ಶನೇ।**
**ಕಟಕರ್ಮ ತತಃ ಕುರ್ಯುರ್ಭೂಮೌ ಪ್ರಸ್ತರಶಾಯಿನಃ॥ 10**

---

ಮಗನ ವಿವಾಹಕಾಲದಲ್ಲಿ, ನೂತನಗೃಹಪ್ರವೇಶದಲ್ಲಿ, ಮಕ್ಕಳ ನಾಮಕರಣದಲ್ಲಿ, ಚೌಲ ಮುಂತಾದ ಕಾರ್ಯದಲ್ಲಿ, ಸೀಮಂತದಲ್ಲಿ, ಪುತ್ರನ ಪ್ರಥಮ ದರ್ಶನದಲ್ಲಿ ಗೃಹಸ್ಥನು ನಾಂದೀಮುಖಪಿತೃಗಣವನ್ನು ಶುಚಿಯಾಗಿ ಪೂಜಿಸತಕ್ಕದ್ದು (5-6). ಅಭ್ಯುದಯಕಾಲದಲ್ಲಿ ಪಿತೃಗಳನ್ನು ಹೇಗೆ ಪೂಜಿಸಬೇಕೆಂಬ ಸನಾತನವಾದ ಕ್ರಮವನ್ನು ಹೇಳಿದ್ದಾಯಿತು. ಭೂಪತಿ—ಸಗರ, ಈಗ ಪ್ರೇತಕರ್ಮದ ವಿಧಿ ಹೇಗೆಂಬುದನ್ನು ಕೇಳು (7). ಪ್ರೇತದೇಹಕ್ಕೆ (ಶವಕ್ಕೆ) ಶುಚಿಯಾದ ನೀರಿನಿಂದ ಸ್ನಾನಮಾಡಿಸಿ ಹೂಮಾಲೆಯಿಂದ ಅಲಂಕರಿಸಿ, ಗ್ರಾಮದ ಹೊರಗೆ ತೆಗೆದುಕೊಂಡು ದಹನಮಾಡತಕ್ಕದ್ದು. ಅನಂತರ ಜಲಾಶಯದಲ್ಲಿ ಸಚೇಲಸ್ನಾನಮಾಡ ತಕ್ಕದ್ದು (8). 'ಈ ನಾಮಗೋತ್ರಗಳುಳ್ಳ ಪ್ರೇತನು ಎಲ್ಲಿಯೇ ಇರಲಿ, ಅವನಿಗಾಗಿ ಈ ಜಲಾಂಜಲಿಯು ಅರ್ಪಿತ' ಎಂದು ಹೇಳುತ್ತ ಬಾಂಧವರು ದಕ್ಷಿಣಾಭಿಮುಖರಾಗಿ ತರ್ಪಣವನ್ನು ಕೊಡಬೇಕು (9). ನಕ್ಷತ್ರಗಳು ಕಾಣಿಸಿಕೊಂಡಮೇಲೆ ಗೋವುಗಳೊಡನೆ ಗ್ರಾಮಕ್ಕೆ ಬಂದು ಅಶೌಚಕೃತ್ಯ

**ದಾತವ್ಯೋಽನುದಿನಂ ಪಿಂಡಃ ಪ್ರೇತಾಯ ಭುವಿ ಪಾರ್ಥಿವ।**
**ದಿವಾ ಚ ಭಕ್ತಂ ಭೋಕ್ತವ್ಯಮಮಾಂಸಂ ಮನುಜರ್ಷಭ॥** 11

**ದಿನಾನಿ ತಾನು ಚೇಚ್ಛಾತಃ ಕರ್ತವ್ಯಂ ವಿಪ್ರಭೋಜನಮ್।**
**ಪ್ರೇತಾ ಯಾಂತಿ ತಥಾ ತೃಪ್ತಿಂ ಬಂಧುವರ್ಗೇಣ ಭುಂಜತಾ॥** 12

**ಪ್ರಥಮೇಽಹ್ನಿ ತೃತೀಯೇ ಚ ಸಪ್ತಮೇ ನವಮೇ ತಥಾ।**
**ವಸ್ತ್ರತ್ಯಾಗಬಹಿಸ್ನಾನೇ ಕೃತ್ವಾ ದದ್ಯಾತ್ತಿಲೋದಕಮ್॥** 13

**ಚತುರ್ಥೇಽಹ್ನಿ ಚ ಕರ್ತವ್ಯಂ ತಸ್ಯಾಸ್ಥಿಚಯನಂ ನೃಪ।**
**ತದೂರ್ಧ್ವಮಂಗಸಂಸ್ಪರ್ಶಸ್ಸಪಿಂಡಾನಾಮಪೀಷ್ಯತೇ॥** 14

**ಯೋಗ್ಯಾಸ್ಸರ್ವಕ್ರಿಯಾಣಾಂ ತು ಸಮಾನಸಲಿಲಾಸ್ತಥಾ।**
**ಅನುಲೇಪನಪುಷ್ಪಾದಿಭೋಗಾದನ್ಯತ್ರ ಪಾರ್ಥಿವ॥** 15

---

ವನ್ನಾಚರಿಸಬೇಕು. ನೆಲದ ಮೇಲೆ ಚಾಪೆಯನ್ನು ಹಾಸಿ ಮಲಗತಕ್ಕದ್ದು (10). ಪೃಥಿವೀಪತಿ, ಪ್ರತಿದಿನವೂ ಪ್ರೇತವನ್ನುದ್ದೇಶಿಸಿ ನೆಲದ ಮೇಲೆ ಪಿಂಡವನ್ನು ಹಾಕುತ್ತಿರಬೇಕು. ಹಗಲು ಮಾತ್ರ ಮಾಂಸರಹಿತವಾದ ಅನ್ನವನ್ನು ತಿನ್ನಬಹುದು. ಆ ದಿನಗಳಲ್ಲಿ ಬ್ರಾಹ್ಮಣರು ಅಪೇಕ್ಷಿಸಿದರೆ ಭೋಜನವನ್ನು ಮಾಡಿಸಬಹುದು. ಆಗ ಬಂಧುಗಳು ಊಟಮಾಡುತ್ತಿದ್ದರೆ ಮೃತಾತ್ಮರಿಗೆ ತೃಪ್ತಿಯಾಗುತ್ತದೆ (11-12). ಒಂದು, ಮೂರು, ಏಳು ಮತ್ತು ಒಂಬತ್ತನೆಯ ದಿನಗಳಲ್ಲಿ ಹೊರಗಡೆ ಸ್ನಾನಮಾಡಿ ಉಟ್ಟ ವಸ್ತ್ರವನ್ನು ತ್ಯಜಿಸಿಬಿಡಬೇಕು. (ಅನಂತರ ಬೇರೆ ವಸ್ತ್ರವನ್ನುಟ್ಟು) ಪ್ರೇತನಿಗೆ ತಿಲೋದಕ ವನ್ನು ಕೊಡಬೇಕು (13). ನಾಲ್ಕನೆಯ ದಿನ ಅಸ್ಥಿಸಂಚಯನವನ್ನು ಮಾಡಿದ ಮೇಲೆ ಸಪಿಂಡರ* ಅಂಗಸ್ಪರ್ಶವನ್ನು ಮಾಡಬಹುದು (ಅಲ್ಲಿಯವರೆಗೆ ಸಪಿಂಡರನ್ನೂ ಮುಟ್ಟಬಾರದು) (14). ಅನಂತರ ಸಮಾನೋದಕರಿಗೆ, ಗಂಧಲೇಪನ ಪುಷ್ಪಧಾರಣಾದಿಗಳನ್ನು ಬಿಟ್ಟು, ಸಂಧ್ಯಾವಂದನಾದಿಕ್ರಿಯೆ

---

* ಮೂಲಪುರುಷನಿಂದ ಏಳು ತಲೆಯವರೆಗಿನ ಜನರು ಸಪಿಂಡರು, ಅನಂತರ ದವರು ಮೂಲಪುರುಷನ ಜನ್ಮನಾಮಗಳು ಗೊತ್ತಿರುವವರೆಗೆ ಸಮಾನೋದಕ ರೆನಿಸುತ್ತಾರೆ. ಆಮೇಲೆ ಸಗೋತ್ರರು.

**ಶಯ್ಯಾಸನೋಪಭೋಗಶ್ಚ ಸಪಿಂಡಾನಾಮಪೀಷ್ಯತೇ।**
**ಭಸ್ಮಾಸ್ಥಿಚಯನಾದೂರ್ಧ್ವಂ ಸಂಯೋಗೋ ನ ತು**
**ಯೋಷಿತಾಮ್॥ 16**

**ಬಾಲೇ ದೇಶಾಂತರಸ್ಥೇ ಚ ಪತಿತೇ ಚ ಮುನೌ ಮೃತೇ।**
**ಸದ್ಯಶ್ಶೌಚಂ ತಥೇಚ್ಛಾತೋ ಜಲಾಗ್ನ್ಯುದ್ಬಂಧನಾದಿಷು॥ 17**

**ಮೃತಬಂಧೋರ್ದಶಾಹಾನಿ ಕುಲಸ್ಯಾನ್ನಂ ನ ಭುಜ್ಯತೇ।**
**ದಾನಂ ಪ್ರತಿಗ್ರಹೋ ಹೋಮಃ ಸ್ವಾಧ್ಯಾಯಶ್ಚ ನಿವರ್ತತೇ॥ 18**

**ವಿಪ್ರಸ್ಯೈತದ್ ದ್ವಾದಶಾಹಂ ರಾಜನ್ಯಸ್ಯಾಪ್ಯಶೌಚಕಮ್।**
**ಅರ್ಧಮಾಸಂ ತು ವೈಶ್ಯಸ್ಯ ಮಾಸಂ ಶೂದ್ರಸ್ಯ ಶುದ್ಧಯೇ॥ 19**

---

ಗಳಲ್ಲಿ ಯೋಗ್ಯತೆ ಬರುತ್ತದೆ (15). ಬೂದಿ ಮತ್ತು ಅಸ್ಥಿಗಳ ಸಂಚಯನವಾದಮೇಲೆ ಸಪಿಂಡರು ಶಯನ, ಆಸನಾದಿಗಳನ್ನು ಬಳಸಬಹುದು. ಆದರೆ ಸ್ತ್ರೀಸಂಗವನ್ನು ಮಾಡಕೂಡದು. ಬಾಲಕ, ದೇಶಾಂತರದಲ್ಲಿರತಕ್ಕವನು, ಪತಿತ, ಸಂನ್ಯಾಸಿ—ಇವರು ಮೃತರಾದರೆ ಸದ್ಯಃಶೌಚವು (ಸ್ನಾನದಿಂದ ಶುದ್ಧಿ) ವಿಹಿತವಾಗಿದೆ. ಹಾಗೆಯೇ ನೀರು, ಬೆಂಕಿ, ನೇಣು ಹಾಕಿಕೊಳ್ಳುವುದು—ಮೊದಲಾದ್ದರಿಂದ ಉದ್ದೇಶಪೂರ್ವಕ ಆತ್ಮಹತ್ಯೆ ಮಾಡಿಕೊಂಡಾಗಲೂ ಸದ್ಯಃಶೌಚ* (16-17). ಯಾವಾತನ ಬಂಧುವು ಮೃತನಾಗಿದ್ದಾನೋ ಅವನ ಕುಟುಂಬದ ಅನ್ನವು ಹತ್ತು ದಿನಗಳವರೆಗೆ ಇತರರಿಗೆ ತಿನ್ನಲು ಯೋಗ್ಯವಾದ್ದಲ್ಲ. ದಾನ, ಪ್ರತಿಗ್ರಹ, ಹೋಮ, ವೇದಾಧ್ಯಯನ—ಇವೆಲ್ಲವೂ ಮೃತಬಂಧುವಿಗೆ (ಅಶೌಚಕಾಲದಲ್ಲಿ) ಇರುವುದಿಲ್ಲ (18). ಹತ್ತು ದಿನ ಅಶೌಚವೆನ್ನುವುದು ಬ್ರಾಹ್ಮಣನಿಗೆ ಸಂಬಂಧಿಸಿದ್ದು. ಕ್ಷತ್ರಿಯನಿಗೆ ಹನ್ನೆರಡು ದಿನ ಅಶೌಚ. ವೈಶ್ಯನಿಗೆ ಅರ್ಧಮಾಸ. ಶೂದ್ರನಿಗೆ ಶುದ್ಧಿಯಾಗಲು ಒಂದು ತಿಂಗಳು ಅಶೌಚವಿರುತ್ತದೆ (19). ಆಮೇಲೆ ಅಶೌಚವು ಕಳೆದ ದಿನ ಬೆಸಸಂಖ್ಯೆಯ (1, 3, 5—ಇತ್ಯಾದಿ) ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಉಚ್ಛಿಷ್ಟದ ಬಳಿ

---

* ತಂದೆತಾಯಿಗಳು ಮೃತರಾದಾಗ ಇದು ಅನ್ವಯಿಸುವುದಿಲ್ಲ.

**ಅಯುಜೋ ಭೋಜಯೇತ್ಕಾಮಂ ದ್ವಿಜಾನಂತೇ ತತೋ ದಿನೇ।**
**ದದ್ಯಾದ್ದರ್ಭೇಷು ಪಿಂಡಂ ಚ ಪ್ರೇತಯೋಚ್ಛಿಷ್ಟಸನ್ನಿಧೌ॥ 20**

**ವಾರ್ಯಾಯುಧಪ್ರತೋದಾಸ್ತು ದಂಡಶ್ಚ ದ್ವಿಜಭೋಜನಾತ್।**
**ಸ್ಪ್ರಷ್ಟವ್ಯೋಽನಂತರಂ ವರ್ಣೈಃ ಶುದ್ಧ್ಯೇರನ್ ತೇ**
**ತತಃ ಕ್ರಮಾತ್॥ 21**

**ತತಃ ಸ್ವವರ್ಣಧರ್ಮಾ ಯೇ ವಿಪ್ರಾದೀನಾಮುದಾಹೃತಾಃ।**
**ತಾನ್ಕುರ್ವೀತ ಪುಮಾನ್ ಜೀವೇನ್ನಿಜಧರ್ಮಾರ್ಜನೈಸ್ತಥಾ॥ 22**

**ಮೃತಾಹನಿ ಚ ಕರ್ತವ್ಯಮೇಕೋದ್ದಿಷ್ಟಮತಃ ಪರಮ್।**
**ಆಹ್ವಾನಾದಿಕ್ರಿಯೇದ್ದೈವನಿಯೋಗರಹಿತಂ ಹಿ ತತ್॥ 23**

**ಏಕೋಽರ್ಘ್ಯಸ್ತತ್ರ ದಾತವ್ಯಸ್ತಥೈವೈಕಪವಿತ್ರಕಮ್।**
**ಪ್ರೇತಾಯ ಪಿಂಡೋ ದಾತವ್ಯೋ ಭುಕ್ತವತ್ಸು ದ್ವಿಜಾತಿಷು॥ 24**

**ಪ್ರಶ್ನಶ್ಚ ತತ್ರಾಭಿರತಿರ್ಯಜಮಾನೈರ್ದ್ವಿಜನ್ಮನಾಮ್।**
**ಅಕ್ಷಯ್ಯಮಮುಕಸ್ಯೇತಿ ವಕ್ತವ್ಯಂ ವಿರತೌ ತಥಾ॥ 25**

---

ದರ್ಭೆಗಳ ಮೇಲೆ ಪ್ರೇತವನ್ನುದ್ದೇಶಿಸಿ ಪಿಂಡಗಳನ್ನು ಹಾಕಬೇಕು (ಇದು ಏಕೋದ್ದಿಷ್ಟಶ್ರಾದ್ಧ) (20). ಅಶೌಚವು ಕಳೆದಮೇಲೆ ಬ್ರಾಹ್ಮಣಭೋಜನಾನಂತರ ನಾಲ್ಕು ವರ್ಣದವರೂ ಕ್ರಮವಾಗಿ ಜಲ, ಆಯುಧ, ಕೊರಡೆ (ಚಾಟಿ), ದಂಡ—ಇವನ್ನು ಮುಟ್ಟಬೇಕು. ಆಗ ಇವರೆಲ್ಲರೂ ಶುದ್ಧರಾಗುತ್ತಾರೆ (21). ಅನಂತರ ಬ್ರಾಹ್ಮಣಾದಿಗಳಿಗೆ ಯಾವ ಯಾವ ವರ್ಣಧರ್ಮಗಳು ಹೇಳಲ್ಪಟ್ಟಿವೆಯೋ ಅವುಗಳನ್ನು ಆಚರಿಸಬೇಕಲ್ಲದೆ, ತಮ್ಮ ತಮ್ಮ ಧರ್ಮಾನುಗುಣವಾಗಿ ಆರ್ಜಿಸಿ ಜೀವಿಸಬೇಕು (22). ಅಲ್ಲಿಂದ ಮುಂದೆ ಪ್ರತಿಮಾಸವೂ ಮೃತತಿಥಿಯಲ್ಲಿ ಏಕೋದ್ದಿಷ್ಟಶ್ರಾದ್ಧವನ್ನು ಮಾಡತಕ್ಕದ್ದು. ಅದರಲ್ಲಿ ಆವಹನಾದಿಗಳೂ ವಿಶ್ವೇದೇವರ ಸಾಂನಿಧ್ಯವೂ ಇರುವುದಿಲ್ಲ (23). ಆಗ ಒಂದೇ ಅರ್ಘ್ಯ, ಒಂದೇ ದರ್ಭೆಯ ಪವಿತ್ರವಿರುತ್ತದೆ. ಬ್ರಾಹ್ಮಣರು ಉಂಡಮೇಲೆ ಒಂದು ಪಿಂಡವನ್ನು ಹಾಕತಕ್ಕದ್ದು. ವಿಪ್ರವಿಸರ್ಜನಕಾಲದಲ್ಲಿ ಯಜಮಾನನು 'ಅಭಿರಮ್ಯತಾಂ' ಎಂದೂ

**ಏಕೋದ್ದಿಷ್ಟಮಯೋ ಧರ್ಮ ಇತ್ಥಮಾವತ್ಸರಾತ್ಸ್ಮೃತಃ।**
**ಸಪಿಂಡೀಕರಣಂ ತಸ್ಮಿನ್ಕಾಲೇ ರಾಜೇಂದ್ರ ತಚ್ಛೃಣು॥ 26**

**ಏಕೋದ್ದಿಷ್ಟವಿಧಾನೇನ ಕಾರ್ಯಂ ತದಪಿ ಪಾರ್ಥಿವ।**
**ಸಂವತ್ಸರೇಽಥ ಷಷ್ಠೇ ವಾ ಮಾಸೇ ವಾ ದ್ವಾದಶೇಽಹ್ನಿ ತತ್॥ 27**

**ತಿಲಗಂಧೋದಕೈರ್ಯುಕ್ತಂ ತತ್ರ ಪಾತ್ರಚತುಷ್ಟಯಮ್।**
**ಪಾತ್ರಂ ಪ್ರೇತಸ್ಯ ತತ್ರೈಕಂ ಪೈತ್ರಂ ಪಾತ್ರತ್ರಯಂ ತಥಾ॥ 28**

**ಸೇಚಯೇತ್ಪಿತೃಪಾತ್ರೇಷು ಪ್ರೇತಪಾತ್ರಂ ತತಸ್ತ್ರಿಷು।**
**ತತಃ ಪಿತೃತ್ವಮಾಪನ್ನೇ ತಸ್ಮಿನ್ ಪ್ರೇತೇ ಮಹೀಪತೇ॥ 29**

**ಶ್ರಾದ್ಧಧರ್ಮೈರಶೇಷೈಸ್ತು ತತ್ಪೂರ್ವಾನರ್ಚಯೇತ್ಪಿತೄನ್।**
**ಪುತ್ರಃ ಪೌತ್ರಃ ಪ್ರಪೌತ್ರೋ ವಾ ಭ್ರಾತಾ ವಾ ಭ್ರಾತೃಸಂತತಿಃ॥ 30**

---

ವಿಪ್ರರು 'ಅಭಿರತಾಃಸ್ಮ' ಎಂದೂ ಹೇಳಬೇಕು. ಪಿಂಡದಾನವಾದಮೇಲೆ 'ಅಮುಕಸ್ಯೇದಮಕ್ಷಯ್ಯಮುಪತಿಷ್ಠತಾಂ' ಎಂದು ಹೇಳತಕ್ಕದ್ದು (24-25). ಈ ಪ್ರಕಾರ ಒಂದು ವರ್ಷ ಕಳೆಯುವವರೆಗೆ ಏಕೋದ್ದಿಷ್ಟವನ್ನು ಮಾಡುವುದು ವಿಹಿತವಾದ ಧರ್ಮ. ರಾಜೇಂದ್ರ-ಸಗರ, ಸಪಿಂಡೀ ಕರಣದ ವಿಧಾನವನ್ನು ಕೇಳು (26). ಸಪಿಂಡೀಕರಣವನ್ನೂ ಸಹ ಒಂದು ವರ್ಷದವಾದಮೇಲೆ, ಅಥವಾ ಆರುತಿಂಗಳಾದಮೇಲೆ ಅಥವಾ ಹನ್ನೆರಡನೆಯ ದಿನದಲ್ಲಿ ಏಕೋದ್ದಿಷ್ಟ ವಿಧಾನದಂತೆಯೇ ಮಾಡತಕ್ಕದ್ದು (27). ಆಗ ಎಳ್ಳು, ಗಂಧ, ಜಲಗಳಿಂದ ತುಂಬಿದ ನಾಲ್ಕು ಪಾತ್ರೆಗಳನ್ನಿಡ ಬೇಕು. ಅವುಗಳಲ್ಲಿ ಒಂದು ಪ್ರೇತನಿಗಾಗಿ. ಉಳಿದ ಮೂರು ಅವನ ಹಿಂದಿನ ಪಿತೃಗಳಿಗಾಗಿ. ಆಮೇಲೆ ಪ್ರೇತಪಾತ್ರೆಯಲ್ಲಿರುವುದನ್ನು ಪಿತೃಪಾತ್ರೆ ಗಳಿಗೆ ತುಂಬಬೇಕು. ಆಗ ಪ್ರೇತನಿಗೆ ಪಿತೃಸ್ಥಾನವು ದೊರಕುತ್ತದೆ (28-29). ಹೀಗೆ ಪ್ರೇತನು ಪಿತೃತ್ವವನ್ನು ಪಡೆದಮೇಲೆ ಆ ಪಿತೃವಿನಿಂದಾರಂಭಿಸಿ ಹಿಂದಿನ ಪಿತೃಗಣವನ್ನು ಶ್ರಾದ್ಧವಿಧಿಗಳಿಂದ ಅರ್ಚಿಸಬೇಕು. ಈ ಶ್ರಾದ್ಧವನ್ನು ಮಾಡಲು ಪುತ್ರ, ಪೌತ್ರ, ಪ್ರಪೌತ್ರ, ಭ್ರಾತಾ, ಭ್ರಾತೃಪುತ್ರ—ಇವರು ಕ್ರಮವಾಗಿ ಅಧಿಕಾರಿಗಳು (30). ಇವರಿಲ್ಲದಿದ್ದರೆ ಸಪಿಂಡರ ಸಂತತಿ ಯವನು ಕ್ರಿಯೆಗೆ ಅರ್ಹನಾಗುತ್ತಾನೆ. ಇವರಾರೂ ಇಲ್ಲದಿದ್ದರೆ

**ಸಪಿಂಡಸಂತತಿರ್ವಾಪಿ ಕ್ರಿಯಾರ್ಹೋ ನೃಪ ಜಾಯತೇ।**
**ತೇಷಾಮಭಾವೇ ಸರ್ವೇಷಾಂ ಸಮಾನೋದಕಸಂತತಿಃ॥ 31**

**ಮಾತೃಪಕ್ಷಸಪಿಂಡೇನ ಸಂಬದ್ಧಾ ಯೇ ಜಲೇನ ವಾ।**
**ಕುಲದ್ವಯೇಽಪಿ ಚೋಚ್ಛಿನ್ನೇ ಸ್ತ್ರೀಭಿಃ ಕಾರ್ಯಾಃ ಕ್ರಿಯಾ ನೃಪ॥**

**ಸಂಘಾತಾಂತರ್ಗತೈರ್ವಾಪಿ ಕಾರ್ಯಾಃ ಪ್ರೇತಸ್ಯ ಚ ಕ್ರಿಯಾಃ।**
**ಉತ್ಸನ್ನಬಂಧುರಿಕ್ಥಾದ್ವಾ ಕಾರಯೇದವನೀಪತಿಃ॥ 33**

**ಪೂರ್ವಾಃ ಕ್ರಿಯಾ ಮಧ್ಯಮಾಶ್ಚ ತಥಾ ಚೈವೋತ್ತರಾಃ ಕ್ರಿಯಾಃ।**
**ವಿಪ್ರಕಾರಾಃ ಕ್ರಿಯಾಃ ಸರ್ವಾಸ್ತಾಸಾಂ ಭೇದಂ ಶೃಣುಷ್ವ ಮೇ॥ 34**

**ಆದಾಹವಾರ್ಯಾಯುಧಾದಿಸ್ಪರ್ಶಾದ್ಯಂತಾಸ್ತು ಯಾಃ ಕ್ರಿಯಾಃ।**
**ತಾಃ ಪೂರ್ವಾ ಮಧ್ಯಮಾ ಮಾಸಿ ಮಾಸ್ಯೇಕೋದ್ದಿಷ್ಟಸಂಜ್ಞಿತಾಃ॥ 35**

**ಪ್ರೇತೇ ಪಿತೃತ್ವಮಾಪನ್ನೇ ಸಪಿಂಡೀಕರಣಾದನು।**
**ಕ್ರಿಯಾನ್ತೇ ಯಾಃ ಕ್ರಿಯಾಃ ಪಿತ್ರ್ಯಾಃ ಪ್ರೋಚ್ಯಂತೇ ತಾ ನೃಪೋತ್ತರಾಃ॥**

---

ಸಮಾನೋದಕ ಸಂತತಿಯವರು ಮಾಡಬೇಕು. ಇವರಾರೂ ಇಲ್ಲದಿದ್ದರೆ ಮೃತನ ಮಾತೃಪಕ್ಷದ ಸಪಿಂಡರೂ ಸಮಾನೋದಕರೂ ಕ್ರಿಯೆಯನ್ನು ನಡೆಸಬಹುದು. ಪಿತೃಕುಲದವರೂ ಮಾತೃಕುಲದವರೂ ಇಲ್ಲವಾದರೆ ಸ್ತ್ರೀಯರು ಈ ವಿಧಿಗಳನ್ನು ಮಾಡಬಹುದು (31-32). (ಅದು ಸಾಧ್ಯವಿಲ್ಲದಾಗ) ಮಿತ್ರರ ಗುಂಪಿನಲ್ಲೊಬ್ಬನು ಪ್ರೇತಕಾರ್ಯವನ್ನು ನಡೆಸಬೇಕು. ಅಥವಾ ಮೃತನ ಧನವನ್ನುಪಯೋಗಿಸಿ ರಾಜನು ಪ್ರೇತಕೃತ್ಯವನ್ನು ಯಾರಿಂದಾದರೂ ಮಾಡಿಸಬೇಕು (33). ಹಿಂದೆ ಹೇಳಿದ ಎಲ್ಲ ಪ್ರೇತ ಕರ್ಮಗಳು ಪೂರ್ವಕರ್ಮ, ಮಧ್ಯಮಕರ್ಮ, ಉತ್ತರಕರ್ಮ—ಎಂದು ಮೂರು ವಿಧ. ಇವುಗಳ ಲಕ್ಷಣಭೇದವನ್ನು ಕೇಳು (34). ದಹನದಿಂದ ಹಿಡಿದು ಜಲ, ಆಯುಧ—ಮೊದಲಾದವುಗಳ ಸ್ಪರ್ಶಪರ್ಯಂತವಾದ ಯಾವ ಕರ್ಮಗಳುಂಟೋ ಅವು ಪೂರ್ವಕರ್ಮಗಳೆನಿಸುತ್ತವೆ. ಪ್ರತಿಮಾಸವೂ ಮಾಡತಕ್ಕ ಏಕೋದ್ದಿಷ್ಟ ಶ್ರಾದ್ಧಗಳು ಮಧ್ಯಮಕರ್ಮಗಳು (35). ಪ್ರೇತನು ಪಿತೃತ್ವವನ್ನು ಪಡೆದ ಮೇಲೆ ಸಪಿಂಡೀಕರಣಾನಂತರ

**ಪಿತೃಮಾತೃಸಪಿಂಡೈಸ್ತು ಸಮಾನಸಲಿಲೈಸ್ತಥಾ।**
**ಸಂಘಾತಾಂತರ್ಗತೈರ್ವಾಪಿ ರಾಜ್ಞಾ ತದ್ಧನಹಾರಿಣಾ॥ 37**

**ಪೂರ್ವಾಃ ಕ್ರಿಯಾಶ್ಚ ಕರ್ತವ್ಯಾಃ ಪುತ್ರಾದ್ಯೈರೇವ ಚೋತ್ತರಾಃ।**
**ದೌಹಿತ್ರೈರ್ವಾ ನೃಪಶ್ರೇಷ್ಠ ಕಾರ್ಯಾಸ್ತತ್ತನಯೈಸ್ತಥಾ॥ 38**

**ಮೃತಾಹನಿ ಚ ಕರ್ತವ್ಯಾಃ ಸ್ತ್ರೀಣಾಮಪ್ಯುತ್ತರಾಃ ಕ್ರಿಯಾಃ।**
**ಪ್ರತಿಸಂವತ್ಸರಂ ರಾಜನ್ನೇಕೋದ್ದಿಷ್ಟವಿಧಾನತಃ॥ 39**

**ತಸ್ಮಾದುತ್ತರಸಂಜ್ಞಾಯಾಃ ಕ್ರಿಯಾಸ್ತಾಃ ಶೃಣು ಪಾರ್ಥಿವ।**
**ಯಥಾ ಯಥಾ ಚ ಕರ್ತವ್ಯಾ ವಿಧಿನಾ ಯೇನ ಚಾನಘ॥ 40**

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ತ್ರಯೋದಶೋಽಧ್ಯಾಯಃ

---

ಮಾಡತಕ್ಕ ಪಿತೃಕರ್ಮಗಳು ಉತ್ತರಕರ್ಮಗಳು (36). ಇವುಗಳಲ್ಲಿ ಪಿತೃಕುಲದ ಅಥವಾ ಮಾತೃಕುಲದ ಸಪಿಂಡರು, ಸಮಾನೋದಕರು, ಮಿತ್ರರು, ಮೃತನ ಧನವನ್ನು ತೆಗೆದುಕೊಂಡ ರಾಜ—ಇವರು ಮೃತನ ಪೂರ್ವಕರ್ಮಗಳನ್ನು ಮಾತ್ರ ಮಾಡಲು ಅರ್ಹರು. ಉತ್ತರ ಕರ್ಮಗಳನ್ನು ಪುತ್ರಾದಿಗಳೇ ಮಾಡಬೇಕು. ಅಥವಾ ದೌಹಿತ್ರ ಅಥವಾ ಅವನ ಮಕ್ಕಳು ಮಾಡಬಹುದು* (37-38). ಸ್ತ್ರೀಯರಿಗೆ ಪ್ರತಿಸಂವತ್ಸರವೂ ಮೃತ ತಿಥಿಯಲ್ಲಿ ಉತ್ತರಕರ್ಮಗಳನ್ನು ಏಕೋದ್ದಿಷ್ಟ ವಿಧಾನದಿಂದ ಮಾಡಬೇಕು. ಆದ್ದರಿಂದ, ರಾಜ, ಉತ್ತರಕರ್ಮಗಳನ್ನು ಯಾವ ವಿಧಿಯಿಂದ ಹೇಗೆ ಮಾಡಬೇಕೆಂಬುದನ್ನು ಕೇಳು" (39-40).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿಮೂರನೆಯ ಅಧ್ಯಾಯ ಮುಗಿಯಿತು.



---

* ಮಧ್ಯಮಕರ್ಮಗಳನ್ನು ಯಾರು ಮಾಡಬೇಕೆಂದು ಇಲ್ಲಿ ಪ್ರಶ್ನೆ ಹುಟ್ಟುತ್ತದೆ. ಪೂರ್ವಕರ್ಮಗಳನ್ನು ಮಾಡತಕ್ಕವರೇ ಇವನ್ನು ಮಾಡಬೇಕೆಂದೂ ಯಥಾಸಂಭವಾಗಿ ಯಾರಾದರೂ ಮಾಡಬಹುದೆಂದೂ ಎರಡು ಅಭಿಪ್ರಾಯಗಳಿವೆ.

## ಚತುರ್ದಶೋಽಧ್ಯಾಯಃ

*ಔರ್ವ ಉವಾಚ:*

**ಬ್ರಹ್ಮೇಂದ್ರರುದ್ರನಾಸತ್ಯಸೂರ್ಯಾಗ್ನಿವಸುಮಾರುತಾನ್।**
**ವಿಶ್ವೇದೇವಾನ್ ಪಿತೃಗಣಾನ್ ವಯಾಂಸಿ**
**ಮನುಜಾನ್ ಪಶೂನ್॥ 1**

**ಸರೀಸೃಪಾನೃಷಿಗಣಾನ್ಯಚ್ಚಾನ್ಯದ್ಭೂತಸಂಜ್ಞಿತಮ್।**
**ಶ್ರಾದ್ಧಂ ಶ್ರದ್ಧಾನ್ವಿತಃ ಕುರ್ವನ್ ಪ್ರೀಣಯತ್ಯಖಿಲಂ ಜಗತ್॥ 2**

**ಮಾಸಿ ಮಾಸ್ಯಸಿತೇ ಪಕ್ಷೇ ಪಂಚದಶ್ಯಾಂ ನರೇಶ್ವರ।**
**ತಥಾಷ್ಟಕಾಸು ಕುರ್ವೀತ ಕಾಮ್ಯಾನ್ಕಾಲಾನ್ ಶೃಣುಷ್ವ ಮೇ॥ 3**

---

## ಅಧ್ಯಾಯ 14

ಶ್ರಾದ್ಧದ ಪ್ರಶಂಸೆ; ಶ್ರಾದ್ಧದಲ್ಲಿ ಪಾತ್ರಾಪಾತ್ರಗಳ ವಿವರಣೆ.

ಪರಾಶರರು ಹೇಳಿದರು: ಔರ್ವನು ಸಗರನಿಗೆ ಮತ್ತೆ ಹೇಳಿದ್ದೇನೆಂದರೆ "ರಾಜ, ಶ್ರದ್ಧೆಯಿಂದ ಶ್ರಾದ್ಧಕರ್ಮಮಾಡತಕ್ಕವನು ಬ್ರಹ್ಮ, ಇಂದ್ರ, ರುದ್ರ, ಅಶ್ವಿನಿದೇವತೆಗಳು, ಸೂರ್ಯ, ಅಗ್ನಿ, ವಸು, ಮಾರುತ, ವಿಶ್ವೇದೇವರು, ಪಿತೃಗಣಗಳು, ಹಕ್ಕಿಗಳು, ಮಾನವರು, ಪಶುಗಳು, ಹರಿದಾಡುವ ಸರ್ಪಾದಿ ಜಂತುಗಳು, ಋಷಿಗಳು, ಭೂತಗಣಗಳು ಹೀಗೆ ಸಮಸ್ತಜಗತ್ತನ್ನೂ ತೃಪ್ತಿಪಡಿಸುತ್ತಾನೆ (1-2). ಪ್ರತಿಮಾಸದಲ್ಲಿಯೂ ಕೃಷ್ಣ ಪಕ್ಷದ ಹದಿನೈದನೆಯ ದಿನ—ಎಂದರೆ ಅಮಾವಾಸ್ಯೆಯಲ್ಲಿ ಮತ್ತು ಅಷ್ಟಕಾ*ದಿನಗಳಲ್ಲಿ ಶ್ರಾದ್ಧವನ್ನು ನಿತ್ಯವಾಗಿ ಮಾಡಬೇಕು. ಇನ್ನು ಕಾಮ್ಯ ಶ್ರಾದ್ಧಗಳ ಕಾಲವನ್ನು ಹೇಳುತ್ತೇನೆ, ಕೇಳು (3). ಶ್ರಾದ್ಧಯೋಗ್ಯವಾದ

---

* ಅಷ್ಟಕಾ = ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣ ಮಾಸಗಳ ಬಹುಳ ಅಷ್ಟಮೀ.

**ಶ್ರಾದ್ಧಾರ್ಹಮಾಗತಂ ದ್ರವ್ಯಂ ವಿಶಿಷ್ಟಮಥವಾ ದ್ವಿಜಮ್ ।**
**ಶ್ರಾದ್ಧಂ ಕುರ್ವೀತ ವಿಜ್ಞಾಯ ವ್ಯತೀಪಾತೇಽಯನೇ ತಥಾ ॥** 4

**ವಿಷುವೇ ಚಾಪಿ ಸಂಪ್ರಾಪ್ತೇ ಗ್ರಹಣೇ ಶಶಿಸೂರ್ಯಯೋಃ ।**
**ಸಮಸ್ತೇಷ್ವೇವ ಭೂಪಾಲ ರಾಶಿಷ್ವರ್ಕೇ ಚ ಗಚ್ಛತಿ ॥** 5

**ನಕ್ಷತ್ರಗ್ರಹಪೀಡಾಸು ದುಷ್ಟಸ್ವಪ್ನಾವಲೋಕನೇ ।**
**ಇಚ್ಛಾಶ್ರಾದ್ಧಾನಿ ಕುರ್ವೀತ ನವಸಸ್ಯಾಗಮೇ ತಥಾ ॥** 6

**ಅಮಾವಾಸ್ಯಾ ಯದಾ ಮೈತ್ರವಿಶಾಖಾಸ್ವಾತಿಯೋಗಿನೀ ।**
**ಶ್ರಾದ್ಧೈಃ ಪಿತೃಗಣಸ್ತೃಪ್ತಿಂ ತಥಾಪ್ನೋತ್ಯಷ್ಟವಾರ್ಷಿಕೀಮ್ ॥** 7

**ಅಮಾವಾಸ್ಯಾ ಯದಾ ಪುಷ್ಯೇ ರೌದ್ರೇ ಚರ್ಕ್ಷೇ ಪುನರ್ವಸೌ ।**
**ದ್ವಾದಶಾಬ್ದಂ ತಥಾ ತೃಪ್ತಿಂ ಪ್ರಯಾಂತಿ ಪಿತರೋಽರ್ಚಿತಾಃ ॥** 8

---

ಪದಾರ್ಥವು ದೊರಕಿದಾಗ, ಅರ್ಹನಾದ ಬ್ರಾಹ್ಮಣನು ಮನೆಗೆ ಬಂದಾಗ ಮತ್ತು ವ್ಯತೀಪಾತದಲ್ಲಿಯೂ ದಕ್ಷಿಣಾಯನ-ಉತ್ತರಾಯಣಗಳ ಸಂಕ್ರಾಂತಿ ಕಾಲದಲ್ಲಿಯೂ ಕಾಮ್ಯಶ್ರಾದ್ಧವನ್ನು ಮಾಡಬೇಕು (4). ವಿಷುವತ್ಪುಣ್ಯ ಕಾಲದಲ್ಲಿ ಚಂದ್ರಸೂರ್ಯರ ಗ್ರಹಣ ಬಂದಾಗ, ಸೂರ್ಯನು ಬೇರೆ ಬೇರೆ ರಾಶಿಯನ್ನು ಸೇರುವ ಎಲ್ಲ ಸಂಕ್ರಾಂತಿ*ಗಳಲ್ಲಿಯೂ ಕಾಮ್ಯಶ್ರಾದ್ಧವನ್ನು ಮಾಡಬೇಕು (5). ನಕ್ಷತ್ರ ಗ್ರಹಗಳ ಪೀಡೆಯಾದಾಗಲೂ ಕೆಟ್ಟ ಸ್ವಪ್ನವನ್ನು ಕಂಡಾಗಲೂ ನವಧಾನ್ಯವು ಬಂದಾಗಲೂ ಕಾಮ್ಯಶ್ರಾದ್ಧವನ್ನು ಮಾಡಬಹುದು. ಅನುರಾಧಾ, ವಿಶಾಖಾ ಅಥವಾ ಸ್ವಾತಿ ನಕ್ಷತ್ರದಿಂದ ಯುಕ್ತವಾದ ಅಮಾವಾಸ್ಯೆಯಂದು ಮಾಡುವ ಶ್ರಾದ್ಧದಿಂದ ಪಿತೃಗಣವು ಎಂಟುವರ್ಷಗಳವರೆಗೆ ತೃಪ್ತಿಯನ್ನೈದುವುದು (6-7). ಹಾಗೆಯೇ ಪುಷ್ಯ, ಆರ್ದ್ರಾ ಅಥವಾ ಪುನರ್ವಸು ನಕ್ಷತ್ರದಿಂದ ಕೂಡಿದ ಅಮಾವಾಸ್ಯೆಯಂದು ಅರ್ಚಿತರಾದ ಪಿತೃಗಳು ಹನ್ನೆರಡುವರ್ಷಗಳವರೆಗೆ ತೃಪ್ತಿಯನ್ನೈದುವರು (8). ಪಿತೃಗಳಿಗೆ ತೃಪ್ತಿಯನ್ನು ಬಯಸುವವರಿಗೆ ಧನಿಷ್ಠಾ, ಪೂರ್ವಾಭಾದ್ರ

---

* ಎಲ್ಲ ಸಂಕ್ರಾಂತಿಗಳಲ್ಲಿಯೂ ಮಾಡಬೇಕೆಂದು ಹೇಳಿದ್ದರಿಂದ ದಕ್ಷಿಣಾಯನಾದಿಗಳಲ್ಲಿ ಹೆಚ್ಚಿನ ಫಲವಿಶೇಷವಿದೆಯೆಂದು ತಿಳಿಯಬೇಕು.

**ವಾಸವಾಜೈಕಪಾದರ್ಕ್ಷೇ ಪಿತ್ರೂಣಾಂ ತೃಪ್ತಿಮಿಚ್ಛತಾಮ್।**
**ವಾರುಣೇ ವಾಪ್ಯಮಾವಾಸ್ಯಾ ದೇವಾನಾಮಪಿ ದುರ್ಲಭಾ॥** 9

**ನವಸ್ವೃಕ್ಷೇಷ್ವಮಾವಾಸ್ಯಾ ಯದೈತೇಷ್ವವನೀಪತೇ।**
**ತದಾ ಹಿ ತೃಪ್ತಿದಂ ಶ್ರಾದ್ಧಂ ಪಿತ್ರೂಣಾಂ ಶೃಣು ಚಾಪರಮ್॥** 10

**ಗೀತಂ ಸನತ್ಕುಮಾರೇಣ ಯಥೈಲಾಯ ಮಹಾತ್ಮನೇ।**
**ಪೃಚ್ಛತೇ ಪಿತೃಭಕ್ತಾಯ ಪ್ರಶ್ರಯಾವನತಾಯ ಚ॥** 11

*ಶ್ರೀಸನತ್ಕುಮಾರ ಉವಾಚ:*

**ವೈಶಾಖಮಾಸಸ್ಯ ಚ ಯಾ ತೃತೀಯಾ**
**ನವಮ್ಯಸೌ ಕಾರ್ತಿಕಶುಕ್ಲಪಕ್ಷೇ।**
**ನಭಸ್ಯಮಾಸಸ್ಯ ಚ ಕೃಷ್ಣಪಕ್ಷೇ**
**ತ್ರಯೋದಶೀ ಪಂಚದಶೀ ಚ ಮಾಘೇ॥** 12

---

ಅಥವಾ ಶತಭಿಷಾ ನಕ್ಷತ್ರದಿಂದ ಕೂಡಿದ ಅಮಾವಾಸ್ಯೆ ಪ್ರಶಸ್ತವಾದದ್ದು. ಅದು ದೇವತೆಗಳಿಗೂ ತೃಪ್ತಿಯನ್ನೀಯುತ್ತದೆ (9). ರಾಜ-ಸಗರ, ಹಿಂದೆ ಹೇಳಿದ ಒಂಬತ್ತು ನಕ್ಷತ್ರಗಳಿಂದ ಕೂಡಿದ ಅಮಾವಾಸ್ಯೆಯಲ್ಲಿ ಮಾಡುವ ಕಾಮ್ಯಶ್ರಾದ್ಧವು ಪಿತೃಗಳಿಗೆ ವಿಶೇಷ ತೃಪ್ತಿಯನ್ನೂ ಕೊಡುತ್ತದೆ. ಇನ್ನೊಂದು ವಿಷಯವನ್ನು ಕೇಳು (10). ಮಹಾತ್ಮನೂ ಪಿತೃಭಕ್ತನೂ ಇಲಾಪುತ್ರನೂ ಆದ ಪುರೂರವನು ವಿನಯದಿಂದ ನಮಸ್ಕರಿಸಿ ಪ್ರಶ್ನೆ ಮಾಡಿದಾಗ ಸನತ್ಕುಮಾರರು ಈ ರೀತಿ ಹೇಳಿದರು (11): ವೈಶಾಖಮಾಸದ ತದಿಗೆ, ಕಾರ್ತಿಕ ಶುದ್ಧನವಮೀ, ಭಾದ್ರಪದ ಕೃಷ್ಣಪಕ್ಷದ ತ್ರಯೋದಶೀ, ಮಾಘ ಬಹುಳ ಅಮಾವಾಸ್ಯೆ—ಇವು 'ಯುಗಾದಿ'ಗಳೆಂದು ಪುರಾಣಗಳಲ್ಲಿ ಉಕ್ತವಾಗಿದೆ. ಈ ನಾಲ್ಕು ತಿಥಿಗಳು ಅನಂತ ಪುಣ್ಯಪ್ರದಗಳು. ಹಾಗೆಯೇ ಚಂದ್ರ ಸೂರ್ಯರ ಗ್ರಹಣಕಾಲ, ಅಷ್ಟಕಾ ಎಂಬ ಸಂಜ್ಞೆಯುಳ್ಳ* ಮೂರು

---

* ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣ ಮಾಸಗಳಲ್ಲಿ ಕೃಷ್ಣಪಕ್ಷದ ಸಪ್ತಮಿ, ಅಷ್ಟಮೀ, ನವಮೀ—ಈ ಮೂರು ತಿಥಿಗಳಿಗೆ ಅಷ್ಟಕಾ ಎಂದು ಹೆಸರಿದೆ. ಇವುಗಳಲ್ಲಿ ಅಷ್ಟಮಿಯನ್ನು ಮಾತ್ರ ಅಷ್ಟಕಾ ಎಂದು ಕೆಲವು ಗ್ರಂಥಗಳಲ್ಲಿ ಹೇಳಿದೆ.

**ಏತಾ ಯುಗಾದ್ಯಾಃ ಕಥಿತಾಃ ಪುರಾಣೇ-**
**ಷ್ವನಂತಪುಣ್ಯಾಸ್ತಿಥಯಶ್ಚತಸ್ರಃ।**
**ಉಪಪ್ಲವೇ ಚಂದ್ರಮಸೋ ರವೇಶ್ಚ**
**ತ್ರಿಷ್ವಷ್ಟಕಾಸ್ವಪ್ಯಯನದ್ವಯೇ ಚ॥** 13

**ಪಾನೀಯಮಪ್ಯತ್ರ ತಿಲೈರ್ವಿಮಿಶ್ರಂ**
**ದದ್ಯಾತ್ಪಿತೃಭ್ಯಃ ಪ್ರಯತೋ ಮನುಷ್ಯಃ।**
**ಶ್ರಾದ್ಧಂ ಕೃತಂ ತೇನ ಸಮಾಸಹಸ್ರಂ**
**ರಹಸ್ಯಮೇತತ್ಪಿತರೋ ವದಂತಿ॥** 14

**ಮಾಘೇಽಸಿತೇ ಪಂಚದಶೀ ಕದಾಚಿ-**
**ದುಪೈತಿ ಯೋಗಂ ಯದಿ ವಾರುಣೇನ।**
**ಋಕ್ಷೇಣ ಕಾಲಸ್ಯ ಪರಃ ಪಿತೄಣಾಂ**
**ನ ಹ್ಯಲ್ಪಪುಣ್ಯೈರ್ನೃಪಲಭ್ಯತೇಽಸೌ॥** 15

**ಕಾಲೇ ಧನಿಷ್ಠಾ ಯದಿ ನಾಮ ತಸ್ಮಿನ್**
**ಭವೇತ್ತು ಭೂಪಾಲ ತದಾ ಪಿತೃಭ್ಯಃ।**
**ದತ್ತಂ ಜಲಾನ್ನಂ ಪ್ರದದಾತಿ ತೃಪ್ತಿಂ**
**ವರ್ಷಾಯುತಂ ತತ್ಕುಲಜೈರ್ಮನುಷ್ಯೈಃ॥** 16

---

ತಿಥಿಗಳು, ಉತ್ತರಾಯಣ ದಕ್ಷಿಣಾಯನಗಳು ಪ್ರಶಸ್ತವಾದವು (12-13). ಈ ದಿನಗಳಲ್ಲಿ ಮನುಷ್ಯನು ಶುಚಿಯಾಗಿದ್ದು ಪಿತೃಗಳಿಗೆ ತಿಲಮಿಶ್ರಿತವಾದ ಜಲತರ್ಪಣವನ್ನಾದರೂ ಕೊಡಬೇಕು. ಇದರಿಂದ ಸಾವಿರ ವರ್ಷಗಳ ವರೆಗೂ ಆತನು ಕಾಮ್ಯಶ್ರಾದ್ಧವನ್ನು ಮಾಡಿದಂತೆಯೇ ಎಂಬ ರಹಸ್ಯವನ್ನು ಪಿತೃದೇವತೆಗಳು ಹೇಳುತ್ತಾರೆ. (14). ಮಾಘಬಹುಳ ಅಮಾವಾಸ್ಯೆ ಯಂದು ಶತಭಿಷಾನಕ್ಷತ್ರದ ಯೋಗವಾದರೆ, ಅದು ಪಿತೃಗಳಿಗೆ ಪರಮ ಪ್ರಿಯವಾದ ಕಾಲ. ರಾಜ-ಪುರೂರವ, ಇಂತಹ ಕಾಲವು ಅಲ್ಪಪುಣ್ಯರಿಗೆ ಲಭಿಸುವುದಿಲ್ಲ (15). ಅದೇ ಕಾಲದಲ್ಲಿ ಎಂದರೆ ಮಾಘಬಹುಳ ಅಮಾವಾಸ್ಯೆಯಲ್ಲಿ ಧನಿಷ್ಠಾ ನಕ್ಷತ್ರಯೋಗವಾದಾಗ, ತಮ್ಮ ಕುಲದಲ್ಲಿ ಹುಟ್ಟಿದ ಜನರು ಕೊಡುವ ಜಲವೂ ಅನ್ನವೂ ಆ ಪಿತೃಗಳಿಗೆ ಹತ್ತುಸಾವಿರ

**ತತ್ರೈವ ಚೇದ್ಭಾದ್ರಪದಾ ನು ಪೂರ್ವಾ**
**ಕಾಲೇ ಯಥಾವತ್ ಕ್ರಿಯತೇ ಪಿತೃಭ್ಯಃ।**
**ಶ್ರಾದ್ಧಂ ಪರಾಂ ತೃಪ್ತಿಮುಪೇತ್ಯ ತೇನ**
**ಯುಗಂ ಸಹಸ್ರಂ ಪಿತರಸ್ಸ್ವಪಂತಿ॥** 17

**ಗಂಗಾಂ ಶತದ್ರೂಂ ಯಮುನಾಂ ವಿಪಾಶಾಂ**
**ಸರಸ್ವತೀಂ ನೈಮಿಷಗೋಮತೀಂ ವಾ।**
**ತತ್ರಾವಗಾಹ್ಯಾರ್ಚನಮಾದರೇಣ**
**ಕೃತ್ವಾ ಪಿತೄಣಾಂ ದುರಿತಾನಿ ಹಂತಿ॥** 18

**ಗಾಯಂತಿ ಚೈತತ್ಪಿತರಃ ಕದಾನು**
**ವರ್ಷಾಮಘಾತೃಪ್ತಿಮವಾಪ್ಯ ಭೂಯಃ।**
**ಮಾಘಾಸಿತಾಂತೇ ಶುಭತೀರ್ಥತೋಯೈ-**
**ರ್ಯಾಸ್ಯಾಮ ತೃಪ್ತಿಂ ತನಯಾದಿದತ್ತೈಃ॥** 19

**ಚಿತ್ತಂ ನ ವಿತ್ತಂ ಚ ನೃಣಾಂ ವಿಶುದ್ಧಂ**
**ಶಸ್ತಶ್ಚ ಕಾಲಃ ಕಥಿತೋ ವಿಧಿಶ್ಚ।**

---

ವರ್ಷಗಳವರೆಗೆ ತೃಪ್ತಿಯನ್ನೀಯುವುದು (16). ಅದೇ ದಿನ ಪೂರ್ವಾಭಾದ್ರಪದಾಯೋಗವಿದ್ದಾಗ ಯಥಾವತ್ತಾಗಿ ಶ್ರಾದ್ಧವನ್ನು ಮಾಡಿದರೆ, ಅದರಿಂದ ಪಿತೃಗಳು ತೃಪ್ತರಾಗಿ ಸಾವಿರ ಯುಗಗಳವರೆಗೆ ಮಲಗಿಕೊಳ್ಳುತ್ತಾರೆ! (17). ಗಂಗಾ, ಶತದ್ರು, ಯಮುನಾ, ವಿಪಾಶಾ, ಸರಸ್ವತೀ, ನೈಮಿಷಾರಣ್ಯದಲ್ಲಿರುವ ಗೋಮತೀ—ಈ ನದಿಗಳಲ್ಲಿ ಸ್ನಾನಮಾಡಿ ಪಿತೃಗಳನ್ನು ಅರ್ಚಿಸುವುದರಿಂದ ಎಲ್ಲ ದುರಿತಗಳನ್ನೂ ಮನುಷ್ಯನು ಹೋಗಲಾಡಿಸಿಕೊಳ್ಳುತ್ತಾನೆ (18). "ವರ್ಷಾಕಾಲದ ಮಾಘನಕ್ಷತ್ರದಲ್ಲಿ (ಭಾದ್ರಪದ ಬಹುಳ ತ್ರಯೋದಶೀ ಮಘಾನಕ್ಷತ್ರದಲ್ಲಿ) ನಾವು ಶ್ರಾದ್ಧದಿಂದ ತೃಪ್ತಿಯನ್ನು ಹೊಂದಿ, ಪುನಃ ಮಾಘಮಾಸದ ಬಹುಳ ಅಮಾವಾಸ್ಯೆಯಂದು ನಾವು ಯಾವಾಗ ತೃಪ್ತಿಯೊಂದಿಯೇವು" ಎಂಬುದಾಗಿ ಪಿತೃದೇವತೆಗಳು ಹಾರೈಸಿ ಹೇಳಿಕೊಳ್ಳುತ್ತಾರೆ (19). ಶುದ್ಧವಾದ ಚಿತ್ತ, ಶುದ್ಧವಾದ ವಿತ್ತ, ಪ್ರಶಸ್ತವಾದ

ಪಾತ್ರಂ ಯಥೋಕ್ತಂ ಪರಮಾ ಚ ಭಕ್ತಿ-
ರ್ನೃಣಾಂ ಪ್ರಯಚ್ಛಂತ್ಯಭಿವಾಂಛಿತಾನಿ ॥ 20

ಪಿತೃಗೀತಾನ್ ತಥೈವಾತ್ರ ಶ್ಲೋಕಾಂಸ್ತಾನ್ ಶೃಣು ಪಾರ್ಥಿವ ।
ಶ್ರುತ್ವಾ ತಥೈವ ಭವತಾ ಭಾವ್ಯಂ ತತ್ರಾದೃತಾತ್ಮನಾ ॥ 21

ಅಪಿ ಧನ್ಯಃ ಕುಲೇ ಜಾಯಾದಸ್ಮಾಕಂ ಮತಿಮಾನ್ನರಃ ।
ಅಕುರ್ವನ್ವಿತ್ತಶಾಠ್ಯಂ ಯಃ ಪಿಂಡಾನ್ನೋ ನಿರ್ವಪಿಷ್ಯತಿ ॥ 22

ರತ್ನಂ ವಸ್ತ್ರಂ ಮಹಾಯಾನಂ ಸರ್ವಭೋಗಾದಿಕಂ ವಸು ।
ವಿಭವೇ ಸತಿ ವಿಪ್ರೇಭ್ಯೋ ಯೋಽಸ್ಮಾನುದ್ದಿಶ್ಯ ದಾಸ್ಯತಿ ॥ 23

ಅನ್ನೇನ ವಾ ಯಥಾಶಕ್ತ್ಯಾ ಕಾಲೇಽಸ್ಮಿನ್ ಭಕ್ತಿನಮ್ರಧೀಃ ।
ಭೋಜಯಿಷ್ಯತಿ ವಿಪ್ರಾಂಗ್ರ್ಯಾಂಸ್ತನ್ಮಾತ್ರವಿಭವೋ ನರಃ ॥ 24

ಅಸಮರ್ಥೋಽನ್ನದಾನಸ್ಯ ಧಾನ್ಯಮಾಮಂ ಸ್ವಶಕ್ತಿತಃ ।
ಪ್ರದಾಸ್ಯತಿ ದ್ವಿಜಾಗ್ರ್ಯೇಭ್ಯಃ ಸ್ವಲ್ಪಾಲ್ಪಾಂ ವಾಪಿ ದಕ್ಷಿಣಾಮ್ ॥ 25

---

ಕಾಲ, ಹಿಂದೆ ಹೇಳಿದ ವಿಧಾನ, ಯೋಗ್ಯವಾದ ಪಾತ್ರ, ಪರಮಭಕ್ತಿ—ಇವು ಮನುಷ್ಯರಿಗೆ ಇಷ್ಟಾರ್ಥಗಳನ್ನೀಯುತ್ತವೆ (20). ರಾಜ—ಪುರೂರವ, ಪಿತೃದೇವತೆಗಳು ಹಾಡಿದ ಕೆಲವು ಶ್ಲೋಕಗಳನ್ನು ಹೇಳುತ್ತೇನೆ ಕೇಳು. ನೀನು ಆದರವಿಟ್ಟು ಅದರಂತೆ ನಡೆದುಕೊಳ್ಳಬೇಕು. (ಪಿತೃಗಳು ಹೀಗೆ ಹೇಳಿದ್ದಾರೆ)—"ವಿತ್ತಲೋಭವನ್ನು ಮಾಡದೆ ನಮಗೆ ಪಿಂಡದಾನವನ್ನು ಮಾಡತಕ್ಕ ಬುದ್ಧಿಶಾಲಿಯೂ ಧನ್ಯನೂ ಆದ ಒಬ್ಬನು ನಮ್ಮ ಕುಲದಲ್ಲಿ ಹುಟ್ಟಿಯಾನೆ! (21-22). ರತ್ನ, ವಸ್ತ್ರ, ವಾಹನ, ಸರ್ವಭೋಗ ಸಾಮಗ್ರಿ, ಧನ—ಇವನ್ನು ತನಗೆ ಸಂಪತ್ತಿರುವಾಗ ನಮಗೋಸ್ಕರ (ಬ್ರಾಹ್ಮಣರಿಗೆ) ದಾನಮಾಡತಕ್ಕ ಪುರುಷನು ನಮ್ಮ ವಂಶದಲ್ಲಿ ಹುಟ್ಟುವನೆ! (23). ತನ್ನಲ್ಲಿ ಸಂಪತ್ತು ಇಲ್ಲದಿದ್ದರೆ ಯಥಾಶಕ್ತಿಯಾಗಿ ಅನ್ನದಿಂದಾದರೂ ಭಕ್ತಿನಮ್ರನಾಗಿ ವಿಪ್ರರಿಗೆ ಭೋಜನ ಮಾಡಿಸತಕ್ಕವನು ನಮ್ಮ ವಂಶದಲ್ಲಿ ಹುಟ್ಟುವನೆ! (24). ಅನ್ನವನ್ನು ನೀಡಲೂ ಅಸಮರ್ಥನಾದರೆ, ತನ್ನ ಶಕ್ತ್ಯನುಸಾರವಾಗಿ ಆಮಧಾನ್ಯವನ್ನೂ (ಪಕ್ವಮಾಡದ ಅಡಿಗೆ ಸಾಹಿತ್ಯ)

**ತತ್ರಾಪ್ಯಸಾಮರ್ಥ್ಯಯುತಃ ಕರಾಗ್ರಾಗ್ರಸ್ಥಿತಾಂಸ್ತಿಲಾನ್ ।**
**ಪ್ರಣಮ್ಯ ದ್ವಿಜಮುಖ್ಯಾಯ ಕಸ್ಮೈಚಿದ್ಭೂಪ ದಾಸ್ಯತಿ ॥** 26
**ತಿಲೈಸ್ಸಪ್ತಾಷ್ಟಭಿರ್ವಾಪಿ ಸಮವೇತಂ ಜಲಾಂಜಲಿಮ್ ।**
**ಭಕ್ತಿನಮ್ರಸ್ಸಮುದ್ದಿಶ್ಯ ಭುವ್ಯಸ್ಮಾಕಂ ಪ್ರದಾಸ್ಯತಿ ॥** 27
**ಯತಃ ಕುತಶ್ಚಿತ್ಸಂಪ್ರಾಪ್ಯ ಗೋಭ್ಯೋ ವಾಪಿ ಗವಾಹ್ನಿಕಮ್ ।**
**ಅಭಾವೇ ಪ್ರೀಣಯನ್ನಸ್ಮಾನ್ ಶ್ರದ್ಧಾಯುಕ್ತಃ ಪ್ರದಾಸ್ಯತಿ ॥** 28
**ಸರ್ವಾಭಾವೇ ವನಂ ಗತ್ವಾ ಕಕ್ಷಮೂಲಪ್ರದರ್ಶಕಃ ।**
**ಸೂರ್ಯಾದಿಲೋಕಪಾಲಾನಾಮಿದಮುಚ್ಚೈರ್ವದಿಷ್ಯತಿ ॥** 29
**ನ ಮೇಽಸ್ತಿ ವಿತ್ತಂ ನ ಧನಂ ಚ ನಾನ್ಯತ್**
**ಶ್ರಾದ್ಧೋಪಯೋಗ್ಯಂ ಸ್ವಪಿತೄನ್ನತೋಽಸ್ಮಿ ।**
**ತೃಪ್ಯಂತು ಭಕ್ತ್ಯಾ ಪಿತರೋ ಮಯೈತೌ**
**ಕೃತೌ ಭುಜೌ ವರ್ತ್ಮನಿ ಮಾರುತಸ್ಯ ॥** 30

---

ಸ್ವಲ್ಪವೇ ಆದರೂ ದಕ್ಷಿಣೆಯನ್ನೂ ಬ್ರಾಹ್ಮಣೋತ್ತಮರಿಗೆ (ನಮಗೋಸ್ಕರ) ನೀಡತಕ್ಕ ಪುರುಷನು ನಮ್ಮ ವಂಶದಲ್ಲಿ ಹುಟ್ಟಬಹುದೆ! (25). ಅದನ್ನು ಮಾಡುವುದಕ್ಕೂ ಶಕ್ತಿಯಿಲ್ಲದವನಾದರೆ, ಯಾರಾದರೊಬ್ಬ ದ್ವಿಜೋತ್ತಮನಿಗೆ ನಮಸ್ಕರಿಸಿ ಒಂದು ಮುಷ್ಟಿ ಎಳ್ಳನ್ನು ದಾನಮಾಡತಕ್ಕವನಾಗಲಿ! ಅಥವಾ ಏಳೆಂಟು ಎಳ್ಳಿನ ಕಾಳುಗಳಿಂದ ಕೂಡಿದ ಜಲಾಂಜಲಿಯನ್ನು ನಮಗೋಸ್ಕರ ಭಕ್ತಿನಮ್ರನಾಗಿ ನೆಲದ ಮೇಲೆ ಅರ್ಪಿಸಲಿ! (26-27). ಅದೂ ಇಲ್ಲದಿದ್ದರೆ, ಗೋವಿಗೆ ಒಂದು ದಿನಕ್ಕಾಗುವಷ್ಟು ತೃಣಾದಿಗಳನ್ನು ಎಲ್ಲಿಂದಾದರೂ ತಂದು, ಶ್ರದ್ಧಾಯುಕ್ತನಾಗಿ ನಮಗೆ ಪ್ರೀತಿಯಾಗಲೆಂದು ಗೋವುಗಳಿಗೆ ಅರ್ಪಿಸಲಿ! (28). ಈ ಎಲ್ಲಕ್ಕೂ ಅಭಾವವಾದ ಪಕ್ಷದಲ್ಲಿ, ಆತನು ಅರಣ್ಯಕ್ಕೆ ಹೋಗಿ ತನ್ನ ಬಗಲನ್ನು ತೋರಿಸುತ್ತ (ಎರಡೂ ಕೈಗಳನ್ನು ಮೇಲೆತ್ತಿ) ಸೂರ್ಯಾದಿಲೋಕಪಾಲರ ಸಾಕ್ಷಿಯಾಗಿ, ಈ ರೀತಿ ಗಟ್ಟಿಯಾಗಿ ಕೂಗಿ ಹೇಳಲಿ! (29). ಏನೆಂದರೆ, "ನನ್ನ ಬಳಿ ಶ್ರಾದ್ಧಕ್ಕೆ ಬೇಕಾದ ಸಾಮಗ್ರಿ ಇಲ್ಲ, ಹಣವಿಲ್ಲ. ಬೇರೆ ಯಾವ ಸಾಧನವೂ ಇಲ್ಲ. ನನ್ನ ಪಿತೃಗಳಿಗೆ ನಮಸ್ಕಾರ ಮಾಡಿದ್ದೇನೆ. ನನ್ನ ಭಕ್ತಿಯಿಂದಲೇ ಪಿತೃಗಳು

*ಔರ್ವ ಉವಾಚ:*

**ಇತ್ಯೇತತ್ಪಿತೃಭಿರ್ಗೀತಂ ಭಾವಾಭಾವಪ್ರಯೋಜನಮ್।**
**ಯಃ ಕರೋತಿ ಕೃತಂ ತೇನ ಶ್ರಾದ್ಧಂ ಭವತಿ ಪಾರ್ಥಿವ॥ 31**

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಚತುರ್ದಶೋಽಧ್ಯಾಯಃ

---

ಸಂತೃಪ್ತರಾಗಲಿ. ಇದೋ ನನ್ನ ಕೈಗಳನ್ನು ಆಕಾಶದಲ್ಲಿ ಎತ್ತಿ ಹಿಡಿದಿದ್ದೇನೆ" (30). (ಈ ರೀತಿಯಲ್ಲಿ ಸನತ್ಕುಮಾರರು ಪುರೂರುವನಿಗೆ ಹೇಳಿದ್ದಾರೆಂದು ತಿಳಿಸಿ) ಔರ್ವನು ಹೇಳಿದನು. ರಾಜ-ಸಗರ, ಈ ರೀತಿಯಲ್ಲಿ, ಧನವಿರಲಿ-ಇಲ್ಲದಿರಲಿ, ಶ್ರಾದ್ಧನಿಮಿತ್ತವಾಗಿ ಮಾಡಬೇಕಾದದ್ದೇನೆಂಬುದನ್ನು ಪಿತೃದೇವತೆಗಳು ಹೇಳಿದ್ದಾರೆ. ಅದರಂತೆ ಯಾವನು ಆಚರಿಸುತ್ತಾನೋ ಆತನು ಶ್ರಾದ್ಧವನ್ನು ಮಾಡುತ್ತಾನೆಂದು ತಿಳಿಯಬೇಕು" (31).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.



## ಪಂಚದಶೋऽಧ್ಯಾಯಃ

*ಔರ್ವ ಉವಾಚ:*

**ಬ್ರಾಹ್ಮಣಾನ್ಭೋಜಯೇತ್ ಶ್ರಾದ್ಧೇ**
**ಯದ್‌ಗುಣಾಂಸ್ತಾನ್ನಿಬೋಧ ಮೇ।**
**ತ್ರಿಣಾಚಿಕೇತಸ್ತ್ರಿಮಧುಸ್ತ್ರಿಸುಪರ್ಣಃ ಷಡಂಗವಿತ್ ॥ 1**

**ವೇದವಿತ್ ಶ್ರೋತ್ರಿಯೋ ಯೋಗೀ ತಥಾ ವೈ ಜ್ಯೇಷ್ಠಸಾಮಗಃ।**
**ಋತ್ವಿಕ್ ಸ್ವಸ್ರೇಯದೌಹಿತ್ರಜಾಮಾತೃಶ್ವಶುರಾಸ್ತಥಾ ॥ 2**

---

## ಅಧ್ಯಾಯ 15

ಶ್ರಾದ್ಧದಲ್ಲಿ ನಿಮಂತ್ರಣಕ್ಕೆ ಯೋಗ್ಯರಾದವರು. ಶ್ರಾದ್ಧವಿಧಿ.

ಪರಾಶರರು ಹೇಳಿದರು: ಮೈತ್ರೇಯ, ಔರ್ವನು ಮುಂದುವರಿಸಿ ಹೀಗೆಂದನು. "ಯಾವ ಗುಣಗಳುಳ್ಳ ಬ್ರಾಹ್ಮಣರನ್ನು ಶ್ರಾದ್ಧದಲ್ಲಿ ಭೋಜನ ಮಾಡಿಸಬೇಕೋ ಅಂಥವರನ್ನು ಹೇಳುತ್ತೇನೆ, ಕೇಳು. ಆ ಬ್ರಾಹ್ಮಣನು ತ್ರಿಣಾಚಿಕೇತನೂ ತ್ರಿಮಧುವೂ ತ್ರಿಸುಪರ್ಣನೂ ಷಡಂಗವೇದಿಯೂ* ಆಗಿರಬೇಕು (1). ವೇದಾರ್ಥವನ್ನು ಬಲ್ಲವನು, ವೇದಾಧ್ಯಾಯೀ, ಯೋಗಿ, ಜ್ಯೇಷ್ಠಸಾಮವನ್ನು§ ಗಾನಮಾಡತಕ್ಕವನು, ಋತ್ವಿಕ್, ಸೋದರೀಪುತ್ರ,

---

* ತ್ರಿಣಾಚಿಕೇತ = ದ್ವಿತೀಯ ಕಠದಲ್ಲಿ ಬರುವ "ಅಯಂವಾವ ಯಃ ಪವತೇ" ಇತ್ಯಾದಿ ಮೂರು ಅನುವಾಕಗಳನ್ನು ಪಠಿಸತಕ್ಕವನು ಮತ್ತು ಅದರಂತೆ ಅನುಷ್ಠಾನ ಮಾಡತಕ್ಕವನು. ತ್ರಿಮಧು = "ಮಧುವಾತಾ ಋತಾಯತೇ" ಇತ್ಯಾದಿ ಮಂತ್ರಗಳನ್ನು ಪಠಿಸತಕ್ಕವನು ಮತ್ತು ಅದರಂತೆ ಆಚರಿಸತಕ್ಕವನು. ತ್ರಿಸುಪರ್ಣ = "ಬ್ರಹ್ಮಮೇತು ಮಾಂ" ಇತ್ಯಾದಿ ಮೂರು ಅನುವಾಕಗಳನ್ನು ಅಧ್ಯಯನ ಮಾಡಿದವನು ಮತ್ತು ಅದಕ್ಕೆ ಸಂಬಂಧಿಸಿದ ವ್ರತವನ್ನು ಮಾಡತಕ್ಕವನು. ಷಡಂಗಗಳು = ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ.

§ 'ಮೂರ್ಧಾನಂ ದಿವಃ' ಇತ್ಯಾದಿ ಋಗ್ವಿಶೇಷಕ್ಕೆ ಗೀತೆಯನ್ನು ಸೇರಿಸಿದಾಗ ಜ್ಯೇಷ್ಠಸಾಮವೆನಿಸುತ್ತದೆ.

**ಮಾತುಲೋಽಥ ತಪೋನಿಷ್ಠಃ ಪಂಚಾಗ್ನ್ಯಭಿರತಸ್ತಥಾ।**
**ಶಿಷ್ಯಾಸ್ಸಂಬಂಧಿನಶ್ಚೈವ ಮಾತಾಪಿತೃರತಶ್ಚ ಯಃ॥** 3

**ಏತಾನ್ನಿಯೋಜಯೇತ್ ಶ್ರಾದ್ಧೇ ಪೂರ್ವೋಕ್ತಾನ್ ಪ್ರಥಮೇ ನೃಪ।**
**ಬ್ರಾಹ್ಮಣಾನ್ ಪಿತೃತುಷ್ಟ್ಯರ್ಥಮನುಕಲ್ಪೇಷ್ವನಂತರಾನ್॥** 4

**ಮಿತ್ರಧ್ರುಕ್ಕುನಖೀ ಕ್ಲೀಬಶ್ಯಾವದಂತಸ್ತಥಾ ದ್ವಿಜಃ।**
**ಕನ್ಯಾದೂಷಯಿತಾ ವಹ್ನಿವೇದೋಜ್ಝಸ್ಸೋಮವಿಕ್ರಯೀ॥** 5

**ಅಭಿಶಸ್ತಸ್ತಥಾ ಸ್ತೇನಃ ಪಿಶುನೋ ಗ್ರಾಮಯಾಜಕಃ।**
**ಭೃತಕಾಧ್ಯಾಪಕಸ್ತದ್ವದ್ ಭೃತಕಾಧ್ಯಾಪಿತಶ್ಚ ಯಃ॥** 6

**ಪರಪೂರ್ವಾಪತಿಶ್ಚೈವ ಮಾತಾಪಿತ್ರೋಸ್ತಥೋಜ್ಝಕಃ।**
**ವೃಷಲೀಸೂತಿಪೋಷ್ಟಾ ಚ ವೃಷಲೀಪತಿರೇವ ಚ॥** 7

---

ಮಗಳ ಮಗ, ಅಳಿಯ, ಮಾವ, ಸೋದರಮಾವ, ತಪಸ್ವಿ, ಪಂಚಾಗ್ನಿ ವಿದ್ಯೆಗಳನ್ನರಿತು ಅನುಷ್ಠಾನ ಮಾಡತಕ್ಕವನು, ಶಿಷ್ಯ, ಬಂಧು, ತಾಯಿತಂದೆಗಳ ಸೇವೆ ಮಾಡತಕ್ಕವನು—ಇವರು ಶ್ರಾದ್ಧಭೋಜನಕ್ಕೆ ಅರ್ಹರಾದವರು (2-3). ಇವರಲ್ಲಿ ಮೊದಲು ಹೇಳಿದ ಬ್ರಾಹ್ಮಣರನ್ನು (ತ್ರಿಣಾಚಿಕೇತನಿಂದ ಜ್ಯೇಷ್ಠಸಾಮಗನವರೆಗೆ ಹೇಳಿದವರನ್ನು) ಶ್ರಾದ್ಧದಲ್ಲಿ ಪಿತೃಗಳ ತೃಪ್ತಿಗಾಗಿ ಮುಖ್ಯರೆಂದು ನಿಮಂತ್ರಿಸಬೇಕು. ಮುಂದಿನ ಋತ್ವಿಕ್ ಮೊದಲಾದವರನ್ನು ಅನುಕಲ್ಪದಲ್ಲಿ (ಮೊದಲನೆಯವರು ದೊರೆಯದಾಗ) ನಿಮಂತ್ರಿಸಬೇಕು (4). (ಶ್ರಾದ್ಧದಲ್ಲಿ ನಿಮಂತ್ರಣಕ್ಕೆ ಅನರ್ಹರು ಯಾರೆಂದರೆ) ಮಿತ್ರದ್ರೋಹಿ, ಕೆಟ್ಟ ಉಗುರುಳ್ಳವನು, ನಪುಂಸಕ, ಕೊಳಕು ಹಲ್ಲಿನವನು, ಮದುವೆಯಾಗದ ಕನ್ಯೆಯಲ್ಲಿ ಸಂಗ ಮಾಡಿದವನು, ಅಗ್ನಿ ಮತ್ತು ವೇದಗಳನ್ನು ಉಪೇಕ್ಷಿಸಿದವನು, ಸೋಮಲತೆಯನ್ನು ಮಾರ ತಕ್ಕವನು, ಲೋಕನಿಂದಿತನಾದವನು, ಕಳ್ಳ, ಚಾಡಿಖೋರ, ಗ್ರಾಮ ಪುರೋಹಿತ, ಸಂಬಳವನ್ನು ತೆಗೆದುಕೊಂಡು ವೇದಾಧ್ಯಯನ ಮಾಡಿಸ ತಕ್ಕವನು, ಅಂಥವನಿಂದ ವೇದಾಧ್ಯಯನ ಮಾಡಿದವನು (5-6). ಮತ್ತು ಪುನರ್ವಿವಾಹ ಮಾಡಿಕೊಂಡವಳ ಪತಿ, ತಾಯಿತಂದೆಗಳನ್ನು ತ್ಯಜಿಸಿ

**ತಥಾ ದೇವಲಕಶ್ಚೈವ ಶ್ರಾದ್ಧೇ ನಾರ್ಹತಿ ಕೇತನಮ್॥ 8**

**ಪ್ರಥಮೇಽಹ್ನಿ ಬುಧಶ್ಶಸ್ತಾನ್ ಶ್ರೋತ್ರಿಯಾದೀನ್ನಿಮಂತ್ರಯೇತ್।**
**ಕಥಯೇಚ್ಚ ತಥೈವೈಷಾಂ ನಿಯೋಗಾನ್ ಪಿತೃದೈವಿಕಾನ್॥ 9**

**ತತಃ ಕ್ರೋಧವ್ಯವಾಯಾದೀನಾಯಾಸಂ ತೈರ್ದ್ವಿಜೈಸ್ಸಹ।**
**ಯಜಮಾನೋ ನ ಕುರ್ವೀತ ದೋಷಸ್ತತ್ರ ಮಹಾನಯಮ್॥**

**ಶ್ರಾದ್ಧೇ ನಿಯುಕ್ತೋ ಭುಕ್ತ್ವಾ ವಾ ಭೋಜಯಿತ್ವಾ ನಿಯುಜ್ಯ ಚ।**
**ವ್ಯವಾಯೀ ರೇತಸೋ ಗರ್ತೇ ಮಜ್ಜಯತ್ಯಾತ್ಮನಃ ಪಿತೄನ್॥ 11**

**ತಸ್ಮಾತ್ ಪ್ರಥಮಮಂತ್ರೋಕ್ತಂ ದ್ವಿಜಾಗ್ರ್ಯಾಣಾಂ ನಿಮಂತ್ರಣಮ್।**
**ಅಭಿಮಂತ್ರ್ಯ ದ್ವಿಜಾನೇವಮಾಗತಾನ್ ಭೋಜಯೇದ್ಯತೀನ್॥ 12**

---

ದವನು, ಶೂದ್ರಸಂತತಿಯನ್ನು ಪೋಷಿಸತಕ್ಕವನು, ಶೂದ್ರಳನ್ನು ಮದುವೆಯಾದವನು, ಸಂಬಳವನ್ನು ತೆಗೆದುಕೊಳ್ಳುವ ಪೂಜಾರಿ—ಇವರು ನಿಮಂತ್ರಣಕ್ಕೆ ಯೋಗ್ಯರಲ್ಲ (7-8). ಬುದ್ಧಿಶಾಲಿಯು ಶ್ರಾದ್ಧದ ಹಿಂದಿನ ದಿನ ಪ್ರಶಸ್ತರಾದ ಶ್ರೋತ್ರಿಯರನ್ನು ನಿಮಂತ್ರಿಸಿ “ನೀವು ಪಿತೃಸ್ಥಾನಕ್ಕೆ ನಿಮಂತ್ರಿತರಾಗಿದ್ದೀರಿ, ನೀವು ವಿಶ್ವೇದೇವಸ್ಥಾನಕ್ಕೆ ನಿಮಂತ್ರಿತರಾಗಿದ್ದೀರಿ” ಎಂದು ತಿಳಿಸಬೇಕು (9). ಅನಂತರ ಶ್ರಾದ್ಧಮಾಡತಕ್ಕ ಯಜಮಾನನೂ ಆ ಬ್ರಾಹ್ಮಣರೂ ಸಹ ಕ್ರೋಧ, ಮೈಥುನ, ಶ್ರಮದ ಕೆಲಸ—ಮುಂತಾದ್ದನ್ನು ವರ್ಜಿಸಬೇಕು. ಇಲ್ಲದಿದ್ದರೆ ಮಹತ್ತರವಾದ ದೋಷವು ಸಂಭವಿಸುತ್ತದೆ (10). ಶ್ರಾದ್ಧಕ್ಕೆ ನಿಯುಕ್ತನಾದ ವಿಪ್ರನು (ಶ್ರಾದ್ಧ ಭೋಜನವಾಗುವವರೆಗೂ), ಶ್ರಾದ್ಧಭೋಜನವಾದ ಮೇಲೆ ಆ ದಿನವೂ ಸ್ತ್ರೀಸಂಗವನ್ನು ಮಾಡತಕ್ಕದ್ದಲ್ಲ. ಹಾಗೆಯೇ ಯಜಮಾನನು ವಿಪ್ರರಿಗೆ ನಿಮಂತ್ರಣವನ್ನು ಕೊಟ್ಟಮೇಲೆಯೂ ಶ್ರಾದ್ಧಭೋಜನವನ್ನು ಮಾಡಿಸಿದ ದಿನವೂ ಸ್ತ್ರೀಸಂಗವನ್ನು ಮಾಡಬಾರದು. ಹಾಗೆ ಮಾಡಿದರೆ ಪಿತೃಗಳನ್ನು ರೇತಸ್ಸಿನ ಗರ್ತದಲ್ಲಿ ಮುಳುಗಿಸಿದವನಾಗುತ್ತಾನೆ (11). ಆದ್ದರಿಂದ, ರಾಜ, ಬ್ರಾಹ್ಮಣರ ನಿಮಂತ್ರಣದ ವಿಷಯವನ್ನು ಮೊದಲೇ ಹೇಳಿದ್ದೇನೆ. ಹೀಗೆ ನಿಮಂತ್ರಣವನ್ನಿತ್ತ ಮೇಲೆ ಶ್ರಾದ್ಧದ ದಿನ ಯಾರಾದರೂ ಉತ್ತಮ

**ಪಾದಶೌಚಾದಿನಾ ಗೇಹಮಾಗತಾನ್ ಪೂಜಯೇದ್ ದ್ವಿಜಾನ್।**
**ಪವಿತ್ರಪಾಣಿರಾಚಾಂತಾನಾಸನೇಷೂಪವೇಶಯೇತ್॥ 13**

**ಪಿತ್ರ್ಣಾಮಯುಜೋ ಯುಗ್ಮಾನ್ ದೇವಾನಾಮಿಚ್ಛಯಾ ದ್ವಿಜಾನ್।**
**ದೇವಾನಾಮೇಕಮೇಕಂ ವಾ ಪಿತ್ರ್ಣಾಂ ಚ ನಿಯೋಜಯೇತ್॥**

**ತಥಾ ಮಾತಾಮಹಶ್ರಾದ್ಧಂ ವೈಶ್ವದೇವಸಮನ್ವಿತಮ್।**
**ಕುರ್ವೀತ ಭಕ್ತಿಸಂಪನ್ನಸ್ತಂತ್ರಂ ವಾ ವೈಶ್ವದೈವಿಕಮ್॥ 15**

**ಪ್ರಾಙ್ಮುಖಾನ್ ಭೋಜಯೇದ್ವಿಪ್ರಾನ್ ದೇವಾನಾಮುಭಯಾತ್ಮಕಾನ್।**
**ಪಿತೃಮಾತಾಮಹಾನಾಂ ಚ ಭೋಜಯೇಚ್ಚಾಪ್ಯುದಙ್ಮುಖಾನ್॥ 16**

---

ಬ್ರಾಹ್ಮಣರಾಗಲಿ ಯತಿಗಳಾಗಲಿ ಆಕಸ್ಮಿಕವಾಗಿ ಆಗಮಿಸಿದರೆ, ಅವರಿಗೂ ಶ್ರಾದ್ಧಭೋಜನವನ್ನು ಮಾಡಿಸಬೇಕು (12). ಮನೆಗೆ ಬಂದ ದ್ವಿಜರನ್ನು ಪಾದ್ಯಾದಿಗಳಿಂದ ಉಪಚರಿಸಿ, ಅವರು ಆಚಮನ ಮಾಡಿದ ಮೇಲೆ ಪವಿತ್ರಪಾಣಿಯಾಗಿ ಆಸನದಲ್ಲಿ ಕುಳ್ಳಿರಿಸಬೇಕು. ಪಿತೃಗಳ ಸ್ಥಾನದಲ್ಲಿ ಬ್ರಾಹ್ಮಣರನ್ನು ಬೆಸಸಂಖ್ಯೆಯಲ್ಲಿಯೂ ವಿಶ್ವೇದೇವರ ಸ್ಥಾನದಲ್ಲಿ ಸಮಸಂಖ್ಯೆಯವರನ್ನೂ ನಿಯೋಜಿಸಬೇಕು. ಅಥವಾ ವಿಶ್ವೇದೇವರ ಸ್ಥಾನದಲ್ಲಿ ತನ್ನ ಇಚ್ಛೆಯಂತೆ ಯಾವ ಸಂಖ್ಯೆಯವರನ್ನಾದರೂ ನಿಯೋಜಿಸ ಬಹುದು. ಇಲ್ಲದಿದ್ದರೆ ಪಿತೃಗಳ ಮತ್ತು ವಿಶ್ವೇದೇವರ ಸ್ಥಾನದಲ್ಲಿ ಒಬ್ಬೊಬ್ಬ ಬ್ರಾಹ್ಮಣನನ್ನಾದರೂ ನಿಯೋಜಿಸಬಹುದು (13-14). ಹಾಗೆಯೇ ಮಾತಾಮಹನ ಶ್ರಾದ್ಧವನ್ನೂ* ವಿಶ್ವೇದೇವರ ಆವಾಹನೆಯೊಡನೆ ಮಾಡ ಬೇಕು. ಅಥವಾ ಭಕ್ತಿಪೂರ್ವಕವಾಗಿ ವಿಶ್ವೇದೇವರನ್ನು ಮಾತ್ರ ಆವಾಹಿಸಿ ಉಭಯಶ್ರಾದ್ಧವನ್ನೂ ಮಾಡಬಹುದು (15). ಪಿತೃಶ್ರಾದ್ಧ ಮಾತಾಮಹ ಶ್ರಾದ್ಧಗಳೆರಡರಲ್ಲಿಯೂ ವಿಶ್ವೇದೇವರ ಸ್ಥಾನದ ವಿಪ್ರರನ್ನು ಪೂರ್ವಾಭಿ ಮುಖವಾಗಿಯೂ ಪಿತೃದೇವತೆಗಳ ಸ್ಥಾನದವರನ್ನು ಉತ್ತರಾಭಿಮುಖ ವಾಗಿಯೂ ಕುಳ್ಳಿರಿಸಬೇಕು (16). ಪಿತೃಮಾತಾಮಹಾಶ್ರಾದ್ಧಗಳಲ್ಲಿ

---

* ಮಾತಾಮಹ ಶ್ರಾದ್ಧವನ್ನು ದೌಹಿತ್ರ ಕರ್ತೃಕ ಮಹಾಲಯದಲ್ಲಿ ಮಾತ್ರ ಮಾಡುವ ಪದ್ಧತಿ ಇದೆ.

**ಪೃಥಕ್ತಯೋಃ ಕೇಚಿದಾಹುಃ ಶ್ರಾದ್ಧಸ್ಯ ಕರಣಂ ನೃಪ।**
**ಏಕತ್ರೈಕೇನ ಪಾಕೇನ ವದಂತ್ಯನ್ಯೇ ಮಹರ್ಷಯಃ॥ 17**

**ವಿಷ್ಟರಾರ್ಥಂ ಕುಶಂ ದತ್ತ್ವಾ ಸಂಪೂಜ್ಯಾರ್ಘ್ಯಂ ವಿಧಾನತಃ।**
**ಕುರ್ಯಾದಾವಾಹನಂ ಪ್ರಾಜ್ಞೋ ದೇವಾನಾಂ ತದನುಜ್ಞಯಾ॥ 18**

**ಯವಾಂಬುನಾ ಚ ದೇವಾನಾಂ ದದ್ಯಾದರ್ಘ್ಯಂ ವಿಧಾನವಿತ್।**
**ಸ್ರಗ್ಗಂಧಧೂಪದೀಪಾಂಶ್ಚ ತೇಭ್ಯೋ ದದ್ಯಾದ್ಯಥಾವಿಧಿ॥ 19**

**ಪಿತೄಣಾಮಪಸವ್ಯಂ ತತ್ಸರ್ವಮೇವೋಪಕಲ್ಪಯೇತ್।**
**ಅನುಜ್ಞಾಂ ಚ ತತಃ ಪ್ರಾಪ್ಯ ದತ್ತ್ವಾ ದರ್ಭಾನ್ ದ್ವಿಧಾಕೃತಾನ್॥**

**ಮಂತ್ರಪೂರ್ವಂ ಪಿತೄಣಾಂ ತು ಕುರ್ಯಾಚ್ಚಾವಾಹನಂ ಬುಧಃ।**
**ತಿಲಾಂಬುನಾ ಚಾಪಸವ್ಯಂ ದದ್ಯಾದರ್ಘ್ಯಾದಿಕಂ ನೃಪ॥ 21**

**ಕಾಲೇ ತತ್ರಾತಿಥಿಂ ಪ್ರಾಪ್ತಮನ್ನಕಾಮಂ ನೃಪಾಧ್ವಗಮ್।**
**ಬ್ರಾಹ್ಮಣೈರಭ್ಯನುಜ್ಞಾತಃ ಕಾಮಂ ತಮಪಿ ಭೋಜಯೇತ್॥ 22**

---

ಶ್ರಾದ್ಧವು ಬೇರೆ ಬೇರೆ ಆಗಬೇಕೆಂದು ಕೆಲವರು ಹೇಳುತ್ತಾರೆ. ಒಂದೇ ಪಾಕದಿಂದ ಒಂದೇ ಕಡೆ ಮಾಡಬಹುದೆಂದೂ ಕೆಲವು ಮಹರ್ಷಿಗಳು ಹೇಳಿದ್ದಾರೆ (17). ಪ್ರಾಜ್ಞನಾದವನು ಆಸನಕ್ಕಾಗಿ ದರ್ಭೆಯನ್ನು ಕೊಟ್ಟು ಅರ್ಘ್ಯವನ್ನಿತ್ತು ವಿಧಿಪೂರ್ವಕವಾಗಿ ಅರ್ಚಿಸಿ, ವಿಶ್ವೇದೇವಾತ್ಮಕ ಬ್ರಾಹ್ಮಣರ ಅನುಮತಿಯನ್ನು ಪಡೆದು ವಿಶ್ವೇದೇವರನ್ನೂ ಪಿತೃಗಣಗಳನ್ನೂ ಆವಾಹಿಸ ಬೇಕು (18). ವಿಧಿಜ್ಞನಾದವನು ಯವಮಿಶ್ರಿತಜಲದಿಂದ ವಿಶ್ವೇದೇವರಿಗೆ ಅರ್ಘ್ಯವನ್ನು ಕೊಟ್ಟು, ಹೂ ಗಂಧ ಧೂಪದೀಪಾದಿಗಳನ್ನು ವಿಧ್ಯನುಸಾರ ವಾಗಿ ಅರ್ಪಿಸಬೇಕು (19). ಅಪಸವ್ಯವಾಗಿ ಯಜ್ಞೋಪವೀತವನ್ನು ಧರಿಸಿ, ಹಿಂದೆ ಹೇಳಿದ್ದೆಲ್ಲವನ್ನೂ ಪಿತೃಸ್ಥಾನದ ಬ್ರಾಹ್ಮಣರಿಗೆ ಅರ್ಪಿಸಬೇಕು. ಅವರ ಅನುಮತಿಯಿಂದ ದರ್ಭೆಗಳನ್ನು ಎರಡಾಗಿ ಮಡಿಸಿ ಆಸನಾರ್ಥನಾಗಿ ಕೂಡಬೇಕು. ಮಂತ್ರಪೂರ್ವಕವಾಗಿ ಪಿತೃಗಳನ್ನು ಅವರಲ್ಲಿ ಆವಾಹನ ಮಾಡಬೇಕು. ರಾಜ-ಸಗರ, ಪಿತೃಗಳಿಗೆ ತಿಲಮಿಶ್ರವಾದ ಅರ್ಘ್ಯಾದಿಗಳನ್ನು ಅಪಸವ್ಯವಾಗಿ ಕೊಡಬೇಕು (20-21). ಶ್ರಾದ್ಧಸಮಯದಲ್ಲಿ ಅನ್ನಾಪೇಕ್ಷಿ

**ಯೋಗಿನೋ ವಿವಿಧೈರೂಪೇರ್ನರಾಣಾಮುಪಕಾರಿಣಃ।**
**ಭ್ರಮಂತಿ ಪೃಥಿವೀಮೇತಾಮವಿಜ್ಞಾತಸ್ವರೂಪಿಣಃ॥** 23

**ತಸ್ಮಾದಭ್ಯರ್ಚಯೇತ್ ಪ್ರಾಪ್ತಂ ಶ್ರಾದ್ಧಕಾಲೇಽತಿಥಿಂ ಬುಧಃ।**
**ಶ್ರಾದ್ಧಕ್ರಿಯಾಫಲಂ ಹಂತಿ ನರೇಂದ್ರಾಪೂಜಿತೋಽತಿಥಿಃ॥** 24

**ಜುಹುಯಾದ್ವ್ಯಂಜನಕ್ಷಾರವರ್ಜಮನ್ನಂ ತತೋಽನಲೇ।**
**ಅನುಜ್ಞಾತೋ ದ್ವಿಜೈಸ್ತೈಸ್ತು ತ್ರಿಕೃತ್ವಃ ಪುರುಷರ್ಷಭ॥** 25

**ಅಗ್ನಯೇ ಕವ್ಯವಾಹಾಯ ಸ್ವಾಹೇತ್ಯಾದೌ ನೃಪಾಹುತಿಃ।**
**ಸೋಮಾಯ ವೈ ಪಿತೃಮತೇ ದಾತವ್ಯಾ ತದನಂತರಮ್॥** 26

**ವೈವಸ್ವತಾಯ ಚೈವಾನ್ಯಾ ತೃತೀಯಾ ದೀಯತೇ ತತಃ।**
**ಹುತಾವಶಿಷ್ಟಮಲ್ಪಾನ್ನಂ ವಿಪ್ರಪಾತ್ರೇಷು ನಿರ್ವಪೇತ್॥** 27

---

ಯಾಗಿ ಪ್ರಯಾಣಿಕನಾದ ಅತಿಥಿಯು ಬಂದರೆ, ಈ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು ಆತನಿಗೂ ಭೋಜನ ಮಾಡಿಸಬೇಕು (22). ಏಕೆಂದರೆ, ಯೋಗಿಪುರುಷರು ತಮ್ಮ ಸ್ವರೂಪವನ್ನು ತೋರಿಸದೆಯೇ ಬೇರೆ ಬೇರೆ ರೂಪಗಳಿಂದ ಜನೋಪಕಾರಕ್ಕಾಗಿ ಸಂಚರಿಸುತ್ತ ಇರುತ್ತಾರೆ. ಆದ್ದರಿಂದ ಶ್ರಾದ್ಧಕಾಲದಲ್ಲಿ ಬಂದ ಅತಿಥಿಯನ್ನು ವಿದ್ವಾಂಸನು ಅರ್ಚಿಸತಕ್ಕದ್ದು. ಸಗರ, ಅತಿಥಿಯು ಸತ್ಕೃತನಾಗದೆ ಹೋದರೆ ಶ್ರಾದ್ಧದ ಫಲವನ್ನು ನಾಶ ಮಾಡುತ್ತಾನೆ (23-24). ಆಮೇಲೆ ಯಜಮಾನನು ತರಕಾರಿ ಮತ್ತು ಕ್ಷಾರ-ಮೊದಲಾದವಿಲ್ಲದ ಅನ್ನವನ್ನು, ದ್ವಿಜರ ಅನುಮತಿಯಿಂದ, ಅಗ್ನಿಯಲ್ಲಿ ಮೂರು ಸಲ ಹೋಮ ಮಾಡಬೇಕು (25). 'ಅಗ್ನಯೇ, ಕವ್ಯವಾಹಾಯ ಸ್ವಾಹಾ (ಸ್ವಧಾ)'—ಎಂದು ಪ್ರಥಮಾಹುತಿ, 'ಸೋಮಾಯ ಪಿತೃಮತೇ ಸ್ವಾಹಾ' ಎಂದು ದ್ವಿತೀಯಾಹುತಿ, ವೈವಸ್ವತಾಯ (—ಯಮಾಯಾಂಗಿರಸ್ವತೇ) ಸ್ವಾಹಾ' ಎಂದು ತೃತೀಯಾಹುತಿ. ಆಮೇಲೆ ಹುತಾವಶಿಷ್ಟವಾದ ಸ್ವಲ್ಪ ಅನ್ನವನ್ನು ಬ್ರಾಹ್ಮಣರ ಭೋಜನ ಪಾತ್ರೆಗಳಿಗೆ ಹಾಕಬೇಕು. (26-27). ಅನಂತರ ಅವರಿಗೆ ಅತ್ಯಂತ ಪ್ರಿಯವೂ ಚೆನ್ನಾಗಿ ಸಂಸ್ಕರಿಸಲ್ಪಟ್ಟದ್ದೂ ಆದ ಮೃಷ್ಟಾನ್ನವನ್ನು ಬಡಿಸಿ

**ತತೋಽನ್ನಂ ಮೃಷ್ಟಮತ್ಯರ್ಥಮಭೀಷ್ಟಮತಿಸಂಸ್ಕೃತಮ್ ।**
**ದತ್ತ್ವಾ ಜುಷಧ್ವಮಿಚ್ಛಾತೋ ವಾಚ್ಯಮೇತದನಿಷ್ಠುರಮ್ ॥ 28**

**ಭೋಕ್ತವ್ಯಂ ತೈಶ್ಚ ತಚ್ಚಿತ್ತೈರ್ಮೌನಿಭಿಸ್ಸುಮುಖೈಃ ಸುಖಮ್ ।**
**ಅಕ್ರುದ್ಧ್ಯತಾ ಚಾತ್ವರತಾ ದೇಯಂ ತೇನಾಪಿ ಭಕ್ತಿತಃ ॥ 29**

**ರಕ್ಷೋಘ್ನ ಮಂತ್ರಪಠನಂ ಭೂಮೇರಾಸ್ತರಣಂ ತಿಲೈಃ ।**
**ಕೃತ್ವಾ ಧ್ಯೇಯಾಸ್ಸ್ವಪಿತರಸ್ತ ಏವ ದ್ವಿಜಸತ್ತಮಾಃ ॥ 30**

**ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।**
**ಮಮ ತೃಪ್ತಿಂ ಪ್ರಯಾಂತ್ವದ್ಯ ವಿಪ್ರದೇಹೇಷು ಸಂಸ್ಥಿತಾಃ ॥ 31**

**ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।**
**ಮಮ ತೃಪ್ತಿಂ ಪ್ರಯಾಂತ್ವದ್ಯ ಹೋಮಾಪ್ಯಾಯಿತಮೂರ್ತಯಃ ॥**

**ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।**
**ತೃಪ್ತಿಂ ಪ್ರಯಾಂತು ಪಿಂಡೇನ ಮಯಾ ದತ್ತೇನ ಭೂತಲೇ ॥ 33**

---

"ಯಥೇಚ್ಛವಾಗಿ (ಜುಷಧ್ವಂ) ಪ್ರೀತಿಯಿಂದ ಸೇವಿಸಿರಿ" ಎಂದು ಮೃದುವಾಗಿ ಹೇಳಬೇಕು (28). ಬ್ರಾಹ್ಮಣರೂ ಸಹ ಏಕಾಗ್ರತೆಯಿಂದ ಪ್ರಸನ್ನಮುಖರಾಗಿ ಮೌನದಿಂದ ಸುಖವಾಗಿ ಭೋಜನ ಮಾಡತಕ್ಕದ್ದು. ಯಜಮಾನನೂ ಸಹ ಕೋಪಗೊಳ್ಳದೆ ತ್ವರೆಪಡಿಸದೆ ಭಕ್ತಿಯಿಂದ ಬಡಿಸ ತಕ್ಕದ್ದು (29). ಮತ್ತು 'ಓಂ ಅಪಹತಾ ಅಸುರಾ ರಕ್ಷಾಗ್ಂಸಿ ವೇದಿಷದಃ' ಎಂಬ ರಕ್ಷೋಘ್ನ ಮಂತ್ರವನ್ನು ಪಠಿಸಿ ನೆಲದ ಮೇಲೆ ಎಳ್ಳನ್ನು ಹರಡಿ, ತನ್ನ ಪಿತೃರೂಪರೆಂದು ಆ ದ್ವಿಜೋತ್ತಮರನ್ನು ಧ್ಯಾನಿಸುತ್ತಿರಬೇಕು (30). ಮತ್ತು ಹೀಗೆ ಹೇಳತಕ್ಕದ್ದು "ಈ ಬ್ರಾಹ್ಮಣರ ದೇಹಗಳಲ್ಲಿ ಆವಾಹಿತರಾದ ನನ್ನ ಪಿತಾ, ಪಿತಾಮಹ, ಪ್ರಪಿತಾಮಹರು ಈಗ ತೃಪ್ತಿಯನ್ನೈದಲಿ. ಈಗ ಹೋಮದಿಂದ ಆಪ್ಯಾಯಿತರಾದ ನನ್ನ ಪಿತಾ, ಪಿತಾಮಹ, ಪ್ರಪಿತಾ ಮಹರು ತೃಪ್ತಿಯನ್ನೈದಲಿ. ನಾನು ನೆಲದ ಮೇಲೆ ನೀಡಿದ ಪಿಂಡದಿಂದ ಪಿತಾ, ಪಿತಾಮಹ, ಪ್ರಪಿತಾಮಹರು ತೃಪ್ತಿಯನ್ನೈದಲಿ. ನನ್ನ ಪಿತಾ, ಪಿತಾಮಹ, ಪ್ರಪಿತಾಮಹರು ನನ್ನ ಭಕ್ತಿಯಿಂದ ತೃಪ್ತಿಯನ್ನೈದಲಿ—

**ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ।**
**ತೃಪ್ತಿಂ ಪ್ರಯಾಂತು ಮೇ ಭಕ್ತ್ಯಾ ಮಯ್ಯೈತತ್ಸಮುದಾಹೃತಮ್॥**

**ಮಾತಾಮಹಸ್ತೃಪ್ತಿಮುಪೈತು ತಸ್ಯ**
**ತಥಾ ಪಿತಾ ತಸ್ಯ ಪಿತಾ ತತೋಽನ್ಯಃ।**
**ವಿಶ್ವೇ ಚ ದೇವಾಃ ಪರಮಾಂ ಪ್ರಯಾಂತು**
**ತೃಪ್ತಿಂ ಪ್ರಣಶ್ಯಂತು ಚ ಯಾತುಧಾನಾಃ॥** 35

**ಯಜ್ಞೇಶ್ವರೋ ಹವ್ಯಸಮಸ್ತಕವ್ಯ-**
**ಭೋಕ್ತಾವ್ಯಯಾತ್ಮಾ ಹರಿರೀಶ್ವರೋಽತ್ರ।**
**ತತ್ಸನ್ನಿಧಾನಾದಪಯಾಂತು ಸದ್ಯೋ**
**ರಕ್ಷಾಂಸ್ಯಶೇಷಾಣ್ಯಸುರಾಶ್ಚ ಸರ್ವೇ॥** 36

**ತೃಪ್ತೇಷ್ವೇತೇಷು ವಿಕಿರೇದನ್ನಂ ವಿಪ್ರೇಷು ಭೂತಲೇ।**
**ದದ್ಯಾದಾಚಮನಾರ್ಥಾಯ ತೇಭ್ಯೋ ವಾರಿ ಸಕೃತ್ ಸಕೃತ್॥** 37

**ಸುತೃಪ್ತೈಸ್ತೈರನುಜ್ಞಾತಸ್ಸರ್ವೇಣಾನ್ನೇನ ಭೂತಲೇ।**
**ಸತಿಲೇನ ತತಃ ಪಿಂಡಾನ್ ಸಮ್ಯಗ್ದದ್ಯಾತ್ಸಮಾಹಿತಃ॥** 38

---

ಎಂದು ನಿವೇದಿಸಿಕೊಂಡಿದ್ದೇನೆ (31-34). ನನ್ನ ಮಾತಾಮಹ, ಮಾತಾಮಹನ ಪಿತಾ, ಆತನ ಪಿತಾ—ಇವರು ತೃಪ್ತರಾಗಲಿ. ವಿಶ್ವೇದೇವರು ಪರಮ ತೃಪ್ತಿಯನ್ನು ಪಡೆಯಲಿ. ರಾಕ್ಷಸರು ನಾಶವನ್ನೈದಲಿ. ಯಜ್ಞೇಶ್ವರನೂ ಸಮಸ್ತ ಹವ್ಯಕವ್ಯಗಳ ಭೋಕ್ತೃವೂ ಅವ್ಯಯಾತ್ಮನೂ ಜಗದೀಶ್ವರನೂ ಆದ ಶ್ರೀಹರಿಯು ಇಲ್ಲಿ ಸಂನಿಹಿತನಾಗಿದ್ದಾನೆ. ಅವನ ಸಾಂನಿಧ್ಯದ ಬಲದಿಂದ ಸಮಸ್ತ ರಾಕ್ಷಸರೂ ಅಸುರರೂ ಒಡನೆಯೇ ಇಲ್ಲಿಂದ ಹೊರಟುಹೋಗಲಿ" (35-36). ಅನಂತರ ಬ್ರಾಹ್ಮಣರು ಸಂತೃಪ್ತರಾದ ಮೇಲೆ ಭೂತಳದಲ್ಲಿ ಅನ್ನವನ್ನು ಹರಡಬೇಕು (ವಿಕಿರ). ಆಮೇಲೆ ಬ್ರಾಹ್ಮಣರಿಗೆ ಆಚಮನಕ್ಕಾಗಿ ಒಂದೊಂದೇ ಸಲ ಜಲವನ್ನು ಹಾಕಬೇಕು (37). ಅವರು ಸಂತೃಪ್ತರಾದ ಮೇಲೆ ಅನುಜ್ಞೆಯನ್ನು ಪಡೆದು ವ್ಯಂಜನಾದಿ ಸರ್ವಪಾಕವಸ್ತು ಸಮನ್ವಿತವಾದ ತಿಲಮಿಶ್ರ ಅನ್ನದಿಂದ ಸಮಾಹಿತನಾಗಿ

**ಪಿತೃತೀರ್ಥೇನ ಸತಿಲಂ ತಥೈವ ಸಲಿಲಾಂಜಲಿಮ್।**
**ಮತಾಮಹೇಭ್ಯಸ್ತೇನೈವ ಪಿಂಡಾಂಸ್ತೀರ್ಥೇನ ನಿರ್ವಪೇತ್॥** 39

**ದಕ್ಷಿಣಾಗ್ರೇಷು ದರ್ಭೇಷು ಪುಷ್ಪಧೂಪಾದಿಪೂಜಿತಮ್।**
**ಸ್ವಪಿತ್ರೇ ಪ್ರಥಮಂ ಪಿಂಡಂ ದದ್ಯಾದುಚ್ಛಿಷ್ಟಸನ್ನಿಧೌ॥** 40

**ಪಿತಾಮಹಾಯ ಚೈವಾನ್ಯಂ ತತ್ಪಿತ್ರೇ ಚ ತಥಾಪರಮ್।**
**ದರ್ಭಮೂಲೇ ಲೇಪಭುಜಃ ಪ್ರೀಣಯೇಲ್ಲೇಪಘರ್ಷಣೈಃ॥** 41

**ಪಿಂಡೈರ್ಮಾತಾಮಹಾಂಸ್ತದ್ವದ್ ಗಂಧಮಾಲ್ಯಾದಿಸಂಯುತೈಃ।**
**ಪೂಜಯಿತ್ವಾ ದ್ವಿಜಾಗ್ರ್ಯಾಣಾಂ ದದ್ಯಾಚ್ಚಾಚಮನಂ ತತಃ॥** 42

**ಪಿತೃಭ್ಯಃ ಪ್ರಥಮಂ ಭಕ್ತ್ಯಾ ತನ್ಮನಸ್ಕೋ ನರೇಶ್ವರ।**
**ಸುಸ್ವಧೇತ್ಯಾಶಿಷಾ ಯುಕ್ತಾಂ ದದ್ಯಾತ್ ಶಕ್ತ್ಯಾ ಚ ದಕ್ಷಿಣಾಮ್॥**

---

ನೆಲದ ಮೇಲೆ ಪಿಂಡಗಳನ್ನು ಹಾಕತಕ್ಕದ್ದು. ತನ್ನ ಪಿತೃವರ್ಗದವರಿಗೆ ತಿಲಮಿಶ್ರ ಜಲದಿಂದ ಪಿತೃತೀರ್ಥದ ಮೂಲಕ ತರ್ಪಣವನ್ನೀಯಬೇಕು. ಹಾಗೆಯೇ ಮಾತಾಮಹಾದಿಗಳಿಗೂ ಪಿಂಡಗಳನ್ನೂ ತರ್ಪಣಗಳನ್ನೂ ಕೊಡತಕ್ಕದ್ದು (38-39). ದಕ್ಷಿಣಾಗ್ರವಾಗಿ ಹಾಸಿದ ದರ್ಭೆಗಳ ಮೇಲೆ ಪುಷ್ಪಧೂಪಾದಿಗಳಿಂದ ಅರ್ಚಿಸಿ ಉಚ್ಛಿಷ್ಟದ ಬಳಿಯಲ್ಲಿ ಮೊದಲು ತನ್ನ ತಂದೆಗೆ ಪಿಂಡವನ್ನು ಹಾಕಬೇಕು. ಅನಂತರ ಪಿತಾಮಹನಿಗೂ ಪ್ರಪಿತಾ ಮಹನಿಗೂ ಬೇರೆ ಬೇರೆ ಪಿಂಡವನ್ನು ಹಾಕಬೇಕು. ಆಮೇಲೆ ಕೈಗೆ ಅಂಟಿದ ಅನ್ನವನ್ನು ದರ್ಭೆಗಳ ಬುಡದಲ್ಲಿ ತೀಡುತ್ತ (ಇದರಿಂದ ಲೇಪಭೋಜಿ ಗಳಾದ ಚತುರ್ಥಾದಿ ಪಿತೃಗಳು ಸಂತೃಪ್ತಿಯನ್ನೈದಲಿ) ಎಂದು ಅವರನ್ನು ಸಂತೃಪ್ತಿಗೊಳಿಸಬೇಕು (40-41). ಹೀಗೆಯೇ ಗಂಧಮಾಲ್ಯಾದಿಗಳಿಂದ ಅರ್ಚಿತಗಳಾದ ಪಿಂಡಗಳನ್ನು ಮಾತಾಮಹಾದಿಗಳಿಗೆ ಅರ್ಪಿಸಿ, ಬ್ರಾಹ್ಮಣರಿಗೆ ಆಚಮನವನ್ನು ಕೊಡಬೇಕು. ರಾಜ-ಸಗರ, ಭಕ್ತಿಯಿಂದ ತನ್ಮಯನಾಗಿ ಮೊದಲು ಪಿತೃಗಳಿಗೆ ಅವರಿಂದ 'ಸುಸ್ವಧಾ' ಎಂದು ಆಶೀರ್ವಾದವನ್ನು ಸ್ವೀಕರಿಸುತ್ತ, ಯಥಾಶಕ್ತಿಯಾಗಿ ದಕ್ಷಿಣೆಯನ್ನು ಕೊಡಬೇಕು (42-43). ಪಿತೃಗಳಿಗೆ ದಕ್ಷಿಣೆಯನ್ನು ಕೊಟ್ಟಮೇಲೆ ವಿಶ್ವೇ

**ದತ್ತ್ವಾ ಚ ದಕ್ಷಿಣಂ ತೇಭ್ಯೋ ವಾಚಯೇದ್ವೈಶ್ವದೇವಿಕಾನ್।**
**ಪ್ರೀಯಂತಾಮಿಹ ಯೇ ವಿಶ್ವೇದೇವಾಸ್ತೇನ ಇತೀರಯೇತ್॥ 44**

**ತಥೇತಿ ಚೋಕ್ತೇ ತೈರ್ವಿಪ್ರೈಃ ಪ್ರಾರ್ಥನೀಯಾಸ್ತಥಾಶಿಷಃ।**
**ಪಶ್ಚಾದ್ವಿಸರ್ಜಯೇದ್ದೇವಾನ್ ಪೂರ್ವಂ ಪಿತ್ರ್ಯಾನ್ಮಹೀಪತೇ॥ 45**

**ಮಾತಾಮಹಾನಾಮಪ್ಯೇವಂ ಸಹ ದೇವೈಃ ಕ್ರಮಃ ಸ್ಮೃತಃ।**
**ಭೋಜನೇ ಚ ಸ್ವಶಕ್ತ್ಯಾ ಚ ದಾನೇ ತದ್ವದ್ವಿಸರ್ಜನೇ॥ 46**

**ಆಪಾದಶೌಚನಾತ್ಪೂರ್ವಂ ಕುರ್ಯಾದ್ದೇವದ್ವಿಜನ್ಮಸು।**
**ವಿಸರ್ಜನಂ ತು ಪ್ರಥಮಂ ಪೈತ್ರಮಾತಾಮಹೇಷು ವೈ॥ 47**

**ವಿಸರ್ಜಯೇತ್ ಪ್ರೀತಿವಚಸ್ಸಮ್ಮಾನ್ಯಾಭ್ಯರ್ಥಿತಾಂಸ್ತತಃ।**
**ನಿವರ್ತೇತಾಭ್ಯನುಜ್ಞಾತ ಆದ್ವಾರಂ ತಾನನುವ್ರಜೇತ್॥ 48**

**ತತಸ್ತು ವೈಶ್ವದೇವಾಖ್ಯಂ ಕುರ್ಯಾನ್ನಿತ್ಯಕ್ರಿಯಾಂ ಬುಧಃ।**
**ಭುಂಜ್ಯಾಚ್ಚ ಸಮಂ ಪೂಜ್ಯಭೃತ್ಯಬಂಧುಭಿರಾತ್ಮನಃ॥ 49**

---

ದೇವರ ಬಳಿಗೆ ಹೋಗಿ ದಕ್ಷಿಣೆಯನ್ನಿತ್ತು ವಿಶ್ವೇದೇವರು ಸಂಪ್ರೀತರಾಗಲಿ ಎಂದು ಹೇಳತಕ್ಕದ್ದು. ಅವರು 'ತಥಾಸ್ತು' ಎಂದು ಹೇಳಿದ ಮೇಲೆ ಆಶೀರ್ವದಿಸಬೇಕೆಂದು ಪ್ರಾರ್ಥಿಸಿಕೊಂಡು, ಮೊದಲು ಪಿತೃಗಳನ್ನೂ ಆಮೇಲೆ ವಿಶ್ವೇದೇವರನ್ನು ವಿಸರ್ಜಿಸಬೇಕು (44-45). ವಿಶ್ವೇದೇವಸಹಿತವಾದ ಮಾತಾಮಹಾದಿಶ್ರಾದ್ಧದಲ್ಲಿಯೂ ಭೋಜನ ದಕ್ಷಿಣಾದಾನ ವಿಸರ್ಜನೆಗಳ ವಿಷಯದಲ್ಲಿ ಇದೇ ಕ್ರಮವು ವಿಹಿತವಾಗಿದೆ (46). ಪಿತೃವರ್ಗ ಮತ್ತು ಮಾತಾಮಹಾವರ್ಗಗಳ ಶ್ರಾದ್ಧದಲ್ಲಿ ಬ್ರಾಹ್ಮಣರ ಕಾಲು ತೊಳೆಯುವುದರಿಂದ ಹಿಡಿದು ಎಲ್ಲ ವಿಧಿಗಳನ್ನೂ ಮೊದಲು ವಿಶ್ವೇದೇವರಿಗೂ, ವಿಸರ್ಜನವನ್ನು ಮಾತ್ರ ಪಿತೃವರ್ಗಮಾತಾಮಹವರ್ಗದವರಿಗೆ ಮೊದಲೂ ಮಾಡತಕ್ಕದ್ದು (47). ಅನಂತರ ಒಳ್ಳೆಯ ಮಾತುಗಳಿಂದ ಆದರಿಸಿ ನಿಮಂತ್ರಿತ ಬ್ರಾಹ್ಮಣರನ್ನು ಕಳಿಸುತ್ತ ಮನೆಯ ಬಾಗಿಲವರೆಗೆ ಅವರ ಹಿಂದೆ ಹೋಗಬೇಕು. ಅವರ ಅನುಜ್ಞೆಯಿಂದ ಹಿಂದಿರುಗಬೇಕು (48). ತರುವಾಯ ವಿದ್ವಾಂಸನಾದವನು ವೈಶ್ವದೇವವೆಂಬ ನಿತ್ಯಕರ್ಮ

**ಏವಂ ಶ್ರಾದ್ಧಂ ಬುಧಃ ಕುರ್ಯಾತ್ ಪಿತ್ರ್ಯಂ ಮಾತಾಮಹಂ ತಥಾ।**
**ಶ್ರಾದ್ಧೈರಾಪ್ಯಾಯಿತಾ ದದ್ಯುಸ್ಸರ್ವಾನ್ ಕಾಮಾನ್ ಪಿತಾಮಹಾಃ॥**

**ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ।**
**ರಜತಸ್ಯ ತಥಾ ದಾನಂ ಕಥಾ ಸಂಕೀರ್ತನಾದಿಕಮ್॥** 51

**ವರ್ಜ್ಯಾನಿ ಕುರ್ವತಾ ಶ್ರಾದ್ಧಂ ಕ್ರೋಧೋಽಧ್ವಗಮನಂ ತ್ವರಾ।**
**ಭೋಕ್ತುರಪ್ಯತ್ರ ರಾಜೇಂದ್ರ ತ್ರಯಮೇತನ್ನ ಶಸ್ಯತೇ॥** 52

**ವಿಶ್ವೇದೇವಾಸ್ಸಪಿತರಸ್ತಥಾ ಮಾತಾಮಹಾ ನೃಪ।**
**ಕುಲಂ ಚಾಪ್ಯಾಯತೇ ಪುಂಸಾಂ ಸರ್ವಂ ಶ್ರಾದ್ಧಂ ಪ್ರಕುರ್ವತಾಮ್॥** 53

---

ವನ್ನು ಆಚರಿಸಿ, ತನಗೆ ಪೂಜ್ಯರಾದವರಿಂದಲೂ ಭೃತ್ಯರಿಂದಲೂ ಬಂಧುಗಳಿಂದಲೂ ಸಹಿತನಾಗಿ ಭೋಜನಮಾಡತಕ್ಕದ್ದು (49). ಈ ಪ್ರಕಾರವಾಗಿ ಬುದ್ಧಿಶಾಲಿಯು ಪಿತೃವಿನ ಮತ್ತು ಮಾತಾಮಹನ ಶ್ರಾದ್ಧವನ್ನು ಮಾಡತಕ್ಕದ್ದು. ಶ್ರಾದ್ಧದಿಂದ ಸಂತೃಪ್ತರಾದ ಪಿತೃದೇವತೆಗಳು ಸಮಸ್ತಕಾಮನೆಗಳನ್ನೂ ಪೂರ್ಣಮಾಡುತ್ತಾರೆ (50). ಶ್ರಾದ್ಧದಲ್ಲಿ ಈ ಮೂರು ಪವಿತ್ರವಾದವುಗಳು. ಯಾವುವೆಂದರೆ—ಮಗಳ ಮಗ, ಕುತಪಕಾಲ* ಮತ್ತು ಎಳ್ಳು. ಅಲ್ಲದೆ ರಜತದಾನ ಮತ್ತು ರಜತದ ವಿಷಯದಲ್ಲಿ ಸಂಭಾಷಣೆ, ದರ್ಶನ ಮೊದಲಾದದ್ದೂ ಪವಿತ್ರವೇ§ (51). ಶ್ರಾದ್ಧವನ್ನು ಮಾಡತಕ್ಕ ಯಜಮಾನನಿಗೆ ಕ್ರೋಧ, ಮಾರ್ಗಗಮನ, ತ್ವರೆ—ಇವು ಮೂರು ವರ್ಜ್ಯಗಳು. ಶ್ರಾದ್ಧಭೋಜನ ಮಾಡತಕ್ಕವನಿಗೂ ಈ ಮೂರು ಪ್ರಶಸ್ತವಲ್ಲ (52). ವಿಶ್ವೇದೇವರೂ, ಪಿತೃವರ್ಗದವರೂ, ಮಾತಾಮಹಾದಿಗಳೂ, ಶ್ರಾದ್ಧಮಾಡತಕ್ಕವರ ವಂಶದವರೂ ಶ್ರಾದ್ಧದಿಂದ

---

* ಕುತಪಕಾಲ—ಒಂದು ಹಗಲಿಗೆ ಹದಿನೈದು ಮುಹೂರ್ತಗಳು, ಅದರಲ್ಲಿ ಎಂಟನೆಯ ಮುಹೂರ್ತ.

§ ಪವಿತ್ರಂ ರಾಜತಂ ತತ್ರ ಪಿತೄಣಾಂ ಪಾತ್ರಮುಚ್ಯತೇ। ರಜತಸ್ಯ ಕಥಾ ದಾನಂ ದರ್ಶನಂ ನಾಮಚೋಚ್ಯತೇ। (ಮತ್ಸ್ಯ ಮತ್ತು ವಾಯುಪುರಾಣ)

**ಸೋಮಾಧಾರಃ ಪಿತೃಗಣೋ ಯೋಗಾಧಾರಶ್ಚ ಚಂದ್ರಮಾಃ।**
**ಶ್ರಾದ್ಧೇ ಯೋಗಿನಿಯೋಗಸ್ತು ತಸ್ಮಾದ್ ಭೂಪಾಲ ಶಸ್ಯತೇ॥ 54**

**ಸಹಸ್ರಸ್ಯಾಪಿ ವಿಪ್ರಾಣಾಂ ಯೋಗೀ ಚೇತ್ಪುರತಃ ಸ್ಥಿತಃ।**
**ಸರ್ವಾನ್ ಭೋಕ್ತೃಂಸ್ತಾರಯತಿ ಯಜಮಾನಂ ತಥಾ ನೃಪ॥ 55**

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಪಂಚದಶೋಽಧ್ಯಾಯಃ

---

ಸಂಪ್ರೀತರಾಗುತ್ತಾರೆ. ಪಿತೃಗಣಕ್ಕೆ ಚಂದ್ರನು ಆಧಾರ. ಚಂದ್ರನಿಗೆ ಯೋಗವು ಆಧಾರ. ಆದ್ದರಿಂದ ಶ್ರಾದ್ಧದಲ್ಲಿ ಯೋಗಿಗಳನ್ನು ನಿಮಂತ್ರಿಸುವುದು ಪ್ರಶಸ್ತವಾದದ್ದು* (53-54). ಶ್ರಾದ್ಧಭೋಜಿಗಳಾದ ಬ್ರಾಹ್ಮಣರ ಎದುರಿನಲ್ಲಿ ಒಬ್ಬ ಯೋಗಿ ಇದ್ದರೆ ಸಾಕು, ಆತನು ಆ ಎಲ್ಲ ಬ್ರಾಹ್ಮಣರನ್ನೂ ಶ್ರಾದ್ಧಕರ್ತೃವಾದ ಯಜಮಾನನನ್ನೂ ಉದ್ಧಾರ ಮಾಡುತ್ತಾನೆ" (55).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿನೈದನೆಯ ಅಧ್ಯಾಯ ಮುಗಿಯಿತು.



---

* ಪಿತೃಗಣಗಳ ಯೋಗಬಲದಿಂದ ಚಂದ್ರನು ಪುಷ್ಟನಾಗುತ್ತಾನೆ. ಯೋಗಿಗಳು ಯೋಗಬಲದಿಂದ ದೇಹಸ್ಥ ಚಂದ್ರನನ್ನು ಪೋಷಿಸುತ್ತಾರೆ.

## ಷೋಡಶೋಽಧ್ಯಾಯಃ

*ಔರ್ವ ಉವಾಚ:*

**ಹವಿಷ್ಯಮತ್ಸ್ಯಮಾಂಸೈಸ್ತು ಶಶಸ್ಯ ನಕುಲಸ್ಯ ಚ।**
**ಸೌಕರಚ್ಛಾಗಲೈಣೇಯರೌರವೈರ್ಗವಯೇನ ಚ॥** 1

**ಔರಭ್ರಗವ್ಯೈಶ್ಚ ತಥಾ ಮಾಸವೃದ್ಧ್ಯಾ ಪಿತಾಮಹಾಃ।**
**ಪ್ರಯಾಂತಿ ತೃಪ್ತಿಂ ಮಾಂಸೈಸ್ತು ನಿತ್ಯಂ ವಾರ್ಧ್ರೀಣಸಾಮಿಷೈಃ॥** 2

**ಖಡ್ಗಮಾಂಸಮತೀವಾತ್ರ ಕಾಲಶಾಕಂ ತಥಾ ಮಧು।**
**ಶಸ್ತಾನಿ ಕರ್ಮಣ್ಯತ್ಯಂತತೃಪ್ತಿದಾನಿ ನರೇಶ್ವರ॥** 3

---

## ಅಧ್ಯಾಯ 16

### ಶ್ರಾದ್ಧಕರ್ಮದಲ್ಲಿ ವಿಹಿತ ಮತ್ತು ನಿಷಿದ್ಧವಸ್ತುಗಳ ವಿಚಾರ

ಪರಾಶರರು ಹೇಳಿದರು: ಮತ್ತೆ ಔರ್ವನು ಹೇಳಿದ್ದೇನೆಂದರೆ, "ವ್ರೀಹ್ಯಾದಿಹವಿಷ್ಯಾನ್ನ, ಮತ್ಸ್ಯ ಮತ್ತು ಮೊಲ, ಮುಂಗಸಿ, ಹಂದಿ, ಮೇಕೆ, ಜಿಂಕೆ, ರುರು ಎಂಬ ಜಿಂಕೆ, ಗವಯ, ಕುರಿ, ಗೋವು—ಇವುಗಳ ಮಾಂಸದಿಂದ ಪಿತೃಗಳು ಕ್ರಮವಾಗಿ ಒಂದೊಂದು ತಿಂಗಳು ಹೆಚ್ಚು (ಹವಿಷ್ಯಾನ್ನದಿಂದ ಒಂದು ತಿಂಗಳಾದರೆ ಮತ್ಸ್ಯದಿಂದ ಎರಡು ತಿಂಗಳು—ಹೀಗೆ) ತೃಪ್ತಿಯನ್ನೈದುತ್ತಾರೆ. ವಾಧ್ರೀಣಸಕವೆಂಬ ಪಕ್ಷಿಯ ಮಾಂಸದಿಂದ ನಿತ್ಯತೃಪ್ತಿಯನ್ನೈದುತ್ತಾರೆ* (1-2). ಖಡ್ಗಮೃಗದ ಮಾಂಸ, ಕಾಲಶಾಕವೆಂಬ ಸಸ್ಯ, ಜೇನುತುಪ್ಪ—ಇವು ಶ್ರಾದ್ಧಕರ್ಮದಲ್ಲಿ ಪ್ರಶಸ್ತಗಳೂ ಪಿತೃಗಳಿಗೆ

---

* ಮಾಂಸದಿಂದ ಶ್ರಾದ್ಧವನ್ನು ಮಾಡತಕ್ಕ ಪದ್ಧತಿ ಒಂದು ಕಾಲದಲ್ಲಿ ಇದ್ದಿರಬಹುದು. ಆಗ ದ್ವಿಜರು ಮಾಂಸಾಹಾರಿಗಳಾಗಿದ್ದರು—ಎಂದು ತಿಳಿಯಬೇಕಾಗುತ್ತದೆ. ಕಲಿಯುಗದಲ್ಲಿ ಇದು ಸಂಪೂರ್ಣವಾಗಿ ನಿಷಿದ್ಧವಾಗಿದೆ. ಶ್ರೀಮದ್ಭಾಗವತದಲ್ಲಿ ಮಾಂಸಾಹಾರವನ್ನೂ ಅದರಿಂದ ಶ್ರಾದ್ಧವನ್ನೂ ನಿಂದಿಸಲಾಗಿದೆ (ನೋಡಿ: ಭಾಗ. ಸ್ಕಂ. 7, ಶ್ಲೋ. 7-10 ಮತ್ತು ನೋಡಿ: ಮನು, 5-45 ರಿಂದ 56).

**ಗಯಾಮುಪೇತ್ಯ ಯಃ ಶ್ರಾದ್ಧಂ ಕರೋತಿ ಪೃಥಿವೀಪತೇ।**
**ಸಫಲಂ ತಸ್ಯ ತಜ್ಜನ್ಮ ಜಾಯತೇ ಪಿತೃತುಷ್ಟಿದಮ್॥** 4

**ಪ್ರಶಾಂತಿಕಾಸ್ಸನೀವಾರಾಶ್ಶ್ಯಾಮಾಕಾ ದ್ವಿವಿಧಾಸ್ತಥಾ।**
**ವನೌಷಧೀ ಪ್ರಧಾನಾಸ್ತು ಶ್ರಾದ್ಧಾರ್ಹಾಃ ಪುರುಷರ್ಷಭ॥** 5

**ಯವಾಃ ಪ್ರಿಯಂಗವೋ ಮುದ್ಗಾ**
**ಗೋಧೂಮಾ ವ್ರೀಹಯಸ್ತಿಲಾಃ।**
**ನಿಷ್ಪಾವಾಃ ಕೋವಿದಾರಾಶ್ಚ ಸರ್ಷಪಾಶ್ಚಾತ್ರ ಶೋಭನಾಃ॥** 6

**ಅಕೃತಾಗ್ರಯಣಂ ಯಚ್ಚ ಧಾನ್ಯಜಾತಂ ನರೇಶ್ವರ।**
**ರಾಜಮಾಷಾನಣೂಂಶ್ಚೈವ ಮಸೂರಾಂಶ್ಚ ವಿಸರ್ಜಯೇತ್॥** 7

**ಅಲಾಬುಂ ಗೃಂಜನಂ ಚೈವ ಪಲಾಂಡುಂ ಪಿಂಡಮೂಲಕಮ್।**
**ಗಾಂಧಾರಕಕರಂಬಾದಿಲವಣಾನ್ಯೌಷರಾಣಿ ಚ॥** 8

---

ತೃಪ್ತಿಕರಗಳೂ ಆಗಿವೆ. ರಾಜ-ಸಗರ, ಗಯೆಗೆ ಹೋಗಿ ಯಾವನು ಶ್ರಾದ್ಧವನ್ನು ಮಾಡುತ್ತಾನೋ ಆತನ ಜನ್ಮ ಸಫಲವಾಗುತ್ತದೆ. ಅಲ್ಲದೆ ಆ ಶ್ರಾದ್ಧವು ಪಿತೃಗಳಿಗೆ ತೃಪ್ತಿಯನ್ನು ಕೊಡುತ್ತದೆ (3-4). ಕಾಡುಬತ್ತದಂತಿರುವ ಪ್ರಶಾಂತಿಕ ಎಂಬ ಧಾನ್ಯ, ನವಣೆ, ಕಪ್ಪು ಮತ್ತು ಬಿಳಿಯದೆಂಬ ಎರಡು ವಿಧವಾದ ಸಾಮೆ, ಪ್ರಧಾನವಾದ ವನೌಷಧಿಗಳು ಶ್ರಾದ್ಧಾರ್ಹವಾದವುಗಳು (5). ಯವ, ಪ್ರಿಯಂಗು, ಹೆಸರು, ಗೋಧಿ, ಅಕ್ಕಿ, ಎಳ್ಳು, ಅವರೆ, ಕಂಚುವಾಳ, ಸಾಸಿವೆ—ಇವು ಉತ್ತಮವಾದವು. ಯಾವ ನವಧಾನ್ಯದಿಂದ ಯಜ್ಞವನ್ನು ಮಾಡಿಲ್ಲವೋ ಅಂತಹ ನವಧಾನ್ಯವನ್ನೂ ರಾಜಮಾಷವೆಂಬ ದಪ್ಪಕಾಳಿನ ಉದ್ದನ್ನೂ, ಜೀರಿಗೆ ಸಂಬಾರ ಎಂಬ ಅಕ್ಕಿಯನ್ನೂ, ಮಸೂರವೆಂಬ ಧಾನ್ಯವನ್ನೂ ಶ್ರಾದ್ಧದಲ್ಲಿ ವರ್ಜಿಸಬೇಕು (6-7). ಸೋರೆಕಾಯಿ, ಬೆಳ್ಳುಳ್ಳಿ, ನೀರುಳ್ಳಿ, ಮೂಲಂಗಿಯಂತೆ ಇರುವ ಪಿಂಡಮೂಲಕವೆಂಬ ಗಡ್ಡೆ, ಗಾಂಧಾರವೆಂಬ ಅಕ್ಕಿ, ಹುರಿಹಿಟ್ಟು, ನೆಲದಲ್ಲಿ ಸಿಕ್ಕುವ ಉಪ್ಪು—ಇವು ಶ್ರಾದ್ಧದಲ್ಲಿ ತ್ಯಾಜ್ಯವಾದವು. ಶಾಸ್ತ್ರವಾಕ್ಯವು ಇವನ್ನು ಪ್ರಶಸ್ತಗಳೆನ್ನುವು

**ಆರಕ್ತಾಶ್ಚೈವ ನಿರ್ಯಾಸಾಃ ಪ್ರತ್ಯಕ್ಷಲವಣಾನಿ ಚ।**
**ವರ್ಜ್ಯಾನ್ಯೇತಾನಿ ವೈ ಶ್ರಾದ್ಧೇ ಯಚ್ಚ ವಾಚಾ ನ ಶಸ್ಯತೇ॥** 9

**ನಕ್ತಾಹೃತಮನುಚ್ಛಿಷ್ಟಂ ತೃಪ್ಯತೇ ನ ಚ ಯತ್ರ ಗೌಃ।**
**ದುರ್ಗಂಧಿ ಫೇನಿಲಂ ಚಾಂಬು ಶ್ರಾದ್ಧಯೋಗ್ಯಂ ನ ಪಾರ್ಥಿವ॥**

**ಕ್ಷೀರಮೇಕಶಫಾನಾಂ ಯದೌಷ್ಟ್ರಮಾವಿಕಮೇವ ಚ।**
**ಮಾರ್ಗಂ ಚ ಮಾಹಿಷಂ ಚೈವ ವರ್ಜಯೇತ್ ಶ್ರಾದ್ಧಕರ್ಮಣಿ॥**

**ಷಂಡಾಪವಿದ್ಧಚಾಂಡಾಲಪಾಪಿಪಾಷಂಡಿರೋಗಿಭಿಃ।**
**ಕೃಕವಾಕುಶ್ವನಗ್ನೈಶ್ಚ ವಾನರಗ್ರಾಮಸೂಕರೈಃ॥** 12

**ಉದಕ್ಯಾಸೂತಿಕಾಶೌಚಿಮೃತಹಾರೈಶ್ಚ ವೀಕ್ಷಿತೇ।**
**ಶ್ರಾದ್ಧೇ ಸುರಾ ನ ಪಿತರೋ ಭುಂಜತೇ ಪುರುಷರ್ಷಭ॥** 13

**ತಸ್ಮಾತ್ಪರಿಶ್ರಿತೇ ಕುರ್ಯಾತ್ ಶ್ರಾದ್ಧಂ ಶ್ರದ್ಧಾಸಮನ್ವಿತಃ।**
**ಉರ್ವ್ಯಾಂ ಚ ತಿಲವಿಕ್ಷೇಪಾದ್ಯಾತುಧಾನಾನ್ನಿವಾರಯೇತ್॥** 14

---

ದಿಲ್ಲ (8-9). ಸಗರ, ರಾತ್ರಿಯಲ್ಲಿ ತಂದಿಟ್ಟ ನೀರು, ಯಾರೂ ಬಳಸದೆ ಇರುವ ನೀರು, ಗೋವು ತೃಪ್ತವಾಗದಷ್ಟಿರುವ ಅಲ್ಪಜಲಾಶಯದ ನೀರು, ಹಾಗೆಯೇ ದುರ್ಗಂಧಿಯೂ ನೊರೆಯಿಂದ ಕೂಡಿದ್ದೂ ಆದ ನೀರು ಶ್ರಾದ್ಧಕ್ಕೆ ಯೋಗ್ಯವಾದ್ದಲ್ಲ (10). ಒಂದೇ ಗೊರಸು ಇರುವ ಕುದುರೆ ಮುಂತಾದ್ದರ ಹಾಲೂ ಒಂಟೆ, ಕುರಿ, ಜಿಂಕೆ, ಎಮ್ಮೆಗಳ ಹಾಲೂ ಶ್ರಾದ್ಧ ಕರ್ಮದಲ್ಲಿ ವರ್ಜ್ಯವಾದವುಗಳು (11). ಅಲ್ಲದೆ ನಪುಂಸಕ, ಸಜ್ಜನ ಬಹಿಷ್ಕೃತ, ಚಾಂಡಾಲ, ಪಾಪಿ, ವೇದನಿಂದಕನಾದ ಪಾಷಂಡಿ, ರೋಗಿ, ಕೋಳಿ, ನಾಯಿ, ನಗ್ನ (ವೈದಿಕಕರ್ಮಗಳನ್ನು ತ್ಯಾಗಮಾಡಿದವನು), ಕಪಿ, ಹಂದಿ, ರಜಸ್ವಲೆ, ಪ್ರಸವಿಸಿದವಳು, ಜಾತಾಶೌಚಮೃತಾಶೌಚಗಳುಳ್ಳ ವನು, ಹೆಣಹೊತ್ತು ಜೀವಿಸತಕ್ಕವನು—ಇವರು ನೋಡಿದರೆ ಆ ಶ್ರಾದ್ಧದಲ್ಲಿ ದೇವತೆಗಳಾಗಲಿ ಪಿತೃಗಳಾಗಲಿ ತಮ್ಮ ಭಾಗವನ್ನು ಸ್ವೀಕರಿಸು ವುದಿಲ್ಲ (12-13). ಆದ್ದರಿಂದ ಸುತ್ತಲೂ ಮರೆಯಾಗಿರುವ ಪ್ರದೇಶದಲ್ಲಿ ಶ್ರದ್ಧಾಸಮನ್ವಿತನಾಗಿ ಶ್ರಾದ್ಧಕರ್ಮವನ್ನಾಚರಿಸಬೇಕು. ಭೂತಳದಲ್ಲಿ

**ನಖಾದಿನಾ ಚೋಪಪನ್ನಂ ಕೇಶಕೀಟಾದಿಭಿರ್ನೃಪ।**
**ನ ಚೈವಾಭಿಷವೈರ್ಮಿಶ್ರಮನ್ನಂ ಪರ್ಯುಷಿತಂ ತಥಾ॥** 15

**ಶ್ರದ್ಧಾಸಮನ್ವಿತೈರ್ದತ್ತಂ ಪಿತೃಭ್ಯೋ ನಾಮಗೋತ್ರತಃ।**
**ಯದಾಹಾರಾಸ್ತು ತೇ ಜಾತಾಸ್ತದಾಹಾರತ್ವಮೇತಿ ತತ್॥** 16

**ಶ್ರೂಯತೇ ಚಾಪಿ ಪಿತೃಭಿರ್ಗೀತಾ ಗಾಥಾ ಮಹೀಪತೇ।**
**ಇಕ್ಷ್ವಾಕೋರ್ಮನುಪುತ್ರಸ್ಯ ಕಲಾಪೋಪವನೇ ಪುರಾ॥** 17

**ಅಪಿ ನಸ್ತೇ ಭವಿಷ್ಯಂತಿ ಕುಲೇ ಸನ್ಮಾರ್ಗಶೀಲಿನಃ।**
**ಗಯಾಮುಪೇತ್ಯ ಯೇ ಪಿಂಡಾನ್ ದಾಸ್ಯಂತ್ಯಸ್ಮಾಕಮಾದರಾತ್॥** 18

**ಅಪಿ ನಃ ಸ ಕುಲೇ ಜಾಯಾದ್**
**ಯೋ ನೋ ದದ್ಯಾತ್ ತ್ರಯೋದಶೀಮ್।**
**ಪಾಯಸಂ ಮಧುಸರ್ಪಿರ್ಭ್ಯಾಂ ವರ್ಷಾಸು ಚ ಮಘಾಸು ಚ॥** 19

---

ಎಳ್ಳನ್ನು ಹರಡಿ ಅಸುರರನ್ನು ನಿವಾರಿಸಬೇಕು (14). ಉಗುರು, ಕೂದಲು, ಕೀಟ—ಮೊದಲಾದ್ದರಿಂದ ಕೂಡಿದ್ದನ್ನೂ ಹಿಂಡಿ ತೆಗೆದ ರಸದಿಂದ ಮಿಶ್ರವಾದ್ದನ್ನೂ ಹಿಂದಿನ ದಿನ ಮಾಡಿದ್ದನ್ನೂ ವಿಶ್ವೇದೇವರೂ ಪಿತೃಗಳೂ ಸೇವಿಸುವುದಿಲ್ಲ (15). ಶ್ರದ್ಧಾಯುಕ್ತರಾಗಿ ನಾಮಗೋತ್ರಗಳನ್ನುಚ್ಚರಿಸಿ ಪಿತೃಗಳಿಗೆ ಅರ್ಪಿಸಿದ ಆಹಾರವು, ಪಿತೃಗಳ ಆ ಸಮಯದಲ್ಲಿ ಯಾವ ಆಹಾರದವರಾಗಿರುತ್ತಾರೋ* ಅಂತಹ ಆಹಾರವಾಗಿ ಅವರಿಗೆ ಸೇರುತ್ತದೆ (16). ಮಹೀಪತಿ-ಸಗರ, ಈ ವಿಷಯವಾಗಿ ಹಿಂದೆ ಮನುಪುತ್ರನಾದ ಇಕ್ಷ್ವಾಕುವಿನ ಕಲಾಪ ಎಂಬ ಉಪವನದಲ್ಲಿ ಪಿತೃಗಳು ಗಾಥೆಯೊಂದನ್ನು ಹಾಡಿದರೆಂದು ಕೇಳಿಬಂದಿದೆ, ಏನೆಂದರೆ (17). "ಗಯೆಗೆ ಹೋಗಿ ಆದರದಿಂದ ನಮಗೆ ಪಿಂಡವನ್ನು ಹಾಕತಕ್ಕ ಸನ್ಮಾರ್ಗಶೀಲರು ನಮ್ಮ ವಂಶದಲ್ಲಿ ಹುಟ್ಟುವರೆ! ವರ್ಷಾಕಾಲದಲ್ಲಿ (ಭಾದ್ರಪದಮಾಸದಲ್ಲಿ) ಮಘಾನಕ್ಷತ್ರಯುಕ್ತವಾದ ತ್ರಯೋದಶಿಯ ದಿನ ಜೇನುತುಪ್ಪ ಮತ್ತು ಘೃತಗಳಿಂದ

---

* ಪಿತೃಗಳು ಮನುಷ್ಯರಾಗಿ ಜನ್ಮ ತಳೆದಿದ್ದರೆ ಅನ್ನಾದಿರೂಪವಾಗಿಯೂ ಪಶುಗಳಾಗಿ ಹುಟ್ಟಿದ್ದರೆ ತೃಣಾದಿರೂಪವಾಗಿಯೂ ಅವರಿಗೆ ಸೇರುತ್ತದೆ.

**ಗೌರೀಂ ವಾಪ್ಯುದ್ವಹೇತ್ಕನ್ಯಾಂ ನೀಲಂ ವಾ ವೃಕ್ಷಮುತ್ಸೃಜೇತ್।**
**ಯಜೇತ ವಾಶ್ವಮೇಧೇನ ವಿಧಿವದ್ದಕ್ಷಿಣಾವತಾ॥** 20

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಷೋಡಶೋಽಧ್ಯಾಯಃ

---

ಕೂಡಿದ ಪಾಯಸವನ್ನು ನಮಗೆ ಕೊಡತಕ್ಕವನು ನಮ್ಮ ಕುಲದಲ್ಲಿ ಹುಟ್ಟುವನೆ! (18-19). ಗೌರಿಯಾದ* ಕನ್ಯೆಯನ್ನು ದಾನಮಾಡಿ ಮದುವೆ ಮಾಡತಕ್ಕವನೂ ನೀಲವೃಷೋತ್ಸರ್ಗ§ವನ್ನು ಮಾಡತಕ್ಕವನೂ ಅಥವಾ ದಕ್ಷಿಣಾಯುಕ್ತವಾಗಿ ಅಶ್ವಮೇಧಯಾಗ ಮಾಡತಕ್ಕವನೂ ನಮ್ಮ ಕುಲದಲ್ಲಿ ಜನಿಸಿಯಾನೆ! (20)"

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿನಾರನೆಯ ಅಧ್ಯಾಯ ಮುಗಿಯಿತು.



---

* ಗೌರೀ–ಹತ್ತುವರ್ಷದ ಕನ್ಯೆ.

§ ಲೋಹಿತೋ ಯಸ್ತು ವರ್ಣೇನ ಮುಖೇ ಪುಚ್ಛೇ ಚ ಪಾಂಡುರಃ।
ಶ್ವೇತಃ ಖುರವಿಷಾಣಾಭ್ಯಾಂ ಸ ನೀಲೋ ವೃಷ ಉಚ್ಯತೇ॥

## ಸಪ್ತದಶೋऽಧ್ಯಾಯಃ

*ಶ್ರೀಪರಾಶರ ಉವಾಚ:*

**ಇತ್ಯಾಹ ಭಗವಾನೌರ್ವಸ್ಸಗರಾಯ ಮಹಾತ್ಮನೇ।**
**ಸದಾಚಾರಂ ಪುರಾ ಸಮ್ಯಙ್ಮೈತ್ರೇಯ ಪರಿಪೃಚ್ಛತೇ॥ 1**

**ಮಯಾಪ್ಯೇತದಶೇಷೇಣ ಕಥಿತಂ ಭವತೋ ದ್ವಿಜ।**
**ಸಮುಲ್ಲಂಘ್ಯ ಸದಾಚಾರಂ ಕಶ್ಚಿನ್ನಾಪ್ನೋತಿ ಶೋಭನಮ್॥ 2**

*ಶ್ರೀಮೈತ್ರೇಯ ಉವಾಚ:*

**ಷಂಡಾಪವಿದ್ಧಪ್ರಮುಖಾ ವಿದಿತಾ ಭಗವನ್ ಮಯಾ।**
**ಉದಕ್ಯಾದ್ಯಾಶ್ಚ ಮೇ ಸಮ್ಯಙ್ನಗ್ನಮಿಚ್ಛಾಮಿ ವೇದಿತುಮ್॥ 3**

---

## ಅಧ್ಯಾಯ 17

ನಗ್ನರು ಯಾರೆಂದು ಪ್ರಶ್ನೆ; ದೇವದಾನವ ಯುದ್ಧದಲ್ಲಿ ದೇವತೆಗಳ ಪರಾಜಯ; ದೇವತೆಗಳು ವಿಷ್ಣುವನ್ನು ಮರೆಹೋಗುವುದು; ಮಾಯಾಮೋಹದ ಸೃಷ್ಟಿ.

ಪರಾಶರರು ಹೇಳಿದರು: "ಮೈತ್ರೇಯ, ಮಹಾತ್ಮನಾದ ಸಗರನು ಸದಾಚಾರದ ವಿಷಯವಾಗಿ ಪ್ರಶ್ನೆ ಮಾಡಿದಾಗ ಭಗವಾನ್ ಔರ್ವಮುನಿಯು ಹಿಂದೆ ಹೇಳಿದಂತೆ ವಿವರಿಸಿ ಹೇಳಿದ್ದನು. ಅದನ್ನೇ ನಾನು ನಿನಗೆ ಹೇಳಿದ್ದೇನೆ. ಸದಾಚಾರವನ್ನು ಉಲ್ಲಂಘಿಸಿದರೆ ಯಾರಿಗೂ ಒಳ್ಳೆಯದಾಗುವುದಿಲ್ಲ" (1-2). ಆಗ ಮೈತ್ರೇಯರು "ಮುನಿಗಳೆ, ಷಂಡ (ನಪುಂಸಕ), ಅಪವಿದ್ಧ (ಸಜ್ಜನರಿಂದ ಬಹಿಷ್ಕೃತ)—ಮೊದಲಾದವರು ಯಾರೆಂಬುದು ನನಗೆ ಗೊತ್ತಿದೆ. ಉದಕೀ (ರಜಸ್ವಲೆ)—ಮೊದಲಾದ ಶಬ್ದಗಳೂ ಅರ್ಥವಾಗುತ್ತದೆ. ಆದರೆ 'ನಗ್ನ' ಎಂದು ಹೇಳಿದಿರಲ್ಲ, ಅವನು ಯಾರೆಂದು ತಿಳಿಯಲು ಬಯಸುತ್ತೇನೆ (3). ನಗ್ನ ಎಂದರೆ ಯಾರು? ಯಾವ ನಡತೆಯವನಿಗೆ ನಗ್ನನೆನ್ನುತ್ತಾರೆ. ನಗ್ನನ ಸ್ವರೂಪ

**ಕೋ ನಗ್ನಃ ಕಿಂಸಮಾಚಾರೋ ನಗ್ನಸಂಜ್ಞಾಂ ನರೋ ಲಭೇತ್।**
**ನಗ್ನಸ್ವರೂಪಮಿಚ್ಛಾಮಿ ಯಥಾವತ್ಕಥಿತಂ ತ್ವಯಾ।**
**ಶ್ರೋತುಂ ಧರ್ಮಭೃತಾಂ ಶ್ರೇಷ್ಠ ನ ಹ್ಯಸ್ತ್ಯವಿದಿತಂ ತವ॥ 4**

*ಶ್ರೀಪರಾಶರ ಉವಾಚ:*

**ಋಗ್ಯಜುಸ್ಸಾಮಸಂಜ್ಞೇಯಂ ತ್ರಯೀ ವರ್ಣಾವೃತಿರ್ದ್ವಿಜ।**
**ಏತಾಮುಜ್ಝತಿ ಯೋ ಮೋಹಾತ್ ಸ ನಗ್ನಃ ಪಾತಕೀ ದ್ವಿಜ॥ 5**

**ತ್ರಯೀ ಸಮಸ್ತವರ್ಣಾನಾಂ ದ್ವಿಜ ಸಂವರಣಂ ಯತಃ।**
**ನಗ್ನೋ ಭವತ್ಯುಜ್ಝಿತಾಯಾಮತಸ್ತಸ್ಯಾಂ ನ ಸಂಶಯಃ॥ 6**

**ಇದಂ ಚ ಶ್ರೂಯತಾಮನ್ಯದ್ಯದ್ಭೀಷ್ಮಾಯ ಮಹಾತ್ಮನೇ।**
**ಕಥಯಾಮಾಸ ಧರ್ಮಜ್ಞೋ ವಸಿಷ್ಠೋಽಸ್ಮತ್ಪಿತಾಮಹಃ॥ 7**

**ಮಯಾಪಿ ತಸ್ಯ ಗದತಃಶ್ರುತಮೇತನ್ಮಹಾತ್ಮನಃ।**
**ನಗ್ನಸಂಬಂಧಿ ಮೈತ್ರೇಯ ಯತ್ಪೃಷ್ಟೋಽಹಮಿಹ ತ್ವಯಾ॥ 8**

---

ವೇನೆಂದು ನೀವು ಹೇಳಬೇಕು. ಅದನ್ನು ತಿಳಿಯಲಪೇಕ್ಷಿಸುತ್ತೇನೆ. ನಿಮಗೆ ಗೊತ್ತಿಲ್ಲದ ವಿಷಯ ಯಾವುದೂ ಇಲ್ಲ" ಎಂದರು (4). ಆಗ ಪರಾಶರರು ಹೇಳಿದರು: ಋಗ್ವೇದ, ಯಜುರ್ವೇದ, ಸಾಮವೇದ—ಎಂಬ ತ್ರಯೀ ವೇದವು ಚತುರ್ವರ್ಣದವರಿಗೆ ಪ್ರಾವರಣರೂಪವಾದ ವಸ್ತ್ರದಂತಿದೆ. ಯಾವನು ಅಜ್ಞಾನದಿಂದ ಈ ವೇದದ ಆವರಣವನ್ನು ತ್ಯಜಿಸುತ್ತಾನೋ ಆ ಪಾತಕಿಗೆ ನಗ್ನ ಎಂದು ಹೆಸರು (5). ಈ ತ್ರಯೀ ಎಂಬುದು ಎಲ್ಲ ವರ್ಣದವರಿಗೂ ಸಂವರಣರೂಪವಾದದ್ದು. ಅದನ್ನು ತೆಗೆದೆಸೆದರೆ ಆತನು ನಿಸ್ಸಂಶಯವಾಗಿ ನಗ್ನ (ಬತ್ತಲೆ) ನಾಗುತ್ತಾನೆ. ಇನ್ನೊಂದು ಸಂಗತಿಯನ್ನು ಕೇಳು. ಧರ್ಮಜ್ಞರೂ ನನ್ನ ಪಿತಾಮಹರೂ ಆದ ವಸಿಷ್ಠಮುನಿಗಳು ಮಹಾತ್ಮನಾದ ಭೀಷ್ಮನಿಗೆ ಆ ವಿಚಾರವನ್ನು ಹೇಳಿದ್ದಾರೆ (6-7). ಆ ಮಹಾತ್ಮರು ನಗ್ನಸಂಬಂಧಿಯಾದ ವಿಚಾರವನ್ನು ಹೇಳುತ್ತಿದ್ದಾಗ ಅದನ್ನು ನಾನು ಕೇಳಿಸಿಕೊಂಡಿದ್ದೇನೆ. ಆ ವಿಷಯವನ್ನೇ ನೀನು ಈಗ ಕೇಳುತ್ತಿದ್ದೀಯೆ. ಹಿಂದೆ ದೇವಾಸುರರಿಗೆ ನೂರು ದಿವ್ಯವರ್ಷಗಳವರೆಗೆ ಯುದ್ಧ

**ದೇವಾಸುರಮಭೂದ್ಯುದ್ಧಂ ದಿವ್ಯಬ್ದಶತಂ ಪುರಾ।**
**ತಸ್ಮಿನ್ನಪರಾಜಿತಾ ದೇವಾ ದೈತ್ಯೈರ್ಹ್ರಾದಪುರೋಗಮೈಃ॥** 9

**ಕ್ಷೀರೋದಸ್ಯೋತ್ತರಂ ಕೂಲಂ ಗತ್ವಾ ತಪ್ಯಂತ ವೈ ತಪಃ।**
**ವಿಷ್ಣೋರಾರಾಧನಾರ್ಥಾಯ ಜಗುಶ್ಚೇಮಂ ಸ್ತವಂ ತದಾ॥** 10

*ದೇವಾ ಊಚುಃ :*

**ಆರಾಧನಾಯ ಲೋಕಾನಾಂ ವಿಷ್ಣೋರೀಶಸ್ಯ ಯಾಂ ಗಿರಮ್।**
**ವಕ್ಷ್ಯಾಮೋ ಭಗವಾನಾದ್ಯಸ್ತಯಾ ವಿಷ್ಣುಃ ಪ್ರಸೀದತು॥** 11

**ಯತೋ ಭೂತಾನ್ಯಶೇಷಾಣಿ ಪ್ರಸೂತಾನಿ ಮಹಾತ್ಮನಃ।**
**ಯಸ್ಮಿಂಶ್ಚ ಲಯಮೇಷ್ಯಂತಿ ಕಸ್ತಂ ಸ್ತೋತುಮಿಹೇಶ್ವರಃ॥** 12

**ತಥಾಪ್ಯರಾತಿವಿಧ್ವಂಸಧ್ವಸ್ತವೀರ್ಯಾಭಯಾರ್ಥಿನಃ।**
**ತ್ವಾಂ ಸ್ತೋಷ್ಯಾಮಸ್ತವೋಕ್ತೀನಾಂ**
**ಯಾಥಾರ್ಥ್ಯಂ ನೈವ ಗೋಚರೇ॥** 13

---

ನಡೆಯಿತು. ಹ್ಲಾದ ಮುಂತಾದ ದೈತ್ಯರಿಂದ ದೇವತೆಗಳು ಪರಾಜಿತರಾದರು (8-9). ಆಗ ದೇವತೆಗಳು ಕ್ಷೀರಸಮುದ್ರದ ಉತ್ತರತೀರಕ್ಕೆ ಹೋಗಿ ತಪಸ್ಸನ್ನಾಚರಿಸಿದರು. ಮತ್ತು ವಿಷ್ಣುವಿನ ಪ್ರೀತ್ಯರ್ಥವಾಗಿ ಈ ರೀತಿ ಸ್ತೋತ್ರ ಮಾಡಿದರು: “ಲೋಕೇಶ್ವರನಾದ ವಿಷ್ಣುವಿನ ಪ್ರೀತ್ಯರ್ಥವಾಗಿ ನಾವು ಈಗ ಯಾವ ವಾಣಿಯನ್ನು ನುಡಿಯುವೆವೋ ಅದರಿಂದ ಆದ್ಯನಾದ ಭಗವಾನ್ ಶ್ರೀಹರಿಯು ಪ್ರಸನ್ನನಾಗಲಿ (10-11). ಯಾರಿಂದ ಸಮಸ್ತ ಭೂತವರ್ಗಗಳೂ ಜನಿಸಿವೆಯೋ ಮತ್ತೆ ಯಾರಲ್ಲಿ ಲಯವನ್ನೈದುತ್ತವೆಯೋ ಆ ಮಹಾತ್ಮನನ್ನು ಸ್ತುತಿಸುವುದಕ್ಕೆ ಯಾರಿಗೆ ಸಾಮರ್ಥ್ಯ ಉಂಟು? ಹೇ ಸ್ವಾಮಿ, ನಿನ್ನ ಯಥಾರ್ಥಸ್ವರೂಪವು ನಮ್ಮ ವಾಣಿಗೆ ನಿಲುಕತಕ್ಕದ್ದಲ್ಲ. ಆದರೂ ಶತ್ರುಗಳಿಂದ ನಮ್ಮ ಪರಾಕ್ರಮವು ವಿಧ್ವಸ್ತವಾಗಿರುವುದರಿಂದ ಅಭಯಾಪೇಕ್ಷಿಗಳಾಗಿ (ಯಥಾಶಕ್ತಿ) ನಿನ್ನ ಸ್ತುತಿಗೆ ಪ್ರಯತ್ನಿಸುವೆವು (12-13). ನೀನೇ ಪೃಥ್ವಿ, ಜಲ, ವಹ್ನಿ, ವಾಯು, ಆಕಾಶಗಳಾಗಿದ್ದೀಯೆ. (ಮನೋಬುದ್ಧಿಚಿತ್ತಾಹಂಕಾರಗಳೆಂಬ) ಸಮಸ್ತ

**ತ್ವಮುರ್ವೀ ಸಲಿಲಂ ವಹ್ನಿರ್ವಾಯುರಾಕಾಶಮೇವ ಚ।**
**ಸಮಸ್ತಮಂತಃಕರಣಂ ಪ್ರಧಾನಂ ತತ್ಪರಃ ಪುಮಾನ್॥** 14

**ಏಕಂ ತವೈತದ್ಭೂತಾತ್ಮನ್ ಮೂರ್ತಾಮೂರ್ತಮಯಂ ವಪುಃ।**
**ಆಬ್ರಹ್ಮಸ್ತಂಬಪರ್ಯಂತಂ ಸ್ಥಾನಕಾಲವಿಭೇದವತ್॥** 15

**ತತ್ರೇಶ ತವ ಯತ್ಪೂರ್ವಂ ತ್ವನ್ನಾಭಿಕಮಲೋದ್ಭವಮ್।**
**ರೂಪಂ ವಿಶ್ವೋಪಕಾರಾಯ ತಸ್ಮೈ ಬ್ರಹ್ಮಾತ್ಮನೇ ನಮಃ॥** 16

**ಶಕ್ರಾರ್ಕರುದ್ರವಸ್ವಶ್ವಿಮರುತ್ಸೋಮಾದಿಭೇದವತ್।**
**ವಯಮೇಕಂ ಸ್ವರೂಪಂ ತೇ ತಸ್ಮೈ ದೇವಾತ್ಮನೇ ನಮಃ॥** 17

**ದಂಭಪ್ರಾಯಮಸಂಬೋಧಿ ತಿತಿಕ್ಷಾದಮವರ್ಜಿತಮ್।**
**ಯದ್ರೂಪಂ ತವ ಗೋವಿಂದ ತಸ್ಮೈ ದೈತ್ಯಾತ್ಮನೇ ನಮಃ॥** 18

**ನಾತಿಜ್ಞಾನವಹಾ ಯಸ್ಮಿನ್ನಾಡ್ಯಃ ಸ್ತಿಮಿತತೇಜಸಿ।**
**ಶಬ್ದಾದಿಲೋಭಿ ಯತ್ತಸ್ಮೈ ತುಭ್ಯಂ ಯಕ್ಷಾತ್ಮನೇ ನಮಃ॥** 19

---

ಅಂತಃಕರಣವೂ ನೀನೇ. ಪ್ರಧಾನವೂ ಅದಕ್ಕೆ ಪರನಾದ ಪುರುಷನೂ ನೀನೇ (14). ಹೇ ಸರ್ವಭೂತಾತ್ಮ, ಬ್ರಹ್ಮನಿಂದ ಹಿಡಿದು ತೃಣಪರ್ಯಂತವಾಗಿ ಮೂರ್ತಾಮೂರ್ತವಾದ ಈ ಜಗತ್ತು ದೇಶಕಾಲಗಳಿಂದ ಭಿನ್ನವಾಗಿ ತೋರುತ್ತಿದ್ದರೂ ಅಭಿನ್ನವಾದ ನಿನ್ನ ರೂಪವೇ ಆಗಿದೆ (15). ಹಿಂದೆ (ಪ್ರಥಮ ಸರ್ಗದಲ್ಲಿ) ವಿಶ್ವೋಪಕಾರಕ್ಕಾಗಿ ನಿನ್ನ ನಾಭಿಕಮಲದಿಂದ ಯಾವ ರೂಪವು ಜನಿಸಿತೋ ಆ ಬ್ರಹ್ಮಾತ್ಮನಾದ ನಿನಗೆ ನಮಸ್ಕಾರ. ಇಂದ್ರ, ಸೂರ್ಯ, ರುದ್ರ, ವಸು, ಅಶ್ವಿನೀದೇವತೆಗಳು, ಮರುತ್, ಚಂದ್ರ—ಇತ್ಯಾದಿ ಭೇದಗಳುಳ್ಳ ನಾವು ನಿನ್ನ ಸ್ವರೂಪರೇ ಆಗಿದ್ದೇವೆ. ಈ ರೀತಿ ದೇವಾತ್ಮನಾದ ನಿನಗೆ ನಮಸ್ಕಾರ (16-17). ಹೇ ಗೋವಿಂದ, ದಂಭಮಯವೂ ಅಜ್ಞಾನಮಯವೂ ತಿತಿಕ್ಷಾದಮಾದಿಗುಣವರ್ಜಿತವೂ ಆದ ನಿನ್ನ ಯಾವ ರೂಪ ಉಂಟೋ ಅಂತಹ ದೈತ್ಯಮೂರ್ತಿಗೆ ನಮಸ್ಕಾರ! ಯಾವ ಯಕ್ಷಸ್ವರೂಪದಲ್ಲಿ ಸತ್ತ್ವಗುಣವು ಮದವಾದ್ದರಿಂದ ಜ್ಞಾನನಾಡಿಗಳು ವಿಶೇಷವಾಗಿ ಜ್ಞಾನವಾಹಿನಿಗಳಾಗಿರುವುದಿಲ್ಲವೋ

**ಕ್ರೌರ್ಯಮಾಯಾಮಯಂ ಘೋರಂ ಯಚ್ಚ ರೂಪಂ ತವಾಸಿತಮ್।**
**ನಿಶಾಚರಾತ್ಮನೇ ತಸ್ಮೈ ನಮಸ್ತೇ ಪುರುಷೋತ್ತಮ॥ 20**

**ಸ್ವರ್ಗಸ್ಥ ಧರ್ಮಿಸದ್ಧರ್ಮಫಲೋಪಕರಣಂ ತವ।**
**ಧರ್ಮಾಖ್ಯಂ ಚ ತಥಾ ರೂಪಂ ನಮಸ್ತಸ್ಮೈ ಜನಾರ್ದನ॥ 21**

**ಹರ್ಷಪ್ರಾಯಮಸಂಸರ್ಗಿ ಗತಿಮದ್ಗಮನಾದಿಷು।**
**ಸಿದ್ಧಾಖ್ಯಂ ತವ ಯದ್ರೂಪಂ ತಸ್ಮೈ ಸಿದ್ಧಾತ್ಮನೇ ನಮಃ॥ 22**

**ಅತಿತಿಕ್ಷಾಯನಂ ಕ್ರೂರಮುಪಭೋಗಸಹಂ ಹರೇ।**
**ದ್ವಿಜಿಹ್ವಂ ತವ ಯದ್ರೂಪಂ ತಸ್ಮೈ ನಾಗಾತ್ಮನೇ ನಮಃ॥ 23**

**ಅವಬೋಧಿ ಚ ಯಚ್ಛಾಂತಮದೋಷಮಪಕಲ್ಮಷಮ್।**
**ಋಷಿರೂಪಾತ್ಮನೇ ತಸ್ಮೈ ವಿಷ್ಣೋ ರೂಪಾಯ ತೇ ನಮಃ॥ 24**

---

ಶಬ್ದಾದಿವಿಷಯಸುಖವನ್ನು ಯಾವುದು ಬಯಸುತ್ತದೆಯೋ ಅಂತಹ ಯಕ್ಷಾತ್ಮನಾದ ನಿನಗೆ ನಮಸ್ಕಾರ! (18-19). ಹೇ ಪುರುಷೋತ್ತಮ, ಯಾವ ನಿನ್ನ ರೂಪವು ಕ್ರೌರ್ಯಮಾಯೆಗಳಿಂದ ತುಂಬಿ ಘೋರವೂ ತಪೋಮಯವೂ ಆಗಿದೆಯೋ ಅಂತಹ ರಾಕ್ಷಸಾತ್ಮನಾದ ನಿನಗೆ ನಮಸ್ಕಾರ! (20). ಜನಾರ್ದನ, ಸ್ವರ್ಗವನ್ನು ಸೇರತಕ್ಕ ಧರ್ಮಿಷ್ಠರು ಆಚರಿಸಿದ ಸದ್ಧರ್ಮಕ್ಕೆ ಫಲವನ್ನು ನೀಡುವ ಯಾವ ಧರ್ಮ ಉಂಟೋ ಅಂತಹ ಧರ್ಮಸ್ವರೂಪನಾದ ನಿನಗೆ ನಮಸ್ಕಾರ (21). ಯಾವುದಕ್ಕೆ (ಜಲ, ಅಗ್ನಿ ಮೊದಲಾದವುಗಳಲ್ಲಿದ್ದರೂ ಅವುಗಳ) ಸಂಸರ್ಗಬಾಧೆ ಇಲ್ಲವೋ, ಗಮನಾದಿ ಕ್ರಿಯೆಗಳಲ್ಲಿ ಯಾವುದು ಅಸ್ಖಲಿತವಾಗಿರುತ್ತದೆಯೋ ಅಂತಹ ಆನಂದಮಯವಾದ ಸಿದ್ಧ ಎಂಬ ರೂಪವುಳ್ಳ ಸಿದ್ಧಾತ್ಮನಿಗೆ ನಮಸ್ಕಾರ (22). ಶ್ರೀಹರಿ, ಸಹನೆಯೇ ಇಲ್ಲದೆ ಕ್ರೂರವಾಗಿದ್ದು ಕಾಮೋಪಭೋಗಸಮರ್ಥವಾದ ಯಾವ ನಿನ್ನ ದ್ವಿಜಿಹ್ವ (ಸರ್ಪ) ಎಂಬ ರೂಪ ಉಂಟೋ ಅಂತಹ ನಾಗಾತ್ಮನಿಗೆ ನಮಸ್ಕಾರ (23). ಹೇ ವಿಷ್ಣೋ, ಜ್ಞಾನಮಯವೂ ಶಾಂತವೂ ರಾಗಾದಿದೋಷರಹಿತವೂ ಶುದ್ಧವೂ ಆದ ಯಾವ ನಿನ್ನ ಋಷಿರೂಪವುಂಟೋ ಅಂತಹ ಋಷಿರೂಪ

**ಭಕ್ಷಯತ್ಯಥ ಕಲ್ಪಾಂತೇ ಭೂತಾನಿ ಯದವಾರಿತಮ್।**
**ತ್ವದ್ರೂಪಂ ಪುಂಡರೀಕಾಕ್ಷ ತಸ್ಮೈ ಕಾಲಾತ್ಮನೇ ನಮಃ॥ 25**

**ಸಂಭಕ್ಷ್ಯ ಸರ್ವಭೂತಾನಿ ದೇವಾದೀನ್ಯವಿಶೇಷತಃ।**
**ನೃತ್ಯತ್ಯಂತೇ ಚ ಯದ್ರೂಪಂ ತಸ್ಮೈ ರುದ್ರಾತ್ಮನೇ ನಮಃ॥ 26**

**ಪ್ರವೃತ್ತ್ಯಾ ರಜಸೋ ಯಚ್ಚ ಕರ್ಮಣಾಂ ಕರಣಾತ್ಮಕಮ್।**
**ಜನಾರ್ದನ ನಮಸ್ತಸ್ಮೈ ತ್ವದ್ರೂಪಾಯ ನರಾತ್ಮನೇ॥ 27**

**ಅಷ್ಟಾವಿಂಶದ್ವಧೋಪೇತಂ ಯದ್ರೂಪಂ ತಾಮಸಂ ತವ।**
**ಉನ್ಮಾರ್ಗಗಾಮಿ ಸರ್ವಾತ್ಮಂಸ್ತಸ್ಮೈ ಪಶ್ವಾತ್ಮನೇ ನಮಃ॥ 28**

---

ನಾದ ನಿನಗೆ ನಮಸ್ಕಾರ (24). ಓ ಪುಂಡರೀಕಾಕ್ಷ, ಕಲ್ಪಾಂತದಲ್ಲಿ ಯಾವ ತಡೆಯೂ ಇಲ್ಲದೆ ಸಮಸ್ತ ಭೂತಗಳನ್ನೂ ಭಕ್ಷಿಸತಕ್ಕ ಯಾವ ಕಾಲ ಉಂಟೋ ಆ ಕಾಲಾತ್ಮನಿಗೆ ನಮಸ್ಕಾರ (25). ದೇವಾದಿಸರ್ವಭೂತಗಳನ್ನೂ ಯಾವ ವಿಶೇಷವೂ ಇಲ್ಲದಂತೆ ತಿಂದು ತೇಗಿ ಕಲ್ಪಾಂತದಲ್ಲಿ ನರ್ತನಮಾಡುವ ಯಾವ ರುದ್ರನಿದ್ದಾನೋ ಅಂತಹ ರುದ್ರಾತ್ಮನಾದ ನಿನಗೆ ನಮಸ್ಕಾರ (26). ಜನಾರ್ದನ, ರಜೋಗುಣದ ಪ್ರವರ್ತನೆಯಿಂದ ಕರ್ಮಗಳನ್ನು ಮಾಡಲು ಕಾರಣರೂಪನಾದ ಯಾವ ನರ (ಮನುಷ್ಯ)ನಿದ್ದಾನೋ ಆ ನಿನ್ನ ರೂಪವೇ ಆದ ನರಾತ್ಮನಿಗೆ ನಮಸ್ಕಾರ (27). ಓ ಸರ್ವಾತ್ಮನೆ, ಇಪ್ಪತ್ತೆಂಟು* ವಧಗಳಿಂದ ಕೂಡಿ ತಾಮಸವೂ ಉನ್ಮಾರ್ಗಗಾಮಿಯೂ ಆದ ಯಾವ ಪಶುವಿದೆಯೋ ಅಂತಹ ಪಶುರೂಪನಾಗಿರುವ ನಿನಗೆ ನಮಸ್ಕಾರ (28). ಯಜ್ಞಕ್ಕೆ ಅಂಗಭೂತವೂ ಜಗತ್ತಿನ ಸ್ಥಿತಿಗೆ ಸಾಧನವೂ ಆಗಿ, ವೃಕ್ಷಾದಿ ಭೇದಗಳಿಂದ ಆರು ವಿಧವಾಗಿರುವ ಯಾವ ಮುಖ್ಯವಸ್ತು§ (ಸ್ಥಾವರ)

---

* ಇಪ್ಪತ್ತೆಂಟು ವಧಗಳು—ಈ ವಿಷಯ ಹಿಂದೆ ಬಂದಿದೆ (1-5-10). ಈ ವಿವರಣೆಗೆ ಅನುಬಂಧವನ್ನು ನೋಡಿ.

§ ವೃಕ್ಷ, ಲತೆ, ಗುಲ್ಮ (ಪೊದರು), ವೀರುತ್ (ದೊಡ್ಡದಾಗಿ ಹರಡುವ ಸೌತೆಬಳ್ಳಿ ಮೊದಲಾದದ್ದು), ತೃಣ, ಬೆಟ್ಟ, ಇವು ಆರು ಭೇದಗಳು. ಮೊದಲು ಇವುಗಳ ಸೃಷ್ಟಿಯಾದ್ದರಿಂದ ಇವು 'ಮುಖ್ಯ' ಎನಿಸಿವೆ.

**ಯಜ್ಞಾಂಗಭೂತಂ ಯದ್ರೂಪಂ ಜಗತಃ ಸ್ಥಿತಿಸಾಧನಮ್ ।**
**ವೃಕ್ಷಾದಿಭೇದೈಷ್ಷಡ್ಭೇದಿ ತಸ್ಮೈ ಮುಖ್ಯಾತ್ಮನೇ ನಮಃ ॥ 29**

**ತಿರ್ಯಙ್ಮನುಷ್ಯದೇವಾದಿ ವ್ಯೋಮಶಬ್ದಾದಿಕಂ ಚ ಯತ್ ।**
**ರೂಪಂ ತವಾದೇಃ ಸರ್ವಸ್ಯ ತಸ್ಮೈ ಸರ್ವಾತ್ಮನೇ ನಮಃ ॥ 30**

**ಪ್ರಧಾನಬುದ್ಧ್ಯಾದಿಮಯಾದಶೇಷಾ-**
**ದ್ಯದನ್ಯದಸ್ಮಾತ್ಪರಮಂ ಪರಾತ್ಮನ್ ।**
**ರೂಪಂ ತವಾದ್ಯಂ ಯದನನ್ಯತುಲ್ಯಂ**
**ತಸ್ಮೈ ನಮಃ ಕಾರಣಕಾರಣಾಯ ॥ 31**

**ಶುಕ್ಲಾದಿದೀರ್ಘಾದಿಘನಾದಿಹೀನ-**
**ಮಗೋಚರಂ ಯಚ್ಚ ವಿಶೇಷಣಾನಾಮ್ ।**
**ಶುದ್ಧಾತಿಶುದ್ಧಂ ಪರಮರ್ಷಿದೃಶ್ಯಂ**
**ರೂಪಾಯ ತಸ್ಮೈ ಭಗವನ್ನತಾಃ ಸ್ಮಃ ॥ 32**

---

ಇದೆಯೋ ಅಂತಹ ಮುಖ್ಯಾತ್ಮನಾದ ನಿನಗೆ ನಮಸ್ಕಾರ (29). ತಿರ್ಯಗ್ ಜಂತು, ಮನುಷ್ಯ, ದೇವತೆ—ಮೊದಲಾದ ಪ್ರಾಣಿವರ್ಗ, ಆಕಾಶಾದಿ ಪಂಚಭೂತಗಳು, ಶಬ್ದಾದಿ ಪಂಚಗುಣಗಳು—ಈ ಸರ್ವವೂ ಆದ್ಯನಾದ ನಿನ್ನ ರೂಪವಾದ್ದರಿಂದ ಸರ್ವಾತ್ಮನಾದ ನಿನಗೆ ನಮಸ್ಕಾರ (30). ಹೇ ಪರಮಾತ್ಮನೆ, ಪ್ರಧಾನ ಮಹತ್ತತ್ತ್ವಾದಿಗಳಿಂದ ಕೂಡಿದ ಈ ಸಂಪೂರ್ಣ ಜಗತ್ತಿಗೆ ಪರವಾದ ಮತ್ತು ಅಸದೃಶವಾದ ನಿನ್ನ ಯಾವ ಆದ್ಯರೂಪ ಉಂಟೋ ಅಂತಹ ಕಾರಣಕ್ಕೂ ಕಾರಣವಾದ ನಿನ್ನ ಶುದ್ಧಸ್ವರೂಪಕ್ಕೆ ನಮಸ್ಕಾರ (31). ಹೇ ಭಗವನ್, ಶುಕ್ಲಾದಿ ರೂಪದಿಂದಲೂ ದೀರ್ಘತ್ವಾದಿ ಪರಿಮಾಣದಿಂದಲೂ ಘನತ್ವಾದಿ ಗುಣದಿಂದಲೂ ರಹಿತ ವಾಗಿಯೂ, ಯಾವ ವಿಶೇಷಣಗಳಿಗೂ ಅಗೋಚರವಾಗಿಯೂ, ಪರಮರ್ಷಿಗಳಿಗೆ ಮಾತ್ರ ಗೋಚರವಾಗಿಯೂ ಇರುವ ಯಾವ ನಿನ್ನ ಶುದ್ಧಾತಿಶುದ್ಧ ಸ್ವರೂಪ ಉಂಟೋ ಅದಕ್ಕೆ ತಲೆಬಾಗಿದ್ದೇವೆ (32). ನಮ್ಮ ದೇಹಗಳಲ್ಲಿಯೂ ಅನ್ಯರ ದೇಹಗಳಲ್ಲಿಯೂ ಸಮಸ್ತ ವಸ್ತುಗಳಲ್ಲಿಯೂ

**ಯನ್ನಃ ಶರೀರೇಷು ಯದನ್ಯದೇಹೇ-**
**ಷ್ವಶೇಷವಸ್ತುಷ್ವಜಮಕ್ಷಯಂ ಯತ್।**
**ತಸ್ಮಾಚ್ಚ ನಾನ್ಯದ್ವ್ಯತಿರಿಕ್ತಮಸ್ತಿ**
**ಬ್ರಹ್ಮಸ್ವರೂಪಾಯ ನತಾಃ ಸ್ಮ ತಸ್ಮೈ॥** 33

**ಸಕಲಮಿದಮಜಸ್ಯ ಯಸ್ಯ ರೂಪಂ**
**ಪರಮಪದಾತ್ಮವತಸ್ಸನಾತನಸ್ಯ।**
**ತಮನಿಧನಮಶೇಷಬೀಜಭೂತಂ**
**ಪ್ರಭುಮಮಲಂ ಪ್ರಣತಾಸ್ಸ್ಮ ವಾಸುದೇವಮ್॥** 34

*ಶ್ರೀಪರಾಶರ ಉವಾಚ:*

**ಸ್ತೋತ್ರಸ್ಯ ಚಾವಸಾನೇ ತೇ ದದೃಶುಃ ಪರಮೇಶ್ವರಮ್।**
**ಶಂಖಚಕ್ರಗದಾಪಾಣಿಂ ಗರುಡಸ್ಥಂ ಸುರಾ ಹರಿಮ್।** 35

**ತಮೂಚುಸ್ಸಕಲಾ ದೇವಾಃ ಪ್ರಣಿಪಾತಪುರಸ್ಸರಮ್।**
**ಪ್ರಸೀದ ನಾಥ ದೈತ್ಯೇಭ್ಯಸ್ತ್ರಾಹಿ ನಶ್ಶರಣಾರ್ಥಿನಃ॥** 36

---

ಅಜವೂ ಅಕ್ಷಯವೂ ಆಗಿ ಯಾವುದು ನೆಲೆಸಿದೆಯೋ, ಯಾವುದಕ್ಕಿಂತ ಅತಿರಿಕ್ತವಾದದ್ದು ಇಲ್ಲವೇ ಇಲ್ಲವೋ ಆ ಬ್ರಹ್ಮಸ್ವರೂಪಕ್ಕೆ ಮಣಿದಿದ್ದೇವೆ (33). ಈ ಸಮಸ್ತ ವಿಶ್ವವು ಅಜನೂ ಪರಮಪದವೆನಿಸಿದ ಬ್ರಹ್ಮವೇ ಆತ್ಮವಾಗಿರುವ (ಚೈತನ್ಯಘನನಾದ) ಸನಾತನನೂ ಆದ ಯಾವಾತನ ರೂಪವೋ, ಅಂತಹ ಅನಂತನೂ ಸರ್ವಕಾರಣನೂ ಪ್ರಭುವೂ ಅಮಲನೂ ಆದ ವಾಸುದೇವನಿಗೆ ನಮಸ್ಕರಿಸಿದ್ದೇವೆ" (34). ಹೀಗೆ ಸ್ತೋತ್ರಮಾಡಿದ ಮೇಲೆ ಆ ದೇವತೆಗಳು ಪರಮೇಶ್ವರನೂ ಶಂಖಚಕ್ರ ಗದಾಪಾಣಿಯೂ ಗರುಡಾರೂಢನೂ ಆದ ಶ್ರೀಹರಿಯನ್ನು ಕಂಡರು. ಎಲ್ಲ ದೇವತೆಗಳೂ ಆತನಿಗೆ ನಮಸ್ಕಾರ ಮಾಡಿ "ಸ್ವಾಮಿ, ಪ್ರಸನ್ನನಾಗು. ಶರಣಾರ್ಥಿಗಳಾದ ನಮ್ಮನ್ನು ದೈತ್ಯರಿಂದ ಕಾಪಾಡು (35-36). ಹ್ಲಾದ ಮೊದಲಾದ ದೈತ್ಯರು ಬ್ರಹ್ಮನ ಆಜ್ಞೆಯನ್ನೂ ಉಲ್ಲಂಘಿಸಿ, ನಮಗೆ

**ತ್ರೈಲೋಕ್ಯಯಜ್ಞಭಾಗಶ್ಚ ದೈತ್ಯೈರ್ಹ್ರಾದಪುರೋಗಮೈಃ।**
**ಹೃತಾ ನೋ ಬ್ರಹ್ಮಣೋಽಪ್ಯಾಜ್ಞಾಮುಲ್ಲಂಘ್ಯ ಪರಮೇಶ್ವರ॥ 37**

**ಯದ್ಯಪ್ಯಶೇಷಭೂತಸ್ಯ ವಯಂ ತೇ ಚ ತವಾಂಶಜಾಃ।**
**ತಥಾಪ್ಯವಿದ್ಯಾಭೇದೇನ ಭಿನ್ನಂ ಪಶ್ಯಾಮಹೇ ಜಗತ್॥ 38**

**ಸ್ವವರ್ಣಧರ್ಮಾಭಿರತಾ ವೇದಮಾರ್ಗಾನುಸಾರಿಣಃ।**
**ನ ಶಕ್ಯಾಸ್ತೇಽರಯೋ ಹಂತುಮಸ್ಮಾಭಿಸ್ತಪಸಾವೃತಾಃ॥ 39**

**ತಮುಪಾಯಮಶೇಷಾತ್ಮನ್ನಸ್ಮಾಕಂ ದಾತುಮರ್ಹಸಿ।**
**ಯೇನ ತಾನಸುರಾನ್ ಹಂತುಂ ಭವೇಮ ಭಗವನ್‌ಕ್ಷಮಾಃ॥ 40**

*ಶ್ರೀಪರಾಶರ ಉವಾಚ:*

**ಇತ್ಯುಕ್ತೋ ಭಗವಾಂಸ್ತೇಭ್ಯೋ ಮಾಯಾಮೋಹಂ ಶರೀರತಃ।**
**ಸಮುತ್ಪಾದ್ಯ ದದೌ ವಿಷ್ಣುಃ ಪ್ರಾಹ ಚೇದಂ**
**ಸುರೋತ್ತಮಾನ್॥ 41**

---

ಸೇರಬೇಕಾದ ಲೋಕತ್ರಯದ ಯಜ್ಞಭಾಗಗಳನ್ನು ಅಪಹರಿಸಿದ್ದಾರೆ. ನಾವೂ ದೈತ್ಯರೂ ಸಹ ಸರ್ವಸ್ವರೂಪನಾದ ನಿನ್ನ ಅಂಶಜಾತರೇ ಆಗಿದ್ದೇವೆ. ಆದರೂ ಅವಿದ್ಯಾಭೇದದಿಂದ ಜಗತ್ತು ಭಿನ್ನಭಿನ್ನವಾಗಿರುವುದನ್ನು ಕಾಣುತ್ತಿದ್ದೇವೆ (37-38). ನಮ್ಮ ವೈರಿಗಳು ತಮ್ಮ ತಮ್ಮ ವರ್ಣಧರ್ಮಗಳಲ್ಲಿ ಆಸಕ್ತರೂ ವೇದಮಾರ್ಗಾನುಸಾರಿಗಳೂ ಆಗಿದ್ದಾರೆ. ಆದ್ದರಿಂದ ಅವರನ್ನು ಸಂಹರಿಸಲು ನಮಗೆ ಸಾಧ್ಯವಿಲ್ಲ. ತಪೋಬಲವು ಅವರನ್ನು ರಕ್ಷಿಸುತ್ತಿದೆ. ಆದ್ದರಿಂದ, ಭಗವಂತ ಸರ್ವಾತ್ಮ, ಈ ಎಲ್ಲ ದೈತ್ಯರನ್ನೂ ನಾವು ಸಂಹರಿಸಲು ಸಮರ್ಥರಾಗುವಂತೆ ಉಪಾಯ ಮಾರ್ಗವನ್ನು ತಿಳಿಸು" ಎಂದು ಪ್ರಾರ್ಥಿಸಿದರು (39-40). ಆಗ ಭಗವಂತನು ತನ್ನ ಶರೀರದಿಂದ 'ಮಾಯಾಮೋಹ'ನನ್ನು ಸೃಷ್ಟಿಸಿ ದೇವತೆಗಳಿಗೆ ಕೊಟ್ಟನು. ಮತ್ತು ಅವರನ್ನು ಕುರಿತು "ದೇವತೆಗಳೆ, ಈತನು ಮಾಯಾಮೋಹ. ಇವನು ಎಲ್ಲ ದೈತ್ಯರಿಗೂ ಮೋಹವನ್ನುಂಟುಮಾಡುವನು. ಅದರಿಂದ

**ಮಾಯಾಮೋಹೋಽಯಮಖಿಲಾನ್ ದೈತ್ಯಾಂಸ್ತಾನ್ಮೋಹಯಿಷ್ಯತಿ।**
**ತತೋ ವಧ್ಯಾ ಭವಿಷ್ಯಂತಿ ವೇದಮಾರ್ಗಬಹಿಷ್ಕೃತಾಃ॥ 42**

**ಸ್ಥಿತೌ ಸ್ಥಿತಸ್ಯ ಮೇ ವಧ್ಯಾ ಯಾವಂತಃ ಪರಿಪಂಥಿನಃ।**
**ಬ್ರಹ್ಮಣೋ ಹ್ಯಧಿಕಾರಸ್ಯ ದೇವದೈತ್ಯಾದಿಕಾಃ ಸುರಾಃ॥ 43**

**ತದ್ಗಚ್ಛತ ನ ಭೀಃ ಕಾರ್ಯಾ ಮಾಯಾ ಮೋಹೋಽಯಮಗ್ರತಃ।**
**ಗಚ್ಛನ್ನದ್ಯೋಪಕಾರಾಯ ಭವತಾಂ ಭವಿತಾ ಸುರಾಃ॥ 44**

*ಶ್ರೀಪರಾಶರ ಉವಾಚ:*

**ಇತ್ಯುಕ್ತಾಃ ಪ್ರಣಿಪತ್ಯೈನಂ ಯಯುರ್ದೇವಾ ಯಥಾಗತಮ್।**
**ಮಾಯಾಮೋಹೋಽಪಿ ತೈಸ್ಸಾರ್ಧಂ ಯಯೌ ಯತ್ರ**
**ಮಹಾಸುರಾಃ॥ 45**

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಸಪ್ತದಶೋಽಧ್ಯಾಯಃ

---

ದೈತ್ಯರು ವೇದಮಾರ್ಗವನ್ನು ತ್ಯಜಿಸುತ್ತಾರೆ. ಆಗ ನಿಮಗೆ ವಧ್ಯರಾಗುತ್ತಾರೆ (41-42). ಬ್ರಹ್ಮದೇವನ ಅಧಿಕಾರಕ್ಕೆ ಯಾರುಯಾರು ಅಡ್ಡಿಯನ್ನುಂಟು ಮಾಡುತ್ತಾರೋ, ಅವರು ದೇವತೆಗಳಾಗಿರಲಿ, ದೈತ್ಯರಾಗಿರಲಿ, ಜಗತ್ಪಾಲನೆಗಾಗಿ ನಿಂತಿರುವ ನನಗೆ ವಧ್ಯರೇ ಸರಿ. ಆದ್ದರಿಂದ ನೀವು ಹೋಗಿರಿ; ಹೆದರಬೇಕಾಗಿಲ್ಲ. ದೇವತೆಗಳೆ, ಈ ಮಾಯಾಮೋಹನು ಮುಂದೆ ಹೋಗಿ ನಿಮಗೆ ಉಪಕಾರ ಮಾಡುವನು" ಎಂದನು (43-44). ವಾಸುದೇವನು ಹೀಗೆ ಹೇಳಲಾಗಿ ದೇವತೆಗಳು ಅವನನ್ನು ವಂದಿಸಿ ಹಿಂದಿರುಗಿದರು. ಮಾಯಾಮೋಹನೂ ಅವರ ಜೊತೆಯಲ್ಲಿ ಹೊರಟು ಮಹಾದೈತ್ಯರಿದ್ದಲ್ಲಿಗೆ ಹೋದನು (45).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿನೇಳನೆಯ ಅಧ್ಯಾಯ ಮುಗಿಯಿತು.



## ಅಷ್ಟಾದಶೋಽಧ್ಯಾಯಃ

*ಶ್ರೀಪರಾಶರ ಉವಾಚ:*

**ತಪಸ್ಯಭಿರತಾನ್ ಸೋಽಥ ಮಾಯಾಮೋಹೋ ಮಹಾಸುರಾನ್।**
**ಮೈತ್ರೇಯ ದದೃಶೇ ಗತ್ವಾ ನರ್ಮದಾತೀರಸಂಶ್ರಿತಾನ್॥ 1**

**ತತೋ ದಿಗಂಬರೋ ಮುಂಡೋ ಬರ್ಹಿಪಿಚ್ಛಧರೋ ದ್ವಿಜ।**
**ಮಾಯಾಮೋಹೋಽಸುರಾನ್ ಶ್ಲಕ್ಷ್ಣಮಿದಂ ವಚನಮಬ್ರವೀತ್॥**

*ಮಾಯಾಮೋಹ ಉವಾಚ:*

**ಹೇ ದೈತ್ಯಪತಯೋ ಬ್ರೂತ ಯದರ್ಥಂ ತಪ್ಯತೇ ತಪಃ।**
**ಐಹಿಕಂ ವಾಥ ಪಾರತ್ರ್ಯಂ ತಪಸಃ ಫಲಮಿಚ್ಛಥ॥ 3**

---

## ಅಧ್ಯಾಯ 18

ಮಾಯಾಮೋಹನು ದೈತ್ಯರನ್ನು ಮೋಹಗೊಳಿಸಿ ವೇದಬಾಹಿರರನ್ನಾಗಿ ಮಾಡುವುದು. ದೈತ್ಯರ ಸೋಲು. ಶತಧನ್ವನ ಕಥೆ.

ಪರಾಶರರು ಹೇಳಿದರು: ಮೈತ್ರೇಯ, ಅಸುರರು ನರ್ಮದಾನದೀ ತೀರದಲ್ಲಿ ತಪಸ್ಸು ಮಾಡುತ್ತಿದ್ದರು. ಮಾಯಾಮೋಹನು ಅಲ್ಲಿಗೆ ಹೋಗಿ ಅವರನ್ನು ಕಂಡನು (1). ಆ ಮಾಯಾಮೋಹನು ತಲೆ ಬೋಳಿಸಿಕೊಂಡು ದಿಗಂಬರನಾಗಿ ಕೈಯಲ್ಲಿ ನವಿಲುಗರಿಗಳ ಕಟ್ಟನ್ನು ಹಿಡಿದುಕೊಂಡು ದೈತ್ಯರನ್ನು ಕುರಿತು ನಯವಾಗಿ "ಎಲೈ ದೈತ್ಯೇಶ್ವರರೆ, ಯಾವ ಕಾರಣದಿಂದ ತಪಸ್ಸು ಮಾಡುತ್ತಿದ್ದೀರಿ? ಹೇಳಿರಿ. ಇಹಲೋಕದ ಫಲವನ್ನು ಬಯಸುವಿರೋ? ಅಥವಾ ಪರಲೋಕದ ಫಲವನ್ನೋ?" ಎಂದು ಕೇಳಿದನು (2-3). ಆದಕ್ಕೆ ಅಸುರರು "ಎಲೈ ಬುದ್ಧಿವಂತನೆ, ಪರಲೋಕದ ಫಲಕ್ಕಾಗಿ ನಾವು ಈ ತಪಶ್ಚರ್ಯೆಯನ್ನು ಕೈಗೊಂಡಿದ್ದೇವೆ. ನೀನು ಏನು

*ಅಸುರಾ ಊಚುಃ :*

**ಪಾರತ್ರ್ಯಫಲಲಾಭಾಯ ತಪಶ್ಚರ್ಯಾ ಮಹಾಮತೇ।**
**ಅಸ್ಮಾಭಿರಿಯಮಾರಬ್ಧಾ ಕಿಂ ವಾ ತೇಽತ್ರ ವಿವಕ್ಷಿತಮ್॥** 4

*ಮಾಯಾಮೋಹ ಉವಾಚ:*

**ಕುರುಧ್ವಂ ಮಮ ವಾಕ್ಯಾನಿ ಯದಿ ಮುಕ್ತಿಮಭೀಪ್ಸಥ।**
**ಅರ್ಹಧ್ವಮೇನಂ ಧರ್ಮಂ ಚ ಮುಕ್ತಿದ್ವಾರಮಸಂವೃತಮ್॥** 5

**ಧರ್ಮೋ ವಿಮುಕ್ತೇರರ್ಹೋಽಯಂ ನೈತಸ್ಮಾದಪರೋ ವರಃ।**
**ಅತ್ರೈವ ಸಂಸ್ಥಿತಾಃ ಸ್ವರ್ಗಂ ವಿಮುಕ್ತಿಂ ವಾ ಗಮಿಷ್ಯಥ॥** 6

**ಅರ್ಹಧ್ವಂ ಧರ್ಮಮೇತಂ ಚ ಸರ್ವೇ ಯೂಯಂ ಮಹಾಬಲಾಃ।**

*ಶ್ರೀಪರಾಶರ ಉವಾಚ:*

**ಏವಂ ಪ್ರಕಾರೈರ್ಬಹುಭಿರ್ಯುಕ್ತಿದರ್ಶನಚರ್ಚಿತೈಃ॥** 7

**ಮಾಯಾಮೋಹೇನ ತೇ ದೈತ್ಯಾ ವೇದಮಾರ್ಗಾದಪಾಕೃತಾಃ।**
**ಧರ್ಮಾಯೈತದಧರ್ಮಾಯ ಸದೇತನ್ನ ಸದಿತ್ಯಪಿ॥** 8

---

ಹೇಳಬೇಕೆಂದಿರುವೆ?" ಎಂದರು (4). ಆಗ ಮಾಯಾಮೋಹನು "ನಿಮಗೆ ಮುಕ್ತಿ ಬೇಕಾಗಿದ್ದರೆ ನಾನು ಹೇಳುವ ಮಾತನ್ನು ನಡೆಸಿರಿ. ನಾನು ಹೇಳುವ ಧರ್ಮವು ಅರ್ಹವಾದದ್ದೆಂದು ಆದರಿಸಿರಿ. ಅದರಲ್ಲಿ ಮೋಕ್ಷ ದ್ವಾರವು ತೆರೆದಿದೆ. ಇದು ಮೋಕ್ಷವನ್ನು ಕೊಡಲು ಅರ್ಹವಾದ ಧರ್ಮ. ಇದಕ್ಕಿಂತ ಶ್ರೇಷ್ಠವಾದದ್ದು ಇನ್ನೊಂದಿಲ್ಲ (5). ಈ ಧರ್ಮದಲ್ಲಿ ನೀವು ನೆಲೆಸಿದರೆ ಸ್ವರ್ಗವಾದರೂ ಸಿಗುತ್ತದೆ, ಮೋಕ್ಷವಾದರೂ ಸಿಗುತ್ತದೆ. ಓ ಬಲಶಾಲಿಗಳೆ, ನೀವೆಲ್ಲರೂ ನಾನು ಹೇಳುವ ಈ ಧರ್ಮವನ್ನು ಅರ್ಹವಾದ್ದೆಂದು ಆದರಿಸಿರಿ" ಎಂದನು. ಈ ಪ್ರಕಾರವಾಗಿ ಹಲವಾರು ಯುಕ್ತಿಗಳಿಂದ ರಂಜಿತವಾದ ವಾಗ್ಜಾಲಗಳಿಂದ ಮಾಯಾಮೋಹನು ದೈತ್ಯರನ್ನು ವೇದಮಾರ್ಗದಿಂದ ದೂರ ಮಾಡಿದನು. "ಇದು ಧರ್ಮಕ್ಕೆ ಕಾರಣ, ಅದು ಅಧರ್ಮಕ್ಕೆ ಕಾರಣ. ಇದು ಸರಿ, ಅದು ಸರಿಯಲ್ಲ (6-8).

**ವಿಮುಕ್ತಯೇ ತ್ವಿದಂ ನೈತದ್ವಿಮುಕ್ತಿಂ ಸಂಪ್ರಯಚ್ಛತಿ।**
**ಪರಮಾರ್ಥೋಽಯಮತ್ಯರ್ಥಂ ಪರಮಾರ್ಥೋ ನ**
**ಚಾಪ್ಯಯಮ್॥ 9**

**ಕಾರ್ಯಮೇತದಕಾರ್ಯಂ ಚ ನೈತದೇವಂ ಸ್ಫುಟಂ ತ್ವಿದಮ್।**
**ದಿಗ್ವಾಸಸಾಮಯಂ ಧರ್ಮೋ ಧರ್ಮೋಽಯಂ**
**ಬಹುವಾಸಸಾಮ್॥ 10**

**ಇತ್ಯನೇಕಾಂತವಾದಂ ಚ ಮಾಯಾಮೋಹೇನ ನೈಕಧಾ।**
**ತೇನ ದರ್ಶಯತಾ ದೈತ್ಯಾಃ ಸ್ವಧರ್ಮಂ ತ್ಯಾಜಿತಾ ದ್ವಿಜ॥ 11**

**ಅರ್ಹತೈತಂ ಮಹಾಧರ್ಮಂ ಮಾಯಾಮೋಹೇನ ತೇ ಯತಃ।**
**ಪ್ರೋಕ್ತಾಸ್ತಮಾಶ್ರಿತಾ ಧರ್ಮಮಾರ್ಹತಾಸ್ತೇನ ತೇಽಭವನ್॥ 12**

---

ಇದರಿಂದ ಮೋಕ್ಷ ದೊರೆಯುತ್ತದೆ, ಅದರಿಂದ ಮೋಕ್ಷವಾಗುವುದಿಲ್ಲ. ಇದು ಮಾಡಬೇಕಾದ್ದು, ಅದು ಮಾಡತಕ್ಕದ್ದಲ್ಲ. ಹೀಗೆ ಹೇಳಿದ್ದು ಸರಿಯಲ್ಲ , ಅದಂತೂ ಸ್ಪಷ್ಟವಾಗಿಯೇ ಇದೆ. ಇದು ದಿಗಂಬರರ ಧರ್ಮ, ಅದು ಅನ್ಯಮತೀಯರಾದ ವಸ್ತ್ರಧಾರಿಗಳ ಧರ್ಮ" (9-10). ಈ ರೀತಿ ಯಾಗಿ ಯುಕ್ತಿಗಳಿಂದ ವಾದಮಾಡಿ ಅನೇಕಾಂತವಾದವನ್ನು* ಹಲವಾರು ವಿಧದಲ್ಲಿ ಸ್ಥಾಪಿಸಿ ಮಾಯಾಮೋಹನು, ಆ ದೈತ್ಯರೆಲ್ಲರೂ ವೇದಮಾರ್ಗ ವನ್ನು ತ್ಯಜಿಸುವಂತೆ ಮಾಡಿಬಿಟ್ಟನು (11). ಮಾಯಾಮೋಹನು ದೈತ್ಯ ರನ್ನು ಕುರಿತು "ನೀವು ಈ ಮಹಾಧರ್ಮವನ್ನು 'ಅರ್ಹತ = ಆದರಿಸಿರಿ' ಎಂದು ಹೇಳುತ್ತಿದ್ದನು. ಆದ್ದರಿಂದ ಆ ಧರ್ಮವನ್ನವಲಂಬಿಸಿದ ದೈತ್ಯರು 'ಆರ್ಹತ'ರೆನಿಸಿದರು (12). ತಪಸ್ಸು ಮಾಡುತ್ತಿದ್ದ ಆ ದೈತ್ಯರು ಮಾಯಾ ಮೋಹನಿಂದ ಪ್ರಚೋದಿತರಾಗಿ ವೇದಧರ್ಮವನ್ನು ಬಿಟ್ಟು ಆರ್ಹತ ಮತ ವನ್ನು ಸ್ವೀಕರಿಸಿದರು. ತರುವಾಯ ಆ ದೈತ್ಯರಿಂದ ಪ್ರೇರಿತರಾದ ಇತರರೂ

---

* ಅನೇಕಾಂತವಾದಕ್ಕೆ ಸ್ಯಾದ್ವಾದವೆಂದೂ ಸಪ್ತಭಂಗೀನಯವೆಂದೂ ಹೆಸರಿದೆ. ಜೈನಮತದಲ್ಲಿ ಇದಕ್ಕೆ ಪ್ರಾಮುಖ್ಯವುಂಟು.

**ತ್ರಯೀಧರ್ಮಸಮುತ್ಸರ್ಗಂ ಮಾಯಾಮೋಹೇನ ತೇಽಸುರಾಃ।**
**ಕಾರಿತಾಸ್ತನ್ಮಯಾ ಹ್ಯಾಸಂಸ್ತತೋಽನ್ಯೇ ತತ್ಪ್ರಚೋದಿತಾಃ॥ 13**

**ತೈರಪ್ಯನ್ಯೇ ಪರೇ ತೈಶ್ಚ ತೈರಪ್ಯನ್ಯೇ ಪರೇ ಚ ತೈಃ।**
**ಅಲ್ಪೈರಹೋಭಿಸ್ಸಂತ್ಯಕ್ತಾ ತೈರ್ದೈತ್ಯೈಃ ಪ್ರಾಯಶಸ್ತ್ರಯೀ॥ 14**

**ಪುನಶ್ಚ ರಕ್ತಾಂಬರಧೃಙ್ಮಾಯಾಮೋಹೋ ಜಿತೇಂದ್ರಿಯಃ।**
**ಅನ್ಯಾನಾಹಾಸುರಾನ್ ಗತ್ವಾ ಮೃದ್ವಲ್ಪಮಧುರಾಕ್ಷರಮ್॥ 15**

**ಸ್ವರ್ಗಾರ್ಥಂ ಯದಿ ವೋ ವಾಂಛಾ ನಿರ್ವಾಣಾರ್ಥಮಥಾಸುರಾಃ।**
**ತದಲಂ ಪಶುಘಾತಾದಿದುಷ್ಟಧರ್ಮೈರ್ನಿಬೋಧತ॥ 16**

**ವಿಜ್ಞಾನಮಯಮೇವೈತದಶೇಷಮವಗಚ್ಛತ।**
**ಬುಧ್ಯಧ್ವಂ ಮೇ ವಚಃ ಸಮ್ಯಗ್ಬುಧೈರೇವಮಿಹೋದಿತಮ್॥ 17**

**ಜಗದೇತದನಾಧಾರಂ ಭ್ರಾಂತಿಜ್ಞಾನಾರ್ಥತತ್ಪರಮ್।**
**ರಾಗಾದಿದುಷ್ಟಮತ್ಯರ್ಥಂ ಭ್ರಾಮ್ಯತೇ ಭವಸಂಕಟೇ॥ 18**

---

ಹಾಗೆಯೇ ಮಾಡಿದರು (13). ಅವರಿಂದ ಬೇರೆಯವರೂ ಬೇರೆಯವರಿಂದ ಮತ್ತಿತರರೂ ಅವರಿಂದ ಅನ್ಯರೂ ಹೀಗೆಯೇ ಮಾಡುತ್ತ, ಸ್ವಲ್ಪದಿನಗಳಲ್ಲಿ ಪ್ರಾಯಃ ಬಹುಮಂದಿ ದೈತ್ಯರು ವೇದಮಾರ್ಗವನ್ನು ಪರಿತ್ಯಜಿಸಿದರು (14). ಇಷ್ಟಾದ ಮೇಲೆ ಮಾಯಾಮೋಹನು ಜಿತೇಂದ್ರಿಯನಾಗಿ ಕಾಷಾಯ ವಸ್ತ್ರವನ್ನುಟ್ಟು ಉಳಿದ ಅಸುರರ ಬಳಿಗೆ ಹೋಗಿ ಮಿತವಾಕ್ಯಗಳಿಂದ ಮೃದುಮಧುರವಾಗಿ ಹೀಗೆಂದನು (15): "ಎಲೈ ಅಸುರರೆ, ನಿಮ್ಮ ಅಪೇಕ್ಷೆ ಸ್ವರ್ಗಾರ್ಥವಾಗಿರಲಿ ಅಥವಾ ಮೋಕ್ಷಾರ್ಥವಾಗಿರಲಿ, ಪಶುಹತ್ಯೆಯೇ ಮೊದಲಾದ ಈ ಕೆಟ್ಟಧರ್ಮಗಳನ್ನು ಆಚರಿಸಬೇಡಿರಿ. ನಾನು ಹೇಳುವುದನ್ನು ಕೇಳಿ (16). ಈ ಜಗತ್ತೆಲ್ಲವೂ ವಿಜ್ಞಾನಮಯವಾದದ್ದೆಂದು ತಿಳಿಯಿರಿ. ನನ್ನ ಮಾತನ್ನು ಸರಿಯಾಗಿ 'ಬುಧ್ಯಧ್ವಂ =ಅರ್ಥಮಾಡಿ ತಿಳಿದುಕೊಳ್ಳಿರಿ'. ಬುಧಜನರೇ ಈ ರೀತಿಯಾಗಿ ಹೇಳಿದ್ದಾರೆ (17). ಈ ಜಗತ್ತು ನಿರಾಧಾರವಾದದ್ದು. ಭ್ರಮೆಯಿಂದ ಪದಾರ್ಥಗಳು ಪ್ರತೀತವಾಗುತ್ತವೆ. ರಾಗಾದಿದೋಷಗಳಿಂದ ಅತ್ಯಂತ ಕಲುಷಿತವಾದ ಜಗತ್ತು

**ಏವಂ ಬುಧ್ಯತ ಬುಧ್ಯಧ್ವಂ ಬುಧ್ಯತೈವಮಿತೀರಯನ್।**
**ಮಾಯಾಮೋಹಃ ಸ ದೈತೇಯಾನ್**
**ಧರ್ಮಮತ್ಯಾಜಯನ್ನಿಜಮ್॥ 19**

**ನಾನಾಪ್ರಕಾರವಚನಂ ಸ ತೇಷಾಂ ಯುಕ್ತಿಯೋಜಿತಮ್।**
**ತಥಾ ತಥಾ ತ್ರಯೀಧರ್ಮಂ ತತ್ಯಜುಸ್ತೇ ಯಥಾ ಯಥಾ॥ 20**

**ತೇಽಪ್ಯನ್ಯೇಷಾಂ ತಥೈವೋಚುರನ್ಯೈರನ್ಯೇ ತಥೋದಿತಾಃ।**
**ಮೈತ್ರೇಯ ತತ್ಯಜುರ್ಧರ್ಮಂ ವೇದಸ್ಮೃತ್ಯುದಿತಂ ಪರಮ್॥ 21**

**ಅನ್ಯಾನಪ್ಯನ್ಯಪಾಷಂಡಪ್ರಕಾರೈರ್ಬಹುಭಿರ್ದ್ವಿಜ।**
**ದೈತೇಯಾನ್ಮೋಹಯಾಮಾಸ ಮಾಯಾಮೋಹೋಽತಿ**
**ಮೋಹಕೃತ್॥ 22**

---

ಇದು. ಸಂಸಾರದ ಸಂಕಟದಲ್ಲಿ ಅಲೆಯುತ್ತ ತತ್ತರಿಸುತ್ತಿದೆ (18). ಆದ್ದರಿಂದ ನಾನು ಹೇಳುವ ಪ್ರಕಾರ "ಬುಧ್ಯತ = ತಿಳಿದುಕೊಳ್ಳಿರಿ, ಬುಧ್ಯಧ್ವಂ = ತಿಳಿಯಿರಿ, ಬುಧ್ಯತ* = ತಿಳಿಯಿರಿ"—ಈ ಪ್ರಕಾರವಾಗಿ ಹೇಳುತ್ತ ಮಾಯಾಮೋಹನು ಆ ದೈತ್ಯರಿಂದ ಸ್ವಧರ್ಮವನ್ನು ಪರಿತ್ಯಾಗ ಮಾಡಿಸಿದನು (19). ಆತನು ನಾನಾ ಪ್ರಕಾರವಾದ ಯುಕ್ತಿಗಳಿಂದ ಕೂಡಿದ ಬೋಧನೆಯನ್ನು ಹೇಗೆ ಹೇಗೆ ಮಾಡುತ್ತಹೋದನೋ ಹಾಗೆ ಹಾಗೆ ಅಸುರರು ತ್ರಯೀಧರ್ಮವನ್ನು ತ್ಯಜಿಸುತ್ತ ಹೋದರು (20). ಅವರು ಬೇರೆಯವರಿಗೆ, ಬೇರೆಯವರು ಅನ್ಯರಿಗೆ—ಹೀಗೆ ಬೋಧಿಸುತ್ತ ಹೋಗಲಾಗಿ ಅವರೆಲ್ಲರೂ ಶ್ರುತಿಸ್ಮೃತಿವಿಹಿತವಾದ ಧರ್ಮವನ್ನು ತ್ಯಜಿಸಿದರು. ಮೈತ್ರೇಯ, ಅತ್ಯಂತ ಮೋಹಕಾರಿಯಾದ ಆ ಮಾಯಾ ಮೋಹನು ವೇದದೂರವಾದ ವಿಭಿನ್ನ ಪಾಷಂಡಬೋಧನೆಗಳಿಂದ ದೈತ್ಯರನ್ನು ತಪ್ಪುದಾರಿಗೆಳೆದನು (21-22). ಹೀಗೆ ಸ್ವಲ್ಪ ಕಾಲದಲ್ಲಿಯೇ ಅಸುರರು ಮಾಯಾಮೋಹನಿಂದ ವಿಕಲಚಿತ್ತರಾಗಿ ವೇದಮಾರ್ಗದ ಕಥೆ

---

* ಬುಧ್ಯತ ಎಂದು ಮತ್ತೆ ಮತ್ತೆ ಬೋಧಿಸಿದ್ದರಿಂದ ಆತನು ಬುದ್ಧನೆಂದೂ ಆ ಮತವನ್ನವಲಂಬಿಸಿದವರು ಬೌದ್ಧರೆಂದೂ ಅಭಿಪ್ರಾಯ.

**ಸ್ವಲ್ಪೇನೈವ ಹಿ ಕಾಲೇನ ಮಾಯಾಮೋಹೇನ ತೇಽಸುರಾಃ।**
**ಮೋಹಿತಾಸ್ತತ್ಯಜುಸ್ಸರ್ವಾಂ ತ್ರಯೀಮಾರ್ಗಾಶ್ರಿತಾಂ ಕಥಾಮ್॥ 23**

**ಕೇಚಿದ್ವಿನಿಂದಾಂ ವೇದಾನಾಂ ದೇವಾನಾಮಪರೇ ದ್ವಿಜ।**
**ಯಜ್ಞಕರ್ಮಕಲಾಪಸ್ಯ ತಥಾನ್ಯೇ ಚ ದ್ವಿಜನ್ಮನಾಮ್॥ 24**

**ನೈತದ್ಯುಕ್ತಿಸಹಂ ವಾಕ್ಯಂ ಹಿಂಸಾ ಧರ್ಮಾಯ ಚೇಷ್ಯತೇ।**
**ಹವೀಂಷ್ಯನಲದಗ್ಧಾನಿ ಫಲಾಯೇತ್ಯರ್ಭಕೋದಿತಮ್॥ 25**

**ಯಜ್ಞೈರನೇಕೈರ್ದೇವತ್ವಮವಾಪ್ಯೇಂದ್ರೇಣ ಭುಜ್ಯತೇ।**
**ಶಮ್ಯಾದಿ ಯದಿ ಚೇತ್ಕಾಷ್ಠಂ ತದ್ವರಂ ಪತ್ರಭುಕ್ ಪಶುಃ॥ 26**

**ನಿಹತಸ್ಯ ಪಶೋರ್ಯಜ್ಞೇ ಸ್ವರ್ಗಪ್ರಾಪ್ತಿರ್ಯದೀಷ್ಯತೇ।**
**ಸ್ವಪಿತಾ ಯಜಮಾನೇನ ಕಿನ್ನು ತಸ್ಮಾನ್ನ ಹನ್ಯತೇ॥ 27**

**ತೃಪ್ತಯೇ ಜಾಯತೇ ಪುಂಸೋ ಭುಕ್ತಮನ್ಯೇನ ಚೇತ್ತತಃ।**
**ಕುರ್ಯಾತ್ ಶ್ರಾದ್ಧಂ ಶ್ರಮಾಯಾನ್ನಂ ನ ವಹೇಯುಃ ಪ್ರವಾಸಿನಃ॥**

---

ಯನ್ನೇ ದೂರ ಮಾಡಿದರು. ಅವರಲ್ಲಿ ಕೆಲವರು ವೇದಗಳನ್ನೂ ಕೆಲವರು ದೈವಿಕ ದೇವತೆಗಳನ್ನೂ ನಿಂದಿಸತೊಡಗಿದರು. ಇನ್ನು ಕೆಲವರು ಬ್ರಾಹ್ಮಣರ ಯಜ್ಞಕಾರ್ಯಕಲಾಪಗಳನ್ನು ದೂಷಿಸತೊಡಗಿದರು (23-24). "ಈ ವಾಕ್ಯವು ಯುಕ್ತಿಗೆ ನಿಲ್ಲುವುದಿಲ್ಲ. ಯಜ್ಞದಲ್ಲಿ ಹಿಂಸೆಯಿಂದ ಧರ್ಮ ಬರುತ್ತದೆಂಬುದು ಒಪ್ಪತಕ್ಕದ್ದಲ್ಲ. ಬೆಂಕಿಯಲ್ಲಿ ಸುಟ್ಟುಹೋದ ಹವಿಸ್ಸು ಫಲವನ್ನು ಕೊಡುತ್ತದೆಂಬುದು ಹುಡುಗರಾಡುವ ಮಾತು (25). ಹಲವಾರು ಯಾಗಗಳನ್ನು ಮಾಡಿ ದೇವತ್ವವನ್ನು ಪಡೆದು ಇಂದ್ರನಾಗಿ ಶಮೀ ಮುಂತಾದ ಕಟ್ಟಿಗೆಯನ್ನು (ಸಮಿತ್ತನ್ನು) ತಿನ್ನಬೇಕಾಗಿ ಬರುವುದಾದರೆ, ಅವನಿಗಿಂತ ಎಲೆಯನ್ನು ತಿನ್ನುವ ಪಶುವೇ ಮೇಲು! (26). ಯಜ್ಞದಲ್ಲಿ ಹತವಾದ ಪಶುವಿಗೆ ಸ್ವರ್ಗ ಬರುವುದಾದರೆ, ಯಜ್ಞ ಮಾಡತಕ್ಕವನು ತನ್ನ ತಂದೆಯನ್ನೇ ಏಕೆ ಕೊಲ್ಲಬಾರದು! ಯಾವನೋ ತಿಂದ ಅನ್ನದಿಂದ ಸತ್ತುಹೋದ ಪುರುಷನಿಗೆ ತೃಪ್ತಿಯಾಗುವುದಂತೆ! ಅದಕ್ಕಾಗಿ ಶ್ರಾದ್ಧ ಮಾಡಬೇಕಂತೆ! ಹಾಗೆಲ್ಲ ಆಗುವುದಾದರೆ ಪ್ರವಾಸಕ್ಕೆ ಹೋಗತಕ್ಕವರು ಜೊತೆಯಲ್ಲಿ ಬುತ್ತಿಯನ್ನು ಒಯ್ಯುತ್ತಲೇ ಇರಲಿಲ್ಲ!

**ಜನಶ್ರದ್ಧೇಯಮಿತ್ಯೇತದವಗಮ್ಯ ತತೋಽತ್ರ ವಃ।**
**ಉಪೇಕ್ಷಾ ಶ್ರೇಯಸೇ ವಾಕ್ಯಂ ರೋಚತಾಂ ಯನ್ಮಯೇರಿತಮ್॥**

**ನ ಹ್ಯಾಪ್ತವಾದಾ ನಭಸೋ ನಿಪತಂತಿ ಮಹಾಸುರಾಃ।**
**ಯುಕ್ತಿಮದ್ವಚನಂ ಗ್ರಾಹ್ಯಂ ಮಯಾನ್ಯೈಶ್ಚ ಭವದ್ವಿಧೈಃ॥** 30

*ಶ್ರೀಪರಾಶರ ಉವಾಚ:*

**ಮಾಯಾಮೋಹೇನ ತೇ ದೈತ್ಯಾಃ ಪ್ರಕಾರೈರ್ಬಹುಭಿಸ್ತಥಾ।**
**ವ್ಯುತ್ಥಾಪಿತಾ ಯಥೈ ನೈಷಾಂ ತ್ರಯೀ ಕಶ್ಚಿದರೋಚಯತ್॥** 31

**ಇತ್ಥಮುನ್ಮಾರ್ಗಯಾತೇಷು ತೇಷು ದೈತ್ಯೇಷು ತೇಽಮರಾಃ।**
**ಉದ್ಯೋಗಂ ಪರಮಂ ಕೃತ್ವಾ ಯುದ್ಧಾಯ ಸಮುಪಸ್ಥಿತಾಃ॥** 32

**ತತೋ ದೈವಾಸುರಂ ಯುದ್ಧಂ ಪುನರೇವಾಭವದ್ ದ್ವಿಜ।**
**ಹತಾಶ್ಚ ತೇಽಸುರಾ ದೇವೈಃ ಸನ್ಮಾರ್ಗಪರಿಪಂಥಿನಃ॥** 33

---

(27-28). ಶ್ರಾದ್ಧಾದಿ ಕರ್ಮಕಾಂಡವು ಬರಿಯ ಅಂಧಶ್ರದ್ಧೆಯೇ ಸರಿಯೆಂದು ತಿಳಿಯಿರಿ. ಅದನ್ನು ಉಪೇಕ್ಷಿಸುವುದೇ ನಿಮಗೆ ಒಳ್ಳೆಯದು. ನಿಮ್ಮ ಶ್ರೇಯಸ್ಸಿಗಾಗಿ ನಾನು ಹೇಳಿದ ಮಾತು ನಿಮಗೆ ಪ್ರಿಯವಾಗಲಿ (29). ಎಲೈ ಮಾನ್ಯರಾದ ಅಸುರರೆ, ಶ್ರುತಿಗಳು ಆಪವಾಕ್ಯಗಳಾಗಿ ಆಕಾಶದಿಂದ ಉದುರಿಬೀಳುವುದಿಲ್ಲ. (ಅವನ್ನು ಯಾರೋ ರಚಿಸಿದ್ದಾರೆ.) ಯುಕ್ತಿಯುಕ್ತವಾದ ನುಡಿ ಯಾವಾಗಲೂ ಗ್ರಾಹ್ಯವಾದದ್ದು. ನಾನಾಗಲಿ ನಿಮ್ಮಂತಹ ಇತರರಾಗಲಿ ಯುಕ್ತಿಪೂರ್ಣವಾದದ್ದನ್ನು ಮಾತ್ರ ಗ್ರಹಿಸಬೇಕು" (30). ಈ ಪ್ರಕಾರವಾಗಿ ಮಾಯಾಮೋಹನು ಬೋಧಿಸಿ ದೈತ್ಯರನ್ನು ವೇದಮಾರ್ಗದಿಂದ ವಿಮುಖರನ್ನಾಗಿ ಮಾಡಿದನು. ಹೀಗಾಗಿ ಅವರಲ್ಲೊಬ್ಬನೂ ವೇದಕ್ಕೆ ಬೆಲೆಗೊಡಲಿಲ್ಲ (31). ಹೀಗೆ ದೈತ್ಯರು ಉನ್ಮಾರ್ಗಗಾಮಿಗಳಾಗಲಾಗಿ ದೇವತೆಗಳು ಪ್ರಬಲವಾದ ಸಿದ್ಧತೆಯನ್ನು ಮಾಡಿಕೊಂಡು ಯುದ್ಧಕ್ಕೆ ಬಂದರು. ಮೈತ್ರೇಯ, ಅನಂತರ ಮತ್ತೆ ದೈವಾಸುರ ಯುದ್ಧವು ಪ್ರಾರಂಭವಾಯಿತು. ಸನ್ಮಾರ್ಗವಿರೋಧಿಗಳಾದ ಅಸುರರು ಆ ಯುದ್ಧದಲ್ಲಿ ದೇವತೆಗಳಿಂದ ಹತರಾದರು. ಏಕೆಂದರೆ,

**ಸ್ವಧರ್ಮಕವಚಂ ತೇಷಾಮಭೂದ್ಯತ್ ಪ್ರಥಮಂ ದ್ವಿಜ।**
**ತೇನ ರಕ್ಷಾಭವತ್ಪೂರ್ವಂ ನೇಶುರ್ನಷ್ಟೇ ಚ ತತ್ರ ತೇ॥** 34

**ತತೋ ಮೈತ್ರೇಯ ತನ್ಮಾರ್ಗವರ್ತಿನೋ ಯೇಽಭವಂಜನಾಃ।**
**ನಗ್ನಾಸ್ತೇ ತೈರ್ಯತಸ್ತ್ಯಕ್ತಂ ತ್ರಯೀಸಂವರಣಂ ತಥಾ॥** 35

**ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥಸ್ತಥಾಶ್ರಮೀ।**
**ಪರಿವ್ರಾಡ್ ವಾ ಚತುರ್ಥೋಽತ್ರ ಪಂಚಮೋ ನೋಪಪದ್ಯತೇ॥**

**ಯಸ್ತು ಸಂತ್ಯಜ್ಯ ಗಾರ್ಹಸ್ಥ್ಯಂ ವಾನಪ್ರಸ್ಥೋ ನ ಜಾಯತೇ।**
**ಪರಿವ್ರಾಟ್ ಚಾಪಿ ಮೈತ್ರೇಯ ಸ ನಗ್ನಃ ಪಾಪಕೃನ್ನರಃ॥** 37

**ನಿತ್ಯಾನಾಂ ಕರ್ಮಣಾಂ ವಿಪ್ರ ತಸ್ಯ ಹಾನಿರಹರ್ನಿಶಮ್।**
**ಅಕುರ್ವನ್ ವಿಹಿತಂ ಕರ್ಮ ಶಕ್ತಃ ಪತತಿ ತದ್ದಿನೇ॥** 38

---

ಹಿಂದೆ ಅವರಿಗೆ ಸ್ವಧರ್ಮದ ಕವಚವಿತ್ತು. ಅದರಿಂದ ಅಸುರರಿಗೆ ರಕ್ಷಣೆಯೊದಗಿತ್ತು. ಈಗ ಆ ಕವಚವು ನಾಶವಾಗಲು ಅವರೂ ನಾಶವಾದರು (32-34). ಆಮೇಲೆ ಆ ಅಸುರರ ಮಾರ್ಗವನ್ನು ಅನುಸರಿಸತಕ್ಕ ಜನರು ಯಾರಿದ್ದರೋ ಅವರು ನಗ್ನರೆನಿಸಿಕೊಂಡರು. ಏಕೆಂದರೆ, ವೇದಗಳ ತೊಡುಗೆಯನ್ನು ಅವರು ಕಿತ್ತೆಸೆದಿದ್ದರು (35). ಮೈತ್ರೇಯ! ಬ್ರಹ್ಮಚಾರೀ ಗೃಹಸ್ಥ ವಾನಪ್ರಸ್ಥ ಸಂನ್ಯಾಸಿ—ಎಂದು ನಾಲ್ಕೇ ಆಶ್ರಮಗಳು. ಐದನೆಯ ಇನ್ನೊಂದು ಆಶ್ರಮ ಇಲ್ಲ. ಯಾವನು ಗೃಹಸ್ಥಧರ್ಮವನ್ನು ಬಿಟ್ಟಮೇಲೆ ವಾನಪ್ರಸ್ಥನಾಗುವುದಿಲ್ಲವೋ ಅಥವಾ ಸಂನ್ಯಾಸಿಯಾಗುವುದಿಲ್ಲವೋ ಆ ಪಾಪಿಯು ನಗ್ನನೇ ಸರಿ (36-37). ಮೈತ್ರೇಯ, ಮನುಷ್ಯನು ಶಕ್ತನಾಗಿದ್ದರೂ (ಶ್ರುತಿ ಸ್ಮೃತಿ ವಿಹಿತಗಳಾದ) ನಿತ್ಯಕರ್ಮಗಳಿಗೆ ಒಂದು ದಿನ ಹಾನಿಯಾದರೆ, ವಿಹಿತ ಕರ್ಮವನ್ನು ಮಾಡದಿದ್ದರೆ ಆತನು ಆ ದಿನವೇ ಪತಿತನಾಗುತ್ತಾನೆ (38). ಆಪತ್ಕಾಲವನ್ನು ಬಿಟ್ಟು ಉಳಿದ ಸಮಯದಲ್ಲಿ ಒಂದು ಪಕ್ಷದವರೆಗೆ ನಿತ್ಯಕರ್ಮಕ್ಕೆ ಹಾನಿಯಾದರೆ, ದೊಡ್ಡ ಪ್ರಾಯಶ್ಚಿತ್ತದಿಂದ ಮಾನವನು ಶುದ್ಧನಾಗುತ್ತಾನೆ. ಯಾವಾತನು ಒಂದು ವರ್ಷದವರೆಗೆ ನಿತ್ಯಕರ್ಮವನ್ನು ಮಾಡುವುದಿಲ್ಲವೋ ಅಂಥವನ

ಪ್ರಾಯಶ್ಚಿತ್ತೇನ ಮಹತಾ ಶುದ್ಧಿಮಾಪ್ನೋತ್ಯನಾಪದಿ।
ಪಕ್ಷಂ ನಿತ್ಯಕ್ರಿಯಾಹಾನೇಃ ಕರ್ತಾ ಮೈತ್ರೇಯ ಮಾನವಃ॥ 39

ಸಂವತ್ಸರಂ ಕ್ರಿಯಾಹಾನಿರ್ಯಸ್ಯ ಪುಂಸೋಽಭಿಜಾಯತೇ।
ತಸ್ಯಾವಲೋಕನಾತ್ ಸೂರ್ಯೋ ನಿರೀಕ್ಷ್ಯಸ್ಸಾಧುಭಿಸ್ಸದಾ॥ 40

ಸ್ಪೃಷ್ಟೇ ಸ್ನಾನಂ ಸಚೈಲಸ್ಯ ಶುದ್ಧೇರ್ಹೇತುರ್ಮಹಾಮತೇ।
ಪುಂಸೋ ಭವತಿ ತಸ್ಯೋಕ್ತಾ ನ ಶುದ್ಧಿಃ ಪಾಪಕರ್ಮಣಃ॥ 41

ದೇವರ್ಷಿಪಿತೃಭೂತಾನಿ ಯಸ್ಯ ನಿಃಶ್ವಸ್ಯ ವೇಶ್ಮನಿ।
ಪ್ರಯಾಂತ್ಯನರ್ಚಿತಾನ್ಯತ್ರ ಲೋಕೇ ತಸ್ಮಾನ್ನ ಪಾಪಕೃತ್॥ 42

ಸಂಭಾಷಣಾನುಪ್ರಶ್ನಾದಿ ಸಹಾಸ್ಯಾಂ ಚೈವ ಕುರ್ವತಃ।
ಜಾಯತೇ ತುಲ್ಯತಾ ತಸ್ಯ ತೇನೈವ ದ್ವಿಜ ವತ್ಸರಾತ್॥ 43

ದೇವಾದಿನಿಃಶ್ವಾಸಹತಂ ಶರೀರಂ ಯಸ್ಯ ವೇಶ್ಮ ಚ।
ನ ತೇನ ಸಂಕರಂ ಕುರ್ಯಾದ್ ಗೃಹಾಸನಪರಿಚ್ಛದೈಃ॥ 44

---

ಮುಖಾವಲೋಕನವನ್ನು ಮಾಡಿದಲ್ಲಿ ಸಜ್ಜನರು ಸೂರ್ಯನನ್ನು ನೋಡಬೇಕು (ಸೂರ್ಯಾವಲೋಕನದಿಂದ ಅವರು ಶುದ್ಧರಾಗುತ್ತಾರೆ) (39-40). ಅಂಥವನ ಸ್ಪರ್ಶವಾದಲ್ಲಿ ಸಚೇಲಸ್ನಾನ ಮಾಡಿದರೆ ಶುದ್ಧಿಯಾಗುತ್ತದೆ. ಒಂದು ವರ್ಷದವರೆಗೆ ಕರ್ಮತ್ಯಾಗಮಾಡಿದ ಪಾಪಿಗೆ ಶುದ್ಧಿಯೇ ಇಲ್ಲ. ದೇವಗಣ, ಋಷಿಗಣ, ಪಿತೃಗಣ ಮತ್ತು ಭೂತಗಣಗಳು ಯಾರ ಮನೆಯಲ್ಲಿ ಪೂಜಿತರಾಗದೆ ನಿಟ್ಟುಸಿರುಬಿಟ್ಟು ಹೊರಟುಹೋಗುತ್ತಾರೋ ಆತನಿಗಿಂತ ಇನ್ನೊಬ್ಬ ಪಾಪಿ ಇಲ್ಲ (41-42). ಅವನೊಡನೆ ಸಂಭಾಷಣೆ ಕುಶಲಪ್ರಶ್ನಾದಿಗಳನ್ನೂ ಜೊತೆಗೆ ಕುಳಿತುಕೊಳ್ಳುವುದನ್ನೂ ಬೇರೊಬ್ಬನು ಒಂದು ವರ್ಷಕಾಲ ಮಾಡಿದಲ್ಲಿ ಅವನೂ ಸಹ ಆ ಪಾಪಿಗೆ ಸಮಾನನಾಗುತ್ತಾನೆ (43). ಯಾವಾತನ ಶರೀರವೂ ಮನೆಯೂ ದೇವಾದಿಗಳ ನಿಟ್ಟುಸಿರಿನಿಂದ ಕಲುಷಿತವಾಗಿದೆಯೋ ಆತನ ಜೊತೆಗೆ ಗೃಹ, ಆಸನ, ವಸ್ತ್ರಾದಿಗಳಿಂದ ಕೂಡಿಕೊಳ್ಳಬಾರದು. ಅವನ ಮನೆಯಲ್ಲಿ ಊಟ ಮಾಡಿದರೆ, ಒಂದೇ ಆಸನದಲ್ಲಿ ಕುಳಿತರೆ, ಒಂದೇ ಹಾಸಿಗೆಯಲ್ಲಿ

**ಅಥ ಭುಂಕ್ತೇ ಗೃಹೇ ತಸ್ಯ ಕರೋತ್ಯಾಸ್ಯಾಂ ತಥಾಸನೇ।**
**ಶೇತೇ ಚಾಪ್ಯೇಕಶಯನೇ ಸ ಸದ್ಯಸ್ತತ್ಸಮೋ ಭವೇತ್॥ 45**

**ದೇವತಾಪಿತೃಭೂತಾನಿ ತಥಾನಭ್ಯರ್ಚ್ಯ ಯೋಽತಿಥೀನ್।**
**ಭುಂಕ್ತೇ ಸ ಪಾತಕಂ ಭುಂಕ್ತೇ ನಿಷ್ಕೃತಿಸ್ತಸ್ಯ ನೇಷ್ಯತಿ॥ 46**

**ಬ್ರಾಹ್ಮಣಾದ್ಯಾಸ್ತು ಯೇ ವರ್ಣಾಃ ಸ್ವಧರ್ಮಾದನ್ಯತೋಮುಖಾಃ।**
**ಯಾಂತಿ ತೇ ನಗ್ನಸಂಜ್ಞಾಂ ತು ಹೀನಕರ್ಮಸ್ವವಸ್ಥಿತಾಃ॥ 47**

**ಚತುರ್ಣಾಂ ಯತ್ರ ವರ್ಣಾನಾಂ ಮೈತ್ರೇಯಾತ್ಯಂತಸಂಕರಃ।**
**ತತ್ರಾಸ್ಯಾ ಸಾಧುವೃತ್ತಿನಾಮುಪಘಾತಾಯ ಜಾಯತೇ॥ 48**

**ಅನಭ್ಯರ್ಚ್ಯ ಋಷೀನ್ ದೇವಾನ್ ಪಿತೃಭೂತಾತಿಥೀಂಸ್ತಥಾ।**
**ಯೋ ಭುಂಕ್ತೇ ತಸ್ಯ ಸಂಲ್ಲಾಪಾತ್ ಪತಂತಿ ನರಕೇ ನರಾಃ॥ 49**

**ತಸ್ಮಾದೇತಾನ್ನರೋ ನಗ್ನಾಂಸ್ತ್ರಯೀಸಂತ್ಯಾಗದೂಷಿತಾನ್।**
**ಸರ್ವದಾ ವರ್ಜಯೇತ್ ಪ್ರಾಜ್ಞ ಆಲಾಪಸ್ಪರ್ಶನಾದಿಷು॥ 50**

---

ಮಲಗಿದರೆ ಈತನೂ ಆ ಪಾಪಿಗೆ ಸಮಾನ ಪಾಪಿಯಾಗುತ್ತಾನೆ (44-45). ದೇವತೆಗಳು, ಪಿತೃಗಳು, ಭೂತಗಣಗಳು ಮತ್ತು ಅತಿಥಿಗಳು—ಇವರನ್ನು ಪೂಜಿಸದೆ ಯಾವನು ಊಟ ಮಾಡುತ್ತಾನೋ ಅವನು ಪಾತಕವನ್ನು ಊಟ ಮಾಡುತ್ತಾನೆ. ಅವನಿಗೆ ಪ್ರಾಯಶ್ಚಿತ್ತವಿಲ್ಲ (46). ಬ್ರಾಹ್ಮಣಾದಿ ನಾಲ್ಕೂ ವರ್ಣದವರು ತಮ್ಮ ಸ್ವಧರ್ಮದಿಂದ ವಿಮುಖರಾಗಿ ಹೀನ ಕರ್ಮಗಳಲ್ಲಿ ನಿಂತರೆ, 'ನಗ್ನ' ಎಂಬ ಹೆಸರನ್ನು ಪಡೆಯುತ್ತಾರೆ. ಮೈತ್ರೇಯ, ಎಲ್ಲಿ ನಾಲ್ಕು ವರ್ಣಗಳ ಧರ್ಮಗಳಿಗೆ ಅತ್ಯಂತ ಸಾಂಕರ್ಯ ಉಂಟಾಗಿರುತ್ತದೆಯೋ ಅಂತಹ ನಡವಳಿಕೆಯಲ್ಲಿರುವುದು ಸಾಧುವೃತ್ತಿಗಳ ಕ್ಷಯಕ್ಕೆ ಕಾರಣವಾಗುತ್ತದೆ (47-48). ಋಷಿ, ದೇವ, ಪಿತೃ, ಭೂತಗಣ ಗಳನ್ನೂ ಅತಿಥಿಗಳನ್ನೂ ಯಾವನು ಅರ್ಚಿಸದೆ ಊಟಮಾಡುತ್ತಾನೋ ಅವನೊಡನೆ ಮಾತನಾಡಿದರೂ ಸಾಕು, ಜನರು ನರಕದಲ್ಲಿ ಬೀಳುತ್ತಾರೆ (49). ಆದ್ದರಿಂದ ಪ್ರಾಜ್ಞನಾದವನು ವೇದಮಾರ್ಗವನ್ನು ತ್ಯಜಿಸಿ ದೂಷಿತ ರಾಗಿರುವ ಈ ನಗ್ನರೊಡನೆ ಸಂಭಾಷಣಸ್ಪರ್ಶಾದಿಗಳನ್ನು ಸರ್ವದಾ ತ್ಯಜಿಸ

**ಶ್ರದ್ಧಾವದ್ಭಿಃ ಕೃತಂ ಯತ್ನಾದ್ದೇವಾನ್ ಪಿತೃಪಿತಾಮಹಾನ್ ।**
**ನ ಪ್ರೀಣಯತಿ ತತ್ ಶ್ರಾದ್ಧಂ ಯದ್ಯೇಭಿರವಲೋಕಿತಮ್ ॥ 51**

**ಶ್ರೂಯತೇ ಚ ಪುರಾ ಖ್ಯಾತೋ ರಾಜಾ ಶತಧನುರ್ಭುವಿ ।**
**ಪತ್ನೀ ಚ ಶೈಬ್ಯಾ ತಸ್ಯಾಭೂದತಿಧರ್ಮಪರಾಯಣಾ ॥ 52**

**ಪತಿವ್ರತಾ ಮಹಾಭಾಗಾ ಸತ್ಯಶೌಚದಯಾನ್ವಿತಾ ।**
**ಸರ್ವಲಕ್ಷಣಸಂಪನ್ನಾ ವಿನಯೇನ ನಯೇನ ಚ ॥ 53**

**ಸ ತು ರಾಜಾ ತಯಾ ಸಾರ್ಧಂ ದೇವದೇವಂ ಜನಾರ್ದನಮ್ ।**
**ಆರಾಧಯಾಮಾಸ ವಿಭುಂ ಪರಮೇಣ ಸಮಾಧಿನಾ ॥ 54**

**ಹೋಮೈರ್ಜಪೈಸ್ತಥಾ ದಾನೈರುಪವಾಸೈಶ್ಚ ಭಕ್ತಿತಃ ।**
**ಪೂಜಾಭಿಶ್ಚಾನುದಿವಸಂ ತನ್ಮನಾ ನಾನ್ಯಮಾನಸಃ ॥ 55**

**ಏಕದಾ ತು ಸಮಂ ಸ್ನಾತೌ ತೌ ತು ಭಾರ್ಯಾಪತೀ ಜಲೇ ।**
**ಭಾಗೀರಥ್ಯಾಸ್ಸಮುತ್ತೀರ್ಣೌ ಕಾರ್ತಿಕ್ಯಾಂ ಸಮುಪೋಷಿತೌ ।**
**ಪಾಷಂಡಿನಮಪಶ್ಯೇತಾಮಾಯಾಂತಂ ಸಮ್ಮುಖಂ ದ್ವಿಜ ॥ 56**

---

ಬೇಕು. ದೇವತೆಗಳನ್ನೂ ಪಿತೃಪಿತಾಮಹರನ್ನೂ ಉದ್ದೇಶಿಸಿ ಶ್ರದ್ಧಾವಂತರು ಮಾಡತಕ್ಕ ಯಾವ ಶ್ರಾದ್ಧವಿದೆಯೋ ಅದು ಈ ನಗ್ನರಿಂದ ನೋಡಲ್ಪಟ್ಟರೆ ದೇವಪಿತೃಗಳಿಗೆ ತೃಪ್ತಿಯನ್ನು ನೀಡುವುದಿಲ್ಲ (50-51). ಹೀಗೆ ಒಂದು ಕಥೆ ಶ್ರುತವಾಗಿದೆ. ಏನೆಂದರೆ: ಹಿಂದೆ ಶತಧನುವೆಂಬ ಒಬ್ಬ ರಾಜನಿದ್ದನು. ಅವನ ಪತ್ನಿಯಾದ ಶೈಬ್ಯೆಯು ಅತ್ಯಂತ ಧರ್ಮಪರಾಯಣೆಯಾಗಿದ್ದಳು. ಆ ಮಹಾಭಾಗಳು ಪತಿವ್ರತೆಯೂ ಸತ್ಯಶೌಚಾನ್ವಿತೆಯೂ ದಯಾವತಿಯೂ ಆಗಿದ್ದಳು. ಸರ್ವಲಕ್ಷಣಸಂಪನ್ನೆಯಾಗಿ ನಯವಿನಯಗಳಿಂದ ಶೋಭಿಸುತ್ತಿದ್ದಳು (52-53). ಆ ರಾಜನು ಶೈಬ್ಯೆಯೊಡನೆ ದೇವದೇವನೂ ವಿಭುವೂ ಆದ ಜನಾರ್ದನನನ್ನು ಪರಮ ನಿಷ್ಠೆಯಿಂದ ಆರಾಧಿಸುತ್ತಿದ್ದನು. ಹೋಮ, ಜಪ, ದಾನ, ಉಪವಾಸ, ಪೂಜೆಗಳಿಂದ ಪ್ರತಿದಿನವೂ ಏಕಾಗ್ರಚಿತ್ತನಾಗಿ ಭಗವಂತನನ್ನು ಭಕ್ತಿಯಿಂದ ಅರ್ಚಿಸುತ್ತಿದ್ದನು (54-55). ಒಂದು ಸಲ ಕಾರ್ತಿಕ ಪೂರ್ಣಿಮೆಯ ದಿನ ಆ ದಂಪತಿಗಳು ಉಪವಾಸವಿದ್ದು ಗಂಗಾನದೀಜಲದಲ್ಲಿ ಸ್ನಾನಮಾಡಿ ಮೇಲೆದ್ದು ಬರುತ್ತಿರುವಾಗ, ಎದುರಿಗೆ

**ಚಾಪಾಚಾರ್ಯಸ್ಯ ತಸ್ಯಾಸೌ ಸಖಾ ರಾಜ್ಞೋ ಮಹಾತ್ಮನಃ।**
**ಅತಸ್ತದ್ಗೌರವಾತ್ತೇನ ಸಹಾಲಾಪಮಥಾಕರೋತ್॥ 57**

**ನ ತು ಸಾ ವಾಗ್ಯತಾ ದೇವೀ ತಸ್ಯ ಪತ್ನೀ ಪತಿವ್ರತಾ।**
**ಉಪೋಷಿತಾಸ್ಮೀತಿ ರವಿಂ ತಸ್ಮಿನ್ ದೃಷ್ಟೇ ದದರ್ಶ ಚ॥ 58**

**ಸಮಾಗಮ್ಯ ಯಥಾನ್ಯಾಯಂ ದಂಪತೀ ತೌ ಯಥಾವಿಧಿ।**
**ವಿಷ್ಣೋಃ ಪೂಜಾದಿಕಂ ಸರ್ವಂ ಕೃತವಂತೌ ದ್ವಿಜೋತ್ತಮ॥ 59**

**ಕಾಲೇನ ಗಚ್ಛತಾ ರಾಜಾ ಮಮಾರಾಸೌ ಸಪತ್ನಜಿತ್।**
**ಅನ್ವಾರುರೋಹ ತಂ ದೇವೀ ಚಿತಾಸ್ಥಂ ಭೂಪತಿಂ ಪತಿಮ್॥ 60**

**ಸ ತು ತೇನಾಪಚಾರೇಣ ಶ್ವಾ ಜಜ್ಞೇ ವಸುಧಾಧಿಪಃ।**
**ಉಪೋಷಿತೇನ ಪಾಷಂಡಸಂಲ್ಲಾಪೋ ಯತ್ಕೃತೋಽಭವತ್॥ 61**

---

ಬರುತ್ತಿದ್ದ ಒಬ್ಬ ಪಾಷಂಡಿ(ನಗ್ನ)ಯನ್ನು ನೋಡಿದರು (56). ಚಾಪಾಚಾರ್ಯನೂ ಮಹಾತ್ಮನೂ ಆದ ಶತಧನು ರಾಜನಿಗೆ ಆ ಪಾಷಂಡಿಯು ಸ್ನೇಹಿತನಾಗಿದ್ದನು. ಆದ್ದರಿಂದ ಆ ಗೌರವಕ್ಕಾಗಿ ರಾಜನು ಆತನೊಡನೆ ಸಂಭಾಷಣೆ ಮಾಡಿದನು. ಆದರೆ ರಾಜನ ಪತ್ನಿಯೂ ಪತಿವ್ರತೆಯೂ ಆದ ಶೈಬ್ಯೆಯು ಮಾತ್ರ ಮಾತನಾಡದೆ, ತಾನು ಉಪವಾಸ ವ್ರತನಿಷ್ಠಳೆಂದು ಮೌನವಾಗಿದ್ದು, ಪಾಷಂಡಿಯ ದರ್ಶನವಾದ್ದರಿಂದ ಸೂರ್ಯನನ್ನು ನೋಡಿದಳು (57-58). ಮೈತ್ರೇಯ, ಅನಂತರ ಆ ದಂಪತಿಗಳು ಯಥಾರೀತಿಯಾಗಿ ಬಂದು ವಿಧಿವತ್ತಾಗಿ ವಿಷ್ಣುವಿನ ಎಲ್ಲ ಪೂಜಾದಿಕೃತ್ಯಗಳನ್ನೂ ನೆರವೇರಿಸಿದರು. ಕೆಲವು ಕಾಲವಾದ ಮೇಲೆ ವೈರಿವಿಧ್ವಂಸಕನಾದ ಆ ರಾಜನು ನಿಧನವನ್ನೈದಿದನು. ದೇವಿಯಾದ ಶೈಬ್ಯೆಯು ಭೂಪತಿಯಾದ ಪತಿಯೊಡನೆ ಚಿತೆಯನ್ನೇರಿ ಸಹಗಮನ ಮಾಡಿದಳು (59-60). ಉಪವಾಸವ್ರತದಲ್ಲಿದ್ದಾಗ ರಾಜನು ಪಾಷಂಡಿಯೊಡನೆ ಸಂಭಾಷಿಸಿದನಷ್ಟೆ. ಆ ಅಪಚಾರದಿಂದ ಆತನು ನಾಯಿಯಾಗಿ ಹುಟ್ಟಿದನು. ಶುಭಾಂಗಿಯಾದ ಶೈಬ್ಯೆಯಾದರೋ ಕಾಶೀರಾಜನ ಪುತ್ರಿಯಾಗಿ ಜನಿಸಿದಳು. ಅವಳು ಸರ್ವಶಾಸ್ತ್ರಜ್ಞಾನವುಳ್ಳವಳೂ ಸರ್ವಲಕ್ಷಣಸಂಪನ್ನೆಯೂ ಆಗಿದ್ದಳಲ್ಲದೆ

**ಸಾ ತು ಜಾತಿಸ್ಮರಾ ಜಜ್ಞೇ ಕಾಶೀರಾಜಸುತಾ ಶುಭಾ।**
**ಸರ್ವವಿಜ್ಞಾನಸಂಪೂರ್ಣಾ ಸರ್ವಲಕ್ಷಣಪೂಜಿತಾ॥ 62**

**ತಾಂ ಪಿತಾ ದಾತುಕಾಮೋಽಭೂದ್ವರಾಯ ವಿನಿವಾರಿತಃ।**
**ತಯೈವ ತನ್ವ್ಯಾ ವಿರತೋ ವಿವಾಹಾರಂಭತೋ ನೃಪಃ॥ 63**

**ತತಸ್ಸಾ ದಿವ್ಯಯಾ ದೃಷ್ಟ್ಯಾ ದೃಷ್ಟ್ವಾ ಶ್ವಾನಂ ನಿಜಂ ಪತಿಮ್।**
**ವಿದಿಶಾಖ್ಯಂ ಪುರಂ ಗತ್ವಾ ತದವಸ್ಥಂ ದದರ್ಶ ತಮ್॥ 64**

**ತಂ ದೃಷ್ಟ್ವೈವ ಮಹಾಭಾಗಂ ಶ್ವಭೂತಂ ತು ಪತಿಂ ತದಾ।**
**ದದೌ ತಸ್ಮೈ ವರಾಹಾರಂ ಸತ್ಕಾರಪ್ರವಣಂ ಶುಭಾ॥ 65**

**ಭುಂಜಂದತ್ತಂ ತಯಾ ಸೋಽನ್ನಮತಿಮೃಷ್ಟಮಭೀಪ್ಸಿತಮ್।**
**ಸ್ವಜಾತಿಲಲಿತಂ ಕುರ್ವನ್ ಬಹು ಚಾಟು ಚಕಾರ ವೈ॥ 66**

**ಅತೀವ ವ್ರೀಡಿತಾ ಬಾಲಾ ಕುರ್ವತಾ ಚಾಟು ತೇನ ಸಾ।**
**ಪ್ರಣಾಮಪೂರ್ವಮಾಹೇದಂ ದಯಿತಂ ತಂ ಕುಯೋನಿಜಮ್॥**

---

ಜನ್ಮಾಂತರದ ಸ್ಮರಣೆ ಅವಳಿಗಿತ್ತು (61-62). ತಂದೆಯಾದ ಕಾಶೀರಾಜನು ಅವಳನ್ನು ಮದುವೆ ಮಾಡಲು ಯತ್ನಿಸಿದಾಗ, ಆ ಸುಂದರಿ ಅವನನ್ನು ತಡೆದಳು. ರಾಜನು ಸುಮ್ಮನಾದನು (63). (ಪೂರ್ವಜನ್ಮದ) ತನ್ನ ಪತಿಯು ನಾಯಿಯಾಗಿ ಹುಟ್ಟಿದ್ದಾನೆಂಬುದನ್ನು ಅವಳು ದಿವ್ಯದೃಷ್ಟಿಯಿಂದ ತಿಳಿದು ವಿದಿಶೆಯೆಂಬ ನಗರಕ್ಕೆ ಹೋಗಿ, ಆತನು ನಾಯಿಯ ಜನ್ಮದಲ್ಲಿರುವುದನ್ನು ಕಂಡಳು (64). ಮಹಾಭಾಗನಾದ ತನ್ನ ಪತಿಯು ನಾಯಿಯಾಗಿರುವುದನ್ನು ಕಂಡೊಡನೆ ಆ ಶುಭಾಂಗಿನಿಯು ಅದನ್ನು ಸತ್ಕರಿಸಿ ಬಳಿಗೆ ಕರೆದು ಉತ್ತಮವಾದ ಆಹಾರವನ್ನು ಕೊಟ್ಟು ಉಣಿಸಿದಳು (65). ಅವಳು ಕೊಟ್ಟ ಅನ್ನವು ತನಗೆ ಪ್ರಿಯವೂ ರುಚಿಕರವೂ ಆದ್ದರಿಂದ ನಾಯಿಯು ಅದನ್ನು ತಿನ್ನುತ್ತ ತನ್ನ ಜಾತಿಗೆ ಸಹಜವಾದ ನಾನಾ ಬಗೆಯ ಲಲಿತಚೇಷ್ಟೆಗಳನ್ನು ಮಾಡಿತು (66). (ಕುಂಯ್ ಕುಂಯ್ ಎನ್ನುವುದು, ಬಾಲ ಅಲ್ಲಾಡಿಸುವುದು ಮುಂತಾದ) ಅದರ ಚೇಷ್ಟೆಗಳನ್ನು ನೋಡಿ ರಾಜಪುತ್ರಿಗೆ ಬಹಳ ನಾಚಿಕೆಯಾಯಿತು. ಕುತ್ಸಿತಯೋನಿಯಲ್ಲಿ

**ಸ್ಮರ್ಯತಾಂ ತನ್ಮಹಾರಾಜ ದಾಕ್ಷಿಣ್ಯಲಲಿತಂ ತ್ವಯಾ।**
**ಯೇನ ಶ್ವಯೋನಿಮಾಪನ್ನೋ ಮಮ ಚಾಟುಕರೋ ಭವಾನ್॥**

**ಪಾಷಂಡಿನಂ ಸಮಾಭಾಷ್ಯ ತೀರ್ಥಸ್ನಾನಾದನಂತರಮ್।**
**ಪ್ರಾಪ್ತೋಽಸಿ ಕುತ್ಸಿತಾಂ ಯೋನಿಂ ಕಿಂ ನ ಸ್ಮರಸಿ ತತ್ಪ್ರಭೋ॥ 69**

*ಶ್ರೀಪರಾಶರ ಉವಾಚ:*

**ತಯೈವಂ ಸ್ಮಾರಿತೇ ತಸ್ಮಿನ್ ಪೂರ್ವಜಾತಿಕೃತೇ ತದಾ।**
**ದಧ್ಯೌ ಚಿರಮಥಾವಾಪ ನಿರ್ವೇದಮತಿದುರ್ಲಭಮ್॥ 70**

**ನಿರ್ವಿಣ್ಣಚಿತ್ತಸ್ಯ ತತೋ ನಿರ್ಗಮ್ಯ ನಗರಾದ್ ಬಹಿಃ।**
**ಮರುಪ್ರಪತನಂ ಕೃತ್ವಾ ಶಾರ್ಗಾಲೀಂ ಯೋನಿಮಾಗತಃ॥ 71**

**ಸಾಪಿ ದ್ವಿತೀಯೇ ಸಂಪ್ರಾಪ್ತೇ ವೀಕ್ಷ್ಯ ದಿವ್ಯೇನ ಚಕ್ಷುಷಾ।**
**ಜ್ಞಾತ್ವಾ ಶೃಗಾಲಂ ತಂ ದ್ರಷ್ಟುಂ ಯಯೌ**
**ಕೋಲಾಹಲಂ ಗಿರಿಮ್॥ 72**

---

ಜನ್ಮತಾಳಿದ ತನ್ನ ಪತಿಗೆ ಅವಳು ನಮಸ್ಕರಿಸಿ "ಮಹಾರಾಜ, ನೀನು (ಹಿಂದಿನ ಜನ್ಮದಲ್ಲಿ) ನನ್ನೊಡನೆ ಮಾಡುತ್ತಿದ್ದ ಚತುರ ಲೀಲೆಗಳನ್ನು ಸ್ಮರಿಸಿಕೊ. ಈಗ ನಾಯಿಯ ಜನ್ಮದಲ್ಲಿ ಹುಟ್ಟಿ ಈ ಬಗೆಯ ಚಾಟುಲೀಲೆಗಳನ್ನು ನನ್ನೊಡನೆ ಮಾಡುತ್ತಿದ್ದೀಯೆ (67-68). ತೀರ್ಥಸ್ನಾನವನ್ನು ಮಾಡಿದ ಮೇಲೆ ಪಾಷಂಡಿಯೊಡನೆ ಮಾತನಾಡಿದ್ದರಿಂದ ಈ ಕೊಳಕು ಜನ್ಮ ನಿನಗೆ ಬಂದಿದೆ. ಓ ಸ್ವಾಮಿ, ಅದು ನೆನಪಿಗೆ ಬರುತ್ತದೆಯೇ?" ಎಂದಳು (69). ಹೀಗೆ ರಾಜಪುತ್ರಿಯು ಜನ್ಮಾಂತರದ ಕಾರ್ಯವನ್ನು ನೆನಪುಮಾಡಿ ಕೊಡಲಾಗಿ ಆ ನಾಯಿಯು ಬಹಳ ಹೊತ್ತು ಧ್ಯಾನಸ್ಥವಾಯಿತು. ಅನಂತರ ಅದಕ್ಕೆ ಮಹತ್ತರವಾದ ವೈರಾಗ್ಯ ಹುಟ್ಟಿತು. ಅದು ತುಂಬ ಬೇಸರದಿಂದ ಪಟ್ಟಣದ ಹೊರಗೆ ಹೋಗಿ ಬೆಟ್ಟದ ತುದಿಯಿಂದ ಬಿದ್ದು ಪ್ರಾಣ ಬಿಟ್ಟಿತು. ಆಮೇಲೆ ಅದಕ್ಕೆ ನರಿಯ ಜನ್ಮ ಬಂದಿತು (70-71). ಹೀಗೆ ರಾಜನಿಗೆ ಎರಡನೆಯದಾಗಿ ನರಿಯ ಜನ್ಮ ಬರಲು, ಆ ರಾಜಪುತ್ರಿಯು ದಿವ್ಯದೃಷ್ಟಿಯಿಂದ ಅದನ್ನು ತಿಳಿದು, ಆ ನರಿಯನ್ನು

**ತತ್ರಾಪಿ ದೃಷ್ಟ್ವಾ ತಂ ಪ್ರಾಹ ಶಾರ್ಗಾಲೀಂ ಯೋನಿಮಾಗತಮ್।**
**ಭರ್ತಾರಮಪಿ ಚಾರ್ವಂಗೀ ತನಯಾ ಪೃಥಿವೀಕ್ಷಿತಃ॥ 73**

**ಅಪಿ ಸ್ಮರಸಿ ರಾಜೇಂದ್ರ ಶ್ವಯೋನಿಸ್ಥಸ್ಯ ಯನ್ಮಯಾ।**
**ಪ್ರೋಕ್ತಂ ತೇ ಪೂರ್ವಚರಿತಂ ಪಾಷಂಡಾಲಾಪಸಂಶ್ರಯಮ್॥ 74**

**ಪುನಸ್ತಯೋಕ್ತಂ ಸ ಜ್ಞಾತ್ವಾ ಸತ್ಯಂ ಸತ್ಯವತಾಂ ವರಃ।**
**ಕಾನನೇ ಸ ನಿರಾಹಾರಸ್ತತ್ಯಾಜ ಸ್ವಂ ಕಲೇವರಮ್॥ 75**

**ಭೂಯಸ್ತತೋ ವೃಕೋ ಜಜ್ಞೇ ಗತ್ವಾ ತಂ ನಿರ್ಜನೇ ವನೇ।**
**ಸ್ಮಾರಯಾಮಾಸ ಭರ್ತಾರಂ ಪೂರ್ವವೃತ್ತಮನಿಂದಿತಾ॥ 76**

**ನ ತ್ವಂ ವೃಕೋ ಮಹಾಭಾಗ ರಾಜಾ ಶತಧನುರ್ಭವಾನ್।**
**ಶ್ವಾ ಭೂತ್ವಾ ತಂ ಶೃಗಾಲೋಽಭೂರ್ವೃಕತ್ವಂ ಸಾಂಪ್ರತಂ ಗತಃ॥**

**ಸ್ಮಾರಿತೇನ ಯದಾ ತ್ಯಕ್ತಸ್ತೇನಾತ್ಮಾ ಗೃಧ್ರತಾಂ ಗತಃ।**
**ಅಪಾಪಾ ಸಾ ಪುನಶ್ಚೈನಂ ಬೋಧಯಾಮಾಸ ಭಾಮಿನೀ॥ 78**

---

ನೋಡುವುದಕ್ಕಾಗಿ ಕೋಲಾಹಲವೆಂಬ ಪರ್ವತಕ್ಕೆ ಹೋದಳು (72). ಅಲ್ಲಿಯೂ ನರಿಯ ಜನ್ಮದಲ್ಲಿದ್ದ ತನ್ನ ಗಂಡನನ್ನು ನೋಡಿ ರಾಜಪುತ್ರಿಯಾದ ಆ ಸುಂದರಿಯು "ಓ ರಾಜೇಂದ್ರ, ನೀನು ನಾಯಿಯ ಜನ್ಮದಲ್ಲಿದ್ದಾಗ ಪಾಷಂಡಿ ಸಂಭಾಷಣೆಯಿಂದುಂಟಾದ ನಿನ್ನ ಪೂರ್ವಚರಿತೆಯನ್ನು ಹೇಳಿದ್ದೆನು. ಅದರ ಸ್ಮರಣೆಯಾಗುತ್ತಿದೆಯೆ?" ಎಂದು ಕೇಳಿದಳು (73-74). ಸತ್ಯವಂತರಲ್ಲಿ ಶ್ರೇಷ್ಠನಾದ ಆ ರಾಜನು ಅವಳಾಡಿದ ಸತ್ಯಸಂಗತಿಯನ್ನು ಸ್ಮರಿಸಿಕೊಂಡು, ಅಡವಿಯಲ್ಲಿ ನಿರಾಹಾರನಾಗಿದ್ದು ತನ್ನ ದೇಹವನ್ನು ತ್ಯಜಿಸಿದನು. ಮತ್ತೆ ಆತನು ನಿರ್ಜನವಾದ ವನದಲ್ಲಿ ತೋಳವಾಗಿ ಹುಟ್ಟಿದನು. ಗುಣಾಢ್ಯಳಾದ ರಾಜಪುತ್ರಿಯು ಮತ್ತೆ ಬಂದು ತನ್ನ ಪತಿಗೆ ಪೂರ್ವಚರಿತೆಯನ್ನು ನೆನಪು ಮಾಡಿದಳು (75-76). "ಓ ಮಹಾತ್ಮ, ನೀನು ತೋಳವಲ್ಲ, ಶತಧನುವೆಂಬ ರಾಜನಾಗಿದ್ದವನು ನೀನು. ನಾಯಿಯಾಗಿ ಹುಟ್ಟಿ ಆಮೇಲೆ ನರಿಯಾಗಿ ಈಗ ತೋಳದ ಜನ್ಮಕ್ಕೆ ಬಂದಿದ್ದೀಯೆ" ಎಂದಳು (77). ಹೀಗೆ ಜ್ಞಾಪಿಸಲಾಗಿ ಆ ರಾಜನು ತೋಳದ ಜನ್ಮವನ್ನು

**ನರೇಂದ್ರ ಸ್ಮರ್ಯತಾಮಾತ್ಮಾ ಹ್ಯಲಂ ತೇ ಗೃಧ್ರಚೇಷ್ಟಯಾ।**
**ಪಾಷಂಡಾಲಾಪಜಾತೋಽಯಂ ದೋಷೋ**
**ಯದ್ಗೃಧ್ರತಾಂ ಗತಃ॥ 79**

**ತತಃ ಕಾಕತ್ವಮಾಪನ್ನಂ ಸಮನಂತರಜನ್ಮನಿ।**
**ಉವಾಚ ತನ್ವೀ ಭರ್ತಾರ ಮುಪಲಭ್ಯಾತ್ಮಯೋಗತಃ॥ 80**

**ಅಶೇಷಭೂಭೃತಃ ಪೂರ್ವಂ ವಶ್ಯಾ ಯಸ್ಮೈ ಬಲಿಂ ದದುಃ।**
**ಸ ತ್ವಂ ಕಾಕತ್ವಮಾಪನ್ನೋ ಜಾತೋಽದ್ಯ ಬಲಿಭುಕ್ ಪ್ರಭೋ॥**

**ಏವಮೇವ ಚ ಕಾಕತ್ವೇ ಸ್ಮಾರಿತಸ್ಯ ಪುರಾತನಮ್।**
**ತತ್ಯಾಜ ಭೂಪತಿಃ ಪ್ರಾಣಾನ್ ಮಯೂರತ್ವಮವಾಪ ಚ॥ 82**

**ಮಯೂರತ್ವೇ ತತಸ್ಸಾ ವೈ ಚಕಾರಾನುಗತಿಂ ಶುಭಾ।**
**ದತ್ತೈಃ ಪ್ರತಿಕ್ಷಣಂ ಭೋಜ್ಯೈರ್ಬಾಲಾ ತಜ್ಜಾತಿಭೋಜನೈಃ॥ 83**

---

ತ್ಯಜಿಸಿ ಹದ್ದಾಗಿ ಹುಟ್ಟಿದನು. ಪುಣ್ಯಶೀಲೆಯಾದ ಶೈಬ್ಯೆಯು ಮತ್ತೆ ಹೋಗಿ ಹಿಂದಿನ ವೃತ್ತಾಂತವನ್ನು ನೆನಪುಮಾಡಿಕೊಡುತ್ತ "ನರೇಂದ್ರ, ನೀನು ಯಾರೆಂಬುದನ್ನು ಸ್ಮರಿಸಿಕೊ. ಈ ಹದ್ದಿನ ಚೇಷ್ಟೆಯು ಬೇಡ. ನೀನು ಹದ್ದಾಗಿರುವುದಕ್ಕೆ ಪಾಷಂಡನೊಡನೆ ಸಂಭಾಷಣೆ ಮಾಡಿದುದ ರಿಂದುಂಟಾದ ದೋಷವೇ ನಿಮಿತ್ತ" ಎಂದಳು (78-79). ಅನಂತರ ಅವನು ಗೃಧ್ರದೇಹವನ್ನು ತ್ಯಜಿಸಿ ಕಾಗೆಯಾಗಿ ಜನಿಸಿದನು. ರಾಜಪುತ್ರಿಯು ಯೋಗಬಲದಿಂದ ಅದರ ಇರವನ್ನು ತಿಳಿದು ಹೋಗಿ ತನ್ನ ಜನ್ಮಾಂತರದ ಪತಿಯನ್ನು ಕುರಿತು "ಹೇ ಸ್ವಾಮಿ, ಹಿಂದೆ ನಿನ್ನ ಸಾಮಂತರಾದ ಸಮಸ್ತ ಭೂಪಾಲರಿಂದಲೂ ಬಲಿಯನ್ನು (ಕಪ್ಪವನ್ನು) ಸ್ವೀಕರಿಸುತ್ತಿದ್ದ ನೀನು ಈಗ ಕಾಗೆಯ ಜನ್ಮವನ್ನು ಪಡೆದು 'ಬಲಿಭುಕ್' ಆಗಿಬಿಟ್ಟೆಯಲ್ಲ!" ಎಂದಳು (80-81). ಕಾಗೆಯಾದಾಗಲೂ ಈ ರೀತಿಯಲ್ಲಿ ಪೂರ್ವವೃತ್ತಾಂತವನ್ನು ಸ್ಮರಣೆಗೆ ತಂದುಕೊಡಲಾಗಿ, ಆ ರಾಜನು ಕಾಕದೇಹವನ್ನು ತ್ಯಜಿಸಿ ನವಿಲಾಗಿ ಹುಟ್ಟಿದನು. ಆಗಲೂ ಶುಭಾಂಗಿಯಾದ ಕಾಶೀರಾಜ ಪುತ್ರಿಯು ಅದರ ಬಳಿಗೆ ಹೋಗಿ ನವಿಲಿನ ಆಹಾರವನ್ನು ಕೊಡುತ್ತ ಅದನ್ನು ಪೋಷಿಸು

**ತತಸ್ತು ಜನಕೋ ರಾಜಾ ವಾಜಿಮೇಧಂ ಮಹಾಕ್ರತುಮ್।**
**ಚಕಾರ ತಸ್ಯಾವಭೃಥೇ ಸ್ನಾಪಯಾಮಾಸ ತಂ ತದಾ॥** 84

**ಸಸ್ನೌ ಸ್ವಯಂ ಚ ತನ್ವಂಗೀ ಸ್ಮಾರಯಾಮಾಸ ಚಾಪಿ ತಮ್।**
**ಯಥಾಸೌ ಶ್ವಶೃಗಾಲಾದಿಯೋನಿಂ ಜಗ್ರಾಹ ಪಾರ್ಥಿವಃ॥** 85

**ಸ್ಮೃತಜನ್ಮಕ್ರಮಸ್ಸೋಽಥ ತತ್ಯಾಜ ಸ್ವಕಲೇವರಮ್।**
**ಜಜ್ಞೇ ಸ ಜನಕಸ್ಯೈವ ಪುತ್ರೋಽಸೌ ಸುಮಹಾತ್ಮನಃ॥** 86

**ತತಸ್ಸಾ ಪಿತರಂ ತನ್ವೀ ವಿವಾಹಾರ್ಥಮಚೋದಯತ್।**
**ಸ ಚಾಪಿ ಕಾರಯಾಮಾಸ ತಸ್ಯಾ ರಾಜಾ ಸ್ವಯಂವರಮ್॥** 87

**ಸ್ವಯಂವರೇ ಕೃತೇ ಸಾ ತಂ ಸಂಪ್ರಾಪ್ತಂ ಪತಿಮಾತ್ಮನಃ।**
**ವರಯಾಮಾಸ ಭೂಯೋಽಪಿ ಭರ್ತೃಭಾವೇನ ಭಾಮಿನೀ॥** 88

---

ತ್ತಿದ್ದಳು (82-83). ಆ ಸಮಯದಲ್ಲಿ (ವಿದೇಹರಾಜ್ಯದ) ಜನಕ* ರಾಜನು ಅಶ್ವಮೇಧವೆಂಬ ಮಹಾಯಾಗವನ್ನು ಮಾಡಿದನು. ಅವಭೃಥಸ್ನಾನದ ಸಮಯದಲ್ಲಿ (ಪುಣ್ಯೋದಕದಿಂದ) ಆ ನವಿಲಿಗೂ ಸ್ನಾನ ಮಾಡಿಸಿದನು (84). ಕಾಶೀರಾಜಪುತ್ರಿಯೂ ಸ್ನಾನಮಾಡಿ ಆ ನವಿಲಿಗೆ ಹಿಂದಿನ ಜನ್ಮದಲ್ಲಿ ರಾಜನಾಗಿದ್ದು ನರಿ ಮುಂತಾದ ಜನ್ಮವು ಬಂದ ವಿಷಯವನ್ನು ನೆನಪು ಮಾಡಿಕೊಟ್ಟಳು. ಆಗ ನವಿಲು ತನ್ನ ಹಿಂದಿನ ಎಲ್ಲ ಜನ್ಮಗಳ ವೃತ್ತಾಂತವನ್ನು ತಿಳಿದುಕೊಂಡು ತನ್ನ ದೇಹವನ್ನು ಬಿಟ್ಟಿತು. ಆಮೇಲೆ ಆತನು ಮಹಾತ್ಮನಾದ ಆ ಜನಕರಾಜನಿಗೇ ಪುತ್ರನಾಗಿ ಜನಿಸಿದನು (85-86). ಅನಂತರ ರಾಜಪುತ್ರಿಯು ತನ್ನ ತಂದೆಯಾದ ಕಾಶೀರಾಜನನ್ನು ತನ್ನ ವಿವಾಹಾರ್ಥವಾಗಿ ಪ್ರೇರಿಸಿದಳು. ರಾಜನು ಆದಕ್ಕಾಗಿ ಸ್ವಯಂವರ ವನ್ನೇರ್ಪಡಿಸಿದನು. ಆ ಸ್ವಯಂವರಕ್ಕೆ ಜನಕರಾಜನ ಪುತ್ರನು ಆಗಮಿಸಿರಲಾಗಿ, ರಾಜಪುತ್ರಿಯು ಆತನನ್ನೇ ತನ್ನ ಪತಿಯೆಂದು ವರಿಸಿದಳು (87-88). ಆ ರಾಜಪುತ್ರನು ಅವಳೊಂದಿಗೆ ಎಲ್ಲ ಸುಖಸಂತೋಷಗಳನ್ನೂ

---

* ಈತನು ಜನಕವಂಶದ ಒಬ್ಬ ರಾಜ. ರಾಮಾಯಣದಲ್ಲಿ ಬರುವ ಸೀರಧ್ವಜನೆಂಬ ಜನಕರಾಜನಲ್ಲ.

**ಬುಭುಜೇ ಚ ತಯಾ ಸಾರ್ಧಂ ಸಂಭೋಗಾನ್ನೃಪನಂದನಃ।**
**ಪಿತರ್ಯುಪರತೇ ರಾಜ್ಯಂ ವಿದೇಹೇಷು ಚಕಾರ ಸಃ॥ 89**

**ಇಯಾಜ ಯಜ್ಞಾನ್ ಸುಬಹೂನ್ ದದೌ ದಾನಾನಿ ಚಾರ್ಥಿನಾಮ್।**
**ಪುತ್ರಾನುತ್ಪಾದಯಾಮಾಸ ಯುಯುಧೇ ಚ ಸಹಾರಿಭಿಃ॥ 90**

**ರಾಜ್ಯಂ ಭುಕ್ತ್ವಾ ಯಥಾನ್ಯಾಯಂ ಪಾಲಯಿತ್ವಾ ವಸುಂಧರಾಮ್।**
**ತತ್ಯಾಜ ಸ ಪ್ರಿಯಾನ್ ಪ್ರಾಣಾನ್ ಸಂಗ್ರಾಮೇ**
**ಧರ್ಮತೋ ನೃಪಃ॥ 91**

**ತತಶ್ಚಿತಾಸ್ಥಂ ತಂ ಭೂಯೋ ಭರ್ತಾರಂ ಸಾ ಶುಭೇಕ್ಷಣಾ।**
**ಅನ್ವಾರುರೋಹ ವಿಧಿವದ್ಯಥಾಪೂರ್ವಂ ಮುದಾನ್ವಿತಾ॥ 92**

**ತತೋಽವಾಪ ತಯಾ ಸಾರ್ಧಂ ರಾಜಪುತ್ರ್ಯಾ ಸ ಪಾರ್ಥಿವಃ।**
**ಐಂದ್ರಾನತೀತ್ಯ ವೈ ಲೋಕಾಂಲ್ಲೋಕಾನ್ ಪ್ರಾಪ**
**ತದಾಕ್ಷಯಾನ್॥ 93**

---

ಅನುಭವಿಸುತ್ತಿದ್ದನು. ಕಾಲಕ್ರಮದಲ್ಲಿ ತಂದೆಯು ಸ್ವರ್ಗಸ್ಥನಾಗಲು ಆತನು ವಿದೇಹಾಧಿಪತಿಯಾಗಿ ರಾಜ್ಯವನ್ನು ಪಾಲಿಸಿದನು (89). ಅನೇಕಯಾಗ ಗಳನ್ನು ನೆರವೇರಿಸಿದನು. ಅರ್ಥಿಗಳಿಗೆ ಬೇಕಾದಷ್ಟು ದಾನಮಾಡಿದನು. ಪುತ್ರರನ್ನೂ ಪಡೆದನು. ಶತ್ರುಗಳೊಡನೆ ಯುದ್ಧವನ್ನೂ ನಡೆಸಿದನು. ಆ ರಾಜನು ರಾಜ್ಯಸುಖವನ್ನು ಭೋಗಿಸಿ, ಧರ್ಮದಿಂದ ರಾಜ್ಯವನ್ನು ಪಾಲಿಸಿ, ಯುದ್ಧಭೂಮಿಯಲ್ಲಿ ಕ್ಷಾತ್ರಧರ್ಮದಿಂದ ಹೋರಾಡಿ ಪ್ರಾಣವನ್ನು ಬಿಟ್ಟನು (90-91). ಆಗ ಚಿತೆಯಲ್ಲಿ ಮಲಗಿಸಿದ ಪತಿಯೊಡನೆ ಪತ್ನಿಯಾದ ಆ ಶುಭಾಂಗಿಯೂ ವಿಧಿವತ್ತಾಗಿ ಹಿಂದಿನಂತೆಯೇ ಸಹಗಮನಮಾಡಿದಳು (92). ಅನಂತರ ಆ ರಾಜನು ರಾಜಪುತ್ರಿಯಾದ ಆ ಪತ್ನಿಯೊಡನೆ ಇಂದ್ರ ಲೋಕಕ್ಕಿಂತಲೂ ಅಕ್ಷಯವಾದ ಉತ್ತಮಲೋಕವನ್ನು ಪಡೆದನು. ಮೈತ್ರೇಯ, ಆ ರಾಜನು ಅತಿದುರ್ಲಭವಾದ ದಾಂಪತ್ಯವನ್ನು ಪಡೆದು ಈ ಪ್ರಕಾರ ಶುದ್ಧಿಯನ್ನು ಹೊಂದಿದನು. ಆ ದಂಪತಿಗಳು ತಮ್ಮ ಪುಣ್ಯಫಲ ವಾಗಿ ಅಸಾಧಾರಣವೂ ಅಕ್ಷಯವೂ ಆದ ಸ್ವರ್ಗವನ್ನು ಪಡೆದರು (93-

**ಸ್ವರ್ಗಾಕ್ಷಯತ್ವಮತುಲಂ ದಾಂಪತ್ಯಮತಿದುರ್ಲಭಮ್।**
**ಪ್ರಾಪ್ತಂ ಪುಣ್ಯಫಲಂ ಪ್ರಾಪ್ಯ ಸಂಶುದ್ಧಿಂ ತಾಂ ದ್ವಿಜೋತ್ತಮ॥ 94**

**ಏಷ ಪಾಷಂಡಸಂಭಾಷಾದ್ದೋಷಃ ಪ್ರೋಕ್ತೋ ಮಯಾ ದ್ವಿಜ।**
**ತಥಾಶ್ವಮೇಧಾವಭೃಥಸ್ನಾನಮಾಹಾತ್ಮ್ಯಮೇವ ಚ॥ 95**

**ತಸ್ಮಾತ್ಪಾಷಂಡಿಭಿಃ ಪಾಪೈರಾಲಾಪಸ್ಪರ್ಶನಂ ತ್ಯಜೇತ್।**
**ವಿಶೇಷತಃ ಕ್ರಿಯಾಕಾಲೇ ಯಜ್ಞಾದೌ ಚಾಪಿ ದೀಕ್ಷಿತಃ॥ 96**

**ಕ್ರಿಯಾಹಾನಿರ್ಗೃಹೇ ಯಸ್ಯ ಮಾಸಮೇಕಂ ಪ್ರಜಾಯತೇ।**
**ತಸ್ಯಾವಲೋಕನಾತ್ ಸೂರ್ಯಂ ಪಶ್ಯೇತ ಮತಿಮಾನ್ನರಃ॥ 97**

**ಕಿಂ ಪುನರ್ಯೈಸ್ತು ಸಂತ್ಯಕ್ತಾ ತ್ರಯೀ ಸರ್ವಾತ್ಮನಾ ದ್ವಿಜ।**
**ಪಾಷಂಡಭೋಜಿಭಿಃ ಪಾಪೈರ್ವೇದವಾದಿವಿರೋಧಿಭಿಃ॥ 98**

**ಸಹಾಲಾಪಸ್ತು ಸಂಸರ್ಗಃ ಸಹಾಸ್ಯಾ ಚಾತಿಪಾಪಿನೀ।**
**ಪಾಷಂಡಿಭಿರ್ದುರಾಚಾರೈಸ್ತಸ್ಮಾತ್ತಾನ್ಪರಿವರ್ಜಯೇತ್॥ 99**

---

94). ಪಾಷಂಡರೊಡನೆ ಸಂಭಾಷಿಸುವುದರಿಂದಾಗುವ ದೋಷವನ್ನೂ ಅಶ್ವಮೇಧಯಾಗದಲ್ಲಿ ಅವಭೃಥ ಸ್ನಾನದಿಂದಾಗುವ ಪುಣ್ಯದ ಮಾಹಾತ್ಮ್ಯವನ್ನೂ, ಮೈತ್ರೇಯ, ಈ ಪ್ರಕಾರ ನಿನಗೆ ತಿಳಿಸಿದ್ದೇನೆ (95). ಆದ್ದರಿಂದ ಪಾಪಿಗಳಾದ ಪಾಷಂಡಿಗಳೊಡನೆ ಸಂಭಾಷಣೆ ಸ್ಪರ್ಶಾದಿಗಳನ್ನು ತ್ಯಜಿಸಬೇಕು. ವಿಶೇಷವಾಗಿ ಯಜ್ಞಾದಿಗಳಲ್ಲಿ ವ್ರತನಿಷ್ಠನಾದಾಗ ತ್ಯಜಿಸಲೇಬೇಕು (96). ಯಾವಾತನ ಗೃಹದಲ್ಲಿ ಒಂದು ತಿಂಗಳವರೆಗೆ ಶಾಸ್ತ್ರೀಯವಾದ ಕರ್ಮಕ್ಕೆ ಚ್ಯುತಿಯಾಗುವುದೋ ಆತನ ಮುಖವನ್ನು ನೋಡಿದರೆ, ಬುದ್ಧಿಶಾಲಿಯಾದ ಮನುಷ್ಯನು (ಶುದ್ಧಿಗಾಗಿ) ಸೂರ್ಯನನ್ನು ಅವಲೋಕಿಸಬೇಕು (97). ಹೀಗಿರುವಾಗ ಮೈತ್ರೇಯ, ಯಾರು ಸರ್ವಾತ್ಮನಾ ವೇದವನ್ನು ಪರಿತ್ಯಜಿಸಿದ್ದಾರೋ ಪಾಷಂಡಿಗಳ ಅನ್ನವನ್ನು ಊಟ ಮಾಡುತ್ತಾರೋ ವೇದವಚನಗಳಿಗೆ ವಿರೋಧಿಗಳಾಗಿದ್ದಾರೋ ಅಂತಹವರೊಡನೆ ದರ್ಶನ ಸ್ಪರ್ಶನಾದಿಗಳನ್ನು ಮಾಡಿದರೆ ಹೇಳಬೇಕಾದ್ದೇನು? (98). ದುರಾಚಾರರಾದ ಪಾಷಂಡಿಗಳೊಡನೆ ಸಂಭಾಷಣೆ, ಸಂಪರ್ಕ, ಜೊತೆಗೆ ಕುಳಿತುಕೊಳ್ಳುವುದು ಇದೆಲ್ಲವೂ ಅತ್ಯಂತ ಪಾಪಕರವಾದದ್ದು.

**ಪಾಷಂಡಿನೋ ವಿಕರ್ಮಸ್ಥಾನ್ ವೈಡಾಲವ್ರತಿಕಾನ್ ಶಠಾನ್।**
**ಹೈತುಕಾನ್ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್॥ 100**

**ದೂರತಸ್ತೈಸ್ತು ಸಂಪರ್ಕಸ್ತ್ಯಾಜ್ಯಶ್ಚಾಪ್ಯತಿಪಾಪಿಭಿಃ।**
**ಪಾಷಂಡಿಭಿರ್ದುರಾಚಾರೈಸ್ತಸ್ಮಾತ್ತಾನ್ ಪರಿವರ್ಜಯೇತ್॥ 101**

**ಏತೇ ನಗ್ನಾಸ್ತವಾಖ್ಯಾತಾ ದೃಷ್ಟಾಃ ಶ್ರಾದ್ಧೋಪಘಾತಕಾಃ।**
**ಯೇಷಾಂ ಸಂಭಾಷಣಾತ್ ಪುಂಸಾಂ ದಿನಪುಣ್ಯಂ ಪ್ರಣಶ್ಯತಿ॥ 102**

**ಏತೇ ಪಾಷಂಡಿನಃ ಪಾಪಾ ನ ಹ್ಯೇತಾನಾಲಪೇದ್ ಬುಧಃ।**
**ಪುಣ್ಯಂ ನಶ್ಯತಿ ಸಂಭಾಷಾದೇತೇಷಾಂ ತದ್ದಿನೋದ್ಭವಮ್॥ 103**

---

ಆದ್ದರಿಂದ ಅವುಗಳನ್ನು ವರ್ಜಿಸಬೇಕು (99). (ಸ್ವಕರ್ಮಭ್ರಷ್ಟನಾಗಿರುವ) ಪಾಷಂಡ,* ಶಾಸ್ತ್ರನಿಷಿದ್ಧವಾದ ಕರ್ಮವನ್ನು ಮಾಡತಕ್ಕವನು, (ಗುಟ್ಟಾಗಿ ಪಾಪಕರ್ಮವನ್ನಾಚರಿಸುವ) ಬೈಡಾಲಿಕ, (ಎದುರಿಗೆ ಒಳ್ಳೆಯ ಮಾತನ್ನಾಡುತ್ತ ಹಿಂದಿನಿಂದ ಕೆಟ್ಟದ್ದನ್ನು ಮಾಡುವ) ಶಠ, (ಯುಕ್ತಿವಾದದಿಂದ ಕರ್ಮದಲ್ಲಿ ಅಶ್ರದ್ಧೆಯನ್ನುಂಟುಮಾಡುವ) ಹೈತುಕ, ಧೂರ್ತ—ಇವರನ್ನು ಮಾತಿನಿಂದಲೂ ಗೌರವಿಸಬಾರದು (100). ಪಾಷಂಡಿಗಳೂ ದುರಾಚಾರರೂ ಅತಿಪಾಪಿಗಳೂ ಆದವರೊಡನೆ ಸಂಪರ್ಕವು ತ್ಯಾಜ್ಯವಾಗಿದೆ. ಆದ್ದರಿಂದ ಅವರನ್ನು ದೂರದಲ್ಲಿಡಬೇಕು. ಶ್ರಾದ್ಧಕ್ಕೆ ಹಾನಿಯನ್ನುಂಟುಮಾಡುವ ನಗ್ನರು ಯಾರೆಂದು ನಿನಗೆ ತಿಳಿಸಿದ್ದೇನೆ. ಅವರೊಡನೆ ಮಾತನಾಡಿದರೆ ಒಂದು ದಿನದ ಪುಣ್ಯವು ನಶಿಸುತ್ತದೆ (101-102). ಈ ಪಾಷಂಡಿಗಳು ಪಾಪಿಗಳು. ವಿದ್ವಾಂಸರು ಇವರೊಡನೆ ಮಾತಾಡಬಾರದು. ಇವರೊಡನೆ ಮಾತಾಡಿದರೆ ಆ ದಿನ ಮಾಡಿದ ಪುಣ್ಯವು

---

* ಪಾಷಂಡಾದಿಗಳ ಲಕ್ಷಣ ಹೀಗಿದೆ—

ಭ್ರಷ್ಟಃ ಸ್ವಧರ್ಮಾತ್ಪಾಷಂಡೋ, ವಿಕರ್ಮಸ್ಥೋ ನಿಷಿದ್ಧಕೃತ್।
ಪ್ರಚ್ಛನ್ನಾನಿ ಚ ಪಾಪಾನಿ ಬೈಡಾಲಂ ನಾಮ ತದ್ವ್ರತಮ್॥ ತದ್ವಾನ್ ಬೈಡಾಲಿಕಃ॥
ಸಂದೇಹಕೃದ್ ಹೇತುಭಿರ್ಯಃ ಸತ್ಕರ್ಮಸು ಸ ಹೈತುಕಃ।
ಅರ್ವಾಗ್ ದೃಷ್ಟಿರ್ವೈಕೃತಿಕಃ ಸ್ವಾರ್ಥಸಾಧನತತ್ಪರಃ
ಶಠೋ ಮಿಥ್ಯಾವಿನೀತಶ್ಚ ಬಕವೃತ್ತಿರುದಾಹೃತಃ॥

**ಪುಂಸಾಂ ಜಟಾಧರಮೌಂಡ್ಯವತಾಂ ವೃಥೈವ**
**ಮೋಘಾಶಿನಾಮಖಿಲಶೌಚನಿರಾಕೃತಾನಾಮ್ ।**
**ತೋಯಪ್ರದಾನಪಿತೃಪಿಂಡಬಹಿಷ್ಕೃತಾನಾಂ**
**ಸಂಭಾಷಣಾದಪಿ ನರಾ ನರಕಂ ಪ್ರಯಾಂತಿ ॥** 104

ಇತಿ ಶ್ರೀವಿಷ್ಣುಪುರಾಣೇ ತೃತೀಯೇಽಂಶೇ ಅಷ್ಟಾದಶೋಽಧ್ಯಾಯಃ

**ಇತಿ ಶ್ರೀಪರಾಶರಮುನಿವಿರಚಿತೇ ಶ್ರೀವಿಷ್ಣುಪರತ್ವನಿರ್ಣಾಯಕೇ**
**ಶ್ರೀಮತಿ ವಿಷ್ಣುಮಹಾಪುರಾಣೇ ತೃತೀಯೋಽಂಶಃ ಸಮಾಪ್ತಃ**

---

ಕ್ಷೀಣವಾಗುತ್ತದೆ (103). ಶಾಸ್ತ್ರವಿಹಿತನಿಮಿತ್ತವಿಲ್ಲದೆಯೇ ವ್ಯರ್ಥವಾಗಿ ಜಟಾಧಾರಣ ಮಾಡಿದವರು ಮತ್ತು ತಲೆಯ ಮುಂಡನಮಾಡಿಸಿ ಕೊಂಡವರು, ದೇವತಾದಿಗಳನ್ನು ಅರ್ಚಿಸದೆ ಊಟಮಾಡತಕ್ಕವರ ಮೋಘಾಶಿಗಳು, ಎಲ್ಲ ಬಗೆಯ ಶೌಚವನ್ನು ವರ್ಜಿಸಿದವರು, ತರ್ಪಣ ಪಿಂಡದಾನಾದಿಗಳನ್ನು ದೂರಮಾಡಿದವರು—ಇಂಥವರೊಡನೆ ಮಾತನಾಡಿದ ಮಾನವರು ನರಕವನ್ನೈದುತ್ತಾರೆ (104).

ಇಲ್ಲಿಗೆ ಶ್ರೀವಿಷ್ಣುಪುರಾಣದ ತೃತೀಯಾಂಶದಲ್ಲಿ
ಹದಿನೆಂಟನೆಯ ಅಧ್ಯಾಯ ಮುಗಿಯಿತು.

**ತೃತೀಯಾಂಶ ಸಂಪೂರ್ಣವಾಯಿತು.**



# ಅನುಬಂಧಗಳು

## 1

### ಪುಟ 24 —ಕಾಲಸಂಬಂಧಿಯಾದ ವಿವರ

1 ಕ್ಷಣ (ರೆಪ್ಪೆ ಹೊಡೆಯುವಷ್ಟು ಕಾಲ) = $\frac{1}{270}$ ಸೆಕೆಂಡ್

2 ಕ್ಷಣ = 1 ಲವ ( $\frac{1}{135}$ ಸೆಕೆಂಡ್)

2 ಲವ = 1 ನಿಮಿಷ ( $\frac{2}{135}$ ಸೆಕೆಂಡ್)

18 ನಿಮಿಷ = 1 ಕಾಷ್ಠಾ ( $\frac{4}{15}$ ಸೆಕೆಂಡ್)

30 ಕಾಷ್ಠಾ = 1 ಕಲಾ (8 ಸೆಕೆಂಡ್) 30 ಕಲಾ = 1 ಕ್ಷಣ
(240 ಸೆಕೆಂಡ್—4 ನಿಮಿಷ)

12 ಕ್ಷಣ = 1 ಮುಹೂರ್ತ (48 ನಿಮಿಷ)

30 ಮುಹೂರ್ತ = 24 ಗಂಟೆಗಳ 1 ದಿನ

15 ದಿನ = 1 ಪಕ್ಷ

30 ದಿನ = 1 ಮಾಸ

2 ಮಾಸ = 1 ಋತು

6 ಋತು ಅಥವಾ 12 ಮಾಸ = 1 ಸಂವತ್ಸರ

ಸಂವತ್ಸರವು ಚಾಂದ್ರ, ಸೌರ, ಸಾವನ, ನಾಕ್ಷತ್ರ, ಬಾರ್ಹಸ್ಪತ್ಯ—ಎಂದು ಐದು ವಿಧ. ಚಾಂದ್ರ = ಶುಕ್ಲಪಾಡ್ಯದಿಂದ ಅಮಾವಾಸ್ಯೆಯ ಪರ್ಯಂತ 1 ತಿಂಗಳು. ಹುಣ್ಣಿಮೆಯ ದಿನ ಚಿತ್ರಾ ನಕ್ಷತ್ರವಿದ್ದರೆ ಚೈತ್ರ, ವಿಶಾಖವಿದ್ದರೆ ವೈಶಾಖ. ಹೀಗೆ 12 ತಿಂಗಳಿಗೆ—ಅಧಿಕಮಾಸವಿದ್ದರೆ 13

ತಿಂಗಳಿಗೆ—1 ಚಾಂದ್ರಸಂವತ್ಸರ. ಪ್ರಭವ, ವಿಭವಾದಿಗಳು ಚಾಂದ್ರ ಸಂವತ್ಸರಗಳು. ಕೃಷ್ಣ ಪಾಡ್ಯದಿಂದ ಹುಣ್ಣಿಮೆಯವರೆಗೆ 1 ತಿಂಗಳೆಂಬ ಗಣನೆಯೂ ಉಂಟು. ಇದು ದಕ್ಷಿಣ ದೇಶದಲ್ಲಿ ಬಳಕೆಯಲ್ಲಿಲ್ಲ.

ಸೌರ = ಸೂರ್ಯನ ಗತಿಯನ್ನನುಸರಿಸಿ ಮೇಷಾದಿ 12 ಮಾಸಗಳು; 365 ಅಥವಾ 366 ದಿನಗಳು.

ಸಾವನ = ಸೂರ್ಯೋದಯದಿಂದ ಸೂರ್ಯೋದಯದವರೆಗೆ 1 ದಿನ ದಂತೆ 360 ದಿನಗಳು.

ನಾಕ್ಷತ್ರ = ಚಂದ್ರನು 1 ನಕ್ಷತ್ರದಲ್ಲಿ ಸಂಚರಿಸುವ ಕಾಲ 1 ದಿನ. 27 ನಕ್ಷತ್ರ ಗಳನ್ನು 1 ಸಲ ಸಂಚರಿಸಿದರೆ 1 ನಾಕ್ಷತ್ರ ಮಾಸ. ಇಂಥ 12 ಮಾಸಗಳಿಗೆ 1 ನಾಕ್ಷತ್ರ ವರ್ಷ. ಇದರಲ್ಲಿ 324 ದಿನಗಳು.

ಬಾರ್ಹಸ್ಪತ್ಯ = ಮೇಷ ಮುಂತಾದ ಒಂದೊಂದು ರಾಶಿಯಲ್ಲಿ ಬೃಹಸ್ಪತಿ ಇರುವ ಕಾಲ—360 ದಿನ.

ಚಾಂದ್ರಮಾನದಲ್ಲಿ ಮನುಷ್ಯರ 1 ತಿಂಗಳು = ಪಿತೃಗಳ 1 ದಿನ (ಶುಕ್ಲಪಕ್ಷ ಹಗಲು, ಕೃಷ್ಣಪಕ್ಷ ರಾತ್ರಿ)

ಸೌರಮಾನದಲ್ಲಿ ಮನುಷ್ಯರ 1 ವರ್ಷ = ದೇವತೆಗಳ 1 ದಿನ (ಉತ್ತರಾಯಣ—ಹಗಲು, ದಕ್ಷಿಣಾಯನ—ರಾತ್ರಿ)

| | | |
|---|---|---|
| ಮನುಷ್ಯರ 360 ವರ್ಷ = | 1 ದೇವ ವರ್ಷ | |
| ಕಲಿಯುಗದ ಪ್ರಮಾಣ | 4,32,000 | ಮಾನುಷವರ್ಷ |
| ದ್ವಾಪರಯುಗ | 8,64,000 | ಮಾನುಷವರ್ಷ |
| ತ್ರೇತಾಯುಗ | 12,96,000 | ಮಾನುಷವರ್ಷ |
| ಕೃತಯುಗ | 17,28,000 | ಮಾನುಷವರ್ಷ |
| ಒಟ್ಟು ನಾಲ್ಕು ಯುಗಗಳು | 43,20,000 | ಮಾನುಷವರ್ಷ |

ಈ 4 ಯುಗಗಳು = ದೇವತೆಗಳ 1 ಯುಗ (ದೇವಮಾನದಿಂದ 12000 ವರ್ಷ)

1000 ದೇವಯುಗ = ಬ್ರಹ್ಮನ 1 ಹಗಲು (ಪ್ರಾಣಿಗಳು ಜೀವಿಸಿರುವ ಕಾಲ)

1000 ದೇವಯುಗ = ಬ್ರಹ್ಮನ 1 ರಾತ್ರಿ (ಪ್ರಳಯ ಕಾಲ)

2000 ದೇವಯುಗ = ಬ್ರಹ್ಮನ ಅಹೋರಾತ್ರ (1 ದಿನ)

ಬ್ರಹ್ಮನ 1 ಹಗಲು = ಕಲ್ಪ (ಮನುಷ್ಯರ 432 ಕೋಟಿ ವರ್ಷ)

ಅದೇ ಪ್ರಮಾಣದ ಬ್ರಹ್ಮನ ರಾತ್ರಿಯೂ 1 ಕಲ್ಪವೆನಿಸುತ್ತದೆ.

71 ದೇವಯುಗ = 1 ಮನ್ವಂತರ

**ಟಿಪ್ಪಣಿ:** ಬ್ರಹ್ಮನ 1 ಹಗಲಿನಲ್ಲಿ 14 ಮನ್ವಂತರಗಳು. ಈ ಲೆಕ್ಕದ ಪ್ರಕಾರ 994 ದೇವಯುಗಗಳಿಗೆ ಬ್ರಹ್ಮನ ಒಂದು ಹಗಲಾಗುತ್ತದೆ. ಆದರೆ 1000 ದೇವಯುಗಗಳಿಗೆ 1 ಹಗಲೆಂದು ಮೇಲೆ ಹೇಳಿದೆ. ಉಳಿದ 6 ದೇವಯುಗಗಳು ಸಂಧ್ಯಾ ಸಂಧ್ಯಾಂಶಗಳಲ್ಲಿ ಸೇರುತ್ತವೆ.

ಮನ್ವಂತರದಲ್ಲಿ 30 ಕೋಟಿ 85 ಲಕ್ಷ 71 ಸಾವಿರ 428 ವರ್ಷ, 6 ತಿಂಗಳು, 25 ದಿನ, 42 ಗಳಿಗೆ, 51 ಚಿಲ್ಲರೆ ವಿಗಳಿಗೆಗಳು ಇರುತ್ತವೆಂದು ವ್ಯಾಖ್ಯಾನಕಾರನಾದ ಮುಕುಟನ ಆಶಯ (1 ಗಳಿಗೆ = 60 ವಿಗಳಿಗೆ)

ಈಗ ವೈವಸ್ವತವೆಂಬ 6ನೇ ಮನ್ವಂತರ ನಡೆಯುತ್ತಿದೆ. 864 ಕೋಟಿ ಮಾನುಷ ವರ್ಷಗಳಿಗೆ ಬ್ರಹ್ಮನ ಅಹೋರಾತ್ರ ರೂಪವಾದ 1 ದಿನ—360 ದಿನಗಳಿಗೆ 1 ವರ್ಷ. ಈ ರೀತಿಯಲ್ಲಿ 100 ವರ್ಷ ಬ್ರಹ್ಮನ ಆಯುಸ್ಸು (864 ಕೋಟಿ ವರ್ಷ x 360). ಈ ಆಯುಃಪ್ರಮಾಣಕ್ಕೆ ಪರ ಎಂದು ಹೆಸರು. ಇದರಲ್ಲಿ ಮೊದಲನೇ 50 ವರ್ಷ ಪ್ರಥಮ ಪರಾರ್ಧ. ಆಮೇಲೆ ದ್ವಿತೀಯ ಪರಾರ್ಧ. ಈಗ ದ್ವಿತೀಯ ಪರಾರ್ಧ ನಡೆಯುತ್ತಿದೆ. ಬ್ರಹ್ಮನಿಗೆ 50 ವರ್ಷ ಕಳೆದು 51 ನೇ ವರ್ಷದ 1ನೇ ತಿಂಗಳಲ್ಲಿ 26ನೇ ದಿನ. ಈ ದಿನವೇ ಶ್ವೇತವರಾಹಕಲ್ಪ.



## 2

## ಪುಟ 43 — ಅಷ್ಟಾವಿಂಶದ್ವಧಾತ್ಮಕಾಃ

### ಇಪ್ಪತ್ತೆಂಟು ವಧಗಳು

ಸಾಂಖ್ಯಕಾರಿಕೆಯಲ್ಲಿ ಈ ವಧಗಳ ವಿವರಣೆ ಇದೆ—

**ಏಕಾದಶೇಂದ್ರಿಯವಧಾಃ ಸಹ ಬುದ್ಧಿವಧೈರಶಕ್ತಿರುದ್ದಿಷ್ಟಾ।**
**ಸಪ್ತದಶ ವಧಾ ಬುದ್ಧೇರ್ವಿಪರ್ಯಯಾತ್ ತುಷ್ಟಿಸಿದ್ಧೀನಾಮ್॥ 49**

**ತಾತ್ಪರ್ಯ:**—ಹನ್ನೊಂದು ಇಂದ್ರಿಯವಧಗಳು. ಹದಿನೇಳು ಬುದ್ಧಿ ವಧಗಳು. (ಒಟ್ಟು ಇಪ್ಪತ್ತೆಂಟು ವಧಗಳಾದವು.) ತುಷ್ಟಿ ಮತ್ತು ಸಿದ್ಧಿಗಳ ವಿಪರ್ಯಯದಿಂದ ಬುದ್ಧಿವಧಗಳಾಗುತ್ತವೆ. ಈ ಎಲ್ಲ ವಧಗಳೂ ಬುದ್ಧಿಯ ಅಶಕ್ತಿ ಎಂದು ಹೇಳಬೇಕು.

**ವಿವರಣೆ:**—ಪಂಚಜ್ಞಾನೇಂದ್ರಿಯಗಳೂ ಪಂಚಕರ್ಮೇಂದ್ರಿಯಗಳೂ ಮನಸ್ಸೂ ಸೇರಿ ಹನ್ನೊಂದು ಇಂದ್ರಿಯಗಳಾಗುತ್ತವೆ. ವಧವೆಂದರೆ ಘಾತ, ವೈಗುಣ್ಯ, ದೋಷ ಎಂದರ್ಥ. ಇಂದ್ರಿಯ ದೋಷಗಳು ಪರ್ಯವಸಾನದಲ್ಲಿ ಬುದ್ಧಿಗೆ ಸಂಬಂಧಿಸಿ ಪರಂಪರೆಯಿಂದ ಬುದ್ಧಿ ವಧಗಳೇ ಆಗುತ್ತವೆ. ಇನ್ನು ಹದಿನೇಳು ನೇರವಾಗಿ ಬುದ್ಧಿವಧಗಳು. ಹನ್ನೊಂದು ಇಂದ್ರಿಯ ವಧಗಳು ಯಾವುವೆಂದರೆ—

**ಬಾಧಿರ್ಯಂ ಕುಷ್ಠಿತಾಂಧತ್ವಂ ಜಡತಾಽಜಿಘ್ರತಾ ತಥಾ।**
**ಮೂಕತಾ ಕೌಣ್ಯಪಂಗುತ್ವೇ ಕ್ಲೈಬ್ಯೋದಾವರ್ತ ಮಂದತಾಃ॥**

1. ಬಾಧಿರ್ಯ = ಕಿವುಡು—ಶ್ರೋತ್ರೇಂದ್ರಿಯ ವಧ
2. ಕುಷ್ಠಿತಾ = ಸ್ಪರ್ಶಜ್ಞಾನವಾಗದಿರುವುದು—ತ್ವಗಿಂದ್ರಿಯ ವಧ
3. ಅಂಧತ್ವ = ಕುರುಡು—ಚಕ್ಷುರಿಂದ್ರಿಯ ವಧ
4. ಜಡತಾ = ರುಚಿ ತಿಳಿಯದಿರುವಿಕೆ—ರಸನೇಂದ್ರಿಯ ವಧ

5. ಆಜಿಘ್ರತಾ = ವಾಸನೆ ಗೊತ್ತಾಗದಿರುವುದು—ಘ್ರಾಣೇಂದ್ರಿಯ ವಧ
6. ಮೂಕತಾ = ಮಾತಾಡಲು ಬರದಿರುವುದು—ವಾಗಿಂದ್ರಿಯ ವಧ
7. ಕೌಣ್ಯ = ಕೈಗಳ ನ್ಯೂನತೆ—ಪಾಣೇಂದ್ರಿಯ ವಧ
8. ಪಂಗುತ್ವ = ಕುಂಟು—ಪಾದೇಂದ್ರಿಯ ವಧ
9. ಕ್ಲೈಬ್ಯ = ನಂಪುಸಕತೆ—ಉಪಸ್ಥೇಂದ್ರಿಯ ವಧ
10. ಉವರ್ತ = ಮಲಮೂತ್ರ ಬದ್ಧತೆ—ಪಾಯ್ವಿಂದ್ರಿಯ ವಧ
11. ಮಂದತಾ = ಮಂಕು—ಮನಸ್ಸಿನ ವಧ

ಇನ್ನು ತುಷ್ಟಿಸಿದ್ಧಿಗಳಿಗೆ ವಿಪರೀತವಾದವು ಹದಿನೇಳು ಬುದ್ಧಿ ವಧಗಳು. ಇವುಗಳಲ್ಲಿ ತುಷ್ಟಿಗಳು ಒಂಬತ್ತು.

1. ಪ್ರಕೃತಿಯೇ ವಿವೇಕವನ್ನಂಟುಮಾಡುತ್ತದೆ, ಆದಕ್ಕಾಗಿ ಪ್ರಯತ್ನಿಸ ಬೇಕಾದ್ದಿಲ್ಲ—ಎಂಬ ಮನಸ್ಸಮಾಧಾನಕ್ಕೆ ಪ್ರಕೃತಿತುಷ್ಟಿ ಎಂದು ಹೆಸರು.
2. ಪ್ರಕೃತಿಯಿಂದಲೇ ವಿವೇಕ ಹುಟ್ಟುವುದಾದರೆ ಎಲ್ಲರಿಗೂ ಹುಟ್ಟ ಬೇಕಾದೀತು, ಆದ್ದರಿಂದ ಸಂನ್ಯಾಸವನ್ನು ಸ್ವೀಕರಿಸಬೇಕು ಎಂಬ ಸಮಾಧಾನ ಉಪಾದಾನ ತುಷ್ಟಿ.
3. ಸಂನ್ಯಾಸದಿಂದ ಮುಕ್ತಿಯಾಗುವುದಾದರೂ ಕಾಲವನ್ನಪೇಕ್ಷಿಸುತ್ತದೆ, ಕಾಲ ಬಂದಾಗ ಮುಕ್ತಿ ದೊರೆಯುತ್ತದೆಯೆಂಬುದು ಕಾಲತುಷ್ಟಿ.
4. ಕಾಲದಿಂದಲೇ ಮುಕ್ತಿ ಲಭಿಸುವುದಿಲ್ಲ, ಆದಕ್ಕೆ ಭಾಗ್ಯ ಬೇಕು ಎಂಬ ನಂಬಿಕೆ ಭಾಗ್ಯತುಷ್ಟಿ.
5. ಹಣವು ದುಃಖಕ್ಕೆ ಕಾರಣ ಎಂದು ತಿಳಿದು, ಧನದ ಆರ್ಜನೆಯನ್ನು ಬಿಟ್ಟಾಗ ಆಗುವ ಸಮಾಧಾನ ಪಾರತುಷ್ಟಿ.
6. ಹಣವು ವಿಪತ್ತಿಗೆ ಕಾರಣ, ಹಣವಿಲ್ಲದಿರುವುದೇ ಮೇಲು ಎಂದು ತಿಳಿದು ಧನದ ರಕ್ಷಣಪ್ರಯತ್ನವನ್ನೂ ತ್ಯಜಿಸಿದಾಗ ಆಗುವ ಸಮಾಧಾನ ಸುಪಾರತುಷ್ಟಿ.

7. ಶ್ರಮದಿಂದ ಆರ್ಜಿಸಿದ ಧನವು ಭೋಗಿಸಿದರೆ ಕ್ಷಯಿಸುತ್ತದೆ, ಆದ್ದರಿಂದ ನನಗೆ ಭೋಗವೇ ಬೇಡ ಎಂಬ ಭಾವನೆ ಪಾರಾಪಾರತುಷ್ಟಿ.
8. ಶಬ್ದಾದಿ ವಿಷಯಭೋಗವೆಲ್ಲವೂ ದುಃಖಜನಕವಾದದ್ದು, ಅದು ದೊರಕದೆ ಹೋದಾಗ ಕಷ್ಟವೆನಿಸುತ್ತದೆ; ಆದ್ದರಿಂದ ಯಾವ ಬಗೆಯ ವಿಷಯಸುಖವೂ ಬೇಡ ಎಂಬ ಸಮಾಧಾನವು ಅನುತ್ತಮಾಂಭ ಎಂಬ ತುಷ್ಟಿ.
9. ಪ್ರತಿಯೊದು ಭೋಗವೂ ಇನ್ನೊಬ್ಬರಿಗೆ ಹಿಂಸೆಕೊಡುವುದರಿಂದಲೇ ಉಂಟಾಗುತ್ತದೆ, ಯಾರಿಗೂ ಹಿಂಸೆಯಾಗುವುದು ಬೇಡ ಎಂದು ಭೋಗವೆಲ್ಲವನ್ನೂ ತ್ಯಜಿಸುವುದು ಉತ್ತಮಾಂಭ ಎಂಬ ತುಷ್ಟಿ.

ಈ ಒಂಬತ್ತು ತುಷ್ಟಿಗಳೂ ಇಲ್ಲದೆ ಹೋಗುವುದು, ಒಂಬತ್ತು ತುಷ್ಟಿವಧಗಳು. ತುಷ್ಟಿಗೆ ವಿಪರೀತವಾದ ಬುದ್ಧಿಯೂ ತುಷ್ಟಿವಧವೆನಿಸುತ್ತದೆ.

**ಎಂಟು ಸಿದ್ಧಿಗಳು:—**

1. ಗುರುಮುಖದಿಂದ ಅಧ್ಯಾತ್ಮಶಾಸ್ತ್ರದ ಪಠನ—ಅಧ್ಯಯನವೆಂಬ ಸಿದ್ಧಿ
2. ಕಲಿತ ಅಧ್ಯಾತ್ಮಶಾಸ್ತ್ರದ ಅರ್ಥಜ್ಞಾನ—ಶಬ್ದಸಿದ್ಧಿ
3. ಯುಕ್ತಿಯಿಂದ ಶಾಸ್ತ್ರಾರ್ಥ ಪರೀಕ್ಷಣ—ಊಹ
4. ಗುರು ಮತ್ತು ಸಹಾಧ್ಯಾಯಿಗಳೊಡನೆ ಚಿಂತನ—ಸುಹೃತ್ಪ್ರಾಪ್ತಿ
5. ಶಾಸ್ತ್ರಸಂಪಾದಿತ ತತ್ತ್ವಜ್ಞಾನದಲ್ಲಿ ಅಚಲನಿಷ್ಠೆ—ದಾನ (ದಾನ = ಶುದ್ಧಿ, ಧಾತು: ದೈಪ್–ಶೋಧನೇ)
6. ಆಧ್ಯಾತ್ಮಿಕ ದುಃಖ ವಿಘಾತ
7. ಆಧಿಭೌತಿಕ ದುಃಖ ವಿಘಾತ
8. ಆಧಿಲೌಕಿಕ ದುಃಖ ವಿಘಾತ

ಈ ಎಂಟು ಸಿದ್ಧಿಗಳ ವಿಪರ್ಯಯವೇ ಎಂಟು ಸಿದ್ಧಿ ವಧಗಳು.



## 3

## ಪುಟ 46 — ಅನುಗ್ರಹ ಕೌಮಾರಸರ್ಗಗಳು

### I. ಅನುಗ್ರಹಸರ್ಗ

ಗ್ರಹ ಎಂದರೆ ಬುದ್ಧಿ. ಬುದ್ಧಿಯನ್ನು ಅನುಸರಿಸಿದ್ದು ಅನುಗ್ರಹ. ಇದನ್ನು ಪ್ರತ್ಯಯಸರ್ಗವೆಂದು ಸಾಂಖ್ಯಕಾರಿಕೆಯಲ್ಲಿ ಕರೆಯಲಾಗಿದೆ. ಪ್ರತ್ಯಯಸರ್ಗ = ಬುದ್ಧಿಯ ಸೃಷ್ಟಿ. 'ಏಷ ಪ್ರತ್ಯಯಸರ್ಗೋ ವಿಪರ್ಯಯಾಽಶಕ್ತಿತುಷ್ಟಿಸಿದ್ಧ್ಯಾಖ್ಯಃ' (ಸಾಂ. ಕಾ. 46). ವಿಪರ್ಯಯ, ಅಶಕ್ತಿ, ತುಷ್ಟಿ, ಸಿದ್ಧಿಗಳು ಬುದ್ಧಿಧರ್ಮಗಳು. ಈ ಧರ್ಮಗಳಿಂದ ಕೂಡಿದ ಬುದ್ಧಿಯ ಸೃಷ್ಟಿ ಅನುಗ್ರಹಸರ್ಗ. ವಿವರಣೆ—

1. ವಿಪರ್ಯಯ = ಇದು ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧಾಮಿಸ್ರ—ಎಂದು ಐದು ವಿಧ. ಯೋಗಶಾಸ್ತ್ರದಲ್ಲಿ ಇವುಗಳನ್ನೇ ಕ್ರಮವಾಗಿ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ—ಎಂದು ಹೆಸರಿಸಲಾಗಿದೆ.
2. ಅಶಕ್ತಿ = 2ನೆಯ ಅನುಬಂಧದಲ್ಲಿ ವಿವರಿಸಿದ ಇಪ್ಪತ್ತೆಂಟು ಇಂದ್ರಿಯ ವಧಗಳು.
3. ತುಷ್ಟಿಸಿದ್ಧಿ = 2ನೆಯ ಅನುಬಂಧದಲ್ಲಿ ವಿವರಿಸಿದ ಒಂಬತ್ತು ತುಷ್ಟಿಗಳು ಮತ್ತು ಎಂಟು ಸಿದ್ಧಿಗಳು.

ಬುದ್ಧಿಯ ಎಲ್ಲ ಭೇದಗಳೂ ಅನುಗ್ರಹಸೃಷ್ಟಿಯಲ್ಲಿ ಸೇರುತ್ತವೆ. ಇವುಗಳಲ್ಲಿ ವಿಪರ್ಯಯ ಮತ್ತು ಅಶಕ್ತಿಗಳು ತಾಮಸ. ತುಷ್ಟಿಸಿದ್ಧಿಗಳು ಸಾತ್ತ್ವಿಕ.

### II. ಕೌಮಾರಸರ್ಗ

ಶಿವನ ಇನ್ನೊಂದು ರೂಪವುಳ್ಳ ನೀಲಲೋಹಿತರುದ್ರ, ಸನತ್ಕುಮಾರ, ಸನಂದ, ಸನಕ, ಸನಾತನ—ಇವರ ಸೃಷ್ಟಿ ಕೌಮಾರಸರ್ಗ. ಕೆಲವು ಪುರಾಣಗಳು ಈ ಪಟ್ಟಿಯಲ್ಲಿ ಋಭು, ಸ್ಕಂದರನ್ನು ಸೇರಿಸಿವೆ.



# ನಮ್ಮ ಕೆಲವು ಪ್ರಕಟಣೆಗಳು

- ಜ್ಯೋತಿ
- ಕೀರ್ತನ ಸಂಗ್ರಹ (ಭಾಗ ೧ ಮತ್ತು ೨), (ಭಾಗ ೩)
- ಸಸ್ವರ ಋಗ್ವೇದಸಂಹಿತಾ (ಸಂಪುಟ ೧)
  (ಪ್ರಥಮಂ ಮಂಡಲಮ್)
- ಸಸ್ವರ ಋಗ್ವೇದಸಂಹಿತಾ (ಸಂಪುಟ ೨)
  (ದ್ವಿತೀಯಂ, ತೃತೀಯಂ, ಚತುರ್ಥಂ, ಪಂಚಮಂ ಮಂಡಲಮ್)
- ಸಸ್ವರ ಋಗ್ವೇದಸಂಹಿತಾ (ಸಂಪುಟ ೩)
  (ಷಷ್ಠಂ, ಸಪ್ತಮಂ, ಅಷ್ಟಮಂ ಮಂಡಲಮ್)
- ಸಸ್ವರ ಋಗ್ವೇದಸಂಹಿತಾ (ಸಂಪುಟ ೪)
  (ನವಮಂ, ದಶಮಂ ಮಂಡಲಮ್)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಬ್ರಾಹ್ಮಣಮ್ (ಭಾಗ ೧)
  (ಅಷ್ಟಕ ೧ ಮತ್ತು ೨)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಬ್ರಾಹ್ಮಣಮ್ (ಭಾಗ ೨)
  (ಅಷ್ಟಕ ೩ ಮತ್ತು ಕಾಠಕ)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಸಂಹಿತಾ (ಸಂಪುಟ ೧)
  (ಪ್ರಥಮಂ, ದ್ವಿತೀಯಂ, ತೃತೀಯಂ ಕಾಂಡಮ್)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಸಂಹಿತಾ (ಸಂಪುಟ ೨)
  (ಚತುರ್ಥಂ, ಪಂಚಮಂ ಕಾಂಡಮ್)
- ಸಸ್ವರ ಕೃಷ್ಣಯಜುರ್ವೇದೀಯ ತೈತ್ತಿರೀಯಸಂಹಿತಾ (ಸಂಪುಟ ೩)
  (ಷಷ್ಠಂ, ಸಪ್ತಮಂ ಕಾಂಡಮ್)
- ಶ್ರೀವಿಷ್ಣುಪುರಾಣಮ್ (ಎರಡು ಸಂಪುಟಗಳಲ್ಲಿ)
- Swami Brahmananda in Pictures
  (Birth Centenary Souvenir—1863-1963)
- A Spiritual Centre Blossoms
  (Ramakrishna Math, Bangalore—1904-2004)
- A Concise Encyclopaedia of Hinduism (in 3 Volumes)




## ರಾಮಕೃಷ್ಣ ಮಠ ಮತ್ತು ಮಿಷನ್ನಿನ ಲಾಂಛನ

ಈ ಚಿತ್ರದಲ್ಲಿ ಕಾಣುವ ಅಲೆಗಳು ಕರ್ಮವನ್ನೂ, ಕಮಲವು ಭಕ್ತಿಯನ್ನೂ, ಉದಯಿಸುತ್ತಿರುವ ಸೂರ್ಯನು ಜ್ಞಾನವನ್ನೂ, ಸುತ್ತಿಕೊಂಡಿರುವ ಸರ್ಪವು ಯೋಗ ಹಾಗೂ ಜಾಗೃತ ಕುಂಡಲಿನೀ ಶಕ್ತಿಯನ್ನೂ ಪ್ರತಿನಿಧಿಸುತ್ತವೆ. ಹಂಸವು ಪರಮಾತ್ಮನ ಪ್ರತೀಕವಾಗಿರುತ್ತದೆ. ಕರ್ಮ, ಭಕ್ತಿ, ಜ್ಞಾನ ಮತ್ತು ಯೋಗ—ಇವುಗಳ ಸಮನ್ವಯದ ಮೂಲಕ ಪರಮಾತ್ಮನ ದರ್ಶನ ಲಾಭವಾಗುತ್ತದೆ ಎಂಬುದು ಈ ಚಿತ್ರದ ಭಾವಾರ್ಥ.

—ಸ್ವಾಮಿ ವಿವೇಕಾನಂದ




**Ramakrishna Math**
Bull Temple Road
Bangalore - 560 019.
*Phone* and *e-mail*:
080-2661 6161, 2661 6060.
bookstall@rkmathbangalore.org
ISBN 81-7907-012-3 (HB Set)
ISBN 81-7907-013-1 (HB Vol. 1)
**6029** ₹ **180/-**

